ಪ್ರಧಾನ ಸಂಪಾದಕರು
ಡಾ. ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ಪ್ರವಾಸಿ ಕಂಡ ಇಂಡಿಯಾ
## (ಸಂಪುಟ ೭)

ಎಚ್. ಎಲ್. ನಾಗೇಗೌಡ




1983

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಪ್ರಧಾನ ಸಂಪಾದಕರು
ಡಾ. ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ಪ್ರವಾಸಿ ಕಂಡ ಇಂಡಿಯಾ

## (ಸಂಪುಟ ೭)

ಎಚ್. ಎಲ್. ನಾಗೇಗೌಡ




1983

# ಮುನ್ನುಡಿ

ಪ್ರಾಚ್ಯ ಪಾಶ್ಚಾತ್ಯ ಶಿಕ್ಷಣತಜ್ಞರು ಕೂಲಂಕಶವಾಗಿ ವಿಚಾರ ನಡೆಸಿ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎಂದು ಒಮ್ಮತದ ತೀರ್ಮಾನ ನೀಡಿರುವುದು ಸರ್ವವಿದಿತವಾಗಿದೆ. ಈ ನಿರ್ಧಾರವನ್ನು ಕೈಗೊಳ್ಳುವುದರಿಂದ ಮಾತ್ರವೇ ವಿದ್ಯಾಭ್ಯಾಸಕ್ಕೆ ಉಜ್ವಲವಾದ ಭವಿಷ್ಯವಿದೆ ಎಂಬುದನ್ನು ಮನಗಂಡ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ನಿಟ್ಟಿನಲ್ಲಿ ದಿಟ್ಟತನದಿಂದ ಹೆಜ್ಜೆಯಿಡುತ್ತಿವೆ. ಕೇಂದ್ರ ಸರಕಾರವು ಪ್ರಾದೇಶಿಕ ಭಾಷೆಗಳಲ್ಲಿ ಪಠ್ಯ ಪುಸ್ತಕಗಳು ಸಹಾಯಕ ಗ್ರಂಥಗಳು ಹೆಚ್ಚಿನ ಸಂಖ್ಯೆಯಲ್ಲಿ ರಚಿತವಾಗಲಿ ಎಂಬ ಆಶಯದಿಂದ ಪ್ರತಿಯೊಂದು ರಾಜ್ಯ ಸರಕಾರದ ಮೂಲಕವೂ ಅಲ್ಲಿನ ವಿಶ್ವವಿದ್ಯಾನಿಲಯಗಳಿಗೆ ಒಂದು ಕೋಟಿ ರೂಪಾಯಿಗಳ ಸಹಾಯಧನವನ್ನು ನೀಡುವ ತೀರ್ಮಾನವನ್ನು ಕೈಗೊಂಡಾಗಿದೆ. ಈ ಹಣದ ವಿತರಣ ಕಾರ್ಯವೂ ಪ್ರಾರಂಭವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಕಳೆದ ಅನೇಕ ದಶಕಗಳಿಂದಲೂ ಈ ದಿಕ್ಕಿನಲ್ಲಿ ಗಣನೀಯವಾದ ಸಾಧನೆ ನಡೆಸಿದೆ. ಇಲ್ಲಿನ ಅನೇಕ ಕಾಲೇಜುಗಳಲ್ಲಿ ಅನೇಕ ವರ್ಷಗಳ ಹಿಂದೆಯೆ ಕನ್ನಡ ಮಾಧ್ಯಮ ತೆರೆಯಲಾಯಿತು. ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಮಾಧ್ಯಮ ಆರಿಸಿಕೊಂಡು ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗಿಂತ ಉನ್ನತಮಟ್ಟದ ಪರಿಣತಿ ಪಡೆಯುವುದು ಸಾಧ್ಯ ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಮೈಸೂರಿನ ಒಂದು ಕಾಲೇಜಿನಲ್ಲಿ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಿದ ವರ್ಷವೇ ಅದನ್ನು ಆರಿಸಿಕೊಂಡವರಲ್ಲಿ ನೂರಕ್ಕೆ ನೂರು ಜನ ತೇರ್ಗಡೆ ಹೊಂದಿದರು ಎಂಬುದನ್ನು ನೆನೆಯುವುದರಲ್ಲಿ ಹೆಚ್ಚಿನ ವಿವೇಕವಿದೆ. ಆದರ ಮರುವರ್ಷದಿಂದಲೂ ಆ ಕಾಲೇಜಿನ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಶೇಕಡಾ ೯೦ಕ್ಕೆ ಕಡಮೆಯಿಲ್ಲದಂತೆ ತೇರ್ಗಡೆ ಹೊಂದುತ್ತಲೇ ಬಂದಿದ್ದಾರೆ. ಅದೇ ಕಾಲೇಜಿನಲ್ಲಿ ಇಂಗ್ಲಿಷ್ ಮಾಧ್ಯಮ ಆರಿಸಿಕೊಂಡವರು ಶೇಕಡಾ ಮೂವತ್ತು ಮೂವತ್ತೈದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ತೇರ್ಗಡೆ ಹೊಂದುತ್ತಿಲ್ಲ ಎಂಬುದೂ ಗವಮನಿಸಬೇಕಾದ ವಿಷಯ.

ಈಗಂತೂ ವಿಶ್ವವಿದ್ಯಾನಿಲಯದ ಮೊದಲನೆಯ ತರಗತಿಯಿಂದ ಹಿಡಿದು ಎಂ.ಎ., ಎಂ.ಎಸ್‌ಸಿ. ಮುಂತಾದ ಸ್ನಾತಕೋತ್ತರ ತರಗತಿಯವರೆಗೂ ಪರೀಕ್ಷೆಗಳಲ್ಲಿ ವಿದ್ಯಾರ್ಥಿಗಳು, ಅವರು ಯಾವುದೇ ಭಾಷೆಯ ಮೂಲಕ ಶಿಕ್ಷಣ ಪಡೆದಿದ್ದರೂ, ಕನ್ನಡದಲ್ಲಿ ಉತ್ತರ ಬರೆಯಬಹುದು ಎಂದು ವಿಶ್ವವಿದ್ಯಾನಿಲಯ ಅಪ್ಪಣೆ ಹೊರಡಿಸಿದೆ, ಅದರ ಪ್ರಕಾರ ಕೆಲವು ವಿದ್ಯಾರ್ಥಿಗಳು ಸ್ನಾತಕೋತ್ತರ ಪರೀಕ್ಷೆಗಳಲ್ಲೂ ಕನ್ನಡದಲ್ಲೆ ಉತ್ತರ ಬರೆದು ಪ್ರಶಂಸನೀಯವಾದ ಫಲಿತಾಂಶಗಳನ್ನು ತೋರಿಸುತ್ತಿದ್ದಾರೆ.

ಪಠ್ಯಪುಸ್ತಕಗಳ ಅಭಾವ ಎಂಬುದು ಹಳಸಿದ ಮಾತಾಗಿ ಪರಿಣಮಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಅನೇಕ ಪಠ್ಯಪುಸ್ತಕ

ಗಳನ್ನು ವಿದ್ವಾಂಸರಿಂದ ಬರೆಸಿ ಪ್ರಕಟಿಸಿದೆ. ಈ ಮಹೋನ್ನತ ಕಾರ್ಯದಲ್ಲಿ ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳು ಹಿಂದೆಂದೂ ಕಾಣದ ಭವ್ಯ ಪ್ರಮಾಣದಲ್ಲಿ ಕಾರ್ಯೋನ್ಮುಖವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಈಗಾಗಲೇ ನೂರಾರು ಸ್ನಾತಕೋತ್ತರ ಮಟ್ಟದ ಪಠ್ಯಪುಸ್ತಕಗಳನ್ನು ಸಹಾಯಕ ಗ್ರಂಥಗಳನ್ನೂ ನೂರಾರು ಜನ ಘನ ವಿದ್ವಾಂಸರ ನೆರವಿನಿಂದ ಸೃಷ್ಟಿಸುತ್ತಿದೆ ಇತರ ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳು ಇಂತಹ ಒಂದು ಶ್ಲಾಘನೀಯವಾದ ಉದ್ಯಮದಲ್ಲಿ ತೊಡಗಿವೆ. ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯವೂ ಈ ನಿಟ್ಟಿನಲ್ಲಿ ಕಾರ್ಯವನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹವಾಗಿದೆ.

ಮಹಾತ್ಮಾ ಗಾಂಧೀಜಿಯವರು—ಭಾರತದ ಜನಕೋಟಿಯೊಂದಿಗೆ ಮತ್ತು ಅವರ ಸಮಸ್ಯೆಗಳೊಂದಿಗೆ ಅವರಷ್ಟು ನಿಕಟವಾದ ಪರಿಚಯವನ್ನು ಹೊಂದಿ, ಅವರಿಗಾಗಿಯೇ ಬಾಳಿದ ಶಿಕ್ಷಣ ತಜ್ಞರು ಮತ್ತೊಬ್ಬರಿರಲಾರರು—ತಮ್ಮ ಖಡ್ಗ ತೀಕ್ಷ್ಣವೂ ತರ್ಕಬದ್ಧವೂ ಆದ ವಾಣಿಯಲ್ಲಿ ಸಾರಿ ಸಾರಿ ಹೇಳಿದರು, ದೇಶಭಾಷೆಗಳು ಶಿಕ್ಷಣ ಮಾಧ್ಯಮವಾದಾಗಲೇ ಭಾರತದಲ್ಲಿ ವಿದ್ಯಾಭ್ಯಾಸ ಅರ್ಥಪೂರ್ಣವಾಗುತ್ತದೆ ಎಂದು ಅವರ ಈ ಕೆಲವು ಮಾತುಗಳನ್ನು ಪರಿಭಾವಿಸಬೇಕು.

"....ಗಣಿತ ರೇಖಾಗಣಿತ. ಬೀಜರೇಖಾಗಣಿತ ರಸಾಯನಶಾಸ್ತ್ರ, ಖಗೋಳಶಾಸ್ತ್ರ —ಈ ವಿಷಯಗಳಲ್ಲಿ ಎಷ್ಟನ್ನು ನಾನು ನಾಲ್ಕು ವರ್ಷಗಳಲ್ಲಿ ಕಲಿತೆನೋ ಅಷ್ಟನ್ನೂ ಒಂದು ವರ್ಷದಲ್ಲಿ ಕಲಿಯಬಹುದಾಗಿತ್ತು, ಇಂಗ್ಲಿಷಿನ ಮೂಲಕವಾಗಿಯೇ ಕಲಿಯದೆ ಗುಜರಾತಿಯ ಮೂಲಕ ಕಲಿತಿದ್ದರೆ, ಎಂದು ನಾನು ಈಗ ತಿಳಿದುಕೊಂಡಿದ್ದೇನೆ. ನಾನು ಈ ವಿಷಯಗಳನ್ನು ಗ್ರಹಿಸುವುದು ಇನ್ನೂ ಸುಲಭವಾಗಿರುತ್ತಿತ್ತು. ವಿಶದವಾಗಿರುತ್ತಿತ್ತು. ನನ್ನ ಗುಜರಾತಿ ಶಬ್ದಭಂಡಾರ ಇನ್ನೂ ವಿಪುಲವಾಗಿರುತ್ತಿತ್ತು. ನಾನು ಆ ಜ್ಞಾನವನ್ನು ಮನೆಯಲ್ಲಿ ಉಪಯೋಗಿಸಿಕೊಳ್ಳಬಹುದಾಗಿತ್ತು, ಈ ಇಂಗ್ಲಿಷ್ ಮಾಧ್ಯಮ ನನಗೂ ಇಂಗ್ಲಿಷ್ ಶಾಲೆಗಳಲ್ಲಿ ಓದದೆ ಇದ್ದ ನನ್ನ ಮನೆಯವರಿಗೂ ನಡುವೆ ದಾಟಲಾಗದ ಅಡ್ಡಗೋಡೆಯನ್ನು ಹಾಕಿತು.......ನನ್ನ ಮನೆಯಲ್ಲಿಯೇ ನಾನು ಬಲುಬೇಗನೆ 'ಪರಕೀಯ'ನಾಗುತ್ತಲಿದ್ದೆ.

"...........ಶಿಕ್ಷಣ ಮಾಧ್ಯಮವನ್ನು ಕೂಡಲೇ, ಎಷ್ಟೇ ವೆಚ್ಚವಾಗಲಿ, ಬದಲಾಯಿಸಿ ಪ್ರಾಂತೀಯ ಭಾಷೆಗಳಿಗೆ ಸರಿಯಾದ ಸ್ಥಾನವನ್ನು ಕೊಡಬೇಕು. ಇದರಿಂದ ಉನ್ನತ ಶಿಕ್ಷಣದಲ್ಲಿ ಸಂಭವಿಸುತ್ತದೆ ಎಂದು ಹೇಳಲಾಗುತ್ತಿರುವ ತಾತ್ಕಾಲಿಕ ಗೊಂದಲವನ್ನು ಕೂಡ, ಪ್ರತಿದಿನವೂ ಅಧಿಕವಾಗುತ್ತಿರುವ ದೋಷಯುಕ್ತ ಅಪವ್ಯಯಕ್ಕೆ ಬದಲಾಗಿ, ಸ್ವಾಗತಿಸುತ್ತೇನೆ."

ಮಹಾತ್ಮ ಗಾಂಧಿಯವರ ಅನೇಕ ರಾಷ್ಟ್ರಹಿತ ಯೋಜನೆಗಳನ್ನು ಮೂಲೆ ಗುಂಪು ಮಾಡಿ ದೇಶಕ್ಕೆ ಹಾನಿಯನ್ನು ತರುತ್ತಿರುವ ವಿದ್ರೋಹಿಗಳಾದ ಅನೇಕರು ಅವರ

ಈ ದೇಶ ಭಾಷಾ ಮಾಧ್ಯಮದ ಯೋಜನೆಯನ್ನು ಮೂಲೆಗೊತ್ತರಿಸಿದ್ದಾರೆ. ಅದಕ್ಕೆ ಅವರು ಒಡ್ಡುವ ವಾದಗಳು ಹಾಸ್ಯಾಸ್ಪದವಾಗಿದೆ." ದೇಶಭಾಷೆಗಳಲ್ಲೇ ಶಿಕ್ಷಣ ದೊರಕಿದರೆ ನನಗೆ ಪರ ಪ್ರಾಂತಗಳಲ್ಲಿ ಕೆಲಸ ಸಿಕ್ಕುವುದು ಹೇಗೆ?" ಇದು ಅಂಥವರ ಪ್ರಶ್ನೆಗಳಲ್ಲಿ ಒಂದು. ಇಲ್ಲಿಂದ ಪರಪ್ರಾಂತಗಳಿಗೆ ಹೋಗಿಯೋ ಪರ ಪ್ರಾಂತಗಳಿಂದ ಇಲ್ಲಿಗೆ ಬಂದೋ ಹಿಂದೆ ಉದ್ಯೋಗ ದೊರಕಿಸಿ ಕೊಂಡವರು ಹಲವರು. ಆದರೆ ಅವರಿಗೆ ಉದ್ಯೋಗ ಸಿಕ್ಕಿದ್ದು ಅವರ ಇಂಗ್ಲಿಷ್ ಜ್ಞಾನಕ್ಕಾಗಿಯಲ್ಲ, ಅವರಿಗಿದ್ದ ತಾಂತ್ರಿಕ ಮತ್ತಿತರ ವಿಶೇಷ ಜ್ಞಾನಕ್ಕಾಗಿ ಎಂಬುದನ್ನು ಅಂಥವರು ಮರೆಯುತ್ತಾರೆ. ಆಗಲೂ ಇವರು ತಮ್ಮ ಮೇಲಧಿಕಾರಿಗಳೊಂದಿಗೂ, ಕೈಕೆಳಗಿನ ಅಧಿಕಾರಿಗಳೊಂದಿಗೂ ವ್ಯವಹಾರಕ್ಕಾಗಿ ಬಳಸುತ್ತಿದ್ದ ಭಾಷೆ ಇಂಗ್ಲಿಷ್ ಅಲ್ಲ ಎಂಬುದನ್ನು ಮರೆಯಬಾರದು. ಯಾವ ಪ್ರಾಂತ್ಯದಲ್ಲಿ ಇವರು ಕೆಲಸ ಮಾಡುತ್ತಿದ್ದರೋ ಆ ಪ್ರಾಂತ ಭಾಷೆಯನ್ನು ಮಾತಾಡುವ ಮಟ್ಟಿಗಾದರೂ ಇವರು ಕಲಿಯಲೇಬೇಕಾಗಿತ್ತು. ಹಾಗೆ ಅವರು ಕಲಿತ ಭಾಷೆಗಳಿಂದಲೇ ಅವರ ದಿನ ನಿತ್ಯದ ವ್ಯವಹಾರ ಸಾಗುತ್ತಿರುವುದು. ಮತ್ತು ಅವರ ತಾಂತ್ರಿಕ ಜ್ಞಾನದ ಸರಿಯಾದ ವಿನಿಯೋಗವೂ ನಡೆಯುತ್ತಿರುವುದು. ಇಷ್ಟಾದರೂ ಹೀಗೆ ಹೊರಗೆ ಹೋದ ಜನ ದೇಶ ಭಾಷೆ ಮಾಧ್ಯಮದ ವಿರುದ್ಧವಾಗಿ ಮಾತನಾಡುತ್ತಿರುವುದು ಅತ್ಯಂತ ಆಶ್ಚರ್ಯಕರವಾಗಿದೆ.

ಇಷ್ಟಕ್ಕೂ ಹೀಗೆ ಹೊರಗೆ ಹೋಗುತ್ತಿರುವ ತಜ್ಞರ ಸಂಖ್ಯೆಯಾದರೂ ಎಷ್ಟು? ಬಹುಶಃ ಶೇಕಡಾ ಒಂದಕ್ಕಿಂತಲೂ ಕಡಮೆ. ಹೀಗೆ ನೂರರಲ್ಲಿ ಒಬ್ಬ "ಪ್ರತಿಭಾವಂತ"ನ ಸಲುವಾಗಿ ತೊಂಬತ್ತೊಂಬತ್ತು ಜನರಿಗೆ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕು. ಎಂಬುದು ಖಂಡನಾರ್ಹ.

ಈ ಸಂದರ್ಭದಲ್ಲಿಯೇ ಇನ್ನೂ ಕೆಲವು ಸಂದೇಹಗಳನ್ನು ನಿವಾರಿಸುವುದು ಅಗತ್ಯ. ತ್ರಿಭಾಷಾ ಸೂತ್ರ ಎಂಬುದು, ನಾನು ಹಿಂದೆಯೇ ಅನೇಕ ಕಡೆ ಹೇಳಿರುವಂತೆ, ಭಾರತೀಯರಿಗೆ ತ್ರಿಶೂಲಪ್ರಾಯವಾಗುತ್ತದೆ. ಎಲ್ಲರಿಗೂ ಇಂಗ್ಲಿಷನ್ನಾಗಲಿ ಹಿಂದಿಯನ್ನಾಗಲಿ ಕಲಿಯಬೇಕಾದದ್ದು ಏಕೆ? ಯಾರಿಗೆ ಅಗತ್ಯವಿದೆಯೋ ಅಂಥವರು ಅವರಿಗೆ ಅಗತ್ಯವಿರುವ ಭಾಷೆಯನ್ನು ಕಲಿಯಬಹುದು. ಇಂತಹ ಭಾಷೆಗಳನ್ನು ಶೀಘ್ರವಾಗಿ ಸಾಹಿತ್ಯದೃಷ್ಟಿಯಿಂದಲ್ಲದ ಭಾಷಾ ದೃಷ್ಟಿಯಿಂದ ಬೋಧಿಸುವ ಕಾರ್ಯಕ್ಕಾಗಿ ಭಾಷಾ ಸಂಸ್ಥೆಗಳ ಸ್ಥಾಪನೆಯಾಗಿದೆ. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಆಗಲಿದೆ. ಅಲ್ಲದೆ ತ್ರಿಭಾಷಾ ಸೂತ್ರವೇ ಏಕೆ? ಭರತಖಂಡಕ್ಕೀಗ ಬೇಕಾಗಿರುವುದು ಬಹು ಭಾಷಾ ಸೂತ್ರ. ನಮ್ಮ ಜನ ಕಲಿಯಬೇಕಾದದ್ದು ಇಂಗ್ಲಿಷ್ ಭಾಷೆಯೊಂದನ್ನು ಮಾತ್ರವಲ್ಲ. ರಷ್ಯನ್, ಜಪಾನೀ, ಜರ್ಮನ್, ಫ್ರೆಂಚ್ ಮುಂತಾದ ಅನೇಕ ಪ್ರೌಢ ಭಾಷೆಗಳನ್ನು ವೈಜ್ಞಾನಿಕ ಅವಶ್ಯಕತೆಗಳಿಗಾಗಿ ಕಲಿಯಬೇಕಾಗಿದೆ.

ತ್ರಿಭಾಷಾ ಸೂತ್ರದ ಅಪಾಯ ಇಷ್ಟಕ್ಕೇ ಸೀಮಿತವಾಗಿಲ್ಲ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ರಾಜಕೀಯ ಕಾರಣಗಳಿಗಾಗಿ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ

ವೈಭವವನ್ನು ಏನೂ ಅರಿಯದ ನಮ್ಮ ಹಸುಳೆಗಳ ಮುಂದೆ ವರ್ಣಿಸಿ ಅವರ ಮನಸ್ಸನ್ನು ಅವುಗಳ ಕಡೆಗೇ ಎಳೆದು ದೇಶ ಭಾಷೆಗಳ ಅಧ್ಯಯನವನ್ನು ಹಿಂದ ಕ್ಕೊತ್ತರಿಸುವ ಪ್ರಯತ್ನವನ್ನೂ ಮಾಡುತ್ತಿರುವವರು ಅನೇಕರಿದ್ದಾರೆ.

ನನ್ನ ವಾದ ಇದು. ತ್ರಿಭಾಷಾ ಸೂತ್ರ ಎಂಬುದು ಭರತ ಖಂಡಕ್ಕೆ ಅತ್ಯಂತ ಅಪಾಯಕಾರಿಯಾದದ್ದು. ಅವರ ಸ್ಥಾನದಲ್ಲಿ ಬರಬೇಕಾದದ್ದು ದ್ವಿಭಾಷಾ ಸೂತ್ರ. ಭರತಖಂಡದ ಯಾವ ವಿದ್ಯಾರ್ಥಿಯ ಮೇಲೂ ಯಾವ ಭಾಷೆಯನ್ನೂ ಬಲವಂತವಾಗಿ ಹೇರಬಾರದು ಎಂಬುದು ನನ್ನ ವಾದದ ಸಾರಾಂಶ. ಮೇಲೆ ಸೂಚಿಸಿದಂತೆ ಪ್ರಪಂಚ ದಲ್ಲಿ ನಡೆಯುತ್ತಿರುವ ವಿಜ್ಞಾನ ಮತ್ತು ತಾಂತ್ರಿಕ ಪ್ರಗತಿಯ ಅರಿವಿಗೆ ಇಂಗ್ಲಿಷ್ ಭಾಷೆಯ ಜ್ಞಾನವೊಂದೇ ಸಾಲದು. ಜರ್ಮನ್, ರಷ್ಯನ್ ಮುಂತಾದ ಭಾಷೆಗಳನ್ನೂ ನಮ್ಮ ವಿದ್ಯಾರ್ಥಿಗಳು ಕಲಿಯಬೇಕಾದದ್ದು ಅಗತ್ಯ, ಆದ್ದರಿಂದ ಅನೇಕ ಭಾಷೆಗಳನ್ನು ವಿದ್ಯಾರ್ಥಿಗಳ ಮುಂದೆ ಇಟ್ಟು, ಅವರು ಯಾವುದಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳುವ ಅವಕಾಶವನ್ನು ಅವರಿಗೆ ನೀಡಬೇಕು.

ಶೈಕ್ಷಣಿಕ ದೃಷ್ಟಿಯಿಂದ ಮಾತ್ರವಲ್ಲದೆ ರಾಜಕೀಯವಾಗಿಯೂ ದ್ವಿಭಾಷಾ ಸೂತ್ರವೂ ತ್ರಿಭಾಷಾ ಸೂತ್ರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಪ್ರದೇಶ ಪ್ರದೇಶ ಗಳ ನಡುವಣ ಸ್ವಭಾಷಾಭಿಮಾನ ಜನ್ಯವಾದ ಭಾಷಾ ಸಮಸ್ಯೆಯನ್ನು ಪರಿಹರಿಸುವುದ ರಲ್ಲಿ ಸಹಾಯವಾಗುತ್ತದೆ ಯಾವುದಾದರೂ ಎರಡು ಭಾಷೆಗಳನ್ನು ಆರಿಸಿಕೊಳ್ಳಬಹುದು ಎನ್ನುವುದರಿಂದ ಹಿಂದಿ ಬೇಡ ಎನ್ನುವವರಿಗೆ, ಇಂಗ್ಲಿಷ್ ಬೇಡ ಎನ್ನುವವರಿಗೆ ಅವು ಗಳನ್ನು ಬಲಾತ್ಕಾರವಾಗಿ ಹೇರಿದಂತಾಗುವುದಿಲ್ಲ; ನಿಷೇಧಿಸಿದಂತೆಯೂ ಆಗುವುದಿಲ್ಲ. ಮಹಾಜನರೇ ಕಾಲಕ್ರಮೇಣ, ತಮ್ಮ ತಮ್ಮ ಅಭಿರುಚಿ ಅವಶ್ಯಕತೆಗಳಿಗೆ ತಕ್ಕಂತೆ, ಹಿಂದಿ ಇಂಗ್ಲಿಷ್ ರಷ್ಯನ್ ಸಂಸ್ಕೃತ ಮೊದಲಾದ ಭಾಷೆಗಳನ್ನು ಯಾವ ಶೇಕಡಾವಾರು ಪ್ರಮಾಣದಲ್ಲಿ ಕಲಿಯಬೇಕೆಂಬುದನ್ನು ತಮಗೆ ತಾವೇ ಗೊತ್ತುಮಾಡಿಕೊಳ್ಳುತ್ತಾರೆ.

ಹಿಂದಿಯನ್ನಾದರೂ ಐವತ್ತು ಕೋಟಿ ಭಾರತೀಯರು ಕಲಿಯಬೇಕು ಎನ್ನುವ ವಾದದಲ್ಲಿ, ಸಾಮ್ರಾಜ್ಯಶಾಹಿಯ ದಬ್ಬಾಳಿಕೆಯ ಮನೋಧರ್ಮವೊಂದನ್ನು ಬಿಟ್ಟರೆ, ಬೇರೆ ಅರ್ಥವಿಲ್ಲ, ಶೇಕಡ ಒಂದರಷ್ಟು ಜನಕ್ಕೆ ಅರ್ಧಂಬರ್ಧ ಇಂಗ್ಲಿಷ್ ಕಲಿಸಿ ಬ್ರಿಟಿ ಷರು ಇನ್ನೂರು ವರ್ಷಕ್ಕೂ ಮೇಲೆ ಸಮರ್ಥವಾಗಿ ರಾಜ್ಯಭಾರ ನಡೆಸಲಿಲ್ಲವೇ ?

ಆದ್ದರಿಂದ "ಬಹುಭಾಷೆಗಳಲ್ಲಿ ದ್ವಿಭಾಷಾ" ಎಂಬುದೇ ನಮಗಿಂದು ಕ್ಷೇಮಕರ ಸೂತ್ರವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯವು ದ್ವಿಭಾಷಾ ಸೂತ್ರವನ್ನು ಅಂಗೀಕರಿಸಿ, ಇಡೀ ಭಾರತಕ್ಕೆ ಮಾರ್ಗದರ್ಶನ ನೀಡಿ, ಅಗ್ರೇಸರ ಸ್ಥಾನದಲ್ಲಿ ನಿಂತಿರುವುದು ನಿಮಗೆ ಅಭಿ ಮಾನದ ಸಂಗತಿ.

ಅಧಿಕೃತ ರಾಷ್ಟ್ರಭಾಷೆಯ ಪ್ರಶ್ನೆ ಬರುತ್ತದೆ. ಅಖಂಡ ಭಾರತಕ್ಕೆ ಒಂದು ರಾಷ್ಟ್ರಭಾಷೆ ಅಗತ್ಯ. ಬಹುಜನರು ಯಾವುದು ರಾಷ್ಟ್ರಭಾಷೆಯೆಂದು ತೀರ್ಮಾನಿ

ಸುತ್ತಾರೋ ಅದನ್ನು ವ್ಯವಹಾರಮಟ್ಟಿಗೆ, ಎಲ್ಲರೂ ಅಲ್ಲ, ಅವಶ್ಯವಿದ್ದಷ್ಟು ಜನರು ಅವರೇ ನಿರ್ಣಯಿಸಿಕೊಂಡರೆ, ಕಲಿಯುವುದು ಸೂಕ್ತ. ಆದರೆ ಅದನ್ನು ಕೂಡ ವಿದ್ಯಾರ್ಥಿಗಳ ಆಯ್ಕೆಗೆ ಬಿಡಬೇಕೆಂಬುದೇ ನನ್ನ ಅಭಿಪ್ರಾಯ.

ಇನ್ನೊಂದು ವಾದವನ್ನು ಮುಂದೊಡ್ಡುವ ಜ್ಞಾನಿಗಳ ಒಂದು ಗುಂಪಿದೆ. ಅದು ಒಂದು ಪ್ರಾಂತದ ವಿಶ್ವವಿದ್ಯಾನಿಲಯ ಮತ್ತೊಂದು ಪ್ರಾಂತದ ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ನೇಮಕ ಮಾಡಿಕೊಳ್ಳುವ ವಿಷಯ ನನ್ನ ವಿಶ್ವವಿದ್ಯಾನಿಲಯದ ಸೇವೆಯ ದೀರ್ಘ ಇತಿಹಾಸದಲ್ಲಿ ಹೊರಗಿನ ವಿಶ್ವವಿದ್ಯಾನಿಲಯಗಳಿಂದ ಇಲ್ಲಿಗೆ ಆಹ್ವಾನಿಸಿದ ಪ್ರತಿಭಾ ಪುರುಷರ ಸಂಖ್ಯೆ ಕೈಬೆರಳುಗಳಲ್ಲಿ ಎಣಿಸಬಹುದಾದಷ್ಟು ಇಲ್ಲಿಂದ ಬೇರೆ ವಿಶ್ವವಿದ್ಯಾನಿಲಯಗಳಿಗೆ ಹೋದವರ ಸಂಖ್ಯೆಯೂ ಇದಕ್ಕಿಂತ ಹೆಚ್ಚಿನ ದಾಗಿರಲಾರದು. ಈಗಂತೂ ಪ್ರತಿಯೊಂದು ಪ್ರಾಂತವೂ ತನ್ನಲ್ಲಿಯ ಪ್ರತಿಭಾಶಾಲಿ ಗಳಿಗೇ ಉದ್ಯೋಗ ಒದಗಿಸಲು ಅಸಮರ್ಥವಾಗಿರುವಾಗ ಇನ್ನು ಹೊರ ಪ್ರಾಂತ ಗಳಿಂದ ಪ್ರತಿಭಾವಂತರನ್ನು ಸ್ವಾಗತಿಸಿ ಅವರನ್ನು ಪೀಠಗಳಲ್ಲಿ ಪ್ರತಿಷ್ಠಾಪಿಸುವ ಮಾತು ಎಲ್ಲಿಂದ ಬಂತು ? ಒಂದು ವೇಳೆ ಅಂತಹ ಪ್ರಸಂಗ ಒದಗಿದರೆ ಹೀಗೆ ತಮ್ಮ ತಮ್ಮ ವಿಷಯಗಳಲ್ಲಿ 'ವಿಶೇಷ ಪ್ರತಿಭಾವಂತ' ರಾಗಿರುವರು ಬೇರೆ ಪ್ರಾಂತದ ಭಾಷೆ ಯನ್ನು ವ್ಯವಹಾರದ ಮಟ್ಟಿಗಾದರೂ ಶೀಘ್ರವಾಗಿ ಕಲಿತುಕೊಳ್ಳುವ ಶಕ್ತಿಯನ್ನೂ ಪಡೆದೇ ಇರುತ್ತಾರೆ. ಆದುದರಿಂದ ಇಂತಹ ಅಪೂರ್ವ ಪ್ರಸಂಗಗಳನ್ನು ಎದುರಿಸಲು ಅಂದರೆ ಲಕ್ಷದಲ್ಲಿ ಒಬ್ಬರಿಗೆ ಅನುಕೂಲ ಮಾಡಿಕೊಡಲು, ಲಕ್ಷಾಂತರ ಜನರನ್ನು ಇಂಗ್ಲಿಷಿನ ಬಲಿಪೀಠದ ಮೇಲೆ ವಧೆಮಾಡುವುದು ಸರಿಯಲ್ಲವೆಂಬುದು ಸ್ಪಷ್ಟ.

ಅಲ್ಲದೆ ಈಗ ವಾದ ಮಾಡುತ್ತಿರುವವರಲ್ಲಿ ಅನೇಕರದು ಅರ್ಧ ಶತಮಾನದ ಹಿಂದಿನ ಜ್ಞಾನ. ಐವತ್ತು ವರ್ಷಗಳ ಹಿಂದೆ ನಾವೆಲ್ಲ ವಿದ್ಯಾರ್ಥಿಗಳಾಗಿದ್ದಾಗ ಕೂಡ ಜ್ಞಾನದ ಪ್ರಮುಖ ಶಾಖೆಗಳಿಗೆಲ್ಲ ಪ್ರವೇಶವಿದ್ದದ್ದು ಇಂಗ್ಲಿಷ್ ಭಾಷೆಯ ಮೂಲ ಕವೇ. ಈಗ ಹಾಗಲ್ಲ. ನನಗೆ ತಿಳಿದಂತೆ ಕನ್ನಡದ ಮೂಲಕವಾಗಿ ಜ್ಞಾನದ ಯಾವ ಶಾಖೆಯನ್ನಾದರೂ ಪರಿಚಯ ಮಾಡಿಕೊಳ್ಳುವಂತೆ ಗ್ರಂಥರಚನೆ ಕನ್ನಡದಲ್ಲಿ ನಡೆದಿದೆ. ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಸಾರಾಂಗದ ಮೂಲಕ ಪ್ರಕಟಿಸಲಿರುವ "ಮುದ್ರಿತ ಕನ್ನಡ ಕೃತಿಗಳ ವಿವರಣಾತ್ಮಕ ಗ್ರಂಥಸೂಚಿ" ಹೊರಬಂದಾಗ ಈ ಮಾತಿನ ಅರ್ಥ ಮನದಟ್ಟಾದೀತು.

ಮಹಾತ್ಮಾ ಗಾಂಧೀಜಿಯವರು ಸಾರಿ ಸಾರಿ ಹೇಳಿದಂತೆ, ಇತರ ಶಿಕ್ಷಣ ತಜ್ಞರು ತರ್ಕಬದ್ಧವಾಗಿ ಮಂಡಿಸಿ ಪ್ರತಿಪಾದಿಸಿದಂತೆ, ದೇಶಭಾಷೆಗಳಲ್ಲಿ ಶಿಕ್ಷಣ ದೊರೆಯದಿದ್ದರೆ, ಈಗಾಗುತ್ತಿರುವಂತೆ, ವಿದ್ಯಾಭ್ಯಾಸ ಮರಳಿನ ಮೇಲೆ ಕಟ್ಟಿದ ಸೌಧ ವಾಗುತ್ತದೆ. ವಿಜ್ಞಾನವನ್ನೂ ತಾಂತ್ರಿಕ ಜ್ಞಾನವನ್ನೂ ಕನ್ನಡದಲ್ಲಿ ಹೇಳಲಾಗುವು ದಿಲ್ಲ ಎಂಬುದು ಮಂದಮತಿಗಳ, ಆಲಸ ದುರ್ಬಲರ ಮತ್ತು ವಿದ್ಯಾದ್ರೋಹಿಗಳ ಕನವರಿಕೆ ಮತ್ತು ಅತ್ಯಂತ ಹಾಸ್ಯಾಸ್ಪದವಾದ ತಲೆಹರಟೆ ಎಂಬುದನ್ನು ನಮ್ಮ

ವಿದ್ವಾಂಸರು ತಮ್ಮ ಕನ್ನಡ ವೈಜ್ಞಾನಿಕ ಮತ್ತು ಮಾನವಿಕ ಗ್ರಂಥಗಳ ಮೂಲಕ ಸಾರಿ ಹೇಳಿದ್ದಾಗಿದೆ. ಪಾರಿಭಾಷಿಕ ಪದಗಳ ಅಭಾವವೇ ಪಠ್ಯಪುಸ್ತಕ ರಚನೆಗೆ ಮತ್ತು ಪ್ರಾದೇಶಿಕ ಭಾಷೆಗಳಲ್ಲಿ ವಿದ್ಯೆಯನ್ನು ಬೋಧಿಸುವುದಕ್ಕೆ ಇರುವ ದೊಡ್ಡ ಅಡ್ಡಿ ಎಂಬ ಪೇಲವವಾದ ಹೇಳಿಕೆಗಳನ್ನು ಇನ್ನು ಮುಂದೆ ಗಮನಕ್ಕೆ ತೆಗೆದುಕೊಳ್ಳಬೇಕಾದದ್ದೇ ಇಲ್ಲ. ಆದಷ್ಟುಮಟ್ಟಿಗೆ ಅಂತರರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಹಾಗೆಯೇ ಉಳಿಸಿಕೊಳ್ಳುವುದು ಸಾಧ್ಯ ಎಂಬುದನ್ನು, ಅವಕ್ಕೆ ತದ್ಭವ-ತತ್ಸಮಗಳನ್ನು ಸ್ವಲ್ಪ ಶ್ರಮದಿಂದ ಸೃಷ್ಟಿಸುವುದೂ ಸಾಧ್ಯ ಎಂಬುದನ್ನು ನಮ್ಮ ವಿಜ್ಞಾನ ಲೇಖಕರು ತೋರಿಸಿಕೊಟ್ಟಿದ್ದಾರೆ. ಪ್ರಬುದ್ಧ ಕರ್ಣಾಟಕವು ತನ್ನ ಚಿನ್ನದ ಹಬ್ಬದ ಸಂದರ್ಭದಲ್ಲಿ ಪ್ರಕಟಿಸಿರುವ ೧೬೦೦ ಪುಟಗಳ ವಿಜ್ಞಾನ ವಿಶೇಷಾಂಕ ಇಂತಹ ಎಲ್ಲ ಸಮಸ್ಯೆಗಳಿಗೂ ಸಶಕ್ತವೂ ಸಚಿತ್ರವೂ ಆದ ಪರಿಹಾರ ರೂಪವಾಗಿ ನಿಂತಿದೆ.

ತನ್ನ ಅನೇಕ ಮಾಲಿಕೆಗಳ ಮೂಲಕ ಪ್ರಸಾರಾಂಗ ವಿಶ್ವವಿದ್ಯಾನಿಲಯದ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಅನೇಕ ಸಹಾಯಕ ಗ್ರಂಥಗಳನ್ನು ಒದಗಿಸುವುದರ ಜೊತೆಗೆ ಜನಸಾಮಾನ್ಯರ ಜ್ಞಾನತೃಷೆಯನ್ನು ಪೂರೈಸುವುದಕ್ಕಾಗಿ ಕೂಡ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಿದೆ.

ಈಗ ಹೊರಬರುತ್ತಿರುವ ಶ್ರೀ ಎಚ್. ಎಲ್. ನಾಗೇಗೌಡರ "ಪ್ರವಾಸಿ ಕಂಡ ಇಂಡಿಯಾ" ಕೃತಿಯ ಏಳನೆಯ ಸಂಪುಟವು ಓದುಗರಿಗೆ ತುಂಬ ಪ್ರಿಯವಾಗುತ್ತದೆಂದು ಆಶಿಸುತ್ತೇನೆ.

೨೧-೫-೧೯೮೩

ಕೆ. ವಿ. ಪುಟ್ಟಪ್ಪ
ಪ್ರಧಾನ ಸಂಪಾದಕ

# ಪರಿವಿಡಿ

# ಪ್ರಸ್ತಾವನೆ

ಕ್ರಿ.ಪೂ: ೬೦೦ರಿಂದ ಆರಂಭವಾದ ಈ ಪ್ರವಾಸಿಗಳ ಕಥೆ ಸುಮಾರು ಎರಡು ಸಾವಿರ ವರ್ಷಗಳಷ್ಟು ದೀರ್ಘಕಾಲದಲ್ಲಿ ಭಾರತದಲ್ಲಿ ಕಂಡು ಕೇಳಿದ್ದನ್ನು ಬಹುಸ್ವಾರಸ್ಯ ವಾಗಿ ಹೇಳಿ ಈಗ ಹದಿನೇಳನೆಯ ಶತಮಾನಕ್ಕೆ ಕಾಲಿಟ್ಟಿದೆ. ಓದುಗರ ಕುತೂಹಲವನ್ನು ಕೆರಳಿಸಿದೆ. ಮುಂದಿನ ಸಂಪುಟ ಯಾವಾಗ ಬರುತ್ತದೆಯೆಂದು ಓದುಗರು ಪದೇ ಪದೇ ಕೇಳುವಂತೆ ಮಾಡಿದೆ.

ಕೇವಲ ಮೂರು ನಾಲ್ಕು ಸಂಪುಟಗಳಲ್ಲಿ ಮುಗಿಯಬಹುದೆಂದು ಭಾವಿಸಿದ್ದುದು ಈಗ ಹತ್ತಾದರೂ ಮುಗಿಯಲಾರದೋ ಎಂದೆನಿಸುತ್ತಿದೆ. ಏಕೆಂದರೆ ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಭಾರತಕ್ಕೆ ಬಂದ ಪ್ರವಾಸಿಗಳ ಸಂಖ್ಯೆಯೂ ಹೆಚ್ಚು; ಅವರು ಬರೆದಿಟ್ಟಿರುವ ವರದಿಗಳೂ ತುಂಬಾ ವಿವರವಾಗಿವೆ. ಕೇವಲ ಸ್ವಾರಸ್ಯಕರವಾದ ಹಾಗೂ ನಮ್ಮ ಭಾರತದ ಹಿಂದಿನ ಸಾಮಾಜಿಕ, ನೈತಿಕ, ಆರ್ಥಿಕ ಮತ್ತು ರಾಜಕೀಯ ಸಂಗತಿಗಳನ್ನು ತಿಳಿಯಲು ಉಪಯುಕ್ತವಾದ ಅಂಶಗಳನ್ನಷ್ಟೇ ಆರಿಸಿ ಕೊಂಡರೂ ವಿಪುಲ ವಾದ ಸಾಮಗ್ರಿ ನಮ್ಮ ಮುಂದಿದೆ. ಇದನ್ನೆಲ್ಲಾ ಕನ್ನಡಕ್ಕೆ ನೀಡುವ ಕೆಲಸ ಆದಷ್ಟು ಜಾಗ್ರತೆ ಆಗಬೇಕೆಂಬುದು ನನ್ನದಷ್ಟೇ ಅಲ್ಲ ಓದುಗರ ಆಶಯವು ಆಗಿದೆ.

ಆದರೆ ಒಂದಲ್ಲ ಒಂದು ಕಾರಣ ಮುದ್ರಣ ನಿಧಾನವಾಗುತ್ತಿದೆ. ಇನ್ನು ಮುಂದಾದರೂ ಆ ಕೆಲಸ ಜಾಗ್ರತೆ ಆಗಲೆಂದು ಹಾರೈಸುತ್ತಾ ಈ ಏಳನೆಯ ಮಹಾ ಸಂಪುಟವನ್ನು ಓದುಗರ ಮುಂದಿಡುತ್ತಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣಾ ಸಮಿತಿಯವರು ಇನ್ನು ಸಾಕು ಎಂಬ ಮಾತು ಹೇಳಿಲ್ಲ. ಬಹುಶಃ ಮುಂದೆಯೂ ಹೇಳಲಾರರೆಂದು ನನ್ನ ನಂಬಿಕೆ. ಏಕೆಂದರೆ ಪ್ರವಾಸಿಗಳ ಈ ಕಥನ ಅಷ್ಟು ಕುತೂಹಲಕಾರಿಯಾಗಿದೆ. ಕನ್ನಡ ಸಾಹಿತ್ಯವಾಹಿನಿಗೆ ಒಂದು ಹೊಸ ಹೊಳೆ ಸಂಗಮಿಸುತ್ತಿರುವುದು ಅವರಿಗೂ ಆನಂದವನ್ನುಂಟುಮಾಡಿರು ವುದರಲ್ಲಿ ಸಂತೋಷವಾಗಿದೆ.

ಈ ಏಳನೆಯ ಸಂಪುಟವು ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯ ದಲ್ಲಿ ಮುದ್ರಣಗೊಂಡಿದೆ. ಬಿಡುವಿಲ್ಲದ ಕೆಲಸ ಮುದ್ರಣಾಲಯಕ್ಕಿದ್ದರೂ ಇದನ್ನು ತಾವೇ ಮುದ್ರಿಸುವ ಆಸಕ್ತಿವಹಿಸಿದ ಶ್ರೀ ಎಚ್. ನರಸಣ್ಣನವರಿಗೂ, ಮುದ್ರಣಾಲಯದ ಸಕಲರಿಗೂ, ಪ್ರಕಾಶನ ಮಾಡುವುದರಲ್ಲಿ ಅಪಾರ ಆಸಕ್ತಿ ತೋರಿಸಿದ ಡಾ. ಪ್ರಭುಶಂಕರ ಮತ್ತು ಈಗಿನ ನಿರ್ದೇಶಕರಾದ ಶ್ರೀ ಕೆ. ಟಿ. ವೀರಪ್ಪ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಸಂಪುಟವನ್ನು ಪ್ರಸಾರಾಂಗದ ಚಿನ್ನದ ಹಬ್ಬದ ವೇಳೆ (೨೩–೫–೧೯೭೩)

ಇಪ್ಪತ್ತೈದು ಗ್ರಂಥಗಳಲ್ಲಿ ಒಂದಾಗಿ ಪ್ರಕಟಿಸುತ್ತಿರುವುದೂ ನನಗೆ ತುಂಬಾ ಸಂತೋಷವನ್ನುಂಟುಮಾಡಿದೆ.

ಅತಿ ಕಡಿಮೆ ಕಾಲದಲ್ಲಿ, ಇಷ್ಟು ಸುಂದರವಾಗಿ ಈ ಪುಸ್ತಕ ಹೊರಬರಲು ಕಾರಣರಾದ ವಿಶ್ವವಿದ್ಯಾನಿಲಯದ ಅಚ್ಚುಕೂಟದ ನಿರ್ದೇಶಕರು ಮತ್ತು ಅವರ ಸಿಬ್ಬಂದಿವರ್ಗದ ಶ್ರಮವನ್ನು ನಾನು ಕೃತಜ್ಞತೆಯಿಂದ ನೆನೆಯುತ್ತೇನೆ.

ಬೇಕಾದ ಗ್ರಂಥಗಳನ್ನು ಒದಗಿಸಿಕೊಡುವಲ್ಲಿ, ಚಿತ್ರಗಳನ್ನು ಬರೆದುಕೊಡುವುದರಲ್ಲಿ, ಹಸ್ತಪ್ರತಿ ಸಿದ್ಧಪಡಿಸುವುದರಲ್ಲಿ, ಪ್ರೂಫ್ ತಿದ್ದುವುದರಲ್ಲಿ ಅನೇಕ ಜನರು ನೆರವಾಗಿದ್ದಾರೆ. ಅವರಿಗೆಲ್ಲ ನನ್ನ ವಂದನೆಗಳು.

ಬೆಂಗಳೂರು

ಎಚ್. ಎಲ್. ನಾಗೇಗೌಡ

# ಕ್ಯಾಪ್ಟನ್ ರಾಬರ್ಟ್ ಕೂಕರ್

ಕ್ಯಾಪ್ಟನ್ ರಾಬರ್ಟ್ ಕೂಕರ್ (Captain Robert Coquer) ಎಂಬುವನು ಕ್ರಿ. ಶ. ಸುಮಾರು ೧೬೦೮ರಲ್ಲಿ ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಜೋರ್ಡಾನ್ (Jordan) ಮತ್ತು ಇತರ ವರ್ತಕರುಗಳಿಗೆ ಸೇರಿದ ಹಡಗಿನ ಕ್ಯಾಪ್ಟನ್ ಆಗಿ ಈ ದೇಶಕ್ಕೆ ಬಂದಂತೆ ಕಾಣುತ್ತದೆ. ಈತ ತನ್ನ ಪ್ರವಾಸಕಥನವನ್ನು ಬರೆದು ಅರ್ಲ್ ಆಫ್ ಸ್ಯಾಲಿಸ್‌ಬರಿ (Earl of Salisbury) ಆಗಿದ್ದ ರಾಬರ್ಟ್ (Robert) ಎಂಬುವನಿಗೆ ಒಪ್ಪಿಸಿದ. ಹಾಗೆ ಒಪ್ಪಿಸುವ ವೇಳೆ ಹೇಳಿದ ಮಾತುಗಳಿವು:

ಪ್ರಿಯ ಓದುಗ, ನನ್ನ ಅಪಾಯಕರವಾದ ಈ ಪ್ರವಾಸಕಥನವನ್ನು ನಿಮ್ಮ ಮುಂದಿಡುತ್ತಿದ್ದೇನೆ. ಇದನ್ನು ಓದಿದರೆ ನಾನು ಏನೇನು ಕಷ್ಟ-ನಷ್ಟಗಳನ್ನು ಅನುಭವಿಸಿದೆನೆಂಬುದು ಸ್ಪಷ್ಟವಾಗುವುದು. ನಾನು ಜಂಭದಿಂದ ಈ ಕಥನವನ್ನು ಪ್ರಕಟಿಸುತ್ತಿಲ್ಲ. ಪ್ರಕಟಿಸದೇಹೋದರೆ ನನ್ನನ್ನು ಕಷ್ಟಗಳಿಂದ ಪಾರು ಮಾಡಿದ ಆ ಭಗವಂತನಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸಿದಂತೆ ಆಗುವುದಿಲ್ಲವಲ್ಲ ಎಂದು ಪ್ರಕಟಿಸುತ್ತಿದ್ದೇನೆ, ಅಷ್ಟೆ. ಈ ಪ್ರವಾಸದ ಕಷ್ಟನಷ್ಟಗಳೆಲ್ಲ ನನ್ನವು; ಅದರ ಉಪಯೋಗ ನಿಮ್ಮದು. ಇದನ್ನು ಓದಿ ನೀವು ತೃಪ್ತಿ ಪಡೆಯುವಿರೆಂದು ನಾನು ಭಾವಿಸುತ್ತೇನೆ.

ಮುಖ್ಯ ಇಂಡಿಯಾ (India Proper) ಅಥವಾ ಮಹಾಮೊಗಲನ[೧] ಚಕ್ರಾಧಿಪತ್ಯವು ಪೂರ್ವಕ್ಕೆ ಹಾವಾ (Hawa = Jawa = ಜಾವಾ?), ಪಶ್ಚಿಮಕ್ಕೆ ಪರ್ಷಿಯಾ, ದಕ್ಷಿಣಕ್ಕೆ ಕೇಪ್ ಕಾಮೊರಿನ್ ಮತ್ತು ಉತ್ತರಕ್ಕೆ ಉಸ್ಬೆಕ್ ತಾರ್ತರಿ (Usbeck Tartary) ಹಾಗೂ ತಿಬೆಟ್—ಈ ಮಧ್ಯೆ ಇರುವ ಪ್ರದೇಶಗಳನ್ನು ಒಳಗೊಂಡಿದೆ. ಇಲ್ಲಿಯ ಜನರು ಮೂರರು, ಅಂದರೆ ಮಹಮ್ಮದೀಯ ಮತ್ತು ಪೇಗನ್ (Pagans = ಕ್ರೈಸ್ತ, ಯಹೂದಿ ಮತ್ತು ಮಹಮ್ಮದೀಯರಲ್ಲದವರು = ಹಿಂದೂಗಳು) ಈ ಎರಡಕ್ಕೂ ಸೇರಿದವರಾಗಿದ್ದಾರೆ. ಚಕ್ರವರ್ತಿ ಮಹಮ್ಮದೀಯ. ಆದರೆ ಅವನ ಪ್ರಜೆಗಳಲ್ಲಿ ಹತ್ತನೆಯ ಒಂದು ಭಾಗದಷ್ಟೂ ಮಹಮ್ಮದೀಯರಿಲ್ಲ. ಚಕ್ರಾಧಿಪತ್ಯದ ಒಳಪ್ರಾಂತದ ಗುಡ್ಡಗಾಡುಗಳಲ್ಲಿ ಮಹಮ್ಮದೀಯರೇ ಇಲ್ಲ. ಮೂರರೆಂದರೆ ತಾರ್ತರರು, ಪರ್ಷಿಯನರು ಮತ್ತು ಅರಬ್ಬರು. ಮಹಮ್ಮದೀಯರು ಪೇಗನರನ್ನು ಬಹು ಹೀನಾಯವಾಗಿ ಕಾಣಲೇಬೇಕು. ಅವರನ್ನು ತಮ್ಮ ಅಧೀನದಲ್ಲಿರುವ ಪಟ್ಟಣ ಪ್ರದೇಶಗಳಲ್ಲೂ ಹಳ್ಳಿಗಾಡಿನಲ್ಲೂ ಮತ್ತು ಸಮುದ್ರತೀರದ ಪ್ರದೇಶಗಳಲ್ಲೂ ಹೆಚ್ಚಾಗಿ ಕಟ್ಟಡ ಕಟ್ಟುವ ಕೆಲಸಗಳಿಗಾಗಿ ಮತ್ತು ಇತರ ಕೆಲಸಗಳಿಗಾಗಿ ದುಡಿಸಿಕೊಳ್ಳುತ್ತಾರೆ. ಆದರೆ ಹೀಗೆ ಹೀನಾಯವಾಗಿ ಕಾಣುವ ಮಹಮದೀಯರೂ ಮತ್ತು ಅವರಿಂದ ಹಿಯ್ಯಾಳಿಸಿಕೊಳ್ಳುವ ಪೇಗನರೂ ತಾವು ಕ್ರೈಸ್ತರಿಗಿಂತ ಮೇಲೆಂದು ಭಾವಿಸುತ್ತಾರೆ. ಪೇಗನರು ವಿನಯ ಸ್ವಭಾವದ ಜನ. ಯಾರ ತಂಟೆಗೂ ಹೋಗದೆ ತಮ್ಮ

---

೧. ಮೊಗಲ್ ಚಕ್ರವರ್ತಿ ಅಕ್ಬರನು ಕಾಲವಾದದ್ದು ಕ್ರಿ. ಶ. ೧೬೦೫ರಲ್ಲಿ. ಅದೇ ವರ್ಷ ಅವನ ಮಗ ಸಲೀಮನು ಜಹಾಂಗೀರ್ ಪಾದ್‌ಷಾ ಎಂಬ ಹೆಸರಿನಲ್ಲಿ ಸಿಂಹಾಸನವನ್ನೇರಿದ. ಕೂಕರನು ಇಂಡಿಯಾಕ್ಕೆ ಬಂದಿದ್ದ ವೇಳೆ ಮೊಗಲ್ ಚಕ್ರವರ್ತಿಯಾಗಿದ್ದವನು ಜಹಾಂಗೀರ್.

ಕೆಲಸವನ್ನು ತಪ್ಪಗೆ ನಡೆಸಿಕೊಂಡು ಹೋಗುತ್ತಾರೆ. ತಮ್ಮ ಜನಗಳ ಬಗ್ಗೆ ದಯಾ ದಾಕ್ಷಿಣ್ಯದಿಂದ ನಡೆದುಕೊಳ್ಳುತ್ತಾರೆ. ಜನಗಳಷ್ಟೇ ಅಲ್ಲ, ಪ್ರಾಣಿಗಳ ಬಗ್ಗೆಯೂ ಹಾಗೆ ವರ್ತಿಸುತ್ತಾರೆ. ಹೀಗಾಗಿ ಇವರಲ್ಲಿ ಭಿಕ್ಷುಕರ ಸುಳಿವೇ ಇಲ್ಲ. ಇವರು ಎಷ್ಟು ಸೂಕ್ಷ್ಮ ಬುದ್ಧಿಯವರೆಂದರೆ ಯಾವುದಾದರೂ ಸಾಮಾನನ್ನು ನೋಡಿದರೆ ಸಾಕು, ಅದರಂತೆ ಮಾಡಿಬಿಡುತ್ತಾರೆ. ಬಣ್ಣ ಬಣ್ಣದ ಹಾಗೂ ಬಗೆ ಬಗೆಯ ಸೊಗಸಾದ 'ಚಿಂಟ್' ಬಟ್ಟೆ ಗಳನ್ನೂ ಚಿತ್ತಾರದ ಕ್ಯಾಲಿಕೊ ಬಟ್ಟೆಗಳನ್ನೂ ತಯಾರುಮಾಡುವವರು ಈ ಸಾಮಾನ್ಯ ಜನಗಳೆಂದರೆ ಅರ್ಥಮಾಡಿಕೊಳ್ಳಿ, ಈ ಜನರು ಎಷ್ಟು ಬುದ್ಧಿವಂತರು ಎಂಬುದನ್ನು.

ಇಲ್ಲಿಯ ಮೂಲ ನಿವಾಸಿಗಳಾದ ಪೇಗನರ ಬಣ್ಣ ಕಪ್ಪು ಅಂದರೆ ಕಪ್ಪು. ಕೆಲವರು ಕಂದುಬಣ್ಣಕ್ಕಿರುತ್ತಾರೆ. ಆದರೆ ಎಲ್ಲರೂ ಒಳ್ಳೆಯ ರೂಪು ರೇಖೆಯುಳ್ಳ ವರು ; ಕಪ್ಪು ಕೂದಲು ಹಾಗೂ ಕಪ್ಪು ಕಣ್ಣುಗಳುಳ್ಳವರು. ಹೊರಗಡೆಯಿಂದ ಬಂದ ಮೂರರ ಮತ್ತು ಉತ್ತರ ಇಂಡಿಯಾದಲ್ಲಿ ಹುಟ್ಟಿಬೆಳೆದ ಮೂರರ ಬಣ್ಣ ಪೇಗನರಂತೆ ಕಪ್ಪುಬಣ್ಣಕ್ಕಿರದೆ ಸಾಕಷ್ಟು ಕಂದುಬಣ್ಣಕ್ಕಿದೆ. ಪೇಗನರಲ್ಲಿ ಬ್ರಾಹ್ಮಣರೆಂಬ ಜನ ಜೀವ ಇರುವ ಯಾವುದನ್ನೂ ತಿನ್ನುವುದಿಲ್ಲ. ಮತ್ತೆ ಪೇಗನರಾರೂ ದನದ ಮಾಂಸ ತಿನ್ನುವು ದಿಲ್ಲ. ಏಕೆಂದರೆ, ಅವರಿಗೆ ಅದು ಪೂಜಾರ್ಹವಾದುದು. ಮೂರರು ದನ ತಿನ್ನುತ್ತಾರೆ. ಆದರೆ ಹಂದಿ ತಿನ್ನುವುದಿಲ್ಲ. ಅವರ ದೃಷ್ಟಿಯಲ್ಲಿ ಹಂದಿ ತೀರಾ ಹೊಲಸು ಪ್ರಾಣಿ.

ಯೂರೋಪಿಯನರು ಇಂಡಿಯಾದಿಂದ ರೇಷ್ಮೆ, ಮಸ್ಲಿನ್ ಮತ್ತು ಕ್ಯಾಲಿಕೊ ಬಟ್ಟೆಗಳನ್ನೂ ಮೆಣಸನ್ನೂ ವಜ್ರ ಮುಂತಾದ ಬೆಲೆಯಾದ ಹರಳುಗಳನ್ನೂ ಉಪ್ಪು, ಆಲೂಗೆಡ್ಡೆ, ಅಫೀಮು ಮತ್ತಿತರ ಹಣ ಗಳಿಸುವ ವಸ್ತುಗಳನ್ನೂ ತರಿಸಿಕೊಳ್ಳುತ್ತಾರೆ. ಇಂಗ್ಲಿಷರು ಇಂಥ ಸಾಮಾನುಗಳನ್ನು ಬಹು ಖುಷಿಯಿಂದ ಕೊಂಡುಕೊಳ್ಳುತ್ತಾರೆ. ಆದರೆ ಡಚ್ಚರು ಈ ವಸ್ತುಗಳಿಗೆ ಸಂಬಾರದ ವಸ್ತುಗಳನ್ನೂ ಇತರ ಸರಕುಗಳನ್ನೂ ಸಾಟಿಮಾಡಿಕೊಳ್ಳುತ್ತಾರೆ. ಯೂರೋಪಿನ ರಾಷ್ಟ್ರಗಳು ಈ ಸರಕುಗಳ ಮೇಲೆ ಎಷ್ಟು ಸಾಧ್ಯವೋ ಅಷ್ಟು ಮಾತ್ರ ಸುಂಕ ಕೊಡುತ್ತಾರೆ. ಆದರೆ ಮೊಗಲ್ ಚಕ್ರವರ್ತಿ ತಕರಾರು ಮಾಡಿ ಹೆಚ್ಚು ವಸೂಲುಮಾಡಲು ಪ್ರಯತ್ನಿಸುತ್ತಿದ್ದಾನೆ.

ಇಂಡಿಯಾದ ಕಡಲುತೀರ ಬಹು ದೊಡ್ಡದಾದರೂ ಇಲ್ಲಿಯ ಜನ ಅಷ್ಟೇನೂ ಹೆಚ್ಚಾಗಿ ಹಡಗುಗಳನ್ನು ಕಟ್ಟುತ್ತಿಲ್ಲ. ಇದಕ್ಕೆ ಕಾರಣ ಹಡಗು ನಡೆಸುವ ನಾವಿಕರಿಲ್ಲ ದಿರುವುದೇ ಆಗಿದೆ. ಅರಬ್ ಕಡಲುಗಳ್ಳರನ್ನು ಎದುರಿಸುವಂತಹ ನಾವಿಕರೂ ಇವರಲ್ಲಿ ಇಲ್ಲ. ಈ ಕಾರಣ ಪರ್ಷಿಯಾದಲ್ಲಿಯೂ ಕೆಂಪು ಸಮುದ್ರದ ಮೇಲೂ ವ್ಯಾಪಾರ ನಡೆಸಬೇಕೆನ್ನುವ ಇಂಡಿಯಾ ವರ್ತಕರು ತಮ್ಮ ಸರಕುಗಳನ್ನು ಇಂಗ್ಲಿಷರ ಅಥವಾ ಡಚ್ಚರ ಹಡಗುಗಳ ಮೇಲೆ ಹೇರಿಕೊಂಡು ಹೋಗಬೇಕಾಗುತ್ತದೆ. ಈ ಸರಕುಗಳ ಸಾಗಾಣಿಕೆಯಿಂದ ಕಂಪೆನಿಗೆ (ಇಂಗ್ಲಿಷ್ ಮತ್ತು ಡಚ್ ಈಸ್ಟ್ ಇಂಡಿಯಾ ಕಂಪೆನಿಗಳಿಗೆ) ಕೈ ತುಂಬಾ ಸಂಪಾದನೆ ಇದೆ. ಪರ್ಷಿಯಾದಿಂದ ಇಂಡಿಯಾಕ್ಕೆ ಹೋಗುವ ಹಡಗು ಸಾಕಷ್ಟು ಭರ್ತಿಯಾದ ಹೊರತು ಹೊರಡುವುದಿಲ್ಲ. ಹಡಗಿನಲ್ಲಿ ಹೇರಿದ ಸರಕುಗಳ

ಬೆಲೆ, ನಗ ನಾಣ್ಯ ಮತ್ತು ವಜ್ರ ವೈಡೂರ್ಯಗಳೆಲ್ಲ ಸೇರಿ ಇನ್ನೂರರಿಂದ ಮುನ್ನೂರು ಪೌಂಡುಗಳಷ್ಟಾಗಬಹುದು.

ಇಲ್ಲಿ ಗೋಧಿ ಮತ್ತು ಬಾರ್ಲಿ ಬೆಳೆಯುತ್ತಾರೆ. ಆದರೆ ಎಲ್ಲಾ ಕಡೆಗಳಲ್ಲೂ ಬೆಳೆಯುವ ಬೆಳೆ ಎಂದರೆ ಬತ್ತ. ಇಂಡಿಯಾದಲ್ಲೆಲ್ಲಾ ಹೆಚ್ಚಾಗಿ ತಿನ್ನುವುದು ಅಕ್ಕಿ. ದೇವರು ಕೊಡುವ ಮಳೆ ರೈತರಿಗೆ ತುಂಬ ಅನುಕೂಲವಾಗಿದೆ. ತೆಂಗು, ಮಾವು, ಪೈನಾಪಲ್, ಗೋವಾ (guava–ಸೀಬೆಹಣ್ಣು), ನಿಂಬು, ಗಜನಿಂಬೆ (lemon), ಕಿತ್ತಲೆ ಇತ್ಯಾದಿ ಹಣ್ಣುಗಳನ್ನು ಬೆಳೆಯುತ್ತಾರೆ. ಹಿಪ್ಪುನೇರಿಳೆ (malbarice=mulberry) ಯನ್ನು ಅದರ ಹಣ್ಣಿಗಿಂತ ಹೆಚ್ಚಾಗಿ ಹುಳುಗಳನ್ನು ಸಾಕುವುದಕ್ಕೆ ಬೆಳೆಯುತ್ತಾರೆ. ಅತ್ಯಂತ ಉಪಯುಕ್ತವಾದ ಮರ ಎಂದರೆ ತೆಂಗಿನಮರ. ತಿನ್ನುವುದಕ್ಕೆ ಕಾಯಿ, ಮನೆಗೆ ಮರ, ಹೊದಿಸುವುದಕ್ಕೆ ಗರಿ—ಹೀಗೆ ಎಲ್ಲಾ ಕೆಲಸಗಳಿಗೆ ಅದು ಉಪಯೋಗವಾಗುತ್ತದೆ. ಇವರು ಬೆಳೆಯುವ ಹತ್ತಿಯಂತೂ ಕ್ಯಾಲಿಕೊ ಬಟ್ಟೆಗೆ ಬಹು ಉಪಯುಕ್ತವಾಗಿದೆ. ಇವರ ಉಪಯುಕ್ತ ಪ್ರಾಣಿಗಳೆಂದರೆ ಒಂಟೆ, ಆನೆ, ಎತ್ತು ಮತ್ತು ಎಮ್ಮೆಗಳು. ಇಲ್ಲಿ ಕುದುರೆಗಳನ್ನು ಸಾಕುವುದು ಕಡಿಮೆ. ಹೀಗಾಗಿ ಇವರ ಸೈನ್ಯಕ್ಕೆ ಬೇಕಾದ ಕುದುರೆಗಳನ್ನು ಪರ್ಷಿಯಾ ಮತ್ತು ತಾರ್ತರಿಯಿಂದ ತರಿಸಿಕೊಳ್ಳು ತ್ತಾರೆ. ಹಾವು, ಚೇಳು ಮುಂತಾದ ವಿಷ ಜಂತುಗಳೂ ಇವೆ. ಇಲ್ಲಿ ಚಿಗಟ ಹಾಗೂ ತಿಗಣೆಗಳು ನಿದ್ದೆಮಾಡುವುದಕ್ಕೂ ಬಿಡುವುದಿಲ್ಲ. ಹಲ್ಲಿ ಮತ್ತು ಮಂಡರಗಪ್ಪೆಗಳು ತುಂಬ ದಪ್ಪ. ಮಿಡತೆಗಳಂತೂ ಅವು ಇಳಿದ ಕಡೆ ಒಂದು ಹಸಿರುಗರಿಯೂ ಇಲ್ಲ ದಂತೆ ತಿಂದುಹಾಕಿಬಿಡುತ್ತವೆ.

ಗಂಗಾನದಿಯ ಮುಖದಲ್ಲಿ ಮೊಸಳೆಗಳ ಕಾಟ ಹೇಳತೀರದು. ಅವು ಹಡಗು ಗಳಿಗೂ ತಾಪತ್ರಯ ಉಂಟುಮಾಡುತ್ತವೆ. ಸಮುದ್ರ ಇನ್ನು ನೂರು ಮೈಲಿ ಇದೆ ಎನ್ನುವಷ್ಟು ದೂರದಲ್ಲಿಯೇ ಗಂಗಾನದಿ ತನ್ನ ದಡ ಮೀರಿ ಹರಿದು ಈಜಿಪ್ಟಿನ ನೈಲ್ ನದಿಯಂತೆ ಅಕ್ಕಪಕ್ಕದ ಪ್ರದೇಶಗಳನ್ನು ಫಲವತ್ತಾಗಿ ಮಾಡುತ್ತದೆ.

ಮೊಗಲ್ ಚಕ್ರವರ್ತಿ ನಿರಂಕುಶ ಆಡಳಿತ ನಡೆಸುತ್ತಾನೆ. ಯಾವ ಲಿಖಿತ ಕಾನೂನು ಕಟ್ಟಲೆಗಳಿಲ್ಲ. ಯಾವಾಗಲೂ ಭಾರಿ ಸೈನ್ಯವನ್ನಿಟ್ಟುಕೊಂಡು ದೇಶ ಆಳು ತ್ತಿದ್ದಾನೆ. ದಂಡಿನ ಶಿಬಿರದಲ್ಲಿಯೇ ಹೆಚ್ಚಾಗಿ ಕಾಲ ಕಳೆಯುತ್ತಾನೆ. ದೇಶದಲ್ಲೆಲ್ಲಾ ತನ್ನ ಅಧಿಕಾರಿಗಳನ್ನು ನೇಮಿಸಿ ಆಡಳಿತ ನಡೆಸುತ್ತಾನೆ. ನೆರೆಹೊರೆಯ ರಾಜರುಗಳ ಭಯ ಗಿಯ ಅವನಿಗಿಲ್ಲ. ಯೂರೋಪಿಯನರು ತಮ್ಮ ವ್ಯಾಪಾರಕ್ಕಾಗಿ ಬಂದರು ಗಳನ್ನು ಕಟ್ಟಲು ಅನುಮತಿ ನೀಡಿದ್ದಾನೆ. ಆಗಾಗ್ಗೆ ಅವನ ಸೈನ್ಯ ಪಡೆಗಳು ಬಂದರು ಗಳಿಂದ ಸುಂಕ ಸಾರಿಗೆಗಳನ್ನು ವಸೂಲುಮಾಡಿಕೊಳ್ಳುತ್ತವೆ. ಆದರೆ ಬಂದರುಗಳ ಆಡಳಿತವನ್ನು ಯೂರೋಪಿಯನರು ತಮಗಿಷ್ಟ ಬಂದ ನೀತಿನಿಯಮಾನುಸಾರ ನಡೆಸಿ ಕೊಂಡು ಹೋಗಬಹುದು. ಅವರು ತಮ್ಮದೇಆದ ಚಿನ್ನ ಬೆಳ್ಳಿ ನಾಣ್ಯಗಳನ್ನು ಟಂಕಿಸಬಹುದು.

ಇಂಡಿಯಾದ ಪೂರ್ವ ಸಮುದ್ರತೀರದಲ್ಲಿರುವ ಇಂಗ್ಲಿಷರ ಬಂದರುಗಳೆಂದರೆ: ಸೆಂಟ್ ಜಾರ್ಜ್ (ಮದ್ರಾಸ್) ಮತ್ತು ಸೆಂಟ್ ಡೇವಿಡ್. ಅಲ್ಲದೆ ಗಂಗಾನದಿಯ ಮುಖದಲ್ಲಿ ಫೋರ್ಟ್ ವಿಲಿಯಂ ಮತ್ತು ಕಾರೊಮಂಡಲ ಮತ್ತು ಮಲಬಾರ್ ತೀರ ದಲ್ಲಿ ಇನ್ನಿತರ ಬಂದರುಗಳೂ ಇವೆ. ಇಂಗ್ಲಿಷರಿರುವ ಅತ್ಯಂತ ದೊಡ್ಡ ಸ್ವಾಸ್ಥ್ಯ ವೆಂದರೆ—ಬೊಂಬಾಯಿ. ಇದು ಸೂರತ್ತಿನಿಂದ ದಕ್ಷಿಣಕ್ಕೆ ಮೂವತ್ತು ನಲವತ್ತು ಹರಿದಾರಿ ದೂರದಲ್ಲಿದೆ. ಇಂಗ್ಲಿಷ್ ಫ್ಯಾಕ್ಟೊರಿಯ ಮೇಲ್ವಿಚಾರಣೆಯನ್ನು ಸಾಮಾನ್ಯ ವಾಗಿ ಬೊಂಬಾಯಿ ಗೌರ್ನರ್ ನೋಡಿಕೊಳ್ಳುತ್ತಾನೆ. ಈತ ಇಂಗ್ಲಿಷರ ಬಂದರುಗಳ ಹಾಗೂ ಬೇರೆ ಫ್ಯಾಕ್ಟೊರಿಗಳ ಪ್ರಮುಖ ಮುಖ್ಯಾಧಿಕಾರಿ. ಈತನದು ಆದ್ದೂರಿಯ ಜೀವನ. ಸ್ವಾಲ್ಲಿ ಹೋಳೆ (Swally Hole) ಎಂಬುದು ಸೂರತ್ತಿಗೆ ಉತ್ತರ ದಲ್ಲಿ ಮೂರು ನಾಲ್ಕು ಹರಿದಾರಿ ದೂರದಲ್ಲಿರುವ ಒಂದು ಸಣ್ಣ ಕೊಲ್ಲಿ (bay). ಇಲ್ಲಿಯೇ ಹೆಚ್ಚಾಗಿ ಹಡಗಿನಿಂದ ಸರಕುಗಳನ್ನ ಇಳಿಸುವುದು ಮತ್ತು ಹಡಗಿಗೆ ತುಂಬು ವುದು. ಇಂಡಿಯಾದ ಸಮುದ್ರತೀರ ಸುಮಾರು ೨,೦೦೦ ಮೈಲಿಗಳಷ್ಟು ಉದ್ದ ಇದ್ದರೂ ಉತ್ತಮವಾದ ಬಂದರುಗಳೇ ಇಲ್ಲ. ಗಂಗಾನದಿಯ ಮುಖವು ಹಡಗುಗಳು ತಂಗುವುದಕ್ಕೆ ಅತ್ಯುತ್ತಮವಾದ ಸ್ಥಳ ಎಂದು ಹೇಳಬಹುದು. ಅದು ಬಿಟ್ಟರೆ ಬೇರೆ ಸಮುದ್ರತೀರ ಮಳೆ ಗಾಳಿಯ ಕಾಲದಲ್ಲಿ ಹಡಗುಗಳು ನಿಲ್ಲುವುದಕ್ಕೆ ಅನುಕೂಲವಾಗಿಲ್ಲ.

ಇಂಡಿಯಾದ ಮೂಲ ನಿವಾಸಿಗಳಾದ ಪೇಗನರಲ್ಲಿ ಅವರವರ ವೃತ್ತಿಗನುಸಾರ ವಾಗಿ ನೂರಾರು ಜಾತಿಗಳಿವೆ. ಇವರಲ್ಲಿ ಬ್ರಾಹ್ಮಣರು ಮತ್ತು ಬನಿಯನಿರಿಗೆ ಜನ್ಮಾಂತರ ದಲ್ಲಿ (Transformation = ಪುನರ್ಜನ್ಮ) ಗಾಢನಂಬಿಕೆ ಉಂಟು. ಇವರು ಪ್ರಾಣಿಹತ್ಯೆ ಮಾಡುವುದಿಲ್ಲ. ಅಷ್ಟೇಅಲ್ಲ, ಅವುಗಳ ಬಗ್ಗೆ ದಯಾದಾಕ್ಷಿಣ್ಯ ತೋರುತ್ತ ಚಿಕಿತ್ಸಾಲಯಗಳನ್ನೂ ಕಟ್ಟಿಸಿದ್ದಾರೆ. ಇವರ ಪ್ರಾಯಶ್ಚಿತ್ತ (penances) ರೂಪವಾದ ಆಚರಣೆಗಳನ್ನು ನಂಬಲೂ ಸಾಧ್ಯವಿಲ್ಲ. ಒಬ್ಬಳಿಗಿಂತ ಹೆಚ್ಚು ಹೆಂಗಸರನ್ನು ಮದುವೆ ಯಾಗಬಹುದಾದರೂ ತಮ್ಮ ಜಾತಿ ಬಿಟ್ಟು ಬೇರೆ ಜಾತಿಯ ಹೆಣ್ಣು ತರುವುದಿಲ್ಲ. ಹೆಂಡತಿ ಗಂಡನ ಅಧೀನಳು. ಹೀಗಾಗಿ ಆಕೆ ಗಂಡನಿಗೆ ಏನೆಲ್ಲ ಗೌರವ ತೋರಿಸಬೇಕು. ಹಿಂದಿನ ಕಾಲದಲ್ಲಿ ಗಂಡ ಸತ್ತರೆ ಹೆಂಡತಿ ಆತನ ಚಿತೆಯಲ್ಲಿ ಬಿದ್ದು ಸಾಯುತ್ತಿದ್ದಳು. ಈಗ ಮಹಮ್ಮದೀಯರು ತಮ್ಮ ಆಧಿಪತ್ಯ ಇರುವೆಡೆಗಳಲ್ಲಿ ಅದನ್ನು ತಪ್ಪಿಸಿದ್ದಾರೆ. 'ಇಂಡೀಗಳು' (The Indies = ಹಿಂದೂಗಳು?) ಸತ್ತವರನ್ನು ಸುಡುತ್ತಾರೆ. ಸುಡಲು ಇವರು ಉಪಯೋಗಿಸುವ ಹೇರಳವಾದ ಗಂಧ ಮುಂತಾದ ಕಟ್ಟಿಗೆ ಹಾಗೂ ಚಿತೆಯಲ್ಲಿ ಹಾಕುವ ಆಭರಣಗಳ ಬೆಲೆಯನ್ನು ಲೆಕ್ಕಹಾಕಿದರೆ ಈ ದೇಶದಲ್ಲಿ ಸಾಯುವುದೂ ಬಹು ದುಬಾರಿ.

# ಹೆನ್ರಿ ಲಾರ್ಡ್

ಹೆನ್ರಿ ಲಾರ್ಡ್ (Henry Lord) ಎಂಬುವನು ಒಬ್ಬ ಪಾದ್ರಿ. ಈಸ್ಟ್ ಇಂಡಿಯಾ ಕಂಪೆನಿಯು ವ್ಯಾಪಾರಕ್ಕಾಗಿ ಇಂಡಿಯಾಕ್ಕೆ ಕಳುಹಿಸಿದ ಹಡಗಿನಲ್ಲಿ ಬಂದವರ ಧಾರ್ಮಿಕ ಆವಶ್ಯಕತೆಗಳನ್ನು ಪೂರೈಸುವ ಪಾದ್ರಿಯಾಗಿ ಈತ ಈ ದೇಶಕ್ಕೆ ಬಂದನು. ಬಂದ ಕಾಲ ಹದಿನೇಳನೆಯ ಶತಮಾನದ ಆರಂಭ. ಕ್ರೈಸ್ತ ಮತದ ಪಾದ್ರಿಯಾದವರಿಗೆ ಇಂಡಿಯಾ ದೇಶದ ಮತದ ಬಗ್ಗೆ ಕುತೂಹಲ ಸಹಜವೇ ಸರಿ. ಅದಕ್ಕಾಗಿ ಆತ ಹಿಂದೂಗಳ ಶಾಸ್ತ್ರಗಳನ್ನೂ ಪುರಾಣಗಳನ್ನೂ ತಿಳಿದ ಬ್ರಾಹ್ಮಣರ ಮರೆಹೋಗುತ್ತಾನೆ. ಅವರು ಹೇಳಿದ್ದನ್ನು ಈತ ಆದಷ್ಟುಮಟ್ಟಿಗೆ ಅರ್ಥಮಾಡಿಕೊಂಡು ಅದನ್ನು ತನ್ನ ಭಾಷೆಯಲ್ಲಿ ಹೇಳಿದ್ದಾನೆ.

ಹೆನ್ರಿ ಲಾರ್ಡ್ ನಮ್ಮ ಪುರಾಣಗಳನ್ನು ಅಲ್ಲಗಳೆದು ಮಾತಾಡಿದ್ದಾನೆಂದು ಸಿಟ್ಟಾಗಬಾರದು. ಅಂಥ ಅಲ್ಲಗಳೆಯುವ ಮಾತು ಇಂದಿಗೂ ನಮ್ಮವರಲ್ಲಿಯೇ ಉಂಟು. ಅದಕ್ಕೆ ಆಧಾರವಿಲ್ಲದೆಯೂ ಇಲ್ಲ. ವೈಚಾರಿಕ ಬುದ್ಧಿ ಇರುವ ಯಾರೂ ಆ ಪುರಾಣ ಹಾಗೂ ಶಾಸ್ತ್ರಗಳ ಕಥೆಗಳನ್ನು ಕಟ್ಟುಕಥೆಗಳೆಂದಲ್ಲದೆ ಬೇರೆ ಯಾವ ಹೆಸರಿನಿಂದಲೂ ಕರೆಯಲು ಸಾಧ್ಯವಿಲ್ಲ. ಹೀಗಿರುವಾಗ ಕ್ರೈಸ್ತ ಮತೀಯನಾದವನೊಬ್ಬ ಅದೇ ಮಾತನ್ನು ಹೇಳಿದರೆ ನಾವು ಕಣ್ಣು ಕೆಂಪಗೆ ಮಾಡುವ ಕಾರಣವಿಲ್ಲ.

ಈ ಪ್ರವಾಸಿ ಬನಿಯರ (ಹಿಂದುಗಳ) ಜಾತಿಯ ಬಗ್ಗೆ ಬರೆದದ್ದನ್ನು ಇಂಗ್ಲೆಂಡಿನ ಕ್ಯಾಂಟರ್‌ಬರಿ ಆರ್ಚ್ ಬಿಷಪ್ಪರಿಗೂ ಲಂಡನ್ನಲ್ಲಿದ್ದ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತ ಮಂಡಳಿಯ ಮುಖ್ಯಸ್ಥರಿಗೂ ಒಪ್ಪಿಸುತ್ತಾನೆ. ತಾನು ನೋಡಿದ ದೇಶದ ಸಂಗತಿಗಳನ್ನು ತಿಳಿಯಪಡಿಸುವುದು ತನ್ನ ಕರ್ತವ್ಯವೆಂದು ಭಾವಿಸಿ ಆತ ಈ ಕೆಲಸ ಮಾಡಿದ್ದಾನೆ. ಒಬ್ಬ ವಿದೇಶೀ ಕ್ರೈಸ್ತ ಇಲ್ಲಿಗೆ ೩೫೦ ವರ್ಷಗಳ ಹಿಂದೆಯೇ ಭಾಷೆಯ ಅಡೆತಡೆಗಳನ್ನು ಮೀರಿ ಹಿಂದುಗಳ ಶಾಸ್ತ್ರ ಪುರಾಣಗಳನ್ನು ತಿಳಿದುಕೊಳ್ಳಲೆತ್ನಿಸಿದನೆಂಬುದು ಅಚ್ಚರಿಯೇ ಸರಿ.

ಈಸ್ಟ್ ಇಂಡಿಯಾ ಕಂಪೆನಿಯ ಹಡಗಿನಲ್ಲಿ ಸೇವೆ ಸಲ್ಲಿಸುತ್ತಿದ್ದ ನನಗೆ ಗುಜರಾತಿನ ಒಂದು ಸ್ಥಳವಾದ ಸೂರತ್ತಿನಲ್ಲಿ ಕಂಪೆನಿಯ ಮುಖ್ಯ ಗಡಂಗ್ (Factory) ನಲ್ಲಿ ಇರುವ ಸದವಕಾಶ ಒದಗಿತು. ಈ ಗಡಂಗಿನ ಪ್ರೆಸಿಡೆಂಟರ ಹೆಸರು ಮಿಸ್ಟರ್ ಥಾಮಸ್ ಕೆರ್ರಿಡ್ಜ್ (Mr. Thamas Kerridge) ಎಂದು. ಪ್ರವಾಸಿಯ ಕುತೂಹಲದ ಕಣ್ಣುಗಳು ಒಂದು ಹೊಸ ಸ್ಥಳದ ವಿಶೇಷಗಳೇನು ಎಂದು ಹುಡುಕುತ್ತವೆಯಷ್ಟೆ. ಹೀಗೆ ಹುಡುಕುತ್ತಿರುವಲ್ಲಿ ಮಂಡಿಯವರೆಗೆ ಇಳಿಯಬಿದ್ದ ಪಂಚೆಯುಟ್ಟ ಜನರು ನನ್ನ ಕಣ್ಣಿಗೆ ಬಿದ್ದರು. ಅವರು ಗಂಡಸರಂತೆ ಕಾಣುವ ಬದಲು ಹೆಂಗಸರಂತೆ ಕಂಡರು. ಅವರದು ಸಂಕೋಚದ ಸ್ವಭಾವವಾದರೂ ಅವರು ಚಿರಪರಿಚಿತರಂತೆ ಹಸನ್ಮುಖರಾಗಿರುತ್ತಿದ್ದರು. ಇವರನ್ನು ನಮ್ಮ ಕಂಪೆನಿ ಕೆಲಸದಲ್ಲಿ ನೇಮಿಸಿಕೊಳ್ಳಲಾಗಿತ್ತು.

ಇಂಥ ವಿಚಿತ್ರ ಜನರು ಯಾರೆಂದು ತಿಳಿಯುವ ಕುತೂಹಲದಿಂದಾಗಿ ಅವರ ಬಗ್ಗೆ ವಿಚಾರಿಸತೊಡಗಿದೆ. ಇವರು ಕ್ರೈಸ್ತ ಪ್ರಪಂಚಕ್ಕೆ ಹೊರತಾದ 'ಬನಿಯನರು' ಎಂದು ಗೊತ್ತಾಯಿತು. ಇವರ ಧರ್ಮ, ಆಚಾರ ಹಾಗೂ ಪದ್ಧತಿಗಳ ಬಗ್ಗೆ ಕ್ರೈಸ್ತರಿಗೆ ಹೆಚ್ಚು ತಿಳಿದಿರಲಿಲ್ಲ. ನನಗೆ ಇವನ್ನು ತಿಳಿದು ತಮಗೆ ಹೇಳಬೇಕೆಂಬ ಮನಸ್ಸಾಯಿತು. ಆದರೆ ಅದು ಸುಲಭವಾಗಿರಲಿಲ್ಲ. ಬನಿಯರಲ್ಲಿ ಹಿರಿಯಸ್ಥಾನ ಪಡೆದ ಬ್ರಾಹ್ಮಣರು ಪರದೇಶದವರೊಡನೆ ಸುಲಭವಾಗಿ ಬೆರೆಯುವ ಜನರಲ್ಲ. ಅವರ ಧರ್ಮಕ್ಕೆ ಆಧಾರವಾದ ಶಾಸ್ತ್ರ

ಗಳು ಹೇಳುವುದನ್ನು ಓದಿ ತಿಳಿದುಕೊಳ್ಳುವುದು ತುಂಬ ಕಷ್ಟವಾದ ಕೆಲಸವಾಗಿತ್ತು. ಆದರೂ ದುಭಾಷಿಗಳ ಮೂಲಕ ಆ ಶಾಸ್ತ್ರಗಳನ್ನು ತಿಳಿದುಕೊಳ್ಳುವ ಕೆಲಸ ಮಾಡಿದೆ. ನಾನು ತಿಳಿದುಕೊಂಡದ್ದನ್ನು ಈಗ ತಮ್ಮ ಮುಂದಿಡುತ್ತಿದ್ದೇನೆ.

ಬನಿಯರ ದೇವರು ಏಕಾಂಗಿಯಾಗಿ ಬಹಳ ಕಾಲ ಇದ್ದಮೇಲೆ ತನ್ನಲ್ಲಿಯೇ ಆಲೋಚನೆ ಮಾಡಿ ಭೂಮಿ, ನೀರು, ವಾಯು ಮತ್ತು ಬೆಂಕಿ ಎಂಬ ನಾಲ್ಕು ಧಾತು ಗಳನ್ನು (elements) ಸೃಷ್ಟಿಮಾಡಿದನು. ಆಮೇಲೆ ಕಾಲ ಮತ್ತು ಋತುಗಳನ್ನು ತಿಳಿಯಲು ಸೂರ್ಯ ಮತ್ತು ಚಂದ್ರರನ್ನು ಸೃಷ್ಟಿಮಾಡಿದನು. ಭೂಮಿಯನ್ನು ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂದು ನಾಲ್ಕು ಭಾಗವಾಗಿ ವಿಂಗಡಿಸಿ ಅವು ನಾಲ್ಕು ಯುಗಗಳವರೆಗೂ ಇರಬೇಕೆಂದೂ ಅವುಗಳಲ್ಲಿ ನಾಲ್ಕು ಬಗೆಯ ಜನರು ವಾಸಮಾಡ ಬೇಕೆಂದೂ ನಿಗದಿಮಾಡಿದನು. ಇಷ್ಟು ಮಾಡಿ, ದೇವರು ಮನುಷ್ಯನನ್ನು ಮತ್ತು ಇತರ ಪ್ರಾಣಿಗಳನ್ನೂ ಸೃಷ್ಟಿಮಾಡಿದನು. ಗಂಡನ್ನು ಸೃಷ್ಟಿಮಾಡಿ ಅವನಿಗಾಗಿ ಹೆಣ್ಣೊಂದನ್ನು ಸೃಷ್ಟಿಮಾಡಿದನು. ಹೀಗೆ ಸೃಷ್ಟಿಸಲ್ಪಟ್ಟ ಗಂಡು ಹೆಣ್ಣುಗಳ ಹೆಸರು 'ಪಾರಸ್' ಮತ್ತು 'ಪಸೋಂತಿ' ಎಂದು. ಇವರು ಗಂಡ ಹೆಂಡಿರಂತೆ ಇರಲಾರಂಭಿಸಿ ದರು. ಭೂಮಿಯಲ್ಲಿ ಬೆಳೆದದ್ದನ್ನು ತಿಂದು ಜೀವಿಸಲಾರಂಭಿಸಿದರು. ಜೀವವುಳ್ಳ ಯಾವ ಪ್ರಾಣಿಯನ್ನೂ ಕೊಂದು ತಿನ್ನಬಾರದೆಂದು ದೇವರ ನಿಯಾಮಕವಾಯಿತು. ಇವರಿಗೆ ನಾಲ್ಕು ಜನ ಮಕ್ಕಳು ಹುಟ್ಟಿದರು. ಮೊದಲನೆಯವನು ಬ್ರಾಹ್ಮಣ, ಎರಡನೆಯವನು ಕ್ಷತ್ರಿಯ, ಮೂರನೆಯವನು ಶೂದ್ರ ಮತ್ತು ನಾಲ್ಕನೆಯವನು ವೈಶ್ಯ. ನಾಲ್ಕು ಭೂತಗಳ ನಾಲ್ಕು ವಿಶೇಷ ಗುಣಗಳು ಈ ನಾಲ್ಕು ಜನರಲ್ಲಿ ಕಾಣಿಸಿ ಕೊಂಡವು. ಬ್ರಾಹ್ಮಣನಲ್ಲಿ ಸತ್ವ, ಕ್ಷತ್ರಿಯನಲ್ಲಿ ಕ್ಷಾತ್ರ, ಶೂದ್ರನಲ್ಲಿ ತಾಮಸ ಮತ್ತು ವೈಶ್ಯನಲ್ಲಿ ಲೋಭ—ಈ ಗುಣಗಳು ಪ್ರಧಾನವಾದುವು. ಬ್ರಾಹ್ಮಣನ ಗುಣಕ್ಕನು ಸಾರವಾಗಿ ಆತನಿಗೆ ಬೇರೆಯವರಿಗೆ ಜ್ಞಾನಬೋಧನೆ ಮಾಡುವ ಕೆಲಸ ವಹಿಸಿ ಅದಕ್ಕೆ ಬೇಕಾದ ಗ್ರಂಥವನ್ನು ನೀಡಿದ. ಕ್ಷತ್ರಿಯನಿಗೆ ತನ್ನ ಶಕ್ತಿ ಸಾಮರ್ಥ್ಯಗಳಿಂದ ರಾಜ್ಯ ವನ್ನಾಳುವ ಕೆಲಸ ವಹಿಸಿದನು. ಶೂದ್ರನಿಗೆ ವ್ಯಾಪಾರದ ಕೆಲಸ ವಹಿಸಿದನು. ಅದಕ್ಕೆ ಬೇಕಾದ ತೂಕ, ತಕ್ಕಡಿಗಳನ್ನು ಕೊಟ್ಟನು. ವೈಶ್ಯನಿಗೆ ಆತನ ಗುಣಕ್ಕನುಸಾರವಾದ ಯಂತ್ರ ತಯಾರಿಕೆ ಮುಂತಾದ ಕುಶಲ ಕೆಲಸಗಳನ್ನು ವಹಿಸಿದನು. ತಾನು ಸೃಷ್ಟಿಮಾಡಿದ ಗಂಡು ಹೆಣ್ಣುಗಳ ಹೊಟ್ಟೆಯಲ್ಲಿ ಹೆಣ್ಣುಮಕ್ಕಳು ಹುಟ್ಟಿ ಅವರನ್ನು ಅಣ್ಣಂದಿರು ಮದುವೆಯಾಗಿ ಆದರಿಂದ ಅವರ ವಂಶ ಅಪವಿತ್ರ ಆಗಬಾರದೆಂದು ದೇವರು ನಾಲ್ಕು ಹೆಣ್ಣುಗಳನ್ನು ಭೂಮಿಯ ನಾಲ್ಕು ಭಾಗಗಳಲ್ಲಿ ಒಬ್ಬೊಬ್ಬರಂತೆ ಸೃಷ್ಟಿ ಮಾಡಿದನು.

ಬೆಳೆದು ದೊಡ್ಡವರಾದ ಬ್ರಾಹ್ಮಣ ಮುಂತಾದ ನಾಲ್ಕು ಮಕ್ಕಳನ್ನು ದೇವರು ಭೂಮಿಯ ಬೇರೆ ಬೇರೆ ಭಾಗಗಳಿಗೆ ಕಳುಹಿಸಿದನು. ಬ್ರಾಹ್ಮಣನು ತನ್ನ ಗ್ರಂಥಗಳ ಸಮೇತ ಸೂರ್ಯನು ಹುಟ್ಟುವ ಕಡೆಗೆ ಅಂದರೆ ಪೂರ್ವಕ್ಕೆ ಹೋಗಬೇಕೆಂದು ತಿಳಿಸಿದನು.

ಬ್ರಾಹ್ಮಣನು ಹೊರಟು ಪೂರ್ವಕ್ಕೆ ಹೋಗುತ್ತಿರುವಾಗ ಅಲ್ಲಿ ಒಂದು ನದಿಯ ಬಳಿ ಬಾಯಾರಿಕೆ ತೀರಿಸಿಕೊಳ್ಳಲು ನೀರು ಕುಡಿಯುತ್ತಿದ್ದ ಹೆಣ್ಣೊಂದನ್ನು ಕಂಡನು. ಇಬ್ಬರೂ ಬೆತ್ತಲೆಯಾಗಿದ್ದರು. ಇಲ್ಲಿಯವರೆಗೆ ಗಂಡಿಗೆ ಹೆಣ್ಣೆಂದರೇನು ಎಂದು ಗೊತ್ತಿರಲಿಲ್ಲ; ಹೆಣ್ಣಿಗೆ ಗಂಡೆಂದರೇನು ಎಂದು ಗೊತ್ತಿರಲಿಲ್ಲ. ಕಾರಣ ಅವರಿಗೆ ನಾಚಿಕೆ ಎಂಬುದೇ ಇರಲಿಲ್ಲ. ಒಬ್ಬರನ್ನೊಬ್ಬರು ಪರಸ್ಪರ ನೋಡಿದಾಗ ತಮ್ಮ ಸೃಷ್ಟಿಯು ಬೇರೆ ಬೇರೆ ತರಹ ಇರುವುದು ಕಂಡಿತು. ಇದೊಂದು ದೈವನಿಯಾಮಕವೇ ಸರಿಯೆಂದುಕೊಂಡ ಅವರು ಗಂಡಿನ ಕೈಯಲ್ಲಿದ್ದ ಪುಸ್ತಕ ನೋಡಿ, ತಮ್ಮನ್ನು ಒಟ್ಟಿಗೆ ತಂದ ಉದ್ದೇಶವೇನೆಂದು ತಿಳಿದುಕೊಂಡರು. ಅವರಿಬ್ಬರೂ ಒಬ್ಬರನ್ನೊಬ್ಬರು ಆಲಿಂಗನಮಾಡಿಕೊಂಡರು.

ಕ್ಷತ್ರಿಯನನ್ನು ದೇವರು ಪಶ್ಚಿಮದ ಕಡೆಗೆ ಕಳುಹಿಸಿದನು. ದೇವರು ಕೊಟ್ಟ ಕತ್ತಿ ಹಿಡಿದು ಹೊರಟ ಆತನಿಗೆ ಏನೊಂದು ಪ್ರಾಣಿಯೂ ಕಾಣಸಲಿಲ್ಲ. ತನಗಿಷ್ಟು ಶಕ್ತಿ ಕೊಟ್ಟ ದೇವರ ಉದ್ದೇಶವೇನೆಂಬುದೂ ಅರ್ಥವಾಗಲಿಲ್ಲ. ಹೋಗುತ್ತಾ ಹೋಗುತ್ತಾ ನೀಳಗೂದಲಿನ ಹೆಣ್ಣೊಂದನ್ನು ಕಂಡನು. ಆಕೆಯ ಕೈಯಲ್ಲಿ ಒಂದು ಚಕ್ರವಿತ್ತು. ಪ್ರಯೋಗಿಸಿಬಿಟ್ಟರೆ ಅದು ಹೋಗಿ ತಲೆ ಕತ್ತರಿಸುತ್ತಿತ್ತು. ಇಬ್ಬರಿಗೂ ಯುದ್ಧವಾಯಿತು. ಒಬ್ಬರಿಗಿಂತ ಇನ್ನೊಬ್ಬರು ತಮ್ಮ ಶಕ್ತಿಯಲ್ಲಿ ಹೆಚ್ಚಿನವರಾಗಿದ್ದರು. ಯುದ್ಧದಿಂದ ಒಬ್ಬರನ್ನೊಬ್ಬರು ಗೆಲ್ಲುವುದು ಸಾಧ್ಯವಿಲ್ಲವೆಂದು ಅರಿತ ಕ್ಷತ್ರಿಯ ಆಕೆಯ ಕೂದಲನ್ನು ಹಿಡಿದು ತನ್ನ ವಶಮಾಡಿಕೊಂಡ; ಆಕೆಯ ಅಂದಚೆಂದಗಳನ್ನು ನೋಡ ಲಾರಂಭಿಸಿದ. ಇಬ್ಬರಲ್ಲೂ ಪ್ರೇಮ ಬೆಳೆಯಿತು. ಪಶ್ಚಿಮದಲ್ಲಿ ಅವರು ನಿಂತು ತಮ್ಮ ಸಂಸಾರ ಮುಂದುವರಿಸಿದರು.

ಶೂದ್ರ ವ್ಯಾಪಾರಿ ತಾನೆ. ಈತ ಉತ್ತರಕ್ಕೆ ನಡೆದ, ತನ್ನ ತೂಕದ ಬಟ್ಟು ಮತ್ತು ತಕ್ಕಡಿ ಸಮೇತ. ಅಲ್ಲೊಂದು ಪರ್ವತ. ಅದರಿಂದ ಹರಿದುಬರುತ್ತಿದ್ದ ನದಿಯ ಪಾತ್ರದಲ್ಲಿ ಫಳಫಳಿಸುವ ಕಲ್ಲುಗಳನ್ನು ಕಂಡ. ಇದು ಸಾಲದೋ ಎಂಬಂತೆ ವಜ್ರಗಳ ಬಂಡೆಯನ್ನೇ ಕಂಡ. ಅದನ್ನು ಹೊತ್ತು ಆತ ತನ್ನ ಪ್ರಯಾಣ ಮುಂದುವರಿಸಿದ. ಹೀಗೆ ಹೋಗುತ್ತಿರುವಾಗ ತನಗಿಂತ ಭಿನ್ನವಾದ ಬೇರೊಂದು ವ್ಯಕ್ತಿಯನ್ನು ಕಂಡ. ಆ ವ್ಯಕ್ತಿಯಿಂದ ಆಕರ್ಷಿತನಾಗಿ ಆ ಕಡೆಗೆ ಹೋದ. ಒಬ್ಬರನ್ನೊಬ್ಬರು ಮಾತಾಡಿಸಿದರು. ಇಬ್ಬರ ಭಾಷೆಯೂ ಒಂದೇ ಆಗಿತ್ತು. ಇದೊಂದು ದೈವೀ ವಿಚಿತ್ರವೆಂದು ಭಾವಿಸಿದ ಇಬ್ಬರೂ ಒಟ್ಟಿಗೆ ಇರಲಾರಂಭಿಸಿದರು. ಆತ ಆಕೆಯನ್ನು ತಾನು ತಂದ ವಜ್ರಗಳಿಂದ ಅಲಂಕರಿಸಿ ಪ್ರೀತಿಸಿದ. ಅವರಿಂದ ಮಕ್ಕಳು ಹುಟ್ಟಿ ವಜ್ರದ ವ್ಯಾಪಾರದಲ್ಲಿ ತೊಡಗಿ ದರು.

ಎಲ್ಲರಿಗಿಂತ ಕಿರಿಯವನಾದ ವೈಶ್ಯ ದಕ್ಷಿಣದ ಕಡೆಗೆ ನಡೆದ. ತನ್ನ ಬುದ್ಧಿಶಕ್ತಿ ಯಿಂದ ಹೊಸ ಹೊಸದನ್ನು ಮಾಡಲಾರಂಭಿಸಿದ. ನಗರಗಳನ್ನೂ ಕೋಟೆ ಕೊತ್ತಲ ಗಳನ್ನೂ ಕಟ್ಟುವ ಶಕ್ತಿ ಇತ್ತು ಅವನಿಗೆ. 'ವಿಶ್ವಕರ್ಮ'ನೆಂಬ ಹೆಸರೇ ಅವನಿಗಾಯಿತು. ಅವನು ಹೋಗುತ್ತಾ ಹೋಗುತ್ತಾ ಸಪ್ತ ಸಮುದ್ರಗಳ ಬಳಿಗೆ ಹೋದ. ಅವನ್ನೆಲ್ಲಾ

ದಾಟಿ ದೆರ್ಬೆ (Derbe) ಎಂಬ ಹೆಸರಿನ ದ್ವೀಪಕ್ಕೆ ಬಂದ. ಅಲ್ಲೊಂದು ಮನೆ ಕಟ್ಟಿ ಇರಲಾರಂಭಿಸಿದ. ಆಗ ಆ ದ್ವೀಪದಲ್ಲಿ ಒಂದು ಹೆಣ್ಣಿತ್ತು. ಆಕೆ ಆ ಮನೆಯನ್ನು ನೋಡಿ ಆಚ್ಚರಿಗೊಂಡು ಅಲ್ಲಿಗೆ ಬಂದಳು. ಆಕೆಯನ್ನು ನೋಡಿದ ಈತನಿಗೆ ಏನೆಲ್ಲಾ ಆಯಿತು. ಶ್ವೇತವರ್ಣದ, ಸುಗಂಧ ಪರಿಮಳಗಳನ್ನು ಬೀರುತ್ತಿದ್ದ ಆಕೆಯನ್ನು ನೆಟ್ಟ ದೃಷ್ಟಿಯಿಂದ ನೋಡಲಾರಂಭಿಸಿದ. ಆತನ ನೋಟಕ್ಕೆ ಬಲಿಬೀಳದ ಆಕೆ ಕಾಡಿನಲ್ಲಿ ಮರೆಯಾಗಲೆತ್ನಿಸಿದಳು. ಅವಳನ್ನು ಈತ ಹಿಂಬಾಲಿಸಿದ. ಹೂವು ಕೊಯ್ಯುತ್ತಿದ್ದ ಆಕೆಯ ಬಳಿಸಾರಿ 'ನಾನು ನನ್ನ ಹೆತ್ತ ಮಾತಾಪಿತೃಗಳನ್ನು ಬಿಟ್ಟು ಸಪ್ತಸಮುದ್ರಗಳನ್ನು ದಾಟಿ ಬಂದೆ. ಮತ್ತೊಮ್ಮೆ ಅವರ ಮುಖ ನೋಡುತ್ತೇನೆಂಬ ಭರವಸೆಯಿಲ್ಲ. ಅಣ್ಣಂದಿರಿಂದಲೂ ನಾನು ದೂರಾದೆ. ಈಗ ಇಷ್ಟು ದೂರದಲ್ಲಿದ್ದು ನಾನು ಹೇಗೆ ಒಂಟಿ ಬಾಳು ಸಾಗಿಸಲಿ, ನನ್ನ ಬಾಳನ್ನು ಬರಿದುಮಾಡಬೇಡ' ಎಂದು ಅಂಗಲಾಚಿದ. ಈ ಮಾತುಗಳಿಂದ ಆಕೆಯ ಮನಸ್ಸು ಕರಗಿ ನೀರಾಯಿತು. ಆತನ ಬಳಿ ಸಾರಿ ಆತನನ್ನು ವರಿಸಿದಳು. ಹೀಗೆ ದಕ್ಷಿಣವು ಬೇರೆ ದಿಕ್ಕುಗಳಂತೆ ವೈಶ್ಯನ ಸಂತಾನದಿಂದ ನಿವಾಸಿ ಸಲ್ಪಟ್ಟಿತು.

ಪ್ರತಿಯೊಂದೂ ಪ್ರಕೃತಿ ನಿಯಮದಂತೆ ತನ್ನ ಹಿಂದಿನ ಸ್ಥಾನಕ್ಕೆ ಹಿಂದಿರುಗುತ್ತದೆ. ಹಾಗೆಯೇ ಆ ನಾಲ್ಕು ಸಹೋದರರೂ ತಾವು ಹುಟ್ಟಿದ ಸ್ಥಳಕ್ಕೇ ಬಂದರು. ತಾವು ಮದುವೆಯಾಗಿ ತಮ್ಮ ಸಂತಾನವನ್ನು ಆಯಾ ದಿಕ್ಕುಗಳಲ್ಲಿ ನೆಲೆಸಿ, ತಾವು ಸಾಧಿಸಿದ ಕೆಲಸವನ್ನು ತಮ್ಮ ಮಾತಾಪಿತೃಗಳಿಗೆ ಹೇಳುವ ಆಸೆಯಿಂದ ಅವರ ಬಳಿಗೆ ಬಂದರು. ಅಗಲಿದ ಮಕ್ಕಳನ್ನು ಕಂಡ ಆ ವಯಸ್ಸಾದ ತಂದೆ ತಾಯಿಗಳಿಗೆ ಆದ ಆನಂದ ಅಷ್ಟಿಷ್ಟಲ್ಲ.

ಆದರೆ ಆನಂದ ಎಂದೂ ಅನಂತವಲ್ಲ. ಆ ನಾಲ್ಕು ಮಕ್ಕಳು ತಮ್ಮ ಸಿದ್ಧಿ ಸಾಧನೆಯನ್ನು ಬರುಬರುತ್ತಾ ಮರೆಯಲಾರಂಭಿಸಿದರು. ಒಟ್ಟಿಗೆ ನಾಲ್ಕು ಜನ ಸೇರಿದರೆ ಪರಸ್ಪರ ಅಸೂಯೆ ಅನಿವಾರ್ಯ. ಬ್ರಾಹ್ಮಣ ತನ್ನ ಸತ್ವಗುಣವನ್ನು ಮರೆತು ಕ್ಷತ್ರಿಯನ ಅಧಿಕಾರಕ್ಕೆ ಅಸೂಯೆಪಟ್ಟ. ಕ್ಷತ್ರಿಯನು ಬ್ರಾಹ್ಮಣ ತನಗಿಂತ ಹಿರಿಯವನೆಂಬುದನ್ನೇ ಮರೆತು ಅಧಿಕಾರ, ದರ್ಪಗಳಿದ್ದವನೇ ದೊಡ್ಡವನೆಂದು ಹೇಳಿದ. ದೇವರು ನಿಯಮಿಸಿದ ನೆಂದು ಹೇಳಲಾದ ನಿಯಮಗಳು ಬ್ರಾಹ್ಮಣನಿಂದ ಬಂದವುಗಳಾದ್ದರಿಂದ ಅವಕ್ಕೆ ಅವನು ಬೆಲೆ ಕೊಡಲಾರನೆಂದು ಹೇಳಿಬಿಟ್ಟ. ಅಷ್ಟೇಅಲ್ಲ, ಆತನು ತನಗೆ ಬೇಡವಾದವರನ್ನು ಕೊಲ್ಲಲಾರಂಭಿಸಿದ; ಶೂದ್ರರ ಮೇಲೆ ತೆರಿಗೆ ಹೇರಿದ. ಶ್ರಮದಿಂದ ಸಂಪಾದಿಸಿದ ವೈಶ್ಯನ ಸಂಪತ್ತನ್ನು ತನ್ನ ವಶಪಡಿಸಿಕೊಂಡ. ಭಾರಿ ಅಲೆಗೆ ಏನು ಅಡ್ಡಬಂದರೂ ಅದನ್ನು ಕೊಚ್ಚಿಕೊಂಡು ಹೋಗುವಂತೆ ಆತ ವರ್ತಿಸಿದ. ಬ್ರಾಹ್ಮಣನಿಗೆ ಇದ್ದ ಗೌರವ ವೆಲ್ಲ ಹೋದ ಕಾರಣ ವೈಶ್ಯ ತಾನೇ ಒಂದು ಹೊಸ ಧರ್ಮವನ್ನು ಸ್ಥಾಪಿಸಲು ಯತ್ನಿಸಿದ. ತನಗೆ ಏನೋ ಒಂದು ದರ್ಶನವಾಗಿದೆಯೆಂದು ಹೇಳಿಕೊಂಡು ವಿಗ್ರಹಾರಾಧನೆ, ಮರಗಳ ಕೆಳಗಿದ್ದ ಗುಡಿ ಗುಂಡಾರಗಳ ಪೂಜೆ, ಪೂಜಾವಿಧಿ ಇವನ್ನೆಲ್ಲ ಹೊಸದಾಗಿ ಮಾಡಲಾರಂಭಿಸಿದ. ಇದಕ್ಕೆ ಬ್ರಾಹ್ಮಣರು ಬರೆದ ಶಾಸ್ತ್ರಗಳಲ್ಲಿ ಆಧಾರವಿಲ್ಲದ ಕಾರಣ ದೇವರೇ ಇದನ್ನು ತನಗೆ ತಿಳಿಸಿದ ಎಂದು ಹೇಳಿಕೊಳ್ಳಲಾರಂಭಿಸಿದ.

ಹೀಗೆ ದಿನೇ ದಿನೇ ಕ್ರೌರ್ಯಗಳು ಹೆಚ್ಚಾಗತೊಡಗಿದವು. ದೇವರಿಗೆ ಸಿಟ್ಟಾಯಿತು. ಆಕಾಶವನ್ನು ಕಾರ್ಮೋಡಗಳು ಮುಸುಕಿದುವು. ಸಮುದ್ರಗಳು ಅಲ್ಲೋಲಕಲ್ಲೋಲ ವಾದುವು. ಗುಡುಗು ಮಿಂಚು, ಸಿಡಿಲುಗಳು ಆರ್ಭಟಿಸಿದುವು. ಭೂಮಿಯ ನಾಶ ಸನ್ನಿಹಿತವಾದಂತೆ ಕಂಡಿತು. ಈ ಪ್ರಪಂಚದ ಹೊಲಸನ್ನು ತೊಳೆಯಲೋ ಎಂಬಂತೆ ಜಲಪ್ರಳಯವಾಯಿತು. ಎಲ್ಲೆಲ್ಲೂ ನೀರೆ ನೀರು! ನಶ್ವರ ಶರೀರಗಳ ಸಮಾಧಿಯಾಗಿ ಆತ್ಮಗಳು ದೇವರಲ್ಲಿ ಸೇರಿದವು. ಹೀಗೆ ಬನಿಯನರು ಹೇಳುವ ಪ್ರಕಾರ ಪ್ರಪಂಚದ ಮೊದಲ ಯುಗ ಕೊನೆಗೊಂಡಿತು.

ತನ್ನ ಪಾಪದಿಂದಲೇ ಮೊದಲ ಯುಗ ಕೊನೆಗೊಂಡುದನ್ನು ಕಂಡ ಸೃಷ್ಟಿಕರ್ತ ಎರಡನೆಯ ಯುಗವನ್ನು ಆರಂಭಿಸಿದ. ಈಗ ಬ್ರಹ್ಮ, ವಿಷ್ಣು, ರುದ್ರರನ್ನು ಸೃಷ್ಟಿಸಿದ. ಬ್ರಹ್ಮನಿಗೆ ಸೃಷ್ಟಿಮಾಡುವ ಕೆಲಸವನ್ನೂ ವಿಷ್ಣುವಿಗೆ ಸ್ಥಿತಿಯ ಕೆಲಸವನ್ನೂ ರುದ್ರನಿಗೆ ಲಯದ ಕೆಲಸವನ್ನೂ ವಹಿಸಿದ. ಈ ಮೂವರೂ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವ ಹಿಸಲು ಅನುಕೂಲವಾಗುವಂತೆ ದೇವರು ಬ್ರಹ್ಮನಿಗೆ ಸೃಷ್ಟಿಸುವ ಶಕ್ತಿಯನ್ನು ನೀಡಿದ. ಬ್ರಹ್ಮನು ಸೃಷ್ಟಿಸಿದ್ದನ್ನು ಕಾಪಾಡಲು ಸಹಾಯಕವಾಗುವಂತೆ ವಿಷ್ಣುವಿಗೆ ಚಂದ್ರ, ಸೂರ್ಯ, ಆಕಾಶ, ಮಳೆ, ಬೆಟ್ಟ ಗುಡ್ಡ, ಕಣಿವೆಗಳ ಮೇಲಿನ ಆಧಿಪತ್ಯ ವಹಿಸಿ, ಅವು ಗಳಿಂದ ಮನುಷ್ಯನ ಬಾಳು ಸುಖವಾಗುವಂತೆ ಮಾಡಿದ. ದೈವನಿಯಾಮಕದಂತೆ ಎಲ್ಲವೂ ನಡೆಯಲನುಕೂಲವಾಗುವಂತೆ ರುದ್ರನಿಗೆ ಶಿಕ್ಷೆ ಸಾವುಗಳನ್ನು ವಿಧಿಸುವ ಶಕ್ತಿ ನೀಡಿದ; ರೋಗರುಜಿನ, ಕ್ಷಾಮಡಾಮರ ಮುಂತಾದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ನೀಡುವ ಅಧಿಕಾರ ವಹಿಸಿದ. ಈ ಮೂವರಿಗೂ ತಮ್ಮ ತಮ್ಮ ಕೆಲಸ ನಿರ್ವಹಿಸಲು ಅನುಕೂಲ ವಾಗುವಂತೆ ಆಯುಸ್ಸನ್ನೂ ನಿಗದಿಮಾಡಿದ. ಹೀಗಾಗಿ ರುದ್ರನಿಗೆ ಎಲ್ಲರಿಗಿಂತ ಹೆಚ್ಚು ಆಯುಸ್ಸು ಕೊಟ್ಟ.

ಸರಿ, ಬ್ರಹ್ಮ ತನ್ನ ಕೆಲಸ ಆರಂಭಿಸಿದ. ಆತ ಒಂದು ಗಂಡು ಮತ್ತು ಒಂದು ಹೆಣ್ಣನ್ನು ಹೆತ್ತ. ಅವರು ಹುಟ್ಟುವಾಗಲೇ ಸಂಪೂರ್ಣ ಬೆಳೆದಿದ್ದರು. ಗಂಡಿನ ಹೆಸರು 'ಮನು', ಹೆಣ್ಣಿನ ಹೆಸರು 'ಸತ್ಯರೂಪ' (Ceteroupa). ಬ್ರಹ್ಮನು ಇವ ರಿಬ್ಬರಿಗೂ ಮದುವೆ ಮಾಡಿ ಪೂರ್ವದ ಕಡೆ ಇದ್ದ ಮಂದರ ಪರ್ವತಕ್ಕೆ ಹೋಗಿ ಅಲ್ಲಿಂದ ಇನ್ನುಳಿದ ದಿಕ್ಕುಗಳಿಗೆ ಹೋಗಬೇಕೆಂದು ಹೇಳಿ ಕಳುಹಿಸಿದ. ಇವರಿಗೆ ಮೂರು ಗಂಡು, ಮೂರು ಹೆಣ್ಣು ಮಕ್ಕಳಾದುವು. ಇವರು ಬೆಳೆದು ಪ್ರಾಪ್ತವಯಸ್ಕರಾದ ಮೇಲೆ ಇವರನ್ನು ಮದುವೆ ಮಾಡಿ ಮೂರು ದಿಕ್ಕುಗಳಿಗೂ ಕಳುಹಿಸಿದರು. ಹೀಗೆ ಬ್ರಹ್ಮನು ಹೆಣ್ಣು ಗಂಡುಗಳನ್ನೂ ಪ್ರಾಣಿಗಳನ್ನೂ ಸೃಷ್ಟಿಮಾಡಿದ. ಬ್ರಹ್ಮನು ಸೃಷ್ಟಿಸಿದ ಜೀವಿಗಳ ಸ್ಥಿತಿಗೆ ತಕ್ಕ ವ್ಯವಸ್ಥೆಯನ್ನು ವಿಷ್ಣು ಮಾಡಿದರೆ, ಅವುಗಳ ಲಯಕ್ಕೆ ರೋಗ ರುಜಿನಗಳನ್ನು ರುದ್ರನು ಉಂಟುಮಾಡಿದನು.

ಇದು ಪ್ರಪಂಚದ ಸೃಷ್ಟಿಯ ಎರಡನೇ ಘಟ್ಟ.

ಮೊದಲು ಸೃಷ್ಟಿಸಿದ ಪ್ರಪಂಚದ ನಾಶಕ್ಕೆ ಪಾಪವನ್ನು ತಡೆಯದೆಹೋದುದೇ ಕಾರಣವೆಂದು ತಿಳಿದ ದೇವರು ತನ್ನ ಪೂಜೆ ಹಾಗೂ ತನ್ನ ಬಗ್ಗೆ ಭಯಭಕ್ತಿಗಳಿರಬೇಕೆಂದು ಭಾವಿಸಿ ಅದಕ್ಕೆ ತಕ್ಕ ನಿಯಮಗಳನ್ನು ಮಾಡಿದನು. ಮೇರುಪರ್ವತದ ಮೇಲೆ ಇಳಿದುಬಂದ ದೇವರು ಬ್ರಹ್ಮನನ್ನು ಕರೆದು, ನಿನಗೆ ವಹಿಸಿದ ಗ್ರಂಥದಲ್ಲಿ ಹೇಳಿದಂತೆ ಜನರು ನಡೆದುಕೊಳ್ಳಲಿಲ್ಲವಾದ ಕಾರಣ ಮೊದಲ ಯುಗದ ನಿರ್ನಾಮವಾಯಿತು. ಈಗ ನಿನಗೆ ಇನ್ನೊಂದು ಗ್ರಂಥ ಕೊಡುತ್ತೇನೆ. ಇದನ್ನು ನೀನು ಎಲ್ಲರಿಗೂ ತಿಳಿಯ ಹೇಳು ಎಂದು ತಿಳಿಸಿದ. ಈ ಗ್ರಂಥವನ್ನು ಬನಿಯನರು 'ಶಾಸ್ತ್ರ' ಎಂದು ಕರೆಯುತ್ತಾರೆ. ಇದರಲ್ಲಿ ಮೂರು ಭಾಗಗಳುಂಟು. ಮೊದಲನೆಯದರಲ್ಲಿ ಎಂಟು ನಿಯಮಗಳಿವೆ. ಒಂದನೆಯದು, ಪ್ರಾಣಿಹತ್ಯೆ ಮಾಡಕೂಡದು. ಎರಡನೆಯದು, ನಿನ್ನ ಪಂಚೇಂದ್ರಿಯಗಳಾದ ಕಣ್ಣು ಕೆಟ್ಟದ್ದನ್ನು ನೋಡಬಾರದು, ಕಿವಿ ಕೆಟ್ಟದ್ದನ್ನು ಕೇಳಬಾರದು, ನಾಲಿಗೆ ಕೆಟ್ಟದ್ದನ್ನು ಮಾತಾಡಬಾರದು, ರಸನೇಂದ್ರಿಯ (Palate) ತುಪ್ಪ, ಮಾಂಸಗಳ ರುಚಿನೋಡಬಾರದು, ಮತ್ತು ಕೈಗಳು ಅಶುಚಿಯಾದುದನ್ನು ಮುಟ್ಟಬಾರದು. ಮೂರನೆಯದು, ನೀನು ದೇವರ ಪೂಜೆ ಪುರಸ್ಕಾರಗಳನ್ನು ಶುದ್ಧ ಹೃದಯದಿಂದ ಸಕಾಲದಲ್ಲಿ ನಡೆಸಬೇಕು. ನಾಲ್ಕನೆಯದು, ಸುಳ್ಳು ತಟವಟ ಇಂಥವುಗಳಿಂದ ನಿನ್ನ ಸಹೋದರರಿಗೆ ಮೋಸಮಾಡಕೂಡದು. ಐದನೆಯದು, ಬಡಬಗ್ಗರ ಬಗ್ಗೆ ಕರುಣೆ ತೋರಿಸಬೇಕು. ಅವರಿಗೆ ಬೇಕಾದ ಅನ್ನಪಾನಾದಿಗಳನ್ನು ನಿನ್ನ ಶಕ್ತ್ಯಾನುಸಾರ ನೀಡಬೇಕು. ಆರನೆಯದು, ನಿನ್ನ ಸ್ಥಾನಬಲದಿಂದ ಬಡಬಗ್ಗರನ್ನು ತೊಂದರೆಗೀಡುಮಾಡಕೂಡದು. ಏಳನೆಯದು, ನೀನು ನಿಯಮಿತ ಹಬ್ಬ ಹರಿದಿನಗಳನ್ನು ಆಚರಿಸಬೇಕು. ಅತಿಯಾಗಿ ತಿನ್ನಬಾರದು. ನಿಯಮಿತ ಉಪವಾಸ ಮುಂತಾದವುಗಳನ್ನು ಆಚರಿಸಿ ನಿನ್ನ ಆರೋಗ್ಯವನ್ನು ವೃದ್ಧಿ ಮಾಡಿಕೊಳ್ಳಬೇಕು. ಎಂಟನೆಯದು, ಇನ್ನೊಬ್ಬರ ಆಸ್ತಿಪಾಸ್ತಿಗೆ ಆಸೆ ಪಡಬಾರದು; ಕೊಟ್ಟಿದ್ದರಲ್ಲಿ ತೃಪ್ತಿಪಟ್ಟುಕೊಳ್ಳಬೇಕು.

ಈ ಎಂಟು ನಿಯಮಗಳನ್ನು ಒಂದೊಂದು ಜಾತಿಗೆ ಎರಡರಂತೆ ನಾಲ್ಕು ಜಾತಿಗಳಿಗೂ ಹಂಚಿದ. ಬ್ರಾಹ್ಮಣರಿಗೆ ಒಂದು ಮತ್ತು ಎರಡನೆಯ ವಿಧಿಗಳನ್ನೂ, ಶೂದ್ರರಿಗೆ ಮೂರು ಮತ್ತು ನಾಲ್ಕನೆಯ ವಿಧಿಗಳನ್ನೂ, ಕ್ಷತ್ರಿಯರಿಗೆ ಐದನೆಯ ಮತ್ತು ಆರನೆಯ ವಿಧಿಗಳನ್ನೂ, ವೈಶ್ಯರಿಗೆ ಏಳನೆಯ ಮತ್ತು ಎಂಟನೆಯ ವಿಧಿಗಳನ್ನೂ ನಿರ್ಧರಿಸಿದ. ಒಟ್ಟಿನಲ್ಲಿ ಈ ಅಷ್ಟ ವಿಧಿಗಳನ್ನು ಎಲ್ಲರೂ ಅನುಸರಿಸಲೇಬೇಕಾದರೂ ಅವರವರಿಗೆ ವಿಧಿಸಲ್ಪಟ್ಟ ನಿಯಮಗಳನ್ನು ಅವರು ಹೆಚ್ಚಾಗಿ ಪಾಲಿಸಬೇಕಾಗಿತ್ತು.

ಈಗ ಈ ಎಂಟು ವಿಧಿಗಳಿಗೆ ಏನಾದರೂ ಆಧಾರವಿದೆಯೇ ಎಂದು ನೋಡೋಣ. ಪ್ರಾಣಿಹತ್ಯೆ ಮಾಡಬಾರದು ಎಂದು ಮೊದಲ ವಿಧಿ ಹೇಳುತ್ತದೆ. ಗಿಡಮರಗಳಲ್ಲಿ, ಪ್ರಾಣಿಗಳಲ್ಲಿ ಹಾಗೂ ಮನುಷ್ಯರಲ್ಲಿ ಒಂದೊಂದು ಬಗೆಯ ಆತ್ಮ ಇದೆಯೆಂದು ಬನಿಯನರ ನಂಬಿಕೆ. ಮನುಷ್ಯನಲ್ಲಿರುವ ಆತ್ಮವು ಆತ ಸತ್ತ ಮೇಲೂ ಇರುವುದೆಂದೂ ಹೇಳುತ್ತಾರೆ. ಪ್ರಾಣಿವಧೆ ಮೊದಲಿನಿಂದಲೂ ಇದ್ದದ್ದೆ. ಲೈಬರ್ ಪೇಟರ್ (Liber Pater) ಎಂಬು

ವನು ಮೊಟ್ಟಮೊದಲು ಈ ಇಂಡಿಯನ್ನರು ಇದ್ದ ಪ್ರದೇಶಗಳನ್ನು ಕಂಡಾಗ ಇವರು ಕೊಂದ ಕಾಡುಮೃಗಗಳ ಚರ್ಮ ಹೊದೆದುಕೊಂಡಿದ್ದನ್ನು ನೋಡಿದ. ಈಗಲೂ ಕ್ಷತ್ರಿಯರು ಪ್ರಾಣಿವಧೆ ಮಾಡಿಯೇಮಾಡುತ್ತಾರೆ. ಈ ಕಾರಣ ಮೊದಲಿಂದಲೂ ಇಲ್ಲದ ಒಂದು ನಿಯಮವನ್ನು ಸೃಷ್ಟಿಸಿ ಅದನ್ನು ತಮ್ಮ ಧರ್ಮ ಎಂದು ಹೇಳುವುದು ಸರಿಯಲ್ಲ. ಈಗ ಮದ್ಯಪಾನದ ವಿಚಾರ. ಬ್ರಾಹ್ಮಣರೂ ಬನಿಯನರೂ ಮದ್ಯಪಾನ ಮಾಡುವುದಿಲ್ಲ ನಿಜ. ಆದರೆ ಇದಕ್ಕೆ ಹಿಂದಿನ ಯಾವ ಆಧಾರವೂ ಇಲ್ಲ. ಪ್ರಪಂಚದಲ್ಲಿ ಕೆಲವರು ಕುಡಿಯದಿರುವುದಕ್ಕೆ ಹಲವಾರು ಕಾರಣಗಳುಂಟು. ಆದರೆ ಅವು ಬ್ರಾಹ್ಮಣರು ಹೇಳಿದ ಕಾರಣಗಳಲ್ಲ. ರೋಮನರು ತಮ್ಮ ಸೇವಕರು ಕುಡಿಯಬಾರದೆಂದು ಹೇಳಿದರು. ಸೇವಕರು ಕುಡಿದರೆ ತಮ್ಮ ಸೇವೆಯನ್ನು ಸರಿಯಾಗಿ ಮಾಡುವುದಿಲ್ಲವೆಂಬುದೇ ಇದಕ್ಕೆ ಕಾರಣವಾಗಿತ್ತು. ಅವರು ಹೆಂಗಸರೂ ಕುಡಿಯಬಾರದು ಎಂದರು. ಅವರು ಕುಡಿದು ಪರಪುರುಷರ ಕಡೆ ಕಣ್ಣುಹಾಯಿಸಬಾರದೆಂಬುದೇ ಇದಕ್ಕೆ ಕಾರಣವಾಗಿತ್ತು. ಕಾರ್ಥೇಜಿಯನರು ಸಹ ತಮ್ಮ ಸೈನಿಕರು ಕುಡಿಯಬಾರದೆಂದು ಹೇಳಿದರು. ಏಕೆಂದರೆ, ಅವರು ಕುಡಿದರೆ, ಅವರ ಕಾವಲು ತಪ್ಪಿ ಸಾರ್ವಜನಿಕರಿಗೆ ತೊಂದರೆಯಾಗುತ್ತದೆ ಎಂಬುದು ಕಾರಣವಾಗಿತ್ತು. ಈಜಿಪ್ಟಿನ ಸರಬೈತಾ (Sarabaita) ಎಂಬ ಪುರೋಹಿತರುಗಳು ಕುಡಿಯುತ್ತಿರಲಿಲ್ಲ. ಆದರೆ ಅದು ಕೇವಲ ಕೆಲವು ಕಾಲ ಮಾತ್ರ. ಆ ಸುಳ್ಳು ಪ್ರವಾದಿ ಮುಹಮ್ಮದ್ (false prophet Mohamet) ಕುಡಿಯಕೂಡದೆಂಬ ನಿಯಮ ಮಾಡಿದ. ಆದರೆ ಮುಲ್ಲಾಗಳೂ ಮತ್ತು ಇತರ ಧಾರ್ಮಿಕ ಶ್ರದ್ಧೆಯವರೂ ಕುಡಿಯುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಲೆಂಟರು (Lentes—ಕ್ರೈಸ್ತ ಪಾದ್ರಿಗಳು) ಕುಡಿಯಬಾರದು ಎಂದರು. ಆದರೆ ಯಾವಾಗ? ಚರ್ಚಿನೊಳಕ್ಕೆ ಹೋಗುವ ಮುನ್ನ, ಅಷ್ಟೆ. ಆದರೆ ಅವರು ಕುಡಿಯಲೇಬಾರದು ಎಂದು ಹೇಳಲಿಲ್ಲ. ನಾಜಿರೈಟರು (Nazarites—ಯಹೂದಿಗಳು) ತಮ್ಮ ದೇಶದಿಂದ ಉಚ್ಚಾಟನೆಯಾಗಿದ್ದ ಕಾಲದಲ್ಲಿ ಮಾತ್ರ ಕುಡಿಯುವುದಿಲ್ಲವೆಂದು ತೀರ್ಮಾನ ಮಾಡಿಕೊಂಡಿದ್ದರು. ಮದ್ಯಪಾನ ನಿಷೇಧವನ್ನು ಮದ್ಯಪಾನ ಮಾಡದವರೂ ಒಪ್ಪುವುದಿಲ್ಲ. ಗಾಲ್ಲೆನ್ (Gallen) ಎಂಬುವನು ಮದ್ಯವು ಇಳಿವಯಸ್ಸಿನ ದಾದಿ ಎಂದು ಕರೆದ. ಸಂತೋಷದ ವೇಳೆ ಕೊಂಚ ಹದ್ದುಮೀರಿದರೂ ತಪ್ಪಿಲ್ಲ ಎಂದ ಇನ್ನೊಬ್ಬ. ಬಹಳ ಕಟ್ಟುನಿಟ್ಟಾದ ವ್ಯಕ್ತಿ ಸೆನೆಕ್ಕಾ (Senecca) ಎಂಬ ತತ್ವಜ್ಞಾನಿ ಮನುಷ್ಯನು ತನ್ನ ಕಷ್ಟಗಳನ್ನು ಮರೆಯಲು ಹಿತಮಿತವಾಗಿ ಮದ್ಯಪಾನ ಮಾಡಿದರೆ ತಪ್ಪಿಲ್ಲ ಎಂದ. ಪ್ಲೇಟೊ ಕೂಡ ಇಳಿವಯಸ್ಸಿನಲ್ಲಿ ಮದ್ಯಪಾನ ದೇವರು ಕೊಟ್ಟ ವರ ಎಂದು ಹೇಳಿದ. ಪೈಥಾಗರಸನು ಗ್ರೀಕ್ ಮದ್ಯ ಕುಡಿಯುತ್ತಿದ್ದ. ಒಟ್ಟಿನಲ್ಲಿ ಐತಿಹಾಸಿಕವಾಗಿ ಹೇಳುವುದಾದರೆ ಪೂರ್ವದ ಇಂಡಿಯನ್ನರು ಮದ್ಯಪ್ರೇಮಿಗಳಾಗಿದ್ದರು. ಹಿಂದಿನಿಂದಲೂ ಮದ್ಯಪಾನ ನಿಷೇಧವಿರಲಿಲ್ಲ.

ಈಗ ಮಾಂಸಾಹಾರದ ಬಗ್ಗೆ ಆಲೋಚಿಸೋಣ. ಬ್ರಾಹ್ಮಣರು ಅಥವಾ ಬನಿಯನರು ಎಲ್ಲದರಲ್ಲೂ ಪ್ರಾಣ ಇದೆ ಎಂದು ಹೇಳುತ್ತಾರೆ. ಮೊಟ್ಟೆಯಲ್ಲೂ ಪ್ರಾಣ

ಇದೆ ಎಂದೂ ಅದನ್ನು ಮುಟ್ಟಬಾರದೆಂದೂ ಅವರ ವಾದ. ಅಷ್ಟೇ ಅಲ್ಲ, ಕೆಂಪಗಿರುವ ತರಕಾರಿಗಳನ್ನೂ ತಿನ್ನಬಾರದು ಎಂದರು. ಏಕೆಂದರೆ, ಕೆಂಪಗಿರುವ ಬಣ್ಣ ರಕ್ತದ ಸೂಚಕ ವಂತೆ. ಇವರ ಪ್ರಕಾರ ಪ್ರಾಣಿಗಳ ವಧೆ ಏಕೆ ಮಾಡಬಾರದು ಎಂದರೆ ಸತ್ತ ಮನುಷ್ಯರ ಆತ್ಮಗಳು ಪ್ರಾಣಿಗಳ ದೇಹಗಳನ್ನು ಸೇರಿಕೊಂಡಿರುತ್ತವೆ. ಪ್ರಾಣಿಗಳನ್ನು ಕೊಂದರೆ ಆ ಆತ್ಮಗಳನ್ನೂ ಕೊಂದಂತೆ. ಆದರೆ ಇದನ್ನು ನಂಬಲು ಸಾಧ್ಯವಿಲ್ಲ. ಆತ್ಮ ಅಮರ ಎಂಬ ವಾದ ಇಂಡಿಯನ್ನರಿಂದಲೇ ಮೊದಲಾದುದಲ್ಲ. ಪ್ಲೇಟೊ ಮತ್ತು ಪೈಥಾಗೊರಸರು ಈ ಮೊದಲೇ ಈ ಬಗ್ಗೆ ಆಲೋಚನೆ ಮಾಡಿದ್ದಾರೆ. ಅವರಿಂದ ಇಂಡಿಯನ್ನರು ತಮ್ಮ ವಾದವನ್ನು ಪುಷ್ಟೀಕರಿಸಿಕೊಂಡಿರಬೇಕು ಎನ್ನಿಸುತ್ತದೆ. ಮೊದಲು ಈಜಿಪ್ಟಿನವರಿಂದ ಆರಂಭವಾದ ಈ ವಾದ ಗ್ರೀಸಿಗೂ ಇಟಲಿಗೂ ಹಬ್ಬಿತು. ಆದರೆ ಆತ್ಮ ಅಮರ ಎಂದಾದ ಮೇಲೆ ಅದಕ್ಕೆ ಸಾವೆಂಬುದು ಹೇಗೆ ಬರುವುದೋ ಹೇಳಲಾಗುವುದಿಲ್ಲ.

(ಇನ್ನುಮುಂದೆ ಹೆನ್ರಿ ತನ್ನ ವಾದವನ್ನು ಪುಷ್ಟೀಕರಿಸಲು ಪ್ರಯತ್ನಪಡುತ್ತಾನೆ. ಆದರೆ ಆ ವಿಚಾರಸರಣಿ ಇಂದಿಗೂ ನಮ್ಮಲ್ಲಿಯೇ ನಡೆಯುತ್ತಿರುವುದಾದ ಕಾರಣ ಅದನ್ನು ಕೈಬಿಟ್ಟು ಅವನ ಕೊನೆಯ ಅಭಿಪ್ರಾಯವನ್ನು ಮಾತ್ರ ಹೇಳಲಾಗಿದೆ)

ಈಗ ಬ್ರಹ್ಮನಿಗೆ ವಹಿಸಿಕೊಟ್ಟ ಎರಡನೆಯ ಗ್ರಂಥದಲ್ಲಿ ಹೇಳಿರುವುದನ್ನು ತಿಳಿಸುತ್ತೇನೆ, ಕೇಳಿ. ಈ ಗ್ರಂಥದಲ್ಲಿ ಸ್ನಾನ, ಸಂಧ್ಯಾವಂದನೆ, ಪೂಜೆ, ಪುರಸ್ಕಾರಗಳು ಇತ್ಯಾದಿ ವಿಚಾರಗಳನ್ನು ಹೇಳಲಾಗಿದೆ. ಒಂದನೆಯದು, ಬ್ರಾಹ್ಮಣರು ಆಗಾಗ್ಗೆ ನದಿಗಳಲ್ಲಿ ಸ್ನಾನಮಾಡಬೇಕೆಂಬುದು. ಅವರು ನದಿಯ ಕೆಸರನ್ನು ಮೈಗೆ ಬಳಿದು ಕೊಳ್ಳುತ್ತಾರೆ. ಆಮೇಲೆ ನದಿಯ ನೀರಿಗೆ ಇಳಿದು ಸೂರ್ಯನ ಕಡೆ ಮುಖ ಮಾಡಿ ನಿಂತು ಮಂತ್ರ ಹೇಳುತ್ತಾ ಮೂರು ಸಲ ಮುಳುಗಿ ಏಳುತ್ತಾರೆ. ಹಾಗೆ ಮಾಡುವಾಗ ತಪತಿ, ಗಂಗಾ, ನರ್ಮದಾ ಮುಂತಾದ ನದಿಗಳ ಹೆಸರುಗಳನ್ನು ಬಾಯಲ್ಲಿ ಉಚ್ಚರಿಸುತ್ತಾರೆ. ಆಗ ಕೈಯಲ್ಲಿ ಅಕ್ಕಿ ಕಾಳು (?) ಇಟ್ಟುಕೊಂಡು ಅದನ್ನು ನೀರಿಗೆ ಬಿಡುತ್ತಾರೆ.

ಎರಡನೆಯದು, ಹಣೆಗೆ ಅಕ್ಷತೆ ಇಟ್ಟುಕೊಳ್ಳುವುದು. ಸ್ನಾನ ಮಾಡಿದ ಮೇಲೆ ಅಕ್ಷತೆ ಇಟ್ಟುಕೊಳ್ಳಲೇಬೇಕು. ದಿನದಲ್ಲಿ ಯಾವಾಗ ಸ್ನಾನಮಾಡಿದರೂ ಹಾಗೆಯೇ ಮಾಡಬೇಕು. ಹಾಗೆ ಇಟ್ಟುಕೊಳ್ಳುವಾಗ ಬಾಯಲ್ಲಿ ಮಂತ್ರ ಹೇಳಬೇಕು.

ಮೂರನೆಯದು, ಅಶ್ವತ್ಥವೃಕ್ಷದ ಪೂಜೆ. ಹಿಂದೆ ಈ ವೃಕ್ಷದ ಕೆಳಗೆ ವೈಶ್ಯರಿಗೆ ದೇವರು ಪ್ರತ್ಯಕ್ಷವಾದ ಕಾರಣ ಅದು ಬ್ರಾಹ್ಮಣರಿಗೂ ಪವಿತ್ರವಾಗಿದೆ. ಈ ವೃಕ್ಷಕ್ಕೆ ಪೂಜೆ ಪುರಸ್ಕಾರಗಳನ್ನು ಸಲ್ಲಿಸಬೇಕಾದ್ದು ಬ್ರಾಹ್ಮಣರ ಕರ್ತವ್ಯ. ಈ ವೃಕ್ಷದ ಅಡಿ ಗುಡಿಗೋಪುರಗಳನ್ನು ಕಟ್ಟಿ ಪೂಜೆ ಸಲ್ಲಿಸುತ್ತಾರೆ. ಈ ವೃಕ್ಷವು ಎಷ್ಟು ಪವಿತ್ರ ಎಂದರೆ ಕೇವಲ ಇದರ ಕೊಂಬೆ ಕಡಿದರೂ ಪಾಪ ತಪ್ಪುವುದಿಲ್ಲ. ಬಿಳಲುಬಿಟ್ಟು ವಿಶಾಲವಾಗಿ ಬೆಳೆಯುತ್ತಾ ಹೋಗುವ ಈ ವೃಕ್ಷಕ್ಕೆ ನಾಶವೆಂಬುದೇ ಇಲ್ಲ.

ನಾಲ್ಕನೆಯದು, ಇವರು ತಮ್ಮ ದೇವಸ್ಥಾನಗಳಿಗೆ ಹೋಗಿ ಪ್ರಾರ್ಥನೆ ಸಲ್ಲಿಸ ಬೇಕಾದ್ದು. ಹಬ್ಬಹರಿದಿನಗಳಲ್ಲಿ ದೇವರ ಉತ್ಸವವನ್ನು ವಾದ್ಯ ಸಮೇತ ನಡೆಸಬೇಕು.

ಐದನೆಯದು, ಗಂಗಾನದಿಯಂತಹ ಪವಿತ್ರ ನದಿಗಳಿಗೆ ಯಾತ್ರೆ ಹೋಗಿ, ಸ್ನಾನ ಮಾಡಿ, ತಮ್ಮ ಪಾಪ ಪರಿಹಾರ ಮಾಡಿಕೊಳ್ಳಬೇಕಾದ್ದು. ಹೀಗೆ ನದಿಗಳಿಗೆ ಯಾತ್ರೆ ಹೋಗುವವರ ಸಂಖ್ಯೆ ಅಪಾರ. ಅಲ್ಲದೆ ನದಿಗಳಿಗೆ ಅರ್ಪಿಸುವ ಚಿನ್ನದ ನಗನಾಣ್ಯಗಳ ಬೆಲೆಯೂ ಅಪಾರ.

ಆರನೆಯದು, ನಾಲ್ಕು ಜಾತಿಯವರು ತಮ್ಮ ಏಳಿಗೆಗಾಗಿ ತಮ್ಮ ತಮ್ಮ ಸಾಧು ಸತ್ಪುರುಷರನ್ನು (Saints) ಪೂಜೆ ಪುರಸ್ಕಾರಗಳಿಂದ ಗೌರವಿಸುವುದು.

ಏಳನೆಯದು, ಸೂರ್ಯ ಚಂದ್ರರಿಗೆ ನಮಸ್ಕಾರ ಮಾಡುವುದು. ಇವು ದೇವರ ಎರಡು ಕಣ್ಣುಗಳೆಂಬ ಭಾವನೆ ಇದೆ. ಅಲ್ಲದೆ ಸೂರ್ಯೋದಯವಾದನಂತರ ಮೊದಲು ಕಾಣುವ ಯಾವುದೇ ಪ್ರಾಣಿ ಅಥವಾ ಪಕ್ಷಿಗೆ ನಮಸ್ಕಾರ ಮಾಡಬೇಕು. ಅದರಲ್ಲಿಯೂ ಗರುಡ ಮತ್ತು ಹಸುಗಳು ತುಂಬಾ ಪವಿತ್ರವಾದವುಗಳು. ಹಸು ಇವರಿಗೆ ಎಷ್ಟು ಪವಿತ್ರವೆಂದರೆ ಇದರ ಸಗಣಿಯಿಂದ ತಮ್ಮ ಮನೆಗಳನ್ನು ಸಾರಿಸುತ್ತಾರೆ.

ಎಂಟನೆಯದು, ನಾಮಕರಣ ಶಾಸ್ತ್ರ. ಈ ಶಾಸ್ತ್ರ ಬ್ರಾಹ್ಮಣರಲ್ಲಿ ಮತ್ತು ಇತರ ಜಾತಿಗಳಲ್ಲಿ ಬೇರೆ ಬಗೆಯಾಗಿದೆ. ಬ್ರಾಹ್ಮಣರಲ್ಲದವರು ನೀರಿನಲ್ಲಿ ಮಗುವಿಗೆ ಸ್ನಾನ ಮಾಡಿಸಿ, ಹಣೆಯ ಮೇಲೆ ಒಂದು ಲೇಖನಿಯಿಂದ ಬರೆಯುತ್ತಾರೆ. ಒಳ್ಳೆಯದಾಗಲಿ ಎಂದು ಹಿರಿಯರು ಆಶೀರ್ವಾದ ಮಾಡುತ್ತಾರೆ. ಬ್ರಾಹ್ಮಣರು ತಮ್ಮ ಮಕ್ಕಳಿಗೆ ಎಣ್ಣೆ ಹಚ್ಚಿ ನೀರಿನಲ್ಲಿ ಸ್ನಾನ ಮಾಡಿಸುತ್ತಾರೆ. ಬ್ರಾಹ್ಮಣರ ವಿಧಿನಿಯಮಗಳನ್ನು ನೀನು ಮುಂದೆ ತಪ್ಪದೆ ಆಚರಿಸಿಕೊಂಡು ಹೋಗು ಎಂದು ಆಶೀರ್ವಾದ ಮಾಡುತ್ತಾರೆ. ಮಗುವು ಹುಟ್ಟಿದ ಘಳಿಗೆ ನಕ್ಷತ್ರ ನೋಡಿ ಕುಂಡಲಿ ಬರೆಸುತ್ತಾರೆ. ಇದನ್ನು ಮಗು ಬೆಳೆದು ದೊಡ್ಡದಾಗಿ ಮದುವೆಗೆ ಬಂದಾಗ ನೋಡಿ ಲೆಕ್ಕಾಚಾರ ಹಾಕಿ ಶುಭಾಶುಭ ಗಳನ್ನು ತಿಳಿದುಕೊಳ್ಳುತ್ತಾರೆ.

ಒಂಬತ್ತನೆಯದು, ಇವರ ಮದುವೆ ವಿಷಯ. ಇವರಲ್ಲಿ ಮದುವೆಯೆಂದರೆ ಅತ್ಯಂತ ಸಂತಸದ ಪ್ರಸಂಗ. ಇಲ್ಲಿ ಮದುವೆ ಮಾಡುವ ವಯಸ್ಸಿಗೂ ಬೇರೆ ದೇಶ ಗಳಲ್ಲಿ ಮದುವೆ ಮಾಡುವ ವಯಸ್ಸಿಗೂ ತುಂಬಾ ವ್ಯತ್ಯಾಸವಿದೆ. ಇಲ್ಲಿ ಏಳನೆಯ ವಯಸ್ಸಿಗೇ ಮದುವೆ ಮಾಡಿಬಿಡುತ್ತಾರೆ. ಮದುವೆಯಾಗದೆ ಸಾಯುವುದು ಮಹಾ ಪಾಪವಂತೆ. ತಾವು ಸಾಯುವ ಮುನ್ನ ತಮ್ಮ ಮಕ್ಕಳ ಮದುವೆ ಮಾಡಿಬಿಡಬೇಕೆಂದು ಹಿರಿಯರು ಆಸೆಪಡುತ್ತಾರೆ. ಮದುವೆ ಮಾಡಬೇಕೆಂದು ನಿರ್ಧರಿಸಿದ ಮೇಲೆ ಹೆಣ್ಣಿ ನವರು ಮತ್ತು ಗಂಡಿನವರಲ್ಲಿ ಪರಸ್ಪರ ಮಾತುಕತೆ ನಡೆಯುತ್ತದೆ. ಲಗ್ನದ ದಿನವನ್ನು ನಿಶ್ಚಯಿಸಿದ ಮೇಲೆ ಗಂಡನ್ನು ಅಲಂಕಾರ ಮಾಡಿಕೊಂಡು ಆಯಾ ಜಾತಿಯವರು ಸೇರಿಕೊಂಡು ಕುದುರೆಗಳ ಮೇಲೋ ಪಲ್ಲಕ್ಕಿಗಳಲ್ಲೋ ಗಾಡಿಗಳಲ್ಲೋ ಕುಳಿತು ಊರಿನಲ್ಲಿ ವಾದ್ಯಸಮೇತ ಮೆರವಣಿಗೆ ಮಾಡುತ್ತಾರೆ. ಗಂಡಿನ ತಲೆಯ ಮೇಲೆ

ಭಾರಿ ಬೆಲೆಯಾದ ಕಿರೀಟ (ಬಾಸಿಂಗ) ಧರಿಸಿ ಚಂದಮಾಡುತ್ತಾರೆ. ಮಾರನೆಯದಿನ ಹೆಣ್ಣನ್ನೂ ಅದೇ ರೀತಿ ಅಲಂಕಾರ ಮಾಡಿ ಮೆರವಣಿಗೆ ಮಾಡುತ್ತಾರೆ. ಆಗ ಊರಿನ ಹೆಣ್ಣುಮಕ್ಕಳು ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ. ಸೂರ್ಯಾಸ್ತಮಯಕ್ಕೆ ಮುಂಚೆ ಲಗ್ನ ಮಾಡುವುದಿಲ್ಲ. ಆಗ ಅಗ್ನಿಯನ್ನು ಹೊತ್ತಿಸಿ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ಅಗ್ನಿ ಸಾಕ್ಷಿಯಾಗಿ ತಾವು ವಿವಾಹವಾಗುವುದಾಗಿ ಹೇಳುತ್ತಾರೆ. ಇದಾದ ಮೇಲೆ ಗಂಡು ಹೆಣ್ಣುಗಳ ಮಧ್ಯೆ ಬಟ್ಟೆಯ ತೆರೆ ಹಿಡಿಯುತ್ತಾರೆ. ಇದರ ಉದ್ದೇಶ ಲಗ್ನಕ್ಕೆ ಮುಂಚೆ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಬಾರದು ಎಂದು. ಮಂತ್ರಘೋಷ ಆಗುತ್ತದೆ. ಆಮೇಲೆ ಧಾರೆ ಆಗುತ್ತದೆ. ಹೆಣ್ಣಿಗೆ ಒಡವೆ ವಸ್ತ್ರಗಳಲ್ಲದೆ ಬೇರೆ ತೆರ ಮುಂತಾದ ವಧುದಕ್ಷಿಣೆ (dowry) ಇಲ್ಲ. ಮದುವೆಯಾದ ಮೇಲೆ ತಮ್ಮ ಜಾತಿಯವರಿಗೆ ಮಾತ್ರ ಊಟ ನಡೆಯುತ್ತದೆ. ಮದುವೆಯಾದ ಮೇಲೆ ಗಂಡ ಸತ್ತರೆ ಹೆಂಡತಿ ಮತ್ತೊಮ್ಮೆ ಮದುವೆಯಾಗುವಂತಿಲ್ಲ. ಆದರೆ ವೈಶ್ಯರಲ್ಲಿ ಪುನರ್ವಿವಾಹವುಂಟು. ಬ್ರಾಹ್ಮಣರನ್ನು ಬಿಟ್ಟು ಬೇರೆ ಜಾತಿಯವರು ಎರಡನೆ ಮದುವೆ ಆಗಬಹುದು. ಆದರೆ ತಮ್ಮ ಜಾತಿಯಲ್ಲಿ ಮಾತ್ರ ಮದುವೆಯಾಗಬೇಕೇ ವಿನಃ ಬೇರೆ ಜಾತಿಯಲ್ಲಿ ಆಗುವಂತಿಲ್ಲ. ವೈಶ್ಯರಾದವರು ತಮ್ಮ ಜಾತಿಗೆ ಸೇರಿದ ತಮ್ಮ ಕಸುಬಿನವರನ್ನು ಮಾತ್ರ ಮದುವೆಯಾಗಬೇಕು. ಉದಾಹರಣೆಗೆ, ಕ್ಷೌರಿಕನು ಕ್ಷೌರಿಕನ ಮಗಳನ್ನೇ ಮದುವೆಯಾಗಬೇಕು. ಒಂದು ಕಸುಬಿನವನು ಇನ್ನೊಂದು ಕಸುಬಿನವನೊಡನೆ ಸೇರಬಾರದೆಂಬುದು ಈ ಪದ್ಧತಿಗೆ ಕಾರಣ.

ಕೊನೆಯದಾಗಿ, ಇವರ ಶವಸಂಸ್ಕಾರದ ವಿಚಾರ. ಒಬ್ಬನು ಖಾಯಿಲೆ-ಕಸಾಲೆಯಿಂದ ಇನ್ನೇನು ಸಾಯುತ್ತಾನೆ ಎನ್ನುವಾಗ ಅವನ ಬಾಯಿಂದ ನಾರಾಯಣ, ನಾರಾಯಣ ಎಂದು ಹೇಳಿಸುತ್ತಾರೆ. ಕೊನೆಯುಸಿರು ಎಳೆಯುವಾಗ ಅವನ ಕೈಯಲ್ಲಿ ನೀರು ಹಾಕಿ ಜಲದೇವರಾದ 'ಕೃಷ್ಣರಪ್ಪನ್' ನಿಗೆ ತರ್ಪಣ ಕೊಡಿಸುತ್ತಾರೆ. ಸತ್ತ ಮೇಲೆ ಶವವನ್ನು ತೊಳೆದು ಅದನ್ನು ನದಿಯ ಬಳಿ ಇರುವ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಅಲ್ಲಿ ಶವವನ್ನು ಇರಿಸಿ ಬ್ರಾಹ್ಮಣರು ಮಂತ್ರ ಹೇಳುತ್ತಾರೆ. ಆಮೇಲೆ ಶವದ ಮೇಲೆ ಕಟ್ಟಿಗೆ ಒಟ್ಟಿ ಎಣ್ಣೆ ಸುರಿಯುತ್ತಾರೆ. ಸತ್ತವನ ಮಗನು ನೀರು ತುಂಬಿದ ಮಣ್ಣಿನ ಗಡಿಗೆಯನ್ನು ನೆಲದ ಮೇಲೆ ಇಟ್ಟು ಅದರ ಮೇಲೆ ಹಾಲಿನ ಗಡಿಗೆಯನ್ನು ಇಡುತ್ತಾನೆ. ಒಂದು ಕಲ್ಲಿನಿಂದ ನೀರಿನ ಗಡಿಗೆಯನ್ನು ಕುಕ್ಕುತ್ತಾನೆ. ಗಡಿಗೆ ತೂತಾಗಿ ನೀರು ಸೋರಿಹೋಗುತ್ತದೆ. ಆದರ ಮೇಲಿಟ್ಟ ಹಾಲಿನ ಗಡಿಗೆ ಉರುಳಿ, ಹಾಲು ನೆಲದಮೇಲೆ ಚೆಲ್ಲುತ್ತದೆ. ಇದರ ಅರ್ಥ ಏನೆಂದರೆ, ಕಲ್ಲಿನ ಹೊಡೆತದಿಂದ ಹೇಗೆ ಹಾಲೂ ನೀರೂ ಚೆಲ್ಲಿ ಮಣ್ಣಿನಲ್ಲಿ ಬೆರೆತುಹೋದುವೋ ಹಾಗೆಯೇ ರೋಗ ರುಜಿನವೂ ನನ್ನ ತಂದೆಯ ಶರೀರವೂ ಮಣ್ಣಿನಲ್ಲಿ ಬೆರೆತುಹೋಗಲಿ ಎಂದು. ಹೀಗೆ ಮಾಡಿ ಅನಂತರ ಶವಕ್ಕೆ ಬೆಂಕಿ ಹಚ್ಚಿ ಬೂದಿಯಾಗುವವರೆಗೂ ಬಿಟ್ಟು, ಬೂದಿಯನ್ನು ಗಾಳಿಯಲ್ಲಿ ಚೆಲ್ಲುತ್ತಾರೆ ಮತ್ತು ಬೂದಿಯನ್ನು ನೀರಿನಲ್ಲಿಯೂ ಬಿಡುತ್ತಾರೆ. ಹೀಗೆ ಯಾವ

ಧಾತುಗಳಿಂದ (elements) ಸತ್ತವನು ಈ ಪ್ರಪಂಚದಲ್ಲಿ ಬದುಕಿದ್ದನೋ ಅದೇ ಧಾತುಗಳಿಗೆ ಅವನ ಶರೀರವನ್ನು ಒಪ್ಪಿಸುವೆವೆಂದು ಬ್ರಾಹ್ಮಣರು ಹೇಳುತ್ತಾರೆ. ಅಂದಿನಿಂದ ಹತ್ತು ದಿವಸಗಳವರೆಗೆ ಸೂತಕ. ಆ ವೇಳೆ ವೀಳೆಯ ಸೇವನೆ ಮಾಡು ವಂತಿಲ್ಲ, ಎಣ್ಣೆ ಹಚ್ಚಿಕೊಳ್ಳುವಂತಿಲ್ಲ, ಮಡಿಬಟ್ಟೆ ಹಾಕಿಕೊಳ್ಳುವಂತಿಲ್ಲ. ಒಂದು ವರ್ಷ ಕಳೆಯುವವರೆಗೆ ಪ್ರತಿ ತಿಂಗಳೂ ಪಿತೃವು ಸತ್ತ ದಿನ ತಿಥಿ ಮಾಡಿ ಭೋಜನ ಮಾಡಿಸಬೇಕು. ಯಾವ ನದಿಗೆ ತನ್ನ ತಂದೆಯ ಅಸ್ತಿಯನ್ನು ಬಿಡಲಾಯಿತೋ ಆ ನದಿಗೆ ಹೋಗಿಬರಬೇಕು. ಸತ್ತವನ ಹೆಂಡತಿಯೂ ಗಂಡನ ಜೊತೆ ಚಿತೆಯಲ್ಲಿ ಬೀಳ ಬೇಕೆಂಬ ಪದ್ಧತಿ ಅನುಷ್ಠಾನದಲ್ಲಿದೆ. ಈಗಲೂ ಈ ಪದ್ಧತಿಯನ್ನು ಕೆಲವು ಕಡೆ ಅನುಸರಿಸುತ್ತಿದ್ದಾರೆ. ಪ್ರಾಪರ್ಟಿಯಸ್ (Propertius) ಎಂಬುವನು ಈ ಪದ್ಧತಿಯನ್ನು ಪತಿಪತ್ನಿಯರ ಶಾಶ್ವತ ಸಮಾಗಮವೆಂದು ಹೊಗಳಿದ್ದರೂ ಸ್ಟ್ರಾಬೊ (Strabo) ಎಂಬುವನು ಈ ಪದ್ಧತಿಗೆ ಪತ್ನಿಯ ದುರ್ನಡತೆಯೇ ಕಾರಣವೆಂದು ಹೇಳುತ್ತಾನೆ. ಹಿಂದೆ ಪತ್ನಿಯರು ಗಂಡಂದಿರಿಗೆ ವಿಷ ಕೊಟ್ಟು ಸಾಯಿಸಿ ಪರಪುರುಷರ ಸಹವಾಸ ಬೆಳೆಸುವುದಕ್ಕೆ ಅನುಕೂಲ ಮಾಡಿಕೊಳ್ಳುತ್ತಿದ್ದರೆಂದು ಹೇಳುತ್ತಾನೆ. ಇದನ್ನು ತಪ್ಪಿಸಲು ರಾಜರುಗಳು ಬ್ರಾಹ್ಮಣ ಹೆಂಗಸರು ಎರಡನೆಯ ಮದುವೆ ಮಾಡಿಕೊಳ್ಳ ಕೂಡದೆಂದೂ ಗಂಡ ಸತ್ತಾಗ ಹೆಂಡತಿ ಆತನ ಚಿತೆಯಲ್ಲಿ ಬೀಳಬೇಕೆಂದೂ ನಿಯಮಿಸಿ ದರು. ಹೀಗೆ ಈ ಸತಿ ಪದ್ಧತಿ ಅನುಷ್ಠಾನದಲ್ಲಿ ಬಂದಿದೆ. ಈ ಸತಿಯ ಕ್ರಮ ಹೀಗಿದೆ : ಗಂಡ ಸತ್ತ ಮೇಲೆ ಹೆಂಡತಿ ಸರ್ವಾಲಂಕೃತಳಾಗಿ ಗಂಡನ ಚಿತೆಯನ್ನು ಸಮೀಪಿಸುತ್ತಾಳೆ. ತಾನು ಧರಿಸಿದ ಒಡವೆ ವಸ್ತುಗಳನ್ನು ಹತ್ತಿರದವರಿಗೆ ಕೊಟ್ಟುಬಿಟ್ಟು ಚಿತೆಯನ್ನೇರಿ ಗಂಡನ ಶವವನ್ನು ತನ್ನ ತೊಡೆಯಮೇಲಿಟ್ಟುಕೊಳ್ಳುತ್ತಾಳೆ. ವಾದ್ಯಗಳು ಮೊಳಗುತ್ತಿರು ತ್ತವೆ. ಚಿತೆಗೆ ಬೆಂಕಿ ಹಚ್ಚುತ್ತಾರೆ. ಆಕೆಯೂ ಶವದ ಜೊತೆ ಸುಟ್ಟು ಬೂದಿಯಾಗುತ್ತಾಳೆ.

ಹೀಗಿದೆ ಇವರ ಶಾಸ್ತ್ರಾಚಾರಗಳು.

ಈಗ ಬ್ರಹ್ಮನು ಹೇಳಿದ ಮೂರನೆಯ ಶಾಸ್ತ್ರದ ವಿಚಾರ. ನಾಲ್ಕು ಜಾತಿಯವರೂ ತಮ್ಮ ತಮ್ಮ ಜಾತಿಯ ಕರ್ತವ್ಯಗಳನ್ನು ಅನುಸರಿಸಿಕೊಂಡು ಹೋಗುವಂತೆ ಬೋಧನೆ ಮಾಡುವ ಕೆಲಸವನ್ನು ಬ್ರಾಹ್ಮಣರಿಗೆ ವಹಿಸಲಾಯಿತಷ್ಟೆ. ಬ್ರಾಹ್ಮಣರು ತಮ್ಮ ಈ ಕೆಲಸವನ್ನು ತಪ್ಪದೆ ನಡೆಸುವಂತೆ ಮಾಡಲು ಅವರಿಗೂ ಕೆಲವು ನಿಯಮಗಳನ್ನು ವಿಧಿಸಲಾಯಿತು. ಅದೇನೆಂದು ಕೇಳಿ ಈಗ. ಬ್ರಾಹ್ಮಣರೆಂಬ ಹೆಸರು 'ಬ್ರಾಖ್ಮನ್' (Brachman) ಎಂಬುವನಿಂದ ಬಂದಿತೆಂದು ಸೂಯಿದಾಸ್ (Suidas) ಹೇಳುತ್ತಾನೆ. ಆದರೆ ಪೊಸ್ಟೆಲಸ್ (Postelus) ಎಂಬುವನು 'ಅಬ್ರಾಹಾಂ' ಎಂಬುವನಿಂದ ಬಂದಿತೆಂದೂ ಅದು ಕಾಲ ಕಳೆದಂತೆ ಬ್ರಾಹ್ಮಣ ಎಂದಾಯಿತೆಂದೂ ಹೇಳುತ್ತಾನೆ. ಆದರೆ ತಾವು 'ಬ್ರಾಖ್ಮನ್' ಎಂಬುವನ ಹೆಸರನ್ನಾಗಲೀ ಅಥವಾ ಅಬ್ರಾಹಂನ ಹೆಸರನ್ನಾಗಲೀ ಕೇಳಿಯೇ ಇಲ್ಲವೆಂದು ಬ್ರಾಹ್ಮಣರು ಹೇಳುತ್ತಾರೆ. ಪೌರೋಹಿತ್ಯ ನಡೆಸಿದ ಬ್ರಾಮ್ಮನ್ (Brammon) ಎಂಬುವನಿಂದಲೋ ಅಥವಾ ಬ್ರಹ್ಮನಿಂದಲೋ ಬ್ರಾಹ್ಮಣ ಎಂಬ ಹೆಸರು ಬಂತೆಂದು ಹೇಳುತ್ತಾರೆ.

ಬ್ರಾಹ್ಮಣರಲ್ಲಿ ಎರಡು ವಿಧ. ಒಂದು, ಸಾಮಾನ್ಯ ಬ್ರಾಹ್ಮಣರು. ಇಂಡಿಯಾದಲ್ಲಿ ಇವರದೇ ಹೆಚ್ಚು ಸಂಖ್ಯೆ. ಇನ್ನೊಂದು, ಬನಿಯನರ ಪ್ರಕಾರ 'ವೆರ್ತಿಯಾ' ಗಳು (Verteas = ಜೈನ ಯತಿಗಳೇ?) ಮತ್ತು ಮೂರರ (ಮಹಮ್ಮದೀಯರ) ಪ್ರಕಾರ 'ಸೆವ್ರಾ'ಗಳು (Sevrahs). ಇವರ ಸಂಖ್ಯೆ ಕಡಮೆ.

ಸಾಮಾನ್ಯ ಬ್ರಾಹ್ಮಣರಲ್ಲಿ ಎಂಬತ್ತೆರಡು ಜಾತಿಗಳು (castes) ಅಥವಾ ಗೋತ್ರ (tribes) ಇವೆ. ಇವರು ಒಬ್ಬೊಬ್ಬ ಋಷಿಯನ್ನನುಸರಿಸಿ ತಮ್ಮ ಗೋತ್ರಗಳನ್ನು ಗುರುತಿಸುತ್ತಾರೆ.

ಎಳನೆಯ ವಯಸ್ಸಿನಲ್ಲಿ ಬ್ರಾಹ್ಮಣರು ತಮ್ಮ ಮಕ್ಕಳಿಗೆ ಚೌಲಕರ್ಮ ಮಾಡುತ್ತಾರೆ. ತಲೆಯನ್ನೆಲ್ಲ ಬೋಳಿಸಿ ನೆತ್ತಿಯ ಮೇಲೆ ಒಂದೇ ಒಂದು ಬತ್ತಿ ಜುಟ್ಟು ಬಿಡುತ್ತಾರೆ. ಹೀಗೆ ಮಾಡಲು ಕಾರಣವೇನೆಂದರೆ, ಅವರು ತಮ್ಮ ವಿದ್ಯಾಭ್ಯಾಸದಲ್ಲಿ ಅಸಡ್ಡೆ ತೋರಿಸಿದರೆ, ಅವರ ಬಿಟ್ಟ ಜುಟ್ಟು ಹಿಡಿದು ಮತ್ತೆ ಎಳೆದುತರುವುದಕ್ಕಾಗಿ. ವಿದ್ಯಾಭ್ಯಾಸ ಮುಗಿಸಿದ ಮೇಲೆ ಹದಿನಾಲ್ಕನೆಯ ವಯಸ್ಸಿಗೆ ಜನಿವಾರ ಹಾಕುತ್ತಾರೆ. ಅಂದಿನಿಂದ ಅವರು ಬ್ರಾಹ್ಮಣರೆಂದು ಪರಿಗಣಿಸಲ್ಪಡುತ್ತಾರೆ. ಇಲ್ಲಿಂದ ಅವರು ತಮ್ಮ ಜಾತಿ ಬದಲಾಯಿಸುವಂತಿಲ್ಲ. ಬ್ರಾಹ್ಮಣ ಧರ್ಮವನ್ನು ಚಾಚೂ ತಪ್ಪದೆ ಆಚರಿಸಬೇಕು. ಕೊನೆಯದಾಗಿ ತಮ್ಮ ಧರ್ಮದ ಗುಟ್ಟನ್ನು ಬೇರೆ ಧರ್ಮದವರಿಗೆ ಬಿಟ್ಟುಕೊಡಕೂಡದು.

ಈಗ ಬೇರೆ ಬ್ರಾಹ್ಮಣರ ಅಂದರೆ ವೆರ್ತಿಯಾಗಳ ವಿಷಯ ಹೇಳುತ್ತೇನೆ. ಇವರು ಶೂದ್ರ ಅಥವಾ ವರ್ತಕ ಜಾತಿಯವರಿದ್ದು ದೈವಭಕ್ತಿಯಿಂದ ನಡೆದುಕೊಳ್ಳುವ ಜನ. ಬಿಳಿಯ ಉಣ್ಣೆ ಅಂಗಿಯನ್ನು ಮಂಡಿಯವರೆಗೆ ತೊಟ್ಟಿರುತ್ತಾರೆ. ಸೊಂಟದಿಂದ ಕೆಳಕ್ಕೆ ಏನೂ ಉಟ್ಟಿರುವುದಿಲ್ಲ. ಬರಿದಲೆಯ ಈ ಜನ ಕ್ಷೌರಮಾಡಿಸಿಕೊಳ್ಳುವುದಿಲ್ಲ. ನೆತ್ತಿಯ ಮೇಲೆ ಒಂದಿಷ್ಟು ಕೂದಲನ್ನು ಬಿಟ್ಟು ಉಳಿದ ಕೂದಲನ್ನು ಕೈಯಿಂದ ಕಿತ್ತುಹಾಕುತ್ತಾರೆ. ಹಾಗೆಯೇ ಮುಖದ ಮೇಲಿನ ಕೂದಲನ್ನೂ ಕಿತ್ತುಹಾಕುತ್ತಾರೆ. ಈ ವೆರ್ತಿಯಾಗಳಲ್ಲಿ ಹಲವಾರು ಒಳಜಾತಿಗಳುಂಟು. ಸೌಕಯೇ(Soucae), ತುಪ್ಪಯೇ (Tuppae), ಕರ್ತಾರ್ (Curthur), ಒಂಕೆಲಿಯೊ (Onkeleau), ಮತ್ತು ಪುಷಾಲಿಯೊ (Pushaleau)—ಹೀಗೆ ಐದು. ಇವರಲ್ಲಿ ಪುಷಾಲಿಯೊ ಬೇರೆಯವರಿಗಿಂತ ಹೆಚ್ಚು ಕಟ್ಟುನಿಟ್ಟಾದ ಜೀವನ ನಡೆಸುತ್ತಾರೆ. ಈ ಬ್ರಾಹ್ಮಣರು ತಿಂಗಳಿಗೊಂದು ಸಲ ಪಚ್ಛಾಸಂ (Putchasom = ಪಕ್ಷಮಾಸ?) ಎಂಬ ವಿಧಿ ಆಚರಿಸುತ್ತಾರೆ. ಐದು ದಿನಗಳ ಈ ವಿಧಿಯ ವೇಳೆ ಉಪವಾಸ ಮಾಡುತ್ತಾರೆ. ಇದು ನಡೆಯುವುದು ಸಾಮಾನ್ಯವಾಗಿ ಯಾರಾದರೂ ಒಬ್ಬ ಶ್ರೀಮಂತನ ಮನೆಯಲ್ಲಿ. ಇಂಥ ವೇಳೆಗಳಲ್ಲಿ ಶ್ರೀಮಂತರು ಸಾಮಾನ್ಯವಾಗಿ ಗೋವು ಮುಂತಾದ ಪ್ರಾಣಿಗಳ ಸಂರಕ್ಷಣೆಗೆ ದಾನಧರ್ಮಗಳನ್ನು ಮಾಡುತ್ತಾರೆ. ಈ ವೆರ್ತಿಯಾ ಬ್ರಾಹ್ಮಣರು ಇತರ ಸಾಮಾನ್ಯ ಬ್ರಾಹ್ಮಣರಿಗಿಂತ ಅನೇಕ ವಿಷಯಗಳಲ್ಲಿ ಭಿನ್ನರಾಗಿರುತ್ತಾರೆ. ಸಾಮಾನ್ಯ ಬ್ರಾಹ್ಮಣರು ಮದುವೆ

ಯಾಗಬಹುದು. ಇವರು ಮದುವೆಯಾಗುವಂತಿಲ್ಲ. ಜೀವವಿರುವ ಪ್ರಾಣಿಗಳ ಬಗ್ಗೆ ತುಂಬ ಕನಿಕರ ತೋರಿಸುವುದು, ನೀರನ್ನು ಕುದಿಸಿಯೇ ಕುಡಿಯುವುದು, ತಮ್ಮ ಮಲವಿಸರ್ಜನೆಯಿಂದ ಯಾವ ಕ್ರಿಮಿಕೀಟಗಳೂ ಉತ್ಪತ್ತಿಯಾಗದ ರೀತಿಯಲ್ಲಿ ಅದನ್ನು ವಿಲೇವಾರಿ ಮಾಡುವುದು, ಕುಂಟೋ ಕುರುಡೋ ಆದ ಹಕ್ಕಿ ಪಕ್ಷಿಗಳನ್ನು ಕೊಂಡು ಅವುಗಳಿಗೆ ಚಿಕಿತ್ಸೆ ನಡೆಸುವುದು—ಇತ್ಯಾದಿ.

ಪೌರಸನ (Pourous) ಮೂರನೆಯ ಮಗ ಶೂದ್ರ. ಈತನ ವೃತ್ತಿ ವ್ಯಾಪಾರ. ವ್ಯಾಪಾರ ಮಾಡುವವರೆಲ್ಲ ಈ ಜಾತಿಗೆ ಸೇರಿದವರು. ಬನಿಯನರ ದಳ್ಳಾಳಿಗಳೂ ಈ ಜಾತಿಗೆ ಸೇರಿದವರಾಗಿದ್ದಾರೆ. ವ್ಯಾಪಾರದಲ್ಲಿ ಮಾತಿನಂತೆ ನಡೆಯುವುದು, ಸುಳ್ಳು ತಟವಟ ಹೇಳದಿರುವುದು, ಮೋಸಮಾಡದಿರುವುದು—ಇವರು ಅನುಸರಿಸಬೇಕಾದ ಧರ್ಮ. ಇವರು ವ್ಯಾಪಾರ ಮಾಡುವ ರೀತಿ ಹೇಳಬೇಕಾದ್ದೆ. ಇಬ್ಬರೂ ತಾವು ಹೊದ್ದ ಬಟ್ಟೆಯ, ಮರೆಯಲ್ಲಿ ಪರಸ್ಪರ ಕೈ ಹಿಡಿದು ಸರಕುಗಳಿಗೆ ಇಷ್ಟು ಬೆಲೆ ಎಂದು ಗುಟ್ಟಾಗಿ ನಿರ್ಧರಿಸಿಕೊಳ್ಳುತ್ತಾರೆ. ಹೀಗೆ ಗುಟ್ಟಾಗಿ ಮಾಡಿಕೊಂಡ ಕರಾರನ್ನು ಯಾರೂ ಮೀರುವಂತಿಲ್ಲ.

ಪೌರಸನ ನಾಲ್ಕನೆಯ ಮಗ ವೈಶ್ಯ. ಈತ ಕುಶಲಕಲೆಗಳಲ್ಲಿ ಮತ್ತು ಯಂತ್ರ ನಿರ್ಮಾಣದಲ್ಲಿ ನಿಪುಣ. ವೈಶ್ಯರಲ್ಲಿ ಎರಡು ವಿಧ. ಬನಿಯನರಂತೆ ಮದ್ಯ ಮಾಂಸಗಳನ್ನು ತೊರೆದವರು ಒಂದು ಬಗೆ. ಮದ್ಯ ಮಾಂಸಗಳನ್ನು ಉಪಯೋಗಿಸುವವರು ಇನ್ನೊಂದು ಬಗೆ. ಇವರನ್ನು ಕೌಲಿಗಳು (Coulee) ಎಂದು ಕರೆಯುತ್ತಾರೆ. ಮೊದಲನೆಯ ಬಗೆಯುವರಲ್ಲಿ ಅವರವರ ವೃತ್ತಿಗನುಸಾರವಾಗಿ ಮೂವತ್ತಾರು ಒಳಜಾತಿಗಳಿವೆ.

ಹೀಗಿದೆ, ಬ್ರಹ್ಮನಿಗೆ ವಹಿಸಲ್ಪಟ್ಟ ಮೂರನೆಯ ಭಾಗದ ಗ್ರಂಥ (Third Tract of the Book delivered to Bremaw). ಇದನ್ನು ಬ್ರಹ್ಮನು ಬ್ರಾಹ್ಮಣರಿಗೆ ತಿಳಿಸಿ ಅವರು ಅದನ್ನು ಎಲ್ಲರಿಗೂ ಬೋಧಿಸಬೇಕೆಂದು ಹೇಳಿದ. ಆಮೇಲೆ ಅದರಲ್ಲಿ ಹೇಳಿರುವಂತೆ ಬ್ರಾಹ್ಮಣರಾದಿಯಾಗಿ ನಾಲ್ಕು ಜಾತಿಗಳವರು ಅವರವರ ಕರ್ಮಗಳನ್ನು ಆಚರಿಸುತ್ತಾ ಬಂದರು. ಆದರೆ ಜನಸಂಖ್ಯೆ ಹೆಚ್ಚಿದ ಮೇಲೆ ಅವರು ತಮ್ಮ ಪೂರ್ವಿಕರಂತೆ ನಡೆದುಕೊಳ್ಳಲಿಲ್ಲ. ಬ್ರಾಹ್ಮಣ ಬೂಟಾಟಿಕೆಯವನಾಗಿ ಬರೇ ಮಾತಿನ ಮಲ್ಲನಾದ. ಕ್ಷತ್ರಿಯ ಜಂಭ ಅಹಂಕಾರಗಳಿಂದ ಉಬ್ಬಿದ. ಆತನಿಗೆ ರಾಜ್ಯ ವಿಸ್ತರಿಸುವ ದಾಹ ಹೆಚ್ಚಾಯಿತು. ಅನ್ಯಾಯವಾದ ರೀತಿಯಲ್ಲಿ ರಾಜ್ಯಭಾರ ಮಾಡಲಾರಂಭಿಸಿದ. ವರ್ತಕ ಮೋಸದಲ್ಲಿ ಎತ್ತಿದಕೈಯಾದ. ಕೈಗಾರಿಕೆಗಳು ಇಳಿಮುಖವಾದುವು. ಕೆಲಸಗಾರರ ಶೋಷಣೆ ಹೆಚ್ಚಾಯಿತು.

ಇದನ್ನೆಲ್ಲಾ ನೋಡಿ ದೇವರಿಗೆ ಸಿಟ್ಟಾಯಿತು. ಮೇರು ಪರ್ವತದಿಂದ ಇಳಿದು ಬಂದು ಬ್ರಹ್ಮನನ್ನು ಕರೆಸಿ ಪ್ರಪಂಚ ಕೆಟ್ಟಿರುವ ಸಂಗತಿ ತಿಳಿಸಿದ. ಬ್ರಹ್ಮ ಕೆಟ್ಟವರನ್ನು ಸರಿಪಡಿಸುವುದಾಗಿ ಹೇಳಿದ. ಆದರೆ ಅದು ಆಗಲಿಲ್ಲ. ದೇವರು ಅದನ್ನು ಕಂಡು ಬ್ರಹ್ಮನನ್ನು ತನ್ನಲ್ಲಿ ಐಕ್ಯಮಾಡಿಕೊಂಡುಬಿಟ್ಟ. ಅಲ್ಲಿಗೆ ಬ್ರಹ್ಮನ ಆಯುಸ್ಸೂ

ಮುಗಿದಿತ್ತು. ಆಮೇಲೆ ದೇವರು ತಾನು ಪ್ರಪಂಚವನ್ನು ನಾಶಮಾಡಬೇಕೆಂದಿದ್ದೇನೆ ಎಂದು ವಿಷ್ಣುವಿಗೆ ತಿಳಿಸಿದ. ವಿಷ್ಣುವೂ ಏನು ಮಾಡಲಾಗಲಿಲ್ಲ. ಆಮೇಲೆ ರುದ್ರನಿಗೆ ಈ ಪ್ರಪಂಚವನ್ನು ನಾಶಮಾಡುವ ಕೆಲಸ ವಹಿಸಿದ. ಸರಿ ರುದ್ರನು ಕೋಪಗೊಂಡು ತನ್ನ ಕೆಲಸ ಆರಂಭಿಸಿದ. ಭೂಮಿಯ ಗರ್ಭದ ಬಿಸಿಯಾಗ್ನಿ ಹೊರಕಾರಿತು. ಪರ್ವತಗಳೂ ಬೆಟ್ಟಗುಡ್ಡಗಳೂ ತಲೆಕೆಳಕಾದುವು. ಗಂಗಾನದಿಯು ತನ್ನ ಪಾತ್ರವನ್ನೇ ಬದಲಾಯಿಸಿತು. ಬೀಸಿದ ಬಿರುಗಾಳಿ ಎಲ್ಲರನ್ನೂ ನಿರ್ನಾಮಮಾಡಿತು. ವಿಷ್ಣುವು ತನ್ನ ಕವಚದಲ್ಲಿ ಅಡಗಿಸಿಕೊಂಡ ಕೆಲವೇ ಜನ ಮಾತ್ರ ಉಳಿದರು. ಇಂತು ಕೊನೆಗೊಂಡಿತು ಎರಡನೆಯ ಯುಗ.

ಆದ ಅನಾಹುತವನ್ನು ನೋಡಿ ದೇವರಿಗೇ ಕನಿಕರ ಉಂಟಾಯಿತು. ರುದ್ರನು ತಾನುಂಟುಮಾಡಿದ ಪ್ರಳಯಕ್ಕೆ ತಾನೇ ಪಶ್ಚಾತ್ತಾಪ ಪಟ್ಟ. ಹಿಂದಿನ ಅನಾಹುತಗಳಿಗೆಲ್ಲ ರಾಜರುಗಳೂ ಅರಸರೂ ಕಾರಣರೆಂದು ಭಾವಿಸಿದ ದೇವರು ಅವರನ್ನೆಲ್ಲ ನಿರ್ನಾಮ ಮಾಡಿ ವಿಷ್ಣುವಿನ ಕವಚದಲ್ಲಿ ಸೇರಿ ಉಳಿದುಕೊಂಡವರಿಂದ ಮೂರು ಜಾತಿ ಅಥವಾ ವರ್ಣಗಳನ್ನು ಉಂಟುಮಾಡಿದ. ಆದರೆ ನಾಲ್ಕು ಜಾತಿಗಳೂ ಈ ಪ್ರಪಂಚಕ್ಕೆ ಆವಶ್ಯಕವೆಂದು ಭಾವಿಸಿ ಬ್ರಾಹ್ಮಣರಿಂದ ರಾಜವಂಶ ಆರಂಭವಾಗುವಂತೆ ಮಾಡಿದ. ಆಳಿದುಳಿದ ಹಿರಿಯ ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿದವನ ಹೆಸರು ದಸ್ರಾತ್ (Ducerat = ದಶರಥ) ಎಂದು. ಈತನಿಂದ ಕ್ಷತ್ರಿಯ ವಂಶ ಮತ್ತೆ ಆರಂಭವಾಯಿತು. ಇವನ ಮಗನು ಬ್ರಾಹ್ಮಣರ ಪೋಷಕನಾದ. ಈತನ ಹೆಸರು ರಾಮ್ ಎಂದು. ಈತ ತನ್ನ ಸತ್ಕಾರ್ಯಗಳಿಂದ ತನ್ನ ಹೆಸರನ್ನು ಅಜರಾಮರವಾಗಿ ಮಾಡಿಕೊಂಡ. ಈಗಲೂ ಈತನ ಹೆಸರು ಹೇಳುತ್ತಾರೆ. ಒಬ್ಬರನ್ನೊಬ್ಬರು ಪರಸ್ಪರ ಸಂಧಿಸಿದಾಗ 'ರಾಮ್ ರಾಮ್' ಎನ್ನುತ್ತಾರೆ.

ರಾಮನ ನಂತರ ಅನೇಕ ಒಳ್ಳೆಯ ರಾಜರು ಆಳಿದರು. ಆದರೆ ಕಾಲ ಕಳೆದಂತೆ ಇವರೂ ಕುಲಗೆಟ್ಟರು. ಮತ್ತೆ ದೇವರಿಗೆ ಸಿಟ್ಟಾಯಿತು. ತಾನೆಷ್ಟು ಹೇಳಿದರೂ ಜನ ಕೆಟ್ಟುಹೋಗುತ್ತಿರುವುದನ್ನು ಕಂಡು ರುದ್ರನಿಗೆ ಅಪ್ಪಣೆ ಮಾಡಿದ. ಭೂಮಿಯು ಬಾಯಿ ತೆರೆಯಿತು. ಜನರನ್ನೆಲ್ಲಾ ಜೀವಸಹಿತ ನುಂಗಿಬಿಟ್ಟಿತು. ಆದರೂ ಆ ನಾಲ್ಕು ಜಾತಿಗಳಲ್ಲಿ ಕೆಲವರು ಉಳಿದರು. ಹೀಗೆ ಮೂರನೆಯ ಯುಗದ ಅಂತ್ಯವಾಯಿತು.

ಈ ಪ್ರಪಂಚದ ಇರುವಿಕೆಗೆ ತನ್ನ ಕೊಟ್ಟಕೊನೆಯ ಪ್ರಯತ್ನ ಮಾಡಬೇಕೆಂದು ದೇವರು, ಆಳಿದುಳಿದ ನಾಲ್ಕು ಜಾತಿಯ ಜನರನ್ನು ಮತ್ತೆ ಬಾಳಿಸಬೇಕೆಂದು ಮನಸ್ಸು ಮಾಡಿದ. ಹಾಗೆ ಉಳಿದವರಲ್ಲಿ ಕೃಷ್ಣ ಒಬ್ಬ. ಈತ ಹೆಸರಾಂತ ರಾಜನಾಗಿ ಆಳಿದ. ಧರ್ಮವನ್ನು ಉದ್ಧಾರ ಮಾಡಿದ. ಇಷ್ಟರಲ್ಲಿ ವಿಷ್ಣುವಿನ ಕಾಲ ಮುಗಿಯಿತು. ಆತನನ್ನು ದೇವರು ತನ್ನಲ್ಲಿ ಐಕ್ಯಮಾಡಿಕೊಂಡ. ಆತನಿಂದ ನಡೆಯಬೇಕಾದ ಸ್ಥಿತಿ ಕಾರ್ಯದ ಆವಶ್ಯಕತೆ ಕಾಣಲಿಲ್ಲ. ಇನ್ನುಳಿದದ್ದು ಪ್ರಪಂಚದ ನಾಶವೊಂದೇ ಅನ್ನಿಸಿತು. ನಾಲ್ಕನೆಯ ಅವಧಿ ಇನ್ನೂ ದೀರ್ಘವಾಗುವುದೆಂದು ಬ್ರಾಹ್ಮಣರು ಹೇಳುತ್ತಾರೆ. ಇದರ

ಕೊನೆಗಾಲದಲ್ಲಿ ರುದ್ರನು ಸ್ವರ್ಗದಲ್ಲಿ ಸೇರಿಕೊಳ್ಳುವನೆಂದು ಹೇಳುತ್ತಾರೆ. ಈ ನಾಲ್ಕು ಯುಗಗಳ ಹೆಸರುಗಳು ಯಾವುವೆಂದರೆ: ಕುರ್ತನ್ (Curtain ಕೃತ), ದ್ವಾಪರ್ (Dwaper = ದ್ವಾಪರ), ತೆತ್ರಾಯೀ (Tetraie = ತ್ರೇತಾ), ಮತ್ತು ಕಲೀ (Kalee = ಕಲಿ).

ಕಲಿಯುಗದ ಅಂತ್ಯ ಬೇರೆ ಯುಗಗಳ ಅಂತ್ಯಕ್ಕಿಂತ ಬಹು ಕ್ರೂರವಾಗಿರುವುದೆಂದು ಹೇಳುತ್ತಾರೆ. ರುದ್ರನು ತನ್ನೆಲ್ಲ ಶಕ್ತಿಯನ್ನೂ ಉಪಯೋಗಿಸುತ್ತಾನಂತೆ. ಆಗ ಚಂದ್ರ ಕೆಂಪಗಾಗುವನು. ಸೂರ್ಯನು ಗಂಧಕದಂತೆ ಉರಿದು ತನ್ನ ಪ್ರಕಾಶವನ್ನು ಕಳೆದುಕೊಳ್ಳುವನು. ಬರಸಿಡಿಲುಗಳು ಬಡಿಯುವುವು. ಆಕಾಶವೇ ತನ್ನ ಬಣ್ಣ ಬದಲಾಯಿಸುವುದು. ಎಲ್ಲೆಲ್ಲೂ ಅಗ್ನಿಯ ಕೆಂಪು ಕಾಣಿಸಿಕೊಳ್ಳುವುದು. ಪ್ರಪಂಚದ ಸೃಷ್ಟಿಗೆ ಕಾರಣವಾದ ನಾಲ್ಕು ಧಾತುಗಳು ಒಂದಕ್ಕೊಂದು ವಿರೋಧವಾಗುತ್ತವೆ. ಅವೇ ಈ ಪ್ರಪಂಚದ ಅಂತ್ಯಕ್ಕೆ ಕಾರಣವಾಗುತ್ತವೆ. ಆಗ ರುದ್ರನು ಎಲ್ಲ ಜನರ ಆತ್ಮಗಳನ್ನು ತನ್ನೊಡನೆ ಸ್ವರ್ಗಕ್ಕೆ ಕರೆದುಕೊಂಡು ಹೋಗುವನು. ಅಲ್ಲಿ ಆ ಆತ್ಮಗಳು ದೇವರಲ್ಲಿ ಐಕ್ಯವಾಗುವುವು. ಆದರೆ ಶರೀರಗಳು ನಾಶವಾಗುವುವು.

ಎಲೈ ಓದುಗ ಮಹಾಶಯರೆ, ನೀವು ಬನಿಯನ್ ಧರ್ಮದ ಸಾರಾಂಶ ಓದಿದಿರಷ್ಟೆ. ಮೂಢನಂಬಿಕೆಗಳ ಹಾಗೂ ಕಟ್ಟುಕಥೆಗಳ ಕಂತೆ ಈ ಧರ್ಮ. ಚರ್ಚಿನ ಕೃಪಾಶ್ರಯದಲ್ಲಿ ಇರದವನನ್ನು ಹೇಗೆ ಪಿಶಾಚಿ ತಪ್ಪುದಾರಿಗೆಳೆಯುತ್ತದೆಂಬುದನ್ನು ನೋಡಿ, ಈ ಬಗ್ಗೆ ನೀವು ನಿಮ್ಮದೇ ಆದ ಅಭಿಪ್ರಾಯಕ್ಕೆ ಬರಬಹುದಾಗಿದೆ. ಆದರೆ ನಾನು ಹೇಳಬೇಕಾದ್ದನ್ನು ಹೇಳದೆ ಬಿಡಲಾರೆ. ಅವರ ಮೊದಲನೆಯ ಯುಗ ಎನ್ನುವುದು, ತಾವು ಎಷ್ಟು ಪುರಾತನವಾದವರೆಂದು ಹೇಳುವುದಕ್ಕೆ ಹುಟ್ಟಿಸಿಕೊಂಡ ಕಟ್ಟುಕಥೆ. ನಾಲ್ಕು ದಿಕ್ಕಿನಲ್ಲೂ ನಾಲ್ಕು ಹೆಣ್ಣುಗಳನ್ನು ಸೃಷ್ಟಿಮಾಡಲಾಯಿತೆಂಬುದು ಅಡುಗೂಲಜ್ಜಿಯ ಕಥೆಯಲ್ಲದೆ ಬೇರೆ ಅಲ್ಲ. ಇನ್ನು ಬ್ರಹ್ಮ, ವಿಷ್ಣು, ರುದ್ರ ಎಂಬ ತ್ರಿಮೂರ್ತಿಗಳ ಬಗ್ಗೆ ಹೇಳುವುದು ವಿಚಿತ್ರವೇ ಸರಿ. ದೇವರು ಇರುವುದು, ನಾವು ಏನು ತಿನ್ನುತ್ತೇವೆ ಏನು ಕುಡಿಯುತ್ತೇವೆ ಎಂಬುದರಲ್ಲಿ ಅಲ್ಲ. ಅಥವಾ ಅವನ್ನು ಬಿಡುವುದರಿಂದಲೂ ಅಲ್ಲ. ಸ್ನಾನ, ಮಡಿ, ಪ್ರೋಕ್ಷಣೆ—ಈ ಆಚರಣೆಗಳನ್ನೆಲ್ಲ ಬುದ್ಧಿ ಇರುವ ಯಾರಾದರೂ ಒಪ್ಪುವರೆ? ಸೂರ್ಯಚಂದ್ರರ ಆರಾಧನೆ, ಜೀವಂತ ಪ್ರಾಣಿಗಳ ಪೂಜೆ, ವಿಗ್ರಹಗಳ ಮುಂದೆ ಅಡ್ಡಬಿದ್ದು ದಮ್ಮಯ್ಯ ಎಂದು ಹಲ್ಲುಕಿರಿಯುವುದು, ಮರಗಿಡಗಳನ್ನು ಪೂಜಿಸುವುದು—ಇವೆಲ್ಲಾ ಬುದ್ಧಿವಿಕಲ್ಪರಾದವರು ಮಾಡುವಂಥ ಆಭಾಸದ ಆಚರಣೆಗಳು. ಇನ್ನು ಅವರ ನಾಲ್ಕು ಜಾತಿಗಳನ್ನು ನೋಡಿದರೆ ಎಲ್ಲವೂ ನಾಲ್ಕನೆಯ ಅಂಕಿಯೇ ಆಗಿರುತ್ತದೆ. ನಾಲ್ಕು ಮೂಲಭೂತಗಳು, ನಾಲ್ಕು ಯುಗಗಳು, ಅಲ್ಲಿ ನೆಲೆಸಿದವರು ನಾಲ್ಕು ಗಂಡು, ನಾಲ್ಕು ಹೆಣ್ಣು ಇತ್ಯಾದಿ.

ಇಷ್ಟೆಲ್ಲಾ ಕೇಳಿದ ಮೇಲೆ ಇವರ ಧರ್ಮವು ಒಂದು ಕಟ್ಟುಕಥೆಯಲ್ಲದೆ ಬೇರೆ ಅಲ್ಲ ಎಂದು ಹೇಳಬೇಕಾಗುತ್ತದೆ. ಅದರಲ್ಲಿ ಯಾವುದನ್ನಾದರೂ ನಂಬಲು ಸಾಧ್ಯವೆ?

ಇಂಥವು ಯಾವೂ ಇಲ್ಲದ ನಮ್ಮ ಧರ್ಮಕ್ಕಿಂತ ಮಿಗಿಲಾದುದು ಇನ್ನೊಂದು ಇಲ್ಲ. ನಮ್ಮ ಧರ್ಮದ ದೀಪವು ಅಗಣಿತ ತಾರೆಗಳ ಬೆಳಕನ್ನೆಲ್ಲಾ ಮೀರಿಸುವ ಚಂದ್ರನ ಬೆಳಕಿನಂತೆ ಎಲ್ಲ ಧರ್ಮಗಳ ಬೆಳಕನ್ನೂ ಮೀರಿ ಪ್ರಕಾಶಮಾನವಾಗಿದೆಯೆಂದು ಹೇಳಬೇಕು.

# ವಿಲಿಯಮ್ ಬ್ರೂಟನ್

ವಿಲಿಯಮ್ ಬ್ರೂಟನ್ (William Bruton) ಜಹಾಂಗೀರನು ಮೊಗಲ್ ಚಕ್ರವರ್ತಿಯಾಗಿದ್ದ ಕಾಲದಲ್ಲಿ, ಅಂದರೆ ೧೬೩೨ರಲ್ಲಿ, ಇಂಡಿಯಾಕ್ಕೆ ಬಂದ ಒಬ್ಬ ಸಾಮಾನ್ಯ ಪ್ರವಾಸಿ. ವ್ಯಾಪಾರಕ್ಕಾಗಿ ಇಲ್ಲಿಗೆ ಇಂಗ್ಲಿಷ್ ಹಡಗೊಂದು ಬಂದಿತು. ಅದರಲ್ಲಿ ಒಬ್ಬ ನೌಕರನಾಗಿ, ಅಂದರೆ 'ಕ್ವಾರ್ಟರ್ ಮಾಸ್ಟರ್' ಆಗಿ ಬ್ರೂಟನ್ ಬಂದ. ಹಡಗು ಕಾರೋಮಂಡಲ (ಚೋಳಮಂಡಲ) ತೀರದ ಮಸುಲಿಪಟ್ಟಣದಲ್ಲಿ ಲಂಗರುಹಾಕಿತು. ಹಡಗಿನಿಂದ ಇಳಿದು ವರ್ತಕರೂ ಬ್ರೂಟನನೂ ಆಗ್ಗೆ ಬಂಗಾಳ ರಾಜ್ಯಕ್ಕೆ ಸೇರಿದ್ದ ಕಟಕ್ ಎಂಬ ಪಟ್ಟಣಕ್ಕೆ ಹೋದರು. ಯಾವ ಅಡೆತಡೆಗಳಿಲ್ಲದೆ ವ್ಯಾಪಾರ ಸಾಪಾರ ಮಾಡಲು ಒಂದು ಫರ್ಮಾನನ್ನು (ಪರವಾನಗಿಯನ್ನು) ಅಲ್ಲಿಯ ನವಾಬರಿಂದ ಪಡೆದರು. ಫರ್ಮಾನ್ ಪಡೆದು ವ್ಯಾಪಾರ ಮುಗಿಸಿಕೊಂಡ ಮೇಲೆ ಹಡಗು ಇಂಗ್ಲೆಂಡಿಗೆ ಹಿಂದಿರುಗಿತು. ಬ್ರೂಟನ್ ಸಹ ಅದರಲ್ಲಿ ಸ್ವದೇಶಕ್ಕೆ ಹಿಂದಿರುಗಿದ.

ಇಷ್ಟೇ ಸಂಗತಿ ಈತನ ಬಗ್ಗೆ ಗೊತ್ತಿರುವುದು. ಇಂಡಿಯಾಕ್ಕೆ ಬಂದ ಅನೇಕ ಇಂಗ್ಲಿಷಿನವರಲ್ಲಿ ಈತನು ಒಬ್ಬನಾಗಿದ್ದುದರಿಂದ ಈತನ ವೈಯಕ್ತಿಕ ವಿಷಯಗಳ ಬಗ್ಗೆ ಹೆಚ್ಚು ತಿಳಿಯದು. ಇಷ್ಟು ಹೇಳಬಹುದು: ಈತ ಹಡಗಿನ ಸಾಮಾನ್ಯ ನೌಕರನಾದರೂ ಈ ದೇಶಕ್ಕೆ ಬಂದಾಗ ಇಲ್ಲಿ ಕಂಡ ಸಂಗತಿಗಳನ್ನು ವಿವರವಾಗಿ ನೋಡಿ ಬರೆದಿಡುವ ಮನಸ್ಸುಮಾಡಿದ ಸೂಕ್ಷ್ಮಮತಿ ಎಂದು. ಈತನು ಬರೆದ ಪ್ರವಾಸ ಕಥನ ತುಂಬ ಚಿಕ್ಕದು. ಆದರೂ ಉಪಯುಕ್ತವಾದುದು.

ಇನ್ನೂರೈವತ್ತು ಟನ್ ತೂಕದ 'ಹೋಪ್‌ವೆಲ್' ಎಂಬ ಹಡಗು ಲಂಡನ್ ಬಂದರಿನಿಂದ ಹೊರಟಿತಷ್ಟೆ. ಅದರಲ್ಲಿ ನಾನೂ ಕ್ವಾರ್ಟರ್ ಮಾಸ್ಟರ್ (Quarter Master)[೧] ಆಗಿ ನೇಮಿಸಲ್ಪಟ್ಟು ಹೊರಟೆ. ದೀರ್ಘವೂ ಬೇಜಾರುಹಿಡಿಸುವಂತಹದೂ ಆದ ನಮ್ಮ ಏಳು ವರ್ಷಗಳ ಸಮುದ್ರಯಾನದಲ್ಲಿ ಹಡಗು ಯಾವ ಯಾವ ಬಂದರಿಗೆ ಹೋಯಿತು, ಎಲ್ಲೆಲ್ಲಿ ತಂಗಿತು ಎಂಬುದನ್ನೂ ಅಲ್ಲಲ್ಲಿ ತಂಗಿದಾಗ ತಿಳಿದುಬಂದ ಅನೇಕ ವಿಷಯಗಳನ್ನೂ ಬರೆದಿಟ್ಟುಕೊಂಡೆ. ಆದರೆ ಆಮೇಲೆ ಗೊತ್ತಾಯಿತು, ನನಗಿಂತ ಮುಂಚೆಯೇ ಹೆಚ್ಚು ತಿಳುವಳಿಕಸ್ತರು ಅವನ್ನೆಲ್ಲಾ ಹೇಳಿದ್ದಾರೆ ಎಂದು. ಈ ಕಾರಣ ಅವನ್ನು ಮತ್ತೆ ಹೇಳುವ ಗೋಜಿಗೆ ಹೋಗದೆ ಯಾವುದನ್ನು ಪೂರ್ತಿಯಾಗಿ ಹೇಳಿಲ್ಲವೋ ಅಥವಾ ಹೇಳಿಯೇ ಇಲ್ಲವೋ ಅಂಥ ವಿಷಯಗಳನ್ನು ಮಾತ್ರ ಹೇಳಬೇಕೆಂದು ಮನಸ್ಸುಮಾಡಿರುವೆ.

೧೬೩೨ನೆಯ, ಮಾರ್ಚಿ ೨೨ ರಂದು ನಾನು ಕಾರೊಮಂಡಲ ನಾಡಿನಲ್ಲಿ ಮತ್ತಿತರ ಆರು ಜನ ಇಂಗ್ಲಿಷಿನವರೊಡನೆ ವ್ಯಾಪಾರ ಸಾಪಾರದ ದೊಡ್ಡ ಪಟ್ಟಣವಾದ ಮಸುಲಿಪಟ್ಟ ಎಂಬ ಸ್ಥಳದಲ್ಲಿ ಇರುವಾಗ, ಅಲ್ಲಿದ್ದ 'ಏಜೆಂಟ್' ಮಿ॥ ಜಾನ್ ನಾರಿಸ್ (Mr. John Norris) ಎಂಬುವರು ಇಬ್ಬರು ವರ್ತಕರನ್ನು ಬಂಗಾಳದಲ್ಲಿ ಒಂದು ಫ್ಯಾಕ್ಟರಿ (ಗಡಂಗು) ಸ್ಥಾಪಿಸುವ ಉದ್ದೇಶದಿಂದ ಅಲ್ಲಿಗೆ ಕಳುಹಿಸಬೇಕೆಂದು ತೀರ್ಮಾನ

---

೧. ಕ್ವಾರ್ಟರ್ ಮಾಸ್ಟರ್ : ಚುಕ್ಕಾಣಿ ತಿರುಗಿಸುವುದು, ಸಂಕೇತಗಳ ಉಸ್ತುವಾರಿ, ಸಾಮಾನುಗಳನ್ನು ಕುಳಿಗೆ ತುಂಬಿಸುವುದು ಮೊದಲಾದ ಕೆಲಸಗಳ ಜವಾಬ್ದಾರಿಯುಳ್ಳ ಹಡಗಿನ ಒಬ್ಬ ಸಣ್ಣ ಅಧಿಕಾರಿ.

ಮಾಡಿದರು. ಆ ಇಬ್ಬರು ವರ್ತಕರೊಡನೆ ಆರು ಜನ ಇಂಗ್ಲಿಷರು ಹೋಗಬೇಕೆಂದು ಹೇಳಿದರು. ಆ ಆರು ಜನರಲ್ಲಿ ನಾನೂ ಒಬ್ಬ. ಅಲ್ಲಿಯ (ಬಂಗಾಳದ) ನವಾಬನಿಗೆ ಒಂದು ನಜರನ್ನು ಒಪ್ಪಿಸಿ, ಅವನ ನಾಡಿನಲ್ಲಿ ಹಾಗೂ ಬಂದರುಗಳಲ್ಲಿ ಸುಂಕ ಸಾರಿಗೆ ಗಳಿಲ್ಲದೆ ವ್ಯಾಪಾರ ಮಾಡಲು ಅನುಮತಿ ಪಡೆದುಕೊಂಡು ಬರುವಂತೆ ಏಜೆಂಟರು ವರ್ತಕರಿಗೆ ಆದೇಶ ನೀಡಿದರು. ನಮ್ಮ ಸಮುದ್ರಯಾನಕ್ಕೆ 'ಜಂಕ್' (Junk—ಒಂದು ಬಗೆಯ ಸಣ್ಣ ಹಡಗು) ಒಂದನ್ನು ಮುಸುಲಿಪಟ್ಟಣದಲ್ಲಿ ಬಾಡಿಗೆ ಪಡೆದೆವು. ಏಪ್ರಿಲ್ ೬ನೆಯ ತಾರೀಖು ಹೊರಟು ಅನೇಕ ಕಷ್ಟಗಳಿಂದಲೂ ಅಪಾಯಗಳಿಂದಲೂ ಪಾರಾಗಿ ಹರ್ಸಾಪುರ (Harassapoore—ಇದು ಗೋದಾವರಿ ನದೀಮುಖದಲ್ಲಿ ರುವ ನರಸಾಪುರ ಇರಬಹುದೆ? ಅಥವಾ ಅದರ ಮೇಲೆ ಕಳಿಂಗಪಟ್ಟದ ಬಳಿ ಇರುವ ನರಸಣ್ಣಪೇಟೆಯೆ?) ಎಂಬ ನಗರದ ಬಳಿ ೨೧ನೆಯ ಏಪ್ರಿಲ್ ಈಸ್ಟರ್ ಹಬ್ಬದ ದಿನ (Easter Day) ಲಂಗರುಹಾಕಿದೆವು. ಹರ್ಸಾಪುರ ಸಾಕಷ್ಟು ಸುರಕ್ಷಿತವಾದ ಸ್ಥಳ. ಇಬ್ಬರು ವರ್ತಕರಲ್ಲಿ ಒಬ್ಬನಾದ ರೇಫ್ ಕಾರ್ಟ್‌ರೈಟ್ (Ralph Cartright) ಹರ್ಸಾಪುರದ ಅಧಿಪತಿಗೆ ತಾನು ಬಂದಿರುವ ಸಂಗತಿಯನ್ನು ತಿಳಿಸುವುದಕ್ಕೆ ಏರ್ಪಾಡು ಮಾಡಿದರು. ನಾವು ಬಂದರಿನಲ್ಲಿ ಲಂಗರುಹಾಕಿರುವಾಗ ಪೋರ್ಚುಗಲ್ ಹಡಗೊಂದು ನಮ್ಮ ಮೇಲೆ ಬೀಳಲು ಪ್ರಯತ್ನ ಪಟ್ಟಿತು. ಆದರೆ ಯಾವಾಗ ನಾವು ಅದನ್ನು ಎದುರಿಸಲು ಸಿದ್ಧರಾದೆವೋ ಆಗ ಅದು ದೂರ ಹೊರಟುಹೋಯಿತು.

ಇಪ್ಪತ್ತೆರಡನೆಯ ತಾರೀಖು ಕಾರ್ಟ್‌ರೈಟ್ ಹರ್ಸಾಪುರದ ಅಧಿಪತಿಯನ್ನು ನೋಡಲು ಹೋದರು. ಆ ದಿನ, ಅಂದರೆ ೨೪ನೆಯ ತಾರೀಖು, ಆ ಪ್ರೋರ್ಚುಗಲ್ ಹಡಗಿನ ಯಜಮಾನ ಊರಿನಲ್ಲಿ ಸಿಕ್ಕಿದ ಪುಂಡುಪೋಕರಿಗಳನ್ನು ಪುಸಲಾಯಿಸಿ ನಮ್ಮ ಕಾರ್ಟ್‌ರೈಟ್ ಮತ್ತು ಥಾಮಸ್ ಕೋಲ್ಲಿ (Thomas Colley—ಇನ್ನೊಬ್ಬ ವರ್ತಕ) ಇವರುಗಳ ಮೇಲೆ ಬೀಳುವಂತೆ ಮಾಡಿದ. ಸದ್ಯ ಸ್ಥಳದ ಅಧಿಕಾರಿಯೊಬ್ಬ ತನ್ನ ೨೦೦ ಜನ ಸಿಬ್ಬಂದಿಯ ಸಮೇತ ಬಂದು ಅವರನ್ನು ಉಳಿಸಿದ. ಅವರಿಲ್ಲದೇ ಇದ್ದರೆ ನಮ್ಮವರನ್ನು ಸಾಯಿಸಿಬಿಡುತ್ತಿದ್ದರು. ಆದರೂ ಕೋಲ್ಲಿಯ ಕೈಗೆ ಪೆಟ್ಟಾಯಿತು. ನಮ್ಮ ಕಡೆಯ ಇನ್ನೊಬ್ಬನ ಕೈಕಾಲುಗಳಿಗೆ ಏಟುಬಿತ್ತು. ನಮ್ಮ ದೋಣಿಯ 'ಮೊಕೋವ' (Mockova)[೧] ನಿಗೆ ಸೊಂಟಕ್ಕೆ ತಿವಿದಿದ್ದರು.

ಏಪ್ರಿಲ್ ೨೭ನೆಯ ತಾರೀಖು ನಾವು, ಅಂದರೆ ಕಾರ್ಟ್‌ರೈಟ್, ನಾನು ಮತ್ತು ಜಾನ್ ಡಾಬ್‌ಸನ್ ಎಂಬ ಮೂವರು ಹರ್ಸಾಪುರದ ಅಧಿಪತಿಯಿಂದ ಬೀಳ್ಕೊಂಡು ಮುಂದಿನ ಪ್ರಯಾಣ ಆರಂಭಿಸಿದೆವು. ಕೋಲ್ಲಿ ಮತ್ತು ಇನ್ನು ನಾಲ್ಕು ಜನರನ್ನು ಹರ್ಸಾ ಪುರದಲ್ಲಿಯೇ ಬಿಟ್ಟು ಕಟಕ್‌ನಲ್ಲಿರುವ ನವಾಬನ ಆಸ್ಥಾನದಿಂದ ನಾವು ಸುದ್ದಿ ಕಳುಹಿಸುವ

---

೧. ಮೊಕೋವ: ಇಂಡಿಯಾದ ಮಾರ್ಗದರ್ಶಿ (Indian Pilot). ಅಂದರೆ ಹೊಸದಾಗಿ ಬಂದ ಹಡಗು ಮತ್ತು ದೋಣಿಗಳಿಗೆ ಬಂದರಿನ ಮಾರ್ಗತೋರಿಸುವವ.

ವರೆಗೆ ಅಲ್ಲಿಯೇ ಇರಬೇಕೆಂದು ಹೇಳಿದೆವು. ಹರ್ಸಾಪುರದಲ್ಲಿ ಚಿನ್ನ, ಬೆಳ್ಳಿ, ಬಟ್ಟೆ ಮತ್ತು ಸಂಬಾರವಸ್ತುಗಳನ್ನು ಕೊಂಡುಕೊಂಡು, ಎರಡು ಎರಡೂವರೆ ಹರಿದಾರಿ ದೂರ ನೀರಿನ ಮೇಲೆ ಪ್ರಯಾಣಮಾಡಿದೆವು. ಆಮೇಲೆ ನಮ್ಮ ಸಾಮಾನುಗಳನ್ನು ಗಾಡಿಗಳಲ್ಲಿ ಹೇರಿಕೊಂಡು ಬಲ್ಕಡ (Balkkada) ಎಂಬ ದೊಡ್ಡ ಪಟ್ಟಣವನ್ನು ಮುಟ್ಟಿದೆವು. ಇಲ್ಲಿಗೆ ಬರುವ ಹೊತ್ತಿಗೆ ಸೂರ್ಯ ಮುಳುಗಿ ಆಗಲೇ ಮೂರು ಗಂಟೆಯಾಗಿತ್ತು.

ಮಾರನೆಯ ದಿನ ಇಲ್ಲಿಯ ಅಧಿಪತಿ ಬಂದು ನಮ್ಮ ವರ್ತಕರನ್ನು ಕಂಡು ತನ್ನ ಕೈಲಾದ ಸಹಾಯ ಮಾಡುವುದಾಗಿ ಭರವಸೆ ಕೊಟ್ಟನು. ವಾಸ್ತವವಾಗಿ ಈತ ತನ್ನ ಮಾತಿನಂತೆ ತಪ್ಪದೆ ನಡೆದುಕೊಂಡನು. ನಮ್ಮ ಸವಾರಿಗೆ ಕುದುರೆಗಳನ್ನೂ ಸಾಮಾನು ಹೊರಲು ಆಳುಕಾಳುಗಳನ್ನೂ ಒದಗಿಸಿದನು. ಇಲ್ಲಿ ಸಾಮಾನುಗಳನ್ನು ಗಾಡಿಯಿಂದ ಇಳಿಸಿ ತಲೆಯ ಮೇಲೆ ಹೊರಬೇಕಾಗಿತ್ತು. ಅಧಿಪತಿಯೂ ಅವನ ಕಡೆಯವರೂ ವಾದ್ಯಸಮೇತ ಊರಿನ ಹೊರಗೆ ಅರ್ಧ ಮೈಲಿ ದೂರದವರೆಗೂ ಬಂದು ನಮ್ಮನ್ನು ತುಂಬ ಮರ್ಯಾದೆಯಿಂದ ಕಳುಹಿಸಿಕೊಟ್ಟರು. ದಾರಿ ತೋರಿಸಲು ಮತ್ತು ನಮಗೆ ಒದಗಿಸಿದ ಕುದುರೆಗಳನ್ನು ಹಿಂದಕ್ಕೆ ತರಲು ಆಳುಗಳನ್ನೂ ಒದಗಿಸಿದರು.

ಬಲ್ಕಡ ದೊಡ್ಡ ಊರು. ಇಲ್ಲಿ ಅನೇಕ ನೇಕಾರರು ಇದ್ದಾರೆ. ಈ ಪ್ರದೇಶಕ್ಕೆ ಬೇಕಾದ ಬಟ್ಟೆಯಲ್ಲಿ ಬಹುಭಾಗ ಈ ಊರಿನಲ್ಲಿ ತಯಾರಾಗುತ್ತದೆ. ಬೆಳಗ್ಗೆ ಹನ್ನೊಂದು ಹನ್ನೆರಡು ಗಂಟೆಯ ಹೊತ್ತಿಗೇ ಇಲ್ಲಿ ತಡೆಯಲು ಅಸಾಧ್ಯವಾದ ಸೆಖೆ. ಈ ಕಾರಣ ನಾವು ಮುಂದೆ ಪ್ರಯಾಣಮಾಡುವುದು ಆಗದಮಾತಾಯಿತು. ಸೆಖೆ ಎಂದರೆ ಅದೇನು ಸಾಮಾನ್ಯವೇ? ಬೆಂಕಿಯ ಕೆಂಡದಂತಹ ಕಾವು, ಆ ಬಿಸಿಲು ಧಗೆ. ನಾನಿಲ್ಲಿಯವರೆಗೂ ಇಂಥ ಧಗೆಯನ್ನು ಅನುಭವಿಸಿರಲಿಲ್ಲ. ಸಧ್ಯ ದಾರಿಯಲ್ಲಿ ಮರಗಿಡಗಳು ಇದ್ದುದರಿಂದ ನಾವು ಬದುಕಿಕೊಂಡೆವು.

ಸೂರ್ಯ ಪಶ್ಚಿಮದ ಕಡೆಗೆ ವಾಲುವವರೆಗೆ ಮೂರು ಗಂಟೆಗಳ ಕಾಲ ಕಾದು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ಸುಮಾರು ಎರಡು ಗಂಟೆಗಳ ಕಾಲ ಪ್ರಯಾಣಮಾಡಿದ ಮೇಲೆ ನಮಗೆ ಹರ್ಸಾಪುರ[೧] ಪಟ್ಟಣ ಸಿಕ್ಕಿತು. ನವಾಬನ ಅಪ್ಪಣೆಯ ಮೇಲೆ ಒಬ್ಬ ಹಿರಿಯ ಮನುಷ್ಯನು ಇಲ್ಲಿಗೆ ಬಂದು ನಮ್ಮನ್ನು ದೊಡ್ಡ ದೇವಸ್ಥಾನವೊಂದರ ಮುಂದೆ ಎದುರುಗೊಂಡು ಸತ್ಕಾರಮಾಡಿದನು. ಈತನ ಹೆಸರು ಮೆರ್ಸಿಮೊಯೀನ್ ಎಂದು. ಈತ ನಮ್ಮ ಊಟೋಪಚಾರಗಳಿಗೂ ಒಳ್ಳೆಯ ವ್ಯವಸ್ಥೆ ಮಾಡಿದ್ದ. ಊಟವಾದ ಮೇಲೆ ನಾವು ನಮ್ಮ ನಮ್ಮ ಸಾಮಾನುಗಳೊಡನೆ ಸತ್ರವೊಂದರಲ್ಲಿ ತಂಗಿದೆವು. ಆದರೆ ಮೆರ್ಸಿಮೊಮೀನ ತನ್ನ ಪರಿವಾರದೊಡನೆ ದೇವಸ್ಥಾನದ ಮುಂದೆ ಹಾಕಿದ್ದ ಗುಡಾರಗಳಲ್ಲಿ ತಂಗಿದ.

---

೧. ಇದು ಮೇಲೆ ಹೇಳಿದ ರೇವುಪಟ್ಟಣ ಹರ್ಸಾಪುರವಾಗಿರದೆ ಬೇರೊಂದು ಹರ್ಸಾಪುರವಾಗಿರಬೇಕು.

ಏಪ್ರಿಲ್ ೩೦ರ ಬೆಳಗ್ಗೆ ನಾವು ಕಟಕ್ ನಗರಕ್ಕೆ ಹೊರಟೆವು. ಹಗಲು ರಾತ್ರಿಯೆಲ್ಲಾ ಪ್ರಯಾಣ ಮಾಡಿ ಮೂರನೆಯ ದಿನ ಪ್ರಾತಃಕಾಲ ಮೂರು ನಾಲ್ಕು ಗಂಟೆಯ ವೇಳೆಗೆ ಕಟ್ಟಕ್‌ನಲ್ಲಿದ್ದ ಮೆರ್‍ಸಿಮೋಮೀನನ ಮನೆಯನ್ನು ತಲುಪಿದೆವು. ಇಲ್ಲಿಯೂ ನಮ್ಮನ್ನು ತುಂಬ ಚೆನ್ನಾಗಿ ನೋಡಿಕೊಳ್ಳಲಾಯಿತು. ತಿನ್ನುವುದಕ್ಕೂ ಕುಡಿಯುವು ದಕ್ಕೂ ತಕ್ಕ ಏರ್ಪಾಡುಮಾಡಲಾಗಿತ್ತು. ಇಲ್ಲಿ ಸಿಕ್ಕುವ ಹಣ್ಣು ಹಂಪಲುಗಳನ್ನು ಒದಗಿಸಿದರು.

ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ನಾವು ಬಂದಿರುವ ಸುದ್ದಿಯನ್ನು ಮೆರ್‍ಸಿ ಮೊಮೀನನು ನವಾಬನಿಗೆ ತಿಳಿಸಿದನು. ನಮ್ಮ ಆಗಮನವನ್ನು ಕೇಳಿದ ನವಾಬನು ನಾವಿದ್ದ ಕಡೆಗೆ ಭಾರಿ ಭೋಜನ ಕಳುಹಿಸಿಕೊಟ್ಟನು. ಅಡುಗೆ ಬಹು ಚೆನ್ನಾಗಿತ್ತು. ಮಧ್ಯಾಹ್ನ ನಾವು ಆಸ್ಥಾನಕ್ಕೆ ಬರಬೇಕೆಂದು ನವಾಬನೀದ ಅಪ್ಪಣೆ ಬಂದಿತು. ಆಸ್ಥಾನ ವಿರುವುದು ಕಟಕ್‌ನಿಂದ ಅರ್ಧಮೈಲಿ ದೂರದ ಮಲ್ಕಂಡಿ (Malkandy) ಎಂಬಲ್ಲಿ.

ನಾವೆಲ್ಲಾ ಮಲ್ಕಂಡಿಗೆ ಹೊರಟೆವು. ಮೆರ್‍ಸಿಮೊಮೀನನ ಮನೆಯಿಂದ ಹೊರಟ ನಾವು ದಾರಿಯಲ್ಲಿದ್ದ ಕಲ್ಲುಸಾರವನ್ನು ದಾಟಿ ಒಂದು ಹೆಬ್ಬಾಗಿಲನ್ನು ಪ್ರವೇಶಿಸಿದೆವು. ಅದನ್ನು ದಾಟಿದ ಮೇಲೆ ನಮಗೆ ಒಂದು ಮಾರುಕಟ್ಟೆ ಸಿಕ್ಕಿತು. ಇಲ್ಲಿ ವಿಧ ವಿಧ ಹಣ್ಣು ಹಂಪಲು, ನಾರು ಬೇರು, ಮೀನು ಮಾಂಸ, ಕೋಳಿ ಕೊಕ್ಕರೆ, ಹಕ್ಕಿ ಪಕ್ಕಿ ಮತ್ತು ಇತರ ನಿತ್ಯೋಪಯೋಗಿ ವಸ್ತುಗಳನ್ನು ಮಾರುತ್ತಿದ್ದರು. ಈ ಮಾರುಕಟ್ಟೆಯನ್ನು ದಾಟಿ ಮುಂದೆ ಹೋದಾಗ ಮತ್ತೊಂದು ಹೆಬ್ಬಾಗಿಲು ಸಿಕ್ಕಿತು. ಇಲ್ಲಿ ಐವತ್ತು ಜನ ಸಶಸ್ತ್ರ ಪಹರೆಯವರು ನಿಂತಿದ್ದರು. ಈ ಹೆಬ್ಬಾಗಿಲನ್ನು ದಾಟಿ ಮುಂದೆ ಹೋದಾಗ ಕಲ್ಲು ಹಾಸಿದ್ದ ದೊಡ್ಡ ಬೀದಿಯೊಂದು ಸಿಕ್ಕಿತು. ಈ ಬೀದಿಯ ಇಕ್ಕೆಲಗಳಲ್ಲಿ ಬಹು ಬೆಲೆಯಾದ ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಕೆಲಸದಲ್ಲಿ ವರ್ತಕರು ತೊಡಗಿರುವುದನ್ನು ನೋಡಿದೆವು.

ಇಲ್ಲಿಂದ ಮುಂದೆ ಸಾಗಿದಾಗ ಮೂರನೆಯ ಹೆಬ್ಬಾಗಿಲು ಸಿಕ್ಕಿತು. ಇಲ್ಲಿ ನೂರು ಜನ ಸಶಸ್ತ್ರ ಪಹರೆಯವರು ಇದ್ದರು. ಈ ಹೆಬ್ಬಾಗಿಲಿನಿಂದ ನವಾಬನ ಮನೆಯವರೆಗೆ ದೊಡ್ಡದಾದ ಒಂದು 'ಪಗೋಡ' ಅಥವಾ 'ಪಗೋಡ್' (Pagoda or Pagod =ದೇವಸ್ಥಾನ) ಇರುವುದು ಕಂಡಿತು. ಮುಂದೆ ಸಾಗಿದಾಗ ನಮಗೆ ನಾಲ್ಕನೆಯ ಹೆಬ್ಬಾಗಿಲು ಸಿಕ್ಕಿತು. ಇದು ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಿದ ಎರಡು ಅಂತಸ್ತಿನ ಕಟ್ಟಡ. ಇಲ್ಲಿ ನೂರೈವತ್ತಕ್ಕೂ ಹೆಚ್ಚು ಜನ ಪಹರೆಯವರಿದ್ದರು.

ಈ ಹೆಬ್ಬಾಗಿಲನ್ನು ದಾಟಿದ ಮೇಲೆ ದೊಡ್ಡ ಬೀದಿಯೊಂದು ಸಿಕ್ಕಿತು. ಇದು ತುಂಬ ಅಗಲವಾಗಿತ್ತು. (ಲಂಡನ್‌ನ) ಚಾರಿಂಗ್ ಕ್ರಾಸ್ (Charing Cross) ಮತ್ತು ವೈಟ್ ಹಾಲ್ (White Hall)—ಇವೆರಡಕ್ಕೂ ಮಧ್ಯೆ ಇರುವ ಅಗಲಕ್ಕಿಂತ ಹೆಚ್ಚು ಅಗಲವಾಗಿತ್ತು. ಆದರೆ ಬೀದಿಯ ಅಕ್ಕಪಕ್ಕ ಮನೆಗಳಿರಲಿಲ್ಲ. ಇಲ್ಲಿ ಸ್ವಲ್ಪ

ಹೊತ್ತು ನಿಂತು ನವಾಬನ ಅರಮನೆಯ ಕಡೆಗೆ ಹೊರಟೆವು. ಈ ಬೀದಿಯಲ್ಲಿ ಯಾವಾಗಲೂ ಸಾವಿರ ಕುದುರೆಗಳು ಸಿದ್ಧವಾಗಿ ನಿಂತಿರುತ್ತವೆ. ನವಾಬನ ಅಪ್ಪಣೆ ಯಾದರೆ ಸಾಕು ಒಂದು ಗಂಟೆಯೊಳಗೆ ಕಟಕ್ ಮತ್ತು ಮಲ್ಕಂಡಿ ಊರುಗಳಲ್ಲಿ ಮೂರು ಸಾವಿರ ಕುದುರೆಗಳು ಸಿದ್ಧವಾಗುತ್ತವೆ ಎಂದು ಗೊತ್ತಾಯಿತು. ಅರಮನೆಯ ಮುಂಭಾಗದ ಹೆಬ್ಬಾಗಿಲ ಬಳಿ ಮರದಿಂದ ಕಟ್ಟಿದ ದೊಡ್ಡ ಕಟ್ಟಡವಿದೆ. ಇಲ್ಲಿ ನಗಾರಿ ನೌಪತ್ತು ಮುಂತಾದ ನಾನಾ ತರಹ ವಾದ್ಯಗಳನ್ನು ಬೆಳಗ್ಗೆ ನಾಲ್ಕುಗಂಟೆಯಿಂದ ಎಂಟು ಗಂಟೆಯವರೆಗೆ ಬಾರಿಸುತ್ತಾರೆ.

ಹೆಬ್ಬಾಗಿಲ ಉತ್ತರದಲ್ಲಿ ಸಣ್ಣ ಶಿಖರದ ಒಂದು ಕಟ್ಟಡವಿದೆ. ಈ ಕಟ್ಟಡದಲ್ಲಿ ಎರಡು ದೊಡ್ಡ ಶಿಲಾವಿಗ್ರಹಗಳಿವೆ. ಈ ವಿಗ್ರಹಗಳ ಎದೆಯಲ್ಲಿ ಎರಡು ದೊಡ್ಡ ಕಬ್ಬಿಣದ ಕೊಳವೆಗಳಿವೆ. ವಿಗ್ರಹಗಳ ಅಡಿಯಲ್ಲಿ ಮಾಡಿರುವ ಯಾವುದೋ ತಂತ್ರದ ಕಾರಣದಿಂದಾಗಿ ಹಬ್ಬ ಹರಿದಿನಗಳಂದು ಈ ಕೊಳವೆಗಳ ಮೂಲಕ ಬೆಂಕಿ ಮತ್ತು ನೀರು ಬಿರುಸಿನಿಂದ ಹೊರಬರುವಂತೆ ಮಾಡಿರುತ್ತಾರೆ. ಹೆಬ್ಬಾಗಿಲ ಮತ್ತೊಂದು ಕಡೆ ಇನ್ನೊಂದು ಕಲ್ಲಿನ ಆನೆಯೊಂದಿದೆ. ಇದನ್ನು ಏಕೆ ನಿಲ್ಲಿಸಿದ್ದಾರೆಂದು ಗೊತ್ತಾಗಲಿಲ್ಲ.

ಅರಮನೆಯನ್ನು ಪ್ರವೇಶಿಸುವ ಕಡೆ ನೂರೈವತ್ತು ಜನ ಪಹರೆಯವರಿದ್ದರು. ದೊಡ್ಡ ದೊಡ್ಡ ಕಲ್ಲುಗಳನ್ನು ಗೇದು ಕಟ್ಟಿದ ಮೂರು ಅಂತಸ್ತಿನ ಕಟ್ಟಡ ಅರಮನೆ. ಅರಮನೆಯ ಪೂರ್ವಕ್ಕೆ ಇದ್ದ ಹೆಬ್ಬಾಗಿಲ ಬಳಿ ನೂರೈವತ್ತು ಜನ ಪಹರೆಯವರು ಇದ್ದರು. ಅಲ್ಲದೆ ನೀರನ್ನು ಅಳೆದು ವೇಳೆಯನ್ನು ಹೇಳುತ್ತಿದ್ದ ಜನರೂ ಇದ್ದರು. ವೇಳೆಯನ್ನು ಹೇಳುತ್ತಿದ್ದ ರೀತಿ ಹೀಗಿತ್ತು: ಮೂರು ಗ್ಯಾಲನ್‌ನಷ್ಟು ನೀರು ತುಂಬಿದ ದೊಡ್ಡ ಮಡಕೆಯ ತಳದಲ್ಲಿ ಕಿರು ತೂತಿರುವ ಇನ್ನೊಂದು ಚಿಕ್ಕ ಪಾತ್ರೆ ಇದೆ. ಆ ಕಿರು ತೂತಿನ ಮೂಲಕ ನೀರು ಪಾತ್ರೆಗೆ ಬರುತ್ತದೆ. ಅದು ತುಂಬಿದಾಗ ಕಂಚಿನ ಗಂಟೆ ಬಾರಿಸುತ್ತಾರೆ. ಈ ಗಂಟೆ ಭಾರಿ ಶಬ್ದ ಮಾಡುತ್ತದೆ. ಒಂದು ಸಲ ಬಾರಿಸುವುದಕ್ಕೆ 'ಗೂಮ್' (Goome) ಎಂತಲೂ, ನೀರು ತುಂಬಿಕೊಳ್ಳುವ ಸಣ್ಣಪಾತ್ರೆಗೆ 'ಗ್ರೀ' (Gree) ಎಂತಲೂ ಕರೆಯುತ್ತಾರೆ. ಎಂಟು ಗ್ರೀಗಳಿಗೆ ಒಂದು 'ಪರ್' (Par= ಪಹರ್=ಪಹರೆ). ಈ ಒಂದು ಪರ್ ನಮ್ಮ ಮೂರು ಗಂಟೆಗೆ ಸಮ. ಹಗಲು, ಬೆಳಗ್ಗೆ ಆರರಿಂದ ಆರಂಭವಾಗಿ ಸಂಜೆ ಆರು ಗಂಟೆಗೆ ಮುಗಿಯುತ್ತದೆ.

ಮಹಾದ್ವಾರವನ್ನು ದಾಟಿ ನಾವು ದರ್ಬಾರ್ ಮಂದಿರವನ್ನು ಪ್ರವೇಶಿಸಿದೆವು. ಈ ದರ್ಬಾರ್ ಮಂದಿರವನ್ನು ಅಂದ ಚೆಂದದ ಗಿಡಗಳಿಂದಲೂ ಹೂಗಳಿಂದಲೂ ಅಲಂಕಾರಮಾಡಿದ್ದಾರೆ. ಬೇರೊಂದು ಕಡೆಯಿಂದ ಬರುವ ನೀರು ಈ ಮಂದಿರದಲ್ಲಿ ಮಾಡಿರುವ ಸಣ್ಣ ಪುಟ್ಟ ಕಾಲುವೆಗಳ ಮೂಲಕ ಹರಿದು ಸ್ಥಳವನ್ನು ತಂಪಾಗಿರುವಂತೆ ಮಾಡಿದೆ. ನಾವು ಅರಮನೆಯನ್ನು ನೋಡುತ್ತ ಎರಡು ಗಂಟೆ ಕಾಲ ಕಳೆದೆವು. ಅರಮನೆಯ ಸಿಪಾಯಿಗಳೂ ಮತ್ತಿತರರೂ ನಮ್ಮನ್ನು ನೋಡಿದ್ದೂ ನೋಡಿದ್ದೆ. ಕೊನೆಗೆ ನವಾಬನು ಬರುತ್ತಾನೆಂಬ ಸುದ್ದಿ ಬಂದಿತು. ಈ ಸುದ್ದಿ ಬಂದ ಕೂಡಲೇ ಆ

ದರ್ಬಾರಿನ ಹಜಾರಕ್ಕೆ ಬಹು ಬೆಲೆಯಾದ ರತ್ನಗಂಬಳಿಗಳನ್ನು ಹಾಸಿದರು. ಮಧ್ಯೆ ಒಂದು ಕಡೆ ಬಂಗಾಳದಲ್ಲಿ ತಯಾರಾದ ಅತ್ಯಂತ ಹೆಚ್ಚಿನ ಬೆಲೆಯ ರತ್ನಗಂಬಳಿಯನ್ನು ಹಾಸಿ ಅದರ ಮೇಲೆ ಕೆಂಪು ಮಖಮಲ್ಲಿನಲ್ಲಿ ಮಾಡಿದ ಒರಗುದಿಂಬುಗಳನ್ನು ಹಾಕಿದರು. ರತ್ನಗಂಬಳಿ ಹಾರಾಡದಂತೆ ಅದರ ಮೂಲೆಗಳಿಗೆ ಜರತಾರಿ ಬಟ್ಟೆಯ ಬೆಲೆಯಾದ ದಿಂಬುಗಳನ್ನು ಇಟ್ಟರು.

ಕೊಟ್ಟಕೊನೆಗೆ ನವಾಬನು ಆಗಮಿಸಿದ. ಅವನನ್ನು ನಲವತ್ತು ಐವತ್ತು ಅಂಗ ರಕ್ಷಕರು ಹಿಂಬಾಲಿಸಿದರು. ನವಾಬನ ಸ್ವಂತ ತಮ್ಮನೇ ಅವನ ಮುಂದೆ ಕತ್ತಿ ಹಿಡಿದು ಬಂದ. ನಮ್ಮ ವರ್ತಕ ರೇಫ್ ಕಾರ್ಟ್‌ರೈಟ್‌ನನ್ನು ಆತನಿಗೆ ಪೋರ್ಟ್ಗಿಮೋಮೀನನು ಪರಿಚಯಮಾಡಿಕೊಟ್ಟ. ಕಾರ್ಟ್‌ರೈಟ್ ನವಾಬನಿಗೆ ತನ್ನ ಗೌರವ ಸಲ್ಲಿಸಿದ. ಪ್ರತಿಯಾಗಿ ನವಾಬ ಮುಂದಕ್ಕೆ ಬಗ್ಗಿ ವಂದಿಸಿ ತನ್ನ ಕಡೆಯ ಇಬ್ಬರ ಹೆಗಲ ಮೇಲೆ ಕೈಯಿಟ್ಟು ಕೊಂಡು ತಾನು ಹಾಕಿಕೊಂಡಿದ್ದ ಪಾದರಕ್ಷೆಗಳನ್ನು ತೆಗೆದು ನಿಂತುಕೊಂಡ. ಇವರ ಉದ್ದೇಶ ಕಾರ್ಟ್‌ರೈಟ್ ತನ್ನ ಪಾದಗಳಿಗೆ ನಮಸ್ಕಾರ ಮಾಡಲಿ ಎಂಬುದಾಗಿತ್ತು. ಕಾರ್ಟ್‌ರೈಟ್ ಎರಡು ಸಲ ಹಿಂದು ಮುಂದು ನೋಡಿದ. ಮೂರನೆಯ ಸಲ ಅವನನ್ನು ಬಗ್ಗಿಸಿ ನಮಸ್ಕಾರ ಮಾಡಿಸಿದರು. ಆ ಮೇಲೆ ರಾಜ (King = Navab) ಕುಳಿತುಕೊಂಡ. ಕಾರ್ಟ್‌ರೈಟ್‌ನ್ನು ತನ್ನ ತಮ್ಮನ ಬಳಿ ಕುಳಿತುಕೊಳ್ಳುವಂತೆ ನವಾಬನ ಅಪ್ಪಣೆಯಾಯಿತು. ಎಲ್ಲರೂ ದರ್ಜಿಯವರು ಕುಳಿತುಕೊಳ್ಳುವರೀತಿಯಲ್ಲಿ ಚಕ್ಕಲು ಬೊಕ್ಕಲು ಹಾಕಿ ಕುಳಿತುಕೊಂಡರು.

ಆಗಲೇ ಹೊತ್ತಾಗಿತ್ತು. ನಿಧಾನಮಾಡದೆ ನಾವು ತಂದಿದ್ದ ನಜರುಗಳನ್ನು ರಾಜನಿಗೆ ಒಪ್ಪಿಸಿದೆವು. ಇಪ್ಪತ್ತು ಪೌಂಡ್ ಲವಂಗ, ಇಪ್ಪತ್ತು ಪೌಂಡ್ ಜಾಪತ್ರೆ, ಇಪ್ಪತ್ತು ಪೌಂಡ್ ಜಾಕಾಯಿ, ಎರಡು ಕಟ್ಟು (bale) ಡ್ಯಾಮಾಸ್ಕ್ (damask) ಬಟ್ಟೆ, ಅರ್ಧ ಬೇಲು (bale) ಅಥವಾ ಹದಿನಾಲ್ಕು ಗಜ ಫ್ಲಾನೆಲ್ (flannel = ಉಣ್ಣೆ) ಬಟ್ಟೆ, ಒಂದು ಜೊತೆ ಗಿಲೀಟಿನ ಕಟ್ಟುಹಾಕಿದ ಕನ್ನಡಿಗಳು, ಜೋಡಿಕೊಳವೆ ಗಳ ಒಂದು ಪಿಸ್ತೂಲು, ಕಾಡುಹಕ್ಕಿ ಬೇಟೆಗೆಂದು ಹಗುರವಾದ ಎರಡು ಕಾಲಿನ ಒಂದು ಬಂದೂಕು (Fowling-piece)—ಇವನ್ನೆಲ್ಲಾ ನವಾಬನು ತುಂಬ ವಿಶ್ವಾಸ ಹಾಗೂ ಆಸಕ್ತಿಗಳಿಂದ ಸ್ವೀಕರಿಸಿದನು. ಅನಂತರ ಆತನು ನಾವು ಬಂದಿರುವ ಕಾರಣವೇನೆಂದು ಕೇಳಿದನು. ಇದಕ್ಕೆ ಉತ್ತರವಾಗಿ ನಮ್ಮ ವರ್ತಕ 'ಜಂಕನ್' (Junkan) ಅಂದರೆ ಸುಂಕ ಸಾರಿಗೆ ಇಲ್ಲದೆ ಅವನ ರಾಜ್ಯದಲ್ಲಿ ಸಲೀಸಾಗಿ ವ್ಯಾಪಾರ ನಡೆಸಲು ಪರವಾನಗಿ ಕೊಡಬೇಕೆಂದು ಕೇಳಿದನು. ಈ ಮಾತನ್ನು ಕೇಳಿದ ರಾಜನು ತನ್ನ ಆಪ್ತರೊಡನೆ ಸ್ವಲ್ಪ ಹೊತ್ತು ಆಲೋಚಿಸಿದನು. ಆದರೆ ಏನೊಂದೂ ಉತ್ತರ ಹೇಳಲಿಲ್ಲ.

ನಮ್ಮ ವರ್ತಕನು ಮತ್ತೆ ಕೆಲವು ಬೇಡಿಕೆಗಳನ್ನು ಸಲ್ಲಿಸಿದನು. ವ್ಯಾಪಾರ ಮಾಡುವುದಕ್ಕಾಗಿ ಈಸ್ಟ್ ಇಂಡೀಸಿಗೆ ಬರುವ ನಮ್ಮ ವರ್ತಕರು ತಮ್ಮ ಹಡಗುಗಳನ್ನು

ಅವು ದೊಡ್ಡವಾಗಲೀ ಚಿಕ್ಕವಾಗಲೀ ರಾಜನಿಗೆ ಸೇರಿದ ಬಂದರುಗಳು, ಅಳಿವೆಗಳು ಮತ್ತು ನದಿಗಳಲ್ಲಿ ಯಾವ ಅಡ್ಡಿ ಆತಂಕಗಳಿಲ್ಲದೆ ಓಡಾಡುವುದಕ್ಕೂ ಕಂಪೆನಿಗೆ (ಈಸ್ಟ್ ಇಂಡಿಯಾ ಕಂಪೆನಿಗೆ) ಸೇರಿದ ಹಡಗುಗಳನ್ನು ರಿಪೇರಿ ಮಾಡುವುದಕ್ಕೂ ಹೊಸ ಹಡಗುಗಳನ್ನು ಕಟ್ಟುವುದಕ್ಕೂ ನಮ್ಮ ಸರಕುಗಳನ್ನು ಯಾರ ಅಡ್ಡಿ ಆತಂಕಗಳಿಲ್ಲದೆ ಭೂಮಿಯ ಮೇಲೆ ಸಾಗಿಸುವುದಕ್ಕೂ ಚಿನ್ನ ಬೆಳ್ಳಿಯ ನಾಣ್ಯಗಳನ್ನು ಮತ್ತು ಸ್ಥಳದ ವರ್ತಕರಲ್ಲಿ ಚಾಲ್ತಿಯಲ್ಲಿರುವ ನಾಣ್ಯಗಳನ್ನು ಟಂಕಒತ್ತುವುದಕ್ಕೂ ಅನುಮತಿ ನೀಡ ಬೇಕೆಂದು ಹೇಳಿದನು.

ಇಷ್ಟು ಹೇಳಿ ಮುಗಿಸುವುದರೊಳಗೆ ನವಾಬನ ಗುರು (ಮುಲ್ಲಾ) ಎತ್ತಿದ ದನಿಯಲ್ಲಿ ಸಂಜೆಯ ಪ್ರಾರ್ಥನೆಗೆ ಕರೆ ಕೊಟ್ಟನು. ಕುಳಿತಿದ್ದ ರಾಜ ಆತುರದಲ್ಲಿ ಎದ್ದು ನಿಂತು ತನ್ನ ಪರಿವಾರ ಸಮೇತ ಪ್ರಾರ್ಥನೆಗೆ ಹೊರಟುಹೋದ. ಪ್ರಾರ್ಥನೆ ಮಾಡುವ ಸ್ಥಳಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸಿ ಮತ್ತೆ ಹಿಂತಿರುಗಿದ. ಅಲ್ಲಿಯವರೆಗೆ ನಾವು ಇದ್ದಲ್ಲಿಯೇ ಕಾಯುತ್ತಾ ಕುಳಿತಿದ್ದೆವು.

ರಾಜನು ಹಿಂದಿರುಗಿದ ಮೇಲೆ ಬೇರೆಲ್ಲ ಕೆಲಸಗಳನ್ನು ಬದಿಗಿಟ್ಟು ನಾವು ಸಲ್ಲಿಸಿದ ಮನವಿಯ ಪರಿಶೀಲನೆ ಆರಂಭವಾಯಿತು. ಇಷ್ಟರಲ್ಲಿ ಕತ್ತಲಾದ ಕಾರಣ ದೀಪ ಗಳನ್ನು ತಂದಿಟ್ಟರು. ಬೆಳ್ಳಿಯ ಆರು ದೀಪಗಳನ್ನು (Silver lanterns) ರಾಜನ ಮುಂದೆ ಬಹು ಮರ್ಯಾದೆಯಿಂದ ತಂದಿಟ್ಟರು. ಹಜಾರದ ಸುತ್ತಲೂ ಇದ್ದ ಕಟಕಟೆಯ ಬಳಿ ೧೩೦ ದೀಪಗಳನ್ನು ಇಟ್ಟರು. ದೀಪ ತಂದವರು ಅವನ್ನು ಇಟ್ಟು ಹೋದ ಮೇಲೆ ನಮ್ಮ ಬೇಡಿಕೆಯ ಪರಿಶೀಲನೆ ರಾತ್ರಿ ಎಂಟೊಂಬತ್ತು ಗಂಟೆಯವರೆಗೆ ನಡೆಯಿತು. ಆದರೆ ಯಾವುದೇ ಖಚಿತವಾದ ಉತ್ತರ ಬರಲಿಲ್ಲ. ನಾವು ನಮ್ಮ ಬಿಡಾರಕ್ಕೆ, ಅಂದರೆ ಕಟಕ್‌ನಲ್ಲಿದ್ದ ಮೆರ್ಸಿಮೊಮೀನನ ಮನೆಗೆ ಹಿಂದಿರುಗಿದೆವು. ದೀಪ ಹಿಡಿದುಕೊಂಡಿದ್ದ ಅನೇಕ ಜನ ನಮ್ಮನ್ನು ಹಿಂಬಾಲಿಸಿದರು. ಅವರು ನಮ್ಮ ಉಡುಗೆ ತೊಡುಗೆ ಗಳನ್ನು ನೋಡಿ ನೋಡಿ ಅಚ್ಚರಿಪಡುತ್ತಿದ್ದರು.

ಮಾರನೆಯ ದಿನ ಮಧ್ಯಾಹ್ನ ನಾವು ಮತ್ತೆ ನವಾಬನ ಆಸ್ಥಾನಕ್ಕೆ ಹೋದೆವು. ಅಲ್ಲಿ ನಮ್ಮ ಮೇಲೆ ಒಂದು ದೊಡ್ಡ ಆಪಾದನೆಯೇ ಕಾದಿತ್ತು. ಅದೇನೆಂದರೆ, ನಮ್ಮ ಮೇಲೆ ಬೀಳಲು ಬಂದ ಪೋರ್ಚುಗಲ್ ಹಡಗಿನ ನಕೋವ್ಡಾ (Nakovada) ನವಾಬನ ಮುಂದೆ ನಾವು ಅವನ ಹಡಗನ್ನು ಸ್ವಾಧೀನಪಡಿಸಿಕೊಂಡು ಅದರಲ್ಲಿದ್ದ ಸರಕುಗಳನ್ನು ಬಲಾತ್ಕಾರವಾಗಿ ವಶಪಡಿಸಿಕೊಳ್ಳಲು ಪ್ರಯತ್ನಮಾಡಿದೆವು ಎಂದು ದೂರು ಹೇಳಿದ್ದನಂತೆ. ಇಷ್ಟೇ ಅಲ್ಲದೆ ಆ ನಕೋವ್ಡಾ ಆಸ್ಥಾನಿಕನೊಬ್ಬನಿಗೆ ಭಾರಿ ಬಹುಮಾನವನ್ನಿತ್ತು ತನ್ನ ಕಡೆ ಮಾಡಿಕೊಂಡಿದ್ದ. ಈ ದೂರಿಗೆ ಉತ್ತರವಾಗಿ ನಮ್ಮ ವರ್ತಕ ಯಾವ ಹಡಗು ಅಥವಾ ನಾವೆ ಇಂಗ್ಲಿಷರಿಂದಾಗಲೀ ಅಥವಾ ಡೇನರು ಮತ್ತು ಡಚ್ಚರಿಂದಾಗಲೀ ಪರವಾನಗಿ ಪಡೆದಿಲ್ಲವೋ ಅಂಥ ಹಡಗು ಅಥವಾ ನಾವೆಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ನಮಗೆ ಉಂಟು ಎಂದು ಹೇಳಿದ.

ನಕೋಪ್ವಾಡ್ನ ತನ್ನ ಬಳಿ ಪರವಾನಗಿ ಇದೆ ಎಂದು ಹೇಳಿದ. ಆದರೆ ಆ ಪರವಾನಗಿ ಮೇಲೆ ಹೇಳಿದ ಮೂರು ರಾಷ್ಟ್ರಗಳಿಂದ ಪಡೆದದ್ದಾಗಿರದೆ 'ಫರಂಗಿ' ಎಂದು ಕರೆಯಲ್ಪಡುವ ಪೋರ್ಚುಗಲ್‌ರಿಂದ ಪಡೆದುದಾಗಿತ್ತು. ನಕೋಪ್ವಾಡ್ನ ಹೇಳಿಕೆ ಸುಳ್ಳಾಯಿತು. ನಾವು ಗೆದ್ದೆವು ಎಂದುಕೊಂಡಿರುವಷ್ಟರಲ್ಲಿ, ನಕೋಪ್ವಾಡ್ನ ಯಾವ ಆಸ್ಥಾನಿಕನನ್ನು ಒಲಿಸಿ ಕೊಂಡಿದ್ದನೋ ಅವನು ಆವನ ಪರವಾಗಿ ವಾದಿಸಿದ. ಸುಂಕವಿಲ್ಲದೆ ವ್ಯಾಪಾರ ಮಾಡಲು ಅನುಮತಿ ಬೇಡಲು ಬಂದ ನಮಗೆ ರಾಜನಿಗೆ ಸೇರಿದ ಸಮುದ್ರದ ಮೇಲೆ ಯಾವ ಅಧಿಕಾರವೂ ಇಲ್ಲ ಎಂದು ವಾದಿಸಿದ. ಇದು ರಾಜನಿಗೆ ಸರಿ ಎಂದು ಕಂಡುಬಂದಿತು. ಆದರೂ ಆ ಹಡಗು ಪೋರ್ಚುಗಲ್‌ರಿಗೆ ಸೇರಿದ ಪಿಪ್ಲಿ ಬಂದರಿನಿಂದ ತನಗೆ ಸೇರಿದ ಬಂದರಿಗೆ ಬಂದದ್ದು ತಪ್ಪು ಎಂಬ ಕಾರಣದಿಂದ ಹಡಗನ್ನೂ ಹಡಗಿನಲ್ಲಿದ್ದ ಸರಕುಗಳನ್ನೂ ಮುಟ್ಟುಗೋಲುಹಾಕಿಕೊಳ್ಳಲು ಅಪ್ಪಣೆಮಾಡಿದ. ಇದನ್ನು ಕೇಳಿ ನಮ್ಮ ವರ್ತಕನಿಗೆ ರೇಗಿತು. ಆ ಹಡಗೂ ಅದರಲ್ಲಿದ್ದ ಸರಕುಗಳೂ ತನಗೆ ಸೇರತಕ್ಕದ್ದು ನ್ಯಾಯ. ಹೀಗಿರುವಾಗ ತನಗೆ ವಿರುದ್ಧವಾಗಿ ವರ್ತಿಸಿದ ನವಾಬನ ಮೇಲೆ ಸಿಟ್ಟಾಗಿ ಮೇಲೆದ್ದು ನಿಂತು ಇಲ್ಲಿ ನ್ಯಾಯ ದೊರಕದಿದ್ದರೆ ಬೇರೆ ಕಡೆ ಅದನ್ನು ದೊರಕಿಸಿಕೊಳ್ಳುವುದಾಗಿ ಹೇಳುತ್ತಾ ನವಾಬನಿಗೆ ಯಾವ ರೀತಿಯಲ್ಲೂ ಗೌರವ ಸಲ್ಲಿಸದೆಯೇ ಹೊರಟುಬಿಟ್ಟ.

ಮಾರನೆಯ ದಿನ ಬೆಳಗ್ಗೆ ನವಾಬನು ತನ್ನ ಮುಖ್ಯ ಮೊಫ್ತೇಸರನನ್ನು ನಮ್ಮ ಬಳಿಗೆ ಕಳುಹಿಸಿ ನಮ್ಮನ್ನು ಕರೆಸಿಕೊಂಡ. ನಾವು ಮೆರ್ಸಿಮೊನೀಸನ ಸಮೇತ ದರ್ಬಾರಿಗೆ ಹೋದೆವು. ಅಲ್ಲಿ ಭಾರಿ ಜನ ನೆರೆದಿದ್ದರು. ಆತ ಬಂದು ಕುಳಿತುಕೊಂಡ ಮೇಲೆ ನಮ್ಮ ವರ್ತಕನ ಕಡೆ ಹಸನ್ಮುಖನಾಗಿ ನೋಡಿ ದುಭಾಷಿಯ ಮೂಲಕ 'ನೀವು ಏತಕ್ಕೆ ನಿನ್ನೆ ಇದ್ದಕ್ಕಿದ್ದಂತೆ ಹೊರಟುಹೋದಿರಿ?' ಎಂದು ಕೇಳಿದ. ನಮ್ಮ ವರ್ತಕನು ತುಂಬ ಬಿರುಸಾಗಿಯೇ ಉತ್ತರವಿತ್ತ. ನವಾಬನು ಕಂಪೆನಿಗೆ ತುಂಬ ಅನ್ಯಾಯ ಮಾಡಿದ್ದಾನೆಂತಲೂ, ತನ್ನ ಜೋರು ಜಬರ್ದ್‌ಸ್ತ್‌ಗಳನ್ನು ಚಲಾಯಿಸಿ ಕಂಪೆನಿಯ ಹಕ್ಕುಗಳನ್ನು ಕಸಿದುಕೊಂಡಿರುವನೆಂತಲೂ, ಇವನ್ನೆಲ್ಲಾ ಕಂಪೆನಿ ಸಹಿಸುವುದಿಲ್ಲವೆಂತಲೂ ಹೇಳಿದ. ಇದನ್ನು ಕೇಳಿದ ನವಾಬ ಪರ್ಷಿಯನ್ ಭಾಷೆಯಲ್ಲಿ ತನ್ನ ಕಡೆಯ ಶ್ರೀಮಂತನೊಬ್ಬನ ಮೂಲಕ ನಮ್ಮ ಕಂಪೆನಿಯ ಹಡಗುಗಳೆಷ್ಟು? ಅವು ಎಷ್ಟು ತೂಕದವುಗಳು? ವ್ಯಾಪಾರ ಮಾಡುವ ಸ್ಥಳ ಯಾವುದು? ಎಂಬ ಸಂಗತಿಗಳನ್ನು ತಿಳಿದುಕೊಂಡ. ಹಾಗೆಯೇ ಒಬ್ಬ ಪರ್ಷಿಯಾ ವರ್ತಕನಿಗೂ ಹೇಳಿಕಳುಹಿಸಿ ನಮ್ಮ ಕಂಪೆನಿ ಬಗ್ಗೆ ಆವನಿಂದಲೂ ವಿಷಯ ತಿಳಿದುಕೊಂಡ. ಆ ವರ್ತಕ ನಾವು ಕಾರೊಮಂಡಲ, ಇಂಡಿಯಾ ಮತ್ತು ಪರ್ಷಿಯಾ ಸಮುದ್ರ ತೀರಗಳಲ್ಲಿ ಭಾರಿ ವ್ಯಾಪಾರ ನಡೆಸುತ್ತಿರುವೆವೆಂತಲೂ, ನಮ್ಮ ಹಡಗಿನ ಶಕ್ತಿ ಅಪಾರವೆಂತಲೂ, ನಮ್ಮ ಹಡಗುಗಳು ನವಾಬನಿಗೆ ಸೇರಿದ ಬಂದರುಗಳಿಗೆ ಬರುವುದನ್ನು ತಪ್ಪಿಸುವುದು ಸಾಧ್ಯವಿಲ್ಲವೆಂತಲೂ ಹೇಳಿದ. ಇದನ್ನು ಕೇಳಿ ನವಾಬನು ಎದ್ದುನಿಂತು ನಮ್ಮ ವರ್ತಕನಿಗೆ ಚೆನ್ನಾಗಿ ಅರ್ಥವಾಗುತ್ತಿದ್ದ ಮೂರ್ ಭಾಷೆಯಲ್ಲಿ ಇಂಗ್ಲಿಷರು ಸುಂಕಸಾರಿಗೆಗಳಿಲ್ಲದೆ ವ್ಯಾಪಾರ ಮಾಡುವುದಕ್ಕೆ ಕೆಲವು

ಷರತ್ತುಗಳಿಗೊಳಪಡಿಸಿದ ಪರವಾನಗಿ ಕೊಡುವುದಾಗಿ ತಿಳಿಸಿದ. ಪರವಾನಗಿಯ ಷರತ್ತುಗಳೇನೆಂಬುದೂ ಆಗಲೇ ಇತ್ಯರ್ಥವಾಯಿತು.

ಮೂರನೆಯ ತಾರೀಖು ಪರವಾನಗಿಯನ್ನು ಬರೆದು ಸಿದ್ಧಪಡಿಸಿದರೂ ಅದಕ್ಕೆ ರುಜು ಮೊಹರು ಹಾಕಿದ್ದು ಮೇ ೫ ರಂದು.

ಮೇ ೬ನೆಯ ತಾರೀಖು ನವಾಬ ತನ್ನ ಅರಮನೆಯಲ್ಲಿ ಭಾರಿ ಔತಣವನ್ನೇ ರ್ಪಡಿಸಿದ. ಅವನ ಶ್ರೀಮಂತ ಸರದಾರರೂ ಅಧಿಕಾರಿಗಳೂ ನೆರೆದಿದ್ದರು. ನಮ್ಮ ವರ್ತಕ ಕಾರ್ಟ್‌ರೈಟ್‌ನನ್ನು ನವಾಬ ತನ್ನ ಬಳಿಯೇ ಕುಳ್ಳಿರಿಸಿಕೊಂಡು ಖುಷಿ ಪಡಿಸಿದ. ಊಟವಾದ ಮೇಲೆ ತನ್ನ ಕೈಯಿಂದಲೇ ಕಾರ್ಟ್‌ರೈಟನಿಗೆ ಉಡುಪನ್ನು ತೊಡಿಸಿ ಮರ್ಯಾದೆ ಮಾಡಿದ. ನಾವೆಲ್ಲ ಸಂಜೆ ಐದು ಗಂಟೆಯವರೆಗೆ ಇದ್ದು ಕಟಕ್‌ಗೆ ಹಿಂದಿರುಗಿದೆವು.

ಇದಿಷ್ಟು ಮಲ್ಕಂಡಿಯ ಆಸ್ಥಾನದಲ್ಲಿ ನಡೆದ ವಿಚಾರ. ನವಾಬನ ಅರಮನೆ ಬಹು ದೊಡ್ಡದು. ಅಲ್ಲದೆ ಭವ್ಯವಾಗಿಯೂ ಇದೆ. ಆದರೂ ಅವನು ಅದರಲ್ಲಿ ವಾಸಮಾಡುವುದಿಲ್ಲ. ರಾತ್ರಿಯ ಹೊತ್ತು ಅವನು ತನಗೆ ಬೇಕಾದ ಅಂಗರಕ್ಷಕರೊಡನೆ ಗುಡಾರಗಳಲ್ಲಿ ಮಲಗುತ್ತಾನೆ. ಒಬ್ಬ ಮೊಗಲನು ಕಟ್ಟಿಸಿದ ಮನೆಯಲ್ಲಿ ಇನ್ನೊಬ್ಬ ಮೊಗಲನು ಮಲಗುವುದಿಲ್ಲವಂತೆ. ಈ ಕಾರಣ, ನವಾಬ ತನ್ನ ಸಮಾಧಿಮಂದಿರ ವೊಂದನ್ನು ಕಟ್ಟಿಸುತ್ತಿದ್ದಾನೆ. ಈತ ತನ್ನ ಪ್ರಜೆಗಳಲ್ಲಿ ಕುಲೀನಮನೆತನದ ೩೦೦ ಹೆಣ್ಣುಗಳನ್ನು ಅಂತಃಪುರದಲ್ಲಿ ಇಟ್ಟುಕೊಂಡಿದ್ದಾನೆಂದು ತಿಳಿಯಿತು.

ಮೇ ೭ ರಂದು ನಾವು ಕಟಕ್ ಪಟ್ಟಣದಲ್ಲಿ ಅಡ್ಡಾಡಿದೆವು. ಜನಭರಿತವಾದ ಊರು ಇದು. ನಿತ್ಯ ಸಂತೆ ಸೇರುತ್ತದೆ.

ಮೇ ೮ ರಂದು ನಾವು ಪುನಃ ನವಾಬನ ಆಸ್ಥಾನಕ್ಕೆ ಹೋದೆವು. ಅವನ ರಾಜ್ಯ ದಲ್ಲಿ ಯಾವ ಅಡ್ಡಿ ಆತಂಕಗಳಿಲ್ಲದೆ ಕಾಗದ ಪತ್ರಗಳನ್ನು ಒಯ್ಯುವುದಕ್ಕೆ ಅನುಮತಿ ಪಡೆಯಲು ಹೋಗಿದ್ದೆವು. ರಾಜ (ನವಾಬ) ದರ್ಬಾರ್ ಹಜಾರದ ಹೊರಗಡೆ ತನ್ನ ಶ್ರೀಮಂತ ಸರದಾರರೊಡನೆ ಕುಳಿತಿದ್ದ. ಗೋಲ್ಕಂಡಾ ರಾಜನು ಮೊಗಲ್ ರಾಜ್ಯವನ್ನು ಆಗ್ನೇಯ ದಿಕ್ಕಿನಿಂದ ಪ್ರವೇಶಿಸುತ್ತಿರುವ ಕಾರಣ ಅವನ ಮೇಲೆ ಯುದ್ಧಮಾಡ ಬೇಕೆಂದು ಮೊಗಲ್ ಚಕ್ರವರ್ತಿ ನವಾಬನಿಗೆ ಆಜ್ಞೆಮಾಡಿದ್ದಾನೆಂದೂ ಆ ಬಗ್ಗೆ ತಕ್ಕ ಏರ್ಪಾಟುಮಾಡಲು ರಾಜ್ಯದ ಮುಖ್ಯಸ್ಥರನ್ನೂ ಸೇನಾಧಿಪತಿಗಳನ್ನೂ ಕರೆಸಿಕೊಂಡು ಅವರೊಡನೆ ಸಮಾಲೋಚನೆ ನಡೆಸುತ್ತಿದ್ದಾನೆಂದೂ ತಿಳಿಯಿತು. ಅವರಿಗೂ ಸೈನಿಕರಿಗೂ ಬಹುಮಾನಗಳನ್ನಿತ್ತು, ಪ್ರೋತ್ಸಾಹ ನೀಡುತ್ತಿದ್ದ. ಸೈನ್ಯದಲ್ಲಿ ಒಟ್ಟು ೩೦,೦೦೦ ಸೈನಿಕ ರಿದ್ದರು. ಇವರಲ್ಲಿ ರಾವುತರು ೧೦,೦೦೦ ಮತ್ತು ಕಾಲ್ದಳದವರು ೨೦,೦೦೦. ಇವರ ಅಸ್ತ್ರ ಶಸ್ತ್ರಗಳೆಂದರೆ ಬಿಲ್ಲುಬಾಣಗಳು ಮತ್ತು ಭರ್ಜಿಗಳಿಗಿಂತಲೂ ಹರಿತವಾದ ಎಸೆ ಈಟಿಗಳು. ಕೆಲವರು ಕತ್ತಿ ಗುರಾಣಿಗಳನ್ನು ಧರಿಸಿರುತ್ತಾರೆ. ಕೊನೆಗೆ ನಮ್ಮ ಕೆಲಸ ಗಳೆಲ್ಲಾ ಮುಗಿದುವು. ನಮ್ಮ ವರ್ತಕನೂ ನಾವೂ ರಾಜನಿಂದ ಬೀಳ್ಕೊಂಡೆವು. ರಾಜನಿಗೆ

ತನ್ನ ಕಾರ್ಯದಲ್ಲಿ ಯಶಸ್ಸು ದೊರೆಯಲಿ ಎಂದು ಹಾರೈಸಿ ನಾವೆಲ್ಲ ಅಲ್ಲಿಂದ ಹೊರಟು ಬಂದೆವು.

ಮೇ ೯ ರಂದು ನಾವು ನಮ್ಮ ಸಾಮಾನು ಸರಂಜಾಮುಗಳನ್ನೆಲ್ಲಾ ಗಂಟು ಮೂಟೆ ಕಟ್ಟಿಕೊಂಡು ರಾತ್ರಿ ಕಟಕ್‌ನಿಂದ ಹೊರಟೆವು. ೧೦ನೆಯ ತಾರೀಖು ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಹರ್‍ಸಾಪುರ ತಲುಪಿ ನಮ್ಮ ದುಭಾಷಿಯ ಮನೆಯಲ್ಲಿ ಊಟ ಮಾಡಿದೆವು.

ಮಾರನೆಯ ದಿನ ನಾವು ಪಟ್ಟಣದ ಕೊತ್ವಾಲನನ್ನು ಕಂಡು ರಾಜನು ಕೊಟ್ಟಿದ್ದ ಫರ್ಮಾನನ್ನು ತೋರಿಸಿದೆವು. ಆ ಫರ್ಮಾನನ್ನು ನೋಡಿದ ಕೊತ್ವಾಲ ತುಂಬ ಸಂಪ್ರೀತಿ ಯಿಂದ 'ಸಲಾಂ' ಮಾಡಿ ಗೌರವ ತೋರಿಸಿದ್ದಲ್ಲದೆ, ತನ್ನ ಕೈಲಾದ ಎಲ್ಲಾ ಸಹಾಯ ಮಾಡುವುದಾಗಿ ತಿಳಿಸಿದ. ನಾವು ಆತನಿಗೆ ಒಂದು ಪುಟ್ಟ ಬಹುಮಾನ ಕೊಟ್ಟೆವು.

ಮೇ ೧೨ನೆಯ ತಾರೀಖು ಥಾಮಸ್ ಕೋಲ್ಲಿಯವರೂ ಉಳಿದೆಲ್ಲಾ ಇಂಗ್ಲಿಷರು ಸರಕುಗಳ ಸಮೇತ ಹರ್‍ಸಾಪುರಕ್ಕೆ ಬಂದರು. ನಾವು ನಮ್ಮದೇ ಆದ ಬೇರೆ ಮನೆ ಕಟ್ಟುವವರೆಗೆ ಒಂದು ಮನೆ ಬಾಡಿಗೆಗೆ ಪಡೆದೆವು. ಹರ್‍ಸಾಪುರ ತುಂಬಾ ಜನವಸತಿ ಯುಳ್ಳ ಪಟ್ಟಣ. ಅನೇಕ ವರ್ತಕರು ಇಲ್ಲಿ ನೆಲೆಸಿದ್ದಾರೆ. ಅನೇಕ ಸರಕುಗಳು ಇಲ್ಲಿ ದೊರೆಯುತ್ತವೆ. ನಾನಾ ಬಗೆಯ ಬಟ್ಟೆ ಬರೆಗಳು ಹೇರಳವಾಗಿ ಸಿಕ್ಕುತ್ತವೆ. ಏಕೆಂದರೆ ಇಲ್ಲಿ ಕನಿಷ್ಟಪಕ್ಷ ೩,೦೦೦ ಮಗ್ಗದವರಿದ್ದಾರೆ. ಈ ಮಗ್ಗದವರು ಅವರವರ ಮನೆಗಳಲ್ಲಿಯೇ ಮಕ್ಕಳು ಮರಿಗಳನ್ನೂ ಆಳುಕಾಳುಗಳನ್ನೂ ಕಟ್ಟಿಕೊಂಡು ಬಟ್ಟೆ ನೇಯುವುದರಲ್ಲಿ ನಿರತರಾಗಿರುತ್ತಾರೆ.

ಮೇ ೧೪ನೆಯ ತಾರೀಖು ನಮ್ಮ ಇಬ್ಬರು ವರ್ತಕರು ಹೊರಗಡೆ ಹೋಗಿ ಮನೆ ಕಟ್ಟಲು ಯೋಗ್ಯವಾದ ಸ್ಥಳ ಹುಡುಕಿಕೊಂಡು ಬಂದರು. ಆ ಸ್ಥಳದಲ್ಲಿ ರಾಜನ 'ಡೇರಾಯ್' (Deroy = ಡೇರೆ?) ಹಾಕಿ, ಅದನ್ನು ಕಂಪೆನಿಗೆ ಸೇರಿಸಿದ ಸ್ಥಳವಾಗಿ ಮಾಡಿಕೊಂಡರು. ಹೀಗೇಕೆ ಮಾಡಿದರೆಂದು ಕೇಳುವ ಧೈರ್ಯ ಯಾರಿಗೂ ಬರಲಿಲ್ಲ. ಮೇ ೧೫ರಂದು ಕೂಲಿಯವರನ್ನು ನೇಮಿಸಿಕೊಂಡು ಭೂಮಿ ಅಳತೆ ಮಾಡಿ ಮನೆಯ ತಳಪಾಯ ಅಗೆಯಲು ಆರಂಭಿಸಲಾಯಿತು. ನೂರು 'ಕೊನೆಟ್' (Conet) ಉದ್ದ ಮತ್ತು ನೂರು ಕೊನೆಟ್ ಅಗಲದಷ್ಟು ಚಚ್ಚೌಕವಾದ ಮನೆ ಕಟ್ಟುವುದೆಂತಾಯಿತು. ನೂರು ಕೊನೆಟ್‌ಗಳೆಂದರೆ ೫೦ ಗಜಗಳು. ಅಂದರೆ ಒಂದು ಕೊನೆಟ್‌ಗೆ ಅರ್ಧಗಜ_ ಅಥವಾ ಒಂದೂವರೆ ಅಡಿ. ಮನೆಯನ್ನೂ ಆದಷ್ಟು ಜಾಗ್ರತೆ ಕಟ್ಟಿ ಮುಗಿಸಬೇಕಾ ಯಿತು. ಏಕೆಂದರೆ, ಮಳೆಗಾಲ ಇನ್ನೇನು ಆರಂಭವಾಗುವುದರಲ್ಲಿತ್ತು.

ಮೇ ೧೬ರಂದು ಗೋಡೆಗಳ ತಳಪಾಯ ಹಾಕಿದೆವು. ತಳಪಾಯದ ಅಗಲ ಒಂಭತ್ತು ಅಡಿಗಳಷ್ಟಿತ್ತು. ಅನೇಕ ಜನ ಕೂಲಿಯವರನ್ನು ಇಟ್ಟುಕೊಂಡು ತರಾತುರಿಯಿಂದ ಈ ಕೆಲಸ ಮಾಡಿಸಿದೆವು. ಆದರೆ ನಮ್ಮ ಕೆಲಸವೆಲ್ಲಾ ವ್ಯರ್ಥವಾಯಿತು. ಏಕೆಂದರೆ, ೧೮ನೇ ತಾರೀಖು ಸುರಿದ ಭಾರಿ ಮಳೆ ಮಾಡಿದ್ದನ್ನೆಲ್ಲಾ ಕೊಚ್ಚಿಕೊಂಡು ಹೋಯಿತು.

ಮಾಡಿದ ಕೆಲಸದ ಗುರುತು ಸಹ ಉಳಿಯಲಿಲ್ಲ. ಹೀಗೆ ಆರಂಭವಾದ ಈ ಗಾಳಿ ಮಳೆ ಹಗಲೂ ರಾತ್ರಿ ಒಂದೇ ಸಮನೆ ಜಗ್ಗಿ ಹೊಯ್ಯಿತು. ಮೂರು ವಾರಗಳ ಕಾಲ ಬಿಡಲೇ ಇಲ್ಲ.

ಜೂನ್ ೧೬ರಂದು ರೇಫ್ ಕಾರ್ಟ್‌ರೈಟ್‌ರು ಇಬ್ಬರು ಇಂಗ್ಲಿಷ್‌ಮೆನ್‌ಗಳ ಸಮೇತ ಬಾಲಸೂರಿಗೆ[೧] ಹೊರಟರು. ಅಲ್ಲಿಂದ ಅವರು ಬಂಗಾಳಕ್ಕೆ ಹೋಗಬೇಕೆಂಬ ಉದ್ದೇಶವಿತ್ತು. ಜುಲೈ ೮ ರಂದು ಕಾರ್ಟ್‌ರೈಟ್‌ರಿಂದ ಒಂದು ಪತ್ರ ಬಂದಿತು. ಅದರಲ್ಲಿ ಅವರು ತಾವೇನು ಮಾಡಿದರು ಮತ್ತು ಮಳೆಯಿಂದಾಗಿ ಅವರು ತಮ್ಮ ಪ್ರಯಾಣದಲ್ಲಿ ಅನುಭವಿಸಿದ ಕಷ್ಟನಷ್ಟಗಳೇನು ಎಂದು ವಿವರಿಸಿದ್ದರು. ಬಹಳ ಪ್ರಯಾಸಪಟ್ಟು ತಾವು ಪಿಪ್ಲಿ ಮುಟ್ಟಿದುದಾಗಿ ತಿಳಿಸಿದ್ದರು.

ಜುಲೈ ೨೩ರ ಬೆಳಗ್ಗೆ ಒಂದು ಸುದ್ದಿ ಬಂದಿತು. ಇಂಗ್ಲಿಷ್ ಹಡಗೊಂದು ಹರ್ಪ್ಪಾ ಪುರಕ್ಕೆ ಬಂದಿದೆಯೆಂಬುದೇ ಆ ಸುದ್ದಿ. ಈ ಹಡಗು ಒಂದು ದಿನ ಇದ್ದು ಬಾಲಸೂರಿಗೆ ಹೊರಟಿತು. ಆಗಸ್ಟ್ ೨೫ನೆಯ ತಾರೀಖು ಬೆಳಗ್ಗೆ ಥಾಮಸ್ ಕೋಲ್ಲಿಯವರು ಹರ್ಪ್ಪಾ ಪುರದಲ್ಲಿ ಕಾಲವಾದರು.

ಸೆಪ್ಟಂಬರ್–೬ ಈ ದಿನ ಕಾರ್ಟ್‌ರೈಟ್‌ರು ಬಾಲಸೂರಿನಿಂದ ಬರೆದ ಕಾಗದ ತಲುಪಿತು. ಅದರಲ್ಲಿ ಹರ್ಪ್ಪಾಪುರಕ್ಕೆ ಬಂದಿದ್ದ ಹಡಗಿನ ಹೆಸರು ಮತ್ತು ಅದರ ಒಡೆಯನ ಹೆಸರುಗಳನ್ನು ತಿಳಿಸಿದ್ದರು.

ಇದೇ ತಿಂಗಳು ೧೯ನೇ ತಾರೀಖು ಬಾಲಸೂರಿನಿಂದ ಇಬ್ಬರು ವರ್ತಕರು ಬಂದರು.

ಅಕ್ಟೋಬರ್ ೪ ರಂದು ನಮ್ಮ ವರ್ತಕರಾದ ರಾಬರ್ಟ್ ಲಿಟ್ಲರ್ ಅವರು ಜಗ್ಗರ್‌ನಾತ್‌ಗೆ (ಜಗನ್ನಾಥಕ್ಕೆ) ಪ್ರಯಾಣ ಹೊರಟರು. ಅಲ್ಲಿಗೆ ಹೋಗಿ ೧೬ರಂದು ವಾಪಸು ಬಂದರು.

ನವೆಂಬರ್ ೫–ನನ್ನನ್ನು ಕಂಪೆನಿ ಕೆಲಸದ ಮೇಲೆ ಜಗ್ಗರ್‌ನಾತ್‌ಗೆ ಕಳುಹಿಸಿದರು. ಹೊರಟ ದಿನ ಮದೆನ್ ಎಂಬ ಪಟ್ಟಣ ಮುಟ್ಟಿ ರಾತ್ರಿ ಒಂದು ಪಗೋಡಾ (ದೇವಸ್ಥಾನ) ದಲ್ಲಿ ತಂಗಿದೆ. ಮಾರನೆಯ ದಿನ ಎಂಟು ಗಾವುದಗಳ (Course) ಅಂದರೆ ೩೨ ಇಂಗ್ಲಿಷ್ ಮೈಲಿಗಳ ದಾರಿ ಸಾಗಿಸಿ ಅಮುದ್‌ಪ್ರರ ಎಂಬ ಊರು ಮುಟ್ಟಿದೆ. ಈ ಊರಿನಲ್ಲಿ ೩,೦೦೦ ಜನ ಫಕೀರರ (ಗೋಸಾಯಿಗಳ) ತಂಡವನ್ನು ಕಂಡೆ. ಈ ತಂಡದಲ್ಲಿ ಗಂಡಸರಲ್ಲದೆ ಹೆಂಗಸರು ಮಕ್ಕಳೂ ಇದ್ದರು. ಇವರು ನಿಂತಲ್ಲಿ ನಿಲ್ಲದೆ ಊರಿಂದೂರಿಗೆ ಅಲೆಯುವ ಜನ. ಇವರನ್ನು ಬೂದಿಬಡಕರು (ashmen) ಎಂದು ಕರೆಯುತ್ತಾರೆ.

---

೧. ಬಾಲಸೂರ್: ಒಮ್ಮೆ ಬಹಳ ಪ್ರಾಮುಖ್ಯವಾಗಿದ್ದ ರೇವುಪಟ್ಟಣ. ಇಲ್ಲಿ ೧೬೪೨ರಲ್ಲಿ ಇಂಗ್ಲಿಷರು ತಮ್ಮ ಒಂದು ಗಡಂಗು ಸ್ಥಾಪಿಸಿದರು. 'ಬಾಲೇಶ್ವರ' ಬಾಲಸೋರ್ ಆಗಿದೆಯೆಂದು ಹೇಳುತ್ತಾರೆ.

ಏಕೆಂದರೆ, ಇವರು ಮೈಕೈಗೆಲ್ಲ ಬೂದಿ ಬಳಿದುಕೊಳ್ಳುತ್ತಾರೆ. ಈ ಫಕೀರರು ತುಂಬ ಸಜ್ಜನರು ಎಂಬ ಭಾವನೆ ಉಂಟು. ಆದರೆ ಇವರು ಇಂಗ್ಲೆಂಡಿನ ಜಿಪ್ಸಿಗಳಂತೆ ಭಾರಿ ಮೋಸದ ಜನ. ಸಮಯ ಸಿಕ್ಕಿದಾಗ ಮೋಸಮಾಡದೆ ಬಿಡುವುದಿಲ್ಲ.

ನಾನು ಈ ಊರಿನಲ್ಲಿ ಹೆಚ್ಚು ಹೊತ್ತು ನಿಲ್ಲದೆ ನನ್ನ ಪ್ರಯಾಣ ಮುಂದುವರಿಸಿದೆ. ಏಕೆಂದರೆ, ನಾನು ಮಾಡಬೇಕಾಗಿದ್ದ ಕಂಪೆನಿಗೆ ಸಂಬಂಧಪಟ್ಟ ಕೆಲಸ ಬಹಳ ಇತ್ತು. ಏಳನೆಯ ತಾರೀಖು ಬೆಳಗಿನ ಎರಡು ಗಂಟೆಯ ಸಮಯದಲ್ಲಿ ಅಹಮದ್‌ಪುರದಿಂದ ಹೊರಟು ಹತ್ತು ಗಾವುದ ಅಂದರೆ ನಲವತ್ತು ಮೈಲಿ ದೂರ ಪ್ರಯಾಣ ಮಾಡಿ ಮಧ್ಯಾಹ್ನದ ಹೊತ್ತಿಗೆ ಜಗ್ಗರ್‌ನಾತ್ ಸಮೀಪಿಸಿದೆ. ಅಲ್ಲಿ ಸಿಕ್ಕಿದ ದೊಡ್ಡ ಕೆರೆಯೊಂದರಲ್ಲಿ ಸ್ನಾನಮಾಡಿ ನಗರವನ್ನು ಪ್ರವೇಶಿಸಿದೆ. ದಾರಿಯ ಉದ್ದಕ್ಕೂ ಕೆರೆ ಕುಂಟೆಗಳು. ಊರಿನ ರಾಜಬೀದಿಯನ್ನು ಹೊಕ್ಕು ನಾನು ಬ್ರಾಹ್ಮಣನೊಬ್ಬನ ಮನೆಯಲ್ಲಿ ಬಿಡಾರ ಮಾಡಿದೆ. ಬ್ರಾಹ್ಮಣರೆಂದರೆ ವಿಗ್ರಹಾರಾಧಕರ ಪುರೋಹಿತರು. ಈತನ ಮತ ಗಿತ ಯಾವುದಾದರೆ ನನಗೇನಂತೆ ಎಂದು ನಾನು ಈ ಬ್ರಾಹ್ಮಣನ ಮನೆಯಲ್ಲಿ ಠಿಕಾಣಿ ಹಾಕಿದೆ. ಈ ಊರಿನಲ್ಲಿ ಇರುವಷ್ಟು ಕಾಲವೂ ಇವನ ಮನೆಯಲ್ಲೇ ಇದ್ದೆ.

ನವೆಂಬರ್ ೮ನೆಯ ತಾರೀಖು ಬೆಳಗ್ಗೆ ನಾನು ಇಲ್ಲಿಗೆ ಬಂದ ಕೆಲಸಗಳಿಗೆ ಗಮನಕೊಟ್ಟ ಮೇಲೆ ಊರನ್ನು ನೋಡಲು ಹೊರಟೆ. ಅದರಲ್ಲಿಯೂ ಕ್ರೌರ್ಯಕ್ಕೂ ವಿಗ್ರಹಾರಾಧನೆಗೂ ಕನ್ನಡಿಯಾದ ಆ ಭಾರಿ ಪಗೋಡಾ ಅಥವಾ ಪಗೋಡಾ (ದೇವಸ್ಥಾನ) ನೋಡಲು ಹೋದೆ. ಈ ಪಗೋಡಾದಲ್ಲಿರುವ ದೇವರ ಹೆಸರು ಜಗ್ಗರ್‌ನಾತ್ ಎಂದು. ಆ ಹೆಸರೇ ಈ ಊರಿಗೂ ಬಂದಿದೆ. ಈ ಪಗೋಡವನ್ನು ಸೈತಾನನ ಸದನ (House of Satan) ಎಂದು ಕರೆದರೆ ತಪ್ಪಿಲ್ಲ. ಇಲ್ಲಿ ಒಂಬತ್ತು ಸಾವಿರ ಅರ್ಚಕರು ಇದ್ದಾರೆ. ಇವರು ನಿತ್ಯವೂ ತಮ್ಮ ಮಹಾದೇವನಿಗೆ ಪೂಜೆ ಸಲ್ಲಿಸುತ್ತಾರೆ. ಈ ದೇವರ ಹೆಸರು ಹೇಳಿದರೆ ಸಾಕು, ಜನರು ಬಹಳ ಭಕ್ತಿಯಿಂದ ಮಂಡಿಯೂರಿ ನಮಸ್ಕಾರ ಮಾಡುತ್ತಾರೆ. ದೇವರಿಗೆ ತಮ್ಮ ಮಕ್ಕಳನ್ನು ದೀಕ್ಷೆ ಬಿಡುತ್ತಾರೆ. ದೀಕ್ಷೆ ಪಡೆದ ಮಕ್ಕಳು ಬೆಂಕಿಯ ಕೊಂಡ ಹಾಯಬೇಕು. ಇನ್ನೊಂದು ಹೇಯವಾದ ಪದ್ಧತಿಯೆಂದರೆ, ಈ ಮಕ್ಕಳು ನೀರನ್ನು ಹಾದು ಬರುವಂತೆ ಮಾಡುವುದು. ಇವನ್ನೆಲ್ಲಾ ಆ ದೇವತ್ವವಿಲ್ಲದ ದೇವರ (ungodly God) ಹೆಸರಿನಲ್ಲಿ ಮಾಡುತ್ತಾರೆ.

ಈ ದೇವರ ಉತ್ಸವಕ್ಕಾಗಿ ಒಂದು ಭಾರಿ ರಥ ಇದೆ. ಈ ರಥದ ಒಂದೊಂದು ಕಡೆ ಹದಿನಾರು ಗಾಲಿಗಳಿವೆ. ಒಂದೊಂದು ಗಾಲಿಯ ಎತ್ತರ ಐದು ಅಡಿ. ರಥದ ಎತ್ತರವೇ ಮೂವತ್ತು ಅಡಿಯಷ್ಟಿದೆ. ವಿಶೇಷ ದಿನಗಳಂದು ಈ ರಥದಲ್ಲಿ ಆ ಹೊಲಸು ದೇವರು ಜಗ್ಗರ್‌ನಾತ್‌ನನ್ನು ಕುಳ್ಳಿರಿಸಿ ಉತ್ಸವ ಮಾಡುತ್ತಾರೆ. ಆಗ ಆ ಒಂಭತ್ತು ಸಾವಿರ ಅರ್ಚಕರೂ ಸಾವಿರಾರು ಬೂದಿಬಡುಕರೂ ಅಸಂಖ್ಯಾತ ಭಕ್ತರೂ ಸೇರುತ್ತಾರೆ. ರಥವನ್ನು ಬಹು ಅಂದವಾಗಿ ಅಲಂಕಾರಮಾಡುತ್ತಾರೆ. ಎರಡು ಸಾವಿರಕ್ಕೂ ಹೆಚ್ಚು ದೀಪಗಳನ್ನು ಹಚ್ಚುತ್ತಾರೆ. ಊರಿನ ಹಿರಿಯ ಮನುಷ್ಯರೆಲ್ಲ ಸೇರಿ ರಥ ಎಳೆಯುತ್ತಾರೆ.

ರಥ ಎಳೆಯಲು ಜನ ಎಷ್ಟೊಂದು ಆಸಕ್ತರಾಗಿರುತ್ತಾರೆಂದರೆ, ಆ ಅಪಾರ ಜನಸಂದಣಿಯಲ್ಲಿ ಹೇಗಾದರೂ ನುಗ್ಗಿ ರಥದ ವರ್ಜಿಹಗ್ಗ ಮುಟ್ಟಿಬಿಟ್ಟರೆ ಸಾಕು, ತಮ್ಮ ಜನ್ಮ ಪವಿತ್ರವಾಯಿತೆಂದು ಭಾವಿಸುತ್ತಾರೆ. ರಥವು ಬೀದಿಯಲ್ಲಿ ಸಾಗುವಾಗ ಅನೇಕ ಜನ ರಥದ ಗಾಲಿಗಳಿಗೆ ಮೈಯೊಡ್ಡಿ ಪ್ರಾಣಾರ್ಪಣೆ ಮಾಡಿಕೊಳ್ಳುತ್ತಾರೆ. ಕೆಲವರು ಸಾಯದೆ ಕೈಕಾಲು ಮುರಿದುಕೊಂಡು ಅಷ್ಟರಿಂದಲೇ ತಮ್ಮ ಜನ್ಮ ಸಾರ್ಥಕವಾಯಿತೆಂದು ಭಾವಿಸುತ್ತಾರೆ.

ಇನ್ನೊಂದು ಚಿಕ್ಕ ರಥ ಇದೆ. ಇದಕ್ಕೆ ಹನ್ನೆರಡು ಗಾಲಿಗಳು. ಇದರ ಮೇಲೆ ಬ್ರಾಹ್ಮಣರು ಯಾವುದೋ ಕಡಮೆ ದರ್ಜೆಯ ದೇವರನ್ನು ಕುಳ್ಳಿರಿಸಿಕೊಂಡು ಅಲ್ಲೇ ಸುತ್ತಮುತ್ತ ಎಳೆದಾಡುತ್ತಾರೆ.

ಜಗ್ಗರ್‌ನಾತ್ ದೇವಸ್ಥಾನ ಸಮುದ್ರತೀರದಲ್ಲಿದೆ. ಸಮುದ್ರದ ಮೇಲೆ ಬರುವಾಗ ಹತ್ತು ಹನ್ನೆರಡು ಹರಿದಾರಿಗಳಿಂದಲೇ ಇದನ್ನು ಕಾಣಬಹುದು. ಈ ಪ್ರದೇಶದ ಗಾಳಿಯೂ ಆಕಾಶವೂ ಸ್ವಚ್ಛವಾಗಿರುವ ಕಾರಣ ದೂರದಿಂದಲೇ ದೇವಸ್ಥಾನವನ್ನು ನೋಡಬಹುದು. ದೇವಸ್ಥಾನದ ಸುತ್ತ ಇಪ್ಪತ್ತೆರಡು ಅಡಿ ಎತ್ತರದ ಪೌಳಿ ಗೋಡೆ ಇದೆ. ಒಂದೊಂದು ಕಡೆಯ ಗೋಡೆಯ ಉದ್ದ ನೂರೈವತ್ತು ದಾಪುಗಳು ಅಥವಾ ಗಜಗಳಷ್ಟಾಗುತ್ತದೆ. ನಾಲ್ಕು ಕಡೆಗಳಿಂದಲೂ ದೇವಸ್ಥಾನವನ್ನು ಪ್ರವೇಶಿಸಬಹುದು. ಆದರೆ ಪಶ್ಚಿಮದ ಕಡೆಯ ಬಾಗಿಲನ್ನು ಸಾಮಾನ್ಯವಾಗಿ ಮುಚ್ಚಿರುತ್ತಾರೆ. ಹಬ್ಬ ಹರಿದಿನಗಳಲ್ಲಿ ಮಾತ್ರ ಅದನ್ನು ತೆರೆಯುತ್ತಾರೆ. ಆ ಕಡೆಗೇ ಊರು ಇರುವುದು.೧

---

೧. ಪುರಿ ಜಗನ್ನಾಥ ದೇವಸ್ಥಾನವನ್ನು ಕುರಿತ ಇತ್ತೀಚಿನ ಲೇಖನವೊಂದು ಶತಮಾನಗಳ ಹಿಂದೆಯೇ ಪ್ರವಾಸಿಗಳು ಹೇಳಿರುವುದನ್ನು ಎಷ್ಟು ಸಮರ್ಥಿಸುತ್ತದೆ ನೋಡಿ. ಕ್ಷೇತ್ರಪುರಾಣದ ಪ್ರಕಾರ ಇಂದ್ರದ್ಯುಮ್ನ ಎಂಬ ರಾಜನು ಕ್ರಿ. ಪೂ. ೪೫೪೫ರಲ್ಲಿ ಜಗನ್ನಾಥ ದೇವರನ್ನು ಪ್ರತಿಷ್ಠಾಪಿಸಿದನು. ಆದರೆ ಪೂಜಾ ಕೈಂಕರ್ಯ ಇತ್ಯಾದಿಗಳಿಗೆ ವ್ಯವಸ್ಥೆ ಮಾಡಿದವನು ಕ್ರಿ. ಶ. ೧ನೆಯ ಶತಮಾನದಲ್ಲಿದ್ದ ಕಳಿಂಗದ ರಾಜ ಕರಬೆಲ ಎಂಬುವನು. ಕ್ರಿ. ಶ. ೮೫೪ರಲ್ಲಿ ಯಯಾತಿ ಕೇಸರಿ ಎಂಬ ರಾಜನು ದೇವಸ್ಥಾನವನ್ನು ಕಟ್ಟಿಸಿದನು. ಇದು ಕಾಲಾಂತರದಲ್ಲಿ ನೋಡುವವರಿಲ್ಲದೆ ಹಾಳುಬಿತ್ತು. ಕ್ರಿ. ಶ. ೧೧೦೦ ರಿಂದ ೧೨೦೦ರ ಮಧ್ಯೆ ಗಂಗ ಮನೆತನದ ರಾಜರುಗಳು ಈಗಿರುವ ದೇವಸ್ಥಾನವನ್ನು ಕಟ್ಟಿ ಮುಗಿಸಿದರು.

ದೇವಸ್ಥಾನದ ಎತ್ತರ ಸುಮಾರು ೨೦೦ ಅಡಿ. ಸುತ್ತ ೨೦ ಅಡಿ ಎತ್ತರದ ಪೌಳಿ ಗೋಡೆ ಇದೆ. ಈಗಲೂ ದೇವಸ್ಥಾನದಲ್ಲಿ ಅರ್ಚಕರು, ಪರಿಚಾರಕರು ಇತ್ಯಾದಿಯವರ ಸಂಖ್ಯೆ ೫,೦೦೦. ಸುಮಾರು ೨೦,೦೦೦ ಜನರು ತಮ್ಮ ಜೀವನಕ್ಕೆ ಈ ದೇವಸ್ಥಾನವನ್ನು ಅವಲಂಬಿಸಿದ್ದಾರೆ.

ಜ್ಯೇಷ್ಠ ಮತ್ತು ಆಷಾಢಮಾಸಗಳಲ್ಲಿ ನಡೆಯುವ ಅಪೂರ್ವ ರಥೋತ್ಸವಕ್ಕೆ ದೇಶದ ನಾನಾ ಕಡೆಗಳಿಂದ ೨೦ಲಕ್ಷ ಭಕ್ತರು ಸೇರುತಾರೆ. ಏಳಡಿ ವ್ಯಾಸದ ಎಂಟು ಜೊತೆ ಚಕ್ರಗಳ ಮೇಲೆ ೩೫ ಅಡಿ ಚಚ್ಚೌಕದ ೫೦ ಅಡಿ ಎತ್ತರದ ತೇರಿನ ಮೇಲೆ ಜಗನ್ನಾಥ ದೇವರನ್ನು ಕುಳ್ಳಿರಿಸಿ ಸಹಸ್ರಾರು ಜನರು ಎಳೆಯುತ್ತಾರೆ. ದೊಡ್ಡ ತೇರಲ್ಲದೆ ಬಲಭದ್ರ ಮತ್ತು ಸುಭದ್ರರ ಎರಡು ಚಿಕ್ಕ ತೇರುಗಳೂ ಹಿಂದೆ ಬರುತ್ತವೆ. ಈ ತೇರುಗಳನ್ನು ಜಗನ್ನಾಥ ದೇವರ ಬೇಸಗೆಯ ವಿಹಾರ ಸ್ಥಳವಾದ ಗುಡುಚಿ ಮಂದಿರದ

ಈ ನಾಡಿನ ಜನರು ಏನೇನೊ ಪೂಜಿಸುತ್ತಾರೆ. ಸೂರ್ಯ, ಚಂದ್ರ, ನಕ್ಷತ್ರ, ಬೆಟ್ಟ ಗುಡ್ಡ, ಮರ ಗಿಡ, ಎತ್ತು, ನಾಯಿ, ಬೆಕ್ಕು—ಇವುಗಳನ್ನು ಪೂಜಿಸುತ್ತಾರೆ. ಕೆಲವರು ತೋಟದಲ್ಲಿ ಬೆಳೆಯುವ ನಾರುಬೇರುಗಳನ್ನೂ ಹೂವುಗಳನ್ನೂ ಪೂಜಿಸುತ್ತಾರೆ.೧ ಇಲ್ಲಿಯ ಬಣ್ಣಬಣ್ಣದ ಹೂವುಗಳಂತಹ ಹೂವುಗಳನ್ನು ನಾನು ಇಂಗ್ಲೆಂಡಿನಲ್ಲಾಗಲೀ ಬೇರೆ ಕಡೆಗಳಲ್ಲಾಗಲೀ ನೋಡಿಲ್ಲ. ಕೆಲವರು ಜೂಪಿಟರ್ (Jupiter) ನಂತಹ ದೇವರನ್ನು ಸ್ಥಾಪಿಸಿ ಅದು ತಪ್ಪಿಸಿಕೊಂಡು ಬೇರೆಲ್ಲಿಗೂ ಹೋಗದಂತೆ ಅದರ ಕಾಲಿಗೆ ಸರಪಣಿ ಹಾಕಿ ಬಿಗಿದಿರುತ್ತಾರೆ. ಯಾರಾದರೂ ಅದನ್ನು ಕದ್ದುಬಿಡುವರೊ ಎಂದು ಭಾವಿಸಿ ಹಗಲು ರಾತ್ರಿ ಅದನ್ನು ಕಾಯುತ್ತಾರೆ. ದೇವರು ತಮ್ಮ ಊರು ಬಿಟ್ಟರೆ ಕೇಡು ಊರಿಗೆ ತಪ್ಪಿದ್ದಲ್ಲವೆಂದು ಭಾವಿಸುತ್ತಾರೆ. ಈ ಜನರ ವಿಗ್ರಹಾರಾಧನೆ ಬಗ್ಗೆ ಇಷ್ಟು ಸಾಕು.

ಬಂಗಾಳದ ಈ ಊರು ಬಹು ದೊಡ್ಡದಾಗಿದ್ದು ಜನಭರಿತವಾಗಿದೆ. ಅನೇಕ ಜನ ವರ್ತಕರು ಇಲ್ಲಿ ನೆಲೆಸಿದ್ದಾರೆ. ಬಹು ಬೆಲೆಯಾದ ಹಾಗೂ ಉತ್ತಮವಾದ ಸರಕುಗಳು ಇಲ್ಲಿ ಹೇರಳವಾಗಿ ದೊರೆಯುತ್ತವೆ. ಸಕ್ಕರೆ (Sugar), ರೇಷ್ಮೆ, ಸಪ್ಪೋಟಗಳು (Sappatos), ಅರಗು, ಮೇಣ, ಬೆಣ್ಣೆ, ತುಪ್ಪ, ಎಣ್ಣೆ, ಅಕ್ಕಿ, ಗೋಧಿ—ಮುಂತಾದುವು ಇಲ್ಲಿ ಸಿಕ್ಕುತ್ತವೆ. ಈ ಸ್ಥಳ ಅಸಂಖ್ಯಾತ ಘೇಂಡಾಮೃಗಗಳಿಗೆ ಹೆಸರಾಗಿದೆ. ಈ ಮೃಗ ಏಕಶೃಂಗಿಯಂತೆ ಇರುವ ಒಂದು ಪ್ರಾಣಿ. ಈ ಪ್ರಾಣಿಯ ಒಕ್ಕೊಂಬಿನ ಉಪಯುಕ್ತತೆಯಿಂದಾಗಿ ಇದಕ್ಕೆ ಮಹತ್ವ ಬಂದಿದೆ.

ಈ ಊರಿನಲ್ಲಿ ಹಿಂದೆ ಸುಂಕ ಸಾರಿಗೆಗಳಿರಲಿಲ್ಲ. ಮೊಗಲನಾದ ಅಕ್ಬರನು ಇದನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ ಮೇಲೆ ಸುಂಕ ಸಾರಿಗೆಗಳು ಜಾರಿಗೆ ಬಂದುವು. ಮೊಗಲ್ ರಾಜ್ಯಕೆ ಸೇರಿಹೋದ ಮತ್ತೆರಡು ಮುಖ್ಯ ಊರುಗಳೆಂದರೆ ಚಿಟಗಾಂವ್ ಮತ್ತು ಸಟಗಾಂವ್.

ಜಗ್ಗರ್‌ನಾತ್ ನಗರದಲ್ಲಿ ಕುಡಿಯಲು ಕಟುವಾದ ಮದ್ಯ ದೊರೆಯುವುದಿಲ್ಲ. ಹೊರಗಡೆಯವರು ಇಲ್ಲಿಗೆ ಬರುವಾಗ ಅದನ್ನು ಗುಟ್ಟಾಗಿ ತಂದು ಕುಡಿಯುತ್ತಾರೆ.

---

ವರೆಗೆ ಎಳೆದುಕೊಂಡು ಹೋಗಿ ಅಲ್ಲಿ ನಿಲ್ಲಿಸುತ್ತಾರೆ. ತೇರುಗಳನ್ನು ಮತ್ತೆ ವಾಪಸು ತರುವಾಗ ಆ ಉತ್ಸವ ಇನ್ನೂ ವೈಭವವಾಗಿರುವುದಂತೆ.

ಅಮ್ಮನವರಿಲ್ಲದೆ ಅಣ್ಣ ಬಲಭದ್ರ ಮತ್ತು ತಂಗಿ ಸುಭದ್ರೆಯರೊಡನೆ ಜಗನ್ನಾಥನು ಪೂಜೆ ಕೈಗೊಳ್ಳುವುದು ಪುರಿಯಲ್ಲಿ ಮಾತ್ರ. ಬಹುವಕ್ರವಾದ ಈ ಮೂರು ವಿಗ್ರಹಗಳನ್ನು ಪೂಜಿಸುತ್ತಿರುವುದು ಆಶ್ಚರಿಯೇ ಸರಿ! ಬಹುಶಃ ಆದಿವಾಸಿಗಳು ಆಗಲೇ ಇದ್ದ ಕಂಬಗಳನ್ನು ತಮಗೆ ತಿಳಿದಂತೆ ಕೆತ್ತಿದ ವಿಗ್ರಹಗಳೇ ಇವೆಂದು ಊಹಿಸಲಾಗಿದೆ. ಪ್ರತಿ ಇಪ್ಪತ್ತುವರ್ಷಗಳಿಗೊಮ್ಮೆ ಈ ವಿಗ್ರಹಗಳನ್ನು ಬದಲಾಯಿಸುತ್ತಾರೆ. ಅದೆಲ್ಲವನ್ನು ಬಹು ಗುಟ್ಟಾಗಿ ನಡೆಸುತ್ತಾರಂತೆ.

೧. ಈ ಹೂವುಗಳಿಂದ ದೇವರನ್ನು ಅಲಂಕಾರಮಾಡುತ್ತಾರೆಂಬ ಅರ್ಥ ಇರಬೇಕು.

ಇಲ್ಲಿಯ ಬಹುತೇಕ ಜನರಿಗೆ ವಿದ್ಯಾಭ್ಯಾಸವಿಲ್ಲ. ಎಲ್ಲವನ್ನೂ ಜ್ಞಾಪಕಶಕ್ತಿಯಿಂದ ಮಾಡುತ್ತಾರೆ. ಜನರ ಕೂದಲು ಸಾಮಾನ್ಯವಾಗಿ ಉದ್ದವಾಗಿರುತ್ತದೆ. ಕಟ್ಟುನಿಟ್ಟಾದ ಉಪವಾಸ ವ್ರತಗಳನ್ನು ಆಚರಿಸುತ್ತಾರೆ. ಆದರೆ ವ್ರತ ಮುಗಿದ ಕೂಡಲೇ ಮಾಡ ಬಾರದ್ದನ್ನೆಲ್ಲಾ ಮಾಡುತ್ತಾರೆ. ಇವರ ಕಾಯಿದೆ ಕಟ್ಟಲೆಗಳನ್ನು ಕೆಲವು ಕಡೆಗಳಲ್ಲಿ ಬರೆದಿಟ್ಟಿದ್ದಾರೆ; ಮತ್ತೆ ಕೆಲವು ಕಡೆಗಳಲ್ಲಿ ಬರೆದಿಟ್ಟಿಲ್ಲ. ಇವರಿಗೆ ಸಾಲಪತ್ರ, ಹುಂಡಿ ಮುಂತಾದವುಗಳೇನೆಂದು ಗೊತ್ತಿಲ್ಲ. ಲೇವಾದೇವಿಯೆಲ್ಲಾ ಸಾಕ್ಷಿಗಳಿಲ್ಲದೆ ಬಾಯಿಮಾತಿನ ನಂಬಿಕೆಯ ಮೇಲೆ ನಡೆಯುತ್ತದೆ. ಯಾರು ಮಾತಿಗೆ ತಪ್ಪುತ್ತಾನೋ ಅವನ ಕೈಬೆರಳು ಗಳನ್ನು ಕತ್ತರಿಸಿಹಾಕುತ್ತಾರೆ.

ಜನರ ಉಡುಗೆ ತೊಡುಗೆಗಳು ವಿಧವಿಧವಾಗಿರುತ್ತವೆ. ಕೆಲವರು ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನು ತೊಟ್ಟರೆ, ಮತ್ತೆ ಕೆಲವರು ಮೃಗದ ಚರ್ಮವನ್ನೂ ಹಕ್ಕಿಯ ಗರಿಗಳಿಂದ ಮಾಡಿದ ಹೊದಿಕೆಯನ್ನೂ ಹೊದೆಯುತ್ತಾರೆ. ಕೆಲವರು ಲಂಗೋಟಿ ಬಿಟ್ಟರೆ ಮೈಮೇಲೆ ಮತ್ಯಾವ ಬಟ್ಟೆಬರೆ ಹಾಕಿಕೊಳ್ಳುವುದಿಲ್ಲ. ಜನರ ಮೈಬಣ್ಣ ಬಹುಮಟ್ಟಿಗೆ ಕಪ್ಪು. ಈ ಕಪ್ಪು ಬಣ್ಣ ಆಕಸ್ಮಿಕವಾದುದಲ್ಲ. ಇದು ಹುಟ್ಟಿನಿಂದಲೇ ಬಂದದ್ದು. ಜನರು ಸಾಮಾನ್ಯವಾಗಿ ಎತ್ತರವಾಗಿದ್ದಾರೆ. ಹಲವಾರು ಹೆಂಡಿರನ್ನು ಮದುವೆಯಾಗುತ್ತಾರೆ. ಅವರನ್ನು ಹಣ ಕೊಟ್ಟು ಕೊಂಡುಕೊಳ್ಳುತ್ತಾರೆ. ಈ ಹೆಂಡಿರಲ್ಲಿ ಕೆಲವರನ್ನು ಮನೆಗೆಲಸಕ್ಕೋ ಅಂದಚಂದವಾದವರನ್ನು ತಮ್ಮ ಸುಖ ಸಂತೋಷಗಳಿಗೋ ಮತ್ತು ಸಂತಾನ ಪಡೆಯಲೋ ಇಟ್ಟುಕೊಳ್ಳುತ್ತಾರೆ.

ಇಂಡೀಸಿನ ಬೇರೆ ಕಡೆಗಳಲ್ಲಿ ಇರುವಂತೆ ಇಲ್ಲಿಯೂ ಎತ್ತು, ಆನೆ, ಒಂಟೆ, ಸಿಂಹ ಮತ್ತು ನಾಯಿಗಳು ಇವೆ. ಇಲ್ಲಿಯ ಕೆಲವು ಜಾತಿಯ ನಾಯಿಗಳು ಸಿಂಹದಷ್ಟೇ ಭಯಂಕರವಾಗಿವೆ. ಇವುಗಳ ಸಹಾಯದಿಂದ ಸಂತೋಷಕ್ಕಾಗಿ ಸಿಂಹಗಳನ್ನು ಬೇಟೆ ಯಾಡುತ್ತಾರೆ. ಜನರು ಜೀನು, ರಿಕಾಪು ಮುಂತಾದುಗಳಿಂದ ಚೆನ್ನಾಗಿ ಸಜ್ಜುಮಾಡಿದ ಕುದುರೆಗಳ ಮೇಲೆ ಸವಾರಿಮಾಡುತ್ತಾರೆ. ಹೆಂಗಸರೂ ಕುದುರೆಗಳ ಮೇಲೆ ಅಡ್ಡಾಡು ತ್ತಾರೆ.

ಈ ಜನ ತುಂಬ ಕುಶಲಮತಿಗಳು. ಕಲೆಯಲ್ಲಾಗಲೀ ವಿಜ್ಞಾನದಲ್ಲಾಗಲೀ ಅಥವಾ ಮತ್ಯಾವುದರಲ್ಲೇ ಆಗಲಿ ಎತ್ತಿದ ಕೈ. ಯಾವ ಕರಕುಶಲ ವಸ್ತುವನ್ನು ಇವರಿಗೆ ತೋರಿಸಿದರೂ ಅದನ್ನು ತುಂಬ ನೈಪುಣ್ಯತೆಯಿಂದ ಹಾಗೆಯೇ ಮಾಡಿಬಿಡುತ್ತಾರೆ. ಈ ಜನರಿಗೆ ಸೋಮಾರಿತನವೆಂದರೆ ಆಗದು. ಏನಾದರೊಂದು ಕೆಲಸ ಮಾಡುತ್ತಿರಬೇಕು. ಹಾಗೆ ಏನೂ ಕೆಲಸಮಾಡದ ಸೋಮಾರಿಗಳನ್ನು ಬಹಳ ನಿಕೃಷ್ಟವಾಗಿ ಕಾಣುತ್ತಾರೆ. ಇವರಲ್ಲಿ ಒಂದು ಪದ್ಧತಿ ಉಂಟು. ಅದೇನೆಂದರೆ, ಊಟ ಮಾಡುವ ಮುನ್ನ ಮನೆ ಮಕ್ಕಳನ್ನೆಲ್ಲಾ ಒಟ್ಟಿಗೆ ಸೇರಿಸಿ ಆ ದಿನ ಬೆಳಗಿನಿಂದ ಸಂಜೆಯವರೆಗೆ ಏನೇನು ಮಾಡಿದ ರೆಂದು ಲೆಕ್ಕತೆಗೆಯುವುದು. ಏನಾದರೂ ಮಾಡದೆ ಸೋಮಾರಿತನದಲ್ಲಿ ಕಾಲಕಳೆದವನಿಗೆ ಆ ದಿನ ಊಟವೇ ಇಲ್ಲ. ಹೀಗೆ ಪ್ರತಿನಿತ್ಯವೂ ನಡೆಯುತ್ತದೆ. ಸೋಮಾರಿಯಾದವನಿಗೆ ದಿನವೂ ಕಠಿಣವಾದ ಶಿಕ್ಷೆ ವಿಧಿಸುತ್ತಾರೆ.

ದೇವರ ನಿಜವಾದ ಪೂಜೆ ಏನು ಎಂದು ಅರಿಯದಿದ್ದರೂ ಈ ಜನಗಳಿಗೆ ಸುಳ್ಳು ತಟವಟ ಮದ್ಯಪಾನ—ಇವುಗಳನ್ನು ಕಂಡರೆ ಆಗದು. ಅಂಥವರನ್ನು ಛಡೀ ಏಟು ಗಳಿಂದಲೋ ಅಥವಾ ಅವರ ಸಾಮಾನು ಸರಂಜಾಮುಗಳನ್ನು ಮುಟ್ಟುಗೋಲು ಹಾಕಿಕೊಂಡೋ ಶಿಕ್ಷಿಸುತ್ತಾರೆ. ಸುಳ್ಳು ಹೇಳುವ ಮನುಷ್ಯ ಯಾವತ್ತೂ ಒಬ್ಬ ಮಹಾ ಸಮಾಜ ಘಾತಕನೆಂದು ಇವರು ಪರಿಗಣಿಸುತ್ತಾರೆ. ತಂದೆ, ಸಹೋದರರು ಅಥವಾ ಹತ್ತಿರದ ಸಂಬಂಧಿಗಳು ಸುಳ್ಳು ಹೇಳಿದರಂತೂ ಅವರಿಗೆ ಕೂಡಲೇ ಶಿಕ್ಷೆ ಆಗುತ್ತದೆ. ಸುಳ್ಳಿನಿಂದ ಏನೇ ಫಾಯಿದೆ ಬಂದರೂ ಅದನ್ನು ಸಾವಿಗಿಂತ ಹೆಚ್ಚಾಗಿ ದ್ವೇಷಿಸುತ್ತಾರೆ. ಒಮ್ಮೆ ಒಬ್ಬ ಸುಳ್ಳು ಹೇಳಿಬಿಟ್ಟರೆ ಸಾಕು, ಆ ಮೇಲೆ ಎಷ್ಟೇ ಸತ್ಯ ಹೇಳಿದರೂ ನಂಬುವುದಿಲ್ಲ. ಸುಳ್ಳು ಯಾವಾಗಲೂ ಸುಳ್ಳೇ ಎಂದು ಇವರ ಭಾವನೆ. ಸತ್ಯವಂತ ಒಡೆಯದ ಕನ್ನಡಿ ಇದ್ದಹಾಗೆ. ಒಡೆದ ಕನ್ನಡಿಯನ್ನು ಹೇಗೆ ಸೇರಿಸಲು ಸಾಧ್ಯವಿಲ್ಲವೊ ಹಾಗೇ ಸುಳ್ಳು ಹೇಳಿದ ಮನುಷ್ಯ ಮತ್ತೊಮ್ಮೆ ಸತ್ಯ ಹೇಳಲಾರ.

ನಾನು ಈ ಕಥನವನ್ನು ಒಂದು ಪ್ರಾರ್ಥನೆಯಿಂದ ಮುಗಿಸುತ್ತೇನೆ:

"ಮನುಷ್ಯರು ಸಂಪತ್ತು ಶ್ರೀಮಂತಿಕೆಗಳಿಗಿಂತ ಜ್ಞಾನ ಹಾಗೂ ಪ್ರಾಮಾಣಿಕತೆಗಳಿಗೆ ಹೆಚ್ಚು ಗಮನ ಕೊಡಲಿ. ಹಸಿದವರಿಗೆ ಅನ್ನ ಹಾಕಿದವನು ಎಲ್ಲ ಕಾಲಕ್ಕೂ ಸಲ್ಲಲಿ. ಈ ಬಾಳಿನ ಸಕಲೈಶ್ವರ್ಯಗಳಲ್ಲಿ ವಿವೇಕವೇ ಶಾಶ್ವತವಾಗಲಿ."

# ಜಾನ್ ದ ದೆವೆನೊ

ಜಾನ್ ದ ದೆವೆನೊ (Jean de Thevenot) ಒಳ್ಳೆಯ ಮನೆತನಕ್ಕೆ ಸೇರಿದವನು. ಹುಟ್ಟಿದ್ದು ಪ್ಯಾರಿಸ್‌ನಲ್ಲಿ, ೧೬೩೩ನೆಯ ಜೂನ್ ೬ನೆಯ ತಾರೀಖು. ಹದಿನೆಂಟನೆಯ ವಯಸ್ಸಿನಲ್ಲಿಯೇ ಇವನು ಪ್ಯಾರಿಸ್ ವಿಶ್ವವಿದ್ಯಾನಿಲಯದ ನೆವಾರ್ (Navarre) ಕಾಲೇಜಿನಲ್ಲಿ ವಿದ್ಯಾಭ್ಯಾಸ ನಡೆಸಿ ಖಗೋಳ ಶಾಸ್ತ್ರ ಹಾಗೂ ಪ್ರಕೃತಿ ವಿಜ್ಞಾನಗಳನ್ನು ವಿಶೇಷ ಆಸಕ್ತಿಯಿಂದ ಅಭ್ಯಾಸಮಾಡಿದ. ಈತನ ಚಿಕ್ಕಪ್ಪನಿಗೆ ಪ್ರವಾಸ ಕಥನದಲ್ಲಿ ತುಂಬಾ ಆಸಕ್ತಿ. ಜಾನ್ ಕೂಡ ಅಷ್ಟೇ ಆಸಕ್ತಿಯಿಂದ ಪ್ರವಾಸ ಕಥನಗಳನ್ನು ಅಭ್ಯಾಸಮಾಡಿದ. ಪ್ರವಾಸಮಾಡುವ ಮತ್ತು ಹೊಸ ಹೊಸ ದೇಶಗಳನ್ನು ನೋಡುವ ಈತನ ಕುತೂಹಲ ಬಹುಶಃ ಚಿಕ್ಕಪ್ಪನಿಂದಲೇ ಬಂದಿರಬೇಕು. ಅಲ್ಲದೆ ಪ್ರವಾಸದ ಖರ್ಚುವೆಚ್ಚಗಳಿಗಾಗಿ ಇನ್ನೊಬ್ಬರಿಗೆ ಕೈಯೊಡ್ಡಬೇಕಾಗಿರಲಿಲ್ಲ. ಏಕೆಂದರೆ, ಈತನಿಗೆ ಸಾಕಷ್ಟು ಹಣದ ಅನುಕೂಲತೆಯಿತ್ತು.

ಪ್ರವಾಸಕ್ಕೆ ಯಾವಾಗ ಅವಕಾಶ ಸಿಕ್ಕಿತೊ ಆಗ ಜಾನ್ ಪ್ಯಾರಿಸ್‌ನಿಂದ ಇಂಗ್ಲೆಂಡಿಗೆ ೧೬೫೨ನೆಯ ಡಿಸೆಂಬರ್ ೧೮ನೆಯ ತಾರೀಖು ಹೋದ. ಆದರೆ ಅಲ್ಲಿ ಬಹಳ ದಿನ ಇರಲಿಲ್ಲ. ಹಾಲೆಂಡಿಗೆ ಹಿಂದಿರುಗಿ ಕೊಲೋನ್, ಫ್ರಾಂಕ್‌ಫರ್ಟ್ ಮತ್ತು ರತಿಸ್‌ಬೋನ್‌ಗಳಿಗೆ ಹೋದ. ರತಿಸ್‌ಬೋನ್‌ಗೆ ಹೋದ ಉದ್ದೇಶ ಅಲ್ಲಿ ಸೇರಿದ್ದ ರಾಷ್ಟ್ರೀಯ ಪರಿಷತ್ತನ್ನು ನೋಡುವ ಆಸೆಯಿಂದ. ಅದನ್ನು ನೋಡಿಕೊಂಡು ಜರ್ಮನಿಯನ್ನು ದಾಟಿ ಇಟಲಿ ದೇಶವನ್ನು ಪ್ರವೇಶಿಸಿ ವೆನೀಸಿಗೆ ಹೋದ. ವೆನೀಸ್‌ನಿಂದ ಲೊರೊಟೋಗೂ ಅಲ್ಲಿಂದ ರೋಮ್‌ಗೂ ಹೋದ. ರೋಮ್‌ನಿಂದ ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ ಪೋಪ್ ಇನ್ನೊಸೆಂಟ್ ಕಾಲವಾದರು. ಹೊಸ ಪೋಪರ ಆಯ್ಕೆ, ಅನಂತರ ಅವರ ಕಿರೀಟಧಾರಣೋತ್ಸವ —ಇವನ್ನೆಲ್ಲಾ ನೋಡಿಕೊಂಡು ಹೋಗೋಣವೆಂದು ದೆವೆನೊ ರೋಮಿನಲ್ಲಿಯೇ ಉಳಿದನು. ಹೊಸ ಪೋಪರಾಗಿ ಏಳನೆಯ ಅಲೆಗ್ಸಾಂಡರ್ ಆಯ್ಕೆಯಾದರು. ಅವರ ಕಿರೀಟಧಾರಣೆಯಾದನಂತರ ಆತ ರೋಮ್ ಬಿಟ್ಟು, ತುರ್ಕಿ, ಈಜಿಪ್ಟ್, ಮತ್ತು ಪವಿತ್ರಭೂಮಿ (ಜೆರೊಸೆಲೆಮ್) ಮುಂತಾದ ದೇಶಗಳನ್ನು ನೋಡಿಕೊಂಡು ಲೆಗ್‌ಹಾರ್ನ್‌ಗೆ ಹೋದನು.

ಇದಿಷ್ಟೂ ದೆವೆನೋನ ಪ್ರವಾಸ ಕಥನದ ಮೊದಲನೆಯ ಭಾಗ. ಇದನ್ನು ಆವನೇ ಮುದ್ರಿಸಿ ಪ್ರಕಟಿಸಿದನು.

ಲೆಗ್‌ಹಾರ್ನ್‌ನಿಂದ ಹೊರಟ ದೆವೆನೊ, ಇಟಲಿ ದೇಶದಲ್ಲಿ ಮತ್ತೊಂದು ಸಲ ಪ್ರವಾಸಮಾಡಿ ಈ ಹಿಂದೆ ನೋಡದೆ ಉಳಿದಿದ್ದ ಸ್ಥಳಗಳನ್ನು ನೋಡಿಕೊಂಡು ಸವಾಯ್ ಆಸ್ಥಾನದಲ್ಲಿ ಸ್ವಲ್ಪಕಾಲ ನಿಂತು ಫ್ರಾನ್ಸಿಗೆ ೧೬೬೨ರಲ್ಲಿ ಹಿಂದಿರುಗಿದನು. ಈ ಪ್ರವಾಸವನ್ನು ಕುರಿತು ದೆವೆನೋ ಏನನ್ನೂ ಪ್ರಕಟಿಸಲಿಲ್ಲ. ಎಲ್ಲರೂ ಕಂಡು ಕೇಳಿದ್ದ ವಿಷಯಗಳನ್ನು ಮತ್ತೆ ಹೇಳಬೇಕಾಗಿಲ್ಲವೆಂದು ಅವನ ಭಾವನೆಯಾಗಿತ್ತು. ಆದರೂ ತನ್ನ ಪ್ರವಾಸದ ವಿವರಗಳನ್ನು ಬರೆದಿಡುವುದನ್ನು ಮಾತ್ರ ಮರೆಯಲಿಲ್ಲ.

ಊರಿಗೆ ಹಿಂದಿರುಗಿದ ದೆವೆನೊ ಹೆಚ್ಚು ಕಾಲ ಅಲ್ಲಿರಲಿಲ್ಲ. ಪ್ರಪಂಚವನ್ನು ನೋಡಬೇಕೆಂಬ ದಾಹ ಹೆಚ್ಚಿತು. ಎರಡನೆಯ ಪ್ರವಾಸಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡನು. ಯಾರಿಗೂ ಹೇಳದೆ ಕೇಳದೆ ೧೬೬೪ನೆಯ ಜನವರಿ ೨೪ನೆಯ ತಾರೀಖು ತನ್ನ ಕೊನೆಯ ಪ್ರವಾಸವನ್ನು ಪ್ರಾರಂಭಿಸಿದನು.

ಫ್ರಾನ್ಸಿನಿಂದ ಹೊರಟವನು ಪರ್ಷಿಯಾ ಮತ್ತು ಇಂಡಿಯಾ ದೇಶಗಳಲ್ಲಿ ಸುತ್ತಾಡಿದ. ಸ್ವದೇಶಕ್ಕೆ ಹಿಂದಿರುಗುತ್ತಾ ಪರ್ಷಿಯಾದ ಮಿಯಾನ ಎಂಬಲ್ಲಿ ಬಂದಾಗ ಅಲ್ಲಿ ತನ್ನ ಪಿಸ್ತೂಲಿನಿಂದಲೇ ಆದ ತೊಡೆಯ ಗಾಯದಿಂದ ೧೬೬೭ನೆಯ ನವೆಂಬರ್ ೨೮ನೆಯ ತಾರೀಖು ಕಾಲವಾದ. ಆಗ ಅವನ ವಯಸ್ಸು ಕೇವಲ ಮೂವತ್ತು ವರ್ಷ.

ಸಾಯುವ ಮುನ್ನ ಆತ ಬರೆದಿಟ್ಟಿದ್ದ ಉಯಿಲಿನಲ್ಲಿ ತಾನು ಅಲ್ಲಿಯವರೆಗೆ ಬರೆದಿದ್ದ ಪ್ರವಾಸ ಕಥನವನ್ನೂ ತನ್ನೆಲ್ಲಾ ಆಸ್ತಿಯನ್ನೂ ಅದರಲ್ಲಿ ತಿಳಿಸಿದ್ದ ಒಬ್ಬನ ವಶಕ್ಕೆ ಒಪ್ಪಿಸಬೇಕೆಂದು ಹೇಳಿದ್ದನು. ಆತ ಇನ್ನೂ ಹೆಚ್ಚು ಕಾಲ ಬದುಕಿದ್ದರೆ ತಾನು ಬರೆದುಕೊಂಡುಬಂದಿದ್ದ ಪರ್ಷಿಯಾ ಮತ್ತು ಇಂಡಿಯಾ ದೇಶಗಳ ಪ್ರವಾಸ ಕಥನವನ್ನು ಚೆನ್ನಾಗಿ ಪರಿಷ್ಕರಿಸಿ ಮುದ್ರಿಸಿ ಪ್ರಕಟಿಸುತ್ತಿದ್ದನೊ ಏನೊ! ಆತ ತನ್ನ ಕಥನದಲ್ಲಿ ಅಲ್ಲಲ್ಲಿ ಸಣ್ಣ ಟಿಪ್ಪಣಿಗಳನ್ನೂ ಕೊಟ್ಟಿದ್ದಾನೆ. ಬದುಕಿದ್ದರೆ ಅವನ್ನೆಲ್ಲಾ ತಿದ್ದಿ ಸರಿಯಾಗಿ ಬರೆಯುತ್ತಿದ್ದನೆಂದು ಭಾವಿಸಬಹುದು. ಆದರೂ ಆತನು ಬರೆದಿರುವುದು ಸಾಕಷ್ಟು ವಿವರಗಳಿಂದ ಕೂಡಿದೆ. ಎಲ್ಲವನ್ನೂ ಬಹು ಸೂಕ್ಷ್ಮವಾಗಿ ನೋಡಿ ಬರೆದಿರುವುದಲ್ಲದೆ ತನ್ನ ಅಭಿಪ್ರಾಯಗಳನ್ನು ಮರೆಮಾಚದೆ ಹೇಳಿಬಿಟ್ಟಿದ್ದಾನೆ. ಅವನ ಅಭಿಪ್ರಾಯಗಳು ಸರಿಕಾಣಬಹುದು, ಇಲ್ಲದಿರಬಹುದು. ಅದು ಬೇರೆ ವಿಷಯ.

ಇಂಡಿಯಾ ದೇಶಕ್ಕೆ ಹೊರಟ ಆತ ಪರ್ಷಿಯಾ ದೇಶವನ್ನು ನೋಡಿಕೊಂಡು ಹಡಗಿನಲ್ಲಿ ಯಾನ ಮಾಡಿ ೧೬೬೬ರ ಜನವರಿ ೧೧ನೆಯ ತಾರೀಖು ಸೂರತ್ ತಲುಪಿದ. ಅಲ್ಲಿಂದ ಹೊರಟು ಭೂಮಾರ್ಗ ವಾಗಿ ಅಹಮದಾಬಾದ್, ಕ್ಯಾಂಬೆ ಮುಂತಾದ ಊರುಗಳನ್ನು ನೋಡಿಕೊಂಡು ಮತ್ತೆ ಸೂರತ್ತಿಗೆ ಹಿಂದಿರುಗಿದ. ಅಲ್ಲಿಂದ ಮತ್ತೆ ಹೊರಟು ಬ್ರಹ್ಮಪುರ, ಔರಂಗಾಬಾದ್, ದೌಲತಾಬಾದ್, ಭಾಗನಗರ (ಹೈದರಾಬಾದ್) ಮತ್ತು ಗೋಲ್ಕೊಂಡಾ ರಾಜ್ಯಗಳನ್ನು ನೋಡಿಕೊಂಡು ಇಂಡಿಯಾದ ಪೂರ್ವತೀರ ದಲ್ಲಿರುವ ಮಸುಲಿ ಪಟ್ಟಣಕ್ಕೆ ಹೋಗುವಾಗ ದಾರಿಯಲ್ಲಿ ಹೆಸರಾಂತ ಎಲ್ಲೋರಾ ಗುಹೆಗಳನ್ನು ನೋಡಿದ. ಈ ಅಪೂರ್ವ ಗುಹೆಗಳ ವರ್ಣನೆಮಾಡಿದ ಫರಂಗಿಯವರಲ್ಲಿ ಈತನೇ ಮೊದಲಿಗನು. ಕೇವಲ ಎರಡು ಗಂಟೆಗಳ ಕಾಲದಲ್ಲಿ ಗುಹೆಗಳನ್ನು ಈಕ್ಷಿಸಿದ ಫರಂಗಿಯವನೊಬ್ಬ ಕೆಲವು ತಪ್ಪು ಅಭಿಪ್ರಾಯಗಳಿಗೆ ಬಂದಿದ್ದರೆ ಅದನ್ನು ಕ್ಷಮಿಸಬಹುದಾಗಿದೆ.

ಮಸುಲಿಪಟ್ಟಣದಲ್ಲಿ ಕೆಲವು ಕಾಲ ಇದ್ದು ನೋಡಬೇಕಾದುದನ್ನೆಲ್ಲಾ ನೋಡಿಕೊಂಡು ೧೬೬೬ ನೆಯ ವರ್ಷದ ಕೊನೆಗೆ ಸೂರತ್ತಿಗೆ ಹಿಂದಿರುಗಿದ. ಅಲ್ಲಿಂದ ೧೬೬೭ನೆಯ ಫೆಬ್ರುವರಿ ತಿಂಗಳಿನಲ್ಲಿ ಹಡಗು ಹತ್ತಿ ಪರ್ಷಿಯಾ ದೇಶದ ಬಂದರ್ ಅಬ್ಬಾಸ್ ಮೂಲಕ ಫ್ರಾನ್ಸಿಗೆ ತನ್ನ ಮರುಪ್ರಯಾಣ ಆರಂಭಿಸಿದ. ಅಬ್ಬಾಸ್‌ನಲ್ಲಿ ಹಡಗು ಇಳಿದು ಭೂಮಾರ್ಗವಾಗಿ ತನ್ನ ದೇಶಕ್ಕೆ ಹಿಂದಿರುಗುತ್ತಿದ್ದಾಗ ಹಡಗಿನಲ್ಲಿ ಪ್ರಯಾಣಮಾಡುವ ವೇಳೆ ಬಾರುಮಾಡಿ ಇಟ್ಟುಕೊಂಡಿದ್ದ ತನ್ನ ಪಿಸ್ತೂಲಿನ ಗುಂಡುಗಳನ್ನು ತೆಗೆದಿಡುವುದನ್ನು ಮರೆತುಬಿಟ್ಟ. ಆ ಪಿಸ್ತೂಲಿನ ಮೇಲೆ ಆಕಸ್ಮಾತ್ ಕಾಲಿಟ್ಟಾಗ ಗುಂಡು ತೊಡೆಗೆ ತಗುಲಿತು. ಗುಂಡಿನಿಂದಾದ ಗಾಯವನ್ನು ವಾಸಿಮಾಡಿಕೊಳ್ಳಲು ಪ್ರಯತ್ನಪಟ್ಟ. ಅದು ಸಾಧ್ಯವಾಗ ಲಿಲ್ಲ. ದಾರಿಯಲ್ಲಿ ಮಿಯಾನ್ ಎಂಬ ಸ್ಥಳದಲ್ಲಿ ತನ್ನ ಕೊನೆಯುಸಿರೆಳೆದ.

ದೆವೆನೋಗೆ ತುರ್ಕಿ, ಅರಾಬಿಕ್ ಮತ್ತು ಪರ್ಷಿಯನ್ ಭಾಷೆಗಳು ಬರುತ್ತಿದ್ದುವು. ಇಂಡಿಯಾದ ಮುಸಲ್ಮಾನ ಹಾಗೂ ಹಿಂದೂ ಅಧಿಕಾರಿಗಳಿಗೆ ಈ ಭಾಷೆಗಳಲ್ಲಿ ಒಂದಾದರೂ ಗೊತ್ತಿತ್ತು. ಇದರಿಂದ

ಅವರೊಡನೆ ಒಡನಾಡಿ ಅನೇಕ ವಿಷಯಗಳನ್ನು ತಿಳಿದುಕೊಂಡು ಫ್ರೆಂಚ್ ಭಾಷೆಯಲ್ಲಿ ತನ್ನ ಪ್ರವಾಸ ಕಥನವನ್ನು ಬರೆದಿಡಲು ಅನುಕೂಲವಾಯಿತು.

ಈತ ಕೊನೆಯವರೆಗೂ ತನ್ನ ಕಥನವನ್ನು ಬರೆಯುತ್ತಲೇ ಇದ್ದ. ಸತ್ತನಂತರ ಕರಡುಪ್ರತಿಗಳನ್ನು ಸರಿಯಾಗಿ ಜೋಡಿಸಿ ಪ್ರಕಟಿಸಿದವರು ಅವನ ಇಬ್ಬರು ಸ್ನೇಹಿತರು. ಹೀಗೆ ಪ್ರಕಟವಾದ ಕಥನ ಹಲವಾರು ಪುನರ್‌ಮುದ್ರಣಗಳನ್ನು ಕಂಡಿತು. ಇಂಗ್ಲಿಷ್, ಡಚ್ ಮತ್ತು ಜರ್ಮನ್ ಭಾಷೆಗಗಳಿಊ ಅದು ಭಾಷಾಂತರವಾಯಿತು. ಇಂಗ್ಲಿಷಿಗೆ ಭಾಷಾಂತರವಾದುದು ೧೬೮೭ರಲ್ಲಿ. ಈ ಕೆಲಸಮಾಡಿ ದವರು ಎ. ಲೊವೆಲ್ (A. Lovell) ಎಂಬುವರು.

ದೆವೆನೊ ಕೇವಲ ಇಂಡಿಯಾ ಮತ್ತು ಅಲ್ಲಿಯ ಜನರನ್ನು ಕುರಿತು ಹೇಳುವುದರಿಂದ ತೃಪ್ತಿ ಯಾಗದೆ ಅಲ್ಲಿಯ ಸಸ್ಯಗಳು ಹಾಗೂ ಹೂಗಿಡಗಳ ಬಗ್ಗೆಯೂ ಒಂದು ಪುಸ್ತಕ ಬರೆಯಬೇಕೆಂದು ಆಶಿಸಿದ್ದ. ಆದರೆ ಆತನ ಅಕಾಲ ಮರಣದಿಂದ ಅದು ನೆರವೇರಲಿಲ್ಲ. ಅಂತೂ ಆತ ಬರೆದಿಟ್ಟುಹೋಗಿರು ವುದು ಒಂದು ಅಪೂರ್ವ ಪ್ರವಾಸಕಥನವಾಗಿ ಉಳಿದಿದೆ.

ಪ್ರವಾಸಮಾಡಬೇಕೆಂಬ ಆಸೆ ಮನುಷ್ಯನ ಸ್ವಭಾವದಷ್ಟೇ ಹಿಂದಿನದು. ಈಗಂತೂ ಈ ಆಸೆ ಎಂದಿಗಿಂತ ಹೆಚ್ಚಾಗಿದೆ. ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಪ್ರವಾಸಿಗಳನ್ನು ಕಾಣಬಹುದು. ಇದು ನಾನು ಹೇಳಿದುದರ ಸತ್ಯವನ್ನು ದೃಢಪಡಿಸುತ್ತದೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಪ್ರಕಟವಾಗಿರುವ ಅವರ ಪ್ರವಾಸ ಕಥನಗಳು ನಾನು ಹೇಳಿರು ವುದರಲ್ಲಿ ಯಾವ ಅನುಮಾನಕ್ಕೂ ಅವಕಾಶವಿಲ್ಲವೆಂಬುದನ್ನು ಸಾರುತ್ತವೆ. ಅಪರೂಪ ವಾದುದನ್ನು ನೋಡಲು ಎಲ್ಲರಿಗೂ ಕುತೂಹಲ. ಬೇರೆ ಕೆಲಸವಿಲ್ಲದಿದ್ದರೆ ಅಂಥವು ಗಳನ್ನೆಲ್ಲಾ ನೋಡಿಬರಲು ಯಾರಿಗೆತಾನೇ ಆಸೆ ಇಲ್ಲ! ಇಂಥ ಆಸೆಯೇ ನನ್ನ ಪ್ರವಾಸಕ್ಕೆ ಕಾರಣವಾಯಿತು.

ನನ್ನೀ ಆಸೆಯನ್ನು ಕೈಗೂಡಿಸಿಕೊಳ್ಳಲು ನನಗೆ ಯಾವ ತಾಪತ್ರಯವೂ ಇರಲಿಲ್ಲ. ೧೬೫೨ರಲ್ಲಿ ನನ್ನ ಪ್ರವಾಸವನ್ನು ಆರಂಭಿಸಿದೆ. ಮೊದಲು ಇಂಗ್ಲೆಂಡಿಗೆ ಹೋದೆ. ಅಲ್ಲಿಂದ ಹೊರಟು ಹಾಲ್ಯಾಂಡ್ ಮತ್ತು ಜರ್ಮನಿ ದೇಶಗಳನ್ನು ನೋಡಿಕೊಂಡು ಇಟಲಿಗೆ ಹೋದೆ. ರೋಮ್‌ನಲ್ಲಿ ಒಬ್ಬ ಫ್ರೆಂಚ್ ಮಹಾಶಯ ಸಿಕ್ಕಿದ. ಆತನ ಹೆಸರು ಹರ್‌ಬೆಲೊ (Herbelot) ಎಂದು. ಅವನೊಬ್ಬ ದೊಡ್ಡ ಪಂಡಿತನೆಂದು ಹೆಸರು ಗಳಿಸಿದ್ದ. ಜ್ಞಾನಾರ್ಜನ ಮಾಡಬೇಕೆನ್ನುವವರೆಲ್ಲಾ ಅವನನ್ನು ಮುತ್ತಿಕೊಳ್ಳುತ್ತಿದ್ದರು. ನಾನು ಅವನ ಸ್ನೇಹ ಸಂಪಾದಿಸಿ ಅವನಿಂದ ಪರ್ಷಿಯಾದೇಶದ ಬಗ್ಗೆ ತಿಳಿದುಕೊಳ್ಳ ಬೇಕಾದುದನ್ನೆಲ್ಲಾ ತಿಳಿದುಕೊಂಡೆ. ಆ ದೇಶದಲ್ಲಿ ಪ್ರವಾಸಮಾಡಬೇಕೆಂಬ ಆಸೆ ಅವನ ಪರಿಚಯವಾದ ಮೇಲೆ ಉಂಟಾಯಿತು.

೧೬೫೫ನೆಯ ಮೇ ೩೧ ಸೋಮವಾರ ರೋಮ್ ನಗರದಿಂದ ಹೊರಟು, ಹಡಗು ಹತ್ತಿ, ಮೆಸ್ಸಿನಾ, ಸಿಸಿಲಿ, ಮಾಲ್ಟಾ, ಕಾನ್‌ಸ್ಟಂಟಿನೋಪಲ್, ತುರ್ಕಿ, ಸ್ಮಿರ್ನಾ, ರೋಡ್ ದ್ವೀಪ, ಅಲೆಕ್ಸಾಂಡ್ರಿಯಾ, ಕೈರೋ, ಸೂಯೆಜ್, ಗಾಜಾ, ಜೆರೊಸೆಲೆಮ್,

ಬೆತ್ಲೆಹೆಮ್, ಜಫ್ಫಾ, ಅಕ್ರೆ, ಡಮಿಯೆತ್ತೇ ಮತ್ತೆ ಕೈರೋ, ಅಲೆಕ್ಸಾಂಡ್ರಿಯಾ, ಗೋಲೆಟ್ಟಾ, ಟುನಿಸ್ ಮುಂತಾದ ದೇಶಗಳನ್ನೂ ಊರುಗಳನ್ನೂ ನೋಡಿಕೊಂಡು ಪ್ಯಾರಿಸ್ಸಿಗೆ ಹಿಂದಿರುಗಿದೆ.

ಹೀಗೆ ನನ್ನ ಪ್ರಾಯದ ಏಳು ವರ್ಷಗಳನ್ನು ಪ್ರವಾಸದಲ್ಲಿ ಕಳೆದರೂ, ಈ ವೇಳೆಗಾಗಲೇ ಪೌರ್ವಾತ್ಯ ದೇಶಗಳನ್ನು ಸಾಕಷ್ಟು ನೋಡಿದ್ದರೂ, ಪರ್ಷಿಯಾ ಮತ್ತು ಇಂಡೀಸನ್ನು (ಇಂಡಿಯಾ) ನೋಡಬೇಕೆಂಬ ನನ್ನ ಆಸೆ ಕೈಗೂಡಿರಲಿಲ್ಲ. ಪ್ಯಾರಿಸ್‌ನಲ್ಲಿ ಸ್ವಲ್ಪಕಾಲ ನನ್ನ ನೆಂಟರಿಷ್ಟರೊಡನೆ ಇದ್ದಮೇಲೆ ಮತ್ತೆ ಪ್ರವಾಸಮಾಡಬೇಕೆಂಬ ಆಸೆ ಉಂಟಾಯಿತು. ಇದಕ್ಕಾಗಿ ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳಲಾರಂಭಿಸಿದೆ. ಪ್ರವಾಸಿಗೆ ಅತ್ಯಾವಶ್ಯಕವಾಗಿ ಬೇಕಾಗಿರುವ ವಿಜ್ಞಾನಶಾಸ್ತ್ರಗಳನ್ನು ನಾಲ್ಕು ವರ್ಷ ಅಭ್ಯಾಸ ಮಾಡತೊಡಗಿದೆ. ವಾಸ್ತವವಾಗಿ ಪ್ಯಾರಿಸ್‌ನಲ್ಲಿದ್ದ ವೇಳೆ ಪ್ರವಾಸಮಾಡಬೇಕೋ ಅಥವಾ ಪ್ಯಾರಿಸ್ಸಿನಲ್ಲಿಯೇ ನೆಲಸಬೇಕೋ ಎಂಬ ತೊಯ್ದಾಟಕ್ಕೆ ಒಳಗಾದೆ. ಕೊನೆಗೆ ಪ್ರವಾಸಮಾಡಬೇಕೆಂಬ ನಿರ್ಧಾರಕ್ಕೆ ಬಂದೆ.

ಇನ್ನು ಹೆಚ್ಚು ದಿನ ಪ್ಯಾರಿಸ್ಸಿನಲ್ಲಿದ್ದರೆ ಕಾಲದ ಪರಿಣಾಮಕ್ಕೆ ಒಳಗಾಗುವೆನೆಂಬ ಅಂಜಿಕೆಯಿಂದ ಪ್ಯಾರಿಸ್‌ನ್ನು ೧೬೬೪ನೆಯ ಅಕ್ಟೋಬರ್ ೧೬ ರಂದು ಬಿಟ್ಟೆ. ಸ್ನೇಹಿತನೊಬ್ಬನ ಜೊತೆಯಲ್ಲಿ ಬರ್ಗಂಡಿಗೆ ಹೋಗುವವನಂತೆ ನಟಿಸಿ ಮಾರ್ಸೇಲ್ಸ್‌ಗೆ ಹೋಗಿ ಅಲ್ಲಿಂದ ಲೆಗ್‌ಹಾರನ್‌ಗೆ ಹೋಗುವ ಹಡಗಿನಲ್ಲಿ ಅಲ್ಲಿಗೆ ಹೋಗಿ, ಅಲ್ಲಿಂದ ಮಾಲ್ಟಾಕ್ಕೂ, ಮಾಲ್ಟಾದಿಂದ ಅಲೆಕ್ಸಾಂಡ್ರಿಯಾ, ದಮಾಸ್ಕಸ್, ಅಲೆಪ್ಪೋ, ಮೊಸುಲ್, ಬಾಗ್‌ದಾದ್ ಮೂಲಕ ಪರ್ಷಿಯಾ ದೇಶವನ್ನು ಪ್ರವೇಶಿಸಿದೆ.

ಪರ್ಷಿಯಾ ದೇಶದ ಹಮದಾದ್‌ನಿಂದ ಇಸ್ಫಹಾನ್‌ಗೆ ಬಂದೆ. ಇಲ್ಲಿ ಪರ್ಷಿಯಾ ರಾಜನ ಆಸ್ಥಾನವನ್ನೂ ಈ ದೇಶದ ನಡೆನುಡಿಗಳನ್ನೂ ಕಂಡು ಕೇಳಿ ತಿಳಿದುಕೊಂಡು ಷಿರಾಜ್‌ಗೆ ಬಂದೆ. ಷಿರಾಜ್‌ನಿಂದ ಬಂದರ್ ಅಬ್ಬಾಸ್ ಮತ್ತು ಹೋರ್ಮ್ಸ್‌ಗಳನ್ನು ನೋಡಿಕೊಂಡು ಮತ್ತೆ ಷಿರಾಜ್‌ಗೆ ಹಿಂದಿರುಗಿದೆ. ಷಿರಾಜ್‌ನಿಂದ ಬಂದರ್ ರಿಖ್‌ಗೆ ಹೋದೆ. ಬಂದರ್ ರಿಖ್‌ನಿಂದ ಬಸ್ಸೋರಾಕ್ಕೆ ಹೋದೆ. ಇಲ್ಲಿ ಹಡಗು ಹತ್ತಿ ಇಂಡೀಸಿಗೆ ಹೊರಟೆ.

೧೬೬೫ರ ಇಸವಿ ನವೆಂಬರ್ ೫ನೆಯ ತಾರೀಖು ಶುಕ್ರವಾರ 'ಹೋಪ್‌ವೆಲ್' ಎಂಬ ಹಡಗಿನಲ್ಲಿ ಬಸ್ಸೋರಾದಿಂದ ಸೂರತ್ತಿಗೆ ಪ್ರಯಾಣ ಹೊರಟೆ. ನಾನು ಹೊರಟ ಹಡಗು ಒಬ್ಬ ಆರ್ಮೀನಿಯನನಿಗೆ ಸೇರಿತ್ತು. ಹದಿನೆಂಟು ಫಿರಂಗಿಗಳ ಈ ಹಡಗಿನಲ್ಲಿ ಮೂವತ್ತೊಂದು ಜನರಿದ್ದರು. ಇವರಲ್ಲಿ ಇಪ್ಪತ್ತಾರು ಜನ ಬನಿಯರು ಮತ್ತು ಐವರು ಮಹಮ್ಮದೀಯರು. ಫ್ರಾಂಕರು (ಫ್ರಾನ್ಸ್ ದೇಶದವರು) ಯಾರೂ ಇರಲಿಲ್ಲ. ಆದರೆ ಹಡಗಿನ ಕ್ಯಾಪ್ಟನ್ ಲೆಗ್ ಹಾರ್ನ್‌ನವನು. ಫಿರಂಗಿ ಹಾರಿಸುವವನು ಕಾಲೋನಿಯವನು. ಇಬ್ಬರು ನಾವಿಕರಲ್ಲಿ ಒಬ್ಬ ವೆನೀಸ್ ದೇಶದವನು; ಇನ್ನೊಬ್ಬ ಗ್ರೀಸ್‌ನವನು.

ಹೋಪ್‌ವೆಲ್ ಹಡಗನ್ನು ಕಟ್ಟಿದವರು ಇಂಗ್ಲಿಷರು. ಇದು ಮೊದಲಿಗೆ ಸೂರತ್‌ನಲ್ಲಿದ್ದ ಇಂಗ್ಲಿಷ್ ಪ್ರೆಸಿಡೆಂಟನಿಗೆ ಸೇರಿತ್ತು. ಇಂಗ್ಲಿಷರಿಗೂ ಡಚ್ಚರಿಗೂ ಯುದ್ಧ ಪ್ರಾರಂಭವಾದಾಗ ಇದು ಅದಕ್ಕೆ ಉಪಯೋಗವಿಲ್ಲವೆಂದು ಇದನ್ನು ಆರ್ಮೀಯನರಿಗೆ ಮಾರಿಬಿಟ್ಟಿದ್ದರು. ಆರ್ಮೀಯನರು ಇದನ್ನು ೧೪,೦೦೦ ರೂಪಾಯಿಗಳಿಗೆ ಕೊಂಡು ಕೊಂಡಿದ್ದರು. ಇದರ ಮೇಲೆ ಆರ್ಮಿನಿಯನ್ ಬಾವುಟ ಹಾರಿಸಿ ಉಪಯೋಗಿಸು ತ್ತಿದ್ದರು.

ಹಡಗಿನ ಕ್ಯಾಪ್ಟನ್ ಬಳಿ ಮೂರು ರಹದಾರಿ (ಪಾಸ್‌ಪೋರ್ಟ್)ಗಳಿದ್ದುವು. ಒಂದನ್ನು ಇಂಗ್ಲಿಷರಿಂದ, ಇನ್ನೊಂದನ್ನು ಪೋರ್ಚುಗೀಸರಿಂದ, ಮತ್ತೊಂದನ್ನು ಡಚ್ಚ ರಿಂದ ಪಡೆದಿದ್ದ.

ಈ ಹಡಗಿನಲ್ಲಿ ಎರಡು ತಿಂಗಳುಗಳ ಕಾಲ ಪ್ರಯಾಣ ಮಾಡಿ ೧೬೬೬ರ ಜನವರಿ ೧೦ನೆಯ ತಾರೀಖು ಸೂರತ್ ಸಮೀಪಿಸಿದೆವು. ಇಂಡಿಯಾ ಸಮುದ್ರದ ಮೇಲೆ ಯಾನ ಮಾಡಲು ಸರಿಯಾದ ಕಾಲವೆಂದರೆ ' ಮೊಸ್ಸೋನ್ ' ಅಥವಾ ' ಮಾನ್‌ಸೂನ್ ' ವೇಳೆ. ' ಮೊಸ್ಸೋನ್ ' ಎಂಬ ಪದ 'ಮೌಸ್ಸೆ ' ಎಂಬ ಪದದ ಅಪಭ್ರಂಶ. ಈ ಮಾನ್ ಸೂನ್ ವೇಳೆ ಅಂದರೆ ಅಕ್ಟೋಬರ್ ಕೊನೆಯಿಂದ ಏಪ್ರಿಲ್ ಕೊನೆಯವರೆಗೆ ಪರ್ಷಿಯಾ ದಿಂದ ಇಂಡೀಸಿಗೆ ಹೋಗಲು ಅನುಕೂಲವಾದ ಗಾಳಿ ಬೀಸುತ್ತದೆ. ಈ ಕಾಲದಲ್ಲಿ ಹೋದರೆ ಬಿರುಗಾಳಿಯ ಹೊಡೆತವನ್ನು ತಪ್ಪಿಸಿಕೊಳ್ಳಬಹುದು.

ಹಡಗು ಸೂರತ್ ತಲುಪಿದ ಮಾರನೆಯ ದಿನ, ಅಂದರೆ ೧೧ನೆಯ ತಾರೀಖು, ನಾನು ಮತ್ತು ಇತರ ಪ್ರಯಾಣಿಕರು ಮಧ್ಯಾಹ್ನ ಎರಡು ಗಂಟೆಗೆ ಹಡಗಿನಿಂದ ಇಳಿದು ದೋಣಿಯಲ್ಲಿ ಕುಳಿತು ರಾತ್ರಿ ಎಂಟು ಗಂಟೆಯ ಹೊತ್ತಿಗೆ ಸುಂಕದ ಕಟ್ಟೆಯ ಬಳಿಗೆ ಬಂದೆವು. ಆದರೆ ರಾತ್ರಿಯನ್ನು ದೋಣಿಯಲ್ಲೇ ಕಳೆಯಬೇಕಾಯಿತು. ಮಾರನೆಯ ದಿನ ಅಂದರೆ ೧೨ನೆಯ ತಾರೀಖು ಬೆಳಗ್ಗೆ ೧೦ ಗಂಟೆಗೆ ದೋಣಿಯು ಭೂಮಿಗೆ ತೀರಾ ಹತ್ತಿರಕ್ಕೆ ಹೋಯಿತು. ಸುಂಕದ ಕಟ್ಟೆಯ ಬಾಗಿಲು ತೆರೆಯುವುದು ಹತ್ತು ಗಂಟೆಗೆ. ದೋಣಿಯಲ್ಲಿದ್ದ ನಮ್ಮನ್ನು ಕೂಲಿಗಳು ತಮ್ಮ ಹೆಗಲ ಮೇಲೆ ಹೊತ್ತು ನಡುನೀರಿನಲ್ಲಿ ಹಾದು ಸುಂಕದ ಕಟ್ಟೆಯ ಬಳಿ ಇಳಿಸಿದರು. ಸುಂಕದ ಕಟ್ಟೆಯಲ್ಲಿ ನಮ್ಮೆಲ್ಲರ ಶೋಧನೆ ಆಯಿತು. ನನ್ನ ಬಳಿ ಬಟ್ಟೆಬರೆಗಳಲ್ಲದೆ ಬೇರೇನೂ ಇರಲಿಲ್ಲ. ಆದರೂ ಸುಮಾರು ಹದಿನೈದು ನಿಮಿಷಗಳ ಕಾಲ ನನ್ನ ಶೋಧನೆ ನಡೆಸಿದರು. ಯಾರನ್ನೇ ಆಗಲಿ ಹೀಗೆ ಶೋಧಿಸದೆ ಒಳಗೆ ಬಿಡುವುದಿಲ್ಲ. ನಮ್ಮ ಸಾಮಾನುಗಳನ್ನು ಬಿಚ್ಚಿ ನೋಡಿದರು. ಇಷ್ಟಾದರೂ ಕೆಲವರು ಬೇಕಾದವರನ್ನು ಅನುಸರಿಸಿಕೊಂಡು ಸುಂಕದ ಕಟ್ಟೆಯವರ ಕಣ್ಣಿಗೆ ಮಣ್ಣೆರಚಿ ಬೆಲೆಯಾದ ವಜ್ರ ಮುಂತಾದವುಗಳನ್ನು ಕದ್ದು ಸಾಗಿಸುವುದುಂಟು. ಇಲ್ಲಿ ' ಪ್ಯೂನ್ ' (Peon) ಗಳೆಂಬ ಆಳುಗಳು ಕೈಯಲ್ಲಿ ಬೆತ್ತ ಹಿಡಿದು ಉಸ್ತುವಾರಿ ನೋಡುತ್ತಿರುತ್ತಾರೆ.

ಸುಂಕದ ಕಟ್ಟೆಯ ದೊಡ್ಡ ಹಜಾರದಲ್ಲಿ ಅದರ ಮುಖ್ಯಾಧಿಕಾರಿ ತನ್ನ 'ದಿವಾನ್' ಮೇಲೆ ಕುಳಿತಿದ್ದ. ಅವನ ಬಳಿ ಕೆಳಗೆ ಅವನ ಗುಮಾಸ್ತರುಗಳು ಕುಳಿತುಕೊಂಡಿದ್ದರು. ಈ ಸ್ಥಳಕ್ಕೆ ಪ್ರಯಾಣಿಕರು ಒಬ್ಬೊಬ್ಬರಾಗಿ ಬಂದು ತಮ್ಮ ಹೆಸರನ್ನು ಒಂದು ಪುಸ್ತಕ ದಲ್ಲಿ ಬರೆಯಬೇಕು. ಅನಂತರ ಅವರ ಶೋಧನೆ ಆರಂಭವಾಗುತ್ತದೆ. ನಾವು ನಮ್ಮ ಟೋಪಿ, ರುಮಾಲು, ನಡುಪಟ್ಟಿ, ಪಾದರಕ್ಷೆ, ಕಾಲುಚೀಲ ಮತ್ತು ಇತರ ಉಡುಪು ಗಳನ್ನೆಲ್ಲಾ ಬಿಚ್ಚಿ ತೋರಿಸಿದೆವು. ಶೋಧಕರು ಪ್ರಯಾಣಿಕರ ಅಂಗಾಂಗಗಳನ್ನೆಲ್ಲಾ ಮುಟ್ಟಿನೋಡಿದರು. ಚಿನ್ನ ಅಥವಾ ಬೆಳ್ಳಿ ಸಿಕ್ಕಿದರೆ ಅದರಲ್ಲಿ ಶೇ. ೨೩ ಯಷ್ಟನ್ನು ತೆಗೆದುಕೊಂಡು ಉಳಿದುದನ್ನು ಹಿಂದಿರುಗಿ ಕೊಡುತ್ತಾರೆ.

ಶೋಧನೆಯಾದವರನ್ನು ಕಿರುಬಾಗಿಲೊಂದರ ಮೂಲಕ ಹೊರಕ್ಕೆ ಕಳುಹಿಸಿದರು. ಈ ಬಾಗಿಲು ಊರಿನ ಬೀದಿಯ ಕಡೆಗೆ ಇದೆ. ಆದರೆ ಸಾಮಾನುಗಳನ್ನು ಮಾತ್ರ ಸುಂಕದ ಕಟ್ಟೆಯಲ್ಲಿಯೇ ಇಟ್ಟು ಮಾರನೆಯ ದಿನ ಬಂದು ತೆಗೆದುಕೊಂಡುಹೋಗ ಬೇಕು ಎಂದರು. ಸಂಜೆಯಾದಾಗ ಸುಂಕದ ಕಟ್ಟೆಯ ಬಾಗಿಲುಗಳನ್ನೂ 'ಗೇಟ್' ಗಳನ್ನೂ ಭದ್ರಪಡಿಸಿ ಮೊಹರುಮಾಡುತ್ತಾರೆ. ಮಾರನೆಯ ದಿನ ಬಂದು ಮೊಹರು ಸರಿಯಾಗಿದೆಯೇ ಎಂದು ಖಚಿತಮಾಡಿಕೊಂಡನಂತರವೇ ಬಾಗಿಲು ತೆರೆಯುವುದು.

ತಮ್ಮ ಸಾಮಾನುಗಳನ್ನು ತೆಗೆದುಕೊಂಡುಹೋಗಲು ಬಂದವರೆಲ್ಲ ಹೊರಗಡೆ ಕಾದಿದ್ದರು. ಒಳಗೆ ಹೋಗಲು ನನಗೆ ಮೊಟ್ಟಮೊದಲೇ ಅವಕಾಶ ಸಿಕ್ಕಿದ್ದು ನನ್ನ ಅದೃಷ್ಟವೇ ಸರಿ. ಒಳಕ್ಕೆ ಹೋದಾಗ 'ನಿಮ್ಮ ಸಾಮಾನುಗಳು ಯಾವುವು?' ಎಂದು ಕೇಳಿದರು. ನಾನು ತೋರಿಸಿದೆ. ಅವುಗಳನ್ನು ತಂದು ಹಜಾರದ ಮಧ್ಯೆ ಇಟ್ಟರು. ಎಲ್ಲ ಸಾಮಾನುಗಳನ್ನೂ ಬಿಚ್ಚಿ ಶೋಧಿಸಿದರು. ನನ್ನ ಬಳಿ ಯಾವ ವ್ಯಾಪಾರದ ಸರಕು ಗಳಿಲ್ಲದಿದ್ದರೂ ಅವುಗಳ ಸಂಪೂರ್ಣ ತಪಾಸಣೆಯಾಯಿತು. ನನ್ನ ಹಾಸಿಗೆಯ ಹೊಲಿಗೆ ಯನ್ನೂ ಬಿಚ್ಚಿ ನೋಡಿದರು. ಎಲ್ಲವೂ ಸರಿಯಾಗಿದೆಯೆಂದು ಕಂಡಮೇಲೆ ತೆಗೆದು ಕೊಂಡು ಹೋಗಬಹುದೆಂದು ಗುಮಾಸ್ತರು ಹೇಳಿದರು.

ನಾನು ಯಾವುದಕ್ಕೂ ಸುಂಕ ಕೊಡಲಿಲ್ಲ. ನಾನು ತಂದಿದ್ದ ಹಣಕ್ಕೆ ಮಾತ್ರ ಸುಂಕ ಕೊಟ್ಟೆ. ಇಷ್ಟು ಸುಲಭವಾಗಿ ನನ್ನ ಕೆಲಸ ಮುಗಿದಿದ್ದು ನನ್ನ ಅದೃಷ್ಟವೇ ಎನ್ನಬೇಕು. ಏಕೆಂದರೆ, ಕೆಲವು ವೇಳೆ ಒಂದು ತಿಂಗಳತನಕ ವರ್ತಕರು ತಮ್ಮ ಸಾಮಾನು ಗಳನ್ನು ಬಿಡಿಸಿಕೊಳ್ಳುವುದಕ್ಕಾಗುವುದಿಲ್ಲ. ವರ್ತಕರು ಕ್ರೈಸ್ತರಾಗಿದ್ದರೆ ನೂರರಲ್ಲಿ ನಾಲ್ಕು ಭಾಗ, ಬನಿಯರಾಗಿದ್ದರೆ ನೂರರಲ್ಲಿ ಐದು ಭಾಗ ಸುಂಕ ಕೊಡಬೇಕು.[೧]

---

೧. ಇದು ಔರಂಗಜೇಬನು ಹಿಂದುಗಳ ಮೇಲೆ ಬೇಕೆಂದೇ ಹೇರಿದ ಸುಂಕದ ಹೊರೆ. ಇದರ ಉದ್ದೇಶ ಹಿಂದುಗಳು ಮುಸಲ್ಮಾನರಾಗಲಿ ಎಂಬುದು. ೧೬೬೫ನೆಯ ಏಪ್ರಿಲ್‌ನಲ್ಲಿ ಹೊರಡಿಸಿದ ರಾಜಾಜ್ಞೆಯಂತೆ ಹೊರಗಡೆಯಿಂದ ತರಿಸಿದ ಮಾಲಿಗೆ ಮುಸಲ್ಮಾನರು ಶೇ. ೨೩ ಸುಂಕ ಕೊಟ್ಟರೆ ಹಿಂದೂಗಳು ಶೇ. ೫ ಕೊಡಬೇಕಾಯಿತು. ಎರಡು ವರ್ಷಗಳ ನಂತರ ಮುಸಲ್ಮಾನ ವರ್ತಕರು ಕೊಡಬೇಕಾದ ಸುಂಕವನ್ನು ಪೂರ್ತ ವಜಾ ಮಾಡಲಾಯಿತು. ಆದರೆ ಹಿಂದೂಗಳಿಗೆ ಯಾವ ರಿಯಾಯ್ತಿಯೂ ಸಿಗಲಿಲ್ಲ.

ನಾನು ಇಂಡೀಸಿನಲ್ಲಿ ಕಂಡುದರ ವರ್ಣನೆ ಆರಂಭಿಸುವ ಮುನ್ನ ಈ ದೇಶದ ಗಡಿಗಳನ್ನೂ ದೇಶವು ಎಷ್ಟು ವಿಶಾಲವಾಗಿದೆಯೆಂಬುದನ್ನೂ ಹೇಳಲಿಚ್ಛಿಸುತ್ತೇನೆ. ಇಂಡೀಸಿನ ಪಶ್ಚಿಮಕ್ಕೆ ಮಕ್ರಾನ್ ಅಥವಾ ಸಿಂಧೂ, ಕಾಂದಹಾರ್ ಮತ್ತು ಕಾಬೂಲ್ ; ಉತ್ತರಕ್ಕೆ ಟಾರ್ಟರಿ ದೇಶ ; ಪೂರ್ವಕ್ಕೆ ಚೀನಾದೇಶ ಮತ್ತು ಸಮುದ್ರ ; ದಕ್ಷಿಣಕ್ಕೆ ಸಾಗರ. ಅನೇಕ ರಾಜ್ಯಗಳನ್ನೂ ಪ್ರಾಂತಗಳನ್ನೂ ಒಳಗೊಂಡಿರುವ ಇಂಡೀಸ್ ವಿಶಾಲ ವಾಗಿರಲೇಬೇಕು. ಪೂರ್ವಕ್ಕಂತೂ ತುಂಬಾ ದೊಡ್ಡದಾಗಿ ಹಬ್ಬಿರಬೇಕು. ಏಕೆಂದರೆ, 'ಇಂದುಸ್ತಾನ'ದ ವರ್ತಕರು ಚೀನಾಕ್ಕೆ ಹೋಗಬೇಕಾದರೆ ಒಂದು ವರ್ಷವೇ ಆಗು ತ್ತದೆಯೆಂದು ಹೇಳುತ್ತಾರೆ. ಒಂದು ವರ್ಷ ಪ್ರಯಾಣ ಮಾಡಬೇಕಾದರೆ ಮೊಗಲ್ ದೇಶಕ್ಕೂ ಚೀನಾಕ್ಕೂ ಮಧ್ಯೆ ಹಲವಾರು ರಾಜ್ಯಗಳಿವೆ ಎಂಬುದು ಸ್ಪಷ್ಟವಾಗುವುದು.

ಇಂಡೀಸಿನ ಪೂರ್ವಭಾಗವನ್ನು, ಅಂದರೆ ಗಂಗಾನದಿಯ ಆ ಕಡೆ ಇರುವುದನ್ನು, 'ಇಂಡಿಯಾ' ಎಂತಲೂ, ಗಂಗಾನದಿಯ ಈ ಕಡೆ ಇರುವ ಪಶ್ಚಿಮಭಾಗವನ್ನು 'ಇಂದುಸ್ತಾನ' ಎಂತಲೂ ಕರೆಯುತ್ತಾರೆ. ಇಂದೂಸ್ತಾನದ ಪೂರ್ವದ ಕಡೆ ಗಂಗಾನದಿ ಮತ್ತು ಪಶ್ಚಿಮದ ಕಡೆ ಇಂಡಸ್ ನದಿಗಳೂ, ಉತ್ತರದ ಕಡೆ ಜಗತಾಯ್ ಮತ್ತು ತುರ್ಕಿಸ್ಥಾನ್ ಪರ್ವತಗಳೂ, ದಕ್ಷಿಣದ ಕಡೆ ಸಾಗರದವರೆಗೂ ಇರುವ ಕೇಪ್ ಕಾಮೊರಿನ್ ಗಡಿಗಳಾಗಿವೆ.

ಇಂಡೀಸ್‌ನಲ್ಲಿ ಮೊಗಲ್ ಚಕ್ರವರ್ತಿಯ ರಾಜ್ಯ ಅತ್ಯಂತ ದೊಡ್ಡದೂ ಭಾರಿ ಶಕ್ತಿಯುತವೂ ಆದ ರಾಜ್ಯವಾಗಿದೆ. ಇದನ್ನು 'ಮೊಗಲಿಸ್ತಾನ್' ಎಂದು ಕರೆಯು ತ್ತಾರೆ. ಇತರ ಇಂದೂಸ್ತಾನ್ ರಾಜ್ಯಗಳು ಮೊಗಲ್ ರಾಜ್ಯಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಅಧೀನ ರಾಜ್ಯಗಳಾಗಿವೆ.

ಈಗ ಔರಂಗಜೇಬ ಮೊಗಲ್ ಚಕ್ರಾಧಿಪತಿಯಾಗಿದ್ದಾನೆ. ಸಿಂಹಾಸನವನ್ನೇರಿದ ನಂತರ ತಂದೆಯು ತನಗೆ ಎಸಗಿದ ಕ್ರೂರಕೃತ್ಯಗಳನ್ನು ಈತ ತನ್ನವರಿಗೂ ಮಾಡಿದ. ತನ್ನ ಹಿರಿಯ ಸಹೋದರ ದಾರಾನ ಕೊಲೆ ಮಾಡಿಸಿದ. ಇನ್ನೊಬ್ಬ ಸಹೋದರ ಮುರಾದನನ್ನು ಹಿಡಿದು ಬಂದೀಖಾನೆಯಲ್ಲಿ ಹಾಕಿದ. ಅಷ್ಟೇ ಅಲ್ಲ, ಹೆತ್ತ ತಂದೆ ಯನ್ನೇ (ಷಾಜಹಾನನ್ನು) ಸೆರೆಮನೆಯಲ್ಲಿಟ್ಟುಬಿಟ್ಟ. ಐದಾರು ವರ್ಷಗಳ ನಂತರ, ಅಂದರೆ ಕ್ರಿ. ಶ. ೧೬೬೬ರಲ್ಲಿ ತಂದೆ ಕಾಲವಾದನು.

ಹಿಂದುಸ್ತಾನದಲ್ಲಿ ಗುಜರಾತ್ ಪ್ರಾಂತ ತುಂಬಾ ಸೊಗಸಾಗಿದೆ. ನರ್ಮದಾ, ತಪತಿ ಮುಂತಾದ ನದಿಗಳು ಈ ಪ್ರಾಂತವನ್ನು ಫಲವತ್ತಾಗಿ ಮಾಡಿವೆ. ಅಹಮದಾ ಬಾದ್ ಗುಜರಾತಿನ ರಾಜಧಾನಿ. ಅಲ್ಲಿಗೆ ಹೋಗುವ ಉದ್ದೇಶದಿಂದ ನಾನು ಫೆಬ್ರುವರಿ ೧ನೆಯ ತಾರೀಖು ಸೂರತ್‌ನಿಂದ ಪ್ರಯಾಣ ಮಾಡಿದೆ. ಉತ್ತರಕ್ಕೆ ನೇರವಾಗಿ ಎರಡು ಗಂಟೆ ಪ್ರಯಾಣ ಮಾಡುವಲ್ಲಿ ತಪತಿ ನದಿ ಸಿಕ್ಕಿತು. ದೊಡ್ಡ ದೋಣಿಯೊಂದರಲ್ಲಿ ನದಿಯನ್ನು ದಾಟಿದೆ. ಆದರೆ ಅದರಲ್ಲಿ ನನ್ನ ಗಾಡಿಗಳನ್ನು ಸಾಗಿಸಲು ಆಗಲಿಲ್ಲ.

ಆದ್ದರಿಂದ ನನ್ನ ಗಾಡಿಗಳನ್ನೂ ಅದಕ್ಕೆ ಕಟ್ಟಿದ ಎತ್ತುಗಳನ್ನೂ ಬಿಚ್ಚಿ ಎಂಟು ಜನರು ನದಿಯಿಂದಾಚೆ ಹೊಡೆದು ಸಾಗಿಸಿದರು. ನದಿ ದಾಟಲು ನನಗೆ ಅರ್ಧ ಗಂಟೆ ಹಿಡಿಯಿತು.

ಮುಂದೆ ಪ್ರಯಾಣಮಾಡಿ ನರ್ಮದಾ ನದಿಯನ್ನು ಇದೇ ರೀತಿಯಲ್ಲಿ ದಾಟಿ ಬ್ರೋಚ್‌ನ್ನು ಮುಟ್ಟಿದೆ. ಸಮುದ್ರಕ್ಕೂ ಬ್ರೋಚ್‌ಗೂ ಇಪ್ಪತ್ತು 'ಕೊಸ್ಸೆ'ಗಳು.೧ ಕೊಸ್ಸೆ ಇಂಡಿಯನರಲ್ಲಿ ದೂರವನ್ನು ಅಳೆಯುವ ಒಂದು ವಿಧಾನ. ಇದು ನಮ್ಮ, ಅಂದರೆ ಫ್ರಾನ್ಸಿನ, ಅರ್ಧ ಲೀಗ್ ಆಗುತ್ತದೆ.

ಬ್ರೋಚ್ ಒಂದು ಗುಡ್ಡದ ಮೇಲಿದೆ. ಇದರ ಕೋಟೆ ದೊಡ್ಡದೂ ಚೆಚ್ಚೌಕವೂ ಆಗಿದೆ. ದೂರದಿಂದಲೇ ಕಾಣಿಸುತ್ತದೆ. ಇಲ್ಲಿಯ 'ಬಜಾರ್'ಗಳಲ್ಲಿ ಹತ್ತಿಯ ಬಟ್ಟೆಗಳನ್ನು ನೇಯುತ್ತಾರೆ. ಈ ಬಟ್ಟೆಗಳನ್ನು 'ಬಫ್ತಾಸ್' (baftas)೨ ಗಳೆಂದು ಕರೆಯುತ್ತಾರೆ. ಇಂಡೀಸ್‌ನಲ್ಲಿ ಇವುಗಳಿಗೆ ಹೇರಳವಾದ ಗಿರಾಕಿಯಿದೆ.

ಬ್ರೋಚ್‌ನ ಕೋಟೆ ಅಲ್ಲಲ್ಲಿ ತೂತುಬಿದ್ದಿದೆ. ಯಾರೂ ಅದನ್ನು ಮುಚ್ಚುವ ಗೋಜಿಗೆ ಹೋಗಿಲ್ಲ. ಪಟ್ಟಣದಲ್ಲಿ 'ಮೋಸ್ಕು' (ಮಸೀದಿ) ಗಳೂ 'ಪಗೋಡಾ' (ದೇವಸ್ಥಾನ)ಗಳೂ೩ ಇವೆ. ನರ್ಮದಾ ನದಿಯ ನೀರು ಬಟ್ಟೆಗಳನ್ನು ಚೆಲುವೆಮಾಡುವುದಕ್ಕೆ ತುಂಬಾ ಒಳ್ಳೆಯದು. ಎಲ್ಲಾ ಕಡೆಗಳಿಂದ ಬಟ್ಟೆಗಳನ್ನು ತಂದು ಇಲ್ಲಿ ಚೆಲುವೆ ಮಾಡುತ್ತಾರೆ. ಈ ಬಟ್ಟೆಗೆ ಇಲ್ಲಿ ಹೆಚ್ಚು ಗಿರಾಕಿ ಇಲ್ಲ. ಇಲ್ಲಿ 'ಆ್ಯಗೇಟ್ (ಒಂದು ಬಗೆಯ ಪ್ರಶಸ್ತ ಶಿಲೆ)ಗಳ ವ್ಯಾಪಾರ ಮಾತ್ರ ನಡೆಯುತ್ತದೆ. ಇವುಗಳ ಮಾರಾಟ ಹೆಚ್ಚಾಗಿ ಕ್ಯಾಂಬೆಯಲ್ಲಿ. ಬ್ರೋಚ್‌ನ ಸುತ್ತಮುತ್ತ ನವಿಲುಗಳು ಹೇರಳವಾಗಿವೆ. ಇಲ್ಲಿ ಡಚ್ಚರ ಒಂದು ಫ್ಯಾಕ್ಟೊರಿ೪ ಇದೆ.

ಬ್ರೋಚ್ ಬಿಟ್ಟು ಉತ್ತರಕ್ಕೆ ಪ್ರಯಾಣ ಮಾಡಿ ಸೌರ್‌ಬ್ಬಾನ್ ಎಂಬ ಸಣ್ಣ ಪಟ್ಟಣದ ಮೂಲಕ ದೆಬ್ಕಾ ಎಂಬ ಊರಿಗೆ ಹೋದೆ. ಇಲ್ಲಿಯ ನಿವಾಸಿಗಳನ್ನು ಮೊದಲಿಗೆ 'ಮೆರ್ದ್ದಿಕೌರಾ', ಅಂದರೆ ನರಮಾಂಸ ಭಕ್ಷಕರು ಎಂದು ಕರೆಯುತ್ತಿದ್ದರು.

---

೧. ಕೊಸ್ಸೆ: ಈ ಪದ ಸಂಸ್ಕೃತದ 'ಕ್ರೋಶ' ಅಂದರೆ ಒಂದು ಕೂಗಳತೆ ಎಂಬುದರಿಂದ ಬಂದುದೆಂದು ಹೇಳುತ್ತಾರೆ. ಕ್ರೋಶ ಎಂಬುದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ದೂರದ ಅಳತೆಯಾಗಿದ್ದರೂ ಸಾಮಾನ್ಯವಾಗಿ ೨ ಮೈಲಿಗೆ ಸಮನಾಗಿತ್ತು. ಅಕ್ಬರನ ಕಾಲದಲ್ಲಿ ಒಂದು ಕ್ರೋಸ್‌ಗೆ ೫,೦೦೦ ಗಜಗಳು.

೨. 'ಬಫ್ತಾಸ್' ಎಂದರೆ ನೇಯ್ದದ್ದು ಎಂದೂ, ಈ ಪದ ಪರ್ಷಿಯನ್ ಭಾಷೆಯಿಂದ ಬಂದುದೆಂದೂ ಗೊತ್ತಾಗುತ್ತದೆ.

೩. ಪಗೋಡಾ: ಈ ಪದವನ್ನು ಮೂರು ಅರ್ಥಗಳಲ್ಲಿ ಉಪಯೋಗಿಸುತ್ತಾರೆ. ದೇವಸ್ಥಾನ, ವಿಗ್ರಹ ಮತ್ತು ದಕ್ಷಿಣ ಇಂಡಿಯಾದಲ್ಲಿ ಚಲಾವಣೆಯಲ್ಲಿದ್ದ ಒಂದು ನಾಣ್ಯ. ಇಲ್ಲಿ ಉಪಯೋಗಿಸಿರುವುದು ದೇವಸ್ಥಾನ ಎಂಬ ಅರ್ಥದಲ್ಲಿ.

೪. ಫ್ಯಾಕ್ಟೊರಿ: ಈ ಫ್ಯಾಕ್ಟೊರಿಯನ್ನು ಡಚ್ಚರು ೧೬೧೭ರಲ್ಲಿ ಸ್ಥಾಪಿಸಿದರು. ಫ್ಯಾಕ್ಟೊರಿ ಎಂದರೆ ವ್ಯಾಪಾರದ ಕೋಠಿ.

ಇಲ್ಲಿ ಇತ್ತೀಚಿನವರೆಗೆ ನರಮಾಂಸವನ್ನು ಅಂಗಡಿಗಳಲ್ಲಿಟ್ಟು ಬಹಿರಂಗವಾಗಿ ಮಾರುತ್ತಿದ್ದರಂತೆ.[೧] ಇಲ್ಲಿಯ ಜನ ಭಾರಿ ಪುಂಡರು. ಯಾವಾಗಲೂ ಕತ್ತಿ ಹಿಡಿದು ತಿರುಗುತ್ತಿರುತ್ತಾರೆ. ಆದ್ದರಿಂದ ಪ್ರಯಾಣಿಕರು ಇವರ ಹಾವಳಿಯಿಂದ ತಪ್ಪಿಸಿಕೊಳ್ಳಲು ಭರ್ಜಿಗಳನ್ನು ಹಿಡಿದುಕೊಂಡೇ ತಿರುಗಾಡಬೇಕು.

ದೆಬ್ಕಾದಿಂದ ಮುಂದೆ ಪ್ರಯಾಣಮಾಡುವಾಗ ನಮಗೆ ಎರಡು ದೊಡ್ಡ 'ಟ್ಯಾಂಕ್' (ಕೆರೆ) ಗಳು ಸಿಕ್ಕಿದುವು. ಇವುಗಳಲ್ಲಿ ಮಳೆ ನೀರನ್ನು ಶೇಖರಿಸುತ್ತಾರೆ. ಇಂತಹ ಕೆರೆಗಳು ಇಂಡೀಸಿನಲ್ಲಿ ಅನೇಕ ಇವೆ. ಕೆಲವು ಸರೋವರದಷ್ಟು ದೊಡ್ಡದಾಗಿವೆ.

ದಾರಿಯಲ್ಲಿ ನಾನು ಕಂಡ ನಾನಾ ಬಗೆಯ ದೊಡ್ಡ ದೊಡ್ಡ ಕಪಿಗಳಿಗಂತೂ ಲೆಕ್ಕವೇ ಇಲ್ಲ. ಕೈ ಬೀಸಿ ಅವುಗಳನ್ನು ಓಡಿಸಲು ಪ್ರಯತ್ನಪಟ್ಟೆ. ಆದರೆ ಅವುಗಳಿಗೆ ಯಾರ ಹೆದರಿಕೆಯೂ ಇಲ್ಲ. 'ಪಾ! ಪಾ!' ಎಂದು ಶಬ್ದಮಾಡಿದುವೇ ಹೊರತು ಅಲ್ಲಿಂದ ಅಲ್ಲಾಡಲಿಲ್ಲ.

ಮುಂದೆ ನಾವು ಗಿತ್‌ಬಾಗ್ ಎಂಬ ಸ್ಥಳ ತಲುಪಿದೆವು. ಇಲ್ಲಿ 'ಕೋಲಿ' (ಕೂಲಿ ?) ಎಂಬ ಜನರನ್ನು ಕಂಡೆವು. ಇವರಿಗೆ ನಿರ್ದಿಷ್ಟವಾದ ಯಾವ ಕಸಬೂ ಇಲ್ಲ. ಊರಿಂದೂರಿಗೆ ತಮ್ಮ ಸಾಮಾನು ಸರಂಜಾಮುಗಳ ಸಮೇತ ಅಲೆಯುತ್ತಿರುತ್ತಾರೆ. ಇವರು ಮಾಡುವ ಮುಖ್ಯ ಕೆಲಸವೆಂದರೆ ಹತ್ತಿ ಬಿಡಿಸುವುದು. ಒಂದೂರಿನಲ್ಲಿ ಈ ಕೆಲಸ ಸಿಕ್ಕದಿದ್ದರೆ ಮತ್ತೊಂದು ಊರಿಗೆ ಹೋಗುತ್ತಾರೆ.

ಗಿತ್‌ಬಾಗಿನಲ್ಲಿ ಒಂದು ಕೊಳದ ಬಳಿ ಉದ್ಯಾನವನವಿದೆ. ಇದರಲ್ಲಿ ನಾನು ಅಡ್ಡಾಡಿದೆ. ಕೋತಿಗಳೂ ನವಿಲುಗಳೂ ಹೇರಳವಾಗಿದ್ದುವು. ತೋಟದಲ್ಲಿರುವ ಮನೆಗಳನ್ನು ಚೆನ್ನಾಗಿ ಕಟ್ಟಿದ್ದಾರೆ. ಆದರೆ ಸರಿಯಾದ ಸ್ಥಿತಿಯಲ್ಲಿ ಇಟ್ಟುಕೊಂಡಿಲ್ಲ. ಎಲ್ಲಾ ಹಾಳುಬೀಳುತ್ತಿವೆ. ಅರಮನೆಯೂ ಇದೇ ಸ್ಥಿತಿಯಲ್ಲಿದೆ.

ಗಿತ್‌ಬಾಗಿನಿಂದ ಅಹಮದಾಬಾದಿಗೆ ಕೇವಲ ಎರಡು ಲೀಗ್‌ಗಳು. ಅಹಮದಾಬಾದ್ ಊರನ್ನು ಸೊಗಸಾದ ಮೈದಾನದಲ್ಲಿ ಕಟ್ಟಿದ್ದಾರೆ. ಸಬರ್ಮತಿ ಎಂಬ ನದಿ ಇಲ್ಲಿ ಹರಿಯುತ್ತದೆ. ನದಿ ಅಷ್ಟೇನು ಆಳವಿಲ್ಲ. ಆದರೆ ಅದು ಮಳೆಗಾಲದಲ್ಲಿ ತುಂಬಿ ದಡಮೀರಿ ಹರಿಯುತ್ತದೆ. ಈ ನಗರದಲ್ಲಿ ಅನೇಕ ತೋಟಗಳೂ ಅದರೊಳಗೆ ವಾಸದ ಮನೆಗಳೂ ಇವೆ. ನಗರದ ಸುತ್ತ ಇಟ್ಟಿಗೆ ಮತ್ತು ಕಲ್ಲಿನಿಂದ ಕಟ್ಟಿದ ಕೋಟೆ ಕೊತ್ತಲಗಳಿವೆ. ಕೋಟೆಗೆ ಹನ್ನೆರಡು ಬಾಗಿಲುಗಳಿವೆ.

ಗುಜರಾತಿನ ಅತ್ಯಂತ ಸುರಕ್ಷಿತವಾದ ನಗರಗಳಲ್ಲಿ ಇದೂ ಒಂದು. ಅಕ್ಕಪಕ್ಕದ ರಾಜರುಗಳು ಆಗಾಗ್ಗೆ ಈ ನಗರದ ಮೇಲೆ ಧಾಳಿ ಮಾಡುತ್ತಾರೆ. ಅದರಲ್ಲಿಯೂ

---

೧. ಸ್ಟ್ರಾಬೋ ಬಿಟ್ಟರೆ ಯೂರೋಪಿನವರಾರೂ ಇಂಡಿಯಾದಲ್ಲಿ ನರಭಕ್ಷಕರಿದ್ದಾರೆಂದು ಹೇಳಿಲ್ಲ. ದೆವೆಸೋಗೆ ಈ ತಪ್ಪು ಅಭಿಪ್ರಾಯ ಬರುವಂತೆ ಯಾರೋ ಹೇಳಿರಬೇಕು. ಏಕೆಂದರೆ, ಗುಜರಾತಿನಲ್ಲಿ ಎಂದೂ ಅಂಥ ಜನರಿರಲಿಲ್ಲ.

ಬೆಟ್ಟಗುಡ್ಡಗಳಲ್ಲಿರುವ ಅನೇಕ ಪಟ್ಟಣಗಳ ಹಾಗೂ ದುರ್ಗಗಳ ಒಡೆಯನಾದ ಬಾದೂರಿನ ರಾಜನು ಆಗಾಗ್ಗೆ ಧಾಳಿಮಾಡುತ್ತಿರುತ್ತಾನೆ. ಇವನನ್ನು ಅಡಗಿಸಲು ಅಕ್ಬರನು ಏಳು ವರ್ಷಗಳ ಕಾಲ ಪ್ರಯತ್ನಪಟ್ಟನು. ಆದರೆ ಅದು ಸಾಧ್ಯವಾಗದೆ ಸಂಧಿಮಾಡಿಕೊಳ್ಳ ಬೇಕಾಯಿತು. ಈಗಲೂ ಇವನ ಕಡೆಯವರು ಆಗಾಗ್ಗೆ ಧಾಳಿಮಾಡುತ್ತಲೇ ಇರುತ್ತಾರೆ. ತನಗೆ ಏನೂ ಗೊತ್ತಿಲ್ಲವೆಂದು ಹೇಳಿ ರಾಜ ತಪ್ಪಿಸಿಕೊಳ್ಳುತ್ತಾನೆ. ಈತನು ಸಾಮಾನ್ಯ ವಾಗಿ ವಾಸಮಾಡುವುದು 'ಖಂಡಿಚ್' (ಖಾನ್‌ದೇಶ) ಪ್ರಾಂತದಲ್ಲಿ.

ನಾನು ಅಹಮದಾಬಾದ್ ತಲುಪಿ ಕ್ಯಾರವಾನ್ ಸೆರಾಯ್‌ನಲ್ಲಿ ಬಿಡಾರವಾಡಲು ಹೋದೆ. ಇದನ್ನು ಹಿಂದಿನ ಒಬ್ಬ ಗುಜರಾತಿನ ರಾಜ ತನ್ನ ಹೆಂಡತಿಯ ನೆನಪಿಗಾಗಿ ಕಟ್ಟಿಸಿದ್ದಾನೆ. ಈ ಸೆರಾಯ್‌ನಲ್ಲಿ ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದು ಡಚ್ ದಳ್ಳಾಳಿ ಗಳನ್ನು (Factors) ನೋಡಲು ಹೋದೆ. ಇವರಿಗೆ ಸೂರತ್ತಿನ ಕಮ್ಯಾಂಡರ್‌ನಿಂದ ಪರಿಚಯ ಪತ್ರಗಳನ್ನು ತಂದಿದ್ದೆ. ನಾನು ಅವರನ್ನು ಕಂಡಾಗ ಅವರು ಒತ್ತಾಯ ಮಾಡಿ ತಮ್ಮೊಡನೆ ಇರಿಸಿಕೊಂಡರು. ಒಬ್ಬೊಬ್ಬರು ಒಂದೊಂದು ದಿನ ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಉಪಚಾರಮಾಡಿ ಅಹಮದಾಬಾದಿನಲ್ಲಿ ನೋಡಬೇಕಾದ ಸ್ಥಳಗಳನ್ನೆಲ್ಲಾ ತೋರಿಸಿದರು. ಡಚ್ಚರು ಈ ಊರಿನಲ್ಲಿ ಬಹು ಸೊಗಸಾದ ಹಾಗೂ ದೊಡ್ಡದಾದ ಬೀದಿಯಲ್ಲಿ ವಾಸಿಸುತ್ತಾರೆ. ಅಹಮದಾಬಾದಿನ ಬೀದಿಗಳು ಅಗಲವಾಗಿವೆ. ಡಚ್ಚರು ಇರುವ ಬೀದಿ ಕನಿಷ್ಟ ೩೦ ದಾಪುಗಳಿಗಿಂತಲೂ ಹೆಚ್ಚು ಅಗಲವಾಗಿದೆ.

ಡಚ್ಚರ ಮನೆಗಳು ಇರುವ ಬೀದಿಯಲ್ಲಿ ಪಶ್ಚಿಮಕ್ಕೆ ಹೋದರೆ ಕೊನೆಯಲ್ಲಿ ಅದರ ಅಗಲದಷ್ಟಕ್ಕೂ ನಿರ್ಮಿಸಿರುವ ಮೂರು ಕಮಾನುಗಳಿವೆ. ಈ ಕಮಾನು ಗಳನ್ನು ದಾಟಿದರೆ 'ಮೈದಾನ್ ಷಾ' ಸಿಕ್ಕುತ್ತದೆ. ಇದು ೭೦೦ ದಾಪು ಉದ್ದ, ೪೦೦ ದಾಪು ಅಗಲ ಇದೆ. ಸುತ್ತಲೂ ಮರಗಿಡಗಳನ್ನು ಬೆಳೆಸಿದ್ದಾರೆ. ಈ ಮೈದಾನದಿಂದ ಊರಿನ ಬೇರೆ ಬೇರೆ ಕಡೆಗಳಿಗೆ ದಾರಿಗಳನ್ನು ಮಾಡಿದ್ದಾರೆ. ಅಲ್ಲಲ್ಲಿ ಸಣ್ಣ ಕಟ್ಟಡಗಳಿವೆ. ನಗರದಲ್ಲಿ ನಡೆಯುವ ತಕ್ಸೀರುಗಳನ್ನು ವಿಚಾರಿಸುವ ಕೊತ್ವಾಲನ ಕಛೇರಿ ಕಟ್ಟಡಗಳು ಇವು. ಮೈದಾನದ ಮಧ್ಯದಲ್ಲಿ ಒಂದು ದೊಡ್ಡ ಮರ ಇದೆ. ಇದು ಭಾರಿ ಎತ್ತರ ವಾಗಿದೆ. ಜನರು ಈ ಮರದ ತುದಿಯಲ್ಲಿ ಕಟ್ಟಿರುವ ಬೆಂಡೊಂದಕ್ಕೆ ಬಾಣ ಹೊಡೆದು ಗುರಿ ಇಡುವುದನ್ನು ಕಲಿಯುತ್ತಾರೆ.

ಮೈದಾನ್ ದಾಟಿ ಮುಂದೆ ಹೋದರೆ ದುರ್ಗ ಸಿಕ್ಕುತ್ತದೆ. ಇದರ ಒಳಭಾಗ ತುಂಬ ವಿಶಾಲವಾಗಿದ್ದು ಒಂದು ಊರಿನಂತೆಯೇ ಕಾಣುತ್ತದೆ. ಮೇಲೆ ಹೇಳಿದ ಸೆರಾಯ್ ಈ ಊರಿಗೆ ಶೋಭಾಯಮಾನವಾದುದು. ಮೈದಾನದ ಬಳಿ ರಾಜನ ಅರಮನೆ ಇದೆ. ಇದು ಭಾರಿ ದೊಡ್ಡ ಕಟ್ಟಡ. ಇಂಗ್ಲಿಷ್ ಫ್ಯಾಕ್ಟೊರಿ ಊರಿನ ಮಧ್ಯ ದಲ್ಲಿದೆ. ಇಂಗ್ಲಿಷರು ಸೊಗಸಾದ ಮನೆಗಳಲ್ಲಿ ವಾಸಮಾಡುತ್ತಾರೆ. ಇವರ ಗಡಂಗು

(Warehouse) ಗಳಲ್ಲಿ ಲಾಹೋರ್ ಮತ್ತು ದೆಹ್ಲಿ ಕಡೆಗಳಿಂದ ಬಂದ ಬಟ್ಟೆಗಳು ತುಂಬಿವೆ. ಈ ಬಟ್ಟೆಗಳ ವ್ಯಾಪಾರ ಭಾರಿಯಾಗಿ ನಡೆಯುತ್ತದೆ.

ಅಹಮದಾಬಾದಿನಲ್ಲಿ ಅನೇಕ ಮಸೀದಿಗಳಿವೆ. ಇವುಗಳಲ್ಲಿ ಜುಮಾ ಮಸೀದಿ ಮುಖ್ಯವಾದದ್ದು; ಅಲ್ಲದೆ ತುಂಬ ಸೊಗಸಾದದ್ದು. ಇಲ್ಲಿಗೆ ನಾನು ಹೋದಾಗ ೨೦೦ ಜನ ಫಕೀರರು ತಮ್ಮ ತಲೆಯ ಹಿಂದೆ ಕೈಕಟ್ಟಿಕೊಂಡು ಒಂದಿಷ್ಟೂ ಅಲ್ಲಾಡದೆ ಕುಳಿತಿದ್ದರು.[೧]

ಈ ಊರಿನಲ್ಲಿ ವಿಗ್ರಹಾರಾಧಕರೇ (Heathens)[೨] ಹೆಚ್ಚಾಗಿರುವುದರಿಂದ ಅವರ ದೇವಸ್ಥಾನಗಳೂ ಇವೆ. ಸಂತ್‌ದಾಸನ ದೇವಸ್ಥಾನವೆಂದು ಕರೆಯಲ್ಪಡುವ ದೇವಸ್ಥಾನ ಹಿಂದೆ ಬಹು ಪ್ರಾಮುಖ್ಯವಾಗಿತ್ತು. ಈಗ ಇದು ಔರಂಗಜೇಬನಿಂದಾಗಿ ಮಸೀದಿಯಾಗಿದೆ. ದೇವಸ್ಥಾನದಲ್ಲಿ ಹಸು ಕಡಿದರೆ ಆ ಸ್ಥಳವನ್ನು ಹಿಂದೂಗಳು ಮತ್ತೆ ಉಪಯೋಗಿಸುವುದಿಲ್ಲ. ಔರಂಗಜೇಬ ಹಾಗೆ ಮಾಡಿ ದೇವಸ್ಥಾನವನ್ನು ಮಸೀದಿಯನ್ನಾಗಿ ಮಾಡಿಬಿಟ್ಟಿದ್ದಾನೆ. ದೇವಸ್ಥಾನ ಹಾಗೂ ಅದರ ಸುತ್ತ ಮುತ್ತ ಅಮೃತಶಿಲೆಯ ಬಹು ಸುಂದರವಾದ ಶಿಲಾ ಮೂರ್ತಿಗಳಿವೆ. ಆದರೆ (ಇಸ್ಲಾಂ ಮತದ) ಮಹಾ ಭಕ್ತನಂತೆ ನಟಿಸಿ ಸಿಂಹಾಸನವನ್ನೇರಿದ ಔರಂಗಜೇಬ ಆ ಸುಂದರ ಶಿಲಾಮೂರ್ತಿಗಳ ಮೂಗಂ ಮುರಿಸಿ ವಿಕಾರಗೊಳಿಸಿದ್ದಾನೆ.[೩]

ಈ ಊರಿನಲ್ಲಿ ಪಶುಪಕ್ಷಿಗಳಿಗೆ ಚಿಕಿತ್ಸಾಲಯಗಳಿವೆ. ರೋಗಪೀಡಿತವಾದ ಅವನ್ನು ಇಲ್ಲಿಟ್ಟು ಶುಶ್ರೂಷೆ ಮಾಡುತ್ತಾರೆ. ನಾನು ಈ ಚಿಕಿತ್ಸಾಲಯಗಳಲ್ಲಿ ಎತ್ತು, ಒಂಟೆ, ಕುದುರೆ ಮತ್ತು ಇತರ ಪ್ರಾಣಿಗಳನ್ನು ನೋಡಿದೆ. ಪ್ರಾಣಿಗಳಿಗೆ ಹೊಟ್ಟೆ ತುಂಬ ಮೇವು ಹಾಕಿ ಸಾಕುತ್ತಾರೆ. ಕ್ರೈಸ್ತರು ಹಾಗೂ ಮಹಮ್ಮದೀಯರ

---

೧. ಅಂದರೆ ಪ್ರಾರ್ಥನೆ ಮಾಡುತ್ತಿದ್ದರು ಎಂದು ಅರ್ಥ ಮಾಡಬೇಕಾಗುತ್ತದೆ.

೨. ಹಿಂದೂಗಳನ್ನು ವಿದೇಶಿಯರು ವಿಗ್ರಹಾರಾಧಕರು, ಜೆಂಟೈಲ್ ಇತ್ಯಾದಿ ಹೆಸರುಗಳಿಂದ ಕರೆದಿದ್ದಾರೆ.

೩. ಔರಂಗಜೇಬನು ಹಿಂದೂಗಳ ಗುಡಿಗೋಪುರಗಳ ನಾಶಕ್ಕೆ ತಾನು ಚಕ್ರವರ್ತಿಯಾದುದರಿಂದಲೇ ಆರಂಭಿಸಿದ. ೧೬೫೯ ರಂದು ವಾರಣಾಸಿಯ ಅರ್ಚಕನೊಬ್ಬನಿಗೆ ನೀಡಿದ ಫರ್ಮಾನ್‌ನಲ್ಲಿ ತಾನು ಹೊಸ ದೇವಸ್ಥಾನಗಳ ನಿರ್ಮಾಣಕ್ಕೆ ವಿರೋಧಿಯಾದರೂ ಇರುವ ದೇವಸ್ಥಾನಗಳ ದುರಸ್ತಿಗೆ ವಿರೋಧಿ ಅಲ್ಲ ಎಂದು ಹೇಳಿದ. ಆದರೆ ೧೬೬೪ರಲ್ಲಿ ಹಳೆಯ ದೇವಸ್ಥಾನಗಳ ದುರಸ್ತಿಯನ್ನೂ ಮಾಡಕೂಡದೆಂದು ಆಜ್ಞೆಮಾಡಿದ. ಐದುವರ್ಷಗಳ ನಂತರ ಅಂದರೆ ೧೬೬೯ರಲ್ಲಿ ಹೊರಡಿಸಿದ ಆಜ್ಞೆಯ ಪ್ರಕಾರ ಪ್ರಾಂತಾಧಿಕಾರಿಗಳು ವಿಗ್ರಹಾರಾಧಕರ ಶಾಲೆಗಳನ್ನೂ ದೇವಸ್ಥಾನಗಳನ್ನೂ ಕೆಡಿಸಬೇಕೆಂದೂ, ಹಿಂದೂ ಮತದ ಬೋಧನೆಯನ್ನೇ ಕಠಿಣವಾಗಿ ನಿಷೇಧಿಸಬೇಕೆಂದೂ' ತಿಳಿಸಿದ. ಹೀಗಾಗಿ ಅವನ ಚಕ್ರಾಧಿಪತ್ಯದಲ್ಲಿದ್ದ ಅಸಂಖ್ಯಾತ ಗುಡಿಗೋಪುರಗಳ ನಾಶವಾದುದಲ್ಲದೆ ಹೆಸರಾಂತ ಕಾಶಿ ವಿಶ್ವನಾಥ ದೇವಸ್ಥಾನ, ಮಥುರೆಯ ಕೇಶವದೇವ ದೇವಸ್ಥಾನ ಮತ್ತು ಪಾಟನ್‌ನ ಸೋಮನಾಥ ದೇವಸ್ಥಾನ—ಇವುಗಳು ನಿರ್ನಾಮವಾದುವು.

ಹಿಂಸೆಯಿಂದ ತಪ್ಪಿಸಲೋಸುಗ ಹಿಂದೂಗಳು ಇವನ್ನು ಕೊಂಡುಕೊಂಡು ಗುಣಪಡಿಸಿ ಹಿಂದೂಗಳಿಗೆ ಮಾತ್ರ ಮಾರುತ್ತಾರೆ.

ಅಹಮದಾಬಾದ್ ಊರಿನ ತುಂಬ ಮರಗಳೇ. ಒಳ್ಳೊಳ್ಳೆಯ ಉದ್ಯಾನವನಗಳನ್ನು ನಿರ್ಮಿಸಿದ್ದಾರೆ. ಊರಿನ ಸುತ್ತ ಇರುವ ಕಾಡಿನಲ್ಲಿ ಚಿರತೆಗಳಿವೆ. ಇವುಗಳನ್ನು ಜನ ಬೇಟೆಯಾಡುತ್ತಾರೆ.

ಅಹಮದಾಬಾದಿನಲ್ಲಿ ಹೆಚ್ಚು ವ್ಯಾಪಾರವಾಗುವ ಸರಕುಗಳು ಯಾವುವೆಂದರೆ: ಸ್ಯಾಟಿನ್, ವೆಲ್ವೆಟ್ ಮತ್ತು ಟಫೆಟಾ ಬಟ್ಟೆಗಳು, ಜರತಾರಿ, ರೇಷ್ಮೆ ಮತ್ತು ಉಣ್ಣೆಯ ತೆರೆಬಟ್ಟೆಗಳು ಮತ್ತು ಹತ್ತಿಬಟ್ಟೆಗಳು. ಇವು ಲಾಹೋರ್ ಮತ್ತು ದೆಹಲಿಗಳಿಂದ ಬರುತ್ತವೆ. ಇಲ್ಲಿಂದ ರಫ್ತಾಗುವ ಸಾಮಾನುಗಳಾವುವೆಂದರೆ: ನೀಲಿ, ಒಣಶುಂಠಿ ಮತ್ತು ಹಸಿಶುಂಠಿ, ಸಕ್ಕರೆ, ಜೀರಿಗೆ, ಅಫೀಮು, ಪೆಟ್ಲುಪ್ಪು, ಅರಗು, ಆಳಲೇಕಾಯಿ, ಹುಣಸೇಹಣ್ಣು ಮತ್ತು ಜೇನುತುಪ್ಪ. ಇಲ್ಲಿರುವ ಡಚ್ಚರು ಮುಖ್ಯವಾಗಿ ಕೊಳ್ಳುವ ಸರಕುಗಳೆಂದರೆ ಚಿತ್ತಾರದ 'ಚಿಂಟ್ಸ್' ಬಟ್ಟೆಗಳು.೧ ಆದರೆ ಇವು ಮಚ್ಛಲಿಪಟ್ಟಣ ಮತ್ತು ಸೆಂಟ್ ಥಾಮಸ್‌ನಲ್ಲಿ (ಮದ್ರಾಸಿನಲ್ಲಿ) ದೊರೆಯುವ ಬಟ್ಟೆಗಳಿಗೆ ಸಾಟಿಯಾಗ ಲಾರವು.

ಅಹಮದಾಬಾದಿನಲ್ಲಿ ನೋಡಬೇಕಾದ್ದನ್ನೆಲ್ಲಾ ನೋಡಿಕೊಂಡು, ನನಗೆ ಮಾಡಿದ ಸತ್ಕಾರಕ್ಕೆ ಡಚ್ಚರನ್ನು ವಂದಿಸಿ, ಫೆಬ್ರುವರಿ ೧೫ನೆಯ ತಾರೀಖು ಕ್ಯಾಂಬೆಗೆ ಹೊರಟೆ. ಕೊತ್ವಾಲನ ಕಡೆಯ ಒಬ್ಬ ಅಧಿಕಾರಿ ನನ್ನನ್ನು ಊರಿನ ಹೊರಕ್ಕೆ ಕರೆದುಕೊಂಡು ಬಂದು ಅಲ್ಲಿಗೆ ಕಳುಹಿಸಿಕೊಟ್ಟ. ಕ್ಯಾಂಬೆ ಎರಡು ದಿನದ ಪ್ರಯಾಣದಷ್ಟು ದೂರದಲ್ಲಿದೆ. ಮೊದಲನೆಯ ದಿನ ಕೈರಾ ಎಂಬ ಊರಿನಲ್ಲಿ ತಂಗಿದೆ. ಇದು ಸೂರತ್ತಿನಷ್ಟೇ ದೊಡ್ಡ ದಾಗಿದೆ. ಆದರೆ ಜನವಸತಿ ಅಷ್ಟಿಲ್ಲ. ನಿವಾಸಿಗಳು ಬಹುತೇಕ ಬನಿಯರು ಮತ್ತು ರಜಪೂತರು. ಊರಿನಲ್ಲಿ ಲೆಕ್ಕವಿಲ್ಲದಷ್ಟು ಕೋತಿಗಳು. ಊರಿನ ಸುತ್ತ ಸುಂದರವಾದ ತೋಟಗಳಿವೆ. ಮೃಗ ಪಕ್ಷಿಗಳಿಗೆ ಇಲ್ಲಿಯೂ ಒಂದು ಚಿಕಿತ್ಸಾಲಯವಿದೆ. ಆದರೆ ಇದನ್ನು ಸರಿಯಾಗಿ ನೋಡಿಕೊಳ್ಳದೆ ಇರುವ ಕಾರಣ ಹಾಳುಬೀಳುತ್ತಿದೆ. ಸಮುದ್ರವು ಕೇವಲ ಅರ್ಧ ಲೀಗ್ /ದೂರದಲ್ಲಿದೆ. ಹಿಂದೆ ಸಮುದ್ರ ಊರಿನವರೆಗೂ ಇತ್ತಂತೆ. ಈಗ ಅದು ಹಿಂಜರಿದಿದೆ. ಈ ಕಾರಣ ಊರಿನ ವ್ಯಾಪಾರ ಕಡಮೆಯಾಗಿಬಿಟ್ಟಿದೆ. ಖಾರಿಯ ಉತ್ತರದಲ್ಲಿ ಸಮುದ್ರದ ಅಲೆಗಳು ಎಷ್ಟು ರಭಸದಿಂದ ಬರುತ್ತವೆಯೆಂದರೆ ಕುದುರೆಯ ಮೇಲೆ ಕುಳಿತು ನಾಗಾಲೋಟದಲ್ಲಿ ಓಡಿದರೂ ಹಿಮ್ಮೆಟ್ಟುವ ಅಲೆಗಳನ್ನು ಮುಟ್ಟಲು ಸಾಧ್ಯವಾಗುವುದಿಲ್ಲ. ಸಮುದ್ರವು ಹೀಗೆ ಅಲ್ಲೋಲಕಲ್ಲೋಲವಾಗುವ ಕಾರಣದಿಂದಲೇ ಭಾರಿ ಹಡಗುಗಳು ಇಲ್ಲಿಗೆ ಬರುತ್ತಾ ಇಲ್ಲ.

---

೧. ಚಿಂಟ್ಸ್: ಇವು ಚಿತ್ರಗಳ ಮುದ್ರೆಯೊತ್ತಿದ ಬಟ್ಟೆಗಳು. ಸಂಸ್ಕೃತದ 'ಚಿತ್ರ' ಎಂಬ ಪದದಿಂದ ಈ ಪದ ಬಂದಿರಬಹುದೆಂದು ಹೇಳುತ್ತಾರೆ.

ಈ ಊರಿನ ಅಂಗಡಿಗಳಲ್ಲಿ ಸುಗಂಧದ್ರವ್ಯ, ಸಂಬಾರ, ರೇಷ್ಮೆ ಮತ್ತು ಇತರ ಬಟ್ಟೆಗಳ ವ್ಯಾಪಾರ ನಡೆಯುತ್ತದೆ. ದಂತದ ಬಳೆಗಳನ್ನೂ ಆ್ಯಗೇಟ್ ಶಿಲೆಯ ಲೋಟಗಳನ್ನೂ (Agate cups) ಉಂಗುರಗಳನ್ನೂ ತಯಾರಿಸುತ್ತಾರೆ.

ಕ್ಯಾಂಬೆಯಲ್ಲಿ ನೋಡಬೇಕಾದ್ದನ್ನೆಲ್ಲಾ ನೋಡಿಕೊಂಡು ಭೂಮಾರ್ಗವಾಗಿ ಸೂರತ್ತಿಗೆ ಹಿಂದಿರುಗಿದೆ. ಸಮುದ್ರ ಮಾರ್ಗವಾಗಿ 'ಅಲ್ಮಾಡಿ' ಎಂಬ ಹಡಗುಗಳ ಮೇಲೆ ಹೋಗಬಹುದಾಗಿತ್ತು. ಆದರೆ ರಾತ್ರಿಹೊತ್ತು ಮಲಬಾರ್ ಕಡಲುಗಳ್ಳರ ಕಾಟ. ಅಲ್ಲದೆ ಅಲ್ಮಾಡಿಗಳು ಭಾರಿ ವೇಗದಿಂದ ಸಾಗುತ್ತವೆ. ಇದರಿಂದ ಒಮ್ಮೊಮ್ಮೆ ಅಪಾಯವೂ ಉಂಟು. ಈ ತಾಪತ್ರಯವೇ ಬೇಡ ಎಂದು ನಾನು ಭೂಮಾರ್ಗವಾಗಿ ಸೂರತ್ತಿಗೆ ಹೊರಟೆ. 'ಚೆರನ್' (Tcheran) ಎಂಬ ಜಾತಿಯ ಜನರನ್ನು ಕರೆದುಕೊಂಡು ಹೋದರೆ ಒಳ್ಳೆಯದು ಎಂದರು. ಏಕೆಂದರೆ ಇವರಿದ್ದರೆ ಕಳ್ಳಕಾಕರ ಅಪಾಯವಿಲ್ಲವಂತೆ. ಚರಣರು ಹಿಂದೂಗಳಲ್ಲಿ ಒಂದು ಜಾತಿಗೆ ಸೇರಿದ ಜನ. ಇವರ ಬಗ್ಗೆ ಹಿಂದೂಗಳಿಗೆ ತುಂಬ ಗೌರವ. ಯಾರಾದರೂ ಇವರಿಗೆ ತೊಂದರೆ ಮಾಡಿದರೆ ಅಂಥವರನ್ನು ಜಾತಿಯಿಂದ ಹೊರಗೆ ಹಾಕಿಬಿಡುತ್ತಾರೆ. ಪ್ರಯಾಣಿಕರನ್ನು ಕರೆದುಕೊಂಡು ಹೋಗುವ ಈ ಜನರನ್ನು ಯಾರೂ ಮುಟ್ಟುವುದಿಲ್ಲ. ಯಾರಾದರೂ ಇವರ ತಂಟೆಗೆ ಬಂದರೆ ಗಂಡ ತನ್ನ ಕುತ್ತಿಗೆ ಕತ್ತರಿಸಿ ಕೊಳ್ಳುವುದಾಗಿಯೂ ಹೆಂಡತಿ ತನ್ನ ಮೊಲೆಗಳನ್ನು ಕೊಯ್ದುಕೊಳ್ಳುವುದಾಗಿಯೂ ಹೆದರಿಸುತ್ತಾರೆ.

ಹೀಗೆ ಇಲ್ಲಿಯವರೆಗೂ ನಡೆಯುತ್ತಾ ಬಂದಿತ್ತು. ಈಗ ಇವರೂ ಕಳ್ಳರ ಜೊತೆ ಶಾಮೀಲಾಗಿ ಪ್ರಯಾಣಿಕರಿಂದ ಹಣ ದೋಚುತ್ತಾರೆ. ಬನಿಯನರು ಇವರ ನೆರವಿನಿಂದ ಪ್ರಯಾಣ ಮಾಡುತ್ತಾರೆ. ನಮ್ಮ ಚರಣರು ದಿನಕ್ಕೆ ಕೇವಲ ಎರಡು ರೂಪಾಯಿ ಕೂಲಿ ಕೊಟ್ಟರೆ ಸಾಕು ಎಂದು ಹೇಳಿದರು. ಆದರೆ ಇದು ತೀರಾ ಕೆಳಮಟ್ಟದ ರಕ್ಷಣೆ ಎಂದು ಅವರನ್ನು ಕರೆದುಕೊಂಡು ಹೋಗಲು ಒಪ್ಪಲಿಲ್ಲ.

ಬಂದ ದಾರಿಯಲ್ಲಿಯೇ ಗಾಡಿಯ ಮೇಲೆ ನನ್ನ ಮರುಪ್ರಯಾಣವನ್ನು ಆರಂಭಿಸಿದೆ. ಒಂದು ದಿನ ದಾರಿ ತಪ್ಪಿತು. ಆಗ ಕಳ್ಳನೊಬ್ಬ ಬಂದು ಗಾಡಿಗೆ ಕಟ್ಟಿದ ಎತ್ತುಗಳನ್ನು ಅಡ್ಡ ಹಾಕಿದ. ಹರಕಲು ಬಟ್ಟೆಯ ಇವನ ಜೊತೆ ಎಂಟೊಂಬತ್ತು ವರ್ಷದ ಒಬ್ಬ ಹುಡುಗ ಇದ್ದ. ಗಾಡಿ ಹೊಡೆಯುತ್ತಿದ್ದವರು ಇವನಿಗೆ ಒಂದು ಪೈಸಾ ಕೊಡಲು ಹೋದರು. ಆತ ಮೊದಲು ಈಸಿಕೊಳ್ಳಲಿಲ್ಲ, ಆಮೇಲೆ ಈಸಿಕೊಂಡ. ದುಡ್ಡು ಕೊಡದೇಹೋಗಿದ್ದರೆ ಅವನು ಬಾಯಿ ಬಡಿದುಕೊಂಡು ಅಕ್ಕಪಕ್ಕದವರನ್ನೆಲ್ಲಾ ಕೂಗಿ ಕರೆದುಬಿಡುತ್ತಿದ್ದ ಎಂದು ಗಾಡಿಯವರು ಹೇಳಿದರು. ರಾಜನಿಗೆ ಹೆದರಿ ಕಳ್ಳರು ಹೆಚ್ಚು ತಂಟೆ ಮಾಡಲು ಹೋಗುವುದಿಲ್ಲ. ಆದರೆ ಜನರು ಹೇಳುವಷ್ಟು ಕಳ್ಳರ ಭಯ ಇಲ್ಲ ಎಂದು ನನಗನ್ನಿಸಿತು. ಈ ಕಳ್ಳಕಾಕರು ರಾಜನಿಗೆ ತುಂಬಾ ಹೆದರಿಕೊಳ್ಳುತ್ತಾರೆ.

ದಾರಿಯಲ್ಲಿ 'ಟೋಲ್' ವಸೂಲುಮಾಡುವ ಹಕ್ಕು ರಾಜನಿಗೆ ಸೇರಿದೆ. ಈ ಮಾರ್ಗವಾಗಿ ಆಗ್ರಾಕ್ಕೆ ಹೋಗುವ ಪ್ರಯಾಣಿಕರ ತಂಡಗಳಿಗೆ ರಾಜನು ಸಾಮಾನು ಸರಂಜಾಮುಗಳನ್ನು ಒದಗಿಸುವ ವ್ಯವಸ್ಥೆ ಮಾಡಿದ್ದಾನೆ. ಹತ್ತು ರೂಪಾಯಿ ಕೊಟ್ಟರೆ ಇಡೀ ತಂಡಕ್ಕೆ ಸಾಕಾಗುವಷ್ಟು ಊಟೋಪಚಾರದ ಸಾಮಾನುಗಳನ್ನೂ ಕುಡಿಯುವುದಕ್ಕೆ ಪಾನೀಯಗಳನ್ನೂ ಒದಗಿಸುತ್ತಾರೆ. ಪ್ರಯಾಣಿಕರಿಗೆ ಸಂತೋಷವಾಗುವ ರೀತಿಯಲ್ಲಿ ಅಡುಗೆಯವರು ಕೆಲಸಮಾಡಿ ನಾಲ್ಕು ಪೈಸಾ ಹೆಚ್ಚಾಗಿ ಗಿಟ್ಟಿಸಿಕೊಳ್ಳುತ್ತಾರೆ. ಇವರು ಅಡುಗೆಯಲ್ಲಿ ಎತ್ತಿದಕೈ. ಆದರೆ ಇವರು ತಯಾರಿಸುವ 'ರಾಗೋ' (Ragoe = ಬೇಯಿಸಿದ ಮಾಂಸ ಅಥವಾ ಮೀನು) ಏನೇನೂ ಚೆನ್ನಾಗಿರುವುದಿಲ್ಲ. ಪ್ರಯಾಣಿಕರ ಖುಷಿಗಾಗಿ ನರ್ತಕಿಯರನ್ನು ಒದಗಿಸುವುದನ್ನೂ ರಾಜನು ಮರೆತಿಲ್ಲ. ಈ ರಾಜನಿಗೆ ಕ್ಯಾಂಬೆಯಿಂದ ಬ್ರೋಚ್‌ವರೆಗೆ ಇರುವ ಎಲ್ಲಾ ಹಳ್ಳಿಗಳೂ ಸೇರಿವೆ. ಇವನ ಪ್ರಜೆಗಳನ್ನು 'ಗ್ರಾಸಿಯೇಟ್' (gratiate) ಎಂದು ಕರೆಯುತ್ತಾರೆ.

ನಾನು ಹೊರಟ ಮಾರನೆಯ ದಿನ ಬ್ರೋಚ್ ತಲುಪಿದೆ. ಇಲ್ಲಿ ಆಳುಕಾಳುಗಳೂ ಎತ್ತುಗಳೂ ವಿಶ್ರಾಂತಿಪಡೆಯುವಷ್ಟು ಕಾಲ ಮಾತ್ರ ಇದ್ದೆ. ಸುಂಕದ ಕಟ್ಟೆಯವರು ನನ್ನ ಬಳಿ ವ್ಯಾಪಾರದ ಸರಕುಗಳಿವೆಯೇ ಎಂದು ಕೇಳಿದರು. ಇಲ್ಲ ಎಂದೆ. ನನ್ನ ಮಾತನ್ನು ನಂಬಿ ಅವರು ನನ್ನನ್ನು ಮರ್ಯಾದೆಯಿಂದ ಕಳುಹಿಸಿಕೊಟ್ಟರು. ನದಿಯನ್ನು (ನರ್ಮದಾ) ದಾಟಿ ಮಾರನೆಯ ದಿನ ಸೂರತ್ ತಲುಪಿದೆ.

ಸೂರತ್ತಿನ ಕೋಟೆಯನ್ನು ಮಣ್ಣಿನಿಂದ ಕಟ್ಟಿದ್ದಾರೆ. ಈಗೀಗ ಇಟ್ಟಿಗೆಯಿಂದ ಒಂದೂವರೆ ಆಳು ದಪ್ಪದ ಗೋಡೆ ಕಟ್ಟುತ್ತಿದ್ದಾರೆ. ರಾಜನೊಬ್ಬನ (ಶಿವಾಜಿಯ) ಧಾಳಿಯನ್ನು ತಪ್ಪಿಸಿಕೊಳ್ಳಲು ಈ ಹೊಸ ಕೋಟೆ ಕಟ್ಟುತ್ತಿದ್ದಾರೆ.[೧]

ಸೂರತ್ ಬಹು ದೊಡ್ಡ ಊರು. ಇಲ್ಲಿರುವ ಜನಸಂಖ್ಯೆ ಇಷ್ಟೇ ಎಂದು ಹೇಳಲಾಗುವುದಿಲ್ಲ. ಮಾನ್‌ಸೂನ್ ಕಾಲದಲ್ಲಿ, ಅಂದರೆ ಜನವರಿ, ಫೆಬ್ರುವರಿ, ಮಾರ್ಚಿ ಮತ್ತು ಕೆಲವು ವೇಳೆ ಏಪ್ರಿಲ್ ತಿಂಗಳುಗಳಲ್ಲಿ, ಇಲ್ಲಿಗೆ ಹಡಗುಗಳಲ್ಲಿ ಬಹಳ ಜನ ಬರುತ್ತಾರೆ. ಆ ಸಮಯದಲ್ಲಿ ಇರಲು ಮನೆಗಳೇ ಸಿಕ್ಕುವುದಿಲ್ಲ. ಊರಿನ ಮೂರು ಬಿಡಾವಣೆಗಳಲ್ಲಿಯೂ ಜನ ತುಂಬಿರುತ್ತಾರೆ.

ಸೂರತ್‌ನಲ್ಲಿ ಇಂಡಿಯನರು, ಪರ್ಷಿಯನರು, ಅರೇಬಿಯನರು, ಫ್ರಾಂಕರು (ಫರಂಗಿಯವರು), ತುರುಕರು, ಆರ್ಮೀನಿಯನರು ಮತ್ತು ಇತರ ಕ್ರೈಸ್ತರು ವಾಸವಾಗಿದ್ದಾರೆ. ಇವರಲ್ಲಿ ಬಹು ಸಂಖ್ಯೆಯಲ್ಲಿರುವವರೆಂದರೆ ಮೂರರು, ಹಿಂದೂಗಳು ಮತ್ತು ಪಾರ್ಸಿಗಳು. ಫ್ರಾಂಕರು ಮತ್ತು ಕ್ರೈಸ್ತರ ಸಂಖ್ಯೆ ಅಷ್ಟಿಲ್ಲ. ಮೂರರೆಂದರೆ ಇಂಡೀಸಿ

---

೧. ಈ ಪ್ರವಾಸಿ ಸೂರತ್ತಿಗೆ ಹೋದ ಎರಡು ವರ್ಷಕ್ಕೆ ಮುನ್ನವೇ ಅಂದರೆ ೧೬೬೪ರ ಜನವರಿಯಲ್ಲಿ ಶಿವಾಜಿ ಸೂರತ್ತನ್ನು ಕೊಳ್ಳೆಹೊಡೆದು ಒಂದು ಕೋಟಿಗಿಂತಲೂ ಹೆಚ್ಚು ಐಶ್ವರ್ಯವನ್ನು ದೋಚಿಕೊಂಡು ಹೋಗಿದ್ದನು.

ಳಲ್ಲಿರುವ ಮುಹಮ್ಮದೀಯರು, ಮೊಗಲರು, ಪರ್ಷಿಯನರು, ಅರೇಬಿಯನರು ಅಥವಾ ತುರುಕರು. ಇವರೆಲ್ಲರ ಮತ ಒಂದೇ ಅಲ್ಲದಿದ್ದರೂ ಎಲ್ಲರನ್ನೂ ಮೂರರೆಂದೇ ಕರೆಯುತ್ತಾರೆ. ಇವರಲ್ಲಿ ಕೆಲವರು ಸುನ್ನಿಗಳು, ಮತ್ತೆ ಕೆಲವರು ಷಿಯಾಗಳು. ಹಿಂದೂಗಳಲ್ಲಿಯೂ ಎಷ್ಟೋ ಮತಭೇದಗಳುಂಟು. ಪಾರ್ಸಿಗಳು ಅಗ್ನಿಪೂಜಕರು.

ಸೂರತ್‌ನಲ್ಲಿ ದೊಡ್ಡ ದೊಡ್ಡ ಶ್ರೀಮಂತರಿದ್ದಾರೆ. ನನ್ನ ಬನಿಯ ಸ್ನೇಹಿತನೊಬ್ಬನ-ಅವನ ಹೆಸರು ವರ್ಜಿವೋರಾ–ಶ್ರೀಮಂತಿಕೆ ಎಂಬತ್ತು ಲಕ್ಷದಷ್ಟಂತೆ!

ಇಲ್ಲಿ ಇಂಗ್ಲಿಷರಿಗೂ ಡಚ್ಚರಿಗೂ ಸೇರಿದ ಮನೆಗಳಿವೆ. ಇವುಗಳನ್ನು 'ಲಾಡ್ಜ್' ಮತ್ತು 'ಫ್ಯಾಕ್ಟೊರಿ' ಗಳೆಂದು ಕರೆಯುತ್ತಾರೆ. ಮನೆಗಳನ್ನು ಅಂದವಾಗಿಟ್ಟುಕೊಂಡಿದ್ದಾರೆ. ಇಂಗ್ಲಿಷರ ಮುಖ್ಯ ವ್ಯಾಪಾರ ವಹಿವಾಟುಗಳೆಲ್ಲ ಇಲ್ಲಿಂದ ನಡೆಯುತ್ತವೆ. ಊರಿನಲ್ಲಿ ನೂರಕ್ಕೂ ಹೆಚ್ಚು ಕ್ಯಾಥೋಲಿಕ್ ಕ್ರೈಸ್ತರಿರಬಹುದು.

ತಪತಿ ನದಿಯ ದಡದಲ್ಲಿ ಒಂದು ಕೋಟೆಯಿದೆ. ವಾಸದ ಮನೆಗಳನ್ನು ಅಂದವಾಗಿ ಕಟ್ಟಿದ್ದಾರೆ. ಆದರೆ ಮನೆ ಕಟ್ಟುವ ಸಾಮಾನುಗಳು ತುಂಬಾ ದುಬಾರಿ. ಕಲ್ಲು ಸಿಕ್ಕುವುದಿಲ್ಲ. ಇಟ್ಟಿಗೆ ಮತ್ತು ಗಾರೆಗಳ ಬೆಲೆಯೂ ಹೆಚ್ಚು. ಹೀಗಾಗಿ ಮನೆ ಕಟ್ಟಲು ಮರವೇ ಗತಿ. ಈ ಮರವನ್ನೂ ದಾಮನ್‌ನಿಂದ ಸಮುದ್ರದ ಮೇಲೆ ತರುತ್ತಾರೆ. ಮನೆಗೆ ಹೊದಿಸಲು ಅರ್ಧ ಅಂಗುಲ ದಪ್ಪದ ಹೆಂಚುಗಳನ್ನು ಉಪಯೋಗಿಸುತ್ತಾರೆ. ಆದರೆ ಅವನ್ನು ಸರಿಯಾಗಿ ಸುಡದಿರುವ ಕಾರಣ ಅವು ಬೆಳ್ಳಗೆ ಕಾಣುತ್ತವೆ. ಅಲ್ಲದೆ ಹೆಚ್ಚು ಬಾಳಿಕೆ ಬರುವುದಿಲ್ಲ. ಈ ಕಾರಣ ಅವನ್ನು ಎರಡು ವರಸೆಯಾಗಿ ಹೊದಿಸುತ್ತಾರೆ. ಮೇಲ್ಛಾವಣಿಗೆ 'ಬಂಬು' (ಬಿದಿರು) ಗಳನ್ನು ಹಾಸಿ ಅದರ ಮೇಲೆ ಹೆಂಚು ಹೊದಿಸುತ್ತಾರೆ. ಇವು ಶ್ರೀಮಂತರ ಮನೆಗಳು. ಸಾಮಾನ್ಯ ಜನರಿಗೆ ಬಿದಿರು ಮತ್ತು ತೆಂಗಿನ ಗರಿಗಳ ಮನೆಗಳೇ ಗತಿ.

ಕ್ರೈಸ್ತರೂ ಮುಹಮ್ಮದೀಯರೂ ಹಸುವಿನ ಮಾಂಸ ತಿನ್ನುತ್ತಾರೆ. ಹಸುವಿನ ಮಾಂಸ ಎತ್ತುಗಳ ಮಾಂಸಕ್ಕಿಂತ ಹೆಚ್ಚು ರುಚಿ. ಅಲ್ಲದೆ, ಎತ್ತುಗಳು ಬೇಸಾಯಕ್ಕೂ ಗಾಡಿಗಳಿಗೂ ಬೇಕು. ಇಲ್ಲಿ ಸಿಗುವ 'ಮಟನ್' (ಮಾಂಸ) ಚೆನ್ನಾಗಿದೆ. ಹಂದಿ, ಕೋಳಿ, ಪಾರಿವಾಳ ಮತ್ತು ಬಗೆಬಗೆಯ ಕಾಡುಕೋಳಿಗಳೂ ಸಿಕ್ಕುತ್ತವೆ. ಜನರು ಹೆಚ್ಚಾಗಿ ಸಾಸುವೆ ಎಣ್ಣೆಯನ್ನು ಉಪಯೋಗಿಸುತ್ತಾರೆ. ಇಂಡೀಸ್‌ನಲ್ಲಿ ಬಹು ಜನರು ಉಪಯೋಗಿಸುವುದು ಈ ಎಣ್ಣೆಯನ್ನೇ. ಎಳ್ಳೆಣ್ಣೆಯೂ ಸಿಕ್ಕುತ್ತದೆ. ಆದರೆ ಅದು ಅಷ್ಟು ಚೆನ್ನಾಗಿರುವುದಿಲ್ಲ.

ಇಲ್ಲಿ ಫೆಬ್ರುವರಿ ತಿಂಗಳಿನಿಂದ ಏಪ್ರಿಲ್ ತಿಂಗಳವರೆಗೆ ದ್ರಾಕ್ಷಿ ಸಿಕ್ಕುತ್ತದೆ. ಆದರೆ ರುಚಿ ಅಷ್ಟಕ್ಕಷ್ಟೇ. ನಾಪುರ (ನವಪುರ–ಪೇಟೆ) ಎಂಬ ಸ್ಥಳದಿಂದ ಬಿಳಿಯ ದ್ರಾಕ್ಷಿ ಬರುತ್ತದೆ. ನೋಡುವುದಕ್ಕೆ ತುಂಬಾ ಚೆನ್ನಾಗಿದೆ.

ಇಲ್ಲಿಯ ಜನ ಕುಡಿಯುವ ಮದ್ಯ ನಮ್ಮ 'ವೈನ್' ಗಿಂತ ಉತ್ತಮವಾದುದೇನಲ್ಲ. ಸಾಮಾನ್ಯ ಜನರ ಪಾನೀಯವನ್ನು 'ಜಾಗರಿ' (Jaggery = ಬೆಲ್ಲ) ಮತ್ತು

ಗೊಬ್ಬಳಿ (ಬಬೂಲ್?) ಮರದ ಚೆಕ್ಕೆಗಳನ್ನು ಕೊಳೆಹಾಕಿ ಭಟ್ಟಿ ಇಳಿಸಿ ತಯಾರಿಸು ತ್ತಾರೆ. 'ತಾರಿ' (tary = toddy) ಯನ್ನೂ ಇಳಿಸಿ ಕುಡಿಯುತ್ತಾರೆ. ಆದರೆ ಇವೆಲ್ಲಾ ನಮ್ಮ ಬ್ರಾಂದಿಗೆ ಸಮನಾಗಲಾರವು; ಅಕ್ಕಿ, ಸಕ್ಕರೆ ಮತ್ತು ಖರ್ಜೂರಗಳಿಂದ ತಯಾರಿಸುವ ಮಾದಕ ಪಾನೀಯಗಳನ್ನು ಮೀರಿಸಲಾರವು.

ತಾರಿಯನ್ನು 'ಕೋಕೊ' (ತೆಂಗಿನ) ಮರ ಮತ್ತು 'ಖಡ್ಜಿಯರ್' (ಖರ್ಜೂರ = ತಾಳೆ?) ಮರಗಳಿಂದ ಇಳಿಸುತ್ತಾರೆ. 'ಖಡ್ಜಿಯರ್' ಮರದಿಂದ ಇಳಿಸಿದ ಹೆಂಡ ತುಂಬಾ ರುಚಿ. ಚರ್ಮದ ಮಿಣಿಗಳನ್ನು ಸೊಂಟಕ್ಕೆ ಹಾಕಿಕೊಂಡು ಏಣಿಗಳ ಸಹಾಯವಿಲ್ಲದೆಯೇ ಮರಗಳನ್ನು ಹತ್ತಿ ಸಣ್ಣ ಉಳಿಯಿಂದ ಸುಳಿಯ ಬಳಿ ಒಂದಂಗುಲ ಆಳ ಮೂರಂಗುಲ ಅಗಲದಷ್ಟು ರೇವುಮಾಡಿ ಅದರ ಕೆಳಗೆ ಗಡಿಗೆ ಕಟ್ಟುತ್ತಾರೆ. ಹಕ್ಕಿ ಪಕ್ಷಿಗಳು ಕುಡಿಯದಂತೆ ರೇವಿನ ಮೇಲೆ ಗರಿಗಳನ್ನು ಮುಚ್ಚುತ್ತಾರೆ. ಹೆಂಡ ಧಾರಾ ಕಾರವಾಗಿ ಗಡಿಗೆಗೆ ಇಳಿಯುತ್ತದೆ. ಗಡಿಗೆ ತುಂಬಿದ ನಂತರ ಮರ ಹತ್ತಿ ಅದನ್ನು ಬಿಚ್ಚಿ ಸೊಂಟದ ಮಿಣಿಗೆ ಸಿಕ್ಕಿಸಿದ ಗಡಿಗೆಗೆ ಸುರಿದುಕೊಳ್ಳುತ್ತಾರೆ. ತೆಂಗಿನಮರದಿಂದ ಹೆಂಡ ತೆಗೆಯುವಾಗ ಅದರ ಸುಳಿಗೆ ರೇವು ಮಾಡುವುದಿಲ್ಲ. ಅದರ ಬದಲು ಹೊಂಬಾಳೆಯ ತುದಿಯನ್ನು ಕೊರೆದು ಅದಕ್ಕೆ ಗಡಿಗೆ ಕಟ್ಟುತ್ತಾರೆ.

ಹೆಂಡದ ವ್ಯಾಪಾರದಲ್ಲಿ ಅನೇಕ ಜನ ನಿರತರಾಗಿದ್ದಾರೆ. ಇವರು ಹೆಂಡದ ಮರಗಳ ಮಾಲೀಕರೂ ಹೌದು. ಬೆಳಗಿನ ಹೊತ್ತು ಬಿಸಿಲು ಬೀಳುವುದಕ್ಕೆ ಮುನ್ನ ತೆಗೆದ ಹೆಂಡ (ನೀರಾ) ಬಹು ರುಚಿ. ಬಿಸಿಲು ಬಿದ್ದ ಮೇಲೆ ಹೆಂಡ ಹುಳಿಯಾಗಿಬಿಡುತ್ತದೆ.

ತೆಂಗಿನಮರ ಮತ್ತು ತಾಳೆ ಮರಗಳ ಪ್ರತಿಯೊಂದು ಭಾಗವೂ ಒಂದಲ್ಲ ಒಂದು ಉಪಯೋಗಕ್ಕೆ ಬರುತ್ತದೆ. ತೆಂಗಿನಕಾಯಿಯೂ ಎಳನೀರೂ ಬಹು ರುಚಿ.

ಸೂರತ್‌ನಲ್ಲಿ ಎಲ್ಲಾ ಬಗೆಯ ಸರಕುಗಳು ದೊರೆಯುತ್ತವೆ. ಇಂಡೀಸಿನಲ್ಲಿ ತಯಾರಾಗುವ ಹತ್ತಿಬಟ್ಟೆಗಳೂ, ಮತ್ತಿತರ ಸಾಮಾನುಗಳೂ, ಯೂರೋಪಿನಲ್ಲಿ ತಯಾರಾಗುವ ಎಲ್ಲಾ ವಸ್ತುಗಳೂ, ಅಷ್ಟೇ ಏಕೆ, ಚೀನೀ ಸಾಮಾನುಗಳು ಸಹ ಇಲ್ಲಿ ದೊರೆಯುತ್ತವೆ. ವಜ್ರ ವೈಢೂರ್ಯಗಳೂ, ಮುತ್ತುರತ್ನಗಳೂ ಇಲ್ಲಿ ಮಾರಾಟವಾಗು ತ್ತವೆ. ನಾನಾ ಬಗೆಯ ಸಂಬಾರಗಳೂ, ಹಣ್ಣು ಹಂಪಲುಗಳೂ ಹೇರಳವಾಗಿ ಸಿಕ್ಕುತ್ತವೆ. ಒಟ್ಟಿನಲ್ಲಿ ವಿದೇಶಿ ವರ್ತಕರು ಪ್ರಪಂಚದ ನಾನಾ ಭಾಗಗಳಿಗೆ ರವಾನಿಸಬಹುದಾದ ಎಲ್ಲಾ ತರಹ ವಸ್ತುಗಳೂ ಇಲ್ಲಿ ದೊರೆಯುತ್ತವೆ.

ಬೇರೆ ಕಡೆ ಇರುವಂತೆ ಸೂರತ್‌ನಲ್ಲಿಯೂ ವಿಧ ವಿಧ ಅಳತೆ ಮತ್ತು ತೂಕ ಗಳಿವೆ. 'ಕಂಡಿ' (ಖಂಡಿ) ಎಂದು ಕರೆಯಲ್ಪಡುವ ತೂಕಕ್ಕೆ ೨೦ 'ಮಣ್' (ಮಣ). ಒಂದು ಮಣಕ್ಕೆ ೪೦ 'ಸೆರ್ರ' (ಸೇರು)ಗಳು. ಇಲ್ಲಿಯ ಪೌಂಡಿಗೆ ೧೪ ಔನ್ಸುಗಳು, ಅಥವಾ ೩೫ 'ತೊಲೆ' (ತೊಲ)ಗಳು. ಚಿನ್ನ ಬೆಳ್ಳಿಗಳನ್ನು 'ತೊಲೆ' ಯಲ್ಲಿ ತೂಗು

ತ್ತಾರೆ. ಒಂದು ತೊಲೆಗೆ ೪೦ 'ಮಂಜಿಲಿ'ಗಳು ಅಥವಾ ೫೬ 'ಕ್ಯಾರೆಟ್'ಗಳು.[೧] ಅಥವಾ ೩೨ 'ವಾಲ್'ಗಳು, ಅಥವಾ ೯೬ 'ಗೊಂಜಿ' (ಗುಲಗಂಜಿ=ಗುಂಜಿ)ಗಳು. ಒಂದು ತೊಲೆಯ ತೂಕ ಒಂದು ರೂಪಾಯಿ ತೂಕದಷ್ಟು ಇರುತ್ತದೆ. ಇಂಡೀಸ್‌ನಲ್ಲೆಲ್ಲಾ ಮಣಕ್ಕೆ ೪೦ ಪೌಂಡು ಅಥವಾ ಸೇರುಗಳು. ಆದರೆ ಈ ಸೇರುಗಳ ತೂಕ ಒಂದೊಂದು ಕಡೆ ಒಂದೊಂದು ರೀತಿ ಇರುತ್ತದೆ.

ದೊಡ್ಡ ಮೊತ್ತದ ಹಣವನ್ನು 'ಲೆಕ್' (ಲಕ್ಷ), 'ಕ್ರೌಲ್' ಅಥವಾ 'ಕ್ರೌರ್' (ಕ್ರೋರ್–ಕೋಟಿ), 'ಪದದ್' (ಪದಮ್) ಮತ್ತು 'ನಿಲ್' ಎಂದು ಲೆಕ್ಕಹಾಕುತ್ತಾರೆ. ನೂರುಸಾವಿರ ರೂಪಾಯಿಗಳಿಗೆ ಒಂದು ಲಕ್ಷ. ನೂರು ಸಾವಿರ ಲಕ್ಷಗಳಿಗೆ ಒಂದು ಕೋಟಿ. ನೂರುಸಾವಿರ ಕ್ರೌರ್ ಕೋಟಿಗಳಿಗೆ ಒಂದು ಪದನ್. ನೂರುಸಾವಿರ ಪದನ್‌ಗಳಿಗೆ ಒಂದು ನಿಲ್.

ಶ್ರೀಮಂತರು ಚಲಾವಣೆಗೆ ಚಿನ್ನದ ರೂಪಾಯಿಗಳನ್ನು ಉಪಯೋಗಿಸುತ್ತಾರೆ. ಈ ರೂಪಾಯಿಗಳ ಬೆಲೆ ೨೦ ಫ್ರೆಂಚ್ ಲೀವ್ರ್‌ಗಳಷ್ಟು. ಆದರೆ ಇವು ಉಡುಗೊರೆಗೆ ಬೇಕಾಗುವುದರಿಂದ ಬೆಳ್ಳಿಯ ರೂಪಾಯಿಗಳೇ ಹೆಚ್ಚಾಗಿ ಚಲಾವಣೆಯಲ್ಲಿರುವುದು. ಈ ರೂಪಾಯಿ ತೂಕ ಒಂದು ತೊಲೆ. ವರ್ಷ ವರ್ಷ ಹೊಸ ಹೊಸ ರೂಪಾಯಿಗಳನ್ನು ಟಂಕವೊತ್ತುತ್ತಾರೆ. ಹೊಸ ನಾಣ್ಯದ ಬೆಲೆ ಹಳೆಯ ನಾಣ್ಯದ ಬೆಲೆಗಿಂತ ಒಂದು ಪೈಸಾ ಹೆಚ್ಚು. ಇದಕ್ಕೆ ಕಾರಣ, ಹಳೆಯ ನಾಣ್ಯಗಳು ದಿನೇ ದಿನೇ ಸವೆದು ಹೋಗಿ ಬೆಲೆ ಕಳೆದುಕೊಳ್ಳುತ್ತವೆ ಎಂಬುದು. ಆದರೆ ನಿಜವಾದ ಸಂಗತಿಯೆಂದರೆ, ನಾನು ಇಲ್ಲಿಗೆ ಬಂದಾಗ ಒಂದು ರೂಪಾಯಿ ಬೆಲೆ ೩೩ತ್ತಿ ಪೈಸಾಗಳಿದ್ದುದು ನಾನು ಊರನ್ನು ಬಿಟ್ಟಾಗ ೩೨ತ್ತಿ ಪೈಸಾಗಳಿಗೆ ಇಳಿಯಿತು. ರೂಪಾಯಿಗಳಲ್ಲದೆ ಕಾಲು ರೂಪಾಯಿಗಳೂ ಇವೆ.

ಪರ್ಷಿಯಾದಿಂದ ಬರುವ 'ಅಬಾಸ್ಸೀ' ಎಂಬ ನಾಣ್ಯಗಳಿಗೆ ಇಲ್ಲಿ ಕೇವಲ ೧೯ ಪೈಸಾಗಳು. 'ಮೊಗೊಲೆ' (ಮೊಗಲ್) ಎಂಬ ಬೆಳ್ಳಿ ನಾಣ್ಯವೂ ಇಲ್ಲಿ ಚಲಾವಣೆಯಲ್ಲಿದೆ. ಇದನ್ನು 'ಮಹ್‌ಮೌದಿ' ಎಂದು ಕರೆಯುತ್ತಾರೆ.

'ಪೈಸಾ' ಎಂಬುದು ತಾಮ್ರದ ನಾಣ್ಯ. ತೂಕ ಮತ್ತು ಅಗಲದಲ್ಲಿ ಬೆಳ್ಳಿ ರೂಪಾಯಿನಷ್ಟೇ ಇದೆ.[೨] ಅರ್ಧ ಪೈಸಾ ನಾಣ್ಯವೂ ಉಂಟು. ಒಂದು ಪೈಸೆಗೆ ೬೮ ಕಹಿ ಬಾದಾಮಿಯನ್ನು ಕೊಡುತ್ತಾರೆ. ಹಣವಾಗಿ ಚಲಾವಣೆಯಲ್ಲಿರುವ ಈ

---

೧. ಕ್ಯಾರೆಟ್: ಇದು ಅರಬ್ಬೀ ಭಾಷೆಯ 'ಕಿರ್‍ರತ್' ಎಂಬ ಪದದಿಂದ ಬಂದಿತೆಂದು ಹೇಳುತ್ತಾರೆ.

೨. ಹಿಂದೆ ಆರು ಕಾಸಿನ ಒಂದು ನಾಣ್ಯ ಇತ್ತು. ಇದು ರೂಪಾಯಿನಷ್ಟೇ ಅಗಲವೂ ಮಂದವೂ ಆಗಿತ್ತು. ಬಹುಶಃ ಇಂಥ ಒಂದು ನಾಣ್ಯ ಪೈಸಾ ಇರಬೇಕು.

ಬಾದಾಮಿ ಪರ್ಷಿಯಾದಿಂದ ಬರುತ್ತದೆ. ಕಲ್ಲಿನಲ್ಲಿ (ಕಲ್ಲುಭೂಮಿಯಲ್ಲಿ?) ಪೊದೆಯಂತಹ ಗಿಡವು ಬಿಡುವ ಹಣ್ಣು ಬಾದಾಮಿ.

ಮೊಗಲ್ ಚಕ್ರವರ್ತಿಯ ಬೆಳ್ಳಿಯ ನಾಣ್ಯ ಬೇರೆಲ್ಲ ನಾಣ್ಯಗಳಿಗಿಂತ ಹೆಚ್ಚು ಅಂದವಾಗಿದೆ. ಹೊಸಬರು ಮೊಗಲ್ ಚಕ್ರಾಧಿಪತ್ಯವನ್ನು ಪ್ರವೇಶಿಸುವಾಗ ತಮ್ಮ ಬಳಿ ಇರುವ ಬೆಳ್ಳಿ ನಾಣ್ಯಗಳನ್ನು ಅಲ್ಲಿಯ ನಾಣ್ಯಕ್ಕೆ ಬದಲಾಯಿಸಿಕೊಳ್ಳಬೇಕು. ಪರದೇಶದ ನಾಣ್ಯಗಳನ್ನು ಕರಗಿಸಿ ರೂಪಾಯಿಗೆ ಬೇಕಾದ ಬೆಳ್ಳಿಗೆ ಉಪಯೋಗಿಸುತ್ತಾರೆ.

ಮಹಮ್ಮದೀಯರ ಮತೀಯ ವಿಷಯಗಳನ್ನೆಲ್ಲಾ ನೋಡಿಕೊಳ್ಳಲು ಸೂರತ್‌ನಲ್ಲಿ ಒಬ್ಬ 'ಮುಫ್ತಿ' ಇದ್ದಾನೆ. ಮಹಮ್ಮದೀಯರ ಬೇರೆ ಕಟ್ಟುಕಟ್ಟಳೆಗಳನ್ನು ನೋಡಿಕೊಳ್ಳಲು 'ಕಾದಿ' (ಕಾಜಿ) ಇದ್ದಾನೆ. ವಾದ ವಿವಾದಗಳುಂಟಾದಾಗ ಜನರು ಇವನ ಬಳಿಗೆ ಹೋಗಿ ಅವನ್ನು ಪರಿಹರಿಸಿಕೊಳ್ಳುತ್ತಾರೆ.

ಮೊಗಲ್ ಚಕ್ರವರ್ತಿಯು ಇಲ್ಲಿ ಇನ್ನೊಬ್ಬ ದೊಡ್ಡ ಅಧಿಕಾರಿಯನ್ನು ನೇಮಿಸಿದ್ದಾನೆ. ಇವನನ್ನು 'ವಕ್–ನೆವಿಸ್' (ವಖಿಯಾ ನವಿಸ್ = ವರದಿಗಾರ) ಎಂದು ಕರೆಯುತ್ತಾರೆ. ಈ ಹುದ್ದೆಯನ್ನು ಫ್ರೆಂಚರು 'ಸೆಕ್ರೆಟರಿ ಆಫ್ ಸ್ಟೇಟ್' ಎಂದು ಕರೆಯುತ್ತಾರೆ. ತನ್ನ ಅಧಿಕಾರ ವ್ಯಾಪ್ತಿಗೊಳಪಟ್ಟ ಪ್ರದೇಶದಲ್ಲಿ ನಡೆಯುವ ಸಂಗತಿಗಳನ್ನೆಲ್ಲಾ ಬರೆದಿಡುವುದು ಈತನ ಕೆಲಸ. ಇವನು ಮಾಡಿದ ವರದಿಯೇ ರಾಜನಿಗೆ ಮುಖ್ಯ ಆಧಾರ.

ಸೂರತ್‌ನಲ್ಲಿ ಇಬ್ಬರು ನವಾಬರಿದ್ದಾರೆ.[೧] ಇವರು ಒಬ್ಬರಿಗೊಬ್ಬರು ಅಧೀನರಲ್ಲ. ನೇರವಾಗಿ ಚಕ್ರವರ್ತಿಗೆ ಅಧೀನರು. ಒಬ್ಬನು ಕೋಟೆಯ ಆಡಳಿತ ನೋಡಿಕೊಂಡರೆ ಇನ್ನೊಬ್ಬ ಪೇಟೆಯ ಆಡಳಿತ ನೋಡಿಕೊಳ್ಳುತ್ತಾನೆ. ಪೇಟೆಯ ನವಾಬನು ಸಿವಿಲ್ ವ್ಯವಹಾರಗಳನ್ನೂ ನೋಡಿಕೊಳ್ಳುತ್ತಾನೆ. ಈತ ತೀರ್ಪುಗಳನ್ನು ಶೀಘ್ರವಾಗಿ ಕೊಡುತ್ತಾನೆ. ಪ್ರತಿವಾದಿ ಏಕೆ ಸಾಲ ತೆಗೆದುಕೊಂಡ ಎಂಬುದನ್ನು ವಾದಿಯೇ ರುಜುವಾತು ಮಾಡಬೇಕು; ಮತ್ತು ಎರಡು ಸಾಕ್ಷಿಗಳನ್ನೂ ಹಾಜರುಪಡಿಸಬೇಕು, ಇಲ್ಲವೇ ಪ್ರಮಾಣ ಮಾಡಬೇಕು. ಕ್ರೈಸ್ತರು 'ಗಾಸ್ಪೆಲ್' (ಬೈಬಲ್) ಹಿಡಿದು, ಮೂರರು 'ಅಲ್ಕೊರಾನ್' (ಕೊರಾನ್) ಮೇಲೆ, ವಿಗ್ರಹಾರಾಧಕರು ಹಸುವಿನ ಮೇಲೆ ಪ್ರಮಾಣ ಮಾಡಬೇಕು. ಹಸುವಿನ ಮೇಲೆ ಪ್ರಮಾಣ ಮಾಡುವವರು 'ಸುಳ್ಳು ಹೇಳಿದರೆ ನಾನು ಗೋಮಾಂಸ ತಿಂದಂತೆ' ಎಂದು ಹೇಳಬೇಕು. ಆದರೆ ಹೀಗೆ ಪ್ರಮಾಣ ಮಾಡುವ ಬದಲು ದುಡ್ಡು ಹೋದರೆ ಹೋಗಲಿ ಎನ್ನುತ್ತಾರೆ. ಏಕೆಂದರೆ, ಹಸು ಮುಟ್ಟಿ ಪ್ರಮಾಣ ಮಾಡುವುದು ತುಂಬಾ ಹೀನಾಯವಾದುದೆಂದು ವಿಗ್ರಹಾರಾಧಕರು ಭಾವಿಸುತ್ತಾರೆ.

---

೧. ಒಬ್ಬ ಸುಭಾದಾರ್; ಇನ್ನೊಬ್ಬ ಫೌಜ್‌ದಾರ್.

ನವಾಬನನ್ನು ಮೊದಲ ಸಲ ನೋಡಬೇಕಾದರೆ ಅವರವರ ಶಕ್ತ್ಯಾನುಸಾರ ಐದು ಆರು ಅಥವಾ ಹತ್ತು ರೂಪಾಯಿಗಳ ನಜರ್ ಒಪ್ಪಿಸಬೇಕು. ಇಂಡೀಸ್‌ನಲ್ಲೆಲ್ಲಾ ಇದೇ ಪದ್ಧತಿ ಇದೆ. ಕೋಟೆಯ ನವಾಬ ಕ್ರಿಮಿನಲ್ ವಿಷಯಗಳಲ್ಲಿ ಪ್ರವೇಶಿಸುವುದಿಲ್ಲ. ಅವನ್ನು ಕೊತ್ವಾಲ ನೋಡಿಕೊಳ್ಳುತ್ತಾನೆ. ತುರ್ಕಿಯಲ್ಲಿ ಈ ಕೊತ್ವಾಲನನ್ನು 'ಸಾಸ್ ಬಸ್ಸಾ' (ಸಿರ್ ಬಕ್ಷಿ) ಎಂತಲೂ, ಪರ್ಷಿಯಾದಲ್ಲಿ 'ದರೋಗಾ' ಎಂತಲೂ ಕರೆಯು ತ್ತಾರೆ. ಈ ಕೊತ್ವಾಲನಿಗೆ ಛಡಿ ಏಟು ಅಥವಾ ಚಾವಟಿ ಏಟುಗಳ ಶಿಕ್ಷೆ ವಿಧಿಸುವ ಅಧಿಕಾರವುಂಟು. ಈ ಶಿಕ್ಷೆಗಳು ಅವನ ಮುಂದೆಯೇ ಜರುಗಬೇಕು. ಕೆಲವು ವೇಳೆ ಶಿಕ್ಷೆಗಳನ್ನು ಅವನ ಮನೆಯಲ್ಲಿಯೋ, ಬೀದಿಯಲ್ಲಿಯೋ ಇಲ್ಲವೆ ಅಪರಾಧ ನಡೆದ ಸ್ಥಳದಲ್ಲಿಯೋ ವಿಧಿಸುತ್ತಾರೆ. ಈ ಕೊತ್ವಾಲನು ಆಗಾಗ ಊರಿನಲ್ಲಿ ಕುದುರೆಯ ಮೇಲೆ ಅಡ್ಡಾಡುತ್ತಾನೆ. ಆಗ ಇವನ ಹಿಂದೆ ಮುಂದೆ ದಂಡ, ಭಾರಿ ಕೊರಡೆ, ಭರ್ಜಿ, ಕತ್ತಿ, ಗುರಾಣಿ ಮುಂತಾದ ಆಯುಧಗಳನ್ನು ಹಿಡಿದ ಯೋಧರು ಇರುತ್ತಾರೆ. ಎಲ್ಲರ ಬಳಿ ಈಟಿ ಇದ್ದೇ ಇರುತ್ತದೆ. ಸಿವಿಲ್ ನ್ಯಾಯಾಧೀಶನಾಗಲಿ ಅಥವಾ ಕ್ರಿಮಿನಲ್ ನ್ಯಾಯಾಧೀಶನಾಗಲಿ ಯಾರಿಗೂ ಮರಣದಂಡನೆ ವಿಧಿಸುವ ಅಧಿಕಾರ ಇಲ್ಲ. ಇದು ಚಕ್ರವರ್ತಿಗೆ ಮಾತ್ರ ಸೇರಿದ್ದು. ಯಾರಿಗಾದರೂ ಮರಣದಂಡನೆ ವಿಧಿಸಬೇಕಾಗಿ ಬಂದಲ್ಲಿ ಈ ವಿಷಯವನ್ನು ಚಕ್ರವರ್ತಿಗೆ ವರದಿ ಮಾಡಿ ಆತನ ಅಪ್ಪಣೆ ಪಡೆಯಬೇಕು.

ದೊಂಬಿ, ಗಲಭೆ ಮುಂತಾದುವುಗಳು ಆಗದಂತೆ ನೋಡಿಕೊಳ್ಳಲು ಕೊತ್ವಾಲನು ರಾತ್ರಿಹೊತ್ತು ಊರಿನಲ್ಲಿ ಗಸ್ತು ತಿರುಗುತ್ತಾನೆ. ಅಲ್ಲಲ್ಲಿ ಕಾವಲುಗಾರರನ್ನು ನೇಮಿಸಿ ಬೀದಿಯಲ್ಲಿ ಸಿಕ್ಕಿದವರನ್ನು ಹಿಡಿದು ತರಿಸಿ ಸೆರೆಮನೆಯಲ್ಲಿಟ್ಟು ಛಡಿ ಏಟುಗಳ ಶಿಕ್ಷೆ ವಿಧಿಸದೆ ಬಿಡುವುದಿಲ್ಲ. ಕೊತ್ವಾಲನ ಕಡೆಯ ಇಬ್ಬರು ಒಂಭತ್ತು ಗಂಟೆಗೆ ಎರಡು ಸಣ್ಣನಗಾರಿಗಳನ್ನು ಬಡಿಯುತ್ತಾರೆ. ಮೂರನೆಯವನು ಉದ್ದನೆಯ ತಾಮ್ರದ ಕೊಂಬು ಊದುತ್ತಾನೆ. 'ಕಬೆರ್‌ದಾರ್' (ಖಬರ್‌ದಾರ್) ಎಂದು ಕೂಗುತ್ತಾ ಹೋಗುತ್ತಾರೆ. 'ಕಬೆರ್‌ದಾರ್!' ಎಂದರೆ 'ಹುಷಾರ್!' ಎಂದರ್ಥ. ಅಕ್ಕಪಕ್ಕದ ಬೀದಿಗಳಲ್ಲಿ ಗಸ್ತು ತಿರುಗುವವರು ತಾವು ಎಚ್ಚರವಾಗಿದ್ದೇವೆ ಎಂಬುದನ್ನು ಸೂಚಿಸಲು ಪ್ರತಿಯಾಗಿ ಹಾಗೆಯೇ ಕೂಗುತ್ತಾರೆ. ಹೀಗೆ ಇಡೀ ರಾತ್ರಿಯಲ್ಲಿ ಮೂರು ಸಲ ಅಂದರೆ ಒಂಭತ್ತು ಗಂಟೆಗೆ, ಮಧ್ಯರಾತ್ರಿಗೆ ಮತ್ತು ಬೆಳಗಿನ ಜಾವ ಮೂರು ಗಂಟೆಗೆ ಗಸ್ತು ತಿರುಗುತ್ತಾರೆ.

ಪಟ್ಟಣದಲ್ಲಿ ಆಗುವ ದರೋಡೆ ಕಳ್ಳತನಗಳಿಗೆ ಕೊತ್ವಾಲನೇ ಜವಾಬ್ದಾರ. ಆದರೆ ಈ ಅಧಿಕಾರಕ್ಕೆ ಯಾರು ಬಂದರೂ ಉಪಾಯದಿಂದ ತಾವು ಕೊಡಬೇಕಾದ್ದನ್ನು ತಪ್ಪಿಸಿಕೊಳ್ಳುತ್ತಾರೆ. ನಾನು ಸೂರತ್‌ನಲ್ಲಿದ್ದಾಗ ಒಬ್ಬ ಆರ್ಮೀನಿಯನ್ ೨,೪೦೦ 'ಚೆಕಿನ್'ಗಳನ್ನು (Chequine = ಸೆಕ್ವಿನ್—ವೆನೀಸಿನ ಒಂದು ನಾಣ್ಯ) ಕಳೆದು ಕೊಂಡ. ಅವನ ಇಬ್ಬರು ಸೇವಕರೇ ಕದ್ದಿರಬೇಕೆಂದು ಆಪಾದನೆ ಹೊರಿಸಿದ. ಮೂರ ನೊಬ್ಬ ಈ ಕಳ್ಳರನ್ನು ಕಡಿಸಿ ಹಣ ಕಸಿದುಕೊಂಡಿದ್ದಾನೆಂದು ಒಂದು ವದಂತಿ ಹಬ್ಬಿತು.

ಆದರೆ ಕೊತ್ವಾಲ ಆ ಮೂರನ ತಂಟೆಗೆ ಹೋಗಲಿಲ್ಲ. ಅದರ ಬದಲು ಅರ್ಮೀನಿಯನ ನನ್ನೇ ಹಿಡಿದು ಅವನಿಂದ ನಿಜವಾದ ಸುದ್ದಿಯನ್ನು ಪಡೆಯುವ ಯೋಚನೆ ಮಾಡಿದ. ಅದಕ್ಕೆ ಆತ ಒಪ್ಪದೆ ಹಣ ಹೋದರೂ ಹೋಗಲಿ ಎಂದುಬಿಟ್ಟ. ಹೀಗೆ ಕೊತ್ವಾಲ ಹೇಗಾದರೂ ಮಾಡಿ ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಾನೆ.

ಒಂದು ಮನೆಯಲ್ಲಿ ಕಳ್ಳತನವಾದರೆ ಕೊತ್ವಾಲನು ಮನೆಯ ಮಕ್ಕಳಾದಿಯಾಗಿ ಎಲ್ಲರನ್ನೂ ಹಿಡಿದು ತರಿಸಿ ಅವರಿಗೆ ಕೊರಡದ ಏಟು ಹೊಡೆಸುತ್ತಾನೆ. ಅಪರಾಧಿಯನ್ನು ಮುಖ ಅಡಿ ಮಾಡಿ ಮಲಗಿಸಿ ನಾಲ್ಕು ಜನರು ಕೈಕಾಲುಗಳನ್ನು ಹಿಡಿದುಕೊಳ್ಳುತ್ತಾರೆ. ಚರ್ಮದ ಕೊರಡ ಹಿಡಿದವನು ಅಡಿಗಲ್ಲಿನ ಮೇಲಿಟ್ಟ ಕಬ್ಬಿಣವನ್ನು ಸುತ್ತಿಗೆಯಿಂದ ಬಡಿಯುವಂತೆ ಅವನಿಗೆ ಹೊಡೆಯುತ್ತಾರೆ. ರಕ್ತ ಹರಿದರೂ ಬಿಡುವುದಿಲ್ಲ. ಮೊದಲನೆಯ ದಿನ ತಪ್ಪು ಒಪ್ಪಿಕೊಳ್ಳದಿದ್ದರೆ ಎರಡನೆಯ ದಿನವೂ ಅದೇ ಶಿಕ್ಷೆ. ಹೀಗೆ ತಪ್ಪು ಒಪ್ಪಿಕೊಳ್ಳುವವರೆಗೆ ಅಥವಾ ಮಾಲು ಸಿಕ್ಕುವವರೆಗೆ ದಿನವೂ ಕೊರಡದ ರುಚಿ ತೋರಿಸುತ್ತಲೇ ಇರುತ್ತಾರೆ. ವಿಚಿತ್ರದ ಸಂಗತಿಯೆಂದರೆ, ಅವರ ಮನೆಯನ್ನಾಗಲೀ ಸಾಮಾನುಗಳನ್ನಾಗಲೀ ಕೊತ್ವಾಲನು ಶೋಧಿಸದಿರುವುದು. ಐದಾರು ದಿನಗಳಾದ ಮೇಲೆ ಸಂಶಯಕ್ಕೊಳಗಾದ ಮನುಷ್ಯ ಒಪ್ಪಿಕೊಳ್ಳದೆಹೋದರೆ ಅವನ ಬಿಡುಗಡೆಯಾಗುತ್ತದೆ.

ಸೂರತ್‌ನಲ್ಲಿ ಒಬ್ಬ 'ಫೌಜುದಾರ್' ಇದ್ದಾನೆ. ನಾಡಿನಲ್ಲಿ ಕಳ್ಳತನ ದರೋಡೆಗಳಾಗದಂತೆ ನೋಡಿಕೊಳ್ಳುವುದು ಇವನ ಕೆಲಸ. ಇವನು ಕೊತ್ವಾಲನಷ್ಟು ಯುಕ್ತಿವಂತನೆಂದು ಹೇಳಲಾರೆ. ಯಾರಾದರೂ ಅಪರಾಧಿ ಸಿಕ್ಕಿದರೆ ಅವನ ಕಡೆಯವರು 'ದೋಆ–ಪಾದಷಾ (Doa–Padacha) ಎಂದು ಕೂಗುತ್ತಾರೆ. ಆಗ ಅಪರಾಧಿಯು ನ್ಯಾಯಾಧೀಶನ ಮುಂದೆ ಹಾಜರಾಗಿ ತನ್ನದು ತಪ್ಪಿಲ್ಲವೆಂದು ರುಜುವಾತು ಮಾಡಬೇಕು. 'ದೋಆ–ಪಾದಷಾ' ಎಂಬ ಪದವನ್ನು ಇಡೀ ಇಂಡೀಸ್‌ನಲ್ಲೆಲ್ಲಾ ಉಪಯೋಗಿಸುತ್ತಾರೆ. ಸೂರತ್‌ನಲ್ಲಿ ಅಪರಾಧಿಗಳಿಗೆ ಸಣ್ಣ ಪುಟ್ಟ ಜುಲ್ಮಾನೆ ವಿಧಿಸುವುದರಿಂದ ಜನರು ಆರಾಮದಿಂದ ಇದ್ದಾರೆಂದು ಹೇಳಬಹುದು.

ನಾನು ಸೂರತ್ತಿಗೆ ಹೋದಾಗ ಅಲ್ಲಿಯ ನವಾಬ ಫ್ರೆಂಚ್ ಕಂಪೆನಿಯ ಬಗ್ಗೆ ತನಿಖೆ ನಡೆಸುತ್ತಿದ್ದ. ಅದರ ಮೇಲೆ ಏನೇನೋ ದೂರುಗಳು ಬಂದಿದ್ದುವು. ಆದರೆ ಆಮೇಲೆ ಅವೆಲ್ಲ ಸುಳ್ಳೆಂದು ತಿಳಿದು ಚಕ್ರವರ್ತಿಗೆ ವರದಿ ಮಾಡಿದ. ಇದಕ್ಕೆ ತುಂಬ ಸಹಾಯಕರಾದವರು ಕಾಪುಚಿನರ ಸುಪೀರಿಯರ್ (Superior of the Capuchins) ಆದ ಫಾದರ್ ಅಂಬ್ರೋಸ್ ಎಂಬುವರು. ಇವರು ತಮ್ಮ ಸ್ಥಾನಮಾನದ ಬಲದಿಂದ ನವಾಬನ ಮನಸ್ಸಿನಲ್ಲಿದ್ದ ದುರಭಿಪ್ರಾಯವನ್ನು ಹೋಗಲಾಡಿಸಿದರು.

ಒಂದು ಬುಧವಾರ ನವಾಬನ ಮಗಳ ಮದುವೆ. ಒಬ್ಬ ಅಮೀರನ ಮಗನಿಗೆ ಕೊಟ್ಟು ಮದುವೆಯಾಯಿತು. ಮದುವೆಗೆ ಹದಿನೈದು ದಿನಗಳ ಮೊದಲಿನಿಂದಲೇ ಭಾರಿ ಸಿದ್ಧತೆಗಳೂ ಬಾಜಾಬಜಂತ್ರಿಗಳೂ ನಡೆದುವು. ವರನನ್ನು ಆತನ ಊರಿನಿಂದ

ಇಲ್ಲಿಗೆ ಕರೆದುಕೊಂಡು ಬಂದು ಅದ್ದೂರಿಯಿಂದ ಮೆರವಣಿಗೆ ಮಾಡಿದರು. ರಾತ್ರಿಯ ಮೆರವಣಿಗೆಯಲ್ಲಿ ನೂರಾರು ಪತ್ತುಗಳನ್ನೂ ಇಲಾಳುಗಳನ್ನೂ ಹಿಡಿದಿದ್ದರು. ವಾದ್ಯಗಳನ್ನು ಬಾರಿಸುತ್ತಿದ್ದರು. ವೇಶ್ಯೆಯರು ನರ್ತಿಸುತ್ತಿದ್ದರು. ಗಂಡಿನ ಮುಖದ ಮುಂದೆ ಜರಿಯನ್ನು ಇಳಿಯಬಿಟ್ಟು ಕುದುರೆಯ ಮೇಲೆ ಕುಳ್ಳಿರಿಸಿದ್ದರು. ಮೆರವಣಿಗೆಯಲ್ಲಿ ಅಲಂಕರಿಸಿದ ಆನೆಗಳೂ ಒಂಟೆಗಳೂ ಇದ್ದುವು. ಬಗೆಬಗೆಯ ಬಾಣ ಬಿರುಸುಗಳ ಮದ್ದು ಗುಂಡುಗಳ ಆರ್ಭಟವಂತೂ ಹೇಳತೀರದು.

ಎರಡು ಗಂಟೆಗಳ ಕಾಲ ನಡೆದ ಈ ಮೆರವಣಿಗೆ ನವಾಬನ ಮನೆಯನ್ನು ತಲುಪಿದ ನಂತರ ಪಕ್ಕದಲ್ಲಿ ಹರಿಯುತ್ತಿದ್ದ ನದಿಯ ಮೇಲೆ ಅಪೂರ್ವವಾದ ದೀಪೋತ್ಸವವೂ ಬಾಣ ಬಿರುಸುಗಳೂ ಆದುವು. ಅವು ಒಂದು ಗಂಟೆಯ ಕಾಲ ನಡೆದುವು. ಇಷ್ಟೆಲ್ಲಾ ಆದ ಮೇಲೆ ಮದುವೆ ಶಾಸ್ತ್ರ ನಡೆಯಿತು. ಮೌಲ್ವಿ ಮದುವೆ ಮಾಡಿಸಿದ. ಬೆಳಗಿನ ಜಾವ ಎರಡು ಗಂಟೆಗೆ ನವ ವಧುವನ್ನು ಆನೆಯ ಮೇಲೆ ಕುಳ್ಳಿರಿಸಿಕೊಂಡು ವರನ ಮನೆಗೆ ಕರೆದುಕೊಂಡು ಹೋದರು.

ಇಂಡೀಸಿನಲ್ಲಿ ಬಹು ಅಂದಚೆಂದದ ನರ್ತಕಿಯರಿದ್ದಾರೆಂದು ಕೇಳಿದ್ದೆ. ಆದರೆ ಆ ದಿನ ನೋಡಿದ ನರ್ತಕಿಯರ ನರ್ತನ ನನ್ನ ಮನಸ್ಸಿಗೆ ಹಿಡಿಸಲಿಲ್ಲ. ಆದರೆ ನನ್ನ ಮುಂದಿನ ಪ್ರವಾಸದಲ್ಲಿ ನೋಡಿದ ಒಳ್ಳೆಯ ನರ್ತನದಿಂದ ಇಂಡಿಯಾದ ನರ್ತಕಿಯರ ಬಗ್ಗೆ ನನ್ನ ಅಭಿಪ್ರಾಯ ಬದಲಾಯಿಸಿತು.

ನಾನು ಮೊಟ್ಟ ಮೊದಲನೆಯ ಸಲ ಉಭಯಲಿಂಗಿಗಳನ್ನು ಕಂಡುದು ಇಲ್ಲಿ. ಇಂಡಿಯಾದಲ್ಲೆಲ್ಲಾ ಇವರ ಗುರುತು ಸಿಗಲು ಒಂದು ವ್ಯವಸ್ಥೆ ಮಾಡಿದ್ದಾರೆ. ಅದೇನೆಂದರೆ, ಇವರು ಹೆಂಗಸಿನಂತೆ ಉಡುಪು ಧರಿಸಿ ಗಂಡಸಿನಂತೆ ಪೇಟ ಹಾಕಿಕೊಳ್ಳಬೇಕು.

ಸ್ಮಶಾನಗಳು ಊರ ಹೊರಗಡೆ ಇವೆ. ಕ್ಯಾಥೊಲಿಕ್‌ರು, ಇಂಗ್ಲಿಷರು, ಡಚ್ಚರು ಮತ್ತು ಹಿಂದೂಗಳು ಇವರಿಗೆಲ್ಲಾ ಬೇರೆ ಬೇರೆ ಸ್ಮಶಾನಗಳಿವೆ. ಇಂಗ್ಲಿಷರು ಮತ್ತು ಡಚ್ಚರು ಶವಗಳನ್ನು ಹೂಳಿ ಅದರ ಮೇಲೆ ಇಟ್ಟಿಗೆಯಿಂದ ಗೋಪುರ ಕಟ್ಟಿಸಿ ಸುಣ್ಣ ಬಳಿಯುತ್ತಾರೆ. ಹೀಗೆ ಕಟ್ಟಿದವುಗಳಲ್ಲಿ ಒಬ್ಬ ಡಚ್ ಹೆಂಡಕುಡುಕನ ಸಮಾಧಿಯೂ ಒಂದು. ಈತ ಭಾರಿ ಕುಡುಕನೆಂದು ಹಾಲ್ಯಾಂಡ್ ದೇಶದಿಂದ ಗಡೀಪಾರು ಮಾಡಿದ್ದರಂತೆ. ಒಬ್ಬ ರಾಜಕುಮಾರನ ಹತ್ತಿರದ ಸಂಬಂಧಿಯಾಗಿದ್ದ ಈತ ಈ ದೇಶಕ್ಕೆ ಬಂದು ಸೂರತ್ತಿನಲ್ಲಿ ಸತ್ತ. ಈತನ ಸಮಾಧಿಯ ಮೇಲೂ ಒಂದು ಸ್ಮಾರಕ ಕಟ್ಟಿದರು. ಆದರೆ ಇವನು ಕುಡುಕನೆಂಬುದನ್ನು ಪ್ರಪಂಚಕ್ಕೆ ತಿಳಿಸಲು ಅದರ ಮೇಲೆ ಮತ್ತು ಅಕ್ಕಪಕ್ಕಗಳಲ್ಲಿ ದೊಡ್ಡ ದೊಡ್ಡ ಕಲ್ಲಿನ ಬಟ್ಟಲುಗಳನ್ನೂ, ಆ ಬಟ್ಟಲುಗಳ ಬಳಿ ಸಕ್ಕರೆಯ ಬೊಂಬೆಗಳನ್ನೂ ಇಟ್ಟಿದ್ದಾರೆ. ತಮಾಷೆಯಾಗಿ ಕಾಲಕಳೆಯಬೇಕೆನ್ನುವ ಡಚ್ಚರು ಇಲ್ಲಿಗೆ ಬಂದು ಆ ಕಲ್ಲಿನ ಬಟ್ಟಲುಗಳಲ್ಲಿ ಮದ್ಯ ತುಂಬಿ ಕುಡಿದದ್ದೂ ಕುಡಿದದ್ದೆ!

ಬನಿಯನರು ಸತ್ತವರನ್ನು ಹೂಳುವುದಿಲ್ಲ; ಸುಡುತ್ತಾರೆ. ತಪತಿ ನದಿಯ ದಂಡೆಯಲ್ಲಿ ಶವವನ್ನು ಸುಟ್ಟು ಬೂದಿಯನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ, ನದಿ

ಹರಿದಾಗ ಅದರಲ್ಲಿ ಬೂದಿ ಸೇರಿಹೋಗಲಿ ಎಂದು. ಈ ನದಿಯು ಬಹು ಪವಿತ್ರವಾದುದೆಂದು ಜನರ ನಂಬಿಕೆ. ಸತ್ತವರನ್ನು ಆದಷ್ಟು ಜಾಗ್ರತೆ ದಹನಮಾಡಿಬಿಡುತ್ತಾರೆ. ನಿಧಾನ ಮಾಡಿದರೆ ಸತ್ತವನ ಆತ್ಮವು ದೇಹದ ದಹನದವರೆಗೆ ಆಗುವ ಅಗಲುವಿಕೆಯನ್ನು ತಡೆಯಲಾರದಂತೆ. ಸೌದೆ ಸಿಕ್ಕದ ಕಡೆ ಶವವನ್ನು ಒಂದು ಕಲ್ಲಿಗೆ ಕಟ್ಟಿ ನೀರಿಗೆ ಎಸೆಯುತ್ತಾರೆ. ಸೌದೆ ನೀರು ಎರಡೂ ಇಲ್ಲದ ಕಡೆ ಹೂಳಬಹುದೆಂದು ಇವರ ಶಾಸ್ತ್ರ ಹೇಳುತ್ತದೆಯಂತೆ. ಆದರೆ ದಹನವೇ ಸತ್ತವನ ಆತ್ಮಕ್ಕೆ ಶ್ರೇಯಸ್ಕರ ಎಂದು ಎಲ್ಲರ ಅಭಿಮತ.

ಎರಡು ವರ್ಷದೊಳಗಿನ ಮಕ್ಕಳು ಸತ್ತರೆ ಸುಡುವುದಿಲ್ಲ, ಹೂಳುತ್ತಾರೆ. ಏಕೆಂದರೆ ಆ ಮಕ್ಕಳಿಗೆ ಬುದ್ಧಿ ಬಂದಿರುವುದಿಲ್ಲ. ಅಂತೆಯೇ 'ವರ್ತಿಯಾ' (Vartia =ವ್ರತಿ=ಯತಿ) ಗಳನ್ನೂ, ಜೋಗಿಗಳನ್ನೂ ಹೂಳುತ್ತಾರೆ. ಏಕೆಂದರೆ, ಅವರು ಮಹಾದೇವನಿಗೆ ಸಮಾನ. ಮಹಾದೇವ ಅವರ ದೊಡ್ಡ ಯೋಗಿಗಳಲ್ಲಿ (ದೇವರಲ್ಲಿ) ಒಬ್ಬ. ಅವನ ಅಪ್ಪಣೆಯಾಗಿದೆಯಂತೆ ಸತ್ತವರನ್ನು ಹೂಳಬೇಕು ಎಂದು. ಯತಿಗಳನ್ನು ಕಾಲು ಮೇಲಾಗಿ ಹೂಳುತ್ತಾರೆಂದು ಯಾರೋ ನನಗೆ ಹೇಳಿದ್ದರು. ಆದರೆ ಇದು ನಿಜವಲ್ಲ ಎಂದು ಆಮೇಲೆ ಗೊತ್ತಾಯಿತು.

ಇಂಗ್ಲಿಷರ ಸ್ಮಶಾನವಿರುವ ಕಡೆಯಲ್ಲಿ ಬನಿಯನೊಬ್ಬ ಕಟ್ಟಿಸಿರುವ ಇಳಿಯುವ ಬಾವಿ ಇದೆ. ಇದು ಭಾರಿ ದೊಡ್ಡದು. ಬಳಿಯಲ್ಲಿ ಕೆಂಪು ಮುಖದ ಒಂದು ವಿಗ್ರಹವಿದೆ. ಆದರೆ ಮುಖ ಅಷ್ಟು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಇದು ಮಹಾದೇವನ ವಿಗ್ರಹ ಎಂದು ಹಿಂದೂಗಳು ಹೇಳುತ್ತಾರೆ. ಇದನ್ನು ತುಂಬ ಭಕ್ತಿಯಿಂದ ಪೂಜಿಸುತ್ತಾರೆ.

ದಾಮನ್ ಗೇಟ್ ಕಡೆಗೆ ಒಂದು ಸುಂದರವಾದ ಕೆರೆ ಇದೆ. ಇದನ್ನು ಗೋಪಿ ಎಂಬ ಬನಿಯ ಕಟ್ಟಿಸಿದನಂತೆ. ಇಲ್ಲಿಯವರೆಗೂ ಸೂರತ್ತಿಗೆ ಬೇಕಾದ ಕುಡಿಯುವ ನೀರನ್ನೆಲ್ಲಾ ಈ ಕೆರೆಯಿಂದಲೇ ತರುತ್ತಿದ್ದರು. ರಾಜರು ಮಾತ್ರ ಕಟ್ಟಿಸಲು ಸಾಧ್ಯವಾದ ಸುಂದರವೂ ವಿಶಾಲವೂ ಆದ ಕೆರೆ ಇದು. ರೋಮನರು ನಿರ್ಮಿಸಿರುವ ಅತ್ಯಂತ ಸುಂದರವಾದ ಕೆಲಸಕ್ಕೆ ಇದನ್ನು ಹೋಲಿಸಬಹುದು. ಆದರೆ ಈಗ ಇದು ನೋಡುವವರಿಲ್ಲದೆ ಹಾಳಾಗುತ್ತಿದೆ. ನಾನು ನೋಡಿದಾಗ ಕೆರೆಯಲ್ಲಿ ಆರು ಅಡಿ ಹೂಳು ಇತ್ತು. ಯಾವನಾದರೂ ಉದಾರಬುದ್ಧಿಯ ಬನಿಯ ಇದನ್ನು ಸರಿಮಾಡಿಸದಿದ್ದರೆ ಮುಚ್ಚಿಹೋಗುವುದು ಖಂಡಿತ.[೧] ಈಗ ಕುಡಿಯುವ ನೀರಿಗಾಗಿ ಐದು ಬಾವಿಗಳನ್ನು ತೋಡಿಸಿದ್ದಾರೆ.

---

೧. ಇದು 'ಗೋಪಿ ತಲಾವ್' ಎಂಬ ಹೆಸರಾಂತ ಕೆರೆ. ಯಾರೂ ಇದನ್ನು ದುರಸ್ತು ಮಾಡಿಸದೆ ಹೋದ ಕಾರಣ ಇದು ೧೭೦೦ರ ಆರಂಭದಲ್ಲಿ ಪೂರ್ತಿ ಮುಚ್ಚಿಹೋಯಿತೆಂದು ಗೊತ್ತಾಗುತ್ತದೆ.

ಸೂರತ್ತಿಗೆ ಸಮೀಪದಲ್ಲಿ 'ರಾಜಕುಮಾರಿಯ ಉದ್ಯಾನ' ಎಂಬ ತೋಟವಿದೆ. ಇದು ಮೊಗಲ್ ಚಕ್ರವರ್ತಿಯ ಸಹೋದರಿಗೆ (ಬಹುಶಃ ಜಹನಾರಾ ಬೇಗಂ) ಸೇರಿದ್ದು. ಇಲ್ಲಿ ಬಗೆ ಬಗೆಯ ಗಿಡಮರಗಳಿವೆ. ಅಡ್ಡಾಡಲು ಸೊಗಸಾದ ದಾರಿಗಳಿವೆ, ಚಿಲುಮೆಗಳಿವೆ, ಹೂವಿನ ಮಡಿಗಳಿವೆ. ಇಲ್ಲಿಂದ ಸ್ವಲ್ಪ ದೂರದಲ್ಲಿ 'ವಾರ್' (War) ಎಂಬ ಮರವಿದೆ. ಇದರ ಕೊಂಬೆಗಳು ಬಿಳಿಲುಬಿಟ್ಟು ವಿಶಾಲವಾಗಿ ಹಬ್ಬಿಕೊಂಡಿವೆ. ಬಿಳಿಲುಗಳನ್ನು ಚಾಕಚಕ್ಯತೆಯಿಂದ ಕತ್ತರಿಸಿ ಮರದ ಕೆಳಗೆ ಸಲೀಸಾಗಿ ಅಡ್ಡಾಡುವಂತೆ ಮಾಡಿದ್ದಾರೆ. ಈ ಮರವನ್ನು 'ಬೆರ್' ಮರವೆಂತಲೂ ಕರೆಯುತ್ತಾರೆ. ಇದು ಬನಿಯರಿಗೆ ತುಂಬ ಪವಿತ್ರವಾದುದು.[೧]

ಈ ಮರದ ತುದಿಯಲ್ಲಿ ಬನಿಯರು (ಹಿಂದೂಗಳು) ತಮ್ಮ ಬಾವುಟ ಸಿಕ್ಕಿಸಿರುವುದನ್ನು ದೂರದಿಂದಲೇ ಕಾಣಬಹುದು. ಆದಿಶಕ್ತಿಯ ಪ್ರತಿನಿಧಿಯಾದ ಈ ಮರದ ಬಳಿ 'ಮಾಮೇವಾ'[೨] ಎಂಬ ಆದಿಶಕ್ತಿಯ ವಿಗ್ರಹವಿರುವ ದೇವಸ್ಥಾನವಿದೆ. ಇಲ್ಲಿ ಒಬ್ಬ 'ಬ್ರಾಮೆನ್' (ಬ್ರಾಹ್ಮಣ) ಇದ್ದು ಬಂದ ಭಕ್ತರ ಹಣೆಗೆ ಕುಂಕುಮ ಹಚ್ಚಿ ಅವರು ಕೊಟ್ಟ ಅಕ್ಕಿ ಅಥವಾ ತೆಂಗಿನಕಾಯಿಗಳನ್ನು ದೇವರಿಗೆ ಒಪ್ಪಿಸುತ್ತಾನೆ. ದೇವಸ್ಥಾನವನ್ನು ಒಂದು ಮರದ ಕೆಳಗೆ ಗುಹೆಯೋಪಾದಿಯಲ್ಲಿ ಕಟ್ಟಿದ್ದಾರೆ. ಅದರ ಹೊರ ಭಾಗದಲ್ಲಿ ಹಿಂದೂಗಳು ತಮ್ಮ ಸುಳ್ಳು ದೇವರುಗಳ ಪೊಳ್ಳು ಕಥೆಗಳ ಚಿತ್ರಗಳನ್ನು ಚಿತ್ರಿಸಿದ್ದಾರೆ. ಒಳಗೆ ಗುಹೆಯಲ್ಲಿ (ಗರ್ಭಗುಡಿಯಲ್ಲಿ) ಮುಖವೆಲ್ಲ ಕೆಂಪಗಿರುವ ವಿಗ್ರಹವಿದೆ.

ಒಂದು ದಿನ ಜನರು ಜೋಳಿಗೆಯಲ್ಲಿ ಹಿಟ್ಟು ತುಂಬಿಕೊಂಡು ಬಂದು ಇರುವೆಗಳಿಗೆ ಹಾಕುತ್ತಿದ್ದುದನ್ನು ಕಂಡೆ.

ಸೂರತ್ತಿನ ಭೂಮಿ ತುಂಬಾ ಫಲವತ್ತಾಗಿದೆ. ಗೊಬ್ಬರವನ್ನೇ ಹಾಕಬೇಕಾಗಿಲ್ಲವಂತೆ. ಬತ್ತ ಕಬ್ಬುಗಳನ್ನು ಬೆಳೆಯುತ್ತಾರೆ. 'ಮ್ಯಾಂಗೋ' (Mangoe = ಮಾವು) ಮುಂತಾದ ಫಲ ವೃಕ್ಷಗಳು ಹಣ್ಣುಬಿಟ್ಟು ಬೆಳೆದವರಿಗೆ ಕೈತುಂಬ ಲಾಭ ತರುತ್ತವೆ.

ಹಡಗುಗಳು ಸೂರತ್ತಿಗೆ ಬರಲು ಆಗುವುದಿಲ್ಲ. ಸಣ್ಣ ದೋಣಿಗಳು ಮಾತ್ರ ಬರಬಹುದು. ವಾಸ್ತವವಾಗಿ ಸೂರತ್ತಿಗೆ ಸೇರಿದ ಬಂದರು ಸುವಾಲಿ[೩] ಎಂಬಲ್ಲಿದೆ. ಅದು ಇಲ್ಲಿಂದ ಎರಡು ಲೀಗ್ ದೂರದಲ್ಲಿದೆ. ಹಡಗುಗಳು ಅಲ್ಲಿಗೆ ಹೋಗಿ ಸುಂಕ ಕೊಡದೆ ಕಳ್ಳತನದಲ್ಲಿ ಸಾಮಾನುಗಳನ್ನು ಸಾಗಿಸುತ್ತವೆ ಎಂಬ ಕಾರಣಕ್ಕಾಗಿ ೧೬೬೦ ರಿಂದ ಅಲ್ಲಿ ಹಡಗುಗಳು ತಂಗುವುದಕ್ಕೆ ಅವಕಾಶ ಕೊಡುತ್ತಿಲ್ಲ. ಆದರೂ ಡಚ್ಚರು

---

೧. ಇದು ವಟವೃಕ್ಷ ಅಥವಾ ಆಲದಮರ.

೨. ಇದು ಬಹುಶಃ ಮಹಾಮಾಯೆಯ ದೇವಸ್ಥಾನ ಇರಬೇಕು.

೩. ಸುವಾಲಿ: ಹಿಂದಿನ ಪ್ರವಾಸಿಗಳು ಇದನ್ನೇ ಸ್ವಾಲ್ಲಿ (Swally) ಎಂದು ಕರೆದಿರುವುದು.

ಇಂಗ್ಲಿಷರೂ ತಮ್ಮ ಹಡಗುಗಳನ್ನು ಅಲ್ಲಿಯೇ ನಿಲ್ಲಿಸಿ ಅದರಲ್ಲಿ ತಂದ ಸಣ್ಣ ಪುಟ್ಟ ಸಾಮಾನುಗಳನ್ನು ಕಳ್ಳತನದಿಂದ ಸಾಗಿಸುತ್ತಾರೆ. ಗೌರ್ನರ್‌ಗಳು, ಕಮ್ಯಾಂಡರ್‌ಗಳು ಮತ್ತು ಪ್ರಸಿಡೆಂಟರುಗಳು ಗಾಳಿಸೇವನೆಗೆ ಈ ಬಂದರು ಕಡೆ ಸಾರೋಟಿನಲ್ಲಿ ಹೋದಾಗ ಸುಂಕಕೊಡದ ಸಾಮಾನುಗಳನ್ನು ತೆಗೆದುಕೊಂಡು ಬರುತ್ತಾರೆ. ಹೀಗೆ ಮಾಡುವುದು ಸರಿಯಲ್ಲ. ಆರು ಕಾಸು ಮೂರು ಕಾಸು ಉಳಿಸಿದರೆ ಬಹಳ ಉಳಿಸಿದಂತಾಗಲಿಲ್ಲ.

ಸೂರತ್ತಿನ ಅಳಿವೆ (bar) ವರೆಗೆ ಹಡಗುಗಳು ಬಂದೇಬರುತ್ತವೆ. ಪರ್ಷಿಯಾ, ಅರೇಬಿಯಾ, ಫೆಲಿಕ್ಸ್ ಮತ್ತು ಇಂಡೀಸಿನ ಇತರ ಕಡೆಗಳಿಂದ ಬರುವ ಹಡಗುಗಳಿಂದ ರಾಜನಿಗೆ ವರ್ಷಕ್ಕೆ ಹನ್ನೆರಡುಲಕ್ಷ ರೂಪಾಯಿ ಆದಾಯ ಇದೆ. ಸುಂಕದ ಕಟ್ಟೆ ಯಜಮಾನ ಮೂರ. ಈತ ಸೂರತ್ತಿನ ನವಾಬನ ಮಾರೀಫತ್ತು ಕೆಲಸ ಮಾಡುತ್ತಾನೆ. ಗುಮಾಸ್ತರುಗಳೆಲ್ಲ ಬನಿಯರು. ಉಳಿದ ನೌಕರವರ್ಗದವರು ಅಂದರೆ ಕಾವಲುಗಾರರು, ಹಮಾಲರು ಮುಂತಾದವರೆಲ್ಲ ಮೂರರು. ಇವರನ್ನು ಸುಂಕದ ಕಟ್ಟೆ ಪ್ಯೂನ್‌ಗಳೆಂದು ಕರೆಯುತ್ತಾರೆ.

೧೬೬೪ರ ಜನವರಿ ೬ನೆಯ ತಾರೀಖು ಶಿವಾಜಿಯಿಂದ ಈ ಬಂದರಿಗೂ ನವಾಬನಿಗೂ ತೊಂದರೆ ಉಂಟಾಯಿತು. ಔರಂಗಾಬಾದಿನ ನವಾಬ ಷೈಸ್ತಾಖಾನನಿಗೂ[೧] ಇವನನ್ನು ಹತ್ತಿಕ್ಕಲು ಸಾಧ್ಯವಾಗಲಿಲ್ಲ. ಫಕೀರನ ವೇಷದಲ್ಲಿ[೨] ಶಿವಾಜಿ ಸೂರತ್ತನ್ನು ಪ್ರವೇಶಿಸಿ ತಿಳಿಯಬೇಕಾದ ಸಂಗತಿಗಳನ್ನೆಲ್ಲಾ ತಿಳಿದುಕೊಂಡು ಆ ಮೇಲೆ ತನ್ನ ೪,೦೦೦ ಸೈನ್ಯ ಸಮೇತ ಸದ್ದಿಲ್ಲದೆ ಊರಿನ ಮೇಲೆ ಧಾಳಿಮಾಡಿ ನಾಲ್ಕು ದಿನಗಳ ಕಾಲ ಅದನ್ನು ಸೂರೆ ಮಾಡಿದ. ಇಂಗ್ಲಿಷರು ಮತ್ತು ಡಚ್ಚರ ಮನೆಗಳನ್ನು ಬಿಟ್ಟು ಉಳಿದವರೆಲ್ಲರ ಮನೆಗಳನ್ನು ಕೊಳ್ಳೆ ಹೊಡೆದು ಅಪಾರ ಐಶ್ವರ್ಯವನ್ನು ದೋಚಿಕೊಂಡು ಹೋದ. ಶಿವಾಜಿಯ ಬಳಿ ಫಿರಂಗಿಗಳು ಇಲ್ಲದ್ದರಿಂದ ಅವುಗಳನ್ನಿಟ್ಟುಕೊಂಡಿದ್ದ ಇಂಗ್ಲಿಷರು ಮತ್ತು ಡಚ್ಚರ ತಂಟೆಗೆ ಹೋಗಲಿಲ್ಲ. ದುರ್ಗದ ಗೋಜಿಗೂ ಹೋಗಲಿಲ್ಲ. ಅಲ್ಲಿ ಹೇರಳವಾದ ಭಂಡಾರ ಇತ್ತು. ಅದರ ತಂಟೆಗೆ ಹೋಗುವುದು ಅಪಾಯದ ಕೆಲಸ ಎಂದು ಕೈಬಿಟ್ಟ.

ಭಾರಿ ಜನಸಂಖ್ಯೆಯುಳ್ಳ ಸೂರತ್ ಕೇವಲ ೪,೦೦೦ ಜನರ ಕೊಳ್ಳೆಯನ್ನು ಹೇಗೆ ಸಹಿಸಿಕೊಂಡಿತು ಎಂಬುದು ಆಶ್ಚರಿಪಡಬೇಕಾದ ವಿಷಯ. ನಿಜವಾದ ಸಂಗತಿಯೆಂದರೆ ಇಂಡಿಯಾದ ಜನ ಪುಕ್ಕಲರು. ಶಿವಾಜಿ ಊರನ್ನು ಪ್ರವೇಶಿಸಿದನೋ ಇಲ್ಲವೋ ಎಲ್ಲರೂ ಊರು ಬಿಟ್ಟು ಪರಾರಿಯಾದರು. ನವಾಬನೂ ಓಡಿಹೋಗಿ ದುರ್ಗವನ್ನು ಸೇರಿಕೊಂಡ. ಕಾಪುಚಿನರ ಚರ್ಚ್‌ನಲ್ಲಿದ್ದ ಫಾದರ್ ಅಂಬ್ರೋಸರ ಕೋರಿಕೆಯಂತೆ ಶಿವಾಜಿಯು ಅವರ ನಿವಾಸಗಳನ್ನು ಕೊಳ್ಳೆಹೊಡೆಯಲಿಲ್ಲ. ಅವನಿಗೆ ಅಂಬ್ರೋಸರ

---

೧. ಷೈಸ್ತಾಖಾನ್ ದಖನ್ನಿನ ಸುಭೇದಾರನಾಗಿದ್ದ. ಈತ ಔರಂಗಜೇಬನ ಸೋದರಮಾವ.
೨. ಇದಕ್ಕೆ ಆಧಾರವಿಲ್ಲ ಎಂದು ಹೇಳುತ್ತಾರೆ.

ಮೇಲಿದ್ದ ಗೌರವವೇ ಇದಕ್ಕೆ ಕಾರಣವಾಗಿತ್ತು. ಅಂತೂ ಊರಿನಲ್ಲಿ ಸಿಕ್ಕಿದ ಬರೇ ಚಿನ್ನ, ಬೆಳ್ಳಿ ಮತ್ತು ಆಭರಣಗಳಿಂದಲೇ ಆತನಿಗೆ ಮೂವತ್ತು ಫ್ರೆಂಚ್ ದಶಲಕ್ಷಗಳಷ್ಟು ಭಂಡಾರ ಸಿಕ್ಕಿತು. ಒಬ್ಬ ಬನಿಯನ ಮನೆಯೊಂದರಲ್ಲಿಯೇ ಎರಡು ಪೌಂಡು ತೂಕದ ಮುತ್ತಿನ ಹಾರಗಳು ಸಿಕ್ಕಿದುವು.೧

ಇದನ್ನು ಕೇಳಿದ ಔರಂಗಜೇಬನು ಸಿಟ್ಟಿಗೆದ್ದು ಸಕಾಲಕ್ಕಾಗಿ ಕಾಯುತ್ತಿದ್ದ. ೧೬೬೬ ನೆಯ ಇಸವಿಯಲ್ಲಿ ಆತ ಶಿವಾಜಿಯನ್ನು ಉಪಾಯದಿಂದ ತನ್ನ ಆಸ್ಥಾನಕ್ಕೆ ಕರೆಸಿ ಕೊಂಡನು. ಆದರೆ ಶಿವಾಜಿ ಔರಂಗಜೇಬನ ಮೋಸಕ್ಕೆ ಒಳಗಾಗದೇ ಹೇಗೋ ತಪ್ಪಿಸಿ ಕೊಂಡು ಓಡಿಬಂದನು. ಅವನ ಮಗನು ಮಾರ್ಗದ ಆಯಾಸವನ್ನು ತಾಳಲಾರದೆ ದಾರಿಯಲ್ಲಿಯೇ ಸತ್ತುಹೋದ. ಮಗನ ಉತ್ತರಕ್ರಿಯೆಗೆ ಏರ್ಪಾಡು ಮಾಡಿ ಶಿವಾಜಿ ತನ್ನ ದೇಶಕ್ಕೆ ಹಿಂದಿರುಗಿದನು.೨ ಇದರಿಂದ ಔರಂಗಜೇಬ ಕುಪಿತನಾದರೂ ಏನೂ ಮಾಡಲಾಗಲಿಲ್ಲ.

ಶಿವಾಜಿಯದು ಕುಳ್ಳು ಶರೀರ. ಚುರುಕಾದ ಯುಕ್ತಿಯ ಕಣ್ಣುಗಳು. 'ದಿನ ಕ್ಕೊಂದು ಸಲ ಮಾತ್ರ ಊಟ ಮಾಡುತ್ತಾನೆ. ಆರೋಗ್ಯ ಚೆನ್ನಾಗಿದೆ. ಸೂರತ್ತನ್ನು ೧೬೬೪ರಲ್ಲಿ ಕೊಳ್ಳೆ ಹೊಡೆದಾಗ ಅವನ ವಯಸ್ಸು ಕೇವಲ ೩೫ ವರ್ಷಗಳು ಮಾತ್ರ.

ಫಾದರ್ ಅಂಬ್ರೋಸರು ತುಂಬ ಜನಾನುರಾಗಿಗಳಾಗಿದ್ದಾರೆ. ಕ್ರೈಸ್ತರಲ್ಲಿ ಆದರ ಲ್ಲಿಯೂ ಕ್ಯಾಥೊಲಿಕರಲ್ಲಿ ಬರುವ ವಿವಾದಗಳನ್ನು ಪರಿಹರಿಸುತ್ತಾರೆ. ಕ್ರೈಸ್ತಸ್ತ್ರೀಯೊಬ್ಬಳು ಒಬ್ಬ ಮುಸಲ್ಮಾನನ ವಶಳಾಗಿ ಮಹಮ್ಮದೀಯ ಮತಕ್ಕೆ ಸೇರಿಬಿಟ್ಟಳು. ಅಂಬ್ರೋಸರು ಅವಳನ್ನು ಹಿಂದಿರುಗಿ ಕರೆದುಕೊಂಡು ಬಂದು ಆಕೆ ಮತ್ತೆ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದರು. ಒಟ್ಟಿನಲ್ಲಿ ಅವರು ಎಲ್ಲರೊಡನೆಯೂ ಸ್ನೇಹದಿಂದ ವರ್ತಿಸುತ್ತ ಈ ಪರದೇಶದಲ್ಲಿ ಮರ್ಯಾದೆಯಿಂದ ಬಾಳುತ್ತಿದ್ದಾರೆ.

ಗುಜರಾತ್ ಪ್ರಾಂತದಲ್ಲಿರುವ ಮತ್ತಿತರ ಪಟ್ಟಣಗಳು ಯಾವುವೆಂದರೆ: ಬರೋಡಾ, ರಾಜಾಪುರ, ಗೋಗಾ, ಪಟನ್, ದಿಯು, ನರಿಯದ್, ಮಹಮುದಾ

---

೧. ಇಂಗ್ಲಿಷರ ಪ್ರೆಸಿಡೆಂಟ್ ಮತ್ತು ಹೆನ್ರಿ ಗಾರಿ (Henry gary) ಎಂಬುವರು ಶಿವಾಜಿ ಕೊಳ್ಳೆಹೊಡೆದ ಮಾಲಿನ ಆಗಿನ ಬೆಲೆ ಹಲವು ಕೋಟಿ ರೂಪಾಯಿಗಳೆಂದು ಲೆಕ್ಕಹಾಕಿದ್ದಾರೆ. ಇದು ಶಿವಾಜಿ ಸೂರತ್ತಿನ ಮೇಲೆ ೧೬೭೦ರಲ್ಲಿ ನಡೆಸಿದ ಎರಡನೆಯ ಧಾಳಿ.

೨. ಮೂರು ತಿಂಗಳು ಬಂಧನದಲ್ಲಿದ್ದ ಶಿವಾಜಿ ತನ್ನ ಮಗನ ಸಮೇತ ಎರಡು ಸಿಹಿತಿಂಡಿ ಬುಟ್ಟಿಗಳಲ್ಲಿ ಅವಿತುಕೊಂಡು ತಪ್ಪಿಸಿಕೊಂಡನು. ಇದು ೧೬೬೬ನೆಯ ಆಗಸ್ಟ್ ೧೯ರಂದು. ಶಿವಾಜಿಯ ಮಗನ ಹೆಸರು ಸಾಂಬಾಜಿ. ಇವನು ಸಾಯಲಿಲ್ಲವೆಂದೂ ಕೇವಲ ಬಾಲಕನಾದ ಆತ ಮಾರ್ಗಾಯಾಸ ತಡೆಯಲಾರನೆಂದು ಮಥುರಾದ ಕಾಶೀ ಪಂಡಿತನ ಮನೆಯಲ್ಲಿ ಬಿಟ್ಟು, ಆತನು ಸತ್ತನೆಂದು ಪ್ರಚಾರ ಮಾಡಿದನೆಂದೂ ತಿಳಿದುಬರುತ್ತದೆ. ಕೊನೆಗೆ ಶಿವಾಜಿ ತನ್ನ ಬಳಿಗೆ ಮಗನನ್ನು ಕರೆಸಿಕೊಂಡನು.

ಬಾದ್ ಮುಂತಾದುವು. ದಿಯು ಪೋರ್ಚುಗೀಸರಿಗೆ ಸೇರಿದೆ. ಇಲ್ಲಿ ಹಾವು ಮುಂತಾದ ವಿಷಜಂತುಗಳಿಂದ ವಿಷಾಪಹಾರಿ ಮಣಿಗಳನ್ನು ತಯಾರಿಸುತ್ತಾರೆ.

ಇಂಡೀಸ್‌ನಲ್ಲಿಯೇ ಅತ್ಯಂತ ದೊಡ್ಡ ಪಟ್ಟಣ ಆಗ್ರಾ. ಇದು ಮೊಗಲ್ ಚಕ್ರವರ್ತಿಯ ರಾಜಧಾನಿ. ಸೂರತ್‌ನಿಂದ ೩೫-೩೬ ದಿನಗಳ ಕ್ಯಾರವಾನ್ ಪ್ರಯಾಣ ದಷ್ಟು ದೂರದಲ್ಲಿದೆ. ಅಕ್ಬರನಿಗೆ ಮುಂಚೆ ಇಲ್ಲಿ ಕೇವಲ ಒಂದು ಬುರ್ಜ್ (Bourge =ಬುರುಜು) ಮತ್ತು ಅದಕ್ಕೆ ಸೇರಿದಂತೆ ಒಂದು ಮಣ್ಣಿನ ದುರ್ಗ ಮಾತ್ರ ಇದ್ದದ್ದು. ತನ್ನ ರಾಜಧಾನಿಗೆ ಸರಿಯಾದ ಸ್ಥಳವೆಂದು ಭಾವಿಸಿದ ಅಕ್ಬರನು ಅದಕ್ಕೆ ಹಲವಾರು ಹಳ್ಳಿಗಳನ್ನು ಸೇರಿಸಿ ಒಂದು ಪಟ್ಟಣ ಕಟ್ಟಿಸಿ ಅದನ್ನು 'ಅಕ್ಬರಾಬಾದ್' ಎಂದು ಕರೆದನು. ರಾಜಧಾನಿಯೆಂದಮೇಲೆ ಕೇಳಬೇಕೆ? ಎಲ್ಲರೂ ಅಲ್ಲಿಗೆ ಬರಲಾರಂಭಿಸಿದರು. ನಾನಾ ಕಡೆಗಳಿಂದ ವರ್ತಕರು ಬಂದರು. ಆಗ್ರಾಕೋಟೆ, ರಾಜನ ಅರಮನೆ, ಅಮೀರರ ಸೌಧಗಳು, ಸ್ನಾನ ಗೃಹಗಳು, ತಂದೆ ಅಕ್ಬರನಿಗೋಸ್ಕರ ಜಹಾಂಗೀರ ಕಟ್ಟಿಸಿದ ಗೋರಿ— ಇವು ನೋಡತಕ್ಕವುಗಳು. ಅರುವತ್ತು ದೊಡ್ಡ ಕ್ಯಾರವಾನ್ ಸೆರಾಯಿಗಳಿವೆ. ಎಂಟು ನೂರು ಸ್ನಾನದ ಗೃಹಗಳಿವೆ. ಲೆಕ್ಕವಿಲ್ಲದಷ್ಟು ಮಸೀದಿಗಳಿವೆ. ಅಕ್ಬರನ ಗೋರಿಗಿಂತ ಸುಂದರವಾದುದೆಂದರೆ ಷಾಜಹಾನನು ತನ್ನ ಮೆಚ್ಚಿನ ಮಡದಿಯ ಜ್ಞಾಪಕಾರ್ಥವಾಗಿ ಕಟ್ಟಿಸಿರುವ 'ತಾಜ್‌ಮಹಲ್', ತಿಳಿದವನೂ ತುಂಬಾ ಶ್ರದ್ಧಾವಂತನೂ ಆದ ಮಸ್ಯ ಬೆರ್ನ್ಯೇ ಇದರ ಬಗ್ಗೆ ವಿವರವಾಗಿ ಹೇಳಿದ್ದಾನೆ. ಆದ್ದರಿಂದ ನಾನು ಹೆಚ್ಚು ವಿಷಯ ಗಳನ್ನು ಸಂಗ್ರಹಿಸಲು ಹೋಗಲಿಲ್ಲ. ಇಷ್ಟು ಹೇಳಬಲ್ಲೆ: ಷಾಜಹಾನನು ಇಡೀ ಇಂಡೀಸಿನಲ್ಲಿದ್ದ ಶಿಲ್ಪಿಗಳನ್ನೆಲ್ಲಾ ಆಗ್ರಾಕ್ಕೆ ಕರೆಸಿ ಖರ್ಚುವೆಚ್ಚಗಳನ್ನು ಲೆಕ್ಕಿಸದೆ ಪ್ರಪಂಚ ದಲ್ಲಿಯೇ ಅತ್ಯಂತ ಭವ್ಯವಾದ ಸಮಾಧಿಭವನ (mausoleum) ಕಟ್ಟಬೇಕೆಂದು ತಿಳಿಸಿದನು. ಶಿಲ್ಪಿಗಳು ಅವನಿಗೆ ತೃಪ್ತಿಯಾಗುವ ರೀತಿಯಲ್ಲಿ ಅದನ್ನು ಕಟ್ಟಿದರು. ಈ ಭವನದ ವಿವಿಧ ಭಾಗಗಳನ್ನು ನೋಡಿದರೆ ಇಂಡಿಯನರಿಗೆ ಶಿಲ್ಪಕಲೆ ಗೊತ್ತಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಇದು ಯೂರೋಪಿಯನರಿಗೆ ಅಷ್ಟು ಹಿಡಿಸದಿರಬಹುದು. ಆದರೆ ಇದರಲ್ಲಿಯೂ ಭವ್ಯತೆ ಇದೆ; ಸೌಂದರ್ಯವಿದೆ. ಈ ಭವನವನ್ನು ಕಟ್ಟಿ ಮುಗಿಸಲು ೨೦ ವರ್ಷಗಳಾದುವೆಂದು ಜನ ಹೇಳುತ್ತಾರೆ.

ಷಾಜಹಾನನು ತನ್ನ ಮಡದಿಯ ಮೇಲಿಟ್ಟ ಮಮತೆಯನ್ನು ತಂದೆಯಾದ ಜಹಾಂಗೀರನ ಮೇಲೆ ಇಡಲಿಲ್ಲ. ಜಹಾಂಗೀರನ ಸಮಾಧಿ ಒಂದು ತೋಟದಲ್ಲಿದೆ. ಅದರ ಮುಂಭಾಗಕ್ಕೆ ಸ್ವಲ್ಪ ಸುಣ್ಣ ಬಣ್ಣ ಮಾಡಿದ್ದಾರೆ, ಅಷ್ಟೆ.[೧]

ಆಗ್ರಾದ ಸೆಖೆಯನ್ನು ತಡೆಯಲಾರದೆಯೋ ಏನೋ ಷಾಜಹಾನ ತನ್ನ ರಾಜ ಧಾನಿಯನ್ನು ದೆಹ್ಲಿಗೆ ವರ್ಗಾಯಿಸಿದನು. ಆದರೆ ತನ್ನ ಅರಮನೆಯಲ್ಲಿಯೇ ಸೆರೆಯಾಗಿ

---

೧. ಜಹಾಂಗೀರನ ಸಮಾಧಿ ಲಾಹೋರಿನ ಬಳಿಯಿದೆ. ಟಾವರ್ನ್ಯೇನಂತೆ ತೇವ್ನೋ ಕೂಡ ಈ ಸಮಾಧಿ ಆಗ್ರಾದಲ್ಲಿದೆಯೆಂದು ತಪ್ಪಾಗಿ ಹೇಳಿದ್ದಾನೆ.

ಇರಬೇಕಾದ ದೌರ್ಭಾಗ್ಯ ಈತನಿಗೆ ಒದಗಿತು. ಯುಕ್ತಿ ಮತ್ತು ಶಕ್ತಿಗಳಿಂದ ಸಿಂಹಾಸನ ವನ್ನೇರಿದ ಔರಂಗಜೇಬ ತಂದೆಯನ್ನೇ ಸೆರೆಯಲ್ಲಿಟ್ಟನು. ಸಾಯುವವರೆಗೂ ಆತನಿಗೆ ಸೆರೆಮನೆಯ ವಾಸ ತಪ್ಪಲಿಲ್ಲ. ಆತ ೧೬೬೬ರಲ್ಲಿ ಸತ್ತುಹೋದ. ಅವನ ಅಪಾರ ಐಶ್ವರ್ಯವಲ್ಲದೆ, ವಿಷ ಹಾಕಿ ಕೊಂದ ಆತನ ಸಹೋದರಿ ಬೇಗಂ ಸಾಹೇಬಳ ಆಭರಣ ಗಳೂ ಔರಂಗಜೇಬನ ಕೈಸೇರಿದುವು.

ಆಗ್ರಾ ನಗರದ ಹೆಚ್ಚು ಭಾಗವನ್ನು ಅರಮನೆಗಳೂ ಉದ್ಯಾನವನಗಳೂ ಆಕ್ರಮಿಸಿ ಕೊಂಡಿವೆ. ಜನಸಾಮಾನ್ಯರ ಮನೆಗಳು ಚಿಕ್ಕವು. ಬಡಬಗ್ಗರ ಮನೆಗಳು ಕೇವಲ ಹುಲ್ಲುಗುಡಿಸಲುಗಳು. ಆಗ್ರಾ ಎರಡು ಲಕ್ಷ ಸೈನಿಕರನ್ನು ಒದಗಿಸುವಷ್ಟು ದೊಡ್ಡ ದಾಗಿದೆಯೆಂದು ಹೇಳುವುದು ಸರಿಯಲ್ಲ. ಕಿರು ಬೀದಿಗಳ ಕಾರಣ ಜನಸಂಖ್ಯೆ ಅಪಾರ ವಾಗಿದೆಯೆಂಬಂತೆ ಕಾಣಿಸುತ್ತದೆ. ಚಕ್ರವರ್ತಿ ಹಾಗೂ ರಾಜರುಗಳು, ಅಮೀರರು ಮತ್ತು ಮನ್‌ಸುಬ್ದಾರರುಗಳ ಸಿಬ್ಬಂದಿಯೇ ಭಾರಿಯಾಗಿದೆ. ವರ್ತಕರಂತೂ ಆಸ್ಥಾನ ಇರುವ ಕಡೆ ಇರುತ್ತಾರೆ. ಇವರನ್ನು ನೆಚ್ಚಿಕೊಂಡಿರುವ ಜನರೂ ಹೇರಳವಾಗಿರುತ್ತಾರೆ.

ಆಗ್ರಾದಲ್ಲಿ ೨೫,೦೦೦ ಕ್ರೈಸ್ತ ಸಂಸಾರಗಳಿವೆಯೆಂದು ಹೇಳುತ್ತಾರೆ. ಆದರೆ ನಾನು ಇದನ್ನು ನಂಬಲಾರೆ. ಇಲ್ಲಿ ಡಚ್ಚರಿಗೆ ಸೇರಿದ ಒಂದು ಗಡಂಗು ಇದೆ. ಇಂಗ್ಲಿಷರದು ಇನ್ನೂ ಇಲ್ಲ.

ಸೂರತ್ತಿನಲ್ಲಿರುವಂತೆ ಇಲ್ಲಿಯೂ ಚಕ್ರವರ್ತಿಯ ಅಧಿಕಾರಿಗಳಿದ್ದಾರೆ. ಅಲ್ಲಿ ಮಾಡುವ ಕೆಲಸಗಳನ್ನು ಇಲ್ಲಿಯೂ ಮಾಡುತ್ತಾರೆ. ದೇಶದಲ್ಲಾಗುವ ದರೋಡೆ ಹಾಗೂ ಕಳ್ಳತನಗಳಿಗೆ ಫೌಜಂದಾರನು ಜವಾಬ್ದಾರನೆಂದು ಆಗಲೇ ಹೇಳಿದೆಯಷ್ಟೆ. ಫ್ರಾನ್ಸಿನ ಈಸ್ಟ್ ಇಂಡಿಯಾ ಕಂಪೆನಿಯ ರಾಯಭಾರಿಯಾಗಿ ಬೆಬೆರ್ (Beber) ಎಂಬುವನು ಆಗ್ರಾಕ್ಕೆ ಬಂದಿದ್ದಾಗ ತನ್ನ ೩೦,೨೦೦ ರೂಪಾಯಿಗಳು ಕಳುವಾದುವೆಂದು ಫೌಜಂದಾರನಲ್ಲಿ ದೂರು ಹೇಳಿದ. ಇಷ್ಟು ಹಣ ಅವನ ಬಳಿ ಇರಲಿಕ್ಕೆ ಕಾರಣವಿಲ್ಲ ಎಂದು ಆಶ್ಚರ್ಯಪಟ್ಟು ಫೌಜುದಾರ ಈ ವಿಷಯವನ್ನು ಚಕ್ರವರ್ತಿಗೆ ವರದಿಮಾಡಿದ. ರಾಯಭಾರಿಯೂ ತನ್ನ ದೂರು ಹೇಳಿಕೊಂಡ. ನಿಜಾಂಶವೇನೆಂದು ತಿಳಿಯಲಾಗದ ಚಕ್ರವರ್ತಿಯು ರಾಯಭಾರಿಗೆ ೧೫,೦೦೦ ರೂಪಾಯಿಗಳನ್ನು ಕೊಡುವಂತೆ ಫೌಜು ದಾರನಿಗೆ ಅಪ್ಪಣೆಮಾಡಿದ. ಕಳ್ಳತನವಾದ ಸಂದರ್ಭದಲ್ಲಿ ರಾಯಭಾರಿಗೆ ಪೆಟ್ಟು ಬಿದ್ದಿತೆಂಬ ಕಾರಣಕ್ಕಾಗಿ ತನ್ನ ಬೊಕ್ಕಸದಿಂದ ೧೦,೦೦೦ ರೂ.ಗಳನ್ನು ಕೊಡಿಸಿದ.

ಆಗ್ರಾ ಹಾಗೂ ಇಂಡೀಸಿನಲ್ಲಿ ನಾನಾ ಪರ ರಾಷ್ಟ್ರಗಳ ಜನರು ಇದ್ದಾರೆ. ಅವರೆಲ್ಲರ ಉಡುಪು ಬಹುತೇಕ ಒಂದೇ ತರಹ ಇದೆ. ಮಹಮ್ಮದೀಯರು ಮಾತ್ರ ತಮ್ಮ ಒಂದು ಬಗೆಯ ತಲೆಯುಡುಗೆಯಿಂದ ಬೇರೆಯವರಂತೆ ಕಾಣುತ್ತಾರೆ. ಇದು ಬಿಟ್ಟರೆ ಬೇರೆಲ್ಲ ರೀತಿಯಲ್ಲಿ ಅವರ ಉಡುಪು ಇತರರ ಉಡುಪಿನಂತೆಯೇ ಇದೆ. ಇಂಡಿಯಾದವರು ಧರಿಸುವ ಇಜಾರಗಳು ಹತ್ತಿಬಟ್ಟೆಯವು. ಅವನ್ನು ಮೊಣಕಾಲಿನ ವರೆಗೂ ತೊಡುತ್ತಾರೆ. ಶ್ರೀಮಂತರು ಬಣ್ಣಗಳ ಪಟೆ ಪಟೆ ರೇಷ್ಮೆ ಇಜಾರಗಳನ್ನು

ತೊಡುತ್ತಾರೆ. ಇವು ತುಂಬಾ ಉದ್ದವಾಗಿರುವ ಕಾರಣ ಕೆಳಭಾಗವನ್ನು ಮಡಿಸಬೇಕಾಗುತ್ತದೆ. ಇಜಾರದ ಮೇಲೆ ಶರಟು ತೊಡುತ್ತಾರೆ. ಮೂರರು ಮುಂಭಾಗ ಪೂರ್ತ ತೆರೆದ 'ಕಬಾ' (ಕಬಯಾ) ಎಂಬ ಅಂಗಿಗಳನ್ನು ತೊಡುತ್ತಾರೆ. ಗಾಳಿ ಆಡಲಿಕ್ಕೂ ಇದು ಅನುಕೂಲ. ಚಳಿಗಾಲದಲ್ಲಿ ಶರಟಿನ ಮೇಲೆ ಮುಂಗೈವರೆಗೂ ಬರುವ 'ಅರ್ಕಲಕ್' (arcaluck) ಎಂಬ ಅಂಗಿ ತೊಡುತ್ತಾರೆ. ಇದರ ಮೇಲೆ 'ಕಬಾ' (ಕಬಯಾ) ಹಾಕಿಕೊಳ್ಳುವುದೂ ಉಂಟು.

ಹೊರಗಡೆ ಹೋದಾಗಲೆಲ್ಲ ಕಾಶ್ಮೀರದಲ್ಲಿ ತಯಾರಾದ ಬಹು ನವುರಾದ ಉಣ್ಣೆಯ 'ಶಾಲ್'ಗಳನ್ನು ಹೊದೆಯುತ್ತಾರೆ. ಇದನ್ನು ಹೆಗಲ ಮೇಲೆ ಹಾಕಿಕೊಂಡು ಮುಂಭಾಗದ ತುದಿಗಳನ್ನು ಎದೆಯ ಮೇಲೆ ಕಟ್ಟಿಕೊಳ್ಳುತ್ತಾರೆ. ಹಿಂಭಾಗವನ್ನು ಹಾಗೆಯೇ ಬೆನ್ನಿನ ಮೇಲೆ ಇಳಿಯಬಿಡುತ್ತಾರೆ. ಕೆಲವರು ಅದನ್ನು ತಲೆಗೆ ಕಟ್ಟಿಕೊಳ್ಳುತ್ತಾರೆ. ಶಾಲುಗಳು ಎರಡು ಎಲ್ (ell) ಉದ್ದ ಒಂದು ಎಲ್ ಅಗಲ ಇರುತ್ತವೆ.[೧] ಶಾಲು ತೆಳುವಾಗಿದ್ದಲ್ಲಿ ಒಂದಕ್ಕೆ ೨೫ ಅಥವಾ ೩೦ ಕ್ರೌನ್ ಬೆಲೆ. ಇನ್ನೂ ಚೆನ್ನಾದ ಶಾಲು ೫೦ ಕ್ರೌನ್ ಬೆಲೆಯಾಗುತ್ತದೆ. ಇವು ಬಹು ಸೊಗಸಾಗಿರುತ್ತವೆ. ಇಂಡೀಸಿನಲ್ಲಿ ತಲೆಗೆ ಸುತ್ತುವ ಪೇಟ ಸಾಮಾನ್ಯವಾಗಿ ಚಿಕ್ಕದು. ಮಹಮದೀಯರ ಪೇಟ ಬಿಳಿಯದು. ಶ್ರೀಮಂತರು ಸುತ್ತುವ ಪೇಟದ ಬಟ್ಟೆ ಎಷ್ಟು ತೆಳುವಾಗಿರುತ್ತದೆಯೆಂದರೆ ೨೫ ಅಥವಾ ೩೦ ಎಲ್ ಉದ್ದದ ಒಂದು ಪೇಟವನ್ನು ತೂಕ ಹಾಕಿದರೆ ನಾಲ್ಕು ಔನ್ಸೂ ಆಗುವುದಿಲ್ಲ. ಇಂತಹ ನವುರಾದ ಬಟ್ಟೆಯನ್ನು ಬಂಗಾಳದಲ್ಲಿ ತಯಾರಿಸುತ್ತಾರೆ. ಒಂದು ಪೇಟದ (Turban) ಬಟ್ಟೆಗೆ ೨೫ ಕ್ರೌನ್ ಬೆಲೆ. ಶ್ರೀಮಂತರು ಚಿನ್ನದ ಜರತಾರಿ ಹಾಕಿದ ಪೇಟ ಸುತ್ತುತ್ತಾರೆ. ಇದು ಹಲವು 'ತೋಮನ್' (Thoman) ಗಳು. ಒಂದು ತೋಮನ್‌ಗೆ ೪೫ ಫ್ರೆಂಚ್ ಲೀವ್ರ್‌ಗಳು. ಇನ್ನು ಬಡಬಗ್ಗರ ಉಡುಪು ತೀರಾ ಸಾಮಾನ್ಯ.

ಇಂಡಿಯನರು ತಮ್ಮ ಅಂದಕ್ಕಾಗಿ ಕೂದಲನ್ನು ಬೋಳಿಸದೆ ಹಾಗೆಯೇ ಬಿಟ್ಟುಕೊಳ್ಳುತ್ತಾರೆ. ಮಹಮ್ಮದೀಯರು ತಲೆಯನ್ನು ಬೋಳಿಸಿಕೊಳ್ಳುತ್ತಾರೆ. ಇಂಡಿಯನರು ಇಂತಹ ವಿಷಯಗಳಲ್ಲಿ ತಮ್ಮ ಪೂರ್ವಿಕರನ್ನು ಅನುಕರಿಸುತ್ತಾರೆ.

ಕಾಲುಚೀಲಗಳನ್ನು ಹಾಕದೆ ಪಾದರಕ್ಷೆಗಳನ್ನು ಮೆಟ್ಟುತ್ತಾರೆ. ಇವುಗಳನ್ನು 'ಮರೊಕ್ವಿನ್' (Maroquin = ಮರೋಕನ್, ಮೊರಾಕೊ ದೇಶದ) ಅಥವಾ ತುರ್ಕಿ ಚರ್ಮ ಎಂದು ಕರೆಯಲ್ಪಡುವ ಚರ್ಮದಿಂದ ತಯಾರಿಸುತ್ತಾರೆ. ಈ ಪಾದರಕ್ಷೆಗಳ ಆಕಾರ ತುರುಕರು ತೊಡುವ 'ಪಾಪೋಷೆ' (Papouche = ಪಾಪೋಸ್) ಗಳಂತೆಯೇ ಇರುತ್ತದೆ. ಶ್ರೀಮಂತರು ಇವುಗಳಿಗೆ ಚಿನ್ನದ ಗಿಲೀಟಿನ ಅಂಚು ಕಟ್ಟಿಸುತ್ತಾರೆ ಮತ್ತು ಪಾದರಕ್ಷೆಗಳಿಗೆ ಮೇಲ್ಗಾಲಿಗೆ ಉಪಯೋಗಿಸುವಂತಹ ಚರ್ಮದ ಹಿಮ್ಮಡಿ

---

೧. ಎಲ್: ಇಂಗ್ಲೆಂಡಿನಲ್ಲಿನ ಒಂದು ಅಳತೆ. ಅಗ ೪೫ ಅಂಗುಲಗಳು.

ಹಾಕಿಸುತ್ತಾರೆ. ಇದು ಸಾಮಾನ್ಯವಾಗಿ ಮಡಿಸಿಕೊಂಡಿರುತ್ತದೆ–ಅಡ್ಡಾದಿಡ್ಡಿಯಲ್ಲಿ ಷೂ ಹಾಕಿಕೊಂಡ ಹಾಗೆ. ಆದರೆ ಬನಿಯನರು ಹಿಮ್ಮಡಿ ಚರ್ಮವನ್ನು ಮೇಲಕ್ಕೇರಿಸಿ ಹಾಕಿಕೊಳ್ಳುತ್ತಾರೆ, ತಮ್ಮ ವ್ಯವಹಾರದ ಓಡಾಟಕ್ಕೆ ಅನುಕೂಲವಾಗಿರಲಿ ಎಂದು, ಶ್ರೀಮಂತ ಬನಿಯನರು ತಮ್ಮ ಪಾದರಕ್ಷೆಗಳ ಮೇಲ್ಭಾಗದ ಚರ್ಮಕ್ಕೆ ವೆಲ್ವೆಟ್ ಹಾಕಿಸಿ ರೇಷ್ಮೆ ಹೂವಿನ ಅಲಂಕಾರ ಮಾಡಿಸುತ್ತಾರೆ. ಉಳಿದವರು ಕೆಂಪು ಚರ್ಮದಿಂದ ಮಾಡಿದ ಕಿರುಗೊಂಡೆಗಳ ಕಡಮೆ ಖರ್ಚಿನ ಅಲಂಕಾರ ಮಾಡಿದ ಪಾದರಕ್ಷೆಗಳನ್ನು ಧರಿಸಿ ತೃಪ್ತಿಪಟ್ಟುಕೊಳ್ಳುತ್ತಾರೆ.

ಮೊಗಲ್ ಸ್ತ್ರೀಯರ ಉಡುಪು ಗಂಡಸರಂತೆಯೇ ಇರುತ್ತದೆ. ಆದರೆ ಅವರ ರವಿಕೆ ಇತರ ಇಂಡಿಯನ್ ಹೆಂಗಸರ ರವಿಕೆಯಂತೆ ಮೊಣಕೈವರೆಗೆ ಮಾತ್ರ. ಮುಂಗೈ ಚಿನ್ನ ಬೆಳ್ಳಿ ಮುತ್ತು ದಂತದ ಬಳೆ, ಕಡಗ ಮುಂತಾದುವುಗಳನ್ನು ತೊಡುವುದಕ್ಕೆ ಬೇಕು. ಹಿಂದೂ ಹೆಂಗಸರು ಸಾಮಾನ್ಯವಾದ ರವಿಕೆಯನ್ನು ಅರ್ಧ ಕೈ ಮುಚ್ಚುವಂತೆ ಮಾತ್ರ ತೊಡುತ್ತಾರೆ. ನಡುವಿನಿಂದ ಕೆಳಕ್ಕೆ ಪಾದಗಳವರೆಗೆ ಸೀರೆ ಉಟ್ಟು, ಸೆರಗನ್ನು ತಲೆಯ ಮೇಲೆ ಮುಸುಕುಹಾಕಿಕೊಳ್ಳುತ್ತಾರೆ. ಇಷ್ಟಲ್ಲದೆ ಮನೆಯಲ್ಲಿರಲಿ ಹೊರಗೆ ಹೋಗಲಿ ಬೇರೆ ತರಹ ಬಟ್ಟೆ ಧರಿಸುವುದಿಲ್ಲ. ಅವರ ಪಾದರಕ್ಷೆಗಳಿಗೆ ಎತ್ತರವಾದ ಹಿಮ್ಮಡಿ ('Pattu' = ಪಟ್ಟೆ?) ಇರುತ್ತದೆ. ಕಿವಿಗೆ ಚಿನ್ನದ ತಗಡಿನಿಂದ ಮಾಡಿದ ಚಿತ್ತಾರದ ಮುರಾವುಗಳನ್ನೂ, ಮೂಗಿಗೆ ಮುಕುರಗಳನ್ನೂ ಧರಿಸುತ್ತಾರೆ. ಕೈಬೆರಳುಗಳನ್ನು ಉಂಗುರಗಳಿಂದ ಅಲಂಕಾರ ಮಾಡಿಕೊಳ್ಳುತ್ತಾರೆ. ತಮ್ಮ ರೂಪು ಲಾವಣ್ಯಗಳನ್ನು ನೋಡಿಕೊಳ್ಳಲು ಬೆರಳಿಗೆ ಒಂದು ಅಂಗುಲ ಅಗಲದ ಕನ್ನಡಿಯಿರುವ ಉಂಗುರ ಧರಿಸುತ್ತಾರೆ. ಹಿಂದೂ ಹೆಂಗಸರು ಬರಿಗಾಲಿನಲ್ಲಿ ತಿರುಗಾಡುತ್ತಾರೆ. ಮಹಮ್ಮದೀಯ ಹೆಂಗಸರು ಮುಖಕ್ಕೆ ಪರದೆ ಹಾಕಿಕೊಳ್ಳುತ್ತಾರೆ. ಇಂಡೀಸಿನ ಕೆಲವು ಪ್ರದೇಶಗಳಲ್ಲಿ ಹೆಂಗಸರು ಗಂಡಸರೆಲ್ಲ ಸೊಂಟದಿಂದ ಕೆಳಕ್ಕೆ ಮಾತ್ರ ಬಟ್ಟೆ ಹಾಕಿಕೊಳ್ಳುತ್ತಾರೆ.

ಆಗ್ರಾದ ಬಹು ಜನ ಕಾದಾಟಕ್ಕಾಗಿ ಪ್ರಾಣಿಗಳನ್ನು ಸಾಕುತ್ತಾರೆ. ಆನೆ ಸಿಂಹ ಗಳನ್ನು ಸಾಕುವುದು ಕಷ್ಟ ಎಂಬ ಕಾರಣದಿಂದ ಹೋತ, ಟಗರು, ಹುಂಜ, ಲಾವಕ್ಕಿ, ಸಾರಂಗ, ಚಿಗರಿ ಮುಂತಾದುವುಗಳನ್ನು ಸಾಕಿ ಕಾಳಗಕ್ಕೆ ಬಿಟ್ಟು ನೋಡಿ ಸಂತೋಷ ಪಡುತ್ತಾರೆ. ಫಕೀರರೂ ಸಾಧುಸಂತರೂ ತಿರುಪುಮೊಳೆಯಂತಿರುವ ಸಾರಂಗದ ಕೋಡುಗಳಿಂದ ಮಾಡಿದ ದಂಡಗಳನ್ನು ಉಪಯೋಗಿಸುತ್ತಾರೆ.

ಇಂಡಿಯನರು ಚಿರತೆ, ಪಾರಿವಾಳ, ಹಸುರು ಪಾರಿವಾಳ, ಬಾತು, ಸಾಂಬರ್ ಮುಂತಾದ ಪ್ರಾಣಿಪಕ್ಷಿಗಳನ್ನು ತುಂಬಾ ಚಾಕಚಕ್ಯತೆಯಿಂದ ಹಿಡಿಯುತ್ತಾರೆ.

ಇಂಡೀಸಿನಲ್ಲಿ ಕಾಗದ ಮತ್ತು ರಟ್ಟುಗಳ ಮೇಲೆ ಚಿತ್ರಗಳನ್ನು ಬರೆದು ಮಾರಾಟ ಮಾಡುತ್ತಾರೆ. ಆದರೆ ಅವು ಅಷ್ಟೇನೂ ಚೆನ್ನಾಗಿರುವುದಿಲ್ಲ. ಆಗ್ರಾ ಮತ್ತು ದೆಹ್ಲಿ ಗಳಲ್ಲಿ ಮಾರಾಟವಾಗುವ ಚಿತ್ರಗಳು ಪರವಾಯಿಲ್ಲ ಎನ್ನಬಹುದು. ಅಲ್ಲದೆ ಆಗ್ರಾದಲ್ಲಿ

ಮಾರಲ್ಪಡುವ ಚಿತ್ರಗಳು ಕಾಮಪ್ರಚೋದಕವಾದವುಗಳು. ಇವನ್ನು ಕೊಳ್ಳುವವರು ಹೆಚ್ಚಾಗಿ ಯುರೋಪಿಯನರು.

ಇಲ್ಲಿ ಹರಳು ಮತ್ತು ಗಾಜಿನ ಮಣಿಗಳನ್ನು ಹಾಕಿ ಅಂದಚೆಂದದ ಚಿನ್ನದ ಆಭರಣಗಳನ್ನು ಮಾಡುವ ಚಿನಿವಾರರಿದ್ದಾರೆ. ಇಂಡಿಯಾದಲ್ಲಿ 'ಗೊಮ್ಚಿ' ಎಂದೂ ತೆಲುಗು ಭಾಷೆಯಲ್ಲಿ 'ಗೌರ್‌ಘಿಂದೆಲ್' (ಘೌರಿ = ಘೆಂಜಾ = ಗುಲಗಂಜಿ) ಎಂದೂ ಕರೆಯಲ್ಪಡುವ ಕಾಳಿನ ಸಿಪ್ಪೆ ತೆಗೆದು ಅದನ್ನು ತೇಯಿದು ಬೆಸೆಯುವುದಕ್ಕೆ ಉಪಯೋಗಿಸುತ್ತಾರೆ.

ಆಗ್ರಾಕ್ಕೆ ೪೦ ಪಟ್ಟಣಗಳೂ ೩,೪೦೦ ಹಳ್ಳಿಗಳೂ ಸೇರಿವೆ. ಆಗ್ರಾ ಸೀಮೆಯಿಂದ ಚಕ್ರವರ್ತಿಗೆ ವರ್ಷಕ್ಕೆ ಮೂವತ್ತೇಳು ದಶಲಕ್ಷ ಫ್ರೆಂಚ್ ಲೀವ್ರ್‌ಗಳಷ್ಟು ಆದಾಯ ಬರುತ್ತದೆ ಎಂದು ಹೇಳುತ್ತಾರೆ.

ಈಗ ಔರಂಗಜೇಬನು ದೆಹ್ಲಿಯಲ್ಲಿದ್ದಾನೆ. ಇಂದೂಸ್ಥಾನದಲ್ಲಿ ದೆಹ್ಲಿಯನ್ನು 'ಜಹಾನ್‌ಬಾದ್' ಎಂದೂ, ಬೇರೆ ಕಡೆ 'ದೆಹ್ಲಿ' ಎಂದೂ ಕರೆಯುತ್ತಾರೆ. ಮಸ್ಯ ಬೆರ್ನ್ಯೇ ಅವರು ಧೆಹ್ಲಿಯಲ್ಲಿ ಅನೇಕ ವರ್ಷಗಳು ಇದ್ದು ಅದರ ದೀರ್ಘವರ್ಣನೆ ಮಾಡಿದ್ದಾರಾದ್ದರಿಂದ ನಾನು ಪುನಃ ಅದನ್ನು ಹೇಳುವುದಕ್ಕೆ ಹೋಗುವುದಿಲ್ಲ. ಆಗ್ರಾಕ್ಕೂ ದೆಹ್ಲಿಗೂ ಮಧ್ಯೆ ಇರುವ ಹೆದ್ದಾರಿ ಬಹು ಸೊಗಸಾಗಿದೆ. ಜಹಾಂಗೀರ್ ಚಕ್ರವರ್ತಿಯು ಉದ್ದಕ್ಕೂ ಸಾಲುಮರಗಳನ್ನು ನೆಡಿಸಿ ಅಲ್ಲಲ್ಲಿ ಸೆರಾಯಿಗಳನ್ನು ಕಟ್ಟಿಸಿದ್ದಾನೆ. ಆದರೂ ದಾರಿಯಲ್ಲಿ ಅನೇಕ ತೊಂದರೆಗಳಿವೆ. ಇಲ್ಲಿರುವಷ್ಟು ಹುಲಿ, ಚಿರತೆ, ಸಿಂಹಗಳು ಇಡೀ ಪ್ರಪಂಚದಲ್ಲಿಯೇ ಇಲ್ಲ ಎನ್ನಬಹುದು. ಕಳ್ಳರು ದಾರಿಹೋಕರು ಕೊರಳಿಗೆ ಕುಣಿಕೆಯು ಹಗ್ಗವನ್ನೆಸೆದು ಕುತ್ತಿಗೆ ಬಿಗಿದು ಉಸಿರುಕಟ್ಟಿ ಸಾಯುವಂತೆ ಮಾಡುತ್ತಾರೆ. ಇವರು ಇನ್ನೊಂದು ಉಪಾಯ ಮಾಡುತ್ತಾರೆ. ಪ್ರಯಾಣಿಕರ ಬಳಿಗೆ ಸುಂದರವಾದ ಹೆಂಗಸನ್ನು ಕಳುಹಿಸಿ ಆಕೆ ತಲೆ ಕೆದರಿಕೊಂಡು ದಿಕ್ಕಿಲ್ಲದವಳಂತೆ ಅಳುವಂತೆ ಮಾಡುತ್ತಾರೆ. ಪ್ರಯಾಣಿಕ ಮುಂದೆ ಹೋದಂತೆ ಅವಳೂ ಅವನನ್ನು ಹಿಂಬಾಲಿಸುತ್ತಾಳೆ. ಪ್ರಯಾಣಿಕನೇನಾದರೂ ಅವಳ ರೂಪಿಗೆ ಮರುಳಾಗಿ ಅವಳನ್ನು ಕುದುರೆಯ ಮೇಲೆ ಹಿಂದೆ ಕುಳ್ಳಿರಿಸಿಕೊಂಡರೆ ಆಕೆ ಸಮಯ ನೋಡಿ ಆತನ ಕುತ್ತಿಗೆ ಹಿಸುಕಿ ಉಸಿರುಕಟ್ಟುವಂತೆ ಮಾಡುತ್ತಾಳೆ. ಅಷ್ಟರಲ್ಲಿ ಅವಳನ್ನು ಕಳುಹಿಸಿಕೊಟ್ಟ ಕಳ್ಳರು ಓಡಿಬಂದು ಪ್ರಯಾಣಿಕನನ್ನು ಮುಗಿಸಿ ಸಿಕ್ಕಿದ್ದನ್ನೆಲ್ಲಾ ದೋಚಿಕೊಂಡು ಹೋಗುತ್ತಾರೆ. ಕ್ಯಾರವಾನ್‌ಗೆ ಸೇರಿದ ಎತ್ತುಗಳು ದಾರಿ ತಪ್ಪಿದಾಗಲೂ ಹೀಗೆಯೇ ಅವುಗಳ ಕುತ್ತಿಗೆಗೆ ಕುಣಿಕೆಹಾಕಿ ಹಿಡಿದುಕೊಂಡುಬಿಡುತ್ತಾರೆ.

ದೆಹ್ಲಿಯ ಸಾಮಾನ್ಯ ಜನರ ಮನೆಗಳು ಮಣ್ಣು ಮತ್ತು ಬಿದಿರಿನಿಂದ ಕಟ್ಟಿದ ಗುಡಿಸಲುಗಳು. ಒಂದೆರಡು ಬೀದಿಗಳನ್ನು ಬಿಟ್ಟರೆ ಉಳಿದವುಗಳು ತುಂಬ ಕಿರಿದಾಗಿವೆ. ಬೀದಿಗಳು ಕಿರಿದಾಗಿರುವುದರಿಂದ ದೆಹ್ಲಿಯಲ್ಲಿ ಭಾರಿ ಜನ ಇರುವಂತೆ ಭಾಸವಾಗುತ್ತದೆ.

ಚಕ್ರವರ್ತಿ ಇಲ್ಲದಾಗ ದೆಹ್ಲಿ ಬಿಕೋ ಎನ್ನುತ್ತಿರುತ್ತದೆ. ಅವನು ಇರುವಾಗ ನಾಲ್ಕು ಲಕ್ಷ ಜನ ಇದ್ದರೆ ಅವನು ಇಲ್ಲದಾಗ ಅದರಲ್ಲಿ ಆರನೆಯ ಒಂದು ಭಾಗ ಮಾತ್ರ ಇರುತ್ತದೆ.

ಆಗ್ರಾದಲ್ಲಿ ಬರೆಯುವಂಥ ಹೊಲಸು ಚಿತ್ರಗಳನ್ನು ಇಲ್ಲಿ ಬರೆಯುವುದಿಲ್ಲ. ಇಲ್ಲಿ ಒಳ್ಳೆಯ ನುರಿತ ಚಿತ್ರಗಾರರಿದ್ದಾರೆ. ಚಕ್ರವರ್ತಿ ಮತ್ತು ಶ್ರೀಮಂತರ ಬಳಿ ಇರುವ ಆಭರಣಗಳು ಹೇರಳ. ಕಷ್ಟಕಾಲ ಬಂದ ಹೊರತು ಅವುಗಳನ್ನು ಮಾರುವುದಕ್ಕೆ ಹೋಗುವುದಿಲ್ಲ. ತವರದಂತೆ ಕಾಣುವ 'ತುತುನಾಕ್' (Tutunac=ಸತುವು?) ಎಂಬ ಲೋಹ ಬೆಳ್ಳಿಗಿಂತಲೂ ಚೆನ್ನಾಗಿ ಕಾಣುತ್ತದೆ. ಇದನ್ನು ಚೀನಾದಿಂದ ತರಿಸು ತ್ತಾರೆ.

ದೆಹ್ಲಿಯ ಸ್ತ್ರೀಯರು ಬಹು ಚೆಲುವೆಯರು. ಜನಗಳು ಮರ್ಯಾದಸ್ಥರು. ಇಂಡಿಯನ್ ಹೆಂಗಸರು ತಮ್ಮ ನಡತೆಯಲ್ಲಿ ಇಡೀ ಪೂರ್ವ ಪ್ರಪಂಚಕ್ಕೇ ಮಾದರಿ ಎಂದು ಹೇಳಬಹುದು. ಅವರಿಗೇನಾದರೂ ಕೆಟ್ಟ ಹೆಸರು ಬಂದಿದ್ದರೆ ಅದಕ್ಕೆ ಮಹಮ್ಮದೀಯ ಹೆಂಗಸರೇ ಕಾರಣ. ಇಲ್ಲಿಯ ಹೆಂಗಸರಿಗೆ ಸುಖವಾಗಿ ಹೆರಿಗೆಯಾಗುತ್ತದೆ. ಕೆಲವರು ಹೆರಿಗೆಯಾದ ಮಾರನೆಯದಿನವೇ ಬೀದಿಯಲ್ಲಿ ತಿರುಗಾಡುತ್ತಾರೆ.

ಪ್ರಯಾಣಕ್ಕಾಗಿ ಇಂಡೀಸಿನಲ್ಲೆಲ್ಲಾ ಬಹುತೇಕವಾಗಿ ಎತ್ತುಗಳನ್ನು ಉಪಯೋಗಿಸು ತ್ತಾರೆ. ಅವುಗಳನ್ನು ಕೆಳಕ್ಕೆ ಕೆಡವಿ ನಾಲ್ಕು ಕಾಲುಗಳನ್ನೂ ಕಟ್ಟಿ ಲಾಳ ಕಟ್ಟುತ್ತಾರೆ. ಮೂಗುದಾರ ಹಾಕಿ ಹಗ್ಗದಿಂದ ಅವನ್ನು ಹಿಡಿದುಕೊಳ್ಳುತ್ತಾರೆ. ಕುದುರೆಗಳಿಗೆ ಬಿಗಿದಂತೆ ಸಬರ ಬಿಗಿಯುತ್ತಾರೆ. ಗಾಡಿಗಳನ್ನೂ ರಥಗಳನ್ನೂ ಎಳೆಯುವುದಕ್ಕೆ ಇವನ್ನೇ ಉಪಯೋಗಿಸುತ್ತಾರೆ. ಬಿಳಿಯ ಎತ್ತುಗಳಿಗೆ ಬೆಲೆ ಹೆಚ್ಚು. ಕೆಲವು ಎತ್ತು ಗಳು ಆರಡಿ ಎತ್ತರ ಇರುತ್ತವೆ. ಆದರೆ ಇಂಥವು ಕಡಮೆ . ಮೂರಡಿಗಿಂತಲೂ ಕಡಮೆ ಇರುವ ಗಿಡ್ಡೆತ್ತುಗಳು ತುಂಬಾ ಚುರುಕಾಗಿರುತ್ತವೆ. ಇವುಗಳನ್ನು ಸಣ್ಣ ಗಾಡಿಗಳಿಗೆ ಹೂಡುತ್ತಾರೆ. ಒಬ್ಬ ಡಚ್ಚನ ಬಳಿ ಇದ್ದ ಒಂದು ಜೊತೆ ಬಿಳಿಯ ಎತ್ತುಗಳಿಗೆ ೨೦೦ ಕ್ರೌನ್ (Crown) ಬೆಲೆ. ಈ ಎತ್ತುಗಳನ್ನು ಗಾಡಿಗೆ ಹೂಡಿದರೆ ಅದನ್ನು ನೋಡು ವುದಕ್ಕೇ ಒಂದು ಚಂದ. ಒಳ್ಳೆಯ ತಳಿ ಎತ್ತುಗಳನ್ನು ಬಹಳ ಜೋಪಾನವಾಗಿ ಸಾಕು ತ್ತಾರೆ. ತಾಮ್ರದ ಕೊಂಬುಕಣಸು ಹಾಕಿ, ಮೈಗೆ ಗೌಸು ಹೊದಿಸಿ ಚೆನ್ನಾಗಿ ತಿಂಡಿ ತಿನ್ನಿಸುತ್ತಾರೆ. ಹಗಲು ಹುಲ್ಲು ಹಾಕುತ್ತಾರೆ. ಸಾಯಂಕಾಲ ಹಿಟ್ಟು, ಬೆಲ್ಲ ಮತ್ತು ಬೆಣ್ಣೆ ಹಾಕಿ ಕಲೆಸಿದ ಉಂಡೆಗಳನ್ನು ತಿನ್ನಿಸುತ್ತಾರೆ. ಹಳ್ಳಿಗಳಲ್ಲಿ 'ಕಿಚರಿ'ಯನ್ನೂ ತಿನ್ನಿಸುತ್ತಾರೆ. ಕೆಲವರು ಒಣಕಾಳನ್ನು ಒಡೆದು ನೀರಿನಲ್ಲಿ ನೆನೆಸಿ ತಿನ್ನಿಸುತ್ತಾರೆ.

ತುಂಬ ಅನುಕೂಲಸ್ಥರು ಎತ್ತಿನ ಗಾಡಿ ಅಥವಾ ಕುದುರೆ ಗಾಡಿಗಳಲ್ಲಿ ಪ್ರಯಾಣ ಮಾಡುವ ಬದಲು ಪಲ್ಲಕ್ಕಿಗಳಲ್ಲಿ ಪ್ರಯಾಣ ಮಾಡುತ್ತಾರೆ. ಅತ್ಯುತ್ತಮವಾದ ಪಲ್ಲಕ್ಕಿ ಗಳನ್ನು ಸಿಂಧೂದೇಶದ ತಟ್ಟಾ ಎಂಬಲ್ಲಿ ತಯಾರಿಸುತ್ತಾರೆ. ಅಲ್ಲಿ ತಯಾರಿಸುವ ಎರಡು ಚಕ್ರದ ರಥಗಳು ಪ್ರಯಾಣಕ್ಕೆ ತುಂಬಾ ಅನುಕೂಲ. ಈ ರಥದ ಚಕ್ರಗಳಿಗೆ ಎಂಟು

ಅರೆಕಾಲುಗಳಿರುತ್ತವೆ. ಚಕ್ರಗಳಿಗೆ ಸಾಮಾನ್ಯವಾಗಿ ಕಬ್ಬಿಣದ ಪಟ್ಟೆಬಿಡಿಸಿರುವುದಿಲ್ಲ. ಎರಡು ಎತ್ತುಗಳನ್ನು ಕಟ್ಟಿದ ರಥಗಳು ದಿನಕ್ಕೆ ೨೫ ಪೆನ್ನಿ ಅಥವಾ ಅರ್ಧ ಕ್ರೌನ್ ಬಾಡಿಗೆಗೆ ದೊರೆಯುತ್ತವೆ. ಸಾಮಾನು ಹೇರುವ ಗಾಡಿಗಳ ಚಕ್ರಗಳಿಗೆ ಅರೆಕಾಲುಗಳೇ ಇರುವುದಿಲ್ಲ. ಇಡೀ ಚಕ್ರವನ್ನು ಒಂದೇ ಮರದಿಂದ ಮಾಡಿರುತ್ತಾರೆ. ಈ ಗಾಡಿಗಳನ್ನು ಎಂಟು ಅಥವಾ ಹತ್ತು ಎತ್ತುಗಳು ಎಳೆಯುತ್ತವೆ. ವರ್ತಕರು ಈ ಗಾಡಿಗಳಲ್ಲಿ ಸಾಮಾನುಗಳನ್ನು ಸಾಗಿಸುವಾಗ ವಾರಡೆ ಹಿಡಿಯಲು ನಾಲ್ಕು ಪ್ಯೂನ್‌ಗಳನ್ನು ನೇಮಿಸಿಕೊಳ್ಳುತ್ತಾರೆ.

ಹೀಗೆ ತೇಪ್ಸೊ, ಮುಲ್ತಾನ್, ಖಾಂದಹಾರ್, ಕಾಬೂಲ್, ಕಾಶ್ಮೀರ, ಲಾಹೋರ್, ಅಯೋಧ್ಯೆ, ಬಂಗಾಳ, ಮಾಳ್ವ—ಇವುಗಳ ವರ್ಣನೆ ಮಾಡುತ್ತಾನೆ. ಈ ಸ್ಥಳಗಳಿಗೆ ಅವನು ಸ್ವತಃ ಹೋಗಿದ್ದಂತೆ ಕಾಣುವುದಿಲ್ಲ. ಆಗ್ರಾ ಮತ್ತು ದೆಹ್ಲಿಗಳಿಗೂ ಅವನು ಹೋಗಿರಲಾರ. ಒಂದು ವೇಳೆ ಹೋಗಿದ್ದರೂ ಅವನು ಹೇಳಿರುವ ಸಂಗತಿಗಳು ಬೇರೆ ಪ್ರವಾಸಿಗಳು ಹೇಳಿರುವ ಸಂಗತಿಗಳೇ ಆಗಿರುವ ಕಾರಣ ಅವನ್ನೆಲ್ಲಾ ಇಲ್ಲಿ ಕೈಬಿಟ್ಟು ಕೇವಲ ಒಂದೆರಡು ಮುಖ್ಯ ವಿಷಯಗಳನ್ನು ಮಾತ್ರ ಹೇಳಿದೆ.

ಕಾಬೂಲ್ ಅಥವಾ ಕಾಬೂಲಿಸ್ತಾನ್‌ನಲ್ಲಿ ಜನರು ಚಾಂದ್ರಮಾನದ ರೀತಿ ತಿಂಗಳುಗಳನ್ನು ಲೆಕ್ಕ ಹಾಕುತ್ತಾರೆ. ಎರಡು ದಿನ ಹೋಳಿಹಬ್ಬ ಆಚರಿಸುತ್ತಾರೆ. ದೇವಸ್ಥಾನದಲ್ಲಿ ಪೂಜೆ, ಹಾದಿ ಬೀದಿಗಳಲ್ಲಿ ಕುಣಿತ, ಓಕಳಿ ಎರಚಾಟ—ಇವು ಈ ಹಬ್ಬದಲ್ಲಿ ವಿಶೇಷಗಳು. ಭಾರಿ ವಿಗ್ರಹವೊಂದನ್ನು ಮಾಡಿ ನಿಲ್ಲಿಸಿ ಅದಕ್ಕೆ ಹುಡುಗ ನೊಬ್ಬನ ಕೈಯಿಂದ ಬಾಣದಿಂದ ಹೊಡೆಸುತ್ತಾರೆ. ಈ ಹುಡುಗ ದೇವರ ಅವತಾರ ವೆಂದು ಹೇಳುವ 'ಕೃಷ್ಮನ್' (Cruchman = ಕೃಷ್ಣ).

ಇಂಡೀಸಿನಲ್ಲಿ ಇರುವ ವೈದ್ಯರುಗಳೆಲ್ಲ ಕಾಬೂಲಿನವರು. ಈ ವೈದ್ಯರಲ್ಲಿ ಕೆಲವರು ತುಂಬಾ ತಿಳಿದವರಿದ್ದಾರೆ.

ಲಾಹೋರ್ ದೊಡ್ಡ ಊರು. ದೆಹ್ಲಿ ಮತ್ತು ಆಗ್ರಾಗಳು ರಾಜಧಾನಿಯಾಗುವ ಮುನ್ನ ಇದು ರಾಜಧಾನಿಯಾಗಿತ್ತು. ಆಗ ಕಟ್ಟಿದ ಅನೇಕ ಸೌಧಗಳೂ ಅರಮನೆಗಳೂ ಪಾಳುಬಿದ್ದಿವೆ. ನೋಡಲು ಸಂಕಟವಾಗುತ್ತದೆ. ಇಲ್ಲಿ ಅನೇಕ ಜನ ಜೆಂಟೈಲರೂ ಅವರ ದೇವಸ್ಥಾನಗಳೂ ಇವೆ.

ಲಾಹೋರಿನಲ್ಲಿ ಯತಿಗಳೆಂಬ ಜನರ ಮಠ ಇದೆ. ಈ ಯತಿಗಳು ಭಾರಿ ಕಟ್ಟು ನಿಟ್ಟಾದ ನಡತೆಯುವರು. ಈ ಯತಿಗಳಿಗೆ ಸೇರಿದ ಮಠಗಳು ೧೦,೦೦೦ ಇವೆ. ಕೆಲವು ಮಠಗಳಲ್ಲಿ ಸನ್ಯಾಸಿನಿಯರೂ ಇದ್ದಾರೆ. ಇವರು ಬಹು ಸ್ವಚ್ಛವಾದ ಜೀವನ ನಡೆಸು ತ್ತಾರೆ.

ಬೆಕಾರ್ (Becar = ಬಿಕನೀರ್) ಸೀಮೆಯಲ್ಲಿ ಇಂಡಿಯುನರ ೮೪ ಜಾತಿಗಳನ್ನೂ ಕಾಣಬಹುದು. ಇವರೆಲ್ಲ ಒಂದೇ ಮತಕ್ಕೆ ಸೇರಿದವರಾದರೂ ಒಂದೊಂದು ಜಾತಿಯು, ಅಷ್ಟೆ ಅಲ್ಲ ಒಂದೇ ಜಾತಿಗೆ ಸೇರಿದ ಒಬ್ಬೊಬ್ಬ ವ್ಯಕ್ತಿಯು, ನಡೆನುಡಿಗಳಲ್ಲಿ ತುಂಬಾ ವ್ಯತ್ಯಾಸವಿರುತ್ತದೆ. ಒಂದು ಜಾತಿಯಲ್ಲಿ ಅನೇಕಾನೇಕ ಒಳಜಾತಿಗಳಿವೆ. ಒಂದೊಂದು

ಒಳಜಾತಿಗೂ (Sect) ಒಂದೋದು ಕಸುಬು. ಆ ಕಸುಬನ್ನು ಬಿಟ್ಟರೆ ಜಾತಿಯಿಂದ ಹೊರಗೆ ಹಾಕುತ್ತಾರೆ. ಮೊದಲನೆಯ ಜಾತಿಯವರು ಬ್ರಾಹ್ಮಣರು ಅವರಾದನಂತರ ಕ್ಷತ್ರಿಯರು ಅಥವಾ ರಜಪೂತರು, ಶೂದ್ರರು ಅಥವಾ 'ಕೌರ್ಮಿ' (Courmy)ಗಳು ಮತ್ತು ಕೊನೆಯದಾಗಿ 'ಔಯೆನ್' (Ouen = ವೈಶ್ಯರು) ಅಥವಾ ಬನಿಯರು. ಕೊನೆಯ ಜಾತಿಗೆ ಸೇರಿದ ಬನಿಯರು ವ್ಯಾಪಾರ ಸಾಪಾರಗಳಲ್ಲಿ ತೊಡಗಿರುತ್ತಾರೆ. ಇವರಲ್ಲದೆ 'ಕೋಲಿ' ಎಂಬ ಹತ್ತಿ ಬಿಡಿಸುವ ಜನ, 'ತೆಹೆರೋನ್' ಎಂಬ ಜನ, 'ಕೋವಿಲ್ಲಿ' (Covilli) ಎಂಬ ಪಲ್ಲಕ್ಕಿ ಹೊರುವ ಜನ, 'ಬೆಂಗಿಯಾರ' (Bengiara = ಬಣಜಾರ?) ಎಂಬ ಜನರ ಹಲವಾರು ಜಾತಿಗಳಿವೆ.

ಎಂಬತ್ತುನಾಲ್ಕು ಜಾತಿಗಳಲ್ಲಿ ತೀರಾ ನಿಕೃಷ್ಟರಾದವರು ಎಂದರೆ 'ಪರ್ರೈವೆ (ಪರಿಯಾ) ಎಂಬ ಜನ. ಹಾಗೆಯೇ 'ದೇರ್' (ಧೇರ್ ಅಥವಾ ಧೇಡ್) ಎಂಬ ಜನರೂ ಕೂಡ. 'ಹಲಾಲ್‌ಕೋರ್' ಎಂಬ ಜನ ತೀರಾ ಕೀಳ್ಜಾತಿಯವರು. ಇವರು ಅತ್ಯಂತ ಕೀಳುವೃತ್ತಿಯಲ್ಲಿ ತೊಡಗಿರುತ್ತಾರೆ; ಸಿಕ್ಕಿದ್ದನ್ನು ತಿನ್ನುತ್ತಾರೆ. ಇಂಡೀಸಿನಲ್ಲಿ ಪರ್ಷಿಯನ್ ಭಾಷೆ ಮಾತನಾಡುವವರು ಮಾತ್ರ ಈ ಜನರನ್ನು 'ಹಲಾಲ್‌ಕೋರ್' ಎಂದು ಕರೆಯುತ್ತಾರೆ. ಹಲಾಲ್‌ಕೋರ್ ಎಂದರೆ ಸಿಕ್ಕಿದ್ದನ್ನು ತಿನ್ನುವವನು ಎಂದರ್ಥ-ಮೊದಲು ಇವರನ್ನು ಹರಾಮ್‌ಕೋರ್, ಅಂದರೆ ತಿನ್ನಬಾರದ ಮಾಂಸವನ್ನು ತಿನ್ನುವವರು ಎಂದು ಕರೆಯುತ್ತಿದ್ದರಂತೆ. ಆಸ್ಥಾನಿಕರು ಈ ಜನರನ್ನು ಬಹು ತಿರಸ್ಕಾರವಾಗಿ ಕಾಣುತ್ತಿದ್ದುದನ್ನು ನೋಡಿದ ರಾಜ 'ಮೈ ಬಗ್ಗಿಸಿ ದುಡಿದು ತಿನ್ನುವ ಅವರು ಹಲಾಲ್ ಕೋರರು, ಏನೂ ಮಾಡದೆ ಕುಳಿತು ಉಣ್ಣುವ ನೀವು ಹರಾಮ್ ಕೋರರು' ಎಂದನಂತೆ.

'ಭೈರಾಗಿ' ಎಂಬ ಕಾವಿ ಬಟ್ಟೆ ಧರಿಸುವ ಜನರ ಜಾತಿಯೊಂದಿದೆ. ಈ ಎಂಬತ್ತು ನಾಲ್ಕು ಜಾತಿಗಳೂ ಒಂದಕ್ಕೊಂದು ಅಧೀನ. ಒಂದು ಜಾತಿಯವರಿಗೂ ಇನ್ನೊಂದು ಜಾತಿಯವರಿಗೂ ಹೆಣ್ಣು ಕೊಟ್ಟು ತರುವುದು ಇಲ್ಲ.

ಬ್ರಾಹ್ಮಣರು ತಮ್ಮ 'ಬೇತ್' (Bet = ವೇದ) ಗಳನ್ನು ದೇವರೇ ಕೊಟ್ಟನೆಂದು ಹೇಳುತ್ತಾರೆ. ರಾಮು, ಚೀತಾ (Chita = ಸೀತಾ), ಹನುಮಾನ್ ಮುಂತಾದವರ ವಿಗ್ರಹಗಳನ್ನು ಪೂಜಿಸುತ್ತಾರೆ. ಪುನರ್ಜನ್ಮದಲ್ಲಿ ನಂಬಿಕೆ ಇಟ್ಟಿದ್ದಾರೆ.

ಅಲಹಾಬಾದ್ ಸೀಮೆಯನ್ನು ಇಲ್ಲಿಯವರೆಗೆ 'ಪೂರೊಪ್' (Purop = ಪೂರ್ವ) ಎಂದು ಕರೆಯುತ್ತಿದ್ದರು. ಇದರಲ್ಲಿ ನರ್‍ವಾರ್ ಮತ್ತು ಮೇವತ್ ನಾಡುಗಳೂ ಸೇರಿವೆ.

ಒರಿಸ್ಸಾ ಸೀಮೆಯನ್ನು ನಾವು ಬಂಗಾಳ ಎಂದೂ, ವಿಗ್ರಹಾರಾಧಕರು ಜಗನ್ನಾತ್ ಎಂದೂ ಕರೆಯುತ್ತಾರೆ. ಏಕೆಂದರೆ, ಅಲ್ಲಿ 'ಜಗನ್ನಾತ್' ಎಂಬ ಹೆಸರಾಂತ ವಿಗ್ರಹವಿದೆ.

ಒಬ್ಬ ಫಕೀರ ಒಂದು ಹರಕೆ ಮಾಡಿಕೊಂಡನಂತೆ, 'ತಾನು ಬಂಗಾಳದಿಂದ ಕಾಬೂಲ್‌ವರೆಗಿನ ಇಡೀ ಮೊಗಲ್ ದೇಶವನ್ನು ತನ್ನ ದೇಹದಿಂದ ಅಳೆಯುತ್ತೇನೆ

ಎಂದು. ನೆಲದ ಮೇಲೆ ಮಲಗುವುದು, ಏಳುವುದು—ಹೀಗೆ ಮಾಡುತ್ತಾಹೋದ. ಈ ರೀತಿ ಒಂದೂವರೆ ಕ್ರೋಶದಷ್ಟು ದೂರ ಹೋದದ್ದನ್ನು ಕಂಡವರು ಹೇಳಿದರು. ಹೋದ ಕಡೆಯಲ್ಲೆಲ್ಲಾ ಅವನನ್ನು ಜನರು ತುಂಬಾ ಆದರಿಸಿದರಂತೆ.

ಬಂಗಾಳದ ಜನ ಅತಿ ಕಾಮುಕರು. ಅಲ್ಲಿ ೨೦,೦೦೦ ಕ್ರೈಸ್ತರಿದ್ದಾರೆ. ಡಾಕಾ ಬಂಗಾಳದ ರಾಜಧಾನಿ. ಅಲ್ಲಿ ಅಗಸ್ಟೈನರ ಒಂದು ಸಂನ್ಯಾಸಿಮಠ(Monastery)ಇದೆ.

ಇಂಡಿಯನರಿಗೆ ಗಂಗಾನದಿ ತುಂಬಾ ಪವಿತ್ರವಾದುದು. ಸಾಮಾನ್ಯವಾಗಿ ಮೊಗಲ್ ಚಕ್ರವರ್ತಿ ಕುಡಿಯುವುದು ಗಂಗಾನದಿಯ ನೀರನ್ನೇ. ಯೂರೋಪಿಯನರು ಈ ನೀರನ್ನು ಕುದಿಸಿ ಕುಡಿಯುತ್ತಾರೆ.

ಮಾಳ (ಮಾಳ್ವ?) ಸೀಮೆಯಲ್ಲಿ ಗ್ವಾಲಿಯರ್, ಚಿತ್ತೂರು ಮುಂತಾದ ಸ್ಥಳಗಳಿವೆ. ಮಾಂಡು (Mandu) ಎಂಬ ಪಟ್ಟಣವಿರುವುದೂ ಇಲ್ಲಿಯೇ. ಅದು ಈಗ ಹಾಳುಬೀಳುತ್ತಿದೆ.

ನಾನು ಸರಿಯಾದ ಕಾಲದಲ್ಲಿ ಬ್ರಹ್ಮಪುರಕ್ಕೆ ಬರಲಿಲ್ಲ. ಏಕೆಂದರೆ ನಾನು ಬಂದಾಗ ಭಾರಿ ಮಳೆ. ಊರಿನ ಬೀದಿಗಳಲ್ಲೆಲ್ಲಾ ನೀರೇ ನೀರು. ಅವು ನದಿಗಳಂತೆ ಕಾಣುತ್ತಿದ್ದುವು. ಬ್ರಹ್ಮಪುರ ಖಾಂದೇಶ್ ಪ್ರಾಂತದ ರಾಜಧಾನಿ. ಊರನ್ನು ಉಬ್ಬು ತಗ್ಗಿನ ಸ್ಥಳದಲ್ಲಿ ಕಟ್ಟಿದ್ದಾರೆ. ಬಹು ಭಾಗ ಮನೆಗಳು ಮಣ್ಣಿನವು. ಇಲ್ಲಿ ಎರಡು ಕ್ಯಾರವಾನ್ ಸೆರಾಯ್ ಗಳಿವೆ: ಒಂದು, ಹೊಸಬರಿಗೆ; ಇನ್ನೊಂದು, ರಾಜನ ಖಜಾನೆಗಾಗಿ. ಎರಡೂ ಮೈದಾನಕ್ಕೆ ಎದುರಾಗಿವೆ. ಮೈದಾನ ದೊಡ್ಡದಾಗಿದ್ದರೂ ಚೆನ್ನಾಗಿಲ್ಲ. ಏಕೆಂದರೆ, ಅದರ ತುಂಬೆಲ್ಲಾ ಹೊಲಸು ಗುಡಿಸಲುಗಳಿವೆ. ಈ ಗುಡಿಸಲುಗಳಲ್ಲಿ ಹಣ್ಣುಗಳನ್ನೂ ಗಿಡಮೂಲಿಕೆಗಳನ್ನೂ ಮಾರುತ್ತಾರೆ.

ತಪತಿ ನದಿಯ ದಡದಲ್ಲಿ ರಾಜನ (ಮೊಗಲ್ ಚಕ್ರವರ್ತಿ) ಅರಮನೆ ಇದೆ. ಅರಮನೆಗೂ ನದಿಗೂ ಮಧ್ಯೆ ಇರುವ ಸ್ಥಳದಲ್ಲಿ ಆನೆಗಳ ಕಾಳಗ ನಡೆಯುತ್ತದೆ. ರಾಜನು ಅರಮನೆಯಲ್ಲಿ ಕುಳಿತು ಕಾಳಗ ನೋಡುತ್ತಾನೆ. ಹಿಂದೊಮ್ಮೆ ಷಾಜಹಾನನು ಈ ಕಾಳಗವನ್ನು ನೋಡುತ್ತಿದ್ದಾಗ ಅವನ ಪ್ರೀತಿಯ ಆನೆಯೊಂದು ಸತ್ತುಹೋಯಿತು. ಅದರ ನೆನಪಿಗಾಗಿ ಆನೆಯ ವಿಗ್ರಹ ಮಾಡಿಸಿ ನಿಲ್ಲಿಸಿದ್ದಾನೆ.

ಇಲ್ಲಿ ಬಟ್ಟೆ ವ್ಯಾಪಾರ ಭಾರಿಯಾಗಿ ನಡೆಯುತ್ತದೆ. ವಿಧವಿಧವಾದ, ಅದರಲ್ಲಿಯೂ ಅಚ್ಚ ಬಿಳಿಯ ಬಟ್ಟೆಗಳು, ಇಲ್ಲಿ ಹೆಚ್ಚು ಮಾರಾಟವಾಗುತ್ತವೆ.

ನಾನು ಗೋಲ್ಕೊಂಡಾಕ್ಕೆ ಹೋಗುವಾಗ 'ಬಾಲಾಘಾಟ್' (ಇದು ಔರಂಗಾಬಾದಿನ ಒಂದು ಸುಭೆ) ಎಂಬ ನಾಡಿನ ಕೊಂಚ ಭಾಗವನ್ನು ಕಂಡೆ. ಇದು ಮೊಗಲ್ ಚಕ್ರವರ್ತಿಗೆ ಸೇರಿದ ಶ್ರೀಮಂತ ಪ್ರಾಂತ. ಇದರ ರಾಜಧಾನಿ ಔರಂಗಾಬಾದ್. ನನ್ನ ಪ್ರಯಾಣಕ್ಕೆ ಎರಡು ಗಾಡಿಗಳನ್ನು ಬಾಡಿಗೆಗೆ ಗೊತ್ತುಮಾಡಿದೆ. ಒಂದು, ನನ್ನ ಆಳುಗಳಿಗೆ, ಇನ್ನೊಂದು ನನ್ನ ಸಾಮಾನಿಗೆ. ಒಂದು ಗಾಡಿಗೆ ತಿಂಗಳಿಗೆ ಹದಿನೇಳು

ಕ್ರೌನುಗಳಷ್ಟು ಬಾಡಿಗೆ. ಇಬ್ಬರು ಪ್ಯೂನ್‌ಗಳನ್ನು ನೇಮಿಸಿಕೊಂಡೆ. ಒಬ್ಬೊಬ್ಬರಿಗೆ ತಿಂಗಳಿಗೆ ಎರಡು ಕ್ರೌನ್‌ಗಳಷ್ಟು ಕೂಲಿ ಮತ್ತು ಎರಡೂವರೆ ಪೆನ್ನಿಗಳಷ್ಟು ದಿನಭತ್ಯ. ಇದು ಇಲ್ಲಿಯ ದರ. ಈ ಪ್ಯೂನ್‌ಗಳ ಕೆಲಸವೆಂದರೆ ಯಜಮಾನನು ಕುಳಿತ ಗಾಡಿಯ ಪಕ್ಕದಲ್ಲಿಯೇ ನಡೆದು ಗಾಡಿ ಹಳ್ಳಕೊಳ್ಳಗಳಿಗೆ ಬೀಳದಂತೆ ನೋಡಿಕೊಳ್ಳುವುದು ಮತ್ತು ಬಿಡಾರ ಬಿಟ್ಟಾಗ ಅಡಿಗೆಮನೆಯ ಕೆಲಸವೊಂದನ್ನು ಬಿಟ್ಟು ಉಳಿದೆಲ್ಲಾ ಕೆಲಸಗಳನ್ನು ಮಾಡುವುದು. ಇವರು ಪ್ರಾಣಿಗಳನ್ನು ಕೊಯ್ಯುವುದಿಲ್ಲ ತಿನ್ನುವುದಿಲ್ಲ. ಒಟ್ಟಿನಲ್ಲಿ ಇವರಿಂದ ತುಂಬಾ ಅನುಕೂಲ. ಬೇಕಾದುದನ್ನು ಕೊಂಡುಕೊಂಡು ಬರುತ್ತಾರೆ. ಯಜ-ಮಾನನ ಸಾಮಾನುಗಳನ್ನು ಜೋಪಾನವಾಗಿ ನೋಡಿಕೊಳ್ಳುತ್ತಾರೆ. ರಾತ್ರಿಯೆಲ್ಲಾ ಕಾವಲು ಕಾಯುತ್ತಾರೆ. ಈಟಿ ಕತ್ತಿ ಬಾಣ ಭಲ್ಲೆಗಳನ್ನು ಹಿಡಿದು ಎಂತಹ ಶತ್ರುವನ್ನಾದರೂ ಎದುರಿಸುತ್ತಾರೆ. ಈ ಪ್ಯೂನ್‌ಗಳು ಮೂರರಾಗಿರಬಹುದು ಅಥವಾ ರಜಪೂತ ಪಂಗಡಕ್ಕೆ ಸೇರಿದ ಹಿಂದೂಗಳಾಗಿರಬಹುದು. ನಾನು ರಜಪೂತರನ್ನು ನೇಮಿಸಿ ಕೊಂಡೆ. ಏಕೆಂದರೆ, ನನಗೆ ಗೊತ್ತಿತ್ತು ಇವರು ಮೂರರಿಗಿಂತ ಉತ್ತಮ ಎಂದು. ಮೂರರಿಗೆ ತುಂಬಾ ಜಂಭ.

ನಾನು ನನ್ನ ಪ್ರಯಾಣವನ್ನು ಫ್ರೆಂಚ್ ವರ್ತಕನಾದ ಮಸ್ಯ ಬಜೌ (M. Bazou) ಎಂಬುವರ ಜೊತೆಯಲ್ಲಿ ಮಾಡಿದೆ. ಬಜೌ ತುಂಬ ವಿನಯದ ಮನುಷ್ಯ. ಅಲ್ಲದೆ ತಮಾಷೆಯ ವ್ಯಕ್ತಿ. ಅವರು ಹತ್ತು ಗಾಡಿಗಳನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಹದಿನಾಲ್ಕು ಪ್ಯೂನ್‌ಗಳನ್ನು ನೇಮಿಸಿಕೊಂಡಿದ್ದರು. ನಮ್ಮ ತಂಡದಲ್ಲಿ ಎಂಟು 'ಫ್ರಾಂಕ್' (ಫರಂಗಿ) ಜನ ಇದ್ದೆವು. ಎಲ್ಲಾ ಸೇರಿ ನಲವತ್ತೈದು ಜನ ಇದ್ದೆವು.

ಸಂಜೆ ಸೂರತ್‌ನಿಂದ ಹೊರಟು ಊರಿನ ಹೊರಗೆ ಎಲ್ಲರೂ ಕೂಡಿದೆವು. ಹೀಗೆ ಕೂಡಿದ ಮೇಲೆ ಊಟಕ್ಕೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಬರಲು ಊರಿನ ಅಂಗಡಿಗೆ ಜನರನ್ನು ಕಳುಹಿಸಿದೆವು. ಇಲ್ಲದಿದ್ದಲ್ಲಿ ಪ್ರಯಾಣದ ವೇಳೆ ಗ್ರಾಸಕ್ಕೆ ತುಂಬ ಕಷ್ಟ. ಹಿಂದೂಗಳು ಕೋಳಿಗಳನ್ನಾಗಲೀ ಕೋಳಿಮೊಟ್ಟೆಗಳನ್ನಾಗಲೀ ಮಾರುವು ದಿಲ್ಲ. ಅರೆ ಬೇಯಿಸಿದ ಹಿಟ್ಟಿನ ರೊಟ್ಟಿಯಲ್ಲದೆ ಮತ್ತೇನೂ ಅವರ ಬಳಿ ಸಿಕ್ಕುವುದಿಲ್ಲ.

ದಾರಿಯಲ್ಲಿ ಅಲ್ಲಲ್ಲಿ ಹೆದ್ದಾರಿಗಳನ್ನು ಕಾಯುವ 'ಚೊಗು' (Tchogu = ಚೌಕಿಗಳು = ಇವನ್ನು ಕಾಯುವ ಕಾವಲುಗಾರರು) ಎಂಬುವರು ಸಿಕ್ಕುತ್ತಿದ್ದರು. ಇವರಿಗೆ ಎಲ್ಲಾ ಇದ್ದರೂ ಪ್ರಯಾಣಿಕರಿಂದ ಹಣ ಕೇಳಿ ಈಸಿಕೊಳ್ಳುತ್ತಿದ್ದರು. ಕೆಲವರಿಗೆ ಕೊಡು ತ್ತಿದ್ದೆವು ; ಕೆಲವರಿಗೆ ಇಲ್ಲ ಎನ್ನುತ್ತಿದ್ದೆವು. ಕೊಟ್ಟರೂ ಅಷ್ಟು ಹೆಚ್ಚು ಕೊಡುತ್ತಿರಲಿಲ್ಲ.

ದಾರಿಯಲ್ಲಿ ಬಗೆ ಬಗೆಯ ಮರಗಿಡ ಹಳ್ಳಕೊಳ್ಳ ಬೆಟ್ಟಗುಡ್ಡ ಮೈದಾನಗಳನ್ನೂ ಹಾಗೂ ಹೊಲ ಗದ್ದೆಗಳನ್ನೂ ನೋಡಿದೆವು. ಊರುಗಳಿರುವ ಕಡೆಯಲ್ಲೆಲ್ಲಾ ಹಿಂದೂ ಗಳ ದೇವಸ್ಥಾನಗಳನ್ನೂ ಅಲ್ಲಿಗೆ ಗಾಡಿಗಳಲ್ಲಿ ಯಾತ್ರೆ ಹೋಗುತ್ತಿದ್ದ ಜನರನ್ನೂ ಕಂಡೆವು. ಒಂದು ದೇವಸ್ಥಾನದ ಮುಂದೆ ಬಸವನ ವಿಗ್ರಹ ಇತ್ತು. ಪರ್ಷಿಯನ್ ಭಾಷೆ ಬರುತ್ತಿದ್ದ ಹಿಂದೂ ಒಬ್ಬನು ಅದು ರಾಮನ (ಶಿವನ) ವಾಹನ ಎಂದು ಹೇಳಿದ.

ಇಲ್ಲಿ ಬತ್ತ ಕಬ್ಬು ಬೆಳೆಯುತ್ತಾರೆ. ಅಲ್ಲಲ್ಲಿ ಕಬ್ಬು ಆಡಿಸುವ ಆಲೆಮನೆಗಳನ್ನು ನೋಡಿದೆವು. ಆದರೆ ಅವು ತುಂಬಾ ಗಲೀಜು. ಅಂತಹ ಸ್ಥಳಗಳಲ್ಲಿ ತಂಗದೆ ಹೊರಗಡೆಯೇ ಬಿಡಾರಮಾಡುತ್ತಿದ್ದೆವು.

ದಾರಿಯಲ್ಲಿ ಸೆತೆನಾ ಎಂಬ ಬುರುಜಿನ ಬಳಿ ಇದ್ದ ಮಾವಿನ ತೋಪಿನಲ್ಲಿ ತಂಗಿದಾಗ ಬಿಷಪ್ಪರೊಬ್ಬರು ಸಿಕ್ಕಿದರು. ಇವರಿಗೆ ಹೆಸರು ಫ್ರಾನ್ಸ್ವ ಪಲ್ಲು (Franceis Pallu) ಎಂದು. ಇವರಿಗೆ ಇಂಡೀಸಿನಲ್ಲೆಲ್ಲಾ ತುಂಬಾ ಗೌರವವಿದೆ. ಇವರ ಜೊತೆ ಮೆಸ್ಯ ಚಾಮ್ಸನ್ ಮತ್ತು ಸ್ಪ್ಯಾನಿಷ್ ಕಾರ್ಡೀಲಿಯರ್ ಎಂಬುವರೂ ಇದ್ದರು. ಬಿಷಪ್ಪರು ಸೂರತ್ತಿಗೆ ಹೋಗುತ್ತಿದ್ದರು. ಅಲ್ಲಿಂದ ಫ್ರಾನ್ಸಿಗೆ ಹೋಗಿ ಹೊಸ ಮಿಷನರಿಗಳನ್ನು ಕರೆದುಕೊಂಡು ಬರುವುದಾಗಿ ಹೇಳಿದರು.೧ ಕಾರ್ಡೀಲಿಯರ್ ಅವರು ಚೀನಾದಲ್ಲಿ ಹದಿನಾಲ್ಕು ವರ್ಷಗಳಿದ್ದು ಹಿಂದಿರುಗಿಬರುತ್ತಿದ್ದರು.

ನಮ್ಮ ದಾರಿಯಲ್ಲಿ ಉದ್ದಕ್ಕೂ ಎತ್ತು ಮತ್ತು ಒಂಟೆಗಳ ತಂಡಗಳು ಸಿಕ್ಕುತ್ತಿದ್ದುವು. ಆಗ್ರಾದಿಂದ ಬಂದ ಒಂದು ತಂಡದಲ್ಲಿ ಹತ್ತಿಬಟ್ಟೆಗಳನ್ನು ಹೇರಿಕೊಂಡು ಬರುತ್ತಿದ್ದ ಸಾವಿರಕ್ಕಿಂತಲೂ ಹೆಚ್ಚು ಗಾಡಿಗಳಿದ್ದುದನ್ನು ನೋಡಿದೆವು.

ಸೂರತ್ತಿನಿಂದ ಹೊರಟ ನಾವು ಹದಿನೈದು ದಿನಗಳಲ್ಲಿ ೭೫ ಲೀಗ್‌ಗಳಷ್ಟು ದೂರ ಪ್ರಯಾಣಮಾಡಿ ಔರಂಗಾಬಾದ್ ತಲುಪಿದೆವು.

ಔರಂಗಾಬಾದ್ ದೊಡ್ಡ ಊರು. ಇದರ ಸುತ್ತ ಕೋಟೆ ಇಲ್ಲ. ಇಲ್ಲಿಯ ನವಾಬನು ಸಾಮಾನ್ಯವಾಗಿ ಚಕ್ರವರ್ತಿಯ ಮಕ್ಕಳಲ್ಲಿ ಒಬ್ಬನಾಗಿರುತ್ತಾನೆ. ಔರಂಗಜೇಬನು ತನ್ನ ತಂದೆ ಷಾಜಹಾನನ ಕಾಲದಲ್ಲಿ ಇಲ್ಲಿಯ ನವಾಬನಾಗಿದ್ದನು. ಈತನ ಪ್ರೀತಿಪಾತ್ರಳಾದ ಮೊದಲನೆಯ ಹೆಂಡತಿ ಸತ್ತಾಗ ಅವಳ ಜ್ಞಾಪಕಾರ್ಥವಾಗಿ ಬಿಳಿಯ ಕಲ್ಲಿನ ಸುಂದರವಾದ ಮಸೀದಿಯೊಂದನ್ನು ಕಟ್ಟಿಸಿದ್ದಾನೆ. ಈ ಬಿಳಿಯಕಲ್ಲು ಅಮೃತ ಶಿಲೆಯಂತೆ ಕಂಡರೂ ಅದು ಅಲ್ಲ. ಈ ಊರಿನ ಮನೆಗಳ ಮುಂದೆ ಹಾಗೂ ಹಾದಿ ಬೀದಿಗಳಲ್ಲೆಲ್ಲಾ ಬಗೆ ಬಗೆಯ ಮರ ಗಿಡಗಳನ್ನು ಬೆಳೆಸಿದ್ದಾರೆ. ತೋಟಗಳನ್ನು ಚೆನ್ನಾಗಿ ಕೃಷಿಮಾಡಿ ದ್ರಾಕ್ಷಿ ಮತ್ತು ಇತರ ಕಸಿ ಹಣ್ಣುಗಳನ್ನು ಬೆಳೆಯುತ್ತಾರೆ. ಇಲ್ಲಿ ಕೊಂಬಿಲ್ಲದ ಟಗರುಗಳನ್ನು ನೋಡಿದೆವು. ಇವೆಷ್ಟು ಗಟ್ಟಿಮುಟ್ಟಾಗಿವೆಯೆಂದರೆ, ಹತ್ತು ವರ್ಷದ ಮಕ್ಕಳು ಲಗಾಮು ಹಾಕಿ ಇವುಗಳ ಮೇಲೆ ಸವಾರಿಮಾಡುತ್ತಾರೆ.

ಸೂರತ್ತಿನಲ್ಲಿದ್ದಾಗ ಎಲ್ಲೋರ ದೇವಸ್ಥಾನಗಳ ಬಗ್ಗೆ ಬಹಳವಾಗಿ ಕೇಳಿದ್ದೆ. ಅವನ್ನು ನೋಡಬೇಕೆಂಬ ಆಸೆಯಾಯಿತು. ಔರಂಗಾಬಾದ್ ತಲುಪಿದ ಕೂಡಲೇ ಸೇವಕರನ್ನು ಕರೆದುಕೊಂಡು ಅಲ್ಲಿಗೆ ಹೊರಟೆ. ಒಬ್ಬ ದುಭಾಷಿಗಾಗಿ ಹುಡುಕಿಸಿದೆ. ಆತ ಸಿಕ್ಕಲಿಲ್ಲ.

---

೧. ಫ್ರಾನ್ಸ್ವ ಪಲ್ಲು: ಇವರು ಹೆಲಿಯೊ ಪೊಲಿಸ್‌ನ ಬಿಷಪ್ಪರಾಗಿದ್ದರು. ಸಯಾಂ ದೇಶಕ್ಕೆ ಹೋಗುವ ದಾರಿಯಲ್ಲಿ ಇಂಡಿಯಾಕ್ಕೆ ೧೬೬೨ರಲ್ಲಿ ಬಂದಿದ್ದರು. ೧೬೬೭ರಲ್ಲಿ ಸೂರತ್ ಹಾಗೂ ಅಲೆಪ್ಪೋಗಳ ಮೂಲಕ ಹಿಂದಿರುಗಿದರು.

ನನ್ನ ಎತ್ತುಗಳು ತುಂಬಾ ಬಳಲಿದ್ದುದರಿಂದ ಬೇರೊಂದು ಸಣ್ಣ ಬಾಡಿಗೆ ಗಾಡಿಯಲ್ಲಿ ಕುಳಿತು ರಾತ್ರಿ ಒಂಬತ್ತು ಗಂಟೆಗೆ ಔರಂಗಾಬಾದನ್ನು ಬಿಟ್ಟೆ. ಜೊತೆಗೆ ಇಬ್ಬರು ಪ್ಯೂನ್‌ಗಳನ್ನು ಕರೆದುಕೊಂಡೆ. ದಾರಿಯಲ್ಲಿ ಕಳ್ಳಕಾಕರ ಹಾವಳಿ ಎಂದು ನಮ್ಮನ್ನು ಹೆದರಿಸಿದರು. ಆದರೆ ನಾವೆಲ್ಲರೂ ಸಾಕಷ್ಟು ಶಸ್ತ್ರ ಸಜ್ಜಿತರಾಗಿದ್ದುದರಿಂದ ಹೆದರಲಿಲ್ಲ. ಹಾಗೆ ಹೆದರಿ ಹಿಂದೆಗೆದಿದ್ದರೆ ಇಡೀ ಇಂಡೀಸಿನಲ್ಲಿಯೇ ಹೆಸರಾಂತ ದೇವಸ್ಥಾನವನ್ನು ನೋಡುವ ಅವಕಾಶ ಕಳೆದುಕೊಳ್ಳುತ್ತಿದ್ದೆ.

ಗಾಡಿ ನಿಧಾನವಾಗಿ ಸಾಗಿತು. ಏಕೆಂದರೆ, ದಾರಿಯಲ್ಲಿ ಹಳ್ಳಕೊಳ್ಳಗಳು. ಬೆಳಗಿನ ಜಾವ ಎರಡು ಗಂಟೆಗೆ ದೌಲತಾಬಾದ್ ತಲುಪಿದೆವು. ಅಲ್ಲಿ ಬೆಳಗಿನ ಐದು ಗಂಟೆಯುವರೆಗೂ ತಂಗಿದ್ದು ಗಾಡಿಯಲ್ಲಿಯೇ ಕುಳಿತು ಬೆಟ್ಟ ಹತ್ತಲು ಪ್ರಾರಂಭಿಸಿದೆವು. ಬೆಟ್ಟಕ್ಕೆ ಕಲ್ಲು ಬಂಡೆಯ ಮೇಲೆ ದಾರಿ ಮಾಡಿದ್ದಾರೆ. ಗಾಡಿ ಸುಲಭವಾಗಿ ಹತ್ತುತ್ತಿರಲಿಲ್ಲವಾದ್ದರಿಂದ ಅದನ್ನು ಹಿಂದಿನಿಂದ ಪ್ಯೂನ್‌ಗಳು ನೂಕಿ ಮೇಲಕ್ಕೆ ಸಾಗಿಸಿದರು. ಗುಡ್ಡ ಹತ್ತಿದ ಮೇಲೆ ಮೈದಾನ ಪ್ರದೇಶ ಸಿಕ್ಕಿತು. ಅಲ್ಲಲ್ಲಿ ಅನೇಕ ಹಳ್ಳಿಗಳೂ, ಬುರುಜುಗಳೂ, ಹಣ್ಣಿನ ಮರಗಿಡಗಳೂ ಕಂಡುವು. ಉತ್ತಭೂಮಿಯಲ್ಲಿ ಒಂದು ಗಂಟೆಯ ತನಕ ಪ್ರಯಾಣ ಮಾಡಿದಮೇಲೆ ಸುಂದರವಾದ ಸಮಾಧಿಮಂದಿರಗಳು ಸಿಕ್ಕಿದುವು. ಇವು ಹಲವಾರು ಅಂತಸ್ಥಿನವು. ಬೆಳಗಿನ ಏಳೂವರೆ ಗಂಟೆಯ ಹೊತ್ತಿಗೆ ಒಂದು ಮಸೀದಿಯ ಬಳಿಗೆ ಬಂದೆವು. ನಾನು ಪಾದರಕ್ಷೆಗಳನ್ನು ತೆಗೆದು ಒಳಕ್ಕೆ ಹೋದೆ. ಅದರ ಬಾಗಿಲಿನ ಮೇಲೆ ಮಹಮ್ಮದೀಯರ ಭಾಷೆಯಲ್ಲಿ 'ಬಿಸ್ಮಿಲ್ಲಾ' ಬರೆದಿದ್ದರು. ಬಿಸ್ಮಿಲ್ಲಾ ಎಂದರೆ 'ದೇವರ ಹೆಸರಿನಲ್ಲಿ' ಎಂದರ್ಥ. ಮಸೀದಿಯ ಒಳಗಡೆ ದೀಪಗಳನ್ನು ಹಚ್ಚಿದ್ದರು. ಅಲ್ಲಿದ್ದ ಕೆಲವು ಜನ ನನ್ನನ್ನು ಒಳಗೆ ಕರೆದರು. ಆದರೆ ಅಲ್ಲಿ ನನಗೇನೂ ವಿಶೇಷವಾದದ್ದು ಕಾಣಲಿಲ್ಲ. ಜಮಖಾನಗಳನ್ನು ಹೊದಿಸಿದ್ದ ಎರಡು ಸಮಾಧಿಗಳಲ್ಲದೆ ಬೇರೇನೂ ಇರಲಿಲ್ಲ. ದುಭಾಷಿ ಇಲ್ಲದ್ದು ನನಗೆ ಬಹಳ ತೊಂದರೆಯಾಯ್ತು.

ಅಲ್ಲಿಂದ ಸ್ವಲ್ಪದೂರ ಪಶ್ಚಿಮಕ್ಕೆ ನಾನೂ ನನ್ನ ಪ್ಯೂನ್‌ಗಳೂ ಹೋಗಿ, ಅರ್ಧ ಗಂಟೆಯ ಕಾಲ ಬಂಡೆಯೊಂದನ್ನು ಹತ್ತಿ ಇಳಿದ ಮೇಲೆ ಒಂದು ತಗ್ಗಾದ ಮೈದಾನ ಪ್ರದೇಶ ಸಿಕ್ಕಿತು. ಅಲ್ಲಿ ಮೊದಲು ಕಂಡುದು ಎತ್ತರವಾದ ಮಂದಿರಗಳು. ಬಂಡೆಯಲ್ಲಿ ಕೊರೆದ ಬಾಗಿಲನ್ನು ಪ್ರವೇಶಿಸಿದಾಗ ಅದರ ಅಕ್ಕಪಕ್ಕ ಕಲ್ಲಿನಲ್ಲಿ ಕೆತ್ತಿದ ಭಾರೀ ವಿಗ್ರಹ ಇತ್ತು. ಒಳಗೆ ಗೋಡೆಗಳ ಮೇಲೆಲ್ಲಾ ಅದೇ ರೀತಿ ಕೆತ್ತಿದ ವಿಗ್ರಹಗಳಿದ್ದುವು. ಒಳಗೆ ನೂರು ಪಾಪಿನಷ್ಟು ಚಚ್ಚೌಕವಾದ ಅಂಗಳವಿತ್ತು. ಬಂಡೆಯನ್ನು ಗಾರೆ ಗಿಲಾವು ಮಾಡಿದಷ್ಟು ನುಣುಪಾಗಿ ಕೆತ್ತಿದ್ದಾರೆ. ಒಂದೇ ಬಂಡೆಯಲ್ಲಿ ಕಂಬಗಳನ್ನು ಕಡಿದು ಎರಡು ಅಂತಸ್ಥಿನ ಮಹಡಿಯಂತೆ ಮಾಡಿದ್ದಾರೆ. ಇಂಥ ಅಪೂರ್ವ ಕೆಲಸವನ್ನು ನೋಡಿ ನನಗೆ ಬಾರಿ ಆಶ್ಚರ್ಯವಾಯಿತು. ಇನ್ನೂ ಒಳಗೆ ಹೋದೆ. ಅಲ್ಲಿ ಭೀತಿ ಬರಿಸುವಂಥ ಕೆಲಸ ಮಾಡಿದ್ದರು. ಇದು ಗಾಳಿಯಲ್ಲಿ ತೇಲುವ ಬಂಡೆಯೋಪಾದಿಯಲ್ಲಿದೆ. ವಿಧ ವಿಧ

ಮೃಗಗಳನ್ನು ಕಲ್ಲಿನಲ್ಲಿಯೇ ಕೊರೆದಿದ್ದಾರೆ. ಇಂಥವುಗಳನ್ನು ಸಾಮಾನ್ಯ ಮನುಷ್ಯರು ಮಾಡಿರಲಾರರು ಎನ್ನಿಸಿತು. ಇವನ್ನೆಲ್ಲಾ ಮಾಡಿದ ಕಾಲದ ಜನರು ಅನಾಗರಿಕರಾಗಿರಲಾರರು. ಆ ಶಿಲ್ಪಕಲೆ ಹಾಗೂ ಚಿತ್ರಕಲೆ ನಮ್ಮದರಷ್ಟು ಸೂಕ್ಷ್ಮವಾಗಿಲ್ಲದಿದ್ದರೂ ಸೊಗಸಾಗಿತ್ತು.

ನಾನು ಇವನ್ನೆಲ್ಲಾ ನೋಡುತ್ತ ಎರಡು ಗಂಟೆಗಳನ್ನು ಕಳೆದೆ. ಆದರೆ ನಿಜವಾಗಿ ಅಲ್ಲಿದ್ದುದನ್ನೆಲ್ಲಾ ನೋಡಲು ಹಲವಾರು ದಿನಗಳಾದರೂ ಬೇಕಾಗುತ್ತವೆ. ಒಬ್ಬ ಬ್ರಾಹ್ಮಣ ವಟು ನನ್ನನ್ನು ಎಲ್ಲಾ ದೇವಸ್ಥಾನಗಳಿಗೂ ಕರೆದೊಯ್ದು ಅದಷ್ಟು ತೋರಿಸಿದ. ಕೈಯಲ್ಲಿ ಒಂದು ಬೆತ್ತ ಹಿಡಿದು ವಿಗ್ರಹಗಳು ಮತ್ತು ಚಿತ್ರಗಳು ಯಾರ ಯಾರವು ಎಂದು ತಿಳಿಸಿದ. ಕೆಲವು ದೇವರುಗಳು ಮತ್ತು ದೇವತೆಗಳ ಹೆಸರು ಹೇಳಿದಾಗ ನನಗೆ ಕೊಂಚ ಅರ್ಥವಾಗುತ್ತಿತ್ತು. ಆದರೆ ಬಹು ಭಾಗ ನನಗೆ ಅರ್ಥವೇ ಆಗಲಿಲ್ಲ. ಅವನಿಗೆ ಪರ್ಷಿಯನ್ ಭಾಷೆ ಗೊತ್ತಿರಲಿಲ್ಲ; ನನಗೆ ಇಂಡಿಯನ್ ಭಾಷೆ ಬರುತ್ತಿರಲಿಲ್ಲ.

ಈ ದೇವಸ್ಥಾನಗಳಲ್ಲಿ ಕೇವಲ ಕೌಪೀನಧಾರಿಗಳಾದ ಹಲವಾರು 'ಸಂತ'ರನ್ನು ಕಂಡೆ. ಅವರು ಮೈಗೆಲ್ಲ ಬೂದಿ ಬಳಿದುಕೊಂಡಿದ್ದರು. ಕೂದಲನ್ನು ಕತ್ತರಿಸದೆ ಬೆಳೆಯುವುದಕ್ಕೆ ಬಿಟ್ಟಿದ್ದರು.

ಸಿಕ್ಕಿದ ಸ್ವಲ್ಪ ಕಾಲದಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ನೋಡಿಕೊಂಡು ದೌಲತಾಬಾದ್ ಮಾರ್ಗವಾಗಿ ಔರಂಗಾಬಾದಿಗೆ ಹಿಂದಿರುಗಿದೆ. ಔರಂಗಾಬಾದಿನ ಹಿಂದೂಗಳು ಹೇಳಿದರು, ಈ ಶಿಲಾ ದೇವಸ್ಥಾನಗಳ ನಿರ್ಮಾಣ ಯಾರೋ ಮಹಾಪುರುಷರಿಂದ ಆಗಿರಬೇಕು ಎಂದು. ಅವನ್ನು ಮಾಡಿದ ಕಾಲ ತಮಗೆ ಗೊತ್ತಿಲ್ಲ ಎಂದರು.[೧]

ಔರಂಗಾಬಾದಿನಿಂದ ಹೊರಟು ಒಂದೂವರೆ ಗಂಟೆ ಪ್ರಯಾಣ ಮಾಡಿ ಒಂದು ಆಲದಮರದ ಕೆಳಗೆ ಬಿಡಾರಮಾಡಿದೆವು. ನಾನು ನೋಡಿದ ಮರಗಳಲ್ಲೆಲ್ಲಾ ಇದೇ ಅತ್ಯಂತ ದೊಡ್ಡದು. ಮರದ ತುಂಬೆಲ್ಲ ಪಾರಿವಾಳಗಳೇ, ಬೇಕಾದರೆ ಅವನ್ನು ಹಿಡಿದುಕೊಳ್ಳಬಹುದಾಗಿತ್ತು. ಆದರೆ ಅವು ರಾಜನಿಗೆ ಮೀಸಲಾಗಿದ್ದುದರಿಂದ ಅವನ್ನು ಮುಟ್ಟುವ ಗೋಜಿಗೆ ಹೋಗಲಿಲ್ಲ. ಮರದ ಕೆಳಗೆ ಒಂದು ದೇವಸ್ಥಾನವೂ ಅನೇಕ ಗೋರಿಗಳೂ ಹತ್ತಿರದಲ್ಲಿ ಒಂದು ನಿಂಬೆಹಣ್ಣಿನ ತೋಟವೂ ಇವೆ.

---

೧. ಆಂಧ್ರಪ್ರದೇಶದ ಔರಂಗಾಬಾದ್‌ಗೆ ಹತ್ತಿರದಲ್ಲಿರುವ ಈ ಎಲ್ಲೋರ ಗುಹೆಗಳ ನಿರ್ಮಾಣ ಸುಮಾರು ೨೦೦೦ ವರ್ಷಗಳ ಹಿಂದೆಯೇ ಅಂದರೆ ಇದಕ್ಕೆ ಸಮೀಪದಲ್ಲಿರುವ ಅಜಂತಾ ಗುಹೆಗಳ ನಿರ್ಮಾಣದ ವೇಳೆಯೇ ಆಗಿರಬೇಕೆಂದು ಅಭಿಪ್ರಾಯಪಡಲಾಗಿದೆ. ಈ ಗುಹೆಗಳು ಹಿಂದು, ಬುದ್ಧ ಮತು ಜೈನ ಮತಧರ್ಮಗಳಿಗೆ ಸೇರಿವೆಯೆಂದೂ ಒಂದೇ ಶಿಲೆಯಲ್ಲಿ ಕೊರೆದಿರುವ ಕೈಲಾಸ್ ದೇವಸ್ಥಾನದಲ್ಲಿ ಕೆತ್ತಲ್ಪಟ್ಟಿರುವ ಮನುಷ್ಯನೆತ್ತರದ ವಿಗ್ರಹ ಇಡೀ ಇಂಡಿಯಾದಲ್ಲಿಯೇ ಪ್ರಸಿದ್ಧಿಯಾದುದೆಂದೂ ಹೇಳಲಾಗಿದೆ.

ನಮ್ಮ ಪ್ರಯಾಣದ ವೇಳೆ ಔರಂಗಾಬಾದಿಗೆ ಹೋಗುತ್ತಿದ್ದ ಮೊಗಲ್ ಸೈನ್ಯದ ಅನೇಕ ತುಕಡಿಗಳು ಎದುರಿಗೆ ಸಿಕ್ಕಿದುವು. ವಿಜಯಪುರದ (ವಿಜಾಪುರ) ಮೇಲೆ ದಂಡೆತ್ತಿ ಹೋಗಲು ಸಿದ್ಧತೆ ನಡೆಯುತ್ತಿತ್ತು.[೨]

ನಾಂದೇರ್ (ಅಥವಾ ನಾಂಥೇಡ್) ಎಂಬ ಪಟ್ಟಣದಿಂದಾಚೆ ಪಟೋಡಾ ಎಂಬ ಗ್ರಾಮದ ಬಳಿ ದೊಂಬರಾಟ ನಡೆಯುತ್ತಿತ್ತು. ತುಂಬ ಜನ ಸೇರಿದ್ದರು. ಕುಳಿತು ಕೊಳ್ಳಲು ನಮಗೆ ಎತ್ತರವಾದ ಸ್ಥಳದಲ್ಲಿ ಜಾಗ ಮಾಡಿಕೊಟ್ಟರು. ಇಲ್ಲಿಯವರ ದೊಂಬರಾಟ ಯೂರೋಪಿನ ಆಟಕ್ಕಿಂತ ಚೆನ್ನಾಗಿದೆ. ದೊಂಬರು ಹಲವಾರು ಆಟ ಗಳನ್ನು ಆಡಿದರು. ಕೇವಲ ಹನ್ನೆರಡು ಹದಿಮೂರು ವರ್ಷದ ಹುಡುಗಿ ಎರಡು ಗಂಟೆಗಳಿಗೂ ಹೆಚ್ಚುಕಾಲ ತೋರಿಸಿದ ಬಗೆ ಬಗೆಯ ಚಮತ್ಕಾರಗಳಂತೂ ಅದ್ಭುತ ವಾಗಿದ್ದುವು. ಒಂದಲ್ಲ ನೂರಾರು ಆಟ ಆಡಿ ತೋರಿಸಿದರು. ಗಂಡಸರಿಗಿಂತ ಹುಡುಗಿ ಯರ ಆಟಗಳು ಚಮತ್ಕಾರಗಳಿಂದ ಕೂಡಿದ್ದುವು. ನಾವು ಮೂರು ರೂಪಾಯಿ ಭಕ್ಷೀಸ್ ಕೊಟ್ಟೆವು. ಅದಕ್ಕಾಗಿ ಅವರು ಸಾವಿರ ಸಲ ಸಲಾಮು ಹಾಕಿದರು. ಅವರನ್ನು ರಾತ್ರಿ ನಾವು ತಂಗಿದ್ದ ಸ್ಥಳಕ್ಕೆ ಕರೆಸಿ ಮತ್ತೆ ಆಟ ಆಡಿಸಿದೆವು. ಆಗ ಅವರು ಮತ್ತೆ ಎರಡು ರೂಪಾಯಿ ಗಿಟ್ಟಿಸಿಕೊಂಡರು.

ನಾವು ಮುಂದೆ ಪ್ರಯಾಣ ಮಾಡಿ ಕೆಲವು ದಿನಗಳನಂತರ ಇಂದೋರಿಗೆ (ಈಗಿನ ನಿಜಾಮಾಬಾದ್) ಬಂದೆವು. ಇದು ಒಬ್ಬ ರಾಜನಿಗೆ ಸೇರಿದೆ. ಈ ರಾಜನಿಗೆ ಗೋಲ್ಕೊಂಡಾ

---

೨. ಬಿಜಾಪುರದಲ್ಲಿ ಇಮ್ಮಡಿ ಅಲಿ ಅದಿಲ್‌ಷಾ (೧೬೫೬–೧೬೭೨) ಆಳುತ್ತಿದ್ದ ಕಾಲದಲ್ಲಿ ಶಿವಾಜಿ, ಇಕ್ಕೇರಿಯ ನಾಯಕ ಹಾಗೂ ಮೊಗಲರಿಂದ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಕೇವಲ ಹದಿನೆಂಟು ವರ್ಷದ ಹುಡುಗ ಇಮ್ಮಡಿ ಅದಿಲ್‌ಷಾ. ಔರಂಗಜೇಬ ಡೆಕ್ಕನ್‌ನಲ್ಲಿ ನವಾಬನಾಗಿದ್ದ. ಆ ವೇಳೆಗೆ ಮೊಗಲರ ಸೈನ್ಯ ಬಿಜಾಪುರ ರಾಜ್ಯದ ಮೇಲೆ ಧಾಳಿ ಮಾಡಿ ಬೀದರ್ ಬಳಿಯ ಕಲ್ಯಾಣಿಯನ್ನು ವಶಪಡಿಸಿಕೊಂಡಿತು. ಅದಿಲ್‌ಷಾ ಅನಿವಾರ್ಯವಾಗಿ ಸಂಧಿಗೆ ಒಪ್ಪಿ ಬೀದರ್, ಕಲ್ಯಾಣಿ ಮತ್ತು ಪರೆಂದಾಗಳನ್ನು ಮೊಗಲ್ ಚಕ್ರವರ್ತಿಗೆ ಒಪ್ಪಿಸಿದ್ದಲ್ಲದೆ ಒಂದು ಕೋಟಿ ರೂಪಾಯಿ ನಷ್ಟದ ಪರಿಹಾರ ಕಟ್ಟಿಕೊಡಬೇಕಾಯಿತು. ಇದು ೧೬೫೭ರಲ್ಲಿ.

ಇದಾದನಂತರ ಷಾಜಹಾನ ಕಾಯಿಲೆ ಬಿದ್ದ. ಸರಿ, ಸಿಂಹಾಸನಕ್ಕೆ ಸೆಣಸಾಟ ಶುರುವಾಯಿತು. ಔರಂಗಜೇಬ ದೆಹಲಿ ಕಡೆ ಹೋದನೋ ಇಲ್ಲವೋ ಈ ಕಡೆ ಶಿವಾಜಿಯು ಕೊಂಕಣದ ಕಲ್ಯಾಣ, ಭಿವಂಡಿ ಮತ್ತು ಮಹುಲ ಕೋಟೆಗಳನ್ನು ಆಕ್ರಮಿಸಿಕೊಂಡ. ಅವನನ್ನು ಅಡಗಿಸಲು ಬಿಜಾಪುರ ಸುಲ್ತಾನ ಮಾಡಿದ ಪ್ರಯತ್ನ ವಿಫಲವಾಯಿತು.

ಇಕ್ಕೇರಿಯ ನಾಯಕ ಭದ್ರಪ್ಪ ನಾಯಕನೂ ಇಕ್ಕೇರಿ, ಸೊರಬ, ಉಡುಗಣಿ, ಮಹದೇವಪುರ ಮತ್ತು ಅಂಬಿಗೊಳ ಕೋಟೆಗಳನ್ನು ಬಿಜಾಪುರದಿಂದ ಕಿತ್ತುಕೊಂಡು ಬಿದನೂರನು ತನ್ನ ರಾಜಧಾನಿ ಯನ್ನಾಗಿ ಮಾಡಿಕೊಂಡನು.

ಇಷ್ಟರಲ್ಲಿ ಮೊಗಲ್ ಚಕ್ರವರ್ತಿ ಜಯಸಿಂಹನ ನೇತೃತ್ವದಲ್ಲಿ ಬಿಜಾಪುರದ ಮೇಲೆ ದಂಡು ಕಳುಹಿಸಿಕೊಟ್ಟನು. ಇದರಿಂದ ಜಯಸಿಂಹನಿಗೆ ಏನೂ ಗಿಟ್ಟಲಿಲ್ಲ. ಈ ದಂಡಯಾತ್ರೆಯನ್ನು (೧೬೬೫–೬೬) ಕುರಿತೇ ತೇವ್ನೋ ಇಲ್ಲಿ ಪ್ರಸ್ತಾಪ ಮಾಡಿರುವುದು.

ರಾಜ ಆಶ್ರಯ ನೀಡಿದ್ದಾನೆ. ಮೊಗಲ್ ಚಕ್ರವರ್ತಿಯೆಂದರೆ ಇವನಿಗೆ ತಾತ್ಸಾರ. ಯುದ್ಧಗಳಾದಾಗ ಯಾರು ಹೆಚ್ಚು ಶಕ್ತಿವಂತರೋ ಅವರ ಕಡೆ ಸೇರಿಕೊಳ್ಳುತ್ತಾನೆ. ನಮ್ಮ ಗಾಡಿಗಳಿಗೆ ಎರಡು ರೂಪಾಯಿಗಳಂತೆ ಸುಂಕ ಕೊಡಬೇಕೆಂದು ಹೇಳಿದ. ಆದರೆ ತಕರಾರು ಮಾಡಿ, ಒಂದು ರೂಪಾಯಿ ಕೊಟ್ಟು ಮುಂದೆ ಸಾಗಿದೆವು.

ದಾರಿಯಲ್ಲಿ ಬಿಸೆತ್‌ಪುರ ಎಂಬ ಹಳ್ಳಿ ಸಿಕ್ಕಿತು. ಇಲ್ಲಿಗೆ ಹತ್ತಿರದಲ್ಲಿ ಗುಡ್ಡದ ಮೇಲೆ ಒಂದು ಸುಂದರ ದೇವಸ್ಥಾನವಿದೆಯೆಂದು ಹೇಳಿದ್ದರು. ಅದನ್ನು ನೋಡಲು ಹೋದೆವು. ದೇವಸ್ಥಾನದ ಹೆಸರು ಚಿತಾನಗರ್ (ಸೀತಾನಗರ್) ಎಂದು. ದೇವಸ್ಥಾನ ದೊಡ್ಡದು. ಆದರೆ ಇನ್ನೂ ಮುಗಿದಿಲ್ಲ. ಈ ಕಾರಣ ಗರ್ಭಗುಡಿಯಲ್ಲಿ ದೇವರ ವಿಗ್ರಹ ಇರಲಿಲ್ಲ. ವಿಗ್ರಹವನ್ನು ಇಡಬೇಕಾದ ಸ್ಥಳ ಬರಿದಾಗಿತ್ತು.

ಗುಡ್ಡದ ಕೆಳಗಡೆ ಒಂದು ಅರಮನೆ ಕಟ್ಟುತ್ತಿದ್ದರು. ಅರಮನೆ ಮತ್ತು ದೇವಸ್ಥಾನ ಎರಡೂ ಬಹು ಸೊಗಸಾದ ಶಿಲ್ಪದಿಂದ ಕೂಡಿವೆ. ಇವನ್ನು ರಾಮನ ಹೆಂಡತಿ ಸೀತೆಯ ಹೆಸರಿನಲ್ಲಿ ಒಬ್ಬ ರಜಪೂತ ಕಟ್ಟಿಸಲು ಪ್ರಾರಂಭಿಸಿದನಂತೆ. ಆದರೆ ಮುಗಿಸುವುದರೊಳಗೆ ಆತ ಸತ್ತುಹೋದ. ಅವು ಈಗ ಅರೆಯಾಗಿಯೇ ಉಳಿದಿವೆ.

ದಾರಿಯಲ್ಲಿ ಹಿಂಡೆಲ್‌ವೈ (ಹಿಂದಿಯಾ?) ಎಂಬ ಪಟ್ಟಣ ಸಿಕ್ಕಿತು. ಇಲ್ಲಿ ಕತ್ತಿ, ಈಟಿ, ಭರ್ಜಿ ಮುಂತಾದ ಆಯುಧಗಳನ್ನು ಹೇರಳವಾಗಿ ತಯಾರಿಸುತ್ತಾರೆ. ಇವನ್ನೇ ಇಂಡೀಸಿನಲ್ಲೆಲ್ಲಾ ಉಪಯೋಗಿಸುವುದು. ಆಯುಧಗಳಿಗೆ ಬೇಕಾದ ಕಬ್ಬಿಣವನ್ನು ಪಟ್ಟಣಕ್ಕೆ ಹತ್ತಿರದ ಗುಡ್ಡದ (ರತ್ನಗಿರಿ) ಗಣಿಯಿಂದ ತೆಗೆಯುತ್ತಾರೆ. ನಾನು ಹೋದಾಗ ಹೆಚ್ಚುಕಡಮೆ ಊರೆಲ್ಲಾ ಬರಿದಾಗಿತ್ತು. ಏಕೆಂದರೆ, ಶಿವಾಜಿಯ ಸಹೋದರ ಈ ಊರಿನ ಮೇಲೆ ಧಾಳಿಮಾಡಿದ್ದ.

ಮಾರ್ಚಿ ೨೯ನೆಯ ತಾರೀಖು ನಾವು ಕಳಾವಾರ್ ಎಂಬ ಊರಿಗೆ ಬಂದೆವು. ಇದು ಮೊಗಲ್ ರಾಜ್ಯದ ಕೊನೆಯ ಊರು. ಔರಂಗಾಬಾದಿನಿಂದ ಇಲ್ಲಿಗೆ ಬರಲು ಹದಿನೈದು ದಿನಗಳು ಹಿಡಿದುವು.

ಇಲ್ಲಿಂದ ಗೋಲ್ಕಂಡಾಕ್ಕೆ ನಾನು ಪ್ರಯಾಣಮಾಡಿದ ವಿಷಯ ಆಮೇಲೆ ಹೇಳುತ್ತೇನೆ. ಔರಂಗಾಬಾದಿನಿಂದ ಇಲ್ಲಿಯವರೆಗೆ ನಾವು ಕಂಡದ್ದು ಬೆಟ್ಟ ಗುಡ್ಡ ಹಾಗೂ ಮೈದಾನಗಳಷ್ಟೆ. ಮೈದಾನ ಪ್ರದೇಶ ತುಂಬಾ ಫಲವತ್ತಾಗಿದೆ. ಬತ್ತ, ಹತ್ತಿ ಬೆಳೆಯುತ್ತಾರೆ. ಹಲವಾರು ನದಿಗಳೂ ಕೆರೆಕುಂಟೆಗಳೂ ಇವೆ. ಕಪಿಲೆ ಮತ್ತು ಏತಗಳಿಂದ ನೀರೆತ್ತುತ್ತಾರೆ. ಕಪಿಲೆಗಳಿಗೆ ಎತ್ತುಗಳನ್ನು ಕಟ್ಟುತ್ತಾರೆ. ನಮ್ಮ ಇಡೀ ಪ್ರಯಾಣದ ವೇಳೆ ಗುಡುಗು, ಮಿಂಚು, ಬಿರುಗಾಳಿ, ಮಳೆಗಳ ಆರ್ಭಟ. ಒಂದೊಂದು ಆಲಿಕಲ್ಲು ಕೋಳಿಮೊಟ್ಟೆಯಷ್ಟು ಗಾತ್ರ! ಇವು ಯಾವೂ ಇಲ್ಲದಾಗ ದೂರದ ಗುಡುಗು

ಕೇಳಿಸುತ್ತಿತ್ತು. ಹಗಲು ರಾತ್ರಿಯೆಲ್ಲಾ ಗುಡುಗುಡು ಎನ್ನುತ್ತಿತ್ತು. ದಾರಿಯುದ್ದಕ್ಕೂ ಮೊಗಲ್ ಚಕ್ರವರ್ತಿಗೆ ಪೊಗದಿ ಕೊಡಲು ತಿರಸ್ಕರಿಸಿದ ವಿಜಯಪುರದ ರಾಜನ ಮೇಲಿನ ಧಾಳಿಗೆ ಹೋಗುತ್ತಿದ್ದ ರಾವುತರ ತಂಡಗಳನ್ನು ಕಂಡೆವು.

ನಾನು ಹೇಳಿದ ಬೆಟ್ಟಗುಡ್ಡಗಳು 'ಬಾಲಾಘಾಟ್' ಎಂಬ ಪರ್ವತದ ಶಾಖೆಗಳು. ಇಂಡಿಯಾದ ಭೂಗೋಳಶಾಸ್ತ್ರಜ್ಞರ ಪ್ರಕಾರ ಈ ಪರ್ವತವು ಇಂಡಿಯಾವನ್ನು ಉತ್ತರ ದಕ್ಷಿಣ ಭಾಗಗಳಾಗಿ ವಿಂಗಡಿಸುತ್ತದೆಯಂತೆ.[೧]

ಇಲ್ಲಿಯವರೆಗೆ ತೆಲಿಂಗಾ ದಖನ್ನಿನ ಮುಖ್ಯ ಸೀಮೆಯಾಗಿತ್ತು. ಇದರ ರಾಜಧಾನಿ ವಿಜಯಪುರ. ಇದು ಪೋರ್ಚುಗೀಸರ ರಾಜ್ಯವಾದ ಗೋವಾದವರೆಗೆ ಹಬ್ಬಿತ್ತು. ಆದರೆ ಈ ಸೀಮೆಯ ಉತ್ತರಭಾಗವೂ, ಬೀದರ್ ಮತ್ತು ಕಲ್ಯಾಣಗಳೂ ಮೊಗಲರ ವಶವಾದ ಮೇಲೆ ಇದು ಮೊಗಲರಿಗೆ ಅಷ್ಟು ಮತ್ತು ದಖನ್ನಿನ ವಿಜಯಪುರದ ರಾಜನಿಗೆ ಅಷ್ಟು ಸೇರಿಹೋಗಿದೆ. ಈಗ ಇದನ್ನು ಮೊಗಲ್ ರಾಜ್ಯಕ್ಕೆ ಸೇರಿದ ಸೀಮೆ ಗಳಲ್ಲಿ ಒಂದು ಎಂದು ಮಾತ್ರ ಪರಿಗಣಿಸುತ್ತಾರೆ. ಇದು ಪೂರ್ವಕ್ಕೆ ಮಚ್ಚಿಲಿಪಟ್ಟಣದ ಕಡೆಗೆ ಗೋಲ್ಕೊಂಡಾ ರಾಜ್ಯದವರೆಗೂ, ಪಶ್ಚಿಮಕ್ಕೆ ಬಗ್ಲಾನಾ[೨] ಮತ್ತು ವಿಜಯಪುರದ ವರೆಗೂ, ಉತ್ತರಕ್ಕೆ ಬಾಲಾಘಾಟ್‌ವರೆಗೂ ಮತ್ತು ದಕ್ಷಿಣಕ್ಕೆ ವಿಜಯನಗರದವರೆಗೂ ಹಬ್ಬಿದೆ. ಈಗ ಇದರ ರಾಜಧಾನಿ ಬೀದರ್.

ಬೀದರ್ ದೊಡ್ಡಪಟ್ಟಣ. ಕೋಟೆ ಕೊತ್ತಲಗಳೂ ಬುರುಜುಗಳೂ ಇವೆ. ದೊಡ್ಡ ದೊಡ್ಡ ಫಿರಂಗಿಗಳನ್ನು ಕೋಟೆಯ ಮೇಲೆ ಏರಿಸಿದ್ದಾರೆ. ಕೆಲವು ಫಿರಂಗಿಗಳ ಬಾಯಿ ಮೂರು ಅಡಿ ಅಗಲ! ಇಲ್ಲಿ ಸಾಮಾನ್ಯವಾಗಿ ಮೂರು ಸಾವಿರ ಸೈನ್ಯವಿರುತ್ತದೆ. ಇವರಲ್ಲಿ ಅರ್ಧ ಪದಾತಿಗಳು; ಇನ್ನರ್ಧ ಅಶ್ವದಳ. ಏಳುನೂರು ಗೋಲಂದಾಜ ರಿದ್ದಾರೆ. ಹಗಲೂ ರಾತ್ರಿ ಸೈನ್ಯ ಸಿದ್ಧವಾಗಿ ನಿಂತಿರುತ್ತದೆ. ಏಕೆಂದರೆ, ಯಾವಾಗ ಎಂದರೆ ಆಗ ಧಾಳಿ ಆಗಬಹುದೆಂಬ ಭಯ. ಇಲ್ಲಿಯ ನವಾಬ ಊರ ಹೊರಗಿನ ದುರ್ಗದಲ್ಲಿ ವಾಸಮಾಡುತ್ತಾನೆ. ನಾನು ಇಲ್ಲಿಗೆ ಬಂದಾಗ ಇದ್ದ ನವಾಬನು ಯಾರೆಂದರೆ ಔರಂಗಜೇಬನ ಮಾವನಾದ ಷೈಸ್ತಾಖಾನನ ಭಾವಮೈದುನ.

ಸ್ವಲ್ಪ ದಿನಗಳನಂತರ ಇಲ್ಲಿಗೆ ಹೊಸ ನವಾಬ ಬಂದ. ಈತನನ್ನು ನಾನು ಬೀದರ್‌ಗೆ ಹೋಗುವ ದಾರಿಯಲ್ಲಿ ಕಂಡೆ. ಈತ ಪರ್ಷಿಯನ್. ಆಗಲೇ ವಯಸ್ಸಾಗಿದೆ. ಇವನನ್ನು ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಹೋಗುತ್ತಿದ್ದರು. ಸುತ್ತುಮುತ್ತ ಪದಾತಿ ಗಳೂ ಐನೂರು ಕುದುರೆಸವಾರರೂ ಇದ್ದರು. ಹಿಂದೆ ಏಳು ಆನೆಗಳು ಬರುತ್ತಿದ್ದುವು. ನವಾಬನ ಪಲ್ಲಕ್ಕಿಯ ಹಿಂದೆ ಅಂತಃಪುರದ ಸ್ತ್ರೀಯರು ಕುಳಿತ ಪಲ್ಲಕ್ಕಿಗಳಿದ್ದುವು. ಅವನ್ನು

---

೧. ಇದು ವಿಂಧ್ಯ ಪರ್ವತಶ್ರೇಣಿ.

೨. ಇದು ಹಿಂದೆ ಮಯೂರಗಿರಿ ಎಂದೂ ಈಗ ಖಾಂದೇಶ್ ಎಂದೂ ಕರೆಯಲ್ಪಡುವ ಪ್ರದೇಶವೆಂದು ಹೇಳಬಹುದು.

ಕೆಂಪು 'ಸರ್ಜ್' (Serge) ಬಟ್ಟೆಯಿಂದ ಮುಚ್ಚಿದ್ದರು. ತೆರೆದಿದ್ದ ಒಂದು ಪಲ್ಲಕ್ಕಿಯಲ್ಲಿ ಎರಡು ಚಿಕ್ಕಮಕ್ಕಳನ್ನು ಕಂಡೆ. ಹಿಂದೆ ಮಿಕ್ಕ ಹೆಂಗಸರನ್ನು ತುಂಬಿದ್ದ ಗಾಡಿಗಳು ಬರುತ್ತಿದ್ದುವು. ಎರಡು ಗಾಡಿಗಳಿಗೆ ಆರಡಿ ಎತ್ತರದ ಬಿಳಿಯ ಎತ್ತುಗಳನ್ನು ಕಟ್ಟಿದ್ದರು. ಕೊನೆಯಲ್ಲಿ ಸಾಮಾನುಗಳನ್ನು ಹೇರಿದ ಗಾಡಿಗಳು ಬರುತ್ತಿದ್ದವು. ಅವುಗಳ ರಕ್ಷಣೆಗೆ ಒಂಟೆಯ ಮೇಲೆ ಕುಳಿತ ಸಿಪಾಯಿಗಳಿದ್ದರು.

ಇಲ್ಲಿಯ ಹಿಂದೂಗಳಷ್ಟು ಮೂಢನಂಬಿಕೆಯ ಜನ ಬೇರೆಲ್ಲಿಯೂ ಇಲ್ಲ. ಇಲ್ಲಿ ರಾಕ್ಷಸೋಪಾದಿಯ ವಿಗ್ರಹಗಳಿರುವ ಅನೇಕಾನೇಕ ದೇವಸ್ಥಾನಗಳಿವೆ. ಅವುಗಳನ್ನು ನೋಡಿದರೆ ಭಕ್ತಿಗಿಂತ ಭೀತಿಯೇ ಹೆಚ್ಚಾಗುತ್ತದೆ. ಈ ಮತಾಂಧರಿಗೆ ಮಾತ್ರ ಭಕ್ತಿ ಹುಟ್ಟಬಹುದೋ ಏನೋ! ಈ ಜನ ಪದೇ ಪದೇ ಸ್ನಾನ ಮಾಡುತ್ತಾರೆ. ಗಂಡಸರು ಹೆಂಗಸರು ಮತ್ತು ಮಕ್ಕಳು ಬೆಳಗ್ಗೆ ಹಾಸಿಗೆಯಿಂದ ಎದ್ದಕೂಡಲೇ ನದಿಗೆ ಹೋಗುತ್ತಾರೆ. ಅನುಕೂಲಸ್ಥರು ಇರುವ ಕಡೆಗೇ ನೀರನ್ನು ತರಿಸಿಕೊಳ್ಳುತ್ತಾರೆ. ಗಂಡ ಸತ್ತಾಗ ಹೆಂಡತಿಯನ್ನು ಅಲ್ಲಿಗೆ (ನದಿಯ ಬಳಿಗೆ) ಕರೆದುಕೊಂಡು ಹೋಗಿ ಏನೋ ಶಾಸ್ತ್ರ ಮಾಡುತ್ತಾರೆ. ಹೆರಿಗೆಯಾದವಳಿಗೂ ಇದೇ ಶಾಸ್ತ್ರ ಮಾಡುತ್ತಾರೆ. ಯಾವ ದೇಶದಲ್ಲಿಯೂ ಹೆಂಗಸರು ಇಷ್ಟು ಸುಲಭವಾಗಿ ಹೆರುವುದಿಲ್ಲ. ನದಿಯಲ್ಲಿ ಸ್ನಾನಮಾಡಿ ಬಂದಮೇಲೆ ಬ್ರಾಹ್ಮಣನೊಬ್ಬ ಕುಂಕುಮ ಮತ್ತು ಗಂಧಗಳನ್ನು ಹಣೆಗೆ ಹಚ್ಚುತ್ತಾನೆ. ಹೀಗೆ ಹಚ್ಚಿಸಿಕೊಂಡವರು ಮನೆಗೆ ಬಂದು ಸ್ವಲ್ಪ ಉಪಹಾರ ತೆಗೆದುಕೊಳ್ಳುತ್ತಾರೆ ಸ್ನಾನಮಾಡಿದ ಹೊರತು ಊಟ ಮಾಡಬಾರದೆಂದು ಕೆಲವರು ಮಧ್ಯಾಹ್ನದ ಹೊತ್ತಿಗೆ ಕೆರೆಗೋ ನದಿಗೋ ಹೋಗಿ ಸ್ನಾನಮಾಡಿ ಅನಂತರ ಊಟ ಮಾಡುತ್ತಾರೆ. ಕೆಲವರು ಮನೆಯಲ್ಲಿಯೇ ಸ್ನಾನಮಾಡಿ ಅನಂತರ ಊಟ ಮಾಡುತ್ತಾರೆ.

ಈ ಜನ ತಮ್ಮ ಜಾತಿಯವರಲ್ಲದೆ ಬೇರೆಯವರು ಮಾಡಿದ್ದನ್ನು ಊಟ ಮಾಡುವುದಿಲ್ಲ. ಈ ಕಾರಣ ಇವರು ಹೊರಗೆ ಊಟ ಮಾಡುವುದೇ ಅಪರೂಪ. ಸಾಮಾನ್ಯವಾಗಿ ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳುತ್ತಾರೆ. ಬನಿಯರ ಅಂಗಡಿಗಳಿಂದ ತಮ್ಮ ಸಾಮಾನುಗಳನ್ನು ತಾವೇ ತಂದುಕೊಳ್ಳುತ್ತಾರೆ. ಬೇರೆಯವರ ಅಂಗಡಿಗಳಲ್ಲಿ ಕೊಳ್ಳುವುದೇ ಇಲ್ಲ.

ಬನಿಯನರು, ಬ್ರಾಹ್ಮಣರು ಮತ್ತು ಕೂರ್ಮಿಗಳು (Courmi?) ತುಪ್ಪ, ಬೇಳೆ, ತರಕಾರಿ, ಸಕ್ಕರೆ ಮತ್ತು ಹಣ್ಣುಗಳನ್ನು ಮಾತ್ರ ಉಪಯೋಗಿಸುತ್ತಾರೆ. ಮೀನು, ಮಾಂಸಗಳನ್ನು ಮುಟ್ಟುವುದಿಲ್ಲ. ನೀರಲ್ಲದೆ ಬೇರೆ ಯಾವುದನ್ನೂ ಕುಡಿಯುವುದಿಲ್ಲ. ಕಾಫಿ, ಟೀಗಳನ್ನು ತಾವೇ ಮಾಡಿಕೊಂಡು ಕುಡಿಯುತ್ತಾರೆ. ಬೇರೆಯವರು ಊಟ ಮಾಡಿದ ತಟ್ಟೆಗಳಲ್ಲಿ ಊಟ ಮಾಡುವುದಿಲ್ಲ. ತಟ್ಟೆಗಳ ಬದಲು ಎಲೆಗಳನ್ನು ಉಪಯೋಗಿಸುತ್ತಾರೆ. ಊಟದ ನಂತರ ಎಂಜಲೆಲೆಗಳನ್ನು ಬಿಸಾಡುತ್ತಾರೆ. ಕೆಲವರು ತಮ್ಮ ಹೆಂಡತಿ ಮಕ್ಕಳ ಮುಂದೂ ಊಟ ಮಾಡದೆ ಒಂಟಿಯಾಗಿ ಊಟ ಮಾಡುತ್ತಾರೆ.

ವರ್ಷದ ಒಂದು ದಿನ ಮಾತ್ರ ಬ್ರಾಹ್ಮಣರು ಹಂದಿ ಮಾಂಸ (hog's flesh) ತಿನ್ನುತ್ತಾರೆಂದು ಗೊತ್ತಾಯಿತು. ಇದನ್ನು ಗುಟ್ಟಾಗಿ ತಿನ್ನುತ್ತಾರಂತೆ. ಹೀಗೆ ಇಡೀ ಇಂಡೀಸಿನಲ್ಲಿ ಮಾಡುತ್ತಾರೆ ಎಂದು ನನ್ನ ಭಾವನೆ.[೧]

ಇದೇ ಬ್ರಾಹ್ಮಣರು ಇನ್ನೊಂದು ಹಬ್ಬದಲ್ಲಿ ಹಿಟ್ಟಿನಿಂದ ಹಸು ಮಾಡಿ, ಅದರ ತುಂಬ ಜೇನುತುಪ್ಪ ತುಂಬಿ, ಅದನ್ನು ವಧೆ ಮಾಡಿ ಅದರ ರಕ್ತವನ್ನು ಅಂದರೆ ಜೇನು ತುಪ್ಪವನ್ನೂ, ಮಾಂಸ ಅಂದರೆ ಹಿಟ್ಟನ್ನೂ ಸೇವಿಸುತ್ತಾರೆ.[೨] ಈ ಆಚರಣೆಯ ಮೂಲವನ್ನು ತಿಳಿಯಲು ನನಗೆ ಸಾಧ್ಯವಾಗಲಿಲ್ಲ. ಕ್ಷತ್ರಿಯರು ಅಥವಾ ರಜಪೂತರು ಕೋಳಿಯೊಂದನ್ನು ಬಿಟ್ಟು ಮೀನು ಮಾಂಸಗಳನ್ನು ತಿನ್ನುತ್ತಾರೆ. ಹಸುವಿನ ಮಾಂಸ ತಿನ್ನುವುದಿಲ್ಲ. ಹಸು ಎಲ್ಲರಿಗೂ ಪೂಜ್ಯವಾದುದು.

ಹಿಂದೂಗಳು ಉಪವಾಸ ಮುಂತಾದ ವ್ರತಾಚರಣೆಯಲ್ಲಿ ನಿಸ್ಸೀಮರು. ಹದಿನೈದು ದಿನಕ್ಕೊಂದು ಸಲ ಇಪ್ಪತ್ತನಾಲ್ಕು ಗಂಟೆಗಳ ಕಾಲ ಉಪವಾಸ ಮಾಡದೆ ಇರುವುದಿಲ್ಲ. ಇದು ಸಾಮಾನ್ಯ ಉಪವಾಸ. ಹಲವರು, ಅದರಲ್ಲಿಯೂ ಹೆಂಗಸರು, ಆರೇಳು ದಿವಸಗಳ ಕಾಲ ಉಪವಾಸಮಾಡುತ್ತಾರೆಂದು ಗೊತ್ತಾಯಿತು. ಕ್ಯಾಂಬೆ ಕಡೆಯಲ್ಲಿ ಬೆಳೆಯುವ 'ಕ್ರಿಯಾತಾ' (Criata) ಎಂಬ ಬೇರನ್ನು ನೀರಿನಲ್ಲಿ ಕುದಿಸಿ ಅದರ ಕಷಾಯವನ್ನು ಮಾತ್ರ ತೆಗೆದುಕೊಳ್ಳುತ್ತಾರೆ. ಈ ಕಷಾಯ ಕಹಿಯಾಗಿರುತ್ತದೆ. ಆದರೆ ಹೊಟ್ಟೆಗೆ ಒಳ್ಳೆಯದು. ಹೀಗೆ ದೀರ್ಘಕಾಲ ಉಪವಾಸ ಕೈಗೊಂಡ ಹೆಂಗಸಿನ ಮನೆಗೆ ಹಲವಾರು ಜನ ಬ್ರಾಹ್ಮಣರು ಹೋಗಿ ಡೋಲು ಬಾರಿಸಿ ಆಕೆ ಉಪವಾಸ ಮುಕ್ತಾಯಮಾಡಬಹುದೆಂದು ಹೇಳಿಬರುತ್ತಾರೆ. ಈ ತರಹ ಉಪವಾಸಗಳನ್ನು ವ್ರತಿಗಳೂ, ಸಾಧುಸಂತರೂ ವಂತ್ರಿತರ ವೈದೀಕರು ಆಗಾಗ ಆಚರಿಸುತ್ತಾರೆ.

ಬಗ್ಲಾನ ಎಂಬ ಸೀಮೆ ದೊಡ್ಡದೇನಲ್ಲ. ಮೊಗಲ್ ಚಕ್ರವರ್ತಿಗೆ ಇದರಿಂದ ಬರುವ ಆದಾಯವೂ ಕಡಮೆ. ಇದರ ಸುತ್ತಲೂ ತೆಲಿಂಗಾ, ಗುಜರಾತ್, ಬಾಲಾಘಾಟ್ ಮತ್ತು ಶಿವಾಜಿಗೆ ಸೇರಿದ ಪರ್ವತ ಪ್ರದೇಶಗಳಿವೆ. ಇದರ ರಾಜಧಾನಿ ಮೌಲೇರ್ (Mouler).[೩]

ಸಮುದ್ರತೀರದ ಜನರು ಅವರು ಹಿಂದೂಗಳಾಗಿರಲಿ ಅಥವಾ ಮಹಮ್ಮದೀಯ ರಾಗಲಿ ಸಮುದ್ರವನ್ನು ಪೂಜಿಸಿ ಅದಕ್ಕೆ ಬಲಿಕೊಟ್ಟೇ ಸಮುದ್ರಯಾನವನ್ನು ಆರಂಭಿಸು ವುದು. ಸೆಪ್ಟಂಬರ್ ತಿಂಗಳ ಕೊನೆಯಲ್ಲಿ ಸಮುದ್ರಕ್ಕೆ ಮಾಡುವ ಇಂಥ ಪೂಜೆಯನ್ನು ನಾನು ನೋಡಿದ್ದೇನೆ. ಮೇ ತಿಂಗಳಿನಿಂದ ಸೆಪ್ಟಂಬರ್‌ವರೆಗೆ ಸಮುದ್ರದ ಮೇಲೆ ಹೋಗುವಂತಿಲ್ಲ. ಸೆಪ್ಟಂಬರಿನಲ್ಲಿ ಸಮುದ್ರದ ಮೇಲೆ ಹೋಗುವ ಮುನ್ನ ಅದಕ್ಕೆ

---

೧. ಇದು ಒಂದು ಕೇಳಿಕೆಯ ಮಾತು. ಇದಕ್ಕೆ ಯಾವ ಆಧಾರವೂ ಇಲ್ಲ.

೨. ಇದು ಪಿಷ್ಟ ಪಶುಯಾಗವೆಂದು ತಿಳಿದುಬರುತ್ತದೆ.

೩. ಇದು ಯಾವುದು ಎಂದು ಸ್ಪಷ್ಟವಾಗುವುದಿಲ್ಲ.

ಎಲ್ಲರೂ ತೆಂಗಿನಕಾಯಿಗಳನ್ನು ಎಸೆಯುತ್ತಾರೆ. ಮತ್ತೆ ಯಾವ ವಿಶೇಷ ಪೂಜೆ ಇಲ್ಲ. ಆಗ ನೋಡಲು ಬಹು ಚೆಂದವಾದುದೆಂದರೆ ಎಸೆದ ತೆಂಗಿನಕಾಯಿಗಳನ್ನು ತೆಗೆದು ಕೊಳ್ಳಲು ಹುಡುಗರು ನೀರಿನಲ್ಲಿ ಮುಳುಗುವುದು ಮತ್ತು ಬಗೆಬಗೆಯ ಆಟಗಳನ್ನಾಡು ವುದು.

ಡೆಕನ್ನಿನ ಬೇರೆ ಕಡೆಗಳಂತೆ ಇಲ್ಲಿಯೂ ಇಂಡಿಯನರು ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡುತ್ತಾರೆ. ಐದಾರು ವರ್ಷದ ಹೆಣ್ಣುಮಕ್ಕಳಿಗೆ ಮದುವೆ ಮಾಡಿ ಮದುವೆಯಾದ ಗಂಡುಗಳಿಗೆ ಹತ್ತುವರ್ಷ ವಯಸ್ಸಾದಾಗ ಪ್ರಸ್ತ ಮಾಡುತ್ತಾರೆ. ಇಷ್ಟು ಚಿಕ್ಕವಯಸ್ಸಿನಲ್ಲಿಯೇ ಮಕ್ಕಳನ್ನು ಹೆರುವ ಹೆಂಗಸಿಗೆ ಮೂವತ್ತುವರ್ಷ ವಯಸ್ಸಿಗೇ ಮಕ್ಕಳಾಗುವುದು ನಿಂತುಹೋಗುತ್ತದೆ. ಆಕೆಯ ಮುಖ ಸುಕ್ಕಿಹೋಗು ತ್ತದೆ. ಈ ಕಾರಣದಿಂದ ಇಂಡೀಸಿನ ಕೆಲವು ಕಡೆ ಮದುವೆಯಾದ ಹದಿನಾಲ್ಕು ವರ್ಷಗಳ ತನಕ ಗಂಡು ಹೆಣ್ಣು ಒಟ್ಟಿಗೆ ಇರಲು ಅವಕಾಶ ಕೊಡುವುದಿಲ್ಲ. ಮಹಮ್ಮದೀಯರಂತೆ ಹಿಂದೂಗಳು ಹಲವಾರು ಹೆಣ್ಣುಗಳನ್ನು ಒಂದೇ ಸಲ ಮದುವೆಯಾಗುವಂತಿಲ್ಲ. ಒಬ್ಬಳು ಸತ್ತಮೇಲೆ ಮಾತ್ರ ಇನ್ನೊಬ್ಬಳನ್ನು ಮದುವೆಯಾಗಬಹುದು. ಆದರೆ ಆಕೆ ವಿಧವೆಯಾಗಿರಬಾರದು. ಅಲ್ಲದೆ ಆಕೆ ಸ್ವಜಾತಿಯವಳಾಗಿರಬೇಕು.

ಹಿಂದೂಗಳು ಮದುವೆಗಳಲ್ಲಿ ಅನೇಕ ಶಾಸ್ತ್ರಗಳನ್ನು ಮಾಡುತ್ತಾರೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಒಂದು ದಿನಕ್ಕೆ ಐನೂರು ಆರುನೂರು ಮದುವೆಗಳಾಗುವು ದುಂಟು. ಇಷ್ಟಾದರೂ ಬೀದಿಗಳಲ್ಲಿ ಸದ್ದುಗದ್ದಲ ಕೇಳಿಸುವುದಿಲ್ಲ. ಏಕೆಂದರೆ, ಮದುವೆ ಗಳು ನಡೆಯುವುದು ಮನೆಯ ಒಳಗಡೆ. ಚಪ್ಪರ ಹಾಕಿ ಅದರ ಅಡಿಯಲ್ಲಿ ಮದುವೆ ನಡೆಸುತ್ತಾರೆ. ಆದರೆ ಮದುವೆಗೆ ಮುಂಚೆ ಊರಿನಲ್ಲೆಲ್ಲಾ ಮೆರವಣಿಗೆ ನಡೆಯುತ್ತದೆ. ಈ ಮೆರವಣಿಗೆಗಳನ್ನು ಅವರವರ ಸ್ಥಾನಮಾನಗಳಿಗೆ ತಕ್ಕಂತೆ ನಡೆಸುತ್ತಾರೆ. ಶೃತಿ, ಮೌರಿ, ತಾಳ, ಮದ್ದಳೆ ಮುಂತಾದ ವಾದ್ಯಗಳು ಮೊಳಗುತ್ತಿರುತ್ತವೆ. ಐದಾರು ವರ್ಷದ ಹುಡುಗರು ಕುದುರೆಗಳ ಮೇಲೂ ಎರಡು ಮೂರು ವರ್ಷದ ಮಕ್ಕಳು ಒಂದೆರಡು ಅಡಿ ಎತ್ತರದ ಗಾಡಿಗಳಲ್ಲಿಯೂ ಕುಳಿತು ಹೋಗುತ್ತವೆ. ಈ ಗಾಡಿಗಳನ್ನು ಆಡುಗಳೋ ಕರುಗಳೋ ಎಳೆಯುತ್ತವೆ. ಇವರ ಹಿಂದೆ ಗಂಡು ದೊಡ್ಡ ಕುದುರೆಯ ಮೇಲೆ ಕುಳಿತು ಬರುತ್ತದೆ. ಅವನ ಕೈಯಲ್ಲಿ ತೆಂಗಿನಕಾಯಿ ಇರುತ್ತದೆ. ಹೊಸ ಉಡುಪನ್ನು ತೊಡಿಸಿ ಮುಖವನ್ನು ಹೂವಿನ ಮಾಲೆಗಳಿಂದಲೋ ಅಥವಾ ಜರತಾರಿ ಯಿಂದಲೋ ಮುಚ್ಚಿರುತ್ತಾರೆ. ನೆಂಟರಿಷ್ಟರು ಸುತ್ತುಗೂಡಿ ಛತ್ರಿ ಚಾಮರಗಳ ಸಮೇತ ಬರುತ್ತಾರೆ.

ಈ ರೀತಿ ಬಹು ವೈಭವದ ಮೆರವಣಿಗೆ ಮಾಡಿದ ಮೇಲೆ ವರನನ್ನು ವಧುವಿನ ಮನೆಗೆ ಕರೆದುಕೊಂಡುಹೋಗಿ ಅಲ್ಲಿ ಮದುವೆ ಮಾಡುತ್ತಾರೆ. ಬ್ರಾಹ್ಮಣನೊಬ್ಬ ಮಂತ್ರ

ಹೇಳುತ್ತಾನೆ. ವಧೂವರರ ಮಧ್ಯೆ ಬಟ್ಟೆಯ ತೆರೆ ಹಿಡಿಯುತ್ತಾರೆ. ಬರಿಗಾಲಿನಿಂದ ವರನು ವಧುವಿನ ಕಾಲನ್ನು ಮೆಟ್ಟುತ್ತಾನೆ. ಇಲ್ಲಿಗೆ ಲಗ್ನ ಆದಂತೆ.

ವಧೂವರರಿಗೆ ಪ್ರಾಪ್ತವಯಸ್ಸು ಆಗುವವರೆಗೆ ಪ್ರಸ್ತ ನಡೆಯುವುದಿಲ್ಲ. ಅದು ನಡೆದ-ಮೇಲೆ ಹೆಣ್ಣನ್ನು ಗಂಡನ ಮನೆಗೆ ಬಳುವಳಿಗಳೊಂದಿಗೆ ವಾದ್ಯಸಮೇತ ಕಳುಹಿಸಿ ಕೊಡುತ್ತಾರೆ. ಸಂಸಾರಕ್ಕೆ ಬೇಕಾದ ಸಾಮಾನು ಸಲಕರಣೆಗಳ ಜೊತೆಗೆ, ಮುಂದೆ ಹುಟ್ಟುವ ಮಗುವಿಗೆ ಒಂದು ತೊಟ್ಟಿಲನ್ನೂ ಕೊಡುತ್ತಾರೆ. ಗಂಡನ ಮನೆಯಲ್ಲಿ ಏಳೆಂಟು ದಿನಗಳ ತನಕ ಊಟೋಪಚಾರಗಳು ನಡೆಯುತ್ತವೆ.

ಇಂಡೀಸಿನ ಹೆಂಗಸರು ಚಿಕ್ಕವಯಸ್ಸಿನಲ್ಲಿಯೇ ಗರ್ಭಿಣಿಯರಾಗುತ್ತಾರೆ. ಏಕೆಂದರೆ, ಇವರು ಊಟೋಪಚಾರಗಳಲ್ಲಿ ತುಂಬಾ ಮಿತಿ. ಹೆರಿಗೆಯಾದ ಮಾರನೆಯ ದಿನವೇ ಕೆಲವರು ನದಿಗೆ ಹೋಗಿ ಸ್ನಾನಮಾಡಿಕೊಂಡು ಬರುತ್ತಾರೆ. ಮಕ್ಕಳನ್ನೂ ಅಷ್ಟೇ ಸರಳವಾಗಿ ಸಾಕುತ್ತಾರೆ. ಅವು ಏಳು ವರ್ಷದ ತನಕ ಬೆತ್ತಲೆಯಾಗಿಯೇ ತಿರುಗುತ್ತವೆ. ಹುಟ್ಟಿದ ಮಕ್ಕಳು ಎರಡು ಮೂರು ತಿಂಗಳಿಗೇ ತೆವಳುತ್ತವೆ. ಮಲಮೂತ್ರ ಮಾಡಿ ಕೊಂಡರೆ ತೊಳೆಯುತ್ತಾರೆ. ಬರುಬರುತ್ತ ಅವು ನಮ್ಮ ಮಕ್ಕಳಂತೆ ಸಲೀಸಾಗಿ ನಡೆಯುವುದನ್ನು ಕಲಿಯುತ್ತವೆ. ಹೆಚ್ಚಿನ ಬಟ್ಟೆಬರೆಗಳ ತಾಪತ್ರಯವಿಲ್ಲದೆ ಈ ರೀತಿ ಮಕ್ಕಳನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡುತ್ತಾರೆ.

ಗಂಡ ಸತ್ತರೆ ಹೆಂಡತಿ ಮತ್ತೊಬ್ಬನನ್ನು ಮದುವೆಯಾಗುವಂತಿಲ್ಲ. ವಿಧವೆ ಯಾದವಳು ತಲೆಗೂದಲನ್ನು ಬೋಳಿಸಿಕೊಳ್ಳಬೇಕು. ಆಕೆ ಐದಾರು ವರ್ಷ ವಯಸ್ಸಿ ನಲ್ಲಿಯೇ ವಿಧವೆಯಾದರೂ ಇದೇ ಗತಿ. ವಿಧವೆಯಾದ ಹೆಂಗಸು ಎಲ್ಲರ ತಿರಸ್ಕಾರಗಳಿಗೆ ಗುರಿಯಾಗಿ ತನ್ನ ಕಷ್ಟದ ಬಾಳನ್ನು ನೀಗಬೇಕು. ಎಲ್ಲೋ ಕೆಲವರು ಮಾತ್ರ ತಪ್ಪುದಾರಿ ಹಿಡಿಯುತ್ತಾರೆ. ಆದರೆ ಅಂಥವರಿಗೆ ಸಮಾಜದಲ್ಲಿ ಸ್ಥಾನವಿಲ್ಲ. ಮದುವೆಯಾಗ ಬೇಕೆನ್ನುವ ವಿಧವೆಯರಿಗೆ ತಮ್ಮ ಜಾತಿಯಲ್ಲಿ ಯಾವ ಗಂಡೂ ಸಿಕ್ಕುವುದಿಲ್ಲ. ಅಂಥವರು ಕ್ರೈಸ್ತನನ್ನೋ ಮಹಮ್ಮದೀಯನನ್ನೋ ಮದುವೆಯಾಗಬೇಕಾಗುತ್ತದೆ. ಹಾಗೆ ಮಾಡಿ ದಲ್ಲಿ ಅವರು ತಮ್ಮ ಜಾತಿಯನ್ನು ಬಿಟ್ಟಂತೆಯೇ. ಒಟ್ಟಿನಲ್ಲಿ, ಗಂಡನೊಡನೆ ಸಹಗಮನ ಮಾಡಿದರೆ ಅದೊಂದು ಮಹಾಭಾಗ್ಯವೆಂದೇ ಹಿಂದೂಗಳ ಭಾವನೆ. ಇದಕ್ಕೆ ಕಾರಣ ಕೇಳಿದರೆ ಇದು ತಮ್ಮ ಪ್ರಾಚೀನ ಪದ್ಧತಿ ಎಂದು ಹೇಳುತ್ತಾರೆ. ಇಂಡೀಸಿನಲ್ಲಿ ಯಾವಾ ಗಲೂ ಹೀಗೆಯೇ ಇತ್ತು ಎಂಬಂತೆ ನಟಿಸುತ್ತಾರೆ. ಈ ರೀತಿ ತಮ್ಮ ಕರಾಳ ಕೃತ್ಯವನ್ನು ಪ್ರಾಚೀನತೆಯ ಮುಸುಕಿನಲ್ಲಿ ಮುಚ್ಚುತ್ತಾರೆ. ಗಂಡಸು ಅಥವಾ ಹೆಂಗಸು ಜಾತಿಯಿಂದ ಬಹಿಷ್ಕಾರವಾಗಬೇಕಾದಂತಹ ತಪ್ಪುಮಾಡಿದರೆ—ಉದಾಹರಣೆಗೆ, ಹೆಂಗಸೊಬ್ಬಳು ಮಹಮ್ಮದೀಯನ ಸಂಗಮಾಡಿದರೆ—ಅಂಥವಳು ಕೆಲವು ಕಾಲ ಸಗಣಿಯಲ್ಲಿ ಸಿಕ್ಕುವ ಕಾಳುಕಡ್ಡಿಗಳನ್ನು ತಿಂದು ಕಾಲಹಾಕಬೇಕು.

ಸತ್ತಾಗ ಶವವನ್ನು ತೊಳೆದು ದಹನ ಮಾಡುತ್ತಾರೆ. ಬೂದಿಯನ್ನು ನೀರಿಗೆ

ಬಿಡುತ್ತಾರೆ. ಕೆಲವು ಕಡೆ ಹೂಳುವುದೂ ಉಂಟು. ಈ ರೀತಿ ಹೂಳುವುದು ಒಂದೊಂದು ಕಡೆ ಒಂದೊಂದು ಬಗೆ ಇರುತ್ತದೆ. ಹೆಂಡತಿ ಸತ್ತ ಗಂಡನೊಡನೆ ಸಹಗಮನ ಮಾಡುವುದೂ ಉಂಟು. ಕೆಲವು ಕಡೆ ಅಗ್ನಿಕುಂಡವನ್ನು ಸಿದ್ಧಪಡಿಸಿ ಗಂಡನ ಶವವನ್ನು ಅದರಲ್ಲಿ ಇಟ್ಟಮೇಲೆ ಬ್ರಾಹ್ಮಣರು ಹೆಂಗಸನ್ನು ಅದರಲ್ಲಿ ನೂಕುತ್ತಾರೆ. ಅವಳ ಜೊತೆ ಆಕೆಯ ಸೇವಕಿಯರೂ ಬೀಳುವುದುಂಟು. ಮತ್ತೆ ಕೆಲವು ಕಡೆ ಶವಗಳನ್ನು ಗುಂಡಿಯಲ್ಲಿ ಚಕ್ಕಲು ಬೊಕ್ಕಲಾಗಿ ಕುಳ್ಳಿರಿಸಿ ಅದೇ ಗುಂಡಿಯಲ್ಲಿ ಹೆಂಡತಿಯನ್ನೂ ಕುಳ್ಳಿರಿಸಿ ಮಣ್ಣು ತುಂಬುತ್ತಾರೆ. ಕುತ್ತಿಗೆಯವರೆಗೆ ಮಣ್ಣು ತುಂಬಿದ ಮೇಲೆ ಬ್ರಾಹ್ಮಣರು ಅವಳ ಕತ್ತು ಹಿಸುಕಿ ಸಾಯಿಸುತ್ತಾರೆ. ಹೀಗೆ, ಇಂಡೀಸಿನಲ್ಲಿ ಶವ ಸಂಸ್ಕಾರ ರೀತಿಗಳು ನಾನಾ ಬಗೆಯಾಗಿವೆ. ಸಹಗಮನ ಮಾಡುವ ಆ ಹುಚ್ಚು ಹೆಂಗಸರನ್ನು ನೋಡಿದರಂತೂ ಮನಸ್ಸಿಗೆ ತುಂಬಾ ವ್ಯಸನವಾಗುತ್ತದೆ. ಅದನ್ನೆಲ್ಲಾ ಹೇಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಕ್ಷಮಿಸಬೇಕು.

ಆದರೆ ಮಹಮ್ಮದೀಯರು ಇಂಡೀಸಿನ ಒಡೆಯರಾಗಿರುವುದು ಹೆಂಗಸರ ಅದೃಷ್ಟವೆಂದೇ ಹೇಳಬೇಕು. ಬ್ರಾಹ್ಮಣರ ಕ್ರೌರ್ಯದಿಂದ ಬಿಡುಗಡೆಯಾದೆವಲ್ಲಾ ಎಂದು ಆ ಬಡಪಾಯಿ ಹೆಂಗಸರು ಸಂತೋಷಪಡುತ್ತಾರೆ. ಹೆಂಗಸರು ಸಹಗಮನ ಮಾಡಿದರೆ ಸಾಕಲ್ಲಾ ಎಂದು ಬ್ರಾಹ್ಮಣರು ಕಾಯುತ್ತಿರುತ್ತಾರೆ. ಏಕೆಂದರೆ, ಸಹಗಮನ ಮಾಡುವವರು ತಮ್ಮ ಸಮಸ್ತ ಚಿನ್ನ ಬೆಳ್ಳಿ ಒಡವೆಗಳ ಸಮೇತ ಅಗ್ನಿಯಲ್ಲಿ ಬೀಳುತ್ತಾರೆ. ಬೂದಿಯನ್ನು ಬ್ರಾಹ್ಮಣರಲ್ಲದೆ ಬೇರೆಯವರು ತೆಗೆಯುವಂತಿಲ್ಲ. ಆಗ ಅದರಲ್ಲಿ ಸಿಕ್ಕುವ ಬೆಲೆಯಾದ ಒಡವೆ ವಸ್ತುಗಳೆಲ್ಲಾ ಬ್ರಾಹ್ಮಣರ ಪಾಲು. ಈಗ ಮೊಗಲ್ ಚಕ್ರವರ್ತಿಯೂ ಅವನ ಮಹಮ್ಮದೀಯ ಅಧೀನ ರಾಜರೂ ಈ ಕೆಟ್ಟ ಸಹಗಮನ ಪದ್ಧತಿಯನ್ನು ತಪ್ಪಿಸಲು ತಮ್ಮ ಶಕ್ತಿಮೀರಿ ಪ್ರಯತ್ನಮಾಡುತ್ತಿದ್ದಾರೆ. ಇದನ್ನು ನಿಲ್ಲಿಸಬೇಕೆಂದು ತಮ್ಮ ನವಾಬರಿಗೆಲ್ಲ ಆಜ್ಞೆ ಮಾಡಿದ್ದಾರೆ. ಆದರೂ ಜೆಂಟಿಲರು ಈ ನವಾಬರಿಗೆ ದಮ್ಮಯ್ಯಗುಡ್ಡೆ ಹಾಕಿ ಕೈತುಂಬ ಹಣ ಕೊಟ್ಟು ಸಹಗಮನಕ್ಕೆ ಅನುಮತಿ ಪಡೆಯುತ್ತಾರೆ. ಅವರು ಕೇಳಿದಷ್ಟು ಕೊಡಲಾಗದ ಅನೇಕ ಹೆಂಗಸರು ಆ ಅಸಹ್ಯ ಜಾತಿ ಪದ್ಧತಿಯಿಂದ ಮುಕ್ತರಾಗಿ ಇರುವಷ್ಟು ದಿವಸ ಹೇಗೋ ಕಾಲತಳ್ಳುತ್ತಾರೆ.

ಇಂಡಿಯನ್ನರು ಹೇಳುವುದನ್ನು ನಂಬುವುದಾದರೆ, ಇಲ್ಲಿಯವರೆಗೆ ಡೆಕ್ಕನ್ ಅತ್ಯಂತ ಶಕ್ತಿಯುತ ರಾಜ್ಯವಾಗಿತ್ತು. ಕ್ಯಾಂಬೆ ಮತ್ತು ಬಂಗಾಳಕೊಲ್ಲಿ ಇವುಗಳ ಮಧ್ಯೆ ಇರುವ ದೊಡ್ಡ ಭೂಶಿರವೆಲ್ಲವೂ ಅದಕ್ಕೆ ಸೇರಿ ಒಬ್ಬ ರಾಜನ ಅಧೀನದಲ್ಲಿತ್ತು. ಉತ್ತರಕ್ಕಿರುವ ಬಾಲಾಘಾಟ್, ತೆಲಿಂಗಾ ಮತ್ತು ಬಗ್ಲಾನಾ ಪ್ರಾಂತ್ಯಗಳೂ ಅದಕ್ಕೆ ಸೇರಿದ್ದುವು. ಒಟ್ಟಿನಲ್ಲಿ ಡೆಕ್ಕನ್ ರಾಜನಿಗಿಂತ ಹೆಚ್ಚು ಶಕ್ತಿವಂತನಾದ ರಾಜ ಇಂಡೀಸಿನಲ್ಲಿ ಬೇರೆ ಇರಲಿಲ್ಲ. ಕಾಲ ಕಳೆದಂತೆ ಈ ರಾಜ್ಯ ಒಡೆದುಹೋಯಿತು. ಕಳೆದ ಶತಮಾನದ ಆದಿಯಲ್ಲಿ ಪೋರ್ಚುಗೀಸರು ತಮ್ಮ ರಾಜ್ಯ ಸ್ಥಾಪನೆ ಮಾಡಿದಾಗ ಮಲಬಾರ್ ತೀರದಲ್ಲಿ

ಕ್ಯಾಲಿಕಟ್, ಕೊಚಿನ್, ಕನ್ನಾನೂರು ಮತ್ತು ಕ್ವಿಲಾನ್‌ಗಳಲ್ಲಿ ರಾಜರುಗಳ ಆಧಿಪತ್ಯ ಇತ್ತು. ವಿಜಯನಗರದಲ್ಲಿ ಮತ್ತೊಬ್ಬನು ರಾಜ್ಯಭಾರ ಮಾಡುತ್ತಿದ್ದ. ಅವನನ್ನೇ ಡೆಕ್ಕನ್ ರಾಜನೆಂದು ಕರೆಯುತ್ತಿದ್ದುದು. ಅವನ ರಾಜ್ಯವು ಕ್ಯಾಂಬೆ ಅಂದರೆ ಗುಜರಾತಿನ ಆಚೆಗೂ ಮತ್ತು ಗೋವಾ ಗಡಿಯವರೆಗೂ ಹಬ್ಬಿತ್ತು. ಆದರೆ ಕ್ಯಾಂಬೆ ಮತ್ತು ಗೋವಾ ಅವನಿಗೆ ಸೇರಿರಲಿಲ್ಲ.

ವಾಸ್ಕೋಡ ಗಾಮನ ಮೂಲಕ ಪೋರ್ಚುಗೀಸರು ಇಂಡೀಸಿನಲ್ಲಿ ಮೊದಲು ಕಂಡುಹಿಡಿದ್ದ ಸ್ಥಳ ಕ್ಯಾಲಿಕಟ್. ಅದು ೧೪೯೮ರಲ್ಲಿ ಪೋರ್ಚುಗೀಸರನ್ನು ಮೊದಲಿಗೆ ಸ್ನೇಹದಿಂದ ಬರಮಾಡಿಕೊಂಡ ಕ್ಯಾಲಿಕಟ್ ರಾಜ ಅರೇಬಿಯಾ ವರ್ತಕರ ಚಿತಾವಣೆ ಯಿಂದ ಅವರನ್ನು ನಾಶಮಾಡಲು ಪ್ರಯತ್ನಪಟ್ಟ. ಅವನಿಗೂ ಪೋರ್ಚುಗೀಸರಿಗೂ ಭಾರಿ ಯುದ್ಧಗಳೇ ಆದುವು. ಕೊನೆಗೆ ಕೊಚಿನ್ ರಾಜ ಪೋರ್ಚುಗೀಸರೊಡನೆ ಸಂಧಿ ಮಾಡಿಕೊಳ್ಳಬೇಕಾಯಿತು. ಇವನ ಜೊತೆಗೆ ಕನ್ನಾನೂರು ಮತ್ತು ಕ್ವಿಲಾನ್ ರಾಜರುಗಳೂ ಪೋರ್ಚುಗೀಸರನ್ನು ಆಹ್ವಾನಿಸಿ ತಮ್ಮೊಡನೆ ವ್ಯಾಪಾರ ನಡೆಸಬೇಕೆಂದು ಕೇಳಿಕೊಂಡರು.

ಈ ಎಲ್ಲಾ ರಾಜರುಗಳ ನಾಡಾದ ಮಲಬಾರ್ ಕನಾನೂರಿನಿಂದ ಆರಂಭವಾಗಿ ಕೇಪ್ ಕೊಮರಿಯಲ್ಲಿ ಅಂತ್ಯವಾಗುತ್ತದೆ. ಈ ರಾಜರುಗಳಲ್ಲಿ ಬಲಾಢ್ಯನಾದವನೆಂದರೆ ಕ್ಯಾಲಿಕಟ್ ರಾಜ. ಇವನು 'ಜಾಮೊರಿನ್' ಅಂದರೆ ಚಕ್ರವರ್ತಿ ಎಂಬ ಬಿರುದು ಪೊಂದಿದ್ದಾನೆ. ಪೋರ್ಚುಗೀಸರು ಇಂಡೀಸಿಗೆ ಬರುವ ಮುನ್ನ ಕ್ಯಾಲಿಕಟ್ ಬಂದರಿಗೆ ಎಲ್ಲಾ ಕಡೆಗಳಿಂದಲೂ ಹಡಗುಗಳು ಬರುತ್ತಿದ್ದುವು. ಕ್ಯಾಲಿಕಟ್ ಸುತ್ತ ಕೋಟೆ ಇಲ್ಲ. ಏಕೆಂದರೆ, ಕೋಟೆಯ ಗೋಡೆಗೆ ಸರಿಯಾದ ತಳಪಾಯವೇ ಸಿಕ್ಕುವುದಿಲ್ಲ. ರಾಜನ ಅರಮನೆ ಮತ್ತು ಕೆಲವು ದೇವಸ್ಥಾನಗಳನ್ನು ಬಿಟ್ಟರೆ ಕ್ಯಾಲಿಕಟ್‌ನಲ್ಲಿ ಒಳ್ಳೆಯ ಮನೆಗಳಿಲ್ಲ. ಮನೆಗಳು ಬಿಡಿ ಬಿಡಿಯಾಗಿವೆ. ಸುಂದರವಾದ ತೋಟ ತುಡುಕೆಗಳಿವೆ. ಜೀವನಕ್ಕೆ ಬೇಕಾದುದೆಲ್ಲಾ ಸಮೃದ್ಧಿಯಾಗಿ ಸಿಕ್ಕುತ್ತವೆ.

ಪೋರ್ಚುಗೀಸರ ಗಾಢ ಸ್ನೇಹಿತನೆಂದರೆ ಕೊಚಿನ್ ರಾಜ. ಅವರಿಗೋಸ್ಕರವಾಗಿ ಈತ ಕ್ಯಾಲಿಕಟ್ ರಾಜನ ಮೇಲೆ ಯುದ್ಧಮಾಡಿ ತನ್ನ ರಾಜ್ಯವನ್ನೇ ಕಳೆದುಕೊಳ್ಳ ಬೇಕಾಯಿತು. ಆದರೆ ಅನಂತರ ಪೋರ್ಚುಗೀಸರು ಅದನ್ನು ಅವನಿಗೆ ಗೆದ್ದುಕೊಟ್ಟರು. ಜೊತೆಗೆ ಇನ್ನಷ್ಟು ಪ್ರದೇಶವನ್ನೂ ಸಂಪಾದಿಸಿಕೊಟ್ಟರು. ಈ ಕಾರಣದಿಂದ ಕೊಚ್ಚಿನ್ ರಾಜನು ತನ್ನ ಊರಿನಲ್ಲಿ ಕೋಟೆ ಕಟ್ಟಲು ಪೋರ್ಚುಗೀಸರಿಗೆ ಅನುಮತಿ ಕೊಟ್ಟನು. ಈ ಕೋಟೆ ಪೋರ್ಚುಗೀಸರ ಕೈಯಲ್ಲಿ ಇಲ್ಲಿಯವರೆಗೂ ಇದ್ದು ಮೂರು ನಾಲ್ಕು ವರ್ಷಗಳ ಕೆಳಗೆ ಡಚ್ಚರ ವಶವಾಯಿತು. ಪೋರ್ಚುಗೀಸರಿದ್ದ ಪಟ್ಟಣದ ಪ್ರದೇಶವನ್ನು 'ಕೆಳಗಿನ ಕೊಚಿನ್' ಎಂತಲೂ, ರಾಜನು ಇದ್ದ ಪ್ರದೇಶವನ್ನು 'ಮೇಲಿನ ಕೊಚಿನ್' ಎಂತಲೂ ಕರೆಯುತ್ತಾರೆ.

ಕೊಚಿನ್ ಉತ್ತಮವಾದ ಬಂದರು. ಇಲ್ಲಿ ಮೆಣಸು ಹೇರಳವಾಗಿ ಬೆಳೆಯುತ್ತದೆ. ಅದು ಬಿಟ್ಟರೆ ಬೇರೇನೂ ಇಲ್ಲಿ ಬೆಳೆಯುವುದಿಲ್ಲ. ಕೊಚಿನ್ ಸೀಮೆಯಲ್ಲಿ ಆನೆಕಾಲಿನಂತಹ ಕಾಲುಗಳುಳ್ಳ ಜನ ಇದ್ದಾರೆ. ನಾನು ಕೊಚಿನ್‌ನಲ್ಲಿ ಅಂಥ ಕಾಲುಳ್ಳ ಮನುಷ್ಯನೊಬ್ಬನನ್ನು ಕಂಡೆ. ಈ ರಾಜ್ಯದಲ್ಲಿ ಮಗನು ಅಪ್ಪನ ಆಸ್ತಿಗೆ ವಾರಸುದಾರನಲ್ಲ. ಏಕೆಂದರೆ, ಇಲ್ಲಿಯ ಪದ್ಧತಿಯಂತೆ ಒಬ್ಬ ಹೆಂಗಸಿಗೆ ಗಂಡ ಒಬ್ಬನಲ್ಲ, ಹಲವಾರು ಜನ. ಮಗು ಯಾರಿಗೆ ಹುಟ್ಟಿತೆಂದು ಗೊತ್ತಾಗದ ಕಾರಣ ಸಹೋದರಿಯ ಮಕ್ಕಳು ಆಸ್ತಿಗೆ ವಾರಸುದಾರರು. ಏಕೆಂದರೆ, ಹೆಂಗಸಿನ ವಾವೆಯ ಬಗ್ಗೆ ಅನುಮಾನ ಇಲ್ಲವಷ್ಟೆ. ಸಹೋದರಿಯರು, ಅವರು ರಾಜನ ಸಹೋದರಿಯರಾಗಿದ್ದರೂ ಕೂಡ, ತಮಗೆ ಇಷ್ಟಬಂದ ನಾಯರ್‌ಗಳ ಅಥವಾ ಪರಪುರುಷರ ಸಂಗ ಮಾಡಬಹುದು. ಒಬ್ಬನು ಆಕೆಯೊಡನಿರುವಾಗ ಅವನು ತನ್ನ ಕೋಲನ್ನೋ ಅಥವಾ ಕತ್ತಿಯನ್ನೋ ಬಾಗಿಲ ಹೊರಗೆ ಬಿಟ್ಟಿರುತ್ತಾನೆ. ಆಗ ಮತ್ತೊಬ್ಬನು ಒಳಗೆ ಪ್ರವೇಶಿಸುವಂತಿಲ್ಲ. ಈ ಪದ್ಧತಿ ಮಲಬಾರಿನಲ್ಲೆಲ್ಲಾ ಇದೆ.

ಈಗ ಡಚ್ಚರು ಹಿಂದಿನ ರಾಜನನ್ನು ಕೆಳಗಿಳಿಸಿ ಅವನ ಸಂಬಂಧಿಯೊಬ್ಬನನ್ನು ಪಟ್ಟಕ್ಕೇರಿಸಿ ಅವನಿಗೆ ಕ್ಯಾಲಿಕಟ್ ರಾಜನ ಬಿರುದಾದ 'ಸಾಮೋರಿನ್' ಎಂಬ ಬಿರುದನ್ನು ಕೊಟ್ಟಿದ್ದಾರೆ. ಕೊಚಿನ್ನಿನ ನಿಜವಾದ ರಾಜ ತನೂರ್ ಎಂಬ ಸ್ಥಳದಲ್ಲಿದ್ದಾನೆ.

ನಾನು ಮೇಲೆ ತಿಳಿಸಿದ ನಾಯರ್‌ಗಳಿಗೆ ತಮ್ಮ ದೊಡ್ಡಸ್ತಿಕೆಯ ಬಗ್ಗೆ ಭಾರಿ ಬಿಂಕ. ತಾವು ಸೂರ್ಯವಂಶಸ್ಥರೆಂದು ಅವರು ಹೇಳಿಕೊಳ್ಳುತ್ತಾರೆ. ಪೋರ್ಚುಗೀಸರಲ್ಲದೆ ಬೇರೆಯವರಿಗೆ ತಮ್ಮ ಸ್ಥಾನ ಬಿಟ್ಟುಕೊಡುವುದಿಲ್ಲ. ಒಮ್ಮೆ ಇವರಿಬ್ಬರಲ್ಲಿ ಯಾರು ಮೇಲು ಎಂಬ ವಾಗ್ವಾದ ಹುಟ್ಟಿತು. ಇದನ್ನು ತೀರ್ಮಾನಿಸಲು ಪೋರ್ಚುಗೀಸ್ ಸೇನಾಧಿಪತಿಯೂ ಕೊಚಿನ್ ರಾಜನೂ ಒಂದು ದ್ವಂದ್ವ ಯುದ್ಧವನ್ನೇರ್ಪಡಿಸಿದರು. ಇದರಲ್ಲಿ ನಾಯರ್ ಸೋತುಹೋದ. ಆಗ ನಾಯರ್‌ಗಳು ತಮ್ಮ ಪ್ರಥಮ ಸ್ಥಾನವನ್ನು ಪೋರ್ಚುಗೀಸರಿಗೆ ಬಿಟ್ಟುಕೊಟ್ಟರು.

ನಾಯರ್‌ಗಳು ಸೊಂಟದಿಂದ ಕೆಳಕ್ಕೆ ಒಂದು ತುಂಡು ಬಟ್ಟೆಯಲ್ಲದೆ ಬೇರೆ ಬಟ್ಟೆ ಹಾಕುವುದಿಲ್ಲ. ತಲೆಗೆ ಪೇಟ ಕಟ್ಟುತ್ತಾರೆ. ಅವರ ಕೈಯಲ್ಲಿ ಯಾವಾಗಲೂ ಬಿಚ್ಚುಗತ್ತಿ, ಗುರಾಣಿ ಇರುತ್ತವೆ. ಹೆಂಗಸರ ಉಡುಪು ಸಹ ಗಂಡಸರ ಉಡುಪಿನಂತೆಯೆ. ರಾಣಿಯ ಉಡುಪೂ ಅಷ್ಟೆ. ನಾಯರುಗಳಲ್ಲಿ ವಿವಿಧ ಅಂತಸ್ತುಗಳಿವೆ. ಮೇಲಿನ ಅಂತಸ್ತಿನವರಿಗೆ ಕೆಳಗಿನ ಅಂತಸ್ತಿನವರು ತಮ್ಮ ಸ್ಥಾನ ಬಿಟ್ಟುಕೊಡುತ್ತಾರೆ.

ಹಿಂದೂಗಳಲ್ಲಿ ಒಂದು ಜಾತಿಯಾದ (ಹೊಲೆಯ) ಎಂಬುವರನ್ನು ಕಂಡರೆ ನಾಯರ್‌ಗಳಿಗೆ ಆಗುವುದಿಲ್ಲ. ಅವರ ಉಸಿರು ತಗುಲಿದರೂ ತಮಗೆ ಮೈಲಿಗೆಯಾಯಿತೆಂದು ಭಾವಿಸುತ್ತಾರೆ. ಮೈಲಿಗೆ ಮಾಡಿದ ಹೊಲೆಯನನ್ನು ಕೊಂದೇ ತೀರಬೇಕು. ಹಾಗೆ ಕೊಲ್ಲದೇಹೋದ ನಾಯರನನ್ನು ರಾಜನು ಕೊಲ್ಲಿಸುತ್ತಾನೆ. ಹೊಲೆಯನನ್ನೂ

ಕ್ಷಮಿಸಿದ ನಾಯರ್‌ನನ್ನೂ ರಾಜನು ಗುಲಾಮತನಕ್ಕೆ ದೂಡುತ್ತಾನೆ. ಇಷ್ಟಲ್ಲದೆ ಆತ ಬಹಿರಂಗವಾಗಿ ಶಾಸ್ತ್ರಾನುಸಾರ ಶುದ್ಧೀಕರಣ ಮಾಡಿಕೊಳ್ಳಬೇಕು.

ಇಂತಹ ಅನಾಹುತ ಆಗಬಾರದೆಂದು ಹೊಲೆಯರು ತಾವೆಲ್ಲಿ ಹೋದರೂ 'ಪೋ ಪೋ' (ಹೋಗಿ, ಹೋಗಿ) ಎಂದು ಒಂದೇ ಸಮನೆ ಕೂಗಿಕೊಳ್ಳುತ್ತಾರೆ. ಇದನ್ನು ಕೇಳಿದ ನಾಯರ್‌ಗಳು ಕೌ ಕೌಯಾ (Cou Couya = ಹೊಯ್, ಹೊಯ್) ಎಂದು ಹೇಳುತ್ತಾರೆ. ಆಗ ಹೊಲೆಯರು ಹತ್ತಿರದಲ್ಲೆಲ್ಲೋ ನಾಯರ್‌ಗಳು ಇದ್ದಾರೆಂದರಿತು ದಾರಿ ಬಿಟ್ಟು ಹೋಗುತ್ತಾರೆ. ಈ ಹೊಲೆಯರು ಊರೊಳಗೆ ಬರುವಂತಿಲ್ಲ. ಅವರಿಗೆ ಸಾಮಾನು ಗೀಮಾನು ಬೇಕಾದರೆ ಊರ ಹೊರಗೆ ನಿಂತು ಕೇಳಿ ತೆಗೆದುಕೊಳ್ಳಬೇಕು. ಗೊತ್ತಾದ ಸ್ಥಳದಲ್ಲಿ ದುಡ್ಡಿಟ್ಟು ತನಗೇನು ಸಾಮಾನು ಬೇಕೆಂಬುದನ್ನು ಕೂಗಿ ಹೇಳಿ ದೂರ ನಿಲ್ಲುತ್ತಾನೆ. ಅಂಗಡಿಯವನು ಸಾಮಾನು ತಂದು ಅಲ್ಲಿಟ್ಟು ದುಡ್ಡು ತೆಗೆದು ಕೊಂಡು ಹೋದನಂತರ ಹೊಲೆಯನು ಬಂದು ಸಾಮಾನು ಎತ್ತಿಕೊಂಡುಹೋಗುತ್ತಾನೆ.

ಯುದ್ಧದಲ್ಲಿ ಕುದುರೆಗಳನ್ನು ಉಪಯೋಗಿಸುವುದಿಲ್ಲ. ಕೊಚಿನ್‌ನಲ್ಲಾಗಲೀ ಮಲಬಾರಿನ ಇತರ ಕಡೆಗಳಲ್ಲಾಗಲೀ ಕುದುರೆಗಳ ಉಪಯೋಗವಿಲ್ಲ. ಅವುಗಳ ಬದಲು ಇಲ್ಲಿಯ ಬೆಟ್ಟಗಳಲ್ಲಿ ಅಸಂಖ್ಯಾತವಾಗಿ ಸಿಕ್ಕುವ ಆನೆಗಳನ್ನು ಉಪಯೋಗಿಸು ತ್ತಾರೆ. ಈ ಆನೆಗಳು ಇಡೀ ಇಂಡೀಸಿನಲ್ಲಿಯೇ ದೊಡ್ಡವು.

ಕ್ವಿಲಾನ್ ಮತ್ತು ಕೊಚಿನ್‌ಗಳಲ್ಲಿ ಅನೇಕ ಸೆಂಟ್ ಥಾಮಸ್ ಕ್ರೈಸ್ತರಿದ್ದಾರೆ. ತಾವು ತಮ್ಮ ಮತಾನುಸಾರ ನಡೆದುಕೊಂಡು ಬರುತ್ತಿದ್ದೇವೆಂದು ನಟಿಸುತ್ತಾರೆ. ಸೆಂಟ್ ಥಾಮಸ್‌ನಿಂದ (ಮದ್ರಾಸ್) ಮಧುರೆಯವರೆಗೆ ಹಬ್ಬಿರುವ ಪ್ರದೇಶದಲ್ಲಿಯೂ ಅನೇಕ ಕ್ರೈಸ್ತರಿದ್ದಾರೆ. ಚರ್ಚ್‌ನಲ್ಲಿ ಹೇಳುವ ಮಂತ್ರಗಳು ಸಿರಿಯಾ ಭಾಷೆಯಲ್ಲಿವೆ. ಇವರೂ ಇಲ್ಲಿರುವ ಯಹೂದಿ ಸಂಸಾರಗಳೂ ಕೊಚ್ಚಿನ್ ರಾಜನ ಪ್ರಜೆಗಳು.

ಕಾರ್ಗೆಲಾನ್ (Cargelan) ಎಂಬ ಒಂದು ಸಣ್ಣ ರಾಜ್ಯವಿದೆಯಂತೆ. ಕನ್ನಾನೂರಿನ ಬಳಿ ಇರುವ ಬಡಗರಾ, ಕೊತ್ತಕ್ಕಲ್ ಮತ್ತು ಮುತ್ತುಂಗರ್ ಎಂಬ ಸ್ಥಳಗಳಲ್ಲಿರುವ ಮಲಬಾರಿಗಳೇ ಮುಖ್ಯ ಕಡಲುಗಳ್ಳರು. ಈ ಪ್ರಾಂತದಲ್ಲಿ ಅನೇಕ ದರೋಡೆಕಾರರೂ ಇದ್ದಾರೆ. ನ್ಯಾಯಾಧಿಕಾರಿಗಳೂ ಇವರನ್ನು ನಿರ್ಮೂಲಮಾಡ ಬೇಕೆಂದರೂ ಸಾಧ್ಯವಾಗಿಲ್ಲ. ಎಂಥ ಕ್ರೂರ ಶಿಕ್ಷೆಗೂ ಹೇಸದ ಜನ ಇವರು. ನಿಜ ಹೇಳಬೇಕೆಂದರೆ, ಒಬ್ಬ ಒಂದೇ ಒಂದು 'ಬೆಟ್ಲೀ' ಎಲೆ (betlie = ವೀಳೆಯದೆಲೆ) ಕದ್ದರೂ ಅವನಿಗೆ ಮರಣ ದಂಡನೆ ವಿಧಿಸುತ್ತಾರೆ. ಕೈಗಳನ್ನು ಕಟ್ಟಿ ಮಖಾಡೆ ಮಲಗಿಸಿ ಅಡಕೆಯ ದಸಿಯನ್ನು ಬೆನ್ನಿನಿಂದ ಆಚೆಗೆ ಹೊರಡುವಂತೆ ತಿವಿಯುತ್ತಾರೆ. ಹೀಗೆ ಮಾಡಿದನಂತರ ಅವನನ್ನು ಅಂಗಾತ ಮಲಗಿಸಿ ಮತ್ತೊಮ್ಮೆ ದಸಿಯಿಂದ ತಿವಿದು ನೆಲಕ್ಕೆ ನಾಟುತ್ತಾರೆ. ಅವನು ಹಾಗೆಯೇ ಸಾಯುತ್ತಾನೆ.

ಮಲಬಾರಿಗಳೆಲ್ಲಾ ನಾವು ಬರೆಯುವಂತೆಯೇ ಎಡದಿಂದ ಬಲಕ್ಕೆ ತಾಳೆಗರಿಗಳ

ಮೇಲೆ ಬರೆಯುತ್ತಾರೆ.[೧] ಇವರಲ್ಲಿ ತಾಳೆಗರಿಗಳ ಮೇಲೆ ಬರೆದ ಅನೇಕ ಪುರಾತನ ಗ್ರಂಥಗಳಿವೆ. ಇವೆಲ್ಲಾ ಬಹುತೇಕ ಪದ್ಯದಲ್ಲಿವೆ. ಪುರಾತನ ಗ್ರಂಥಗಳೆಂದರೆ ಇವರಿಗೆ ಬಹು ಮೆಚ್ಚು.

ಬೇರೆ ಕಡೆಗಿಂತ ಹೆಚ್ಚಾಗಿ ಇಲ್ಲಿ ಬ್ರಾಹ್ಮಣರಿಗೆ ತುಂಬ ಗೌರವ. ಮಲಬಾರಿನ ರಾಜರುಗಳಲ್ಲಿ ಯಾವ ಯುದ್ಧವಾದರೂ ಶತ್ರುಗಳು ಬ್ರಾಹ್ಮಣರಿಗೆ ಯಾವ ತೊಂದರೆಯನ್ನೂ ಮಾಡುವುದಿಲ್ಲ. ಆದರೂ ಇವರಲ್ಲಿ ಬಹು ಜನ ಕಪಟದ ಕಳ್ಳಬಡವರು.

ಮಲಬಾರಿನ ಕೆಲವು ಹಬ್ಬಗಳಲ್ಲಿ ಯುವಕರು ಹುಚ್ಚರಂತೆ ಕಾದಾಡುತ್ತಾರೆ. ಒಬ್ಬರನ್ನೊಬ್ಬರು ಸಾಯಿಸುವುದೂ ಉಂಟು. ಇಂಥ ಕಾದಾಟದಲ್ಲಿ ಸತ್ತವನು ಅಮರಲೋಕವನ್ನು ಪಡೆದಂತೆ ಎಂದು ಭಾವಿಸಲಾಗುತ್ತದೆ.

ಬಂಗ ಮತ್ತು ಉಲ್ಲಾಳ ರಾಜರುಗಳು ಮಲಬಾರಿನ ಉತ್ತರಕ್ಕಿದ್ದಾರೆ. ಮಂಗಳೂರ್ ಬಂಗ ರಾಜನಿಗೆ ಸೇರಿದೆ. ಇದು ಬಸರೂರಿಗೆ ಹನ್ನೆರಡು ಹರದಾರಿ ದೂರದಲ್ಲಿದೆ. ಅಸ್ತವ್ಯಸ್ತವಾಗಿ ಕಟ್ಟಿದ ಸಣ್ಣ ಪಟ್ಟಣ ಬಸರೂರು. ಹೊನ್ನಾವರದಿಂದ ಹನ್ನೆರಡು ಹರದಾರಿ ದೂರದಲ್ಲಿದೆ. ಈ ಊರುಗಳೆಲ್ಲಾ ಇರುವ ನಾಡನ್ನು 'ಕನರಾ' ಎಂದು ಕರೆಯುತ್ತಾರೆ. ಇನ್ನುಳಿದ ತೀರಪ್ರದೇಶ ಗೋವಾದವರೆಗೆ ಇದೆ. ಅದೇನೂ ಹೇಳಿಕೊಳ್ಳುವಂಥಾದ್ದಲ್ಲ. ಹೊನ್ನಾವರ ಗೋವೆಗೆ ಹದಿನೆಂಟು ಲೀಗ್ ದೂರದಲ್ಲಿದೆ. ಇಲ್ಲಿ ಎರಡು ನದಿಗಳು ಸೇರಿದ ಕಡೆ ಸೊಗಸಾದ ವಿಶಾಲವಾದ ಬಂದರಿದೆ. ಊರು ಸಾಮಾನ್ಯ ಎತ್ತರದ ಗುಡ್ಡದ ಮೇಲಿದೆ. ಪೇಟೆಗಿಂತ ಕೋಟೆ ಹೊಲಸು. ಕೋಟೆಯಲ್ಲಿ ರಾಜ್ಯಪಾಲನೂ ಶ್ರೀಮಂತರೂ ವಾಸಮಾಡುತ್ತಾರೆ. ಅನೇಕ ಪೋರ್ಚುಗೀಸರೂ ಇಲ್ಲಿ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

ಇನ್ನು ಉತ್ತರಕ್ಕೆ ಸೂರತ್ತಿಗೆ ಹತ್ತಿರ ಹತ್ತಿರ ಇರುವ ಡೆಕ್ಕನ್ ಪ್ರದೇಶ ವಿಜಯಪುರ (ಬಿಜಾಪುರ)ದ ರಾಜನಿಗೋ ಅಥವಾ ಪೋರ್ಚುಗೀಸರಿಗೋ ಸೇರಿದೆ. ಅಲ್ಲಿರುವ ಬೊಂಬಾಯಿ ಇಂಗ್ಲಿಷರಿಗೆ ಸೇರಿದ್ದು. ಶಿವಾಜಿ ರಾಜನಿಗೆ ಕೆಲವು ಭಾಗಗಳು ಸೇರಿವೆ. ಆ ತೀರಪ್ರದೇಶದ ರಾಜರುಗಳಿಗೆ ಫ್ರಾನ್ಸಿನ ಪ್ರಾಂತ್ಯವೊಂದರ ಗೌರ್ನರ್‌ಗೆ ಬರುವಷ್ಟೂ ಆದಾಯ ಬರುವುದಿಲ್ಲ. ಡೆಕ್ಕನ್ನಿನ ಇತರ ನಾಡುಗಳಲ್ಲಿ ಎಷ್ಟೋ ಬದಲಾವಣೆಗಳಾಗಿದ್ದರೂ ಇವರು ಇನ್ನೂ ತಲೆಯೆತ್ತಿಕೊಂಡೇ ಇದ್ದಾರೆ.

ಡೆಕನ್ನಿನ ಕೊನೆಯ ರಾಜ, ಅಂದರೆ ಕೊನೆಯವನಿಗಿಂತ ಹಿಂದಿನವನು, ಬಂಗಾಳ ಪರ್ವತ ಪ್ರದೇಶಗಳಿಂದ ಬಂದ ಷೇರ್‌ಖಾನ್ ಎಂಬುವನು. ಇವನು ಎಷ್ಟು ಶಕ್ತಿವಂತನಾಗಿದ್ದನೆಂದರೆ, ಈತ 'ಷಾ ಆಲಂ' ಎಂಬ ಬಿರುದಿನಿಂದ ಹೊಗಳಿಸಿಕೊಳ್ಳುತ್ತಿದ್ದ.

---

೧. ತಾಳೆಮರಕ್ಕೆ ತೆಲ್, ತಾಳ, ತಾರ್, ತಾರಿ ಎಂಬ ದ್ರಾವಿಡ ಭಾಷೆಯ ಹೆಸರುಗಳುಂಟು. ತಾಳೆಗರಿಗಳಿಗೆ ಕಡ್ಜನ್ ಎಂದು ಮಲಬಾರಿಗಳೆಲ್ಲ ಕರೆಯುತ್ತಾರೆ.

ಇಂಡೀಸಿನ ರಾಜರುಗಳು ನಡುಗುವಂತೆ ಮಾಡಿದ್ದ. ಷೇರ್‌ಖಾನನ ಅಧೀನಕ್ಕೆ ವಿಜಯಪುರ, ವಿಜಯನಗರ ಅಂದರೆ ಕರ್ಣಾಟಕ ಮತ್ತು ಗೋಲ್ಕೊಂಡಾಗಳು ಸೇರಿದ್ದುವು. ಅವನ ರಾಜ್ಯಕ್ಕೆ ಡೆಕ್ಕನ್ ಎಂಬ ಹೆಸರಿತ್ತು. ಆದರೆ ಅತ್ಯಂತ ಅಚ್ಚರಿಯ ಸಂಗತಿಯೆಂದರೆ, ಇಂತಹ. ರಾಜನಿಗೆ ರಾಜಪದವಿಯಲ್ಲಿ ಬೇಜಾರು ಬಂದು ತನ್ನ ದಾಯಾದಿಯೊಬ್ಬನಿಗೆ—ಅವನ ಹೆಸರು ಬಹುಶಃ ದಕ್ಯುಯೆಮ್—ರಾಜ್ಯವನ್ನು ತ್ಯಜಿಸಿದ್ದು. ಈತ ಬಂಗಾಳಕ್ಕೆ ಹೋಗಿ ಅಲ್ಲಿ ನಿಶ್ಚಿಂತೆಯಾಗಿ ಇದ್ದು ಕಾಲವಾದ.[೧]

ಹುಮಾಯೂನ್ ಪರ್ಷಿಯಾದ ರಾಜ ಷಾ—ತಮಸನ ಸಹಾಯದಿಂದ ಇಂಡೀಸಿಗೆ ಹಿಂದಿರುಗಿದನಷ್ಟೆ. ಆಗ ಡೆಕ್ಕನ್‌ನ ರಾಜನಾಗಿದ್ದ ದಕ್ಯುಯೆಮ್‌ನ ಮೇಲೆ ಅವನ ಕೆಲವು ಸರದಾರರು ಒಟ್ಟಾಗಿ ಸೇರಿ ದಂಗೆಯೆದ್ದು ಅವನನ್ನು ಸೆರೆಹಿಡಿದು ಬೀದರ್ ಕೋಟೆಯಲ್ಲಿ ಬಂಧಿಯಾಗಿಟ್ಟರು. ಅಲ್ಲಿ ಅವನು ಬಂಧನದಲ್ಲಿಯೇ ಸತ್ತುಹೋದ. ಅನಂತರ ಅವನ ರಾಜ್ಯವನ್ನು ತಮ್ಮಲ್ಲಿಯೇ ಹಂಚಿಕೊಂಡು ಹೊಸ ರಾಜ್ಯಗಳನ್ನು ಮಾಡಿಕೊಂಡರು. ಈ ಪಿತೂರಿಗಾರರಲ್ಲಿ ಮುಖ್ಯನಾದವನು ನೈಜಾಂ ಷಾ, ಅದಿಲ್ ಷಾ ಮತ್ತು ಕುತುಬ್ ಷಾ. ಇವರು ಕ್ರಮವಾಗಿ ವಿಜಯಪುರ (ಬಿಜಾಪುರ)' ವಿಜಯನಗರ ಅಂದರೆ ಕರ್ನಾಟಕ ಮತ್ತು ಗೋಲ್ಕಂಡಾ ರಾಜ್ಯಗಳನ್ನು ಸ್ಥಾಪಿಸಿದರು. ನೈಜಾಂ ಷಾ ಇಂಡಿಯ ದೇಶದವನು. ಅಲ್ಲದೆ ರಾಜಮನೆತನಕ್ಕೆ ಸೇರಿದವನು. ಇವನು ವಿಜಯಪುರ (ಬಿಜಾಪುರ) ರಾಜ್ಯದ ರಾಜನಾದನು. ಅದಿಲ್ ಷಾ ಬಿಸ್ನಾಗರ್ (ವಿಜಯನಗರ) ರಾಜ್ಯಕ್ಕೆ ರಾಜನಾದನು. ಗೋಲ್ಕೊಂಡಾ ಷಾ ಆಲಮನಿಗೆ ಸೇರಿತು. ಇವರ ಸಂತತಿಯವರು ಅದೇ ಹೆಸರುಗಳಲ್ಲಿ ರಾಜ್ಯ ಆಳುತ್ತಾ ಬಂದಿದ್ದಾರೆ.

ದಕ್ಯೂಯಿಮನನ್ನು ಸೋಲಿಸಲು ಎಷ್ಟು ಜನ ಸೇನಾನಾಯಕರುಗಳು ಒಳಸಂಚು ನಡೆಸಿದರೋ ಅವರೆಲ್ಲ ಪಾಳೆಯಪಟ್ಟುಗಳನ್ನು ಮಾಡಿಕೊಂಡರು. ಆದರೆ ಮೇಲೆ ಹೇಳಿದ ಮೂರು ಮುಖ್ಯ ರಾಜ್ಯಗಳಿಗೆ ಅಧೀನರಾದರು. ಆ ಮುಖ್ಯ ರಾಜರುಗಳು

---

೧. ಬಾಬರ್ ನಂತರ ಅವನ ಮಗ ಹುಮಾಯೂನ್ ದೇಶವನ್ನು ಬಿಟ್ಟು ಓಡಿಹೋಗಿದ್ದ. ಕೊಂಚ ಕಾಲ ಅಂದರೆ ೧೫೩೮–೧೫೪೦ ವರೆಗೆ ಉತ್ತರಭಾರತವನ್ನು ಆಳಿ ಒಳ್ಳೆಯ ಆಡಳಿತಕ್ಕೆ ಹೆಸರಾದ ಷೇರ್ ಷಾ ಎಂಬುವನೇ ಈತ. ಆಫ್ಘನ್ ದೇಶದ ಅನಾಮಧೇಯನಾಗಿದ್ದ ಈತ ಕೇವಲ ತನ್ನ ಶಕ್ತಿ ಸಾಮರ್ಥ್ಯಗಳಿಂದ ಮೊಗಲ್ ಚಕ್ರವರ್ತಿ ಹುಮಾಯೂನನನ್ನು ಸೋಲಿಸಿ ಮತ್ತೆ ಉತ್ತರ ಇಂಡಿಯಾದಲ್ಲಿ ಆಫ್ಘನ್ ರಾಜ್ಯ ಸ್ಥಾಪನೆ ಮಾಡಿದ. ಹಿಂದೆಂದೂ ಕಾಣದ ಆಡಳಿತಕ್ಕೆ ಹೆಸರಾದ. ಬಂಗಾಳದ ರಾಜ್ಯವನ್ನು ಗೆದ್ದುಕೊಂಡು ಅಲ್ಲಿ ಹೆಸರುಗಳಿಸಿದ ಕಾರಣ ಈತ ಬಂಗಾಳದ ಪರ್ವತ ಪ್ರದೇಶಗಳಿಂದ ಬಂದವನೆಂದು ದೆವೆಸೋ ಹೇಳಿರಬೇಕು. ಷೇರ್ ಷಾ ಸಾಯುವಾಗ ಅವನ ರಾಜ್ಯ ಕಾಶ್ಮೀರ, ಗುಜರಾತ್ ಮತ್ತು ಅಸ್ಸಾಂಗಳನ್ನು ಉಳಿದು ಇಡೀ ಉತ್ತರ ಇಂಡಿಯಾವನ್ನೊಳಗೊಂಡಿತ್ತು. ದಕ್ಷಿಣದಲ್ಲಿ ವಿಂಧ್ಯಪರ್ವತದವರೆಗೂ ಹಬ್ಬಿತ್ತು. ಈತನ ಕಾಲವಾದದ್ದು ಬುಂದೇಲ್‌ಖಂಡದಲ್ಲಿದ್ದ ಖಾಲಿಂಜರ್ ಎಂಬ ಕೋಟೆಗೆ ಮುತ್ತಿಗೆ ಹಾಕಿದಾಗ. ಸ್ವಲ್ಪ ಕಾಲ ಖಾಲಿಂಜರ್‌ನಲ್ಲಿದ್ದ ಷೇರ್ ಷಾನ ಶರೀರವನ್ನು ಬಿಹಾರ್ (ಆಗ್ಗೆ ಅದು ಬಂಗಾಳದ ಒಂದು ಭಾಗ) ನಲ್ಲಿರುವ ಸಸರಾಮಕ್ಕೆ ಕೊಂಡೊಯ್ದು ಅಲ್ಲಿ ಷೇರ್ ಷಾನೇ ಕಟ್ಟಿಸಿದ್ದ ಸಮಾಧಿಯಲ್ಲಿ ಇಡಲಾಯಿತು.

ಎಲ್ಲಿಯವರೆಗೆ ಬುದ್ಧಿವಂತಿಕೆಯಿಂದ ರಾಜ್ಯವಾಳಿಕೊಂಡು ಒಗ್ಗಟ್ಟಾಗಿ ನಡೆದುಕೊಂಡರೋ ಅಲ್ಲಿಯವರೆಗೆ ಎಲ್ಲವೂ ಸರಿಯಾಗಿಯೇ ಇತ್ತು. ಅಲ್ಲದೆ ಭಾರಿ ಯುದ್ಧವೊಂದರಲ್ಲಿ ಅವರು ಮೊಗಲ್ ಚಕ್ರವರ್ತಿಯನ್ನು ಸೋಲಿಸಲೂ ಸಾಧ್ಯವಾಯಿತು. ಆದರೆ ಕೊನೆ ಕೊನೆಗೆ ಅವರವರಲ್ಲೇ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡುವು. ಅವರ ಅನಂತರ ಅವರ ಮಕ್ಕಳಲ್ಲಿಯೂ ಅದೇ ಮನಸ್ತಾಪಗಳು ಬೆಳೆದುಬಂದುವು. ನರಿಯಂಥ ಮೊಗಲ್ ಚಕ್ರವರ್ತಿ (ಔರಂಗಜೇಬ) ಆ ಮನಸ್ತಾಪಗಳ ಬೆಂಕಿಗೆ ಗಾಳಿಹಾಕುತ್ತಾ ಬಂದ. ಆತ ಅವರಿಗೆ ಸೇರಿದ ಬಾಲಾಘಾಟ್, ತೆಲಿಂಗಾ ಮತ್ತು ಬಗ್ಲಾನಾದ ಮುಖ್ಯ ಭಾಗಗಳನ್ನೂ ವಿಜಯಪುರಕ್ಕೆ ಸೇರಿದ ಅನೇಕ ಮುಖ್ಯ ನಗರಗಳನ್ನೂ ಕಸಿದುಕೊಂಡ. ವಿಜಯನಗರದ ರಾಜ ವಿಜಯಪುರದ ರಾಜನಿಗೆ ಸಹಾಯಮಾಡಿದ್ದ ಪಕ್ಷದಲ್ಲಿ ಹೀಗಾಗುತ್ತಿರಲಿಲ್ಲ. ಯಾರೂ ತನ್ನ ಸಹಾಯಕ್ಕೆ ಬಾರದಿದ್ದುದನ್ನು ಕಂಡ ವಿಜಯಪುರದ ರಾಜ ಸಾಕಾಗಿ ೧೬೫೦ರಲ್ಲಿ ಮೊಗಲ್ ಚಕ್ರವರ್ತಿಯೊಡನೆ ಸಂಧಿ ಮಾಡಿಕೊಂಡ. ಇಷ್ಟೇ ಅಲ್ಲ, ಗೋಲ್ಕೊಂಡಾದ ರಾಜನೊಡನೆ ಸೇರಿ ವಿಜಯನಗರದ ಮೇಲೆ ಯುದ್ಧಮಾಡಿ ಆತನ ರಾಜ್ಯವನ್ನೆಲ್ಲಾ ಕಿತ್ತುಕೊಂಡ. ಹೀಗಾಗಿ ವಿಜಯನಗರದ ಅದಿಲ್‌ಷಾನಿಗೆ ರಾಜ್ಯವೇ ಇಲ್ಲದಂತಾಯಿತು. ಆತ ಗುಡ್ಡಗಾಡಿಗೆ ಓಡಿಹೋಗಿ ಅಲ್ಲಿ ಈಗಲೂ ನಿರ್ಗತಿಕನಾಗಿ ಕಾಲಹಾಕುತ್ತಿದ್ದಾನೆ. ಅವನ ರಾಜಧಾನಿ ವೆಲ್ಲೂರಿನಲ್ಲಿತ್ತು. ಇದು ಸೆಂಟ್ ಥಾಮಸ್‌ನಿಂದ ಐದು ದಿನದ ದಾರಿ. ಆದರೆ ಈ ಪಟ್ಟಣ ಈಗ ವಿಜಯಪುರದ ರಾಜನಿಗೆ ಸೇರಿದೆ. ಹಾಗೆಯೇ ಜಿಂಜಿ ಮತ್ತು ಕರ್ನಾಟಕದ ಇತರ ಊರುಗಳೂ ವಿಜಯಪುರಕ್ಕೆ ಸೇರಿವೆ.

ಹಿಂದೆ 'ನರಸಿಂಗು' ಎಂದು ಕರೆಯಲ್ಪಡುತ್ತಿದ್ದ ಈ 'ಕರ್ನಾಟೀಸ್' ಅಥವಾ 'ಬಿಸ್ನಾಗರಾ' ರಾಜ್ಯ ಗೋಲ್ಕೊಂಡಾದಿಂದ ದಕ್ಷಿಣಕ್ಕೆ ಮೂರು ದಿನದ ಪ್ರಯಾಣದಷ್ಟು ದೂರದಲ್ಲಿದೆ. ಈ ರಾಜ್ಯವು ಕಾರೋಮಂಡಲ ತೀರದಿಂದ ಮಲಬಾರ್ ತೀರದವರೆಗೂ ದಕ್ಷಿಣದಲ್ಲಿ ಕೇಪ್‌ಕಾಮೊರಿನ್ ಕಡೆಗೂ ಬಹಳ ದೂರ ಹಬ್ಬಿತ್ತು. ಪಶ್ಚಿಮಕ್ಕೆ ವಿಜಯಪುರ ಮತ್ತು ಕ್ಯಾಂಬೆ ಸಮುದ್ರಗಳೇ ಗಡಿಯಾಗಿದ್ದುವು. ಪೂರ್ವಕ್ಕೆ ಬಂಗಾಳವೇ ಗಡಿಯಾಗಿತ್ತು. ಈ ವಿಶಾಲ ರಾಜ್ಯದಲ್ಲಿ ಅನೇಕ ಪಟ್ಟಣಗಳಿದ್ದುವು.

ಈಗ ವಿಜಯಪುರಕ್ಕೆ ಸೇರಿದ ಭಾಗವನ್ನು ಎಪ್ಪತ್ತು ವರ್ಷದ ರಾಜಾಕುಲಿ (ರಿಜಾಕುಲಿ) ಎಂಬ ಖೋಜಾ ಆಳುತ್ತಿದ್ದಾನೆ. ಈತ ಇಂಡೀಸಿನಲ್ಲಿಯೇ ಭಾರಿ ಶ್ರೀಮಂತನೆಂದು ಹೇಳಬಹುದು. ನಾನು ಕರ್ನಾಟಿಯಲ್ಲಿದ್ದಾಗ ನಡೆದ ಸಂಗತಿಯೊಂದನ್ನು ಹೇಳುತ್ತೇನೆ. ಒಬ್ಬ ರಾಜ ದಂಗೆ ದರೋಡೆಗಳನ್ನು ಮಾಡುತ್ತ ತನ್ನ ಕೋಟೆಯಲ್ಲಿ ಸೇರಿಕೊಂಡಿದ್ದನು. ಈ ಕಾರಣದ ಮೇಲೆ ಆ ರಾಜನ ಮೇಲೆ ವಿಜಯಪುರ ಮತ್ತು ಗೋಲ್ಕಂಡಾ ರಾಜರುಗಳು ಧಾಳಿಮಾಡಿ ಅವನ ಕೋಟೆಯನ್ನು ಗೆದ್ದು ಅವನನ್ನು ಸೆರೆಹಿಡಿದು ಅವನ ಐಶ್ವರ್ಯವನ್ನೆಲ್ಲ ಸೂರೆಮಾಡಿದರು.

ವಿಜಯಪುರ ರಾಜ್ಯದ ಗಡಿಗಳಾವುವೆಂದರೆ: ಪೂರ್ವಕ್ಕೆ ಕರ್ನಾಟೀಸ್ ಮತ್ತು ಬಾಲಾಘಾಟ್ ಪರ್ವತಗಳು; ಪಶ್ಚಿಮಕ್ಕೆ ಪೋರ್ಚುಗೀಸರ ಭೂ ಪ್ರದೇಶಗಳು (Lands); ಉತ್ತರಕ್ಕೆ ಗುಜರಾತ್ ಮತ್ತು ಬಾಲಾಘಾಟ್ ಪ್ರಾಂತಗಳು; ದಕ್ಷಿಣಕ್ಕೆ ಮಧುರೆ ನಾಯಕನ ರಾಜ್ಯ.

ಮಧುರೆಯ ನಾಯಕನ ರಾಜ್ಯ ಕೇಪ್‌ಕಾಮೊರಿನ್‌ವರೆಗೆ ಹಬ್ಬಿದೆ. ಈತ ಮತ್ತು ತಂಜಾವೂರು ನಾಯಕ ವಿಜಯಪುರದ ರಾಜನಿಗೆ ಅಧೀನರು. ತಂಜಾವೂರು ನಾಯಕ ನಿಗೆ ನಾಗಪಟ್ಟಂ, ಟ್ರಾಂಕೊಬಾರ್ ಮತ್ತು ಇನ್ನೂ ಕೆಲವು ಕಾರೊಮಂಡಲ ತೀರದ ಪಟ್ಟಣಗಳು ಸೇರಿದ್ದುವು. ಅವನ್ನು ವಿಜಯಪುರದ ರಾಜ ಗೆದ್ದುಕೊಂಡನು. ಅನಂತರ ನಾಗಪಟ್ಟಂ ಪೋರ್ಚುಗೀಸರ ವಶವಾಯಿತು. ಈಚೆಗೆ ಡಚ್ಚರು ಅದರ ಅಧಿಪತಿಗಳಾಗಿ ದ್ದಾರೆ. ಡೇನರೂ (Danes) ಪಟಮರ್ ಎಂಬ ಸ್ಥಳದಲ್ಲಿ ಒಂದು ಕೋಟೆ ಕಟ್ಟಿದ್ದಾರೆ.

ಈಗ ನಾನು ಪ್ರಸಿದ್ಧವಾದ 'ತ್ರಪೆತಿ' (Trapethy = ತಿರುಪತಿ) ದೇವಸ್ಥಾನದ ವಿಷಯ ಹೇಳುತ್ತೇನೆ, ಕೇಳಿ. ಇದು ಮಧುರೆ ನಾಯಕನಿಗೆ ಸೇರಿದೆ. ಇಲ್ಲಿ ಒಂದು ದೊಡ್ಡ ದೇವಸ್ಥಾನವೂ ಅದರ ಸುತ್ತ ಅನೇಕ ಸಣ್ಣ ಪುಟ್ಟ ದೇವಸ್ಥಾನಗಳೂ ಇವೆ. ಇಲ್ಲಿರುವ ಬ್ರಾಹ್ಮಣರಿಗೂ ದೇವಸ್ಥಾನದ ಸೇವಕರಿಗೂ ಕಟ್ಟಿಸಿರುವ ವಾಸದ ಮನೆಗಳೇ ಒಂದು ಪಟ್ಟಣದಂತೆ ಕಾಣುತ್ತವೆ. ಈ ದೇವಸ್ಥಾನದ ಶ್ರೀಮಂತಿಕೆ ಹೇಳತೀರದು.

ಡೆಕ್ಕನ್ನಿನ ರಾಜರುಗಳಲ್ಲೆಲ್ಲಾ ವಿಜಯಪುರದ ರಾಜನೇ ಹೆಚ್ಚು ಶಕ್ತಿವಂತ. ಈ ಕಾರಣವೇ ಆತನನ್ನು 'ಡೆಕ್ಕನ್ನಿನ ರಾಜ'ನೆಂದು ಕರೆಯುತ್ತಾರೆ. ಇವನ ಮುಖ್ಯ ರಾಜಧಾನಿ ವಿಜಯಪುರ. ಕರ್ಪಟಂ (ರತ್ನಗಿರಿ ಜಿಲ್ಲೆಯ ಕರೆಪುಟ್ಟುನ್), ದಬೂಲ್, ರಾಜಾಪುರ ಮತ್ತು ವಿಂಗೂರ್ಲಾ—ಇವೂ ಅವನಿಗೆ ಸೇರಿವೆ. ಈಚೆಗೆ ರಾಜ ಶಿವಾಜಿ ಕೆಲವನ್ನು ಗೆದ್ದುಕೊಂಡಿದ್ದಾನೆಂದು ಹೇಳುತ್ತಾರೆ. ವಿಜಯಪುರ ಪಟ್ಟಣದ ಸುತ್ತಳತೆ ನಾಲ್ಕೈದು ಹರದಾರಿಗಳಿಗಿಂತಲೂ ಹೆಚ್ಚು. ಎರಡು ಸುತ್ತಿನ ಕೋಟೆ ಇದೆ. ಕೋಟೆಯ ಮೇಲೆ ಭಾರಿ ಫಿರಂಗಿಗಳನ್ನು ಏರಿಸಲಾಗಿದೆ. ಸಮತಟ್ಟಾದ ತಳವುಳ್ಳ ಕಂದಕವಿದೆ. ರಾಜನ ಅರಮನೆ ಪಟ್ಟಣದ ಮಧ್ಯದಲ್ಲಿದೆ. ಅದರ ಸುತ್ತ ಕಂದಕವಿದೆ. ಇದರಲ್ಲಿ ಮೊಸಳೆಗಳಿವೆ. ಈ ಪಟ್ಟಣಕ್ಕೆ ಸೇರಿದ ಹಾಗೆ ಕೆಲವು ದೊಡ್ಡ ಬಡಾವಣೆಗಳೂ ಇವೆ. ಇವುಗಳಲ್ಲಿ ಚಿನಿವಾರರ ಮತ್ತು ರತ್ನಪಡಿ ವ್ಯಾಪಾರಿಗಳ ಅಂಗಡಿಗಳಿವೆ. ಆದರೂ ವ್ಯಾಪಾರ ತುಂಬಾ ಕಡಮೆ. ಹೇಳಿಕೊಳ್ಳುವಂಥ ಸಾಮಾನುಗಳು ಹೆಚ್ಚಿಲ್ಲ.

ಈಗ ರಾಜ್ಯ ಆಳುತ್ತಿರುವ ರಾಜನು ತಬ್ಬಲಿಮಗು. ಹಿಂದಿನ ರಾಜದಂಪತಿಗಳು ಇವನನ್ನು ದತ್ತು ತೆಗೆದುಕೊಂಡು ಸಿಂಹಾಸನದಲ್ಲಿ ಕುಳ್ಳಿರಿಸಿದರು. ರಾಣಿಯೇ (ಬರೀ ಸಾಹೇಬ) ರಾಜಮಾತೆಯಾಗಿ ಆಡಳಿತ ನಡೆಸುತ್ತಿದ್ದಳು. ಅವಳ ಆಡಳಿತದಲ್ಲಿ ಬಿಗಿ ತಪ್ಪಿತು. ಇದನ್ನು ರಾಜಾ ಶಿವಾಜಿ ತನ್ನ ಉನ್ನತಿಗಾಗಿ ಉಪಯೋಗಿಸಿಕೊಂಡನು.

ಗೋವೆಯೂ ವಿಜಯಪುರಕ್ಕೆ ಸೇರಿದ ಒಂದು ಭಾಗವೆಂದು ಕೆಲವರು ಹೇಳುತ್ತಾರೆ. ಆದರೆ ವಾಸ್ತವವಾಗಿ ಅಲ್ಲ. ಪೋರ್ಚುಗೀಸರು ಬಂದಾಗ ಅದು ಜ್ಹಾಮೊರಿನ್ನನಿಗೆ

ಸೇರಿತ್ತು.೧ ೧೫೧೦ರಲ್ಲಿ ಆಲ್ಬುಕೇರ್ಕ್ ಗೋವೆಯನ್ನು ತನ್ನ ವಶಪಡಿಸಿಕೊಂಡನು. ಗೋವೆ ಪ್ರಪಂಚದಲ್ಲೇ ಉತ್ಕೃಷ್ಟವಾದ ಬಂದರು. ಅಲ್ಲಿ ದವಸ, ಧಾನ್ಯ, ಹಣ್ಣು ಹಂಪಲು, ಪಶುಪಕ್ಷಿಗಳು ಸಮೃದ್ಧಿಯಾಗಿವೆ. ಕುಡಿಯುವುದಕ್ಕೆ ಒಳ್ಳೆಯ ನೀರು ಸಿಕ್ಕುತ್ತದೆ. ಪೋರ್ಚುಗೀಸರಿಗೆ ಸೇರಿದ ಪ್ರದೇಶಗಳಿಗೆ ಇದೇ ರಾಜಧಾನಿ. ಆರ್ಚ್ ಬಿಷಪ್, , ವೈಸ್‌ರಾಯ್ ಮತ್ತು ಇನ್‌ಕ್ವಿಸಿಟರ್ ಜನರಲ್ (Inquisitor General)—ಇವರೆಲ್ಲಾ ಇರುವುದು ಇಲ್ಲಿಯೇ. ಆಲ್ಬುಕೇರ್ಕ್ ೧೫೧೬ರಲ್ಲಿ ತೀರಿ ಕೊಂಡನು. ಅವನನ್ನು ಇಲ್ಲಿ ಸಮಾಧಿಮಾಡಿದ್ದಾರೆ. ೧೫೫೨ರಲ್ಲಿ ಕಾಲವಾದ ಸೆಂಟ್ ಫ್ರಾನ್ಸಿಸ್ ಸಾವಿಯರ್‌ನನ್ನೂ ಇಲ್ಲಿಯೇ ಸಮಾಧಿಮಾಡಿದ್ದಾರೆ.

ಇಲ್ಲಿ ಹರಿಯುವ ಮಾಂಡವಿ ನದಿ ಗಂಗಾನದಿಯಂತೆಯೇ ಪವಿತ್ರವಾದುದು. ಕೆಲವು ಹಬ್ಬಗಳಲ್ಲಿ ಬ್ರಾಹ್ಮಣರೂ ಮತ್ತಿತರ ಹಿಂದೂಗಳೂ ಇಲ್ಲಿಗೆ ಸ್ನಾನಮಾಡಲು ಬರುತ್ತಾರೆ.

ಗೋವಾ ದೊಡ್ಡಪಟ್ಟಣ. ಸುಂದರವಾದ ಚರ್ಚುಗಳೂ, ಅಂದವಾದ ಕಾನ್‌ವೆಂಟುಗಳೂ, ಸೊಗಸಾದ ಅರಮನೆಗಳೂ ಇವೆ. ಡಚ್ಚರು ಬಂದು ಪೋರ್ಚು ಗೀಸರನ್ನು ಧ್ವಂಸಮಾಡುವವರೆಗೆ ಇಲ್ಲಿದ್ದ ಪೋರ್ಚುಗೀಸರಷ್ಟು ಐಶ್ವರ್ಯವಂತರು ಇಡೀ ಇಂಡೀಸಿನಲ್ಲಿ ಎಲ್ಲಿಯೂ ಇರಲಿಲ್ಲ. ಆದರೆ ಅವರ ಒಣಜಂಭವೇ ಅವರ ಅವನತಿಗೆ ಕಾರಣವಾಯಿತು. ಡಚ್ಚರಿಗೆ ಕೊಂಚ ಹೆದರಿದ್ದರೆ ಅವರಿಗೆ ಈ ಗತಿಯಾಗುತ್ತಿರಲಿಲ್ಲ.

ಗೋವಾದ ಸುತ್ತಮುತ್ತ ಇರುವ ಹಿಂದೂಗಳು ಕೋತಿಗಳನ್ನು ಪೂಜಿಸುತ್ತಾರೆ. ಬೇರೆ ಕಡೆಯಂತೆ ಇಲ್ಲಿಯೂ ಅವುಗಳಿಗೆ ದೇವಸ್ಥಾನಗಳನ್ನು ಕಟ್ಟಿಸಿದ್ದಾರೆ. ಇಲ್ಲಿರುವ ವಿಜಯಪುರದ ರಾಜನ (ಹಿಂದೂ) ಪ್ರತಿನಿಧಿಗಳು ತಮ್ಮ ಅಡುಗೆಯನ್ನು ತಾವೇ ಮಾಡಿಕೊಳ್ಳುತ್ತಾರೆ. ಅಡುಗೆಮಾಡುವ ಸ್ಥಳವನ್ನು ಗುಡಿಸಿ ಸಾರಿಸಿ, ತಮ್ಮ ಸುತ್ತ ಒಂದು ಪಟ್ಟೆ ಹಾಕಿಕೊಂಡು ಅದರೊಳಗೆ ಇರುತ್ತಾರೆ. ತಮಗೆ ಬೇಕಾದ ಅಡುಗೆ ಸಾಮಾನು ಕೊಡುವ ಆಳನ್ನು ಹೊರಗಡೆಯೇ ನಿಲ್ಲಿಸಿ ಈಸಿಕೊಳ್ಳುತ್ತಾರೆ. ಆತ ಒಳಗಡೆ ಬಂದರೆ ಆ ಸ್ಥಳ ಮೈಲಿಗೆಯಾಗಿ ಬಿಡುವುದಂತೆ! ಹಾಗೇನಾದರೂ ಆದರೆ ಪುನಃ ಆ ಸ್ಥಳವನ್ನು ಶುಚಿಮಾಡಿಕೊಳ್ಳಬೇಕು. ಅಡುಗೆಯಾದನಂತರ ಅದನ್ನು ಮೂರು ಭಾಗ ಮಾಡಿ, ಒಂದು ಭಾಗವನ್ನು ಬಡವರಿಗೂ, ಇನ್ನೊಂದು ಭಾಗವನ್ನು ಮನೆಯ ಹಸುವಿಗೂ, ಮತ್ತೊಂದು ಭಾಗವನ್ನು ತಾವೂ ಉಪಯೋಗಿಸುತ್ತಾರೆ. ಬಿಟ್ಟ ಎಂಜಲನ್ನು ಬಡಬಗ್ಗರಿಗೆ ಕೊಡುವುದು ಸರಿಯಲ್ಲವೆಂದು ಅದನ್ನು ಹಸುವಿಗೆ ತಿನ್ನಿಸು ತ್ತಾರೆ.

ವಿಜಯಪುರವನ್ನು ಬಿಟ್ಟರೆ ಡೆಕ್ಕನ್‌ನಲ್ಲಿ ಬಹು ಶಕ್ತಿವಂತ ರಾಜನೆಂದರೆ ಗೋಲ್ಕೊಂಡಾ ರಾಜ. ಇವನ ರಾಜ್ಯ ಪೂರ್ವಕ್ಕೆ ಬಂಗಾಳ ಸಮುದ್ರದವರೆಗೂ,

---

೧. ಇದು ತಪ್ಪೆಂದೂ, ಗೋವಾ ಬಿಜಾಪುರಕ್ಕೆ ಸೇರಿತ್ತೆಂದೂ ಗೊತ್ತಾಗುತ್ತದೆ.

ಉತ್ತರಕ್ಕೆ ಒರಿಸ್ಸಾ ಪರ್ವತಗಳವರೆಗೂ, ದಕ್ಷಿಣಕ್ಕೆ ವಿಜಯನಗರ ರಾಜ್ಯದ ನಾಡುಗಳ ವರೆಗೂ, ಪಶ್ಚಿಮಕ್ಕೆ ಮೊಗಲ್ ಚಕ್ರವರ್ತಿಯ ರಾಜ್ಯದ ಕಲ್ವಾರ್‌ವರೆಗೂ ಇದೆ. ಕಲ್ವಾರ್‌ನಲ್ಲಿರುವ ಜಕಾತಿಕಟ್ಟೆಯ ಮುತ್ಸದ್ದಿಗಳು ತುಂಬಾ ಧೂರ್ತರು. ಇವರು ಕೇಳಿದ್ದನ್ನು ಕೊಡದಿದ್ದರೆ 'ಲಬ್ ಲಬ್ ಲಬಾ' ಎಂದು ಜೋರಾಗಿ ಬಾಯಿಬಡಿದು ಕೊಳ್ಳುತ್ತಾರೆ. ಆಗ ದೂರದಲ್ಲಿ ಕಾಯುತ್ತಿರುವ ಜನರು ದೊಣ್ಣೆ, ಭರ್ಜಿ, ಕತ್ತಿ, ಬಿಲ್ಲು, ಬಾಣ ಮತ್ತು ಕೋವಿಗಳ ಸಮೇತ ಓಡಿಬಂದು ಮುತ್ಸದ್ದಿಗಳು ಕೇಳಿದ್ದನ್ನು ಕೊಡುವಂತೆ ಮಾಡುತ್ತಾರೆ. ಹಾಗೆ ಕೊಟ್ಟರು ಸಹ ಇವರಿಂದ ತಪ್ಪಿಸಿಕೊಳ್ಳುವುದು ಕಷ್ಟ. ಇವರು ನನ್ನಿಂದ ಇಪ್ಪತ್ತು ರೂಪಾಯಿಗೆ ಬದಲು ಐವತ್ತು ರೂಪಾಯಿ ಕೇಳಿ ಈಸಿಕೊಂಡರು. ಈ ರೀತಿ ನಾನು ಕಲ್ವಾರ್‌ದಿಂದ ಭಾಗನಗರಕ್ಕೆ ಹೋಗುವಾಗ ಕೇವಲ ೨೩ ಲೀಗ್ ದೂರದಲ್ಲಿ ಹದಿನಾರು ಮುತ್ಸದ್ದಿಗಳಿಗೆ ಹಣ ಕೊಡಬೇಕಾಯಿತು. ಈ ಮುತ್ಸದ್ದಿಗಳೆಲ್ಲ ಬ್ರಾಹ್ಮಣರು. ಇವರ ಸಹವಾಸ ಬನಿಯರ ಸಹವಾಸಕ್ಕಿಂತ ಕಷ್ಟ.

ಮೊಗಲಿಸ್ಥಾನ ಮತ್ತು ಗೋಲ್ಕೊಂಡಾ ರಾಜ್ಯಗಳ ಗಡಿಗಳನ್ನು ಗುರುತಿಸಲು ಒಂದೂವರೆ ಹರದಾರಿಗೊಂದರಂತೆ ಮರದ ಗೂಟಗಳನ್ನು ನೆಟ್ಟಿದ್ದಾರೆ. ಈ ಗುರುತು ಗಳನ್ನು 'ಮಹೌವಾ' (Mahaua) ಎಂದು ಕರೆಯುತ್ತಾರೆ. ಗೋಲ್ಕೊಂಡಾ ರಾಜ್ಯದ ಗಡಿಯನ್ನು ಗುರುತಿಸಲು 'ಕಡ್ಜೌರ್' (Cadjour=ಕಡ್ಜನ್=ತಾಳೆ ಅಥವಾ ತಾರಿಮರ) ಮರಗಳನ್ನು ಬೆಳೆಸಿದ್ದಾರೆ.

ಕಲ್ವಾರ್‌ದಿಂದ ಭಾಗನಗರಕ್ಕೆ ಹೋಗುವ ದಾರಿಯಲ್ಲಿ ನಮಗೆ ಸಿಕ್ಕಿದ್ದು ಬುಕೆನೂರು (Buquenar) ಎಂಬ ಒಂದೇ ಪಟ್ಟಣ ಮತ್ತು ಹದಿನೆಂಟು ಹಳ್ಳಿಗಳು. ಸೊಂಪಾಗಿ ಬೆಳೆದ ಬತ್ತದ ಗದ್ದೆಗಳೂ ಹೊಲಗಳೂ ಸಿಕ್ಕಿದುವು. ಅನೇಕ ಕೆರೆ ಕುಂಟೆಗಳು ಕಂಡುವು. ಇವನ್ನೆಲ್ಲಾ ನೋಡಿದಾಗ ನನಗೆ ಈ ನಾಡಿನಷ್ಟು ಸುಂದರವಾದ ನಾಡು ಬೇರೊಂದಿಲ್ಲ ಎನಿಸಿತು.

ಗೋಲ್ಕೊಂಡಾ ರಾಜ್ಯದ ರಾಜಧಾನಿ ಭಾಗನಗರ (ಹೈದರಾಬಾದ್). ಇಲ್ಲಿಗೆ ಬಂದು ಪಟ್ಟಣವನ್ನು ಪ್ರವೇಶಿಸುವ ಮುನ್ನ ಕೊತ್ವಾಲನ ಅಪ್ಪಣೆಗೋಸುಗ ಒಂದು ಸೇತುವೆಯ ಬಳಿ ಕಾದು ನಿಂತೆವು. ನಾವು ತಂದಿದ್ದ ಸಾಮಾನುಗಳನ್ನು ಕೊತ್ವಾಲನ ಮನೆಗೆ ಸಾಗಿಸಿ ಅಲ್ಲಿ ಅವುಗಳ ಶೋಧನೆ ನಡೆಸಬೇಕಾಗಿತ್ತು. ನಮ್ಮ ಕಾರವಾನಿನ ಮುಖ್ಯಸ್ಥನಿಗೆ ರಾಜನ ಕಡೆಯ ಅಕ್ ನಜರ್ (ಬಹುಶಃ ಹಕ್-ನಜರ್) ಎಂಬುವನ ಪರಿಚಯವಿತ್ತು. ಆತ ನಮ್ಮ ಸಾಮಾನುಗಳನ್ನು ಶೋಧಿಸುವ ಆವಶ್ಯಕತೆಯಿಲ್ಲವೆಂದು ಹೇಳಿಕಳುಹಿಸಿದ. ಆಗ ನಾವು ಸೇತುವೆಯನ್ನು ದಾಟಿ ಮುಂದೆ ಸಾಗಿದೆವು. ನೆರ್ವಾ ಎಂಬ ನದಿಗೆ ಕಟ್ಟಿದ ಸೇತುವೆ ಇದು. ಸೇತುವೆಯ ಆ ಕಡೆ ತುದಿಯಲ್ಲಿ ಊರಿನ ಹೆಬ್ಬಾಗಿಲು ಇತ್ತು. ನಮಗೆ ಸುಲಭವಾಗಿ ಪಟ್ಟಣಕ್ಕೆ ಪ್ರವೇಶ ದೊರೆಯಿತು.

ನಾವು ನಿವೆತ್-ಉಲ್ಲಾ ಎಂಬ ಕಾರವಾನ್ ಸರಾಯಿಗೆ ಹೋದೆವು. ನಮ್ಮ

ಸಂಗಡಿಗರೆಲ್ಲರೂ ಇಲ್ಲಿಯೇ ತಂಗಿದರು. ತಿಂಗಳಿಗೆ ಎರಡು ರೂಪಾಯಿಯಂತೆ ನಾನು ಎರಡು ಕೋಣೆಗಳನ್ನು ಬಾಡಿಗೆಗೆ ತೆಗೆದುಕೊಂಡೆ.

ಈ ಪಟ್ಟಣದಲ್ಲಿ ಹಲವಾರು 'ಮೈದಾನ್'ಗಳು ಅಂದರೆ ಸಾರ್ವಜನಿಕ ಉದ್ಯಾನಗಳು ಇವೆ. ಇವುಗಳಲ್ಲಿ ಬಹು ಸುಂದರವಾದುದು ರಾಜನ ಅರಮನೆಯ ಮುಂದಿರುವ ರಾಜೋದ್ಯಾನ. ಗುಡ್ಡದ ಮೇಲೆ ಕಟ್ಟಿರುವ ಕೆರೆಯ ನೀರನ್ನು ಕೊಳವೆಗಳ ಮೂಲಕ ತಂದು ಅರಮನೆಯಲ್ಲೆಲ್ಲಾ ಹರಿಯುವಂತೆ ಮಾಡಿದ್ದಾರೆ. ಅರಮನೆಯನ್ನು ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಿದ್ದಾರೆ. ಇದು ಒಳಗೆ ತುಂಬಾ ಸುಂದರವಾಗಿದೆಯೆಂದು ಹೇಳುತ್ತಾರೆ. ಇಲ್ಲಿರುವ ನಾಲ್ಕು ಶಿಖರಗಳ ಕಟ್ಟಡ (ಚಾರ್‌ಮಿನಾರ್?) ನೋಡಬೇಕಾದ್ದು.

ಭಾಗನಗರದ ಬಳಿ ಇರುವ ಒಂದು ತೋಟದಲ್ಲಿ ಅಡಕೆ ತೆಂಗುಗಳನ್ನು ಸಾಲು ಸಾಲಾಗಿ ನೆಟ್ಟು ಬೆಳೆಸಿದ್ದಾರೆ. ಅದರಲ್ಲಿ ಒಂದು ಸೊಗಸಾದ ಮನೆಯಿದೆ.

ಭಾಗನಗರದಲ್ಲಿ ಕಾನೂನು ಕಟ್ಟಲೆಗಳನ್ನು ನೋಡಿಕೊಳ್ಳಲು ಅನೇಕ ಅಧಿಕಾರಿಗಳೂ ನೌಕರರೂ ಇದ್ದಾರೆ. ಇವರಲ್ಲಿ ಮುಖ್ಯನಾದವನು ಕೊತ್ವಾಲ. ಇವನು ನಗರದ ರಾಜ್ಯಪಾಲನಾಗಿರುವುದರ ಜೊತೆಗೆ ಸುಂಕದ ಕಟ್ಟೆ ಮುಖ್ಯಾಧಿಕಾರಿಯೂ ಆಗಿದ್ದಾನೆ. ಟಂಕಸಾಲೆಯ ಯಜಮಾನನೂ ಈತನೇ. ಇಷ್ಟಲ್ಲದೆ ಈತ ನಗರದ ದಾವಾ ಮೊಖದ್ದಮೆಗಳನ್ನು ಮತ್ತು ತಕ್ಸೀರುಗಳನ್ನು ನೋಡಿಕೊಳ್ಳುವ ಮುಖ್ಯ ನ್ಯಾಯಾಧೀಶನೂ ಆಗಿದ್ದಾನೆ. ಇದರೆಲ್ಲರಿಂದ ರಾಜನಿಗೆ ಭಾರಿ ಹಣ ಸಂದಾಯವಾಗುತ್ತದೆ.

ಈ ಪಟ್ಟಣದಲ್ಲಿ ಭಾರಿ ಶ್ರೀಮಂತ ವರ್ತಕರೂ ಸರಾಫರೂ ರತ್ನಪಡಿ ವ್ಯಾಪಾರಿಗಳೂ ಇದ್ದಾರೆ. ಕುಶಲ ಕಲೆಗಳಲ್ಲಿ ಬಹು ನಿಪುಣರಾದ ಜನರಿದ್ದಾರೆ. ಭಾಗನಗರದಲ್ಲಿ ವಾಸಮಾಡುವ ಪ್ರಜೆಗಳ ಲೆಕ್ಕದಲ್ಲಿ ಪರ್ಷಿಯಾ, ಮೊಗಲ್ ಅಥವಾ ಟರ್ಟಾರ್ ಜಾತಿಯ ೪೦,೦೦೦ ಕುದುರೆಗಳನ್ನೂ ಸೇರಿಸಬೇಕಾಗುತ್ತದೆ. ಹಿಂದೆ ನಡೆದ ಶತ್ರುಗಳ ಧಾಳಿ ಮತ್ತೆ ನಡೆಯದಂತೆ ನೋಡಿಕೊಳ್ಳಲು ರಾಜನು ಇಷ್ಟು ಕುದುರೆಗಳನ್ನು ಇಟ್ಟುಕೊಂಡಿದ್ದಾನೆ.

ಭಾಗನಗರದಲ್ಲಿ ಇಂಡಿಯಾದ ವರ್ತಕರಲ್ಲದೆ, ಪರ್ಷಿಯನ್ ಮತ್ತು ಆರ್ಮೀನಿಯನ್ ವರ್ತಕರೂ ಇದ್ದಾರೆ. ಆದರೆ ಆಡಳಿತದಲ್ಲಿ ಸಾಕಷ್ಟು ಬಿಗಿ ಇಲ್ಲದ ಕಾರಣ ಓಮ್ರಾಗಳು (ಅಮೀರರು) ಕೆಲವು ವೇಳೆ ಜನರನ್ನು ಪೀಡಿಸಿ ಹಣ ಕೀಳುತ್ತಾರೆ. ನಾನು ಇಲ್ಲಿರುವಾಗ ಓಮ್ರಾನೊಬ್ಬ ಹಿಂದೂ ಸರಾಫನೊಬ್ಬನನ್ನು ತನ್ನ ಮನೆಯಲ್ಲಿ ಬಂಧಿಸಿ ಐದು ಸಾವಿರ 'ಚಿಕಿನ್' ಹಣವನ್ನು ಬಲಾತ್ಕಾರದಿಂದ ಕಸಿದುಕೊಂಡ. ಈ ಸಂಗತಿ ಇತರ ಸರಾಫರುಗಳಿಗೆ ತಿಳಿದು ಅವರು ತಮ್ಮ ಸರಾಫ್ ಕಟ್ಟೆಯನ್ನೇ ಮುಚ್ಚಿದಾಗ ರಾಜನು ಅಮೀರನು ಕಸಿದುಕೊಂಡಿದ್ದುದನೆಲ್ಲಾ ಹಿಂದಕ್ಕೆ ಕೊಡಿಸಿದನು. ಆಗ ಸರಾಫರು ಸಮಾಧಾನಗೊಂಡರು.

ಇಲ್ಲಿಯ ವ್ಯಾಪಾರಸ್ಥರು ಮತ್ತು ಬೇಸಾಯಗಾರರೆಲ್ಲ ಇಲ್ಲಿಯವರೇ. ಹೆಚ್ಚು

ಸಂಖ್ಯೆಯಲ್ಲಿ ಫರಂಗಿ ಜನರೂ ಇದ್ದಾರೆ. ಇವರಲ್ಲಿ ಪೋರ್ಚುಗೀಸರೇ ಹೆಚ್ಚು. ಈ ಪೋರ್ಚುಗೀಸರು ಬೇರೆ ಕಡೆ ಮಾಡಬಾರದ ಕೆಲಸಗಳನ್ನು ಮಾಡಿ ಇಲ್ಲಿಗೆ ಓಡಿಬಂದು ಸೇರಿಕೊಂಡವರು. ಈಚೆಗೆ ಇಂಗ್ಲಿಷರೂ ಡಚ್ಚರೂ ಬಂದು ನೆಲೆಸಿದ್ದಾರೆ. ಇವರಲ್ಲಿ ಡಚ್ಚರು ಕೈತುಂಬ ಲಾಭ ಸಂಪಾದಿಸುತ್ತಾರೆ. ಮೂರು ವರ್ಷಗಳಿಂದೀಚೆಗೆ ಒಂದು ಫ್ಯಾಕ್ಟೊರಿ ಸ್ಥಾಪಿಸಿದ್ದಾರೆ. ತಮ್ಮ ಕಂಪೆನಿಗಾಗಿ ಇಲ್ಲಿ ಸಿಕ್ಕುವ ಚೀಟಿಬಟ್ಟೆ ಮುಂತಾದ ಬಟ್ಟೆಗಳನ್ನು ಕೊಂಡು ಇಂಡೀಸಿನ ಇತರ ಭಾಗಗಳಿಗೆ ರವಾನಿಸುತ್ತಾರೆ. ಈ ಊರು ಮತ್ತು ಬೇರೆ ಊರುಗಳಲ್ಲಿ ಲವಂಗ, ಮೆಣಸು, ದಾಲ್ಚಿನ್ನಿ, ಬೆಳ್ಳಿ, ತಾಮ್ರ, ತವರ, ಸೀಸ—ಈ ಸಾಮಾನುಗಳಿಗೆ ಭಾರಿ ಬೇಡಿಕೆ ಇದೆ. ಇವುಗಳನ್ನು ಇಲ್ಲಿಗೆ ಮಚ್ಛಲಿ ಪಟ್ಟಣದಿಂದ ಎತ್ತುಗಳ ಮೇಲೆ ಸಾಗಿಸಿ ಮಾರಾಟಮಾಡಿ ಒಂದಕ್ಕೆ ಇಪ್ಪತ್ತೈದರಷ್ಟು ಲಾಭ ಸಂಪಾದಿಸುತ್ತಾರೆ. ಈ ಲಾಭ ವರ್ಷಕ್ಕೆ ಹನ್ನೊಂದು ಅಥವಾ ಹನ್ನೆರಡು ಸಾವಿರ ಫ್ರೆಂಚ್ ಲೀವ್ರ್‌ಗಳಷ್ಟಾಗುತ್ತದೆ ಎಂದು ಗೊತ್ತಾಯಿತು. ಎಲ್ಲಿಗೆ ಹೋದರೂ ಜನರು ಇವರನ್ನು ಆದರದಿಂದ ಕಾಣುತ್ತಾರೆ. ಏಕೆಂದರೆ, ಬೇಕಾದವರಿಗೆ ಇವರು ಕೈತುಂಬ ಬಹುಮಾನ ಕೊಟ್ಟು ಅನುಸರಿಸಿಕೊಳ್ಳುತ್ತಾರೆ. ನಾನು ಭಾಗನಗರ ಬಿಡುವುದಕ್ಕೆ ಹಲವು ದಿನಗಳ ಮೊದಲು ಇಲ್ಲಿಯ ಗೌರ್ನರ್ ವಾದ್ಯ, ಮೇಳ ಮತ್ತು ಬಾವುಟಗಳ ಸಮೇತ ಮೆರವಣಿಗೆಯಲ್ಲಿ ಹೋಗುವುದನ್ನು ನೋಡಿದೆ.

ಈ ರಾಜ್ಯದಲ್ಲಿ ವೇಶ್ಯಾವೃತ್ತಿ ರಾಜಾರೋಷಾಗಿ ನಡೆಯುತ್ತದೆ. ವೇಶ್ಯೆಯರ ಮನೆಗೆ ಯಾರು ಬೇಕಾದರೂ ಹೋಗಬಹುದು. ಅದನ್ನು ಯಾರೂ ಗಮನಿಸುವುದಿಲ್ಲ. ಈ ವೇಶ್ಯೆಯರು ಅಲಂಕಾರ ಮಾಡಿಕೊಂಡು ಮನೆಯ ಮುಂದೆ ನಿಂತು ಗಿರಾಕಿಗಳನ್ನು ಆಕರ್ಷಿಸುವುದನ್ನು ನೋಡಬಹುದು. ಆದರೆ ಈ ವೇಶ್ಯೆಯರು ತುಂಬಾ ಕೆಟ್ಟಜನ ಎಂದು ಹೇಳುತ್ತಾರೆ. ಕೆಳವರ್ಗದ ಜನ ತಮ್ಮ ಹೆಂಡತಿಯರಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿಬಿಟ್ಟಿದ್ದಾರೆ. ಮದುವೆಯಾಗುವಾಗಲೇ ಹೆಣ್ಣಿನ ತಂದೆತಾಯಿಗಳು ಹೆಂಡತಿ ಹಾದಿ ಬೀದಿಗಳಲ್ಲಿ ತಿರುಗಾಡುವುದನ್ನೂ ನೆರೆಹೊರೆಯವರ ಮನೆಗೆ ಹೋಗಿಬರುವುದನ್ನೂ 'ತಾರಿ' (ಹೆಂಡ) ಕುಡಿಯುವುದನ್ನೂ ತಪ್ಪು ಭಾವಿಸಬಾರದೆಂದು ಗಂಡನಿಂದ ಮಾತು ಪಡೆಯುತ್ತಾರೆ. ಗೋಲ್ಕೊಂಡಾ ರಾಜ್ಯದ ಜನರಿಗೆ ಹೆಂಡವೆಂದರೆ ಪಂಚಪ್ರಾಣ.

ಭಾಗನಗರದಲ್ಲಿಯಾಗಲೀ ಮತ್ತೆಲ್ಲಿಯಾಗಲೀ ಕಳ್ಳತನಗಳಾದರೆ ಕಳ್ಳನ ಎರಡು ಕೈಗಳನ್ನೂ ಕತ್ತರಿಸಿಹಾಕುತ್ತಾರೆ. ಈ ಶಿಕ್ಷೆ ಹೆಚ್ಚು ಕಡಮೆ ಇಂಡೀಸಿನ ಇತರ ಭಾಗಗಳಲ್ಲಿಯೂ ಇದೆ.

ಈ ರಾಜ್ಯದಲ್ಲಿ ಹೆಚ್ಚು ಚಲಾವಣೆಯಲ್ಲಿರುವ ನಾಣ್ಯಗಳೆಂದರೆ ಪಗೋಡ್, ಮೊಗಲ್ ರೂಪಾಯಿ, ಅರ್ಧ ರೂಪಾಯಿ, ಕಾಲು ರೂಪಾಯಿ ಮತ್ತು ಪೈಸಾಗಳು. ಪಗೋಡ್ ಎಂಬುದು ಚಿನ್ನದ ನಾಣ್ಯ. ಹಳೆಯ ಪಗೋಡ್‌ಗಳ ಬೆಲೆ ಐದೂವರೆ ರೂಪಾಯಿಗಳು, ಅಂದರೆ ಎಂಟು ಫ್ರೆಂಚ್ ಲೀವ್ರ್‌ಗಳು. ಹೊಸವು ನಾಲ್ಕು ರೂಪಾಯಿ

ಬೆಲೆ. ಆದರೆ ಇವೆರಡರ ಬೆಲೆ ಹೆಚ್ಚು ಕಡಮೆಯಾಗುತ್ತಲೇ ಇರುತ್ತದೆ—ಜನರ ಆವಶ್ಯಕತೆಗೆ, ತಕ್ಕಂತೆ. ಪೈಸಾ ನಾಣ್ಯವನ್ನು ಭಾಗನಗರದಲ್ಲಿಯೇ ಟಂಕಿಸುತ್ತಾರೆ. ಡಚ್ಚರು ತಾವೇ ತಾಮ್ರವನ್ನು ತಂದು ಪೈಸಾಗಳನ್ನು ಟಂಕಿಸಿ ತಮ್ಮ ವ್ಯಾಪಾರ ಸಾಪಾರ ಗಳಿಗೆ ಪಗೋಡಾಗೂ ರೂಪಾಯಿಗೂ ವಿನಿಮಯ ಮಾಡಿಕೊಳ್ಳುತ್ತಾರೆ.

ಗೋಲ್ಕೊಂಡಾ ವಜ್ರಗಳ ತವರೂರು ಎಂದೇ ಹೇಳಬಹುದು. ವಜ್ರಗಳ ಬೆಲೆಯ ಬಗ್ಗೆ ಒಂದು ಮಾತು. ಅವುಗಳ ಬೆಲೆಯನ್ನು ತೂಕದ ಮೇಲೆ ಕಟ್ಟುತ್ತಾರೆ. ತೂಕಕ್ಕೆ ಗುಲಗಂಜಿ ಉಪಯೋಗಿಸುತ್ತಾರೆ. ಒಂದು ಗುಲಗಂಜಿಗೆ ೩½ ಗ್ರೈನ್‌ಗಳು. ಒಂದು ಕ್ಯಾರೆಟ್‌ಗೆ ನಾಲ್ಕು ಗ್ರೈನ್‌ಗಳು. ಐದು ಗುಲಗಂಜಿಗಳಿಗೆ ಏಳು ಕ್ಯಾರೆಟ್‌ಗಳು ಸಮ. ಒಂದು ಅಥವಾ ಎರಡು ಗುಲಗಂಜಿ ತೂಗುವ ವಜ್ರಗಳ ದರ ಒಂದು ಗುಲಗಂಜಿಗೆ ಹದಿನೈದು ಹದಿನಾರು ಕ್ರೌನ್‌ಗಳು. ಮೂರು ಗುಲಗಂಜಿ ತೂಗುವ ವಜ್ರಗಳ ದರ ಒಂದು ಗುಲಗಂಜಿಗೆ ಮೂವತ್ತು ಕ್ರೌನ್‌ಗಳು. ಈ ವಜ್ರಗಳ ಬೆಲೆ ದಿನದಿಂದ ದಿನಕ್ಕೆ ವ್ಯತ್ಯಾಸವಾಗುತ್ತಿರುತ್ತದೆ. ಒಮ್ಮೆ ಹತ್ತು ಗುಲಗಂಜಿ ತೂಗುವ ವಜ್ರವು ಒಂದು ಗುಂಜಿಗೆ ೫೦ ಕ್ರೌನುಗಳಂತೆ ಮಾರಾಟವಾದುದನ್ನು ನಾನೇ ಕಂಡೆ. ಸ್ವಲ್ಪ ದಿನಗಳ ಮೇಲೆ ನಾನು ಹಾಲಾಂಡಿನವನೊಬ್ಬನ ಮನೆಯಲ್ಲಿದ್ದೆ. ಆಗ ಒಬ್ಬ ೫೦ ಗುಂಜಿ ತೂಕದ ದಪ್ಪ ವಜ್ರವೊಂದನ್ನು ತಂದನು. ಒಬ್ಬ ಗಿರಾಕಿ ಅದಕ್ಕೆ ೧೭,೦೦೦ ಕ್ರೌನ್ ಕೊಡುವುದಾಗಿ ಹೇಳಿದ. ಇಬ್ಬರೂ ಬೇರೆಡೆಗೆ ಹೋಗಿ ಮಾತನಾಡಿ ಬೆಲೆಯನ್ನು ನಿಗದಿಮಾಡಿಕೊಂಡರು. ಬೆಲೆ ಎಷ್ಟೆಂದು ತಿಳಿದುಕೊಳ್ಳಲು ನಾನೆಷ್ಟೇ ಪ್ರಯತ್ನ ಪಟ್ಟರೂ ಸಾಧ್ಯವಾಗಲಿಲ್ಲ. ಈ ವಜ್ರದಲ್ಲಿ ಮಧ್ಯೆ ದೋಷ (grain) ಇದ್ದುದರಿಂದ ಅದನ್ನು ಎರಡು ಹೋಳಾಗಿ ಕತ್ತರಿಸಬೇಕಾಗಿತ್ತಂತೆ. ನನ್ನ ಸ್ನೇಹಿತ ಭಾಗನಗರದಲ್ಲಿ ಇನ್ನೊಂದು ವಜ್ರ ಕೊಂಡುಕೊಂಡ. ಇದರ ತೂಕ ಐದು ಗುಂಜಿ.

ಗೋಲ್ಕೊಂಡಾ ರಾಜನ ದರ್ಬಾರ್ ನಡೆಸುವ ಅರಮನೆ ಭಾಗನಗರದಿಂದ ಎರಡು ಹರಿದಾರಿ ದೂರದಲ್ಲಿದೆ. ಇದನ್ನು ಗೋಲ್ಕಂಡಾ ಎಂದು ಕರೆಯುತ್ತಾರೆ. ರಾಜ್ಯಕ್ಕೂ ಇದೇ ಹೆಸರು. ಈ ಹೆಸರು ಕೊಟ್ಟವನು ಒಂದನೆಯ ಕುತುಬ್ ಷಾ. ಅವನು ಮೊದಲು ಅರಮನೆಯನ್ನು ಕಟ್ಟಲು ಒಂದು ಸ್ಥಳ ಹುಡುಕುತ್ತಿರುವಾಗ ಒಬ್ಬ ಕುರುಬ ಸಿಕ್ಕಿದ. ಆ ಕುರುಬ ಈ ಷಾನನ್ನು ಕರೆದೊಯ್ದು ಕಾಡಿನಲ್ಲಿದ್ದ ಒಂದು ಗುಡ್ಡ ತೋರಿಸಿದ. ಅದು ಅರಮನೆಗೆ ಸರಿಯಾದ ಸ್ಥಳವೆಂದು ರಾಜನಿಗೆ ಅನ್ನಿಸಿತು: ಅಲ್ಲಿ ತನ್ನ ಅರಮನೆ ಕಟ್ಟಿಸಿದ. ಅದಕ್ಕೆ ಗೋಲ್ಕೊಂಡಾ ಎಂದು ಹೆಸರಿಟ್ಟ. 'ಗೋಲ್ಕಾರ್' ಎಂದರೆ ತೆಲುಗು ಭಾಷೆಯಲ್ಲಿ 'ಕುರುಬ' ಎಂದರ್ಥ.[೧] ಗೋಲ್ಕೊಂಡಾ ಸುತ್ತು ಮುತ್ತ ಕಾಡು ಆವರಿಸಿತ್ತು. ರಾಜನು ಅದನ್ನು ಸ್ವಲ್ಪ ಸ್ವಲ್ಪವಾಗಿ ಕಡಿಸಿ ಬೆಂಕಿ ಹಚ್ಚಿ

---

೧. ಗೊಲ್ಲ ಮತ್ತು ಕೊಂಡ (ಬೆಟ್ಟ) ಎಂಬೆರಡು ಪದಗಳು ಸೇರಿ ಗೋಲ್ಕೊಂಡಾ ಎಂದು ಆಗಿದೆಯೆಂದು ಹೇಳುತ್ತಾರೆ.

ಸುಡಿಸಿದ. ಈಗ ಅರಮನೆಯನ್ನೂ ಅದರ ಸುತ್ತಲೂ ಇರುವ ಕೋಟೆ ಕೊತ್ತಳ ಗಳನ್ನೂ ನೋಡಿದರೆ ಅದೊಂದು ಪಟ್ಟಣದಂತೆಯೇ ಕಾಣುತ್ತದೆ. ಕೋಟೆಗೆ ಉಪಯೋಗಿಸುವ ಕಲ್ಲುಗಳು ಮೂರಡಿ ಅಗಲ ಮೂರಡಿ ಉದ್ದ ಇವೆ. ಕೋಟೆಯ ಸುತ್ತ ಆಳವಾದ ಕಂದಕಗಳಿವೆ. ಈ ಕಂದಕಗಳನ್ನು ಕೊಳಗಳಾಗಿ ವಿಂಗಡಿಸಿ ಅವುಗಳ ತುಂಬ ನೀರು ನಿಲ್ಲಿಸಿದ್ದಾರೆ.

ಕೋಟೆಯ ಮೇಲೆ ಅನೇಕ ಫಿರಂಗಿಗಳನ್ನು ಇಟ್ಟಿದ್ದಾರೆ. ಕೋಟೆಯನ್ನು ಪ್ರವೇಶಿಸಲು ಹಲವಾರು ಹೆಬ್ಬಾಗಿಲುಗಳಿದ್ದರೂ ತೆರೆಯುವುದು ಎರಡನ್ನು ಮಾತ್ರ. ನಾವು ಕೋಟೆಯೊಳಕ್ಕೆ ಪ್ರವೇಶಮಾಡುವಾಗ ಒಂದು ದೊಡ್ಡ ಕೆರೆಯ ಮೇಲೆ ಕಟ್ಟಿದ ಸೇತುವೆಯನ್ನು ದಾಟಿ ಹೋದೆವು. ಎರಡು ಶಿಖರಗಳ ಮಧ್ಯೆ ಇದ್ದ ಸುತ್ತು ಸುತ್ತಾದ ದಾರಿಯಲ್ಲಿ ಹೋಗಿ ಒಂದು ದೊಡ್ಡ ಹೆಬ್ಬಾಗಿಲ ಬಳಿಗೆ ಬಂದೆವು. ಸಿಪಾಯಿಗಳು-ಶಿಲಾ ಪೀಠದ ಮೇಲೆ ಕುಳಿತು ಹೆಬ್ಬಾಗಿಲಿನಲ್ಲಿ ಕಾಯುತ್ತಿದ್ದರು. ಅವರ ಪಕ್ಕದಲ್ಲಿ ಖಡ್ಗಗಳು ಇದ್ದುವು. ಗೌರ್ನರ್‌ನಿಂದ ಅನುಮತಿ ಪಡೆದ ಮೇಲೆಯೇ ನಮಗೆ ಪ್ರವೇಶ ದೊರೆಯಿತು.

ಕೋಟೆಯೊಳಗೆ ರಾಜನ ಅರಮನೆಯಲ್ಲದೆ ಬೇರೆ ಕಟ್ಟಡಗಳಿಲ್ಲ. ಕೆಲವು ಅಧಿಕಾರಿಗಳ ಮನೆಗಳು ಮಾತ್ರ ಇವೆ. ಅರಮನೆ ದೊಡ್ಡದು. ಅಲ್ಲಿ ನಿಂತು ಸುತ್ತು ಮುತ್ತಣ ಪ್ರದೇಶವನ್ನೆಲ್ಲಾ ನೋಡಬಹುದು. ರಾಜನ ಪರಿವಾರದಲ್ಲಿರುವ ಒಬ್ಬ ಫ್ಲೆಮಿಷ್ ಸರ್ಜನ್ ಹೇಳಿದಂತೆ, ರಾಜನು ಇರುವ ಕೋಣೆಯಲ್ಲಿ ಒಂದು ಕಂಡಿ ಇದೆ ಯಂತೆ. ಅಲ್ಲಿಂದ ಇಡೀ ಕೋಟೆಯನ್ನೇ ಅಲ್ಲದೆ ಸುತ್ತುಮುತ್ತಣ ಪ್ರದೇಶವನ್ನೂ ಭಾಗನಗರವನ್ನೂ ನೋಡಬಹುದಂತೆ. ರಾಜನಿರುವ ಕೋಣೆಗೆ ಹೋಗಬೇಕಾದರೆ ಹನ್ನೆರಡು ಬಾಗಿಲುಗಳನ್ನು ದಾಟಬೇಕಾಗುತ್ತದೆ ಎಂದು ಆತ ಹೇಳಿದ. ಅಧಿಕಾರಿಗಳಲ್ಲಿ ಬಹುಮಂದಿ ಕೋಟೆಯೊಳಗೇ ಇದ್ದಾರೆ. ಅಲ್ಲಿ ಸೊಗಸಾದ ಅಂಗಡಿ ಬೀದಿಗಳಿವೆ; ಬೇಕಾದುದೆಲ್ಲಾ ಸಿಕ್ಕುತ್ತದೆ. ಅಮೀರರೂ ಮತ್ತಿತರ ಶ್ರೀಮಂತರೂ ಭಾಗನಗರದಲ್ಲಿ ಕಟ್ಟಿಕೊಂಡಿರುವ ಮನೆಗಳಲ್ಲದೆ ಇಲ್ಲಿಯೂ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

ರಾಜನ ಅರಮನೆಯಲ್ಲಿ ಅತ್ಯುತ್ತಮವಾದ ಕುಶಲ ಕೆಲಸಗಾರರು ಇದ್ದಾರೆ. ರಾಜನು ಅವರಿಗೆ ವಾಸಕ್ಕೆ ಪ್ರಕ್ಕಟ್ಟೆಯಾಗಿ ಮನೆಗಳನ್ನು ಕಟ್ಟಿಸಿಕೊಟ್ಟಿದ್ದಾನೆ. ಅಕ್ಕಸಾಲಿಗರನ್ನು ಅರಮನೆಯೊಳಗೇ ಇಟ್ಟುಕೊಂಡಿದ್ದಾನೆ. ಬೆಲೆಯಾದ ವಜ್ರಗಳನ್ನು ಸಾಣೆ ಹಿಡಿಯುವ ಕೆಲಸವನ್ನು ಇವರಿಗೆ ಮಾತ್ರ ವಹಿಸುತ್ತಾನೆ. ಈ ವಿಷಯವನ್ನು ಯಾರಿಗೂ, ಅದರ ಲ್ಲಿಯೂ ಔರಂಗಜೇಬನಿಗೆ ತಿಳಿಸಕೂಡದೆಂದು ಅವನ ಕಟ್ಟಾಜ್ಞೆಯಿದೆ. ಔರಂಗಜೇಬನಿಗೆ ಗೊತ್ತಾದರೆ ವಜ್ರಗಳು ತನಗೇ ಬೇಕೆಂದು ಹೇಳಿಯಾನೆಂಬ ಹೆದರಿಕೆಯಿದೆ. ಈ ಅಕ್ಕ ಸಾಲಿಗರಿಗೆ ಅರಮನೆಯಲ್ಲಿಯೇ ಕೈತುಂಬ ಕೆಲಸ ಇರುವುದರಿಂದ ಬೇರೆಯವರ ಕೆಲಸ ತೆಗೆದುಕೊಳ್ಳುವ ಆವಶ್ಯಕತೆ ಇರುವುದಿಲ್ಲ.

ರಾಜನ ಬಳಿ ಅತ್ಯುತ್ತಮವಾದ ಗೋರೋಜನದ ಭಂಡಾರವಿದೆ. ಗೋರೋಜನ ಆಡು, ಹಸು ಮತ್ತು ಕೋತಿಗಳಿಂದ ದೊರೆಯುತ್ತದೆ. ಕೋತಿಯ ಗೋರೋಜನ ಅತ್ಯುತ್ತಮವಾದುದು.

ಕೋಟೆಯಿಂದ ಸ್ವಲ್ಪದೂರದಲ್ಲಿ ಗೋಲ್ಕೊಂಡಾ ರಾಜರ, ಅವರ ಹೆಂಡತಿಯರ ಮತ್ತು ಅವರ ಸಂತತಿಯವರ ಗೋರಿಗಳಿವೆ. ಒಂದೊಂದಕ್ಕೂ ಒಂದೊಂದು ದೊಡ್ಡ ಉದ್ಯಾನವಿರುವುದರಿಂದ ಗೋರಿಗಳು ವಿಶಾಲವಾದ ಪ್ರದೇಶವನ್ನು ಆಕ್ರಮಿಸಿಕೊಂಡಿವೆ.

ಈಗಿರುವ ಗೋಲ್ಕೊಂಡಾ ರಾಜನ ಹೆಸರು ಅಬ್ದುಲ್ಲಾ ಕುತುಬ್ ಷಾ ಎಂದು. ಇವನು ಷಿಯಾ ಪಂಥಕ್ಕೆ ಸೇರಿದವನು. ಈತ ಹಿಂದಿನ ರಾಜನಿಗೆ ಬ್ರಾಹ್ಮಣ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಎರಡನೆಯ ಮಗ. ಈತನ ಹೆಸರು ಅಬ್ದುಲ್ಲಾ ಎಂದು. ಹುಡುಗನ ಹದಿನೈದು ವರ್ಷ ವಯಸ್ಸಿನಲ್ಲಿ ತಂದೆ ತೀರಿಹೋದ. ತಾಯಿಗೆ ತನ್ನ ಮೊದಲನೆಯ ಮಗನಿಗಿಂತ ಈ ಎರಡನೆಯ ಮಗನ ಮೇಲೆ ಹೆಚ್ಚು ಪ್ರೀತಿ. ಹಿರಿಯ ಮಗನನ್ನು ಸೆರೆಮನೆಯಲ್ಲಿರಿಸಿ, ಕಿರಿಯ ಮಗನನ್ನು ಸಿಂಹಾಸನಕ್ಕೇರಿಸಿದಳು. ಆತ ೧೬೫೬ರವರೆಗೆ ಬಂಧನದಲ್ಲಿದ್ದನು. ಆ ವೇಳೆ ಔರಂಗಜೇಬನು ಗೋಲ್ಕೊಂಡಾ ರಾಜ್ಯದ ಮೇಲೆ ದಂಡೆತ್ತಿ ಬಂದ. ತನ್ನ ಸೆರೆ ಬಿಡಿಸಿ ತನಗೆ ಸೇನಾಧಿಪತ್ಯವನ್ನು ವಹಿಸಿದರೆ ತಾನು ಔರಂಗಜೇಬನ ಮೇಲೆ ಯುದ್ಧಮಾಡಿ ಅವನನ್ನು ಸೋಲಿಸುವೆನೆಂದು ಬಂಧನ ದಲ್ಲಿದ್ದ ಹಿರಿಯ ಮಗ ರಾಜನಾಗಿದ್ದ ತಮ್ಮನಿಗೆ ಹೇಳಿಕಳುಹಿಸಿದ. ಇದರಲ್ಲೇನೋ ಮೋಸ ಇದೆ ಎಂದು ಊಹಿಸಿದ ತಮ್ಮ ಅಣ್ಣನಿಗೆ ವಿಷಹಾಕಿಸಿ ಸಾಯಿಸಿದನು.

ಗೋಲ್ಕೊಂಡಾ ರಾಜನು ಐದು ಲಕ್ಷ ಸಿಪಾಯಿಗಳಿಗೆ ಸಂಬಳ ಬಟವಾಡೆ ಮಾಡುತ್ತಾನೆ. ಇಲ್ಲಿಯವರೆಗೆ ರಾಜನು ಭಾಗನಗರದಲ್ಲಿರುವ ತನ್ನ ಅರಮನೆಗೆ ಹೋಗಿಬರುತ್ತಿದ್ದ. ಈಚೆಗೆ ಎಂಟು ವರ್ಷಗಳಿಂದ ಅಲ್ಲಿಗೆ ಹೋಗುತ್ತಾ ಇಲ್ಲ. ಔರಂಗ ಜೇಬನು ಭಾಗನಗರದ ಮೇಲೆ ಧಾಳಿಮಾಡಿ ಊರನ್ನು ಸೂರೆ ಮಾಡಿದಂದಿನಿಂದ ಅಲ್ಲಿಗೆ ಹೋಗಿಲ್ಲ. ಗೋಲ್ಕೊಂಡಾದಿಂದ ಹೇಗೋ ರಾಜನು ತಪ್ಪಿಸಿಕೊಂಡು ಹೊರ ಬಂದ. ರಾಜಮಾತೆಯನ್ನು ಬಿಟ್ಟರೆ ರಾಜನ ನಂಬಿಕೆಗೆ ಅರ್ಹರಾದವರೆಂದರೆ ಸೈಯದ್ ಮುಜಾಫರ್ ಮತ್ತು ಬ್ರಾಹ್ಮಣರು ಮಾತ್ರ. ರಾಜನ ಹೆಂಡತಿ ಬ್ರಾಹ್ಮಣ ಜಾತಿಯವ ಳಾದ ಕಾರಣವೇ ರಾಜನು ಬ್ರಾಹ್ಮಣರಲ್ಲಿ ನಂಬಿಕೆ ಇಡಲು ಕಾರಣವಾಗಿದೆ. ಇದೇ ಕಾರಣದಿಂದಲೇ ಬ್ರಾಹ್ಮಣರು ರಾಜನ ಸುತ್ತ ಮುತ್ತಿಕೊಂಡಿದ್ದಾರೆ. ಅವರು ಹೇಳಿದಂತೆ ಕೇಳುತ್ತಾನೆ. ಬೇರೆಯವರ ಮಾತಿಗೆ ಕಿವಿಗೊಡುವುದಿಲ್ಲ.

ಈ ರಾಜ ಮೊಗಲರಿಗೆ ತುಂಬಾ ಹೆದರಿಕೊಳ್ಳುತ್ತಾನೆ. ತಪ್ಪುಮಾಡಿದ ಅಮೀರ ರಿಗೆ ತಕ್ಕ ಶಿಕ್ಷೆ ಕೊಡುವುದಿಲ್ಲ. ಎಂಥ ತಪ್ಪು ಮಾಡಿದರೂ ಕೇವಲ ದಂಡ ಹಾಕುತ್ತಾನೆ ಅಷ್ಟೆ. ಹೀಗಾಗಿ ಡಚ್ಚರೂ ರಾಜನನ್ನು ಹೇಗೆಂದರೆ ಹಾಗೆ ಕಾಣುತ್ತಾರೆ. ರಾಜ ತಾನ

ಮಚ್ಛಲಿಪಟ್ಣದ ಬಳಿ ಸಿಕ್ಕಿದ ಇಂಗ್ಲಿಷರ ಹಡಗೊಂದನ್ನು ರಕ್ಷಿಸುವುದಾಗಿ ಭರವಸೆ ನೀಡಿದ್ದರೂ ಡಚ್ಚರಿಗೆ ಹೆದರಿ ಅದನ್ನು ಬಿಟ್ಟುಕೊಟ್ಟನು.

ರಾಜನ ಅಧೀನದಲ್ಲಿರುವ ಅಮೀರರೆಲ್ಲ ಬಹುತೇಕ ಪರ್ಷಿಯನರು. ಇವರೆಲ್ಲ ಭಾರಿ ಶ್ರೀಮಂತರು. ರಾಜನಿಂದ ಪಡೆಯುವ ವಾರ್ಷಿಕ ಬಟವಾಡೆ ಜೊತೆಗೆ ತಾವು ಇಟ್ಟುಕೊಂಡಿರಬೇಕಾದ ಸಿಪಾಯಿಗಳಿಗೆ ತಮ್ಮ ಕೈಯಿಂದ ಅರ್ಧ ಸಂಬಳ ಕೊಡಬೇಕೆಂಬ ನೆಪದಲ್ಲಿ ಜನರಿಂದ ಸಾಕಷ್ಟು ಹಣ ಸುಲಿಗೆ ಮಾಡುತ್ತಾರೆ. ರಾಜ್ಯದ ಗ್ರಾಮಗಳೂ ಅಲ್ಲಿರುವ ಜಮೀನುಗಳೂ ಇವರಿಗೆ ಸೇರಿವೆ. ಬ್ರಾಹ್ಮಣರ ಮೂಲಕ ರೈತರಿಂದ ಹಣ ಸುಲಿಗೆ ಮಾಡುತ್ತಾರೆ. ಈ ಅಮೀರರು ಮನೆಯಿಂದ ಹೊರಗೆ ಆನೆ, ಕುದುರೆ ಅಥವಾ ಪಲ್ಲಕ್ಕಿಗಳ ಮೇಲೆ ತಮ್ಮ ಸಕಲ ಪರಿವಾರ ಸಮೇತ ವೈಭವದಿಂದ ಹೊರಡುತ್ತಾರೆ.

ರಾಜನ ಆಸ್ಥಾನದಲ್ಲಿ 'ಪುಟ್ಟ ಅಳಿಯ' ಎಂಬ ಒಬ್ಬ ತಂಟೆಕೋರ ಸೇರಿಕೊಂಡಿದ್ದಾನೆ. ಈತನಿಗೆ ರಾಜ ತನ್ನ ಮೂರನೆಯ ಮಗಳನ್ನು ಕೊಟ್ಟು ಮದುವೆ ಮಾಡಿದ್ದಾನೆ. ಸಿಂಹಾಸನ ತನಗೇ ಸಲ್ಲಬೇಕೆಂದು ಹೇಳಿಕೊಂಡು ಈತ ಏನೇನೋ ಪಿತೂರಿಗಳನ್ನು ನಡೆಸುತ್ತಿದ್ದಾನೆ.

ಭಾಗನಗರದಲ್ಲಿ ಮೂರ್ ಜಾತಿಗೆ ಸೇರಿದ ಒಬ್ಬ ಸಂತನಿದ್ದಾನೆ. ಮಹಮ್ಮದೀಯರಿಗೆಲ್ಲ ಇವನಲ್ಲಿ ಅಪಾರ ಗೌರವ. ನಾನು ಕರ್ನಾಟಕದಲ್ಲಿ ಪ್ರವಾಸ ಮಾಡುತ್ತಿದ್ದಾಗ ಈತನಿಗೆ ಆ ಪುಟ್ಟ ಅಳಿಯ ಆಭರಣಗಳ ಕಾಣಿಕೆಯನ್ನು ಹೇರಳವಾಗಿ ಕೊಟ್ಟನಂತೆ—ತನ್ನ ಆಸೆ ನೆರವೇರಲಿ ಎಂದು.

ಗೋಲ್ಕೊಂಡಾ ರಾಜನಿಗೆ ಭಾರಿ ಹುಟ್ಟುವಳಿ ಇದೆ. ರಾಜ್ಯದ ಭೂಮಿಯೆಲ್ಲಾ ಅವನಿಗೆ ಸೇರಿದ್ದು. ಯಾರು ಹೆಚ್ಚು ಗೇಣಿ ಕೊಡುತ್ತಾರೋ ಅಂಥವರಿಗೆ ಅದನ್ನು ವಹಿಸುತ್ತಾನೆ. ರಾಜ್ಯದ ಮೂಲಕ ಸಾಗಿಸುವ ಸರಕುಗಳಿಗೂ ಮಚ್ಛಲಿಪಟ್ಣ ಮತ್ತು ಮದ್ರಾಸ್ ಪಟ್ಟಣದ ಬಂದರುಗಳಿಂದ ಬರುವ ಸರಕುಗಳಿಗೂ ವರ್ತಕರು ಸುಂಕ ಕೊಡಬೇಕು. ಇಲ್ಲಿ ಯಾವ ಸರಕಿಗೂ ಸುಂಕವಿಲ್ಲದೆ ಇಲ್ಲ.

ವಜ್ರದ ಗಣಿಗಳಿಂದಲೂ ರಾಜನಿಗೆ ಅಪಾರ ಆದಾಯವಿದೆ. ವಜ್ರ ಸಿಕ್ಕಲಿ, ಸಿಕ್ಕದಿರಲಿ ಅವನ್ನು ಗುತ್ತಿಗೆ ಪಡೆದ ಗೇಣಿದಾರರು ಪಾಲು ಕೊಡಬೇಕು. ಕೆಲಸಗಾರರು ಗಂಟೆಗೆ ಒಂದು ಪಗೋಡಾ ಕೊಡಬೇಕು. ಈ ಗಣಿಗಳು ಹೆಚ್ಚಾಗಿ ಕರ್ನಾಟಕದಲ್ಲಿವೆ. ಅಲ್ಲಿ ೬,೦೦೦ ಜನರು ಹಗಲು ರಾತ್ರಿ ಕೆಲಸದಲ್ಲಿ ತೊಡಗಿದ್ದಾರೆ.

ರಾಜನ ಕಿರೀಟದಲ್ಲಿರುವ ಒಂದು ವಜ್ರ ಒಂದು ಅಡಿ ಉದ್ದ ಮೂರು ನಾಲ್ಕು ಅಂಗುಲ ಅಗಲ ಇದೆ. ಇದಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲವಂತೆ. ಇದಲ್ಲದೆ ಕಿರೀಟದಲ್ಲಿ ಬಗೆಬಗೆಯ ವಜ್ರವೈಢೂರ್ಯಗಳಿವೆ. ವಜ್ರ ವೈಢೂರ್ಯಗಳಲ್ಲಿ ಈ ರಾಜನನ್ನು ಮೀರಿಸುವ ರಾಜ ಇನ್ನೊಬ್ಬನಿಲ್ಲ. ಕೊಂಡುಕೊಳ್ಳುವ ವರ್ತಕರಿದ್ದರೆ ಮಾತ್ರ ಈ ವಜ್ರ ವೈಢೂರ್ಯಗಳಿಗೆ ದೊರೆಯುವ ಹಣ ಎಷ್ಟೆಂದು ಲೆಕ್ಕಹಾಕಲು ಸಾಧ್ಯ !

7

ನಾನು ಗೋಲ್ಕೊಂಡಾ ರಾಜ್ಯದಲ್ಲಿ ಎರಡು ತಿಂಗಳುಗಳ ಕಾಲ ಅಂದರೆ ಮಳೆಗಾಲದವರೆಗೆ ಇದ್ದೆ. ಜೂನ್ ತಿಂಗಳಲ್ಲಿ ಗುಡುಗು ಸಿಡಿಲಿನ ಮಳೆ ಆರಂಭವಾಯಿತು. ಜುಲೈ ತಿಂಗಳ ಮಧ್ಯದವರೆಗೆ ಮಳೆ ಸುರಿಯುತ್ತಲೇ ಇತ್ತು. ಸ್ವಲ್ಪ ಬಿಡುವು ಕೊಟ್ಟು ಮತ್ತೆ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಭಾರಿ ಮಳೆ ಬಿತ್ತು. ಆದರೆ ಆಗ ಗುಡುಗು ಸಿಡಿಲುಗಳಿರಲಿಲ್ಲ. ನದಿಗಳು ತುಂಬಿ ಹರಿಯುತ್ತಿದ್ದುವು. ಸೇತುವೆಗಳೂ ಮುಳುಗಿದ್ದುವು. ಆನೆಗಳಿಲ್ಲದೆ ನದಿಗಳನ್ನು ದಾಟುವಂತಿರಲಿಲ್ಲ. ಭಾಗನಗರದ ನದಿಯು ದಡ ಮೀರಿ ಹರಿದ ಕಾರಣ ೨,೦೦೦ ಮನೆಗಳು ಕುಸಿದು ಬಿದ್ದುವು; ಅನೇಕ ಜನರು ಸತ್ತರು.

ಹೊಲಗದ್ದೆಗಳಲ್ಲಿ ಎಲ್ಲಾ ಬಗೆಯ ದವಸಧಾನ್ಯಗಳನ್ನು ಬೆಳೆಯುತ್ತಾರೆ. ದ್ರಾಕ್ಷಿ ಹಣ್ಣಿನ ಬೆಳೆ ಹೇರಳ. ಈ ಹಣ್ಣುಗಳಿಂದ ಬಿಳಿಯ ಮದ್ಯ ತಯಾರಿಸುತ್ತಾರೆ. ಈ ಗೋಲ್ಕೊಂಡಾ ರಾಜ್ಯದಲ್ಲಿಯೂ ಬತ್ತ ಮತ್ತು ಇತರ ಧಾನ್ಯಗಳನ್ನು ಎರಡು ಬೆಳೆ ಬೆಳೆಯುತ್ತಾರೆ.

ಭಾಗನಗರದಲ್ಲಿ ಸಾಕಷ್ಟು ಕಾಲ ತಂಗಿದ ಮೇಲೆ ಮಳೆಗಾಲವಾದರೂ ಚಿಂತೆಯಿಲ್ಲ ಎಂದು ಕಾರೊಮಂಡಲ ತೀರದ ನಾಡುಗಳನ್ನು ನೋಡಬೇಕೆಂಬ ಆಸೆಯಿಂದ ಮಚ್ಛಲಿಪಟ್ಟಣಕ್ಕೆ ಹೊರಟೆ. ಗಾಡಿಗಳಲ್ಲಾಗಲೀ ರಥಗಳಲ್ಲಾಗಲೀ ಪ್ರಯಾಣ ಮಾಡುವುದು ಸಾಧ್ಯವಿರಲಿಲ್ಲ. ಏಕೆಂದರೆ ದಾರಿಗಳೆಲ್ಲಾ ಹಾಳಾಗಿದ್ದುವು. ಅಲ್ಲದೆ ನದಿಗಳೆಲ್ಲಾ ತುಂಬಿ ಹರಿಯುತ್ತಿದ್ದುವು. ಈ ಕಾರಣ ಒಂದು ಕುದುರೆಯನ್ನು ಬಾಡಿಗೆಗೆ ತೆಗೆದುಕೊಂಡೆ. ನನ್ನ ಆಳುಗಳಿಗೂ ಸಾಮಾನಿಗೂ ಎರಡು ಎತ್ತುಗಳನ್ನು ಬಾಡಿಗೆಗೆ ಪಡೆದೆ.[೧] ಇಷ್ಟು ಏರ್ಪಾಟು ಮಾಡಿಕೊಂಡು ಕೆಲವು ವರ್ತಕರ ಜೊತೆ ಹೊರಟೆ.

ವಜ್ರ ಸಿಕ್ಕುವ 'ಗಣಿ'ಗೆ ಹೋಗಬೇಕಾದರೆ ಗೋಲ್ಕೊಂಡಾದಿಂದ ಆರೇಳು ದಿನ ಪ್ರಯಾಣ ಮಾಡಬೇಕು. ಆದರೆ ಗಣಿಗಳಲ್ಲಿ ನನಗೇನು ಕೆಲಸ ಇಲ್ಲದ್ದರಿಂದ ನಾನು ಸೀದಾ ಮಚ್ಛಲಿಪಟ್ಟಣಕ್ಕೆ ಹೋದೆ. ಈ ಪ್ರಯಾಣಕ್ಕೆ ಹತ್ತು ದಿನಗಳು ಹಿಡಿದುವು. ಮಳೆ ಇಲ್ಲದೆ ಇದ್ದರೆ ಈ ಪ್ರಯಾಣಕ್ಕೆ ಒಂದು ವಾರ ಸಾಕು.

ಮಚ್ಛಲಿಪಟ್ಟಣವು ಚಿಕ್ಕದಾದರೂ ಜನಭರಿತವಾಗಿದೆ. ಬೀದಿಗಳು ಕಿರಿದಾಗಿವೆ. ಮಾರ್ಚ್‌ನಿಂದ ಜುಲೈವರೆಗೆ ತಡೆಯಲಾರದಷ್ಟು ಬಿಸಿಲು, ಸೆಖೆ. ಇಲ್ಲಿ ಚೀಟಿಬಟ್ಟೆಗಳ ವ್ಯಾಪಾರ ಭಾರಿಯಾಗಿ ನಡೆಯುತ್ತದೆ. ಈ ಚೀಟಿಬಟ್ಟೆಗಳನ್ನು ಇಲ್ಲಿಯೇ ತಯಾರಿಸುವುದಲ್ಲದೆ ಸೆಂಟ್ ಥಾಮಸ್‌ನಿಂದಲೂ (ಮದ್ರಾಸಿನಿಂದಲೂ) ತರಿಸುತ್ತಾರೆ. ಈ ಬಟ್ಟೆಗಳು ಇಂಡೀಸಿನಲ್ಲಿ ಬೇರೆ ಕಡೆ ತಯಾರಾದ ಬಟ್ಟೆಗಳಿಗಿಂತ ಹೆಚ್ಚು ನವುರಾಗಿಯೂ ಅಂದಚಂದವಾಗಿಯೂ ಇವೆ.

---

೧. ಇತ್ತೀಚಿನವರೆಗೆ ಸವಾರಿಗೆ ಎತ್ತುಗಳನ್ನು ಉಪಯೋಗಿಸುತ್ತಿದ್ದುದುಂಟು.

ಇಲ್ಲಿಯ ಸಮುದ್ರತೀರ ತುಂಬಾ ಅನುಕೂಲವಾಗಿರುವುದರಿಂದ ಎಲ್ಲ ರಾಷ್ಟ್ರಗಳಿಂದ ಹಡಗುಗಳು ಇಲ್ಲಿಗೆ ಬರುತ್ತವೆ; ಮತ್ತು ಇಲ್ಲಿಂದ ಬೇರೆ ದೇಶಗಳಿಗೆ ಹೋಗುತ್ತವೆ. ನಾನು ಈ ಊರಿನಲ್ಲಿ ಕೊಚಿನ್ ಚೀನಾ, ಸಯಾಂ, ಪೆಗು ಮತ್ತು ಇತರ ಅನೇಕ ಪೂರ್ವರಾಜ್ಯಗಳಿಗೆ ಸೇರಿದ ಜನರನ್ನು ಕಂಡೆ.

ಕಾರೋಮಂಡಲ ತೀರದ ಬೇರೆ ಕಡೆಗಳಲ್ಲಿರುವಂತಹ ಹಿಂದೂಗಳು ಈ ನಾಡಿನಲ್ಲಿಯೂ ಇದ್ದಾರೆ. ಇವರ ದೇವಸ್ಥಾನಗಳಲ್ಲಿ ಕಾಮಪ್ರಚೋದಕವಾದ ಪೈಶಾಚಿಕ ಮೂರ್ತಿಗಳಿವೆ. ಈ ದೇವಸ್ಥಾನಗಳಿಗೆ ಹೋಗಲು ಭೀತಿಯಾಗುತ್ತದೆ. ಇಲ್ಲಿ ಸಾಮಾನು ಸರಂಜಾಮುಗಳು ತುಂಬಾ ಅಗ್ಗ. ನಮ್ಮ ಕ್ಯಾರವಾನ್‌ನವರು ಹನ್ನೆರಡು ಪೆನ್ನಿಗಳಿಗೆ ಒಂದು ಕುರಿ, ಅರ್ಧ ಪೆನ್ನಿಗೆ ಒಂದು ಕವುಜಗ ಹಕ್ಕಿ, ಎರಡು ಪೆನ್ನಿಗೂ ಕಡಿಮೆ ದುಡ್ಡಿಗೆ ಒಂದು ಕೋಳಿ ಕೊಂಡುಕೊಂಡರು. ಇಡೀ ಕಾರೊಮಂಡಲ ತೀರದಲ್ಲೆಲ್ಲಾ ಇಷ್ಟೇ ಅಗ್ಗ.

ಮೈಲಾಪುರ ಮತ್ತು ಸೆಂಟ್‌ಥಾಮಸ್‌ಗಳನ್ನು ಪೋರ್ಚುಗೀಸರಿಂದ ಮೂರರು ೧೬೬೭ರಲ್ಲಿ ತೆಗೆದುಕೊಂಡರು.

ಇಲ್ಲಿ ಸುಣ್ಣದ ಕಲ್ಲನ್ನು ಹಂದಿ ಸಗಣಿಯ ಬೆರಣಿಯಲ್ಲಿ ಸುಟ್ಟು ಒಳ್ಳೆಯ ಸುಣ್ಣ ತಯಾರಿಸುತ್ತಾರೆ.

ಈ ನಾಡಿನಲ್ಲಿ ಸಿಡುಬಿನ ಉಪದ್ರವ ಆಗಾಗ್ಗೆ ಕಾಣಿಸಿಕೊಳ್ಳುತ್ತದೆ. ಇದಕ್ಕಿಂತ 'ಅಕೆರಾನ್' (Akeron) ಎಂಬ ಕಾಯಿಲೆ ಇಲ್ಲಿ ಹೆಚ್ಚು. ಇದು ಮಕ್ಕಳಿಗೆ ಬರುವ ಕಾಯಿಲೆ. ಬಾಯಿ, ನಾಲಗೆ ಊದಿಕೊಳ್ಳುತ್ತದೆ; ವಿಪರೀತ ಜ್ವರ ಬರುತ್ತದೆ. ಜನರು ಇಲ್ಲಿ ಸಿಗುವ ನಾರು ಬೇರುಗಳಿಂದ ಈ ಕಾಯಿಲೆಯನ್ನು ವಾಸಿಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಹಾಗೆ ಮಾಡದೆ ಹೋದಲ್ಲಿ ಸಾವು ಖಂಡಿತ.

ಸೆಂಟ್ ಥಾಮಸ್‌ನಿಂದ ದಕ್ಷಿಣಕ್ಕಿರುವ ನಾಡಿನಲ್ಲಿ ಅನೇಕ 'ನಾಯಕರ್'ಗಳಿದ್ದಾರೆ. ಇವರೇ ಇಲ್ಲಿಯ ಅಧಿಪತಿಗಳು. ಈ ನಾಯಕರ್‌ಗಳಲ್ಲಿ ಮಧುರೆಯ ನಾಯಕನೂ ಒಬ್ಬ. ತಂಜಾವೂರಿನ ನಾಯಕ ಈಗ ವಿಜಯಪುರದ ರಾಜನಿಗೆ ಅಧೀನನಾಗಿದ್ದಾನೆ.

ಸೆಂಟ್ ಥಾಮಸಿನಿಂದ ಉತ್ತರಕ್ಕೆ ಪುಲಿಕಾಟ್ ಇದೆ. ಇಲ್ಲಿರುವ ಡಚ್ಚರ ಫ್ಯಾಕ್ಟೊರಿ ಇಂಡೀಸಿನಲ್ಲೆಲ್ಲಾ ಅತ್ಯುತ್ತಮವಾದುದು. ಅವರ ಗಡಂಗುಗಳ ತುಂಬ ಬಟ್ಟೆಗಳನ್ನು ಶೇಖರಿಸಿ ಇಟ್ಟಿದ್ದಾರೆ. ಬಂಗಾಳದಿಂದ ತಂದ ಪೆಟ್ಲುಪ್ಪನ್ನು ಇಲ್ಲಿ ಶೋಧಿಸಿ ಮದ್ದಿನಪುಡಿ ತಯಾರಿಸುತ್ತಾರೆ.

ಪುಲಿಕಾಟ್‌ನಲ್ಲಿರುವ ಡಚ್ ಗೌರ್ನರ್‌ಗೆ ತಿಂಗಳಿಗೆ ಐವತ್ತು ಡಚ್ ಕ್ರೌನುಗಳಷ್ಟು ಸಂಬಳ. ಜೊತೆಗೆ ಅವನ ಊಟ ತಿಂಡಿ ಮದ್ಯ ಎಣ್ಣೆ ಮುಂತಾದುವುಗಳ ಖರ್ಚಿಗೆ ಐವತ್ತು ಕ್ರೌನ್‌ಗಳು. ಅವನು ತನಗೆ ಬೇಕಾದ ಬಟ್ಟೆಗಳನ್ನು ಗಡಂಗುಗಳಿಂದ ಪುಕ್ಕಟ್ಟೆ ಪಡೆಯಬಹುದು.

'ರೂಪಾಯಿ', 'ಪಗೋದ್', 'ಫನಂ' ಮತ್ತು 'ಗಜೆರ್' ಎಂಬೀ ನಾಣ್ಯಗಳು ಇಲ್ಲಿ ಚಲಾವಣೆಯಲ್ಲಿವೆ. ನಲವತ್ತು ಗಜೆರ್‌ಗಳಿಗೆ ಒಂದು ಫನಂ. ಡಚ್ಚರು ಈಗ ಈ ನಾಣ್ಯಗಳನ್ನೆಲ್ಲಾ ಇಲ್ಲೇ ಟಂಕಿಸುತ್ತಾರೆ.

ಗೋಲ್ಕೊಂಡಾ ರಾಜ್ಯದಲ್ಲಿ ಸರ್ಪಗಳ ಕಾಟ ವಿಪರೀತ. ಇವು ಕಡಿದ ಕೂಡಲೇ ಔಷಧಿ ಹಾಕಿದರೆ ಸರಿ, ಇಲ್ಲದಿದ್ದರೆ ಸಾವು ತಪ್ಪಿದ್ದಲ್ಲ. ಉರಿಯುವ ಕಲ್ಲಿದ್ದಲನ್ನು ಕಡಿದ ಕಡೆ ಹಿಡಿದುಕೊಂಡರೆ ಅದು ವಿಷವನ್ನು ಹೀರಿಕೊಳ್ಳುತ್ತದೆ. ಸರ್ಪಮಣಿಯನ್ನು ಉಪಯೋಗಿಸಿಯೂ ವಿಷವನ್ನು ನಿವಾರಿಸಬಹುದು.

ಕಾರೊಮಂಡಲ ತೀರದ ಸ್ಥಳಗಳ ಪರಿಚಯ ಸಾಕಷ್ಟು ಆದಮೇಲೆ ನಾನು ಮಚ್ಲಿಪಟ್ಟದಿಂದ ಭಾಗನಗರಕ್ಕೆ ಹಿಂದಿರುಗಿದೆ. ಅಲ್ಲಿ ಮೂರು ವಾರ ಇದ್ದೆ. ಮೆಸ್ಯ ಬಜೋ (M.Bazon) ಅವರನ್ನು ಬಿಟ್ಟು ನಾನು ಹೊರಡುವಂತಿರಲಿಲ್ಲ. ಅವರಿಗೆ ಬೇರೆ ಕೆಲಸವಿತ್ತು. ಆದ್ದರಿಂದ ಅವರಿಗೋಸ್ಕರ ಕಾಯುತ್ತಾ ನಿಂತೆ. ಆಗ 'ಹುಸೇನ್' (ಮೊಹರಂ) ಹಬ್ಬ ನೋಡುವ ಅವಕಾಶ ಸಿಕ್ಕಿತು. ಎಲ್ಲರೂ ಮುಖ ಮೋರೆಗೆಲ್ಲ ಬೂದಿ ಬಳಿದುಕೊಂಡು ಮುಖವಾಡ ಹಾಕಿಕೊಂಡು ಹತ್ತು ದಿನಗಳು ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾ ತಿರುಗುತ್ತಾರೆ. ವಿವಿಧ ವೇಷಗಳನ್ನು ಹಾಕಿಕೊಂಡು ಕತ್ತಿ ಹಿಡಿದು 'ಹುಸೇನ್' ಎಂದು ಜೋರಾಗಿ ಕೂಗುತ್ತ ಕುಣಿಯುತ್ತಾರೆ. ಹಿಂದೂಗಳು ಸಹ ಈ ಹಬ್ಬದಲ್ಲಿ ವೇಷಹಾಕಿಕೊಂಡು ಮೂರರರಿಗಿಂತ ಹೆಚ್ಚಾಗಿ ಕುಣಿಯುತ್ತಾರೆ.

ಮೂರರು ಹತ್ತು ದಿನಗಳ ಕಾಲ ಉಪವಾಸ ಇದ್ದವರಂತೆ ನಟಿಸುತ್ತಾರೆ. ಆದರೆ ಮನೆಗಳಲ್ಲಿ ಪಟ್ಟಾಗಿ ತಿನ್ನುತ್ತಾರೆ. ಕೇವಲ ಹಣ್ಣುಹಂಪಲುಗಳನ್ನು ಮಾತ್ರ ತಿನ್ನು ತ್ತೇವೆಂದು ಬಾಯಲ್ಲಿ ಹೇಳುತ್ತಾರೆ.

ಈ ಹಬ್ಬದ ವೇಳೆ ಷಿಯಾಗಳಿಗೂ ಸುನ್ನಿಗಳಿಗೂ ಜಗಳ ತಪ್ಪಿದ್ದಲ್ಲ. ರಕ್ತ ಹರಿಯದೆ ಈ ಹಬ್ಬ ಮುಗಿಯುವುದೇ ಇಲ್ಲ. ಈ ಹಬ್ಬದ ಹತ್ತು ದಿನಗಳ ಕಾಲ ಸ್ವರ್ಗದ ಬಾಗಿಲು ತೆರೆದಿರುತ್ತದೆ ಎಂದು ಮೂರರ ನಂಬಿಕೆ. ಸತ್ತವರು ಸ್ವರ್ಗಕ್ಕೆ ಹೋಗುತ್ತಾರೆಂಬ ನಂಬಿಕೆಯಿಂದ ಸಾಯಲೂ ಸಿದ್ಧವಾಗಿರುತ್ತಾರೆ.

ಈ ಹಬ್ಬ ಮುಗಿದ ನಂತರ ಸೂರತ್ತಿಗೆ ಹೊರಡಲು ಸಿದ್ಧನಾಗಿರಬೇಕೆಂದು ಮುಸ್ಯ ಬಜೋ ಅವರು ಹೇಳಿಕಳುಹಿಸಿದರು. ನಾನು ಸಿದ್ಧತೆಗಳನ್ನು ಮಾಡಿಕೊಂಡೆ.

ನವೆಂಬರ್ ೧೩ನೆಯ ತಾರೀಖು ನಾವು ಭಾಗನಗರದಿಂದ ಹೊರಟೆವು. ಬಜೋ ಅವರು ರಾಜನಿಂದ ರಹದಾರಿ ಪಡೆದುಕೊಂಡಿದ್ದರಿಂದ ನಾವೆಲ್ಲಿ ಹೋದರೂ ಸುಂಕ ಸಾರಿಗೆ ಕೊಡಬೇಕಾಗಿರಲಿಲ್ಲ. ಎಲೆ ಅಡಕೆ ತೇವಲಿಗೆ ಒಂದಷ್ಟು ಹಣ ಕೊಟ್ಟರೆ ಸಾಕಾಗಿತ್ತು.

ನಾವು ಮೊದಲಿಗೆ ಗೋಲ್ಕೊಂಡಾಕ್ಕೆ ಬಂದ ದಾರಿ ಬಿಟ್ಟು ಬೇರೆ ದಾರಿಯಲ್ಲಿ ಸೂರತ್ತಿಗೆ ಹೊರಟೆವು. ದನೆಕ್ (Danec) ಎಂಬ ಸ್ಥಳಕ್ಕೆ ಬಂದಾಗ ಅಲ್ಲಿಯ ಮೂರು

ಗ್ರಾಮಗಳಲ್ಲಿ ಸುಂಕ ಕೇಳಿದರು. ಆಗ ನಮ್ಮ ರಹದಾರಿ ತೋರಿಸಿದೆವು. ಅವರು ಸುಮ್ಮನಾದರು. ಎಲೆ ಅಡಕೆ ಖರ್ಚಿಗೆ ಮಾತ್ರ ಸ್ವಲ್ಪ ಹಣ ಕೇಳಿ ಈಸಿಕೊಂಡರು. ಇದೇ ರೀತಿ ಬೇರೆ ಕಡೆಯೂ ಆಯಿತು.

ನಾನೂ ಬಜ಼ೋ ಅವರೂ ಒಟ್ಟಿಗೆ ಪ್ರಯಾಣ ಮಾಡಿ ನವೆಂಬರ್ ೨೧ನೆಯ ತಾರೀಖು ಪತ್ರಿ ಎಂಬ ಊರು ತಲುಪಿದೆವು. ದಾರಿ ಚೆನ್ನಾಗಿರಲಿಲ್ಲ. ದಾರಿಯಲ್ಲಿ ಮೊಮನ್‌ಪೇಟೆ, ಪಂಚ್ಕಿಗಲ್ (ಕಲ್ಬುರ್ಗಿ ಜಿಲ್ಲೆಯ), ಯಾದಗಿರಿ, ರಜ಼ೌರಾ (ಈಗಿನ ಅಹಮದ್‌ಪುರ) ಎಂಬೀ ಸಣ್ಣ ಪುಟ್ಟ ಪಟ್ಟಣಗಳೂ ಅನೇಕ ಹಳ್ಳಿಗಳೂ, ನೆರ್‍ವಾ, ಪೆನ್ನಾ, ಮೌಸಿ, ಕರೇಕ್ ಮತ್ತು ಮಂಜ್ರಾ ಎಂಬ ನದಿಗಳೂ ಸಿಕ್ಕಿದುವು. ಪತ್ರಿಯಿಂದ ನಾನು ಬ್ರಹ್ಮಪುರಕ್ಕೆ ಹೋದೆ. ಅಲ್ಲಿ ನನಗೆ ಕೆಲಸ ಇತ್ತು. ಬಜ಼ೋ ಅವರು ಓರಂಗಾಬಾದಿನಲ್ಲಿ ಕೆಲಸವಿದೆಯೆಂದು ಅಲ್ಲಿಗೆ ಹೋದರು.

ಬ್ರಹ್ಮಪುರಕ್ಕೆ ಹೋಗುವಾಗ ನನಗೆ ಪಟಾವ್, ನೆರ್, ಚೆಂದೇಕೆರ್, ಜಫ್ರಾವಾಡ್, ರೌಕೆರಾ ಮತ್ತು ಮಲ್ಕಾಪುರ್ ಎಂಬ ಪಟ್ಟಣಗಳೂ, ದೌದ್ನಾ, ನೆರ್‍ವಾರ್, ಪೂರ್ಣ ಮತ್ತು ತಪತಿ ನದಿಗಳೂ ಸಿಕ್ಕಿದುವು. ಬ್ರಹ್ಮಪುರವನ್ನು ಡಿಸೆಂಬರ್ ೯ನೆಯ ತಾರೀಖು ಗುರುವಾರ ತಲುಪಿದೆ.

ಬ್ರಹ್ಮಪುರದಿಂದ ಸೂರತ್ತಿಗೆ ಹೊರಟೆ. ದಾರಿಯಲ್ಲಿ ನನಗೆ ವಾಂತಿಭೇದಿ ಕಾಣಿಸಿಕೊಂಡಿತು. ಇದಕ್ಕೆ ತಕ್ಕ ಔಷಧಿ ನನಗೆ ಗೊತ್ತಿತ್ತು. ಕಬ್ಬಿಣವನ್ನು ಕಾಯಿಸಿ ಕಾಲಿನ ಹಿಮ್ಮಡಿಯ ಮೇಲೆ ಬರೆ ಬರುವವರೆಗೆ ಹಿಡಿದುಕೊಳ್ಳಬೇಕು. ಹೀಗೆ ಮಾಡಿದರೆ ವಾಂತಿಭೇದಿ ನಿಲ್ಲುತ್ತದೆ. ರೇವಲ್ಚಿನ್ನಿಯನ್ನೂ ಜೀರಿಗೆಯನ್ನೂ ಪುಡಿಮಾಡಿ ನಿಂಬೆಹಣ್ಣಿನ ರಸದಲ್ಲಿ ತೆಗೆದುಕೊಂಡರೆ ಭೇದಿ ನಿಲ್ಲುತ್ತದೆ. ಹಿಂಗಿಸಿದ ಅನ್ನವನ್ನು ಮಜ್ಜಿಗೆಯಲ್ಲಿ ಊಟಮಾಡಿದರೂ ಆಗುತ್ತದೆ. ಇವೆಲ್ಲಾ ಇಂಡೀಸಿನವರು ಅನುಸರಿಸುವ ವಿಧಾನಗಳು[೧].

ನಾನು ಬ್ರಹ್ಮಪುರದಿಂದ ಸೂರತ್ತಿಗೆ ಬನಿಯ ಮತ್ತು ಮುಲ್ಲ ಎಂಬಿಬ್ಬರ ಸಂಗಡ ಪ್ರಯಾಣ ಮಾಡಿದೆ. ಇವರಿಬ್ಬರೂ ರಾಜನ ಆಸ್ಥಾನದಿಂದ ಬರುತ್ತಿದ್ದರು. ಈ ಮುಲ್ಲ ತನ್ನ ಕಷ್ಟವನ್ನು ರಾಜನಲ್ಲಿ ನಿವೇದಿಸಿಕೊಂಡು ಆತನಿಂದ ಐದುನೂರು ರೂಪಾಯಿ ಕೊಡುಂಬಳಿ ಪಡೆದಿದ್ದನು. ಒಂದು ಗ್ರಾಮದ ಆದಾಯವನ್ನೇ ಅವನಿಗೆ ಕೊಡಲಾಗುತ್ತಿತ್ತು. ಬ್ರಹ್ಮಪುರದಿಂದ ಸೂರತ್ತಿಗೆ ಪ್ರಯಾಣ ಮಾಡಲು ಹದಿನೈದು ದಿನಗಳಾದುವು. ಒಂದು ಗಂಟೆ ಪ್ರಯಾಣದಲ್ಲಿ ಒಂದು ಬುರ್ಜೋ ಅಥವಾ ಹಳ್ಳಿಯೋ ಸಿಕ್ಕುತ್ತಿದ್ದುವು. ಅಲ್ಲದೆ, ಅನೇಕ ಪಟ್ಟಣಗಳೂ ನಗರಗಳೂ ಇದ್ದುವು. ಹಲವಾರು ಪರ್ವತಗಳನ್ನೂ ಎಂಟು ನದಿಗಳನ್ನೂ ದಾಟಿದೆವು. ದಾರಿಯಲ್ಲಿ ಆಗಾಗ್ಗೆ ಹುಲಿಗಳು ಕಾಣಿಸಿಕೊಳ್ಳು

---

೧. ಇವು ಈಗಲೂ ಜನಪದ ವೈದ್ಯಗಳಾಗಿ ಹಳ್ಳಿಗಳಲ್ಲಿ ಉಳಿದಿವೆ.

ತ್ತಿದ್ದುವು. ಇವುಗಳ ಕಾಟದಿಂದ ಪಾರಾಗಲು ಹಳ್ಳಿಯವರು ರಾತ್ರಿ ಹೊತ್ತು ಮರದ ಕೆಳಗೆ ಗುಡಿಸಲು ಹಾಕಿಕೊಂಡು ಕಾಯುತ್ತಿದ್ದುದನ್ನು ಕಂಡೆವು.

ಬದೂರ್ ರಾಜನ ಸೈನಿಕರಿಂದ ನಮಗೆ ತೊಂದರೆಯಾಗಬಹುದೆಂದು ಹೆದರಿದ್ದೆವು. ಇವರು ಖಾಂದೇಶ್ ಪರ್ವತಗಳಲ್ಲಿ ಅಡ್ಡಾಡುತ್ತಾ ತೊಂದರೆ ಕೊಡುತ್ತಾರೆ. ಆದರೆ ನಮಗೆ ಅಂಥಾದ್ದೇನೂ ಆಗಲಿಲ್ಲ. ಸುಖವಾಗಿ ಸೂರತ್ ಮುಟ್ಟಿದೆವು.

ಕೆಲವು ದಿನಗಳು ಸೂರತ್‌ನಲ್ಲಿ ವಿಶ್ರಾಂತಿ ಪಡೆದು ಮುಂದಿನ ಪ್ರಯಾಣಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನು ಒದಗಿಸಿಕೊಂಡೆ. ೧೬೬೦ನೆಯ ಫೆಬ್ರುವರಿಯಲ್ಲಿ ಹಡಗು ಹತ್ತಿ ಪರ್ಷಿಯಾದಲ್ಲಿರುವ ಬಂದರ್ ಅಬ್ಬಾಸ್ ಎಂಬಲ್ಲಿಗೆ ಬಂದೆ. ಹಡಗಿನಲ್ಲಿ ಪ್ರಯಾಣ ಮಾಡಲು ಒಬ್ಬ ಬನಿಯ ನನಗೆ ತುಂಬಾ ಸಹಾಯ ಮಾಡಿದ.

ಬಂದರ್ ಅಬ್ಬಾಸ್‌ನಿಂದ ಪಿರಾಜ್‌ಗೆ ಬಂದೆ. ಸಮುದ್ರದ ಮೇಲೆ ಬರುವಾಗ ನನ್ನ ಪಿಸ್ತೂಲ್‌ಗಳನ್ನು ಬಾರ್‌ಮಾಡಿ ಇಟ್ಟುಕೊಂಡಿದ್ದೆ. ಹಡಗಿನಿಂದ ಇಳಿದ ಮೇಲೆ ಒಂದು ಪಿಸ್ತೂಲ್‌ನಲ್ಲಿದ್ದ ಗುಂಡನ್ನು ತೆಗೆಯಲು ಮರೆತುಬಿಟ್ಟೆ. ಈ ಪಿಸ್ತೂಲಿನ ಗುಂಡು ನನ್ನ ತೊಡೆಗೆ ತಗುಲಿ ಗಾಯವಾಯಿತು.

ಮುಂದೆ ನಾನು ಪರ್ಷಿಯಾದ ರಾಜಧಾನಿಯಾದ ಇಸ್ಫಾಹಾನಿಗೆ ಹೋದೆ. ಅಲ್ಲಿ ನಾಲ್ಕೈದು ತಿಂಗಳು ಇದ್ದು ಗಾಯವನ್ನು ಕೊಂಚ ವಾಸಿಮಾಡಿಕೊಂಡು ಅಕ್ಟೋಬರ್ ೨೫ನೆಯ ತಾರೀಖು ಪ್ರಯಾಣ ಮುಂದುವರಿಸಿದೆ. ಅಲ್ಲಿಂದ ಕೋಮ್ ಎಂಬ ಪಟ್ಟಣಕ್ಕೆ ಬಂದೆ. ಪಿಸ್ತೂಲಿನಿಂದಾದ ಗಾಯ ಚೆನ್ನಾಗಿ ಮಾಯಲಿಲ್ಲ. ನೋವು ಇದ್ದೇ ಇತ್ತು. ಅಲ್ಲಿಂದ ಕಷ್ಟಪಟ್ಟು ಫರಸಾಂಕ್ ಎಂಬಲ್ಲಿಗೆ ಬಂದೆ.

(ಇಲ್ಲಿಯವರೆಗೂ ತೇವ್ನೊ ತನ್ನ ಪ್ರವಾಸಕಥನವನ್ನು ಬರೆಯುತ್ತಾಬಂದು ಇದ್ದಕ್ಕಿದ್ದಂತೆ ಅದನ್ನು ಇಲ್ಲಿಗೆ ನಿಲ್ಲಿಸುತ್ತಾನೆ. ಅವನ ತೊಡೆಗೆ ಆದ ಗಾಯದ ನೋವು ಹೆಚ್ಚಾಗಿರಬೇಕು. ಫರ್‌ಸಾಂಕ್ ಬುರುಜ್‌ನಿಂದ ಅವನು ಮೂವತ್ತು ಲೀಗ್‌ಗಳಷ್ಟು ದೂರ ಪ್ರಯಾಣ ಮಾಡಿ ಮಿಯಾನ್ ಎಂಬ ಪಟ್ಟಣಕ್ಕೆ ಬಂದು, ಅಲ್ಲಿಂದ ಪರಲೋಕಕ್ಕೆ ಹೊರಟನು)

# ಜೆಮೆಲ್ಲಿ ಕರೇರಿ

ಜೊವನಿ ಫ್ರಾನ್ಸೆಸ್ಕ ಜೆಮೆಲ್ಲಿ ಕರೇರಿ (Giovanni Francesca Gemelli Careri) ಇಟಲ್ಲಿ ದೇಶದ ರಡಿಸೇನ (Radisena) ಎಂಬ ಊರಿನ ಒಂದು ಹಿರಿಯ ಮನೆತನದಲ್ಲಿ ೧೬೫೧ರಲ್ಲಿ ಹುಟ್ಟಿದನು. ಹಣ್ಣುಹಣ್ಣು ಮುದುಕನಾಗುವವರೆಗೆ ಬಾಳಿ ೧೭೨೫ರಲ್ಲಿ ನೇಪಲ್ಸ್‌ನಲ್ಲಿ ಕಾಲವಾದನು. ನ್ಯಾಯಶಾಸ್ತ್ರದ ಅಭ್ಯಾಸಮಾಡಿದ ಈತನಿಗೆ ಅವನು ವಿದ್ಯಾಭ್ಯಾಸಮಾಡಿದ ವಿಶ್ವವಿದ್ಯಾಲಯ ನೀಡ ಬಹುದಾದ ಅತ್ಯಂತ ದೊಡ್ಡ ಪ್ರಶಸ್ತಿ ಡಾಕ್ಟರ್ ಆಫ್ ಲಾಸ್ (Doctor of Laws) ಎಂಬ ಪ್ರಶಸ್ತಿ ನೀಡಿ ಗೌರವಿಸಿತು. ಹಲವು ವರ್ಷಗಳ ಕಾಲ ವಕೀಲನಾಗಿ ಕೆಲಸಮಾಡಿದ ಈತನಿಗೆ ಗೃಹಕೃತ್ಯ ದಲ್ಲಿ ಏನೋ ಬೇಸರವಾಗಿ ಮನೆ ಬಿಟ್ಟು ಮನಸ್ಸಿಗೆ ಶಾಂತಿ ಪಡೆಯಲೆತ್ನಿಸಿದ. ಹಣಕ್ಕೆ ತಾಪತ್ರಯ ವಿರಲಿಲ್ಲವೆಂದು ಕಾಣುತ್ತದೆ.

ಮೊದಲು ಯೂರೋಪು ದೇಶಗಳಲ್ಲಿ ಅಡ್ಡಾಡಿದ. ೧೬೮೫ ರಿಂದ ೧೬೮೭ರವರೆಗೆ ಇಟಲಿ, ಫ್ರಾನ್ಸ್, ಇಂಗ್ಲೆಂಡ್, ಬೆಲ್ಜಿಯಂ, ಹಾಲೆಂಡ್, ಜರ್ಮನಿ ದೇಶಗಳಿಗೆ ಹೋಗಿಬಂದ. ೧೬೮೭ರಲ್ಲಿ ಹಂಗೇರಿಯಲ್ಲಿ ನಡೆದ ಯುದ್ಧದಲ್ಲಿ ಸ್ವಯಂಸೇವಕನಾಗಿ ಕೆಲಸಮಾಡಿರಬಹುದೆಂದು ಊಹೆ ಇದೆ. ೧೬೮೭ರ ನಂತರ ಪೋರ್ಚುಗಲ್ ಮತ್ತು ಸ್ಪೇಯ್ನ್ ದೇಶಗಳಿಗೆ ಹೋಗಿ ಎರಡು ವರ್ಷಗಳ ನಂತರ ಮನೆಗೆ ಹಿಂದಿರುಗಿದವನು ಮತ್ತೆ ತನ್ನ ವಕೀಲ ವೃತ್ತಿಯನ್ನು ಆರಂಭಿಸಿರಬಹುದು. ಆದರೆ ಮನೆಯವರು ತೋರಿಸಿದ ತಿರಸ್ಕಾರ ಮತ್ತು ಕೊಟ್ಟ ಕಿರುಕುಳಗಳಿಂದಾಗಿ ಈತ ದೂರದ ಪ್ರವಾಸವನ್ನು ಕೈಗೊಳ್ಳಲು ನಿರ್ಧರಿಸಿದ.

೧೬೯೩ನೆಯ ಜೂನ್ ತಿಂಗಳಲ್ಲಿ ಜೆರೂಸಲಂಗೆ ಹೋಗಿಬರುತ್ತೇನೆಂದು ಹೇಳಿ ಹೊರಟ. ಆದರೆ ಮನಸ್ಸಿನಲ್ಲಿ ಪ್ರಪಂಚ ಪರ್ಯಟನೆ ಮಾಡುವ ನಿರ್ಧಾರ ಮಾಡಿಕೊಂಡಿದ್ದ. ಈತನಿಗೆ ಆಗಲೇ ದೆವೆನೊ ಎಂಬ ಪ್ರವಾಸಿಯು ಬರೆದಿದ್ದ ಕಥನಗಳ ಪರಿಚಯವಾಗಿತ್ತು. ಆದರೆ ಆತನ ಪ್ರವಾಸಮಾರ್ಗ ವನ್ನು ಈತ ಅನುಸರಿಸಿದನೆಂದು ಹೇಳಲಾಗುವುದಿಲ್ಲ.

ಮೊದಲು ಸಿಸಿಲಿ ಮತ್ತು ಮಾಲ್ಟಾಗಳಿಗೆ ಹೋಗಿ, ಅಲ್ಲಿಂದ ಅಲೆಗ್ಸಾಂಡ್ರಿಯಾಕ್ಕೆ ತನ್ನ ಪ್ರವಾಸ ವನ್ನು ಮುಂದುವರಿಸಿದ. ನೈಲ್ ನದಿಯ ಮೇಲೆ ಸಾಗಿ ಈಜಿಪ್ಟ್ ದೇಶದ ಪುರಾತನ ಅವಶೇಷಗಳನ್ನು ನೋಡಿದ. ಈಜಿಪ್ಟಿನಿಂದ ಪ್ಯಾಲೆಸ್ಟೈನಿಗೆ ಹೋದ. ಅಲ್ಲಿಂದ ಸಮುದ್ರಮಾರ್ಗವಾಗಿ ಅಲೆಕ್ಸಾಂಡ್ರಿ ಯಾಕ್ಕೆ ಹಿಂದಿರುಗಿ ಅಕ್ಟೋಬರ್ ೧೫ನೆಯ ತಾರೀಖು ಸ್ಮಿರ್ನಾಕ್ಕೆ ಹೊರಟ. ಎರಡು ತಿಂಗಳ ನಂತರ ಆ ಪಟ್ಟಣವನ್ನು ಬಿಟ್ಟು ಗಲ್ಲಿಪೊಲಿಗೆ (Gallipoli) ಹೋದ. ಅಲ್ಲಿಂದ ಅಡ್ರಿಯಾನೋಪಲ್ ವರೆಗೂ ಹೋಗಿ ೧೬೯೪ನೆಯ ಜನವರಿಯಲ್ಲಿ ಕಾನ್‌ಸ್ಟಾಂಟಿನೋಪಲ್ ತಲುಪಿದ. ಸ್ಮಿರ್ನಾದಲ್ಲಿ ಬಿಟ್ಟುಬಂದಿದ್ದ ಸಾಮಾನುಗಳನ್ನು ತೆಗೆದುಕೊಳ್ಳಲು ಅಲ್ಲಿಗೆ ಹಿಂದಿರುಗಿದವನು ಟ್ರೆಬಿಜೋಂಡ್‌ಗೆ (Trebizond) ಹೊರಟ. ಆರ್ಮೀನಿಯಾ ಮತ್ತು ಜಾರ್ಜಿಯ ಪರ್ವತಗಳನ್ನು ದಾಟಿ ಪರ್ಷಿಯಾ ಹೊಕ್ಕು ಜುಲೈ ೧೭ನೆಯ ತಾರೀಖು ಇಸ್ಫಹಾನ್‌ಗೆ ಬಂದ. ಅಲ್ಲಿದ್ದ ಪೊಲಿಷ್ ದೇಶದ ರಾಯಭಾರಿ ಯೊಡನೆ ಈ ಮೊದಲೇ ಆಗಿದ್ದ ಸ್ನೇಹವನ್ನು ಉಪಯೋಗಿಸಿಕೊಂಡು ಎರಡು ಸಲ ಪರ್ಷಿಯಾ ದೊರೆಯ ಆಸ್ಥಾನಕ್ಕೂ ಹೋಗಿದ್ದ. ಅನಂತರ ಪರ್ಸೆಪೊಲಿಸಿನಲ್ಲಿರುವ ಪುರಾತನ ಅವಶೇಷಗಳನ್ನು ನೋಡಿಕೊಂಡು ಲಾರ್ ಮಾರ್ಗವಾಗಿ ಬಂದರ್ ಕಾಂಗೋಗೆ ಹೋದ. ಅಲ್ಲಿಂದ ೧೬೯೪ರ ನವೆಂಬರ್ ೨೬ನೆಯ ತಾರೀಖು ಇಂಡಿಯಾಕ್ಕೆ ಹೊರಟ.

ಕರೇರಿ ಹೊರಟ ನಾವೆ ೧೬೯೫ನೆಯ ಜನವರಿ ೧೦ ರಂದು ಈ ದೇಶವನ್ನು ಮುಟ್ಟಿತು. ಈ ಸಮುದ್ರ ಪ್ರಯಾಣದಲ್ಲಿ ಕರೇರಿಗೆ ಹಲವು ಕಷ್ಟದ ಪ್ರಸಂಗಗಳೊದಗಿದುವು. ಇಂಗ್ಲಿಷ್ ಹಡಗಿನಲ್ಲಿ ಹೋದರೊಳ್ಳೆಯದೆಂದು ಸಲಹೆ ಮಾಡಿದ್ದರೂ ಆತ ಮೂರರಿಗೆ ಸೇರಿದ ದೋಣಿಯೊಂದರಲ್ಲಿ ಬೇಕೆಂತಲೇ ಹೊರಟ. ಇಂಗ್ಲಿಷರಿಗೂ ಫ್ರೆಂಚರಿಗೂ ಆಗ ಯುದ್ಧ ನಡೆಯುತ್ತಿತ್ತು. ಮೂರರು

ಎಲ್ಲರೊಡನೆ ಸ್ನೇಹದಿಂದಿದ್ದರು. ಇಂಗ್ಲಿಷ್ ಹಡಗಿನಲ್ಲಿ ಹೊರಟರೆ ಸೂರತ್ತಿಗೆ ಹೋಗಬೇಕಾಗಿ ಬರಬಹುದೆಂದೂ, ಅಲ್ಲಿ ಫ್ರೆಂಚರು ಇಂಗ್ಲಿಷ್ ಹಡಗಿನ ಮೇಲೆ ಬಿದ್ದು ಅದನ್ನು ತೊಂದರೆಗೆ ಈಡು ಮಾಡಬಹುದೆಂದೂ ಭಾವಿಸಿ ಮೂರರಿಗೆ ಸೇರಿದ ದೋಣಿಯಲ್ಲಿ ಹೊರಟಿದ್ದ. ದೋಣಿಯ ಬಾಡಿಗೆಗಾಗಿ ತನಗೆ ಒಂದು ತೋಮನ್ ಮತ್ತು ತನ್ನ ಸೇವಕನಿಗೆ ೩೦ ಅಬಾಸ್ಸಿಸ್ ಹಣ ಕೊಡಬೇಕಾದುದನ್ನು ಪೋರ್ಚುಗೀಸ್ ಕಮೀಷನ್‌ನ ಸಹಾಯದಿಂದ ಉಳಿಸಿಕೊಂಡ.

ಆಗ ಸಮುದ್ರದಲ್ಲಿ ಕಡಲುಗಳ್ಳರ ಹಾವಳಿ ವಿಪರೀತವಾಗಿತ್ತು. ಬಲೋಚ್ (Baloche) ಕಡಲ್ಗಳ್ಳರು ತಮ್ಮ ವ್ಯಾಪ್ತಿಗೆ ಸೇರಿದ ಸಮುದ್ರದ ಮೇಲೆ ಮಾತ್ರ ಕಾರ್ಯಾಚರಣೆ ನಡೆಸುತ್ತಿದ್ದರು. ಆದರೆ ಕುಪ್ರಸಿದ್ಧ ಸಂಗನೀಯರು (Sanganians) ಸಿಂಧೂ ಹಾಗೂ ಗುಜರಾತ್‌ಗಳವರೆಗೆ ತಮ್ಮ ಬಲೆ ಬೀಸಿಕೊಂಡಿದ್ದರು. ಕೆಲವು ಸಲ ಸೂರತ್ತಿನವರೆಗೂ ತಮ್ಮ ಕಾರ್ಯ ವಿಸ್ತರಿಸುತ್ತಿದ್ದರು. ಕರೇರಿ ಬಂದ ದೋಣಿಯ ಮಾರ್ಗದರ್ಶಕನಿಗೆ ಸಮುದ್ರಯಾನದ ಅನುಭವ ಅಷ್ಟಿರಲಿಲ್ಲ. ಅವನು ಹೊಗೆಸೊಪ್ಪಿನ ವ್ಯಾಪಾರಿ. ದೋಣಿ ದಿಕ್ಕುತೋಚದೆ ಅಲೆದಾಡಿತು. ದೂರದಲ್ಲಿ ಯಾವುದಾದರೂ ದೋಣಿಯ ಪಟ ಕಂಡಾಗಲೆಲ್ಲ ಅದು ಸಂಗನೀಯರ ದೋಣಿ ಎಂದು ಹೆದರಿಕೊಳ್ಳುತ್ತಿದ್ದ. ಅಂತೂ ಹೇಗೋ ಮಾಡಿ ದೋಣಿ ದಾಮನ್ ತಲುಪಿತು.

ದೋಣಿಯಿಂದ ಇಳಿದನಂತರ ಕರೇರಿಗೆ ಧೈರ್ಯ ಬಂದಿತು. ಅಲ್ಲಿದ್ದ ಪೋರ್ಚುಗೀಸರು ಇವನನ್ನು ಸ್ನೇಹದಿಂದ ಕಂಡರು. ದಾಮನ್‌ನಿಂದ ಈತ ಬಸ್ಸೀನ್‌ಗೆ ಹೋದ. ಅಲ್ಲಿದ್ದ ಜೆಸೂಯಿಟ್ ಹಿರಿಯ ಆ ಊರಿನಲ್ಲಿ ನೆಲೆಸಿ ವಕೀಲಿ ವೃತ್ತಿ ಆರಂಭಿಸಿ ಕೈತುಂಬ ಹಣ ಸಂಪಾದಿಸಬಹುದೆಂಬ ಆಸೆ ಹುಟ್ಟಿಸಿದರೂ ಕರೇರಿ ಅಲ್ಲಿ ನಿಲ್ಲಲಿಲ್ಲ. ಅಲ್ಲಿಂದ ಹೊರಟು ಕನ್ಹೇರಿಗೆ ಹೋಗಿ ಅಲ್ಲಿದ್ದ ಹೆಸರಾಂತ ಬೌದ್ಧ ಗುಹೆಗಳನ್ನು ಸಂದರ್ಶಿಸಿದ.

ಬಸ್ಸೀನ್‌ನಿಂದ ಹೊರಟ ಕರೇರಿ ಗೋವಾಕ್ಕೆ ಬಂದ. ಗೋವೆ ಆಗಲೇ ಇಳಿಮುಖವಾಗಿತ್ತು. ಮೊಗಲ್ ಚಕ್ರವರ್ತಿಯನ್ನು ನೋಡುವ ಹಿರಿಯಾಸೆ ಆಯಿತು. ಔರಂಗಜೇಬ ತನ್ನ ದಂಡಯಾತ್ರೆಯಲ್ಲಿ ತೊಡಗಿ ಬಿಜಾಪುರ ಜಿಲ್ಲೆಯ ಗಲಗಲಿ ಎಂಬಲ್ಲಿ ಬೀಡುಬಿಟ್ಟಿದ್ದ. ಗೋವೆಯ ಒಬ್ಬ ಕನ್ನಡಿಗ ಆಳನ್ನೂ ಮತ್ತು ಗೋಲ್ಕೊಂಡಾದ ಒಬ್ಬ ಹಿಂದೂ ದುಭಾಷಿಯನ್ನೂ ಕರೆದುಕೊಂಡು ಔರಂಗಜೇಬ ಇದ್ದಕಡೆಗೆ ಹೊರಟ. ಮೊಗಲ್ ಸೈನ್ಯದಲ್ಲಿದ್ದ ಕ್ರೈಸ್ತ ಸಿಪಾಯಿಗಳ ಸಹಾಯದಿಂದ ಔರಂಗಜೇಬನನ್ನು ಭೇಟಿಯಾದ.

ಬಹು ದಿನದ ಈ ಆಸೆ ಪೂರೈಸಿದ ನಂತರ ಕರೇರಿ ಗೋವೆಗೆ ಹಿಂದಿರುಗಿ ಅಲ್ಲಿಂದ ಚೀನಾಕ್ಕೆ ಹೊರಟ. ಚೀನಾದ ಮಕಾವ್, ಕ್ಯಾಂಟನ್, ನಾನ್‌ಕಿಂಗ್, ಮತ್ತು ಪೀಕಿಂಗ್‌ಗಳನ್ನು ನೋಡಿದ. ಆಗ್ಗೆ ಚೀನಾದ ಮಿಷನರಿಗಳಲ್ಲಿ ಪರಸ್ಪರ ವೈಷಮ್ಯವಿತ್ತು. ಈ ವೈಷಮ್ಯಗಳನ್ನು ತಿಳಿಯಲು ಈತನನ್ನು ಪೋಪರು ಕಳುಹಿಸಿಕೊಟ್ಟಿದ್ದಾರೆಂಬ ತಪ್ಪುಭಾವನೆಯಿಂದಾಗಿ ಜೆಸ್ಯೂಯಿಟರು ಇವನ ಮೇಲೆ ವಿಷ ಕಾರಿದರು. ಹೀಗಿದ್ದರೂ ಕರೇರಿ ಚೀನಾದ ಚಕ್ರವರ್ತಿಯನ್ನು ನೋಡದೆ ಬಿಡಲಿಲ್ಲ. ಹೀಗೆ ಕರೇರಿಗೆ ಏಷ್ಯಾದ ಮೂರು ಮಹಾಚಕ್ರವರ್ತಿಗಳನ್ನು ನೋಡುವ ಸದವಕಾಶ ಒದಗಿತು. ಇಂಥ ಭಾಗ್ಯ ಸಿಕ್ಕಿದ್ದು ಕೆಲವೇ ಪ್ರವಾಸಿಗಳಿಗೆ ಮಾತ್ರ.

ಚೀನಾಕ್ಕೆ ಹೋದಮೇಲೆ ಅಲ್ಲಿಯ 'ದೊಡ್ಡಗೋಡೆ' (Great wall) ನೋಡದೆ ಹಿಂದಿರುಗುವುದು ಸರಿಯಲ್ಲವೆಂದು ಕರೇರಿ ಅದನ್ನೂ ನೋಡಿಕೊಂಡು, ಚೀನಾದಿಂದ ಹೊರಟು ೧೬೯೬ನೆಯ ಮೇ ತಿಂಗಳ ೮ನೆಯ ತಾರೀಖು ಮನಿಲಾಕ್ಕೆ ಬಂದ. ಸ್ಪೆಯ್ನ್ ದೇಶದ ಹಡಗೊಂದು ಆತನನ್ನು ಪೆಸಿಫಿಕ್ ಮಹಾಸಾಗರದಾಚೆಯಿದ್ದ ಮೆಕ್ಸಿಕೋದ ಅಕಪುಲ್ಕೊ (Acapulco) ಎಂಬಲ್ಲಿಗೆ ಒಯ್ಯಿತು. ೧೬೯೭ನೆಯ ಜನವರಿ ೧೯ರಲ್ಲಿ ಅಲ್ಲಿಗೆ ಹೋದ ಕರೇರಿ ಮೆಕ್ಸಿಕೋ ನಗರಕ್ಕೆ ಹೋಗಿ ಅಲ್ಲಿಯ ವೈಸ್‌ರಾಯ್ ಆತಿಥ್ಯದಲ್ಲಿದ್ದು ನೋಡಬೇಕಾದುದನ್ನೆಲ್ಲಾ ನೋಡಿಕೊಂಡು ತನ್ನ ದೇಶದ ಕಡೆಗೆ ಹೊರಟ.

೧೬೯೮ನೆಯ ಜೂನ್ ೪ರಲ್ಲಿ ಕಾದಿಜ್‌ಗೆ (Cadiz) ಬಂದ. ಅಲ್ಲಿಂದ ಸ್ಪೆಯ್ನ್‌ದೇಶ ಹಾದು ಫ್ರಾನ್ಸ್‌ಗೆ ಬಂದು ದೋಣಿಯೊಂದರಲ್ಲಿ ಮಾರ್ಸೇಲ್ಸ್‌ನಿಂದ ಹೊರಟು ಜಿನೊವಾ (Genoa) ತಲುಪಿದ.

ಅಲ್ಲಿಂದ ಮಿಲಾನ್‌ಗೆ ಹೋಗಿ ಆಮೇಲೆ ತನ್ನ ಸ್ವಂತ ಪಟ್ಟಣವಾದ ನೇಪಲ್ಸ್‌ನ್ನು ಡಿಸೆಂಬರ್ ೩ನೆಯ ತಾರೀಖು ತಲುಪಿದ.

ಕರೇರಿಯೇ ಹೇಳಿಕೊಂಡಂತೆ ಈ ಪ್ರಪಂಚವನ್ನು ಸುತ್ತಿಬರಲು ಈತನಿಗೆ ಐದುವರ್ಷ ಐದು ತಿಂಗಳು ಇಪ್ಪತ್ತೈದು ದಿನಗಳಾದುವು. ತನ್ನ ಪ್ರವಾಸದ ವಿವರಗಳನ್ನು ಜಾಹೂ ತಪ್ಪದೆ ಬರೆದಿಟ್ಟ. ಚಂಡಮಾರುತದಿಂದ ಸಮುದ್ರವು ಅಲ್ಲೋಲಕಲ್ಲೋಲವಾಗಿ ಪ್ರಾಣಕ್ಕೆ ಸಂಚಕಾರ ಒದಗಿದಾಗಲೂ ಈತ ಬರೆಯುವುದನ್ನು ಬಿಡಲಿಲ್ಲ. ಊರಿಗೆ ಹಿಂದಿರುಗಿದ ಮೇಲೆ ತಾನು ಬರೆದಿದ್ದುದನ್ನೆಲ್ಲಾ ಪುನಃ ಓದಿ ತಿದ್ದಿ ಅಚ್ಚಿಗೆ ಸಿದ್ಧಪಡಿಸಿದ. ಜಿರೊ ದೆಲ್ ಮಾಂಡೋ (Giro del Mando) ಎಂಬ ಆತನ ಪ್ರವಾಸಕಥನ ನೇಪಲ್ಸ್‌ನಿಂದ ೧೬೯೯–೧೭೦೦ರಲ್ಲಿ ಆರು ಸಂಪುಟಗಳಲ್ಲಿ ಪ್ರಕಟವಾಯಿತು. ಜನರು ಅದನ್ನು ತುಂಬಾ ಆಸಕ್ತಿಯಿಂದ ಓದಿದರು. ಕೂಡಲೇ ಎರಡನೆಯ ಮುದ್ರಣವೂ ಆಯಿತು. ಹೀಗೆ ಅದು ೧೭೭೮ ರೊಳಗೆ ಎಂಟು ಮುದ್ರಣಗಳನ್ನು ಕಂಡಿತು.

ಕರೇರಿಯ ಪ್ರವಾಸ ವರದಿಯ ಕೀರ್ತಿ ಇಟಲಿ ದೇಶದ ಗಡಿಯನ್ನು ದಾಟಿ ಇತರ ಯೂರೋಪ್ ದೇಶಗಳಿಗೂ ಹಬ್ಬಿತು. ಇಂಗ್ಲಿಷ್, ಫ್ರೆಂಚ್, ಜರ್ಮನ್, ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಭಾಷೆಗಳಿಗೂ ಅದರ ಅನುವಾದವಾಯಿತು.

ಇಷ್ಟು ಆಸಕ್ತಿಯಿಂದ ಅವನ ಪ್ರವಾಸಕಥನವನ್ನು ಯೂರೋಪಿನ ಮತ್ತು ಇಂಗ್ಲೆಂಡ್‌ನ ಜನರೆಲ್ಲ ಓದಿದರೂ ಆಮೇಲೆ ಅವನ ಮೇಲೆ ಕೃತಿಚೌರ್ಯದ ಹಾಗೂ ಸುಳ್ಳಿನ ಆಪಾದನೆ ಹೊರಿಸುವುದು ತಪ್ಪಲಿಲ್ಲ. ಪೀಕಿಂಗಿನ ರಾಜಾಸ್ಥಾನಕ್ಕೆ ಹೋದದ್ದು ಸುಳ್ಳು, ಬೇರೆಯವರು ಹೇಳಿದ್ದನ್ನು ಕದ್ದುಕೊಂಡಿದ್ದಾನೆ, ವಾಸ್ತವವಾಗಿ ನೇಪಲ್ಸ್ ಬಿಟ್ಟು ಆತ ಹೊರಗೆ ಹೋಗಿರಲೇ ಇಲ್ಲ ಎಂಬ ಮಿಥ್ಯ ಆಪಾದನೆಗಳನ್ನು ಅವನ ಮೇಲೆ ಹೊರಿಸಿದರು. ಆದರೆ ಇವೆಲ್ಲ ಸುಳ್ಳೆಂದು ಆತನ ಪ್ರವಾಸಕಥನವೇ ಸಾರಿತು. ನಿಂದಕರು ಬಾಯಿಮುಚ್ಚಿಕೊಂಡರು. ಕನ್ಹೇರಿ ಗುಹೆಗಳ ಪೂರ್ಣಚಿತ್ರವೊಂದೇ ಸಾಕಾಗಿತ್ತು, ಅವನು ಸುಳ್ಳನಲ್ಲ ಎಂಬುದನ್ನು ಸಾರಲು.

ಕರೇರಿ ಅಪೂರ್ವವಾದ ಪ್ರವಾಸಕಥನವನ್ನು ಬಿಟ್ಟುಹೋಗಿದ್ದಾನೆ. ವಿದೇಶಿ ಪ್ರವಾಸಿಗಳು ಇಲ್ಲಿ ಕಂಡುದನ್ನೆಲ್ಲಾ ಸರಿಯಾಗಿ ಅರ್ಥಮಾಡಿಕೊಂಡರೆಂದು ಹೇಳುವುದಕ್ಕಾಗುವುದಿಲ್ಲ. ಕಾಣದಿದ್ದುದನ್ನು ಅವರಿವರಿಂದ ಕೇಳಿದರೆ ಕಂಡಂತಾಗುವುದಿಲ್ಲ. ಎಲ್ಲಾ ಪ್ರವಾಸಿಗಳಲ್ಲಿಯೂ ಈ ದೋಷವನ್ನು ಕಾಣ ಬಹುದು. ಇದನ್ನು ಬಿಟ್ಟರೆ ಕರೇರಿಯ ಪ್ರವಾಸಕಥನ ನಮ್ಮ ಪೂರ್ವೇತಿಹಾಸವನ್ನು ತಿಳಿಯಲು ಮುಖ್ಯ ಸಾಧನವಾಗಿದೆ. ೧೬೯೫ರಲ್ಲಿ ಔರಂಗಜೇಬನನ್ನು ಭೇಟಿಮಾಡಿದಾಗ ಈತ ಹೇಳಿರುವ ವಿಷಯ ಆತನ ಬಗ್ಗೆ ತಿಳಿಯದಿದ್ದ ಹೊಸ ಸಂಗತಿಗಳನ್ನು ತಿಳಿದಂತಾಗಿದೆ ಎಂದು ಇತಿಹಾಸತಜ್ಞರ ಅಭಿಪ್ರಾಯ ವಾಗಿದೆ.

ಆ ಕಾಲದಲ್ಲಿ ಪ್ರಪಂಚವನ್ನೇ ಸುತ್ತಿ ಬರುವುದೆಂಥ ಅದ್ಭುತ ಸಾಹಸ! ಸುತ್ತಿದಾಗ ಕಂಡುದ ನ್ನೆಲ್ಲಾ ಬರೆದಿಡುವುದಕ್ಕೆ ಎಷ್ಟೊಂದು ಸಹನೆ ಬೇಕು! ಅಂತೂ ಆ ಮಹಾಸಾಹಸಿಗರು ಈಗ, ಸಕಲ ಸೌಕರ್ಯಗಳಿರುವಾಗಲೂ ಮಾಡದಿದ್ದುದನ್ನು ಆಗ ಮಾಡಿದರು—ನಮ್ಮ ಉಪಕಾರಕ್ಕಾಗಿ.

ಅನೇಕ ತೊಂದರೆಗಳನ್ನು ಅನುಭವಿಸಿ ಪರದೇಶಗಳಲ್ಲಿ ಸಾಕಷ್ಟು ಕಾಲ ಕಳೆದ ಪ್ರವಾಸಿಯೊಬ್ಬನು ತಾನು ಕಂಡು ಕೇಳಿದುದನ್ನು ಮೆಚ್ಚಿನ ಗೆಳೆಯರ ಮಧ್ಯೆ ಕುಳಿತು ಅವರ ಆತಿಥ್ಯವನ್ನು ಸ್ವೀಕರಿಸುತ್ತ ತನ್ನ ಕಥೆಯನ್ನು ಹೇಳುವಾಗ ಆತನಿಗೆ ಎಷ್ಟೊಂದು ಸಂತಸವಾಗಲಿಕ್ಕಿಲ್ಲ! ಅಷ್ಟೇ ಸಂತೋಷವಾಯಿತು ನನಗೆ ತೊಂದರೆಗಳಿಂದ ಕೂಡಿದ ಸಮುದ್ರಯಾನವನ್ನು ಮುಗಿಸಿ ಇಂದುಸ್ತಾನದಲ್ಲಿ ಕಾಲಿಟ್ಟಾಗ, ಮನುಷ್ಯನ ಸುಖ ಜೀವನಕ್ಕೆ ಬೇಕಾದ್ದನ್ನು ಪ್ರಕೃತಿಯು ಒದಗಿಸಿರುವ ಈ ಶ್ರೀಮಂತ ದೇಶದ ಬಗ್ಗೆ

ಅಪೂರ್ವ ವಿಷಯಗಳನ್ನು ಕೇಳಿದ್ದೆ. ಅವನ್ನು ಕಣ್ಣಿನಿಂದ ಕಾಣುವ ಮತ್ತು ತಿಳಿದು ಕೊಳ್ಳುವ ಸಂದರ್ಭ ಒದಗಿದಾಗ ನನಗಾದ ತೃಪ್ತಿ ಎಷ್ಟೆಂಬುದನ್ನು ನೀವೇ ಊಹಿಸಿ ಕೊಳ್ಳಿ.

ದಾಮನ್‌ನ (Daman) ಅಗಸ್ತ್ಯನರ ಕ್ರೈಸ್ತಮಠದಲ್ಲಿ ತಂಗಿ ಸಮುದ್ರಯಾನದ ಆಯಾಸವನ್ನು ಪರಿಹರಿಸಿಕೊಂಡ ಮೇಲೆ ನನ್ನ ಸಾಮಾನುಗಳನ್ನು ೧೬೩೫ರ ಜನವರಿ ೧೧ನೆಯ ತಾರೀಖು ದೋಣಿಯಿಂದ ಇಳಿಸಿಕೊಂಡೆ. ಪೋರ್ಚುಗೀಸ್ ದಳ್ಳಾಳಿಯ ಕೃಪೆಯಿಂದ ನನ್ನ ಸಾಮಾನುಗಳ ಶೋಧನೆ ನಡೆಯಲಿಲ್ಲ. ನಾನು ಒಂದು ಲಕ್ಷ ಕ್ರೌನ್ ಗಳಷ್ಟು ಬೆಲೆಯ ಸಾಮಾನುಗಳನ್ನು ತಂದಿದ್ದರೂ ಆತ ಪರವಾಯಿಲ್ಲ ಎಂದು ಹೇಳಿದ. ನಾನು ಪರದೇಶದವನಾದ್ದರಿಂದ ನನ್ನಿಂದ ಯಾವ ಸುಂಕವನ್ನೂ ವಸೂಲಿಮಾಡುವುದಿಲ್ಲ ವೆಂದು ಆತ ತಿಳಿಸಿದ. ನಾನು ಪೋರ್ಚುಗೀಸ್‌ನಾಗಿದ್ದರೆ ಶೇಕಡ ೧೦ ರಂತೆ ಸುಂಕವನ್ನು ಹಿಂದೂಗಳಿಗೆ (ಅಂದರೆ ಹಿಂದೂ ಅಧಿಕಾರಿಗಳಿಗೆ) ಕೊಡಬೇಕಾಗಿತ್ತು. ಹಿಂದೂಗಳೇ ಸುಂಕ ವಸೂಲು ಮಾಡುವವರು. ನನ್ನಿಂದ ಸುಂಕ ವಸೂಲುಮಾಡದೆಹೋದ ವಿಷಯ ವನ್ನು ಫಾದರ್ ಫ್ರಾನ್ಸಿಸ್‌ರಿಗೆ ಹೇಳಿದಾಗ ಅವರು ತಾನೊಬ್ಬ ಧಾರ್ಮಿಕ ಮನುಷ್ಯ ನಾದರೂ ತಾನು ಚರ್ಚಿನಲ್ಲಿ ಉಪಯೋಗಿಸಲು ತಂದ ಎರಡು ಹೊರೆ ಜಮಖಾನಗಳಿಗೆ ಸುಂಕ ಕೊಡಬೇಕೆಂದು ಸುಂಕದ ಅಧಿಕಾರಿಗಳು ತಕರಾರು ಹೂಡಿದರೆಂದೂ ಆಮೇಲೆ ಪೋರ್ಚುಗೀಸ್ ದಳ್ಳಾಲಿ (Factor) ಹೇಳಿದ ಮೇಲೆ ಬಿಟ್ಟರೆಂದೂ ತಿಳಿಸಿದರು.

ದಾಮನ್ ನಗರ ಸಾಕಷ್ಟು ಸುಂದರವಾಗಿದೆ. ಇಟಲಿ ನಗರದ ಮಾದರಿಯಲ್ಲಿ ಇದನ್ನು ಕಟ್ಟಿದ್ದಾರೆ. ಅಗಲವಾದ ಮೂರು ರಾಜಬೀದಿಗಳೂ, ನಾಲ್ಕು ಅಡ್ಡಬೀದಿಗಳೂ ಇವೆ. ಮನೆಗಳನ್ನು ತುಂಬ ಓರಣವಾಗಿ ಕಟ್ಟಿದ್ದಾರೆ. ಒಂದು ಮನೆಯಿಂದ ಇನ್ನೊಂದು ಮನೆ ಒಂದು ಅಂಗುಲದಷ್ಟೂ ಮುಂದೆ ಚಾಚಿರುವುದಿಲ್ಲ. ಬಹುತೇಕ ಮನೆಗಳಿಗೆ ಮಹಡಿ ಇಲ್ಲ. ಅವಕ್ಕೆ ಹೆಂಚು ಹೊದಿಸಿದ್ದಾರೆ. ಕಿಟಕಿಗಳಿಗೆ ಗಾಜಿನ ಬದಲು ಸಿಂಪಿ (oyster) ಚಿಪ್ಪುಗಳನ್ನು ಉಪಯೋಗಿಸಿ ಚಂದ ಮಾಡಿಕೊಂಡಿದ್ದಾರೆ. ಪ್ರತಿಯೊಂದು ಮನೆಗೂ ಒಂದು ಹಿತ್ತಿಲು. ಅಲ್ಲಿ ಹಣ್ಣು ಹಂಪಲುಗಳ ಮರಗಿಡಗಳು.

ಇಲ್ಲಿ ಪೋರ್ಚುಗೀಸರೂ, ಬಿಳಿಯರಿಗೆ ಕರಿಯ ಹೆಂಗಸರ ಹೊಟ್ಟೆಯಲ್ಲಿ ಹುಟ್ಟಿದ ಮೆಸ್ತಿಜೋಗಳೂ (Mestizos), ಹಿಂದೂಗಳೂ, ಪೇಗನರೂ (Pagans)[೧] ಮತ್ತು ಮಹಮ್ಮದೀಯರೂ ವಾಸಮಾಡಿಕೊಂಡಿದ್ದಾರೆ. ಹಿಂದೂಗಳು ಮತ್ತು ಮಹಮ್ಮ ದೀಯರಿಗೆ ತಮ್ಮ ತಮ್ಮ ಮತಾನುಚರಣೆಮಾಡಲು ಸಂಪೂರ್ಣ ಸ್ವಾತಂತ್ರ್ಯವಿಲ್ಲ. ಹಲವಾರು ಕ್ರೈಸ್ತಮಠಗಳಿವೆ. ಅಲ್ಲದೆ ಇಲ್ಲಿ ಜೆಸ್ಯೂಯಿಟರೂ, ರೆಕೊಲೆಕ್ಟರೂ

---

೧. ಪೇಗನ್ (Pagan): ಯಹೂದ್ಯ, ಕ್ರೈಸ್ತ ಅಥವಾ ಮಹಮ್ಮದೀಯ ಅಲ್ಲದವನು; ನಿಜವಾದ ದೇವರನ್ನು ಆರಾಧಿಸದವನು; ಕ್ಷುದ್ರಧರ್ಮಿ. ಹಿಂದೂಗಳು ಇಂಥವರಂತೆ!

(Recollects=ಕಾಪುಚಿನರಲ್ಲಿ ಒಂದು ಬಗೆ), ಆಗಸ್ಟೈನರೂ, ಅವರ ಮಠಗಳೂ, ಒಂದು ಚೆರ್ಚೂ ಇವೆ.

ಮೇಲೆ ಹೇಳಿದ್ದೆಲ್ಲಾ ಹೊಸ ದಾಮನ್‌ನಲ್ಲಿರುವುದು. ಹಳೆಯ ದಾಮನ್‌ನಲ್ಲಿ ಬಡಬಗ್ಗರು, ಹಿಂದೂಗಳು ಮತ್ತು ಮೂರರು ಇದ್ದಾರೆ.

ಇಂಡಿಯಾದಲ್ಲಿ ಪೋರ್ಚುಗೀಸರು ಅದ್ದೂರಿಯ ಜೀವನ ನಡೆಸುತ್ತಾರೆ. ಅವರು ಉಪಯೋಗಿಸುವ ಮೇಜು, ತೊಡುವ ಬಟ್ಟೆಬರೆ, ಇಟ್ಟುಕೊಳ್ಳುವ ಕಾಫಿರ್ ಸೇವಕರುಗಳ[೧] ಬಗ್ಗೆ ನಾನು ಎಷ್ಟೆಂದು ಹೇಳಲಿ! ಪಲ್ಲಕ್ಕಿಗಳಲ್ಲಿ ಕುಳಿತು ಕಾಫಿರರಿಂದ ಹೊರಿಸಿಕೊಂಡು ಅಡ್ಡಾಡುತ್ತಾರೆ. ಕೆಲವರು ತಾಳೆಮರದ ಎಲೆಗಳಿಂದ ಮಾಡಿದ ದೊಡ್ಡ ಛತ್ರಿಗಳನ್ನು ಹಿಡಿಸಿಕೊಳ್ಳುತ್ತಾರೆ. ಮಳೆಗಾಲದಲ್ಲಿ 'ಅಂದೋರ್' (Andor=ಅಂದಳ) ಗಳಲ್ಲಿ ಓಡಾಡುತ್ತಾರೆ. ಮಳೆಯ ನೀರು ಬೀಳದಂತೆ ಅಂದೋರದ ಮೇಲೆ ತಾಳೆಮರದ ಗರಿಗಳನ್ನು ಹೊದಿಸಿರುತ್ತಾರೆ. ಪಲ್ಲಕ್ಕಿಗಿಂತ ಅಂದೋರ ಹೆಚ್ಚು ಆರಾಮವಾಗಿರುತ್ತದೆ. ಪಲ್ಲಕ್ಕಿಗೆ ಉಪಯೋಗಿಸುವ 'ಬಂಬು' (bambu) ಮಧ್ಯೆ ಡೊಂಕಾಗಿರುತ್ತದೆ. ಅಂದೋರಗಳನ್ನು ಸಾಮಾನ್ಯವಾಗಿ ಸ್ತ್ರೀಯರು, ಮಠಾಧಿಪತಿಗಳು ಮತ್ತು ಇತರ ಗಣ್ಯರು ಉಪಯೋಗಿಸುತ್ತಾರೆ. ಇದಕ್ಕೆ ತಗಲುವ ಖರ್ಚು ಬಹಳ ಕಡಮೆ. ನಾಲ್ಕು ಜನರಿಗೆ ತಿಂಗಳಿಗೆ ನೇಪಲ್ಸಿನ ಹನ್ನೆರಡು ಕೊಸ್ಲಿನ್ (Cosline) ಗಳಷ್ಟು ಕೂಲಿ ಕೊಟ್ಟರೆ ಸಾಕು.

ಊರ ಹೊರಗಡೆ ಹೋಗುವುದಕ್ಕೆ ಅಥವಾ ದೂರದ ಪ್ರಯಾಣಕ್ಕೆ ಇಬ್ಬರು ಕುಳಿತುಕೊಳ್ಳುವ ಎತ್ತಿನ ಗಾಡಿಗಳಿವೆ. ಈ ಗಾಡಿಗಳು ಕುರ್ಚಿಯಂತೆ ಚಚ್ಚೌಕವಾಗಿವೆ. ಮೇಲೆ ರೇಷ್ಮೆಬಟ್ಟೆ ಹೊದಿಸಿರುತ್ತಾರೆ. ಅಕ್ಕ ಪಕ್ಕ ತೆರೆದಿರುತ್ತದೆ. ಹಿಂಭಾಗವನ್ನು ಬೆತ್ತದಿಂದ ಹೆಣೆದು ಮುಚ್ಚಿರುತ್ತಾರೆ.

ದಾಮನ್‌ನ ದನದ ಮಾಂಸ ಮತ್ತು ಹಂದಿ ಮಾಂಸ ರುಚಿ ಇಲ್ಲ. ಕುರಿ ಆಡುಗಳನ್ನು ಸಾಕುವುದು ಕಡಮೆ. ಎಲ್ಲರೂ ತುಂಬಾ ತುಟ್ಟಿಯಾದ ಕೋಳಿಗಳನ್ನು ಕೊಳ್ಳುವುದಕ್ಕಾಗುವುದಿಲ್ಲ. ಮೀನಿಗೆ ಯಾವಾಗಲೂ ಅಭಾವವೇ. ಸಿಕ್ಕುವುದೂ ಅಷ್ಟು ಚೆನ್ನಾಗಿರುವುದಿಲ್ಲ. ಅಲ್ಲದೆ ಅದನ್ನು ಹುರಿಯಲು ಒಲೀವ್ ಎಣ್ಣೆ ಇಲ್ಲ. ಅದಕ್ಕೆ ಬದಲು ಇಲ್ಲಿ ತೆಂಗಿನ ಎಣ್ಣೆ ಉಪಯೋಗಿಸುತ್ತಾರೆ. ರೊಟ್ಟಿ (bread) ತುಂಬಾ ರುಚಿಯಾಗಿರುತ್ತದೆ. ಅಕ್ಕಿ ರೊಟ್ಟಿಯೂ ಚೆನ್ನಾಗಿರುತ್ತದೆ. ದಾಮನಿಗೆ ಬಂದ ಹೊಸಬ ಎಲ್ಲವನ್ನೂ ಕೊಂಡುತಿನ್ನಬೇಕೆಂದರೆ ಕಷ್ಟವಾಗುತ್ತದೆ. ಶ್ರೀಮಂತರು ತಮಗೆ ಬೇಕಾದು

---

೧. ಕಾಫಿರ (Caffre ಅಥವಾ Kafir): ದಕ್ಷಿಣ ಆಫ್ರಿಕದ ಬಂಟೂ ಎಂಬ ಕುಲದವನು. ಮಹಮ್ಮದೀಯ ಮತದಲ್ಲಿ ನಂಬಿಕೆಯಿಲ್ಲದವನನ್ನು ಕಾಫಿರ್ ಎನ್ನುತ್ತಿದ್ದರು. ಇಲ್ಲಿ ಆಫ್ರಿಕದ ಕಾಫಿರರನ್ನು ಕುರಿತು ಕರೇರಿ ಹೇಳಿರುವುದು.

ದನ್ನೆಲ್ಲಾ ಮನೆಯಲ್ಲಿ ಕೂಡಿಟ್ಟುಕೊಂಡಿರುತ್ತಾರೆ. ಬಡಬಗ್ಗರು ಅಕ್ಕಿ ಮತ್ತು 'ಸುರ' ಅಂದರೆ ಹೆಂಡಗಳಿಂದ ತೃಪ್ತರಾಗುತ್ತಾರೆ.

ದಾಮನ್ ನಾನಾ ಬಗೆಯ ಕಾಡುಪ್ರಾಣಿಗಳಿಗೆ ಹೆಸರಾಗಿದೆ. ಪೋರ್ಚುಗೀಸರು ಹುಲಿಗಳನ್ನು ಎರಡು ಬಗೆಯಲ್ಲಿ ಶಿಕಾರಿಮಾಡುತ್ತಾರೆ. ಒಂದು ಬಗೆ, ನೀರು ಕುಡಿಯಲು ಹುಲಿ ಬಂದಾಗ ಅದನ್ನು ಹಳ್ಳದಲ್ಲಿ ಕುಳಿತು ಹೊಡೆಯುವುದು. ಇನ್ನೊಂದು ಬಗೆ, ಕಾಡಿನಲ್ಲಿ ನಿಧಾನವಾಗಿ ಎತ್ತಿನ ಗಾಡಿಯಲ್ಲಿ ಹೋಗಿ ಹುಲಿಯನ್ನು ಕಂಡಾಗ ನಿಂತು ಹೊಡೆಯುವುದು. ಹುಲಿಯ ಹಣೆಗೆ ಗುಂಡು ಹೊಡೆದು ತಕ್ಷಣ ಸಾಯುವಂತೆ ಮಾಡುತ್ತಾರೆ. ಏಕೆಂದರೆ, ಆ ಕೂಡಲೇ ಸಾಯದೆ ಗಾಯಗೊಂಡ ಹುಲಿ ಶಿಕಾರಿ ಮಾಡುವವನ ಮೇಲೆಯೇ ಬಿದ್ದುಬಿಡುತ್ತದೆ.

ಸೂರತ್ ನೋಡಬೇಕೆಂಬ ಆಸೆಯಿಂದ ನಾನು ೧೪ನೆಯ ತಾರೀಖು ಶುಕ್ರವಾರ ಅಲ್ಲಿಗೆ ಹೊರಟೆ. ಪೋರ್ಚುಗೀಸ್ ವ್ಯಾಪಾರದ ಹಡಗುಗಳು ಇಲ್ಲಿಂದ ಸೂರತ್ತಿಗೆ ಹೋಗಲಿದ್ದುವು. ನಾನೂ ಬರಬಹುದೇ ಎಂದು ಅವುಗಳ ಕಮ್ಯಾಂಡರನ್ನು ಕೇಳಿದೆ. ಆತ ಆಗಲಿ ಎಂದ. ಪೋರ್ಚುಗೀಸ್ ರಾಷ್ಟ್ರದ ಜನ ತುಂಬ ಉಪಚಾರ ಮಾಡುವ ಜನ. ಸೂರತ್ತನ್ನು ೧೬ನೆಯ ತಾರೀಖು ಭಾನುವಾರ ಮುಟ್ಟಿದೆ. ಅಲ್ಲಿ ಕಾಲಿಟ್ಟ ಕೂಡಲೇ ನಮ್ಮ ಸಾಮಾನುಗಳ ಝಡ್ತಿಯಾಯಿತು. ಮುತ್ತುಗಳು ಇವೆಯೋ ಎಂದು ನೋಡಿದರು. ನಾನು ಫ್ರೆಂಚ್ ಕಂಪೆನಿಯ ಡೈರಕ್ಟರನ ಬಳಿಗೆ ಹೋದೆ. ಆತ ನನ್ನನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡ.

[ಇಲ್ಲಿಂದ ಮುಂದೆ ಸೂರತ್ತಿನ ಬಗ್ಗೆ ಕರೇರಿ ಹೇಳುವ ವಿಷಯಗಳೆಲ್ಲಾ ದೆವೆನೊ ಮುಂತಾದ ಪ್ರವಾಸಿಗಳು ಹೇಳಿವಂತೆಯೇ ಇರುವುದರಿಂದ ಅವುಗಳನ್ನು ಪುನಃ ಹೇಳದೆ ಕೈ ಬಿಟ್ಟಿದೆ]

ಸೂರತ್ತಿನಲ್ಲಿ ಹಲವು ದಿನಗಳಿದ್ದು ನಾನು ದಾಮನ್‌ಗೆ ಹಿಂದಿರುಗಿದೆ. ಬಸ್ಸೀನ್ ನೋಡಬೇಕೆಂಬಾಸೆಯಿಂದ ೨೪ನೆಯ ತಾರೀಖು ಭಾನುವಾರ ಸ್ನೇಹಿತರಿಂದ ಬೀಳ್ಕೊಂಡು ಹಡಗಿನಲ್ಲಿ ಅಲ್ಲಿಗೆ ಹೊರಟೆ. ಬಸ್ಸೀನನ್ನು ೨೭ನೆಯ ತಾರೀಖು ಮುಟ್ಟಿದೆ. ಅಲ್ಲಿ ನನ್ನನ್ನು ಪೋರ್ಚುಗೀಸರಾದ ಫಾದರ್ ಫೆಲಿಸಿಯಾನಸ್ ಪ್ರೀತಿಯಿಂದ ನೋಡಿಕೊಂಡರು. ಅವರಲ್ಲಿ ಹಲವಾರು ದಿವಸಗಳು ಇದ್ದು ಜೆಸ್ಯೂಯಿಟರು, ಡೊಮಿನಿಕರು ಮತ್ತು ಫ್ರಾನ್ಸಿಸ್ಕನರುಗಳ ಚರ್ಚುಗಳನ್ನು ನೋಡಿದೆ. ಕ್ರೈಸ್ತನೊಬ್ಬನ ಮದುವೆಯಾಯಿತು. ಅದನ್ನೂ ನೋಡಿದೆ..

ಇಂಡಿಯಾದ ಪೋರ್ಚುಗೀಸರ ರಾಜ್ಯದಲ್ಲಿ ಎಲ್ಲಿಯೂ ನ್ಯಾಯವಾದಿಗಳಿಲ್ಲ. ಕನರಿನರಲ್ಲಿ (Canarine) ಕೆಲವರಿದ್ದಾರೆ. ಆದರೆ ಅವರಿಗೆ ಏನೇನೂ ಗೊತ್ತಿಲ್ಲ. ಕೆಲವು ವೇಳೆ ವಾದಿ ಪ್ರತಿವಾದಿಗಳಿಬ್ಬರ ಕಡೆಯೂ ವಾದಿಸುತ್ತಾರೆ. ದಾವೆಗಳನ್ನು ಕೇಳಿ ತೀರ್ಮಾನಕೊಡುವ ನ್ಯಾಯಾಧೀಶರಿಗೂ ಕಾನೂನು ಸರಿಯಾಗಿ ಗೊತ್ತಿರುವುದಿಲ್ಲ. ಇದಕ್ಕೆ ಕಾರಣ, ಇಲ್ಲಿ ನ್ಯಾಯಶಾಸ್ತ್ರವನ್ನು ಬೋಧಿಸುವ ವಿಶ್ವವಿದ್ಯಾನಿಲಯಗಳು ಅಥವಾ

ಕಾಲೇಜುಗಳು ಇಲ್ಲದಿರುವುದು. ಪೋರ್ಚುಗಲ್ ನ್ಯಾಯವಾದಿಗಳು ಇಲ್ಲಿಗೆ ಬರಲು ಇಷ್ಟಪಡುವುದಿಲ್ಲ. ಏಕೆಂದರೆ, ಅವರಿಗೆ ಸಿಗುವ ಪ್ರತಿಫಲ ತುಂಬ ಕಡಮೆ. ನಾನು ನ್ಯಾಯಶಾಸ್ತ್ರ ಪಂಡಿತನೆಂದರಿತ ಫಾದರ್ ಫೆಲಿಸಿಯಾನಸ್ ಅವರು ಕ್ರೈಸ್ತಮಠಗಳ ಮತ್ತು ಕೆಲವು ಅನುಕೂಲಸ್ಥ ಮನೆತನಗಳ ಪರ ವಕೀಲಿ ವಹಿಸಿದರೆ ಕೈತುಂಬ ಸಂಪಾದನೆ ಮಾಡಬಹುದಾಗಿ ಹೇಳಿದರು. ಆದರೆ ನನಗೆ ಈ ಬಿಸಿಲು ದೇಶದಲ್ಲಿರಲು ಸುತರಾಂ ಇಷ್ಟವಿರಲಿಲ್ಲ. ಎಷ್ಟು ಹಣ ಕೊಟ್ಟರೂ ಯೂರೋಪನ್ನು ಬಿಟ್ಟು ಬರಲು ಸಾಧ್ಯವಿಲ್ಲ ವೆಂದು ಹೇಳಿದೆ.

ನಾನೀಗ ವರ್ಣಿಸಲಿರುವ 'ಪಗೋದ್' (Pagod = ಪಗೋಡ ಅಂದರೆ ಕನರಿನರ ದೇವಸ್ಥಾನ) ಏಷ್ಯಾದ ಅತ್ಯಂತ ಅಚ್ಚರಿಗಳಲ್ಲಿ ಒಂದು. ಇದನ್ನು ಪ್ರಖ್ಯಾತನಾದ ಅಲೆಗ್ಸಾಂಡರ್ ನಿರ್ಮಿಸಿದನೆಂದು ಹೇಳುತ್ತಾರೆ. ಇದು ನಿಜ ಇರಬೇಕು. ಏಕೆಂದರೆ, ಇಂಥ ಅಗಾಧವಾದ ಕೆಲಸ ಮಾಡುವುದು ಅವನಿಂದಲೇ ಸಾಧ್ಯ[೧]. ಯೂರೋಪಿಯನರಿಗೆ ಈ ದೇವಸ್ಥಾನವಿರುವುದೇ ಗೊತ್ತಿಲ್ಲ. ಇಟಾಲಿಯನ್ ಅಥವಾ ಇತರ ಯೂರೋಪಿ ಯನ್ ಪ್ರವಾಸಿಗಳಾರೂ ಇದರ ವಿಷಯ ಎಲ್ಲಿಯೂ ಹೇಳಿದಂತೆ ಕಾಣುವುದಿಲ್ಲ. ಬಹು ಬುದ್ಧಿವಂತನಾದ ನಮ್ಮ ಪಿಯತ್ರೊ ದೆಲ್ಲಾವಲ್ಲೆ ಕೂಡ ಇದರ ವಿಚಾರ ಹೇಳದಿರುವುದು ನಿಜವಾಗಿಯೂ ಆಶ್ಚರ್ಯ. ಅದಕ್ಕೆ ಕಾರಣ, ಆತ ಪ್ರವಾಸ ಕೈಗೊಂಡದ್ದು ಕೇವಲ ವಿಹಾರ ಕ್ಕಾಗಿ. ಆತ ತನ್ನ ಆಸಕ್ತಿಯ ಪೂರೈಕೆಗಾಗಿ ಸಾವಿರಾರು ಕ್ರೌನ್‌ಗಳನ್ನು ಖರ್ಚುಮಾಡಿದ. ನಾನು ಬಡವನಾದರೂ ಖರ್ಚುವೆಚ್ಚಗಳನ್ನೂ ಕಷ್ಟಗಳನ್ನೂ ಲೆಕ್ಕಿಸದೆ ನೋಡಬೇಕಾದ್ದ ನ್ನೆಲ್ಲಾ ನೋಡಿ ಅವನ್ನೆಲ್ಲಾ ಜನರಿಗೆ ಹೇಳಬಯಸುತ್ತೇನೆ. ತವರ್ನ್ಯೇಗೆ[೨] ಇವೆಲ್ಲಾ ಬೇಕಾಗಿರಲಿಲ್ಲ. ಅವನ ಮುಖ್ಯ ಉದ್ದೇಶ ವ್ಯಾಪಾರ. ವಜ್ರವೈಢೂರ್ಯಗಳ ವ್ಯಾಪಾರ ದಲ್ಲಿ ಅವನಿಗೆ ಆಸಕ್ತಿ. ಈ ಕಾರಣ ಆತ ತನಗೆ ದುಡ್ಡುಗಿಟ್ಟುವ ಕಡೆಗಳಿಗೆ ಮಾತ್ರ ಹೋದ. ಹಲವಾರು ಸಲ ಇಂಡಿಯಾಕ್ಕೆ ಸಮುದ್ರಯಾನ ಮಾಡಿದರೂ ಇಂಥ ಪುರಾತನ ಸ್ಥಳಗಳನ್ನು ಅವು ಅಕ್ಕಪಕ್ಕದಲ್ಲಿದ್ದರೂ ನೋಡುವ ಗೋಜಿಗೆ ಹೋಗಲಿಲ್ಲ.

ನಾನು ೧೩ನೆಯ ತಾರೀಖು ಭಾನುವಾರ ಒಂದು ಬಾಡಿಗೆ ದೋಣಿಯಲ್ಲಿ ಸಲ್ಸೆಟೆ[೩] ದ್ವೀಪದಲ್ಲಿರುವ ಘೋ ಬಂದರ್ ಎಂಬ ಊರಿಗೆ ಹೋದೆ. ಅಲ್ಲಿದ್ದ ಆಗಸ್ಟಿ ಯೀನಿಯನ್ ಪಾದ್ರಿ ಎಡ್ವರ್ಡ್‌ನ ಮನೆಯಲ್ಲಿ ಇಳಿದುಕೊಂಡೆ. ಇಲ್ಲಿ ತುಂಬಾ ಬಿಸಿಲು

---

೧. ಇದು ಶುದ್ಧ ತಪ್ಪು. ಅಲೆಕ್ಸಾಂಡರ್ ಈ ಕಡೆ ಬಂದಿರಲೇ ಇಲ್ಲ. ಈ ಗುಹೆಗಳು, ಚೈತ್ಯ ಗುಹೆಗಳು ಮತ್ತು ಇಲ್ಲಿರುವ ವಿಗ್ರಹಗಳು ಬೌದ್ಧವಿಗ್ರಹಗಳು. ಈ ಗುಹೆಗಳ ಬಗ್ಗೆ ಜಾನ್ ಫ್ರೈಯರ್ ಹೇಳಿರುವುದನ್ನು ಓದಿ (ಇದೇ ಸಂಪುಟ).

೨. ತವರ್ನ್ಯೆ = Tavernier : ಈ ಪ್ರವಾಸ ಕಥನ ಮಾಲೆಯ ಐದನೆಯ ಸಂಪುಟ ನೋಡಿ.

೩. ಸಲ್ಸೆಟೆ: ಬೊಂಬಾಯಿನಿಂದ ಉತ್ತರಕ್ಕಿರುವ ಒಂದು ದೊಡ್ಡ ದ್ವೀಪ. ಷಷ್ಟಿ ಎಂದರೆ ಅರುವತ್ತು. ಅರುವತ್ತು ಊರುಗಳಿರುವ ದ್ವೀಪವೆಂಬ ಕಾರಣ ಇದಕ್ಕೆ ಸಲ್ಸೆಟೆ ಎಂಬ ಹೆಸರು ಬಂತೆಂದು ಹೇಳುತ್ತಾರೆ.

ಮತ್ತು ಸೆಖೆ. ಫಾದರ್ ಅವರು ನಿಂಬೆಹಣ್ಣಿನ ಎರಡು ಉಪ್ಪಿನಕಾಯಿಗಳನ್ನು ನನ್ನ ಮುಂದಿಟ್ಟರು. ಒಂದನ್ನು ತಿಂದು ದೊಡ್ಡ ಲೋಟದಲ್ಲಿ ನೀರು ಕುಡಿದೆ. ಇನ್ನೊಂದನ್ನು ತಿನ್ನು ಎಂದರು. ಆದರೆ ಒಂದು ಉಪ್ಪಿನಕಾಯಿ ತಿಂದು ಅದರಲ್ಲಿದ್ದ ನೂರಾರು ಕ್ರಿಮಿಗಳನ್ನು ನುಂಗಿ ಹಿಂದೂ ಆತ್ಮಗಳ ನಾಶಕ್ಕೆ ಕಾರಣನಾಗಿದ್ದರಿಂದ ಇನ್ನೊಂದು ಬೇಡ ಎಂದೆ. ಈ ಊರು ಹುಟ್ಟಿದಾಗ ಮಾಡಿದ್ದ ಸಿಹಿತಿಂಡಿ ಕೊಡಲು ಬಂದರು. ಅದೂ ಬೇಡವೆಂದು ಹೇಳಿದೆ. ಏಕೆಂದರೆ ಮತ್ತೊಮ್ಮೆ ಅಸಂಖ್ಯಾತ ಇರುವೆಗಳನ್ನು ಕೊಲ್ಲುವ ಪಾಪ ಮಾಡಬಾರದಷ್ಟೆ! ಇತರ ಅತಿಥಿಗಳಿಗೆ ಕೊಡಿ ಎಂದು ಹೇಳಿ ಅವರನ್ನು ಸಮಾಧಾನಪಡಿಸಿದೆ.

ಈ ಅಪೂರ್ವ ಆತಿಥ್ಯವನ್ನು ಸ್ವೀಕರಿಸಿದನಂತರ ನಾನು ಒಂದು ಮೈಲಿ ದೂರ ದಲ್ಲಿದ್ದ ಹಳ್ಳಿಯೊಂದಕ್ಕೆ ಹೋದೆ. ಇಲ್ಲಿ ಒಂದು ಚರ್ಚು ಮತ್ತು ಕ್ರೈಸ್ತಮಠ ಇವೆ. ಧಾರ್ಮಿಕ ವೃತ್ತಿಯಲ್ಲಿರುವ ಐದು ಜನಕ್ಕೆ ಪೋರ್ಚುಗಲ್ ರಾಜ ೨೦೦ 'ಮುರಯ್' (ಮುರಿ ಅಥವಾ ಮುಡಿ) ಅಕ್ಕಿ ಕೊಡುತ್ತಾನೆ. ಇದನ್ನೆಲ್ಲಾ ಅವರು ಬಡಬಗ್ಗರಿಗೆ ದಾನ ಮಾಡುತ್ತಾರೆ.

ನನ್ನನ್ನು ಪಗೋದ್‌ಗೆ ಅಂದೋರದಲ್ಲಿ ಕರೆದೊಯ್ಯಲು ಯಾರೂ ಸಿಕ್ಕಲಿಲ್ಲ ಎಂದು ಫಾದರ್ ಎಡ್ವರ್ಡ್ ಹೇಳಿದರು. ತಮ್ಮ ಮನುಷ್ಯರೆಲ್ಲ ಎಲ್ಲೋ ಓಡಿಹೋಗಿ ದ್ದಾರೆಂದೂ ಮತ್ತೆ ಯಾರೂ ಸಿಕ್ಕಲಿಲ್ಲವೆಂದೂ ತಿಳಿಸಿದರು. ಇದನ್ನು ಕೇಳಿ ನನಗೆ ಅನ್ನಿಸಿತು, ಪೋರ್ಚುಗೀಸರ ಹೆಸರಾದ ಸೌಜನ್ಯಕ್ಕೆ ಈ ಮನುಷ್ಯ ಹೊರತು ಎಂದು. ಆದ್ದರಿಂದ ನಾನು ಎಂಥದೋ ಒಂದು ಕುದುರೆಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡೆ. ಆದರೆ ಕುದುರೆಯ ಹಿಂದೂ ಮಾಲಿಕ ಅದನ್ನು ತರಲು ತುಂಬ ಹೊತ್ತುಮಾಡಿದ. ತನ್ನ ಪೂಜೆಗೀಜೆ ಮುಗಿಸದೆ ಆತ ಹೊರಬರುವಂತಿರಲಿಲ್ಲ. ಹೊರಡುವ ಮುನ್ನ ಏನಾದರೂ ಒಂದಿಷ್ಟು ಉಪಹಾರ ಮಾಡೋಣವೆಂದರೆ ನಮ್ಮ ಫಾದರ್ ಎಡ್ವರ್ಡ್‌ರು ರೊಟ್ಟಿ ಇನ್ನೂ ಬಂದಿಲ್ಲ ಎಂದು ಅಪ್ಪಣೆಕೊಡಿಸಿದರು. ನಾನೇ ಒಂದಿಷ್ಟು ತರಿಸಲೇ ಎಂದುದಕ್ಕೆ ಅದನ್ನು ಇನ್ನೂ ಬೇಯಿಸಿರುವುದಿಲ್ಲ ಎಂದರು. ದಾರಿಯಲ್ಲಿ ಸಿಕ್ಕುವ ಯಾವುದಾದರೂ ಹಳ್ಳಿಯಲ್ಲಿ ಊಟಮಾಡುವುದೊಳ್ಳೆಯದೆಂಬ ಅಮೋಘ ಸಲಹೆ ಯನ್ನಿತ್ತರು. ಪಗೋದ್‌ಗೆ ಹೋಗುವ ದಾರಿ ತೋರಿಸಲಿಕ್ಕೆ ಯಾರನ್ನಾದರೂ ಕಳುಹಿಸಿ ಕೊಡಿ ಎಂದು ಕೇಳಿದೆ. ಏಕೆಂದರೆ, ಕುದುರೆಯವನಿಗೆ ಸರಿಯಾದ ದಾರಿ ಗೊತ್ತಿರಲಿಲ್ಲ. ನಮ್ಮ ಎಡ್ವರ್ಡ್ ಮಹಾಶಯರು ಬೇರೆ ಮನುಷ್ಯನನ್ನು ಗೊತ್ತುಮಾಡಲೂ ಇಲ್ಲ, ಅಥವಾ ತಮ್ಮ ಕಡೆಯ ಸೇವಕನನ್ನು ಕಳುಹಿಸಿಕೊಡಲೂ ಇಲ್ಲ. ಇನ್ನೇನು ಮಾಡುವು ದೆಂದು ನಾನೇ ಹೊರಟೆ.

ಕಾಣದ ದಾರಿ. ಅಲ್ಲದೆ ದಾರಿಯು ಬೆಟ್ಟಗುಡ್ಡಗಳಲ್ಲಿ ಕೋತಿ, ಹುಲಿ, ಸಿಂಹ ಮುಂತಾದ ಕಾಡುಪ್ರಾಣಿಗಳು ಮತ್ತು ವಿಷಜಂತುಗಳ ಹಾವಳಿ. ನಾನು ಊಟಮಾಡ

ಬೇಕೆಂದಿದ್ದ ಊರು ತಲುಪಿದೆ. ಅಲ್ಲಿ ನಾಲ್ಕೇ ನಾಲ್ಕು ಹುಲ್ಲಿನ ಗುಡಿಸಲುಗಳಿದ್ದುವು. ಊಟವೆಂದರೆ ಅರೆಬೇಯಿಸಿದ ಒಂದಿಷ್ಟು ಮುಳ್ಳಕ್ಕಿ ಅನ್ನ, ಇಷ್ಟೇ. ಉಪವಾಸವೇ ಗತಿಯಾಯಿತು. ದಾರಿಯಲ್ಲಿ ವಿಚಿತ್ರವಾದ ಪಕ್ಷಿಗಳನ್ನು ಕಂಡೆ. ಅಸಂಖ್ಯಾತ ಗಿಣಿಗಳನ್ನೂ, ಮರದಿಂದ ಮರಕ್ಕೆ ಹಾರುವ ಕೋತಿಗಳನ್ನೂ ಮಂಗಗಳನ್ನೂ ನೋಡಿದೆ.

ಒತ್ತಾದ ಕಾಡಿನಲ್ಲಿ ಎಂಟು ಮೈಲಿ ಸವಾರಿಮಾಡಿದೆ. ಪಗೋದ್ ಎಲ್ಲಿದೆ ಎಂಬುದು ಕಾಣಿಸಲಿಲ್ಲ. ಯಾವ ಕಡೆ ಹೋಗಬೇಕೆಂದೂ ಗೊತ್ತಾಗಲಿಲ್ಲ. ನಮ್ಮ ಅದೃಷ್ಟ! ಸೌದೆ ಹೊರೆ ಹೊತ್ತುಕೊಂಡು ಹೋಗುತ್ತಿದ್ದ ನಗ್ನ (ಅರೆಬೆತ್ತಲೆ) ಹಿಂದೂ ಹೆಂಗಸರು ನಮಗೆ ದಾರಿ ತೋರಿಸಿದರು. ಬಂಡೆಯ ಬುಡಕ್ಕೆ ಬಂದಾಗ ನಮ್ಮ ಕುದುರೆ ನೋಡಿಕೊಳ್ಳುವುದಕ್ಕೆ ಒಬ್ಬನಿದ್ದರೆ ಚೆನ್ನಾಗಿತ್ತಲ್ಲಾ ಎನ್ನಿಸಿತು. ಏಕೆಂದರೆ, ಕುದುರೆಯವನು ನನ್ನ ಮುಂದೆ ಆ ಅಸಂಖ್ಯಾತ ದೇವಸ್ಥಾನಗಳ ಮಧ್ಯೆ ದಾರಿ ತೋರಿಸಿಕೊಂಡು ಹೋಗಬೇಕಾಗಿತ್ತು. ಕೊನೆಗೆ ಅಲ್ಲೊಬ್ಬ ರೈತ ಕಂಡ. ಕುದುರೆಯನ್ನು ಹಿಡಿದುಕೊಂಡಿರುವಂತೆ ಆತನಿಗೆ ಹೇಳಿ ನಾನು ಆ ಕಗ್ಗಲ್ಲು ಬಂಡೆಯನ್ನೇರಿದೆ. ನನ್ನೊಡನೆ ಕುದುರೆಯವನೂ ಬಂದ. ಮೇಲ್ಭಾಗದ ಬಂಡೆಯ ಪೂರ್ವದಿಕ್ಕಿಗೆ ಆ ಭಾರೀ ದೇವಸ್ಥಾನವನ್ನು (ಗುಹೆಯನ್ನು) ಕೊರೆದಿದ್ದರು. ಅದರ ಪಕ್ಕದಲ್ಲಿ ಸಣ್ಣಪುಟ್ಟ ದೇವಸ್ಥಾನಗಳಿದ್ದುವು.

ದೇವಸ್ಥಾನವು ೪೦ ದಾಪು ಅಗಲವಾಗಿ ಕೊರೆದಿರುವ ಕಮಾನು ಕಟ್ಟಡ. ಅದರ ಉದ್ದ ೧೦೦ ದಾಪು. ದೇವಸ್ಥಾನದ ಹೆಬ್ಬಾಗಿಲು ೧೫ ದಾಪು ಎತ್ತರವೂ ೧೦ ದಾಪು ಅಗಲವೂ ಇದೆ. ಆ ಕಡೆ ಈ ಕಡೆ ನಾಲ್ಕು ನಾಲ್ಕು ವಿಗ್ರಹಗಳಿವೆ. ದ್ವಾರದಲ್ಲಿ ಕಾಣುವ ನಾಲ್ಕು ಕಂಬಗಳಲ್ಲದೆ ಒಳಗಡೆ ೪೦ ಕಂಬಗಳಿವೆ. ಅವುಗಳ ಮೇಲೆ ಆನೆಯ ಸಿಂಬಿಗಳು. ಉಳಿದವು ಸಾಧಾರಣ. ದೇವಸ್ಥಾನದ ಕೊನೆಯಲ್ಲಿ ಭಾರಿಯಾದ ಒಂದು ಗುಮ್ಮಟ ಇದೆ. ಇದು ೩೦ ದಾಪು ಎತ್ತರ, ೧೬ ದಾಪು ಅಗಲ. ಇದನ್ನೂ ಅದೇ ಬಂಡೆಯಲ್ಲಿ ಕೊರೆದಿದ್ದಾರೆ. ಆದರೆ ಗುಮ್ಮಟವು ಟೊಳ್ಳಲ್ಲ. ಇದನ್ನು ಹಿಂದಿನ ಕಾಲದಲ್ಲಿ ಯಾವುದಕ್ಕೋ ಉಪಯೋಗಿಸುತ್ತಿದ್ದರೆಂದು ಕಾಣುತ್ತದೆ.

ಮೇಲೆ ಹೇಳಿದುದೆಲ್ಲವನ್ನೂ ಒಂದೇ ಬಂಡೆಯಲ್ಲಿ ಕೊರೆದಿದ್ದಾರೆ. ವಿಗ್ರಹಗಳೂ ಅದೇ ಬಂಡೆಗೆ ಸೇರಿವೆ. ನೆಲಕ್ಕೆ ಮಾತ್ರ ಗೇಯ್ದ ಕೆಲವು ಕಲ್ಲುಗಳನ್ನು ಹಾಸಿದ್ದಾರೆ. ಬಹುಶಃ ಇವು ಕಟ್ಟಡಕ್ಕೆ ಉಪಯೋಗಿಸಿದ ಮೆಟ್ಟಲುಗಳಿರಬೇಕು.

ದೇವಸ್ಥಾನದ ಹೊರಗೆ ಬಂದು ಅದೇ ಬಂಡೆಯಲ್ಲಿ ಮಾಡಿದ ೧೫ ಮೆಟ್ಟಿಲುಗಳನ್ನು ಹತ್ತಿ ಮೇಲೆ ಹೋಗಿ ಅಲ್ಲಿ ನೀರಿನ ಎರಡು ಕೊಳಗಳನ್ನು ಕಂಡೆ. ನೀರು ತಿಳಿಯಾಗಿದ್ದು ಕುಡಿಯಲು ಯೋಗ್ಯವಾಗಿತ್ತು. ಇನ್ನೂ ಹದಿನೈದು ಮೆಟ್ಟಿಲು ಹತ್ತಿ ಹೋದರೆ ೧೬ ದಾಪು ಚಚ್ಚೌಕದ ಒಂದು ಗವಿ. ಇನ್ನೂ ಮುಂದೆ ಅದಕ್ಕಿಂತ ದೊಡ್ಡದಾದ ಮತ್ತು ನೀರಿರುವ ಇನ್ನೊಂದು ಗವಿ. ಅದಾದ ಮೇಲೆ ಇನ್ನೊಂದು ಭಾರಿ ಗವಿ.

ಈ ಗವಿಗಳಿಂದ ಸ್ವಲ್ಪ ದೂರದಲ್ಲಿ ಇನ್ನೊಂದು ದೇವಸ್ಥಾನವೂ ಅದರ ಮುಂಭಾಗ ದಲ್ಲಿ ಒಂದು ಚಚ್ಚೌಕವಾದ ಕೊಳವೂ ಇದ್ದುವು. ದೇವಸ್ಥಾನದ ಒಳಗೆ ಕುಳ್ಳಿರಿಸಿದ ೪೦೦ ವಿಗ್ರಹಗಳಿವೆ. ಕೆಲವು ಸಣ್ಣವು, ಮತ್ತೆ ಕೆಲವು ದೊಡ್ಡವು. ಮಧ್ಯದಲ್ಲಿರುವುದು ಭಾರಿ ದೊಡ್ಡ ವಿಗ್ರಹ. ಇವೆಲ್ಲ ಕಾಲಗತಿಯಿಂದ ಹಾಳಾಗಿ ಹೋಗಿವೆ. ಕಾಲ ಎಲ್ಲವನ್ನೂ ನಿರ್ನಾಮಮಾಡುವುದಷ್ಟೆ!

ಇನ್ನೂ ಮೇಲೇರಿದೆ. ಹಲವಾರು ಗುಹೆಗಳೂ ಕೊಳಗಳೂ ಕಾಣಿಸಿದುವು. ಬಹುಶಃ ಇವೆಲ್ಲಾ ದೇವಸ್ಥಾನದ ಬ್ರಹ್ಮಚಾರಿ ಅರ್ಚಕರು ವಾಸವಿದ್ದ ಮನೆಗಳಿರಬೇಕು.

ತುತ್ತ ತುದಿಗೇರಿ ಕಲ್ಲಿನಲ್ಲಿ ಕಡೆದ ೧೫ ಮೆಟ್ಟಲುಗಳನ್ನಿಳಿದಾಗ ಅಲ್ಲಿ ಸಣ್ಣದೊಂದು ದೇವಸ್ಥಾನ ಕಾಣಿಸಿತು. ಮತ್ತೂ ಇಳಿದರೆ ಅಲ್ಲಲ್ಲಿ ದೇವಸ್ಥಾನಗಳನ್ನೂ ಗುಹೆಗಳನ್ನೂ ಕೊಳಗಳನ್ನೂ ನೋಡಬಹುದು. ಇಂಥ ಅದ್ಭುತವಾದ ಅನೇಕ ದೇವಸ್ಥಾನಗಳನ್ನೂ ಗುಹೆಗಳನ್ನೂ ಕೊಳಗಳನ್ನೂ ನಿರ್ಮಿಸುವುದಕ್ಕೆ ತುಂಬ ಅನುಭವ ಬೇಕು. ಆ ಅನುಭವ ಅಲೆಕ್ಸಾಂಡರನಿಗೆ ಇತ್ತು. ಅವನು ಇದೇ ಮತಕ್ಕೆ ಸೇರಿದವನಾಗಿದ್ದ. ಆತ ಈ ದೇವಸ್ಥಾನ ವನ್ನು ಕಲ್ಲಿನಲ್ಲಿ ಕಡಿಸಿದನೆಂದು ಪೋರ್ಚುಗೀಸರು ಹೇಳುತ್ತಾರೆ.

ಇವನ್ನೆಲ್ಲಾ ನೋಡಿಕೊಂಡು ಬೆಟ್ಟ ಇಳಿದು ಹಸಿದ ಹೊಟ್ಟೆಯಲ್ಲಿ ಕುದುರೆ ಯನ್ನೇರಿದೆ. ಒಂದು ಕೋತಿಯನ್ನು ಹೊಡೆಯಬೇಕೆಂದಿದ್ದೆ. ಆದರೆ ಆ ಹಿಂದೂ ಬೇಡ ಎಂದು ತಡೆದ.

ಕನರಿನ್ ಎಂಬ ಹಳ್ಳಿಯ ಬಳಿ ಒಂದು ದೇವಸ್ಥಾನವಿದೆ. ಇದನ್ನು ನೂರು ದಾಪು ಅಗಲವಾದ ಬಂಡೆಯಲ್ಲಿ ಕೊರೆದಿದ್ದಾರೆ.

ನಾನು ಹೊರಟ ಊರಿಗೆ ಹಿಂದಿರುಗಿದಾಗ ಎಡ್ವರ್ಡರು ಗಾಳಿ ಸವಾರಿಯಲ್ಲಿದ್ದರು. ತಿನ್ನುವುದಕ್ಕೆ ಏನಾದರೂ ಕೊಡುವ ಬದಲು ಏನೇನೋ ಮಾತನಾಡಲಾರಂಭಿಸಿದರು. ಹಸಿದ ಹೊಟ್ಟೆಯಲ್ಲಿ ಮಾತಿಗೆ ಸಾಧ್ಯವಿಲ್ಲವೆಂದು ಹೇಳಿ, ನನ್ನ ಕೋಣೆಗೆ ಹೋಗಿ ತಿನ್ನುವುದಕ್ಕೆ ಏನಾದರೂ ಇದೆಯೇ ಎಂದು ಮನೆಯ ಸೇವಕನನ್ನು ಕೇಳಿದೆ. ಏನೂ ಇಲ್ಲವೆಂದ ಆತ. ಒಂದಿಷ್ಟು ರೊಟ್ಟಿಯನ್ನಾದರೂ ತಾ ಎಂದೆ. ಆತ ಒಂದು ಚೂರು ರೊಟ್ಟಿಯನ್ನೂ ಇರುವೆ ಮುತ್ತಿದ್ದ ನಿಂಬೆಕಾಯಿ ಉಪ್ಪಿನಕಾಯನ್ನೂ ತಂದಿಟ್ಟ. ಈ ಇರುವೆಗಳು ಇಂಡೀಸಿನಲ್ಲಿ ಮುಟ್ಟದ ವಸ್ತುವಿಲ್ಲ. ಈ ಕಾರಣ ಕೆಲವು ಕಡೆ ನೀರಿನ ಬಟ್ಟಲುಗಳ ಮೇಲೆ ಮೇಜು ಇಟ್ಟು, ಮೇಜಿನ ಮೇಲೆ ತಿಂಡಿ ಪದಾರ್ಥಗಳನ್ನು ಇಡುತ್ತಾರೆ. ಆದರೆ ನಮ್ಮ ಎಡ್ವರ್ಡ್ ಮಹಾಶಯರು ಅಂಥ ತೊಂದರೆಯನ್ನು ತೆಗೆದುಕೊಳ್ಳದೆ ಉಪ್ಪಿನಕಾಯಿ ಹಾಕುವುದನ್ನು ಕಲಿತ ಕಾಲದಲ್ಲಿ ಹಾಕಿದ್ದ ಉಪ್ಪಿನ ಕಾಯನ್ನು ನನ್ನ ಮುಂದೆ ಇಡಿಸಿದ್ದರು. ಈ ಕಾರಣ ಅದನ್ನು ಎಡ್ವರ್ಡ್‌ರ ಇತರ ಅತಿಥಿ ಗಳಿಗೆ ಇಡು ಎಂದು ಹೇಳಿದೆ. ಆ ಹೊಲಸು ಊರಿನಲ್ಲಿ ದುಡ್ಡುಕೊಟ್ಟರೂ ಏನೂ

ಸಿಕ್ಕುತ್ತಿರಲಿಲ್ಲ. ಹಸಿದ ಹೊಟ್ಟೆಯಲ್ಲಿಯೇ ಮಲಗಿದೆ, ಸಂಜೆಯ ಊಟಕ್ಕಾಗಿ ಕಾಯುತ್ತ.

ಸಂಜೆಯ ಗಾಳಿಸವಾರಿ ಮುಗಿಸಿಕೊಂಡು ಹಿಂದಿರುಗಿದ ಎಡ್ವರ್ಡ್ ಮಹಾಸ್ವಾಮಿಗಳು ಕತ್ತಲಾದ ಎರಡು ಗಂಟೆಯನಂತರ ನನ್ನ ಕತ್ತಲು ಕೋಣೆಗೆ ದಯಮಾಡಿಸಿದರು. ಏನೂ ತಿಳಿಯದವರಂತೆ ಊಟಕ್ಕೆ ಬಟ್ಟೆ ಹಾಸು ಎಂದು ಅಪ್ಪಣೆ ಮಾಡಿದರು. ನನಗೆ ಹೋದ ಜೀವ ಬಂದಂತಾಯಿತು. ಎರಡು ತಟ್ಟೆಗಳಲ್ಲಿ ಹುರಿದ ಸಣ್ಣ ಮೀನುಗಳು ಬಂದುವು. ದೊಡ್ಡ ತಟ್ಟೆಯನ್ನು ಫಾದರ್ ಮುಂದೆಯೂ ಸಣ್ಣದನ್ನು ನನ್ನ ಮುಂದೆಯೂ ಇಡಲಾಯಿತು. ತಟ್ಟೆಗಳನ್ನು ಅದಲು ಬದಲು ಮಾಡಬೇಕೆಂದು ನನಗೆ ಎರಡು ಸಲ ಅನ್ನಿಸಿತು. ಆದರೆ ನನಗೆ ನಾನೇ ಸಮಾಧಾನ ತಂದುಕೊಂಡೆ.

ಊಟವಾದ ಮೇಲೆ ಫಾದರ್ ಎಡ್ವರ್ಡರು ಸಾವಿರ ಅಡುಗೂಲಜ್ಜಿ ಕಥೆಗಳನ್ನು ಹೇಳುತ್ತಾ ಮಧ್ಯರಾತ್ರಿಯವರೆಗೆ ಕಾಲ ಕಳೆದರು. ಅದಕ್ಕೆ ಮುಂಚೆ ರೈತರ ಮುಂದೆ ಮೂರು ಗಂಟೆ ಹರಟೆಹೊಡೆದು ಬಂದಿದ್ದುದು ಅವರಿಗೆ ಸಾಕಾಗಿರಲಿಲ್ಲ. ಸಾಕಾಗಿದ್ದ ನಾನು ತೂಕಡಿಸುತ್ತ ಅವರು ಹೇಳುವುದಕ್ಕೆ ಊಗೊಡದೆ ಮಲಗಿಬಿಟ್ಟೆ. ಎಚ್ಚರಗೊಂಡು ನೋಡಿದಾಗ ಅವರಿರಲಿಲ್ಲ. ಬೆಳಕು ಹರಿದರೆ ಸಾಕೆಂದು ಪುನಃ ನಿದ್ದೆಹೋದೆ.

ಸಲ್ಸೆಟೀ ಫಲವತ್ತಾದ ಸ್ಥಳ. ಹಲವಾರು ಹಳ್ಳಕೊಳ್ಳಗಳು ಹರಿಯುತ್ತವೆ. ಬೇಕಾದ್ದೆಲ್ಲಾ ಬೆಳೆಯುತ್ತದೆ. ಬಡಹಳ್ಳಿಗಳಲ್ಲಿ ಹಿಂದೂಗಳು, ಮೂರರು ಮತ್ತು ಕ್ರೈಸ್ತರು ಹುಲ್ಲು ಗುಡಿಸಲುಗಳಲ್ಲಿ ವಾಸಮಾಡುತ್ತಾರೆ. ಹೆಣ್ಣು ಗಂಡೆಲ್ಲ ಅರೆಬೆತ್ತಲೆ. ಹಳ್ಳಿಯ ಯಜಮಾನನಿಗಾಗಿ ದುಡಿಯುವುದೇ ರೈತರ ಬಾಳು. ಗುಲಾಮರಂತೆ ದುಡಿದೂ ದುಡಿದೂ ಸಾಕಾಗುತ್ತಾರೆ. ದುಡಿದುದೆಲ್ಲಾ ಯಜಮಾನನ ಪಾಲು. ಅವರು ಬೆಳೆದುದರಲ್ಲಿ ನಾಲ್ಕು, ಆರು ಅಥವಾ ಹನ್ನೆರಡು 'ಮುರ' ಅಕ್ಕಿಯನ್ನು ಧಣಿಗೆ ಕೊಡಬೇಕು. ಇಲ್ಲಿ ಬತ್ತವನ್ನು 'ವತೆ' (Vate=ಬತ್ತ) ಎಂದು ಕರೆಯುತ್ತಾರೆ. ಒಂದು ಮುರಕ್ಕೆ ೨೫ 'ಪರ'ಗಳು. ಒಂದು ಪರಕ್ಕೆ ೨೪ ಸ್ಪಾನಿಷ್ ಪೌಂಡುಗಳು. ಪೋರ್ಚುಗೀಸರು ದೊಡ್ಡ ಅಳತೆಗೆ 'ಕೊವೆಡೊ' ಎಂಬ ಅಳತೆಯನ್ನು ಉಪಯೋಗಿಸುತ್ತಾರೆ.

ರೈತರು ತಮ್ಮ ಮನೆ ಇರುವ ಕಡೆಯೇ ಭೂಮಿಯನ್ನು ಸಾಗುವಳಿಗೆ ಪಡೆದರೆ ಧಣಿಗೆ ಏನೂ ಕೊಡಬೇಕಾಗಿಲ್ಲ. ಆದರೆ ಎಷ್ಟೋ ಬಿಟ್ಟಿ ಕೆಲಸಗಳನ್ನು ಮಾಡಬೇಕು. ಗೇಣಿಗೆ ಭೂಮಿಯನ್ನು ಪಡೆದವರು ಭೂಮಿಯ ಸ್ಥಿತಿಗೆ ತಕ್ಕಂತೆ ಗೇಣಿ ಕೊಡಬೇಕು. ಈ ಗೇಣಿಯನ್ನು ನಾಲ್ಕು ತಿಂಗಳಿಗೊಂದು ಸಲ ಕೊಡಬೇಕು. ಈ ಗೇಣಿ ರಾಜನ ಕಡೆಯವರಿಗೆ ಸಲ್ಲುತ್ತದೆ. ಇವರು, ಸೈನ್ಯದಲ್ಲಿ ಬಹಳ ಕಾಲ ಸೇವೆ ಸಲ್ಲಿಸಿದವರೋ ಅಥವಾ ರಾಜನಿಗೆ ಮೂರು ತಲೆಮಾರುಗಳ ಕಾಲ ಯಾವುದಾದರೂ ಸೇವೆ ಸಲ್ಲಿಸಿದವರೋ ಆಗಿರುತ್ತಾರೆ. ಚರ್ಚ್‌ಗೆ ಕೊಟ್ಟ ಭೂಮಿಗಳು ಶಾಶ್ವತವಾಗಿ ಅದಕ್ಕೇ ಸೇರಿರುತ್ತವೆ.

ಈ ದ್ವೀಪದಲ್ಲಿ ಅನೇಕ ಹಳ್ಳಿಗಳಲ್ಲದೆ ಕೆಲವು ಮುಖ್ಯ ಸ್ಥಳಗಳೂ ಇವೆ. ಇವುಗಳಲ್ಲಿ ಹಲವಾರು ಮೈಲಿ ದೂರದಲ್ಲಿರುವ ಬೊಂಬಾಯಿ ಎಂಬ ನಗರವೂ ಅದರ ಕೋಟೆಯೂ ಒಂದು. ಇದಕ್ಕೂ ಸಲ್ಸೆಟೆಗೂ ಮಧ್ಯೆ ಒಂದು ಕಡಲ್ಗಾಲುವೆ ಇದೆ. ೧೬೬೧ರಲ್ಲಿ ಬೊಂಬಾಯನ್ನು ಪೋರ್ಚುಗಲ್ ರಾಜ ಇಂಗ್ಲೆಂಡಿನ ರಾಣಿ ಕಾಥೆರೀನಾಳಿಗೆ ಮದುವೆ ಬಳುವಳಿಯಾಗಿ ಕೊಟ್ಟನು. ಆಗಿನಿಂದ ಅದು ಇಂಗ್ಲೆಂಡ್ ರಾಜನಿಗೆ ಸೇರಿದೆ.[೧] ಸಲ್ಸೆಟೆಯಲ್ಲಿ ಬಂದೋರ (ಬಾಂದ್ರಾ), ವೆರ್ಸೆವಾ (ವೆರ್ಸೊವಾ), ತಾನಾ (ಥಾಣಾ) ಎಂಬ ಸ್ಥಳಗಳೂ ಇವೆ. ಸಲ್ಸೆಟೆ ದ್ವೀಪದ ಬಹುಭಾಗ ಜೆಸ್ಯೂಯಿಟ್‌ರಿಗೆ ಸೇರಿದೆ. ಅವರಿಗೆ ಬರುವ ಆದಾಯ ಪೋರ್ಚುಗಲ್ ರಾಜನಿಗೆ ಬರುವುದಕ್ಕಿಂತ ಹೆಚ್ಚು ಎಂದು ಹೇಳುತ್ತಾರೆ.

ಮಂಗಳವಾರ ೧೫ನೆಯ ತಾರೀಖು ಬೆಳಕು ಹರಿಯಿತೋ ಇಲ್ಲವೋ ನಾನು ಹೊರಟುಬಿಟ್ಟೆ. ಗೋರ್ಮೆಂಡಲ್ ಎಂಬ ಸ್ಥಳಕ್ಕೆ ಬಂದಾಗ ಅಲ್ಲಿ ಒಂದು ದೋಣಿ ಕಂಡಿತು. ಅದರಲ್ಲಿದ್ದವರಿಗೆ ಸನ್ನೆಮಾಡಿದೆ—ನನ್ನನ್ನು ಕರೆದುಕೊಂಡು ಹೋಗಿ ಎಂದು. ಅವರು ನನ್ನ ಕರೆಗೆ ಓಗೊಡದಿದ್ದುದರಿಂದ ಪೋರ್ಚುಗೀಸರ ದರ್ಪದಿಂದ ನನ್ನ ಬಂದೂಕು ತೋರಿಸಿ ಹೊಡೆದುಬಿಡುವೆನೆಂದು ಹೆದರಿಸಿದೆ. ಆಗ ಅವರು ದಡಕ್ಕೆ ಬಂದು ನನ್ನನ್ನು ಕರೆದುಕೊಂಡುಹೋದರು.

ಬಸ್ಸೀನ್‌ಗೆ ಹೋಗಿ, ಫಾದರ್ ಎಡ್ವರ್ಡರು ತೋರಿಸಿದ ಅನುಪಮ ಆತಿಥ್ಯದ ಸಂಗತಿ ಹೇಳಿದೆ. ಅಲ್ಲಿಯ ಫಾದರುಗಳ ಮೇಲ್ವಿಚಾರಕರು ಇದನ್ನು ಕೇಳಿ ಅಚ್ಚರಿಪಟ್ಟು ಎಲ್ಲಾ ವಿವರಗಳನ್ನು ತಿಳಿಸುವಂತೆ ಹೇಳಿದರು. ನಾನು ನನ್ನ ಜೇಬಿನಲ್ಲಿದ್ದ ದಿನಚರಿ ಪುಸ್ತಕ

---

೧. ಬೊಂಬಾಯಲ್ಲಿ ಇಂಗ್ಲಿಷರು ನೆಲೆಸಿದ ಸಂಗತಿ ಸ್ವಾರಸ್ಯವಾಗಿದೆ. ಪಶ್ಚಿಮ ಕರಾವಳಿಯ ವ್ಯಾಪಾರದ ಮೇಲಿನ ಹತೋಟಿ ಸಿಕ್ಕಬೇಕಾದರೆ ಮತ್ತು ಪೋರ್ಚುಗೀಸರನ್ನೂ ಡಚ್ಚರನ್ನೂ ಬೆದರಿಸಬೇಕಾದರೆ ಬೊಂಬಾಯನ್ನು ತಮ್ಮ ವಶಪಡಿಸಿಕೊಳ್ಳಬೇಕೆಂದು ಇಂಗ್ಲಿಷರು ಅದರ ಮೇಲೆ ಕಣ್ಣು ಹಾಕಿದರು. ಈ ಕಾರಣ ೧೬೬೧ರಲ್ಲಿ ಇಂಗ್ಲಿಷರ ಎರಡನೆಯ ಚಾರ್ಲ್ಸ್ ದೊರೆ ಪೋರ್ಚುಗಲ್ಲಿನ ದೊರೆಯ ಮಗಳು ಕಾಥರೀನಳನ್ನು ಮದುವೆಯಾದಾಗ ಬಳುವಳಿಯಾಗಿ ಬೊಂಬಾಯಿ ದ್ವೀಪವನ್ನು ಪಡೆದರು. ಹೀಗೆ ಪಡೆದ ದ್ವೀಪವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಇಂಗ್ಲೆಂಡಿನಿಂದ ಐದು ಹಡಗುಗಳು ಬಂದುವು: ಆದರೆ ಪೋರ್ಚುಗೀಸರು ಅದನ್ನು ಬಿಟ್ಟುಕೊಡಲು ತಕರಾರು ಮಾಡಿದರು. ಸುಮಾರು ಎರಡು ವರ್ಷಗಳ ಕಾಲ ನಡೆದ ತಕರಾರಿನನಂತರ ಚಾರ್ಲ್ಸ್ ದೊರೆ ಅದನ್ನು ಈಸ್ಟ್ ಇಂಡಿಯಾ ಕಂಪೆನಿಗೆ ಹತ್ತು ಪೌಂಡು ವಾರ್ಷಿಕ ಬಾಡಿಗೆಗೆ ಕೊಟ್ಟನು.

ಸೂರತ್ತಿನಲ್ಲಾಗಲೇ ನೆಲೆಯಾಗಿ ನಿಂತಿದ್ದ ಇಂಗ್ಲಿಷ್ ಕಂಪೆನಿಯೇ ಬೊಂಬಾಯನ್ನೂ ನೋಡಿಕೊಳ್ಳುತ್ತಿತ್ತು. ಸೂರತ್ತಿನ ಕಂಪೆನಿಯ ಪ್ರೆಸಿಡೆಂಟ್ ಆಗಿದ್ದ (೧೬೬೯–೭೭) ಜೆರಾಲ್ಡ್ ಆಜಿಯರನೇ ಬೊಂಬಾಯಿಯ ಮೊದಲ ಗೌರ್ನರ್ ಆದ. ಆತನೇ ಬೊಂಬಾಯನ್ನು ಕಟ್ಟಿದವನು. ಆತ ಬಂದರನ್ನು ಬಲಪಡಿಸಿದ. ಹಡಗು ನಿರ್ಮಾಣವನ್ನು ನಿರ್ಮಿಸಿದ. ನ್ಯಾಯಾಲಯ ಸ್ಥಾಪಿಸಿದ. ಪೋಲೀಸ್ ಮತ್ತು ಸೈನ್ಯವನ್ನಿಟ್ಟು ನೆಲೆಸಲು ಬಂದ ವರ್ತಕರಿಗೆ ತಕ್ಕ ರಕ್ಷಣೆ ಒದಗಿಸಿದ. ಶಿವಾಜಿ ೧೬೭೦ರಲ್ಲಿ ಎರಡನೆಯ ಸಲ ಸೂರತ್ತನ್ನು ಕೊಳ್ಳೆಹೊಡೆದಾಗ ಇಂಗ್ಲಿಷರ ಆಸ್ತಿ ಪಾಸ್ತಿಗಳನ್ನು ಮತ್ತು ಪ್ರಾಣಗಳನ್ನು ಕಾಪಾಡಿದವನು ಈತನೇ. ಪ್ರಾಂತ್ಯದ ಕಸಬೆಯೂ ಸೂರತ್ತಿನಿಂದ ಬೊಂಬಾಯಿಗೆ ವರ್ಗಾಯಿಸಲ್ಪಟ್ಟಿತು.

ತೆಗೆದು ಎಲ್ಲವನ್ನೂ ಓದಿ ಹೇಳಿದೆ. ಫಾದರುಗಳು ನಕ್ಕು ನಕ್ಕು ಸಾಕಾದರು. ಆದರೆ ಮನಸ್ಸಿನೊಳಗೆ ಪೋರ್ಚುಗೀಸರ ಸನ್ನಡತೆಗೆ ಮಸಿ ಬಳಿಯುವ ಎಷ್ವರ್ಡರ ವರ್ತನೆಗೆ ನೊಂದುಕೊಂಡರು.

ಬುಧವಾರ ೧೬ನೆಯ ತಾರೀಖು ಇಂಡಿಯಾದ (ಪೋರ್ಚುಗೀಸ್) ವೈಸರಾಯ್ ಕೌಂಟ್ ದೆ ವಿಲ್ಲಾ ವೆರ್ದೆ ಅವರು ನಾಲ್ಕು ದೊಡ್ಡ ಹಡಗುಗಳು ಮತ್ತು ಹತ್ತು ಸಣ್ಣ ಹಡಗುಗಳೊಡಗೂಡಿ ದಿಯು ಕಡೆಗೆ ಪರಿಶೀಲನೆಗೆ ಹೋಗಿ ಹಿಂದಿರುಗುತ್ತಿದ್ದರು. ಅವರಿಗೆ ಗೌರವ ಸೂಚಿಸಲು ಬಸ್ಸೀನ್ ಪಟ್ಟಣದ ಎಲ್ಲಾ ಫಿರಂಗಿಗಳೂ ಹಾರಿದುವು. ಇದಕ್ಕೆ ಪ್ರತ್ಯುತ್ತರವಾಗಿ ವೈಸರಾಯ್ ಕಡೆಯಿಂದ ಏಳು ಫಿರಂಗಿಗಳು ಹಾರಿದುವು. ಮತ್ತೆ ನಗರದ ಫಿರಂಗಿಗಳು ಬೆಂಕಿಯನ್ನು ಕಾರಿದುವು.

ಭಾನುವಾರ ೨೧ನೆಯ ತಾರೀಖು ವೈಸರಾಯ್ ಹಡಗುಪಡೆ ಹೊರಡುವುದಿತ್ತು. ನಾನು ನನ್ನ ಸಾಮಾನು ಸರಂಜಾಮುಗಳ ಸಮೇತ ದೋಣಿಯಲ್ಲಿ ಹೋಗಿ 'ಮಂಚುಕಾ' (Manchuca = ಮಚವೆ) ಎಂದು ಕರೆಯಲ್ಪಡುವ ಒಂದು ಯುದ್ಧನೌಕೆಯಲ್ಲಿ ಜಾಗ ಮಾಡಿಕೊಂಡೆ. ಅದರ ಕ್ಯಾಪ್ಟನ್ ನನ್ನನ್ನು ಪ್ರೀತಿಯಿಂದ ಕಂಡು ಹಡಗಿನಲ್ಲಿ ಹೋಗಲು ಅವಕಾಶ ಮಾಡಿಕೊಟ್ಟ. ಸೂರ್ಯ ಮೂಡುವುದಕ್ಕೆ ಇನ್ನೂ ಒಂದು ಗಂಟೆ ಇರುವಾಗ ಹಡಗುಗಳು ಹೊರಟವು.

ಮಂಗಳವಾರ ೨೩ನೆಯ ತಾರೀಖು ಚೌಲ್ ಬಳಿ ಲಂಗರು ಹಾಕಿದೆವು. ಗಾಳಿ ಬೀಸದೆ ಹೋದ್ದರಿಂದ ಇಲ್ಲಿಂದ ಹೊರಡುವುದು ನಿಧಾನವಾಯಿತು. ಗಾಳಿ ಬೀಸ ಲಾರಂಭಿಸಿದಾಗ ಹೊರಟು ಶನಿವಾರ ೨೭ನೆಯ ತಾರೀಖು ಬೆಳಕು ಹರಿಯುವ ಹೊತ್ತಿಗೆ ಗೋವೆ ತಲುಪಿದೆವು. ಒಟ್ಟು ೨೮೦ ಮೈಲಿಗಳ ದೂರ ಪ್ರಯಾಣ ಮಾಡಿ ದ್ದೆವು. ಹಡಗಿನಿಂದಿಳಿದು ನನ್ನ ಸಾಮಾನುಗಳನ್ನು 'ಬಲ್ಲೋನ್' (Ballon) ಎಂದು ಕರೆಯಲ್ಪಡುವ ದೋಣಿಯಲ್ಲಿ ಹಾಕಿಕೊಂಡು ಸುಂಕದ ಕಟ್ಟೆಯ ಬಳಿಗೆ ಹೋದೆ. ನನ್ನ ಸಾಮಾನೊಂದರ ಮೇಲೆ 'ಗೋವೆಯ ಕ್ರೈಸ್ತಮಠದ ಹಿರಿಯರಿಗೆ' ಎಂದು ಬರೆದಿದ್ದು ದನ್ನು ನೋಡಿ ಅವುಗಳ ಶೋಧನೆಮಾಡದೆ ಬಿಟ್ಟರು. ನಾನು ಗೋವೆಯ ನಗರವನ್ನು ಪ್ರವೇಶಿಸಿ ಕ್ರೈಸ್ತಮಠಕ್ಕೆ ಹೋದೆ. ನನ್ನನ್ನು ಅಲ್ಲಿಯ ಫಾದರ್ ಪ್ರೀತಿಯಿಂದ ಸ್ವಾಗತಿಸಿ ದರು.

ಗೋವೆ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡಿದೆ. ಪೋರ್ಚುಗೀಸರಿಗೆ ಭಾರಿ ನಷ್ಟ ಸಂಭವಿಸಿದೆ. ಪೋರ್ಚುಗಲ್‌ನಲ್ಲಿ ನಡೆದ ಯುದ್ಧದಲ್ಲಿ ಅವರ ಸೇನೆಯು ಭಾರಿ ನಷ್ಟ ಅನುಭವಿಸಬೇಕಾಯಿತು. ವ್ಯಾಪಾರ ಕುಂದಿತು. ಹೀಗಾಗಿ ಗೋವೆ ತನ್ನ ಹಿಂದಿನ ಐಶ್ವರ್ಯ ಹಾಗೂ ವೈಭವಗಳನ್ನು ನೀಗಿಕೊಂಡುಬಿಟ್ಟಿದೆ. ಗೋವೆಯಲ್ಲಿ ಜನಸಂಖ್ಯೆ ಈಗ ೨೦,೦೦೦ ಮಾತ್ರ. ಪೋರ್ಚುಗೀಸರು ತುಂಬಾ ಕಡಮೆ. ಇವರು ಇಲ್ಲಿಗೆ ಕೆಲಸಕ್ಕಾಗಿ ಬಂದು ಇಲ್ಲೇ ಮದುವೆಯಾಗಿ ನೆಲೆಸಿದ್ದಾರೆ. ಇಲ್ಲಿಯ

ಹೆಂಗಸರಿಗೆ ಸ್ಥಳದ ಜನರನ್ನು ಮದುವೆಯಾಗಲು ಇಷ್ಟವಿಲ್ಲ. ಎಷ್ಟೇ ಬಡವನಾದ ಪೋರ್ಚುಗೀಸನಾದರೂ ಸರಿ ಅವನನ್ನು ಮದುವೆಯಾಗುತ್ತಾರೆ. ಪೋರ್ಚುಗೀಸ್ ತಂದೆ ತಾಯಿಗಳ ಹೊಟ್ಟೆಯಲ್ಲಿ ಇಲ್ಲೇ ಹುಟ್ಟಿದವರಾದರೂ ಅವರನ್ನು ಮದುವೆ ಯಾಗಲು ಒಪ್ಪುವುದಿಲ್ಲ. ಇಲ್ಲಿಯ ನಿವಾಸಿಗಳಲ್ಲಿ 'ಮೆಸ್ತಿಜೋ'ಗಳೇ ಹೆಚ್ಚು. ಇವರು ಪೋರ್ಚುಗೀಸ್ ಗಂಡಸರಿಗೆ ಬ್ರಾಹ್ಮಣ ಹೆಂಗಸರ ಹೊಟ್ಟೆಯಲ್ಲಿ ಹುಟ್ಟಿದವರು. ಕನರಿನ್ ಹೆಂಗಸರು ಕಪ್ಪಗಿದ್ದರೂ ಬಿಳಿಯರನ್ನು ಮದುವೆಯಾಗಿ ಒಳ್ಳೆಯ ಬಣ್ಣದ ಸಂತಾನಸೃಷ್ಟಿಗೆ ಕಾರಣರಾಗಿದ್ದಾರೆ. ಇಲ್ಲಿಯ ಕಾಲುಭಾಗದಷ್ಟು ಜನರು ಬಿಳಿಯರ ಮತ್ತು ಕರಿಯರ ಮದುವೆಯಿಂದ ಹುಟ್ಟಿದ 'ಮುಲತ್ತಾ' ಎಂಬ ಜನರು.

ಕನರಿನರು ಇಥಿಯೋಪಿಯಾದವರಂತೆ ಕಪ್ಪಾಗಿದ್ದಾರೆ. ಆದರೆ ಕೂದಲು ಉದ್ದ; ಮುಖ ಚೆಂದ. ಬಹು ಮಂದಿ ಪೌರೋಹಿತ್ಯ, ವಕೀಲಿ, ಕರಣಿಕ ಮುಂತಾದ ಕೆಲಸಗಳಲ್ಲಿ ನಿರತರಾಗಿದ್ದಾರೆ. ತಮ್ಮ ಧಣಿಯ ಸೇವೆಯನ್ನು ಬಹು ನಿಷ್ಠೆಯಿಂದ ಮಾಡುತ್ತಾರೆ. ಇವರಲ್ಲಿ ಅನೇಕರು ಬ್ರಾಹ್ಮಣರು, ಬನಿಯರು ಮತ್ತು ಚರದೊ (ಶೂದ್ರರ) ಗಳ ಪರಸ್ಪರ ಸಂಪರ್ಕದಿಂದ ಹುಟ್ಟಿದವರು. ಸಕಲ ವಿದ್ಯೆಗಳಲ್ಲಿ ಪರಿಣತರೂ ಬುದ್ಧಿವಂತರೂ ಆದ ಇವರನ್ನು ನೇಮಿಸಿಕೊಳ್ಳಲು ಯಾರಿಗಾದರೂ ಇಷ್ಟವೆ. ಆದರೆ ಕೀಳ್ಜಾತಿಯವರು ಇದಕ್ಕೆ ತದ್ವಿರುದ್ಧ. ಉದಾಹರಣೆಗೆ, 'ಲಂಗೊಟ್ಟೆ' ಎಂಬ ಜನ. ಇವರಂಥ ಕಳ್ಳರು ಮತ್ತು ದುಂಡಾವರ್ತಿಗಳು ಅಥವಾ ನಂಬಲು ಅರ್ಹರಲ್ಲದ ಕ್ರೈಸ್ತರು ಇಡೀ ಏಷ್ಯಾದಲ್ಲಿ ಹುಡುಕಿದರೂ ಸಿಕ್ಕಲಾರರು. ಲಂಗೋಟಿ ಅಷ್ಟೇ ಇವರ ಉಡುಪು. ಇವರು ಬೇಸಾಯ, ಮೀನುಗಾರಿಕೆ, ದೋಣಿ ನಡೆಸುವುದು, ಅಂದಳಗಳನ್ನು ಹೊರುವುದು ಮುಂತಾದ ಕೀಳ್ತರದ ಕಸಬುಗಳನ್ನು ಮಾಡುತ್ತಾರೆ. ಇವುಗಳ ಜೊತೆಗೆ ಕಳ್ಳತನವೂ ಇವರ ಕಸಬಾಗಿದೆ. ಎಷ್ಟು ಚಾಕಚಕ್ಯತೆಯಿಂದ ಕಳ್ಳತನ ಮಾಡುತ್ತಾರೆಂದರೆ, ಇವರಿಂದ ಯಾರೂ ತಪ್ಪಿಸಿಕೊಳ್ಳುವಂತಿಲ್ಲ. ಇವರ ಸರಳ ಜೀವನಕ್ಕೆ ತಕ್ಕಂತೆ ದೇವರ ಮೇಲಿನ ಭಕ್ತಿಯೂ ಇದ್ದರೆ ಇವರನ್ನು ಯೋಗಿಗಳೆಂದೇ ಕರೆಯಬಹುದಾಗಿತ್ತು. ಹಗಲು ರಾತ್ರಿ ಬೆತ್ತಲೆಯಾಗಿದ್ದು ಬರಿಯ ನೆಲದಲ್ಲಿ ಮಲಗುತ್ತಾರೆ. ಗಂಜಿಯಲ್ಲಿ ತಡಕಾಡಿ ಸಿಕ್ಕುವ ಅನ್ನದ ಅಗಳುಗಳೇ ಇವರ ಆಹಾರ. ಕಾಯಿಲೆಬಿದ್ದಾಗ ಮಾತ್ರ ಒಂದಿಷ್ಟು ಬ್ರೆಡ್ಡಿನ ರುಚಿ ನೋಡುತ್ತಾರೆ. ಇವೆಲ್ಲಕ್ಕೂ ಇವರ ಸೋಮಾರಿತನವೇ ಕಾರಣ. ಒಂದು ವಾರಕ್ಕಾಗುವಷ್ಟು ಅಕ್ಕಿ ಸಿಕ್ಕಿಬಿಟ್ಟರೆ ಸಾಕು, ಇನ್ನೊಂದು ವಾರ ಕೆಲಸ ಬಿಟ್ಟು ಆಲಸಿಗ ರಾಗಿ ಕುಳಿತುಕೊಳ್ಳುತ್ತಾರೆ.

ಪೋರ್ಚುಗೀಸರು ಈ ದೇಶಕ್ಕೆ ಬಂದಾಗ ಅವರ ಬಗ್ಗೆ ಹೇಗೆ ನಡೆದುಕೊಳ್ಳ ಬೇಕೆಂದು ಕನರಿನರು ತಮ್ಮ ದೇವರುಗಳನ್ನು ಕೇಳಿದರಂತೆ. ಆಗ ದೇವರುಗಳು, 'ಅವರ ಮೇಲೆ ಶಕ್ತಿಯ ಪ್ರಯೋಗ ಬೇಡ. ಯುಕ್ತಿಯಿಂದ ಕಾರ್ಯ ಸಾಧಿಸಿಕೊಳ್ಳಿ, ಅವರು ಕೇಳಿದ್ದು ಏನೆಂದು ತಿಳಿಯದೆಂಬಂತೆ ನಟಿಸಿರಿ. ರೊಟ್ಟಿ ಕೇಳಿದರೆ ನೀರು ಕೊಡಿ,

ಮದ್ಯ ಕೇಳಿದರೆ ಅನ್ನ ಕೊಡಿ' ಎಂದು ಹೇಳಿದುವಂತೆ. ಆದರೆ ಈ ಬುದ್ಧಿ ಮಾತುಸರಿಯಲ್ಲ, ಎಂದು ಅನುಭವ ಹೇಳಿತು. ಪೋರ್ಚುಗೀಸರು ಬೀಸಿದ ದೊಣ್ಣೆ ಕಪರಿನರಿಗೆ ಬುದ್ಧಿ ಕಲಿಸಿತು. ದೊಣ್ಣೆ ಏಟು ಬಿದ್ದಕೂಡಲೇ ಹೇಳಿದಂತೆ ಕೇಳಲಾರಂಭಿಸಿದರು. ನಾನು ಗೋವೆಯಲ್ಲಿದ್ದಾಗ ಆ ದೊಣ್ಣೆ ಎಂಥ ಅದ್ಭುತ ಕೆಲಸಗಳನ್ನು ಮಾಡಬಲ್ಲುದೆಂದು ನನ್ನ ಕಣ್ಣಾರೆ ಕಂಡೆ. ಒಂದು ಹೊಡೆತ ಹೊಡೆದರೆ,ಸಾಕು. ಹೇಳಿದ್ದೆಲ್ಲಾ ಕೂಡಲೇ ಅರ್ಥವಾಗಿ ಕಾಲಲ್ಲಿ ತೋರಿಸಿದ್ದನ್ನು ಕೈಯಲ್ಲಿ ಮಾಡುತ್ತಾರೆ. ಒಳ್ಳೆಯ ಮಾತಿಗೆ ಕೆಲಸ ಮಾಡುವ ಕಾಲ ಹೋಯಿತು. ಹೊಡೆದರೆ ಆಗುವಷ್ಟು ಆನಂದ ಇವರಿಗೆ ಬೇರೆ ರೀತಿಯಿಂದ ಆಗುವುದಿಲ್ಲ. ಮದುವೆಯಾದ ಗಂಡ ಹೆಂಡಿರುಗಳು ಕೆಲಸ ಬೊಗಸೆ ಮಾಡದೆ ಮಲಗಿರುವುದನ್ನು ನೋಡಿ ಅವರ ನೆಂಟರಿಷ್ಟರು ಕಂಡು ಚೆನ್ನಾಗಿ ಬಾರಿಸುತ್ತಾರಂತೆ. ಆ ಏಟು ತಿಂದು ಸಾಕಾಗಿ ಅದೇ ನೆಪದಿಂದ ಇನ್ನೂ ಕೆಲವು ದಿನಗಳು ಮಲಗಿಯೇ ಬಿಡುತ್ತಾರಂತೆ.

ಗೋವೆಯಲ್ಲಿ ಕಾಫಿರರೂ ಕರಿಯರೂ ತುಂಬಾ ಜನ ಉಂಟು. ಒಬ್ಬೊಬ್ಬ ಪೋರ್ಚುಗೀಸ ಮೂವತ್ತು ನಲವತ್ತು ಜನ ಗುಲಾಮರನ್ನು ಇಟ್ಟುಕೊಂಡಿದ್ದಾನೆ. ಬಹಳ ಕಡಮೆಯೆಂದರೆ ಆರು ಅಥವಾ ಹನ್ನೆರಡು. ಛತ್ರಿ ಹಿಡಿಯಲಿಕ್ಕೆ, ಅಂದಳ ಹೊರಲಿಕ್ಕೆ ಮತ್ತು ಇವರ ಸಣ್ಣಪುಟ್ಟ ಕೆಲಸಗಳಿಗೆಲ್ಲಾ ಅವರು ಬೇಕು. ಅವರನ್ನು ಸಾಕುವುದು ಸುಲಭ. ಮಧ್ಯಾಹ್ನ ಮತ್ತು ರಾತ್ರಿ ಎರಡು ಹೊತ್ತು ಒಂದು ಹಿಡಿ ಕೂಳು ಹಾಕಿದರೆ ಎಷ್ಟೋ ಆಯಿತು. ತಾಯಿಯ ಹೊಟ್ಟೆಯಿಂದ ಬಂದಾಗ ಎಷ್ಟು ಬಟ್ಟೆಯೋ ಅಷ್ಟೆ ಬಟ್ಟೆ ಅವರ ಮೈಮೇಲೆ. ಮೊಂಬಾಸ, ಮೊಸಾಂಬಿಕ್, ಸೊಫಾಲಾ ಮೊದಲಾದ ಆಫ್ರಿಕಾದ ತೀರದಲ್ಲಿರುವ ಸ್ಥಳಗಳಿಂದ ಇವರನ್ನು ಇಲ್ಲಿಗೆ ತಂದು ಗೋವೆ ಮತ್ತಿತರ ಊರುಗಳಲ್ಲಿ ಮಾರಾಟಮಾಡುತ್ತಾರೆ. ಆಫ್ರಿಕಾದ ಈ ದೇಶಗಳು ಪರಸ್ಪರ ವೈಷಮ್ಯದಿಂದಿರುವ ಕಾರಣ ಯುದ್ಧದಲ್ಲಿ ಸೆರೆಹಿಡಿದವರನ್ನು ಪೋರ್ಚುಗೀಸರಿಗೆ ಮಾರಿಬಿಡುತ್ತಾರೆ. ಮತ್ತೆ ಕೆಲವರನ್ನು ಅವರ ತಂದೆ ತಾಯಿಗಳು ಸಾಕಲಾರದೆ ಕಾಸಿಗೊಂದು ಕೊಸರಿಗೆರಡರಂತೆ ಕೊಟ್ಟುಬಿಡುತ್ತಾರೆ. ಕೆಲವರು ಬೇರೇನೂ ದಾರಿ ಕಾಣದೆ ತಮ್ಮನ್ನು ತಾವೇ ಮಾರಿಕೊಳ್ಳುತ್ತಾರೆ. ಭಾರಿ ಅಗ್ಗವಾಗಿ ಸಿಕ್ಕುವ ಇವರನ್ನು ಗೋವೆಗೆ ತಂದು ಅರೆದು ಪುಡಿಮಾಡಿಬಿಡುತ್ತಾರೆ. ಈ ಗುಲಾಮರನ್ನು ಧಣಿಗಳು ತಾವು ತಯಾರಿಸಿದ ಮದ್ಯ ಮಾರಲೂ ಉಪಯೋಗಿಸುತ್ತಾರೆ. ಬೇರೆ ಕೆಲಸಕ್ಕೂ ಉಪಯೋಗಿಸುತ್ತಾರೆ. ಈ ಗುಲಾಮರು ವಿಗ್ರಹಾರಾಧಕರಾದರೂ ಕ್ಯಾಥೊಲಿಕ್ ಮತಕ್ಕೆ ಸಲೀಸಾಗಿ ಸೇರಿಕೊಳ್ಳುತ್ತಾರೆ.

ಗೋವೆಯಲ್ಲಿ ಹಲವಾರು ದಿನಗಳು ಇದ್ದು ಅಲ್ಲಿ ನೋಡಬೇಕಾದ್ದನ್ನೆಲ್ಲಾ ನೋಡಿಕೊಂಡು ನನ್ನ ದೊಡ್ಡ ಆಸೆಯನ್ನು ತೀರಿಸಿಕೊಳ್ಳುವ ನಿರ್ಧಾರಮಾಡಿದೆ. ಏಷ್ಯಾದಲ್ಲೇ ಅತ್ಯಂತ ದೊಡ್ಡ ಚಕ್ರವರ್ತಿ ಎನಿಸಿಕೊಂಡ ಮೊಗಲ್ ಚಕ್ರವರ್ತಿಯನ್ನು ನೋಡಲು ಸಿದ್ಧತೆಮಾಡಿಕೊಂಡೆ. 'ಅದಕ್ಕೆ ಏನೇನೋ ಅಡಚಣೆಗಳಿವೆ, ಬೇಡ' ಎಂದರು ನನ್ನ

ಸ್ನೇಹಿತರು. ಆದರೂ ಅವರ ಮಾತಿಗೆ ಕಿವಿಗೊಡದೆ ಆ ಚಕ್ರವರ್ತಿಯನ್ನು ನೋಡಲೇ ಬೇಕೆಂದು ಮನಸ್ಸು ಮಾಡಿದೆ. ನನ್ನ ಸಾಮಾನುಗಳನ್ನೂ ಅಡುಗೆಯ ಪಾತ್ರೆಪರಟೆ ಗಳನ್ನೂ ಹೊರುವುದಕ್ಕೆ ಒಬ್ಬ 'ಬೇಗಾರಿನ್'ನನ್ನು[೧] ನೇಮಿಸಿಕೊಂಡೆ. ಅವನಿಗೆ ಮೊಗಲರ ಭಾಷೆ ಬರುತ್ತಿರಲಿಲ್ಲವಾದ್ದರಿಂದ ತನ್ನ ಮಾತೃಭಾಷೆಯಲ್ಲದೆ ಪೋರ್ಚುಗೀಸ್ ಭಾಷೆಯೂ ಬರುತ್ತಿದ್ದ ಒಬ್ಬ ಗೋಲ್ಕೊಂಡಾದ ಹುಡುಗನನ್ನು ದುಭಾಷಿಯಾಗಿ ಕರೆದು ಕೊಂಡೆ. ನನ್ನ ಹೆಚ್ಚು ಸಾಮಾನುಗಳನ್ನು ಫಾದರ್ ಹಿಪೊಲಿತೋ ವಿಸೊಂತಿ ಎಂಬುವರ ಬಳಿ ಬಿಟ್ಟು ಅಡುಗೆಗೆ ಎಷ್ಟು ಬೇಕೋ ಅಷ್ಟು ಸಾಮಾನುಗಳನ್ನು ತೆಗೆದುಕೊಂಡು ಮಾರ್ಚ್ ೪ನೆಯ ತಾರೀಖು ಶುಕ್ರವಾರ (೧೯೬೫ನೆಯ ಇಸವಿ) ಹೊರಟೆ. ನನ್ನ ಸ್ವಂತ ಸೇವಕರನ್ನು ಸನ್ಯಾಸಿ ಮಠದಲ್ಲಿ ಬಿಟ್ಟೆ.

ಹೊರಟ ದಿನ ರಾತ್ರಿಯನ್ನು ಒಂದು ಹಳ್ಳಿಯ ಬಳಿ ತೆಂಗಿನಮರದ ಕೆಳಗೆ ಕಳೆದೆವು. ಹಳ್ಳಿಯಲ್ಲಿ ಆ ದಿನ 'ಸಿಮಿಂಗ' (ಹೋಳಿ?) ಹಬ್ಬ. ವಾದ್ಯಗಳು ಭೋರ್ಗರೆ ಯುತ್ತಿದ್ದುವು. ಈ ಕಾರಣ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ.

ಶನಿವಾರ ೫ನೆಯ ತಾರೀಖು ಮುಂದಿನ ಪ್ರಯಾಣ ಆರಂಭಿಸಿದೆ. ನಮ್ಮ ಜೊತೆಗೆ ಒಬ್ಬ ಆರ್ಮೇನಿಯನ್ ಮತ್ತು ಒಬ್ಬ ಮೂರ ಸೇರಿಕೊಂಡರು. ಬೆಳಗ್ಗೆ ಹೊರಡುವ ಮುನ್ನ ಅವರು ಕಿಚಡಿಯನ್ನು ಪಟ್ಟಾಗಿ ಹೊಡೆದು ಹೊಟ್ಟೆ ಭರ್ತಿಮಾಡಿ ಕೊಂಡರು. ಮುಂದಿನ ಹಳ್ಳಿ ಪೊಂಡಾ ಎಂಬ ಸ್ಥಳ ಇನ್ನೂ ಹನ್ನೆರಡು ಮೈಲಿ ದೂರ ದಲ್ಲಿತ್ತು. ಅಲ್ಲಿಗೆ ನನ್ನ ಸಾಮಾನನ್ನು ಹೊತ್ತುಕೊಂಡುಹೋಗಲು ಮೂರು ಜನ ಹಿಂದೂ ಗಳನ್ನು ನೇಮಿಸಿಕೊಂಡೆ. ಆ ಜನ ಒಳ್ಳೆಯ ಮಾತಿಗೆ ಬಗ್ಗುತ್ತಿರಲಿಲ್ಲ. ಆದ್ದರಿಂದ ನಾನು ಮನಸ್ಸಿಲ್ಲದ ಮನಸ್ಸಿನಿಂದ ಒಂದು ಬಡಿಗೆ ತೆಗೆದುಕೊಂಡು ಬಾರಿಸಿದೆ. ಆ ಮೇಲೆ ಅವರು ಹೇಳಿದಂತೆ ಕೇಳಿದರು. ಉರಿ ಬಿಸಿಲು! ಸ್ವಲ್ಪ ಸ್ವಲ್ಪ ದೂರ ನಡೆದು ಅಲ್ಲಲ್ಲಿ ಸಿಕ್ಕಿದ ಕಲ್ಲಂಗಡಿ ಮತ್ತು ಇತರ ಹಣ್ಣುಗಳನ್ನು ತಿಂದು ದಣಿವಾರಿಸಿಕೊಂಡು ದಾರಿ ಸಾಗಿಸಿದೆವು. ಮನುಷ್ಯನು ಹೊರಲಾರದಷ್ಟು ಭಾರಿಯಾದ ಹಲಸಿನಹಣ್ಣನ್ನು ನಾವು ಒಂದು ಕಡೆ ಕೊಯ್ದು ತಿಂದೆವು. ಅದನ್ನು ತಿಂದು ಮುಗಿಸುವುದಕ್ಕೆ ಎಷ್ಟೋ ಹೊತ್ತಾಯಿತು. ನಮ್ಮ ಕೈಮುಟ್ಟಿದ ಹಲಸಿನ ಹಣ್ಣನ್ನು ವಿಗ್ರಹಾರಾಧಕರು ತಿನ್ನದೇ ಹೋದರು. ಉಪವಾಸವಿದ್ದರೂ ಅವರು ತಿನ್ನುವುದಿಲ್ಲ. ಈ ಕಾರಣ ಕೆಲವರು ನಾಲ್ಕೈದು ದಿನಗಳಾದರೂ ಉಪವಾಸ ಇರುತ್ತಾರೆಂದು ಗೊತ್ತಾಯಿತು.

ಸಂಜೆ ಸುಸ್ತಾಗಿ ಪೊಂಡಾ ಗ್ರಾಮವನ್ನು[೨] ತಲುಪಿದೆವು. ಅಲ್ಲಿ ಮೊಗಲ್ ಸೈನ್ಯದ

---

೧. ಬೇಗಾರಿನ್: ಈ ಪದ ಕರ್ನಾಟಕದ ಉತ್ತರ ಭಾಗಗಳಲ್ಲಿಯೂ ಉಪಯೋಗದಲ್ಲಿದೆ. ಊರಿನ ಕೆಲಸ ಮಾಡುವವರಿಗ ಬೇಗಾರ (ಅಥವಾ ಬೇಹುಗಾರ?) ಎಂದು ಕರೆಯುತ್ತಾರೆ. ಬೇಗಾರ್ ಎಂಬ ಪದ ಪರ್ಷಿಯಾ ಭಾಷೆಯ ಪದವೆಂಬ ಅಭಿಪ್ರಾಯವಿದೆ.

೨. ಪೊಂಡಾ: ಇದು ಈಗ ಗೋವೆ ನಾಡಿಗೆ ಸೇರಿದ ಪೋಂಡಾ.

ಸಣ್ಣ ತುಕಡಿ ಬೀಡುಬಿಟ್ಟಿತ್ತು. ಆ ಸೈನ್ಯದಲ್ಲಿ ಸಲ್ಸೆಟೆಯಲ್ಲಿ ಹುಟ್ಟಿದ ಫ್ರಾನ್ಸಿಸ್ ದೆ ಮಿರಾಂಡ ಎಂಬ ಒಬ್ಬ ಸಿಪಾಯಿ ಇದ್ದ. ಆತ ಹದಿನಾರು ವರ್ಷಗಳಿಂದ ತಿಂಗಳಿಗೆ ೭೫ ಬೆಳ್ಳಿ ರೂಪಾಯಿ ಸಂಬಳದ ಮೇಲೆ ಕೆಲಸಕ್ಕೆ ಸೇರಿಕೊಂಡಿದ್ದ. ಆತ ನನ್ನನ್ನು ವಿಶ್ವಾಸದಿಂದ ಕಂಡನು. ಈ ಸೈನ್ಯವು ಬಿಷೋಲ್‌ನಿಂದ ದಿವಾನನೊಡನೆ ಬಂದಿತ್ತು. ಪೋಂಡಾದ ಕೆಳ ಕೋಟೆಯನ್ನೂ ಸುಭಾ ಅಧಿಕಾರವನ್ನೂ ವಹಿಸಿಕೊಳ್ಳುವುದೇ ಇದರ ಉದ್ದೇಶ. ದಿವಾನ ೬೫ ವರ್ಷದ ಕೂದಲು ಹಣ್ಣಾದ ಮುದುಕ.

ಪೋಂಡಾ ನಗರ ಗುಡ್ಡಗಾಡಿನಲ್ಲಿದೆ. ಮಣ್ಣಿನ ಮನೆಗಳೇ ಹೆಚ್ಚು. ಏಳನೆಯ ತಾರೀಖು ಸೋಮವಾರ ಪೋಂಡಾದಲ್ಲಿ ಪಾಪ ಬಡಪಾಯಿ ಹಿಂದೂ ಹೆಂಗಸೊಬ್ಬಳು ಸಹಗಮನ ಮಾಡಿದ ತುಂಬಾ ವ್ಯಸನಕರವಾದ ದೃಶ್ಯವನ್ನು ಕಂಡೆ. ಸಹಗಮನಕ್ಕಾಗಿ ಸುಭಾ (ಸುಬೇದಾರ) ನಿಂದ ಅನುಮತಿ ಪಡೆಯಲು ಆಕೆ ಕೈತುಂಬ ಹಣ ಕೊಟ್ಟಿದ್ದಳು. ಮಧ್ಯಾಹ್ನ ಆ ಹೆಂಗಸು ಹೊಸ ಬಟ್ಟೆಗಳನ್ನು ಉಟ್ಟು, ಆಭರಣಗಳನ್ನು ತೊಟ್ಟು ವಾದ್ಯಸಮೇತ ಹೊರಟಳು. ನೆಂಟರಿಷ್ಟರೂ ಬ್ರಾಹ್ಮಣ ಪುರೋಹಿತರೂ ಜೊತೆಯಲ್ಲಿದ್ದರು. ನಿರ್ದಿಷ್ಟವಾದ ಸ್ಥಳಕ್ಕೆ ಬಂದ ಮೇಲೆ ಆಕೆಯನ್ನು ಸೌದೆಯ ಕಟ್ಟೆಯ ಮೇಲೆ ಮಲಗಿಸಿ ಅಲ್ಲಾಡದಂತೆ ಕಟ್ಟಿದರು. ಮೊದಲೇ ಸೌದೆಗೆ ಎಣ್ಣೆ ಸುರಿದಿದ್ದರು. ಕಟ್ಟೆಯ ಮೇಲೆ ಮಲಗಿದ ಮೇಲೆ ಆಕೆ ಎಲೆಯಡಿಕೆ ಅಗಿಯುತ್ತಾ ಪರಲೋಕದಲ್ಲಿ ಇರುವವರಿಗೆ ಏನಾದರೂ ಹೇಳಬೇಕಾದ್ದು ಇದೆಯೇ ಎಂದು ಅಲ್ಲಿದ್ದವರನ್ನು ಕೇಳಿದಳು. ಅವರು ಅವಳಿಗೆ ಏನೇನೋ ಸಾಮಾನುಗಳನ್ನು ಕೊಟ್ಟರು. ಕೆಲವರು ಪರಲೋಕದಲ್ಲಿ ಇರುವ ತಮ್ಮವರಿಗೆ ಪತ್ರ ಕೊಟ್ಟರು. ಅವನ್ನೆಲ್ಲಾ ಆಕೆ ಬಟ್ಟೆಯಲ್ಲಿ ಗಂಟುಹಾಕಿ ಇಟ್ಟುಕೊಂಡಳು. ಇದಾದನಂತರ ಬ್ರಾಹ್ಮಣ ಪುರೋಹಿತರು ಕಟ್ಟೆಗೆ ಬೆಂಕಿ ಹಚ್ಚಿದರು. ಸುತ್ತಲೂ ಇದ್ದವರು ಎಣ್ಣೆ ಸುರಿದರು. ಮಿರಾಂಡ ಹೇಳಿದ, ಆಕೆ ಸುಟ್ಟು ಬೂದಿಯಾದ ಮೇಲೆ ಬ್ರಾಹ್ಮಣರು ಕರಗಿದ ಚಿನ್ನ ಬೆಳ್ಳಿಯನ್ನು ಆರಿಸಿಕೊಳ್ಳುತ್ತಾರೆ ಎಂದು. ಈ ಅನಾಗರಿಕ ಕೃತ್ಯ ಪೊಂಡಾಕ್ಕೆ ಒಂದು ಮೈಲಿ ದೂರದಲ್ಲಿ ನಡೆಯಿತು.

ನಾನು ನನ್ನ ಗುಡಾರಕ್ಕೆ ಹಿಂದಿರುಗಿದಾಗ ಸುಳ್ಳು ಸುದ್ದಿಯೊಂದು ಹುಟ್ಟಿತ್ತು. ಒಬ್ಬ ಮಹಮ್ಮದೀಯ ಇನ್ನೊಬ್ಬನ ಮೂಗನ್ನು ಕತ್ತರಿಸಿಬಿಟ್ಟಿದ್ದಾನೆಂಬುದೇ ಆ ಸುದ್ದಿ. ಹೆದರಿಹೋದ ಕೆಲವು ಹಿಂದೂಗಳು ಗುಡ್ಡಕ್ಕೆ ಓಡಿಹೋದರು. ನನ್ನ ಮಿರಾಂಡನೂ ಹಾಗೆಯೇ ಮಾಡಿದ. ಎಲ್ಲಾ ಬಿಟ್ಟು ಓಡಿದ್ದೂ ಓಡಿದ್ದೆ. ಎಷ್ಟೇ ಬೇಡವೆಂದರೂ ಆತ ಉಳಿದವರು ಮಾಡಿದಂತೆ ತಾನೂ ಮಾಡಬೇಕೆಂದು ಹೇಳಿ ಪರಾರಿಯಾದ. ನಾನು ನನ್ನ ಬಂದೂಕು ಹಿಡಿದು ಮರದಡಿ ನಿಂತು ನನ್ನ ರಕ್ಷಣೆಗೆ ಸಿದ್ಧತೆಮಾಡಿಕೊಂಡೆ. ಅಡಿಗೆಯವನು ತನ್ನೊಡೆಯನ ಧೈರ್ಯವನ್ನು ಕಂಡು ನಕ್ಕಿದ್ದೂ ನಕ್ಕಿದ್ದೆ. ದಿನಕ್ಕೆ ೨½ ರೂಪಾಯಿ ಸಂಬಳದ ಮೊಗಲನ ಸಿಪಾಯಿ ಯಾರೂ ಬರದೆ ಇಷ್ಟು ಹೆದರಿ ಓಡಿ ಹೋದರೆ, ನಿಜವಾಗಿಯೂ ಶತ್ರುಗಳು ಬಂದರೆ ಏನು ಮಾಡಿಯಾನೆಂದು ಹಿಯ್ಯಾಳಿಸಿ ನಕ್ಕುಬಿಟ್ಟ.

ಇಲ್ಲಿ ಜನರು 'ಬಂಘೀ' ಸೇದುವುದನ್ನು ಕಂಡೆ. ಇದನ್ನು ನೀರಿನೊಡನೆ ಸೇರಿಸಿ ಸೇದಿದರೆ ಅಫೀಮಿನಂತೆ ಮತ್ತು ಬರುವಂತೆ ಮಾಡುತ್ತದೆ.

ನನ್ನ ಮುಂದಿನ ಪ್ರಯಾಣಕ್ಕೆ ಬೇಕಾದ ಏರ್ಪಾಡು ಮಾಡಿಕೊಂಡೆ. ಅರುವತ್ತು ರೂಪಾಯಿ ಕೊಟ್ಟು ಒಂದು ಕುದುರೆ ಕೊಂಡುಕೊಂಡೆ. ಇಲ್ಲಿ ಎತ್ತು ಬಿಟ್ಟರೆ ಕುದುರೆ ಮಾತ್ರ ಸವಾರಿಗೆ ಸಿಕ್ಕುವುದು. ಎಂಟನೆಯ ತಾರೀಖು ಮಂಗಳವಾರ ಭಕ್ಷಿಯಿಂದ ಪರವಾನಗಿ ಪಡೆದು ಹೊರಟೆ. ದಾರಿಯಲ್ಲಿ ಸಿಕ್ಕಿದ ಬೆಂಪೂನ್ ಎಂಬ ಹಳ್ಳಿಯ ಬಳಿ ಅಡಿಗೆಮಾಡಿಕೊಳ್ಳಲು ನಿಂತೆವು. ಅಡಿಗೆಯಾದ ಮೇಲೆ ನನ್ನ ಆಳು ಊಟಕ್ಕೆ ಬಾಳೆ ಎಲೆ ತರಲು ಹೋದವನು ಯಾರದೋ ತೋಟದ ಬಾಳೆಎಲೆ ಕೊಯ್ದುಬಿಟ್ಟ. ಆ ತೋಟದ ಹೆಂಗಸೂ ಅವಳ ಜೊತೆ ಇತರರೂ ಸೇರಿಕೊಂಡು ಕೂಗಾಡಿ ರಂಪ ಎಬ್ಬಿಸಿದರು. ಅದನ್ನು ತಡೆಯಲಾರದೆ ನಾನು ಅಲ್ಲಿಂದ ಹೊರಟೇಬಿಟ್ಟೆ.

ಗುಡ್ಡಗಾಡಿನಲ್ಲಿ ನಡೆದು ಅದನ್ನು ದಾಟಿ, ಆಮೇಲೆ ಒಂದು ನದಿಯನ್ನು ದೋಣಿಯಲ್ಲಿ ಹಾದು ಹಿಂದೂ ರಾಜನಾದ ಸೊಂದೆ–ಕಿರಣೆ–ಕರಾಜ (ಸೋಂದೆ ರಾಜ) ಎಂಬುವನ ನಾಡನ್ನು ಪ್ರವೇಶಿಸಿದೆವು.[೧] ಇವನು ಹಲವಾರು ಗ್ರಾಮಗಳ ಒಡೆಯ. ಮೊಗಲನಿಗೆ ಅಧೀನನಾಗಿದ್ದಾನೆ. ಎರಡು ಕ್ರೋಸ್ ದೂರದಲ್ಲಿ ಕಕೋರ ಎಂಬ ಹಳ್ಳಿ ಸಿಕ್ಕಿತು. ಇಲ್ಲಿ ಇರುವುದು ಕೆಲವು ಗುಡಿಸಲುಗಳು ಮಾತ್ರ. ಒಂದು ದೇವಸ್ಥಾನದಲ್ಲಿ ಕಲ್ಲಿನ ಪೀಠದ ಮೇಲೆ ತಾಮ್ರದ ಗುಮ್ಮಟವೂ ಅದರ ಮೇಲೆ ಮನುಷ್ಯನ ಮುಖವಿದ್ದ ತಗಡನ್ನು ಅದಕ್ಕೆ ಬಡಿದದ್ದೂ ಕಾಣಿಸಿತು. ಇದು ಬಹುಶಃ ಯಾರೋ ಹೆಸರಾಂತ ವ್ಯಕ್ತಿಯೊಬ್ಬನ ಬೂದಿಯನ್ನಿಟ್ಟು ಕಟ್ಟಿದ ಸಮಾಧಿ ಇರಬೇಕು. ಸಂಜೆ ಕೋತಿಗಳ ಹಿಂಡಿಗೆ ಹಿಂಡೇ ಮರದಿಂದ ಮರಕ್ಕೆ ನೆಗೆಯುತ್ತ ಹಾರುತ್ತ ಬಂದುದನ್ನು ಕಂಡೆ. ಮರಿಕೋತಿಗಳನ್ನು ಅಪ್ಪಿಕೊಂಡ ತಾಯಿಕೋತಿಗಳೂ ಇದ್ದುವು. ಕಲ್ಲಿನಿಂದ ಹೊಡೆದರೂ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ಹಾರಿ ತಪ್ಪಿಸಿಕೊಳ್ಳುತ್ತಿದ್ದುವೇ ಹೊರತು ಒಂದೂ ಓಡಿಹೋಗಲಿಲ್ಲ. ಹಿಂದೂಗಳೇ ಹೆಚ್ಚಾಗಿರುವ ಈ ನಾಡಿನಲ್ಲಿ ಅವನ್ನು ಕೊಲ್ಲುವುದಿಲ್ಲ. 'ಕನರಾ' ರಾಜ್ಯದಲ್ಲಿ ಒಂದು ಮುಸಿಯ (baboon)

---

೧. ಸೊಂದೆ: ಇದು ಸಿರಸಿ ತಾಲ್ಲೂಕಿನಲ್ಲಿರುವ ಸೋದೆ (ಸ್ವಾದಿ ಮತ್ತು ಸೋಂದಾ). ಇಲ್ಲಿ ೧೬ನೆಯ ಶತಮಾನದ ಆದಿಭಾಗದಿಂದ ೧೮ನೆಯ ಶತಮಾನದ ತನಕ ಆಳಿದ ಸೋದೆ ನಾಯಕರು ಮೂಲತಃ ವಿಜಯನಗರದ ಮಾಂಡಲಿಕರು. ಪ್ರಕೃತ ಕರೇರಿ ಇಲ್ಲಿಗೆ ಬಂದಾಗ ಆಳುತ್ತಿದ್ದವನು ಬಹುಶಃ ಸದಾಶಿವನಾಯಕನಿರಬೇಕು. ಈತನ ತಂದೆಯ ಹೆಸರು ಮಧುಲಿಂಗನಾಯಕ. ಈತನ ಕಾಲದಲ್ಲಿ ವಿಜಾಪುರದವರು ದಂಡೆತ್ತಿಬಂದು ಸೋದೆಯಿಂದ ಕಪ್ಪ ಸಂಗ್ರಹಿಸಿದರೆಂದು ತಿಳಿದುಬರುತ್ತದೆ. ಸದಾಶಿವನಾಯಕನ ಕಾಲದಲ್ಲಿ ಈ ದೊರೆಯು ಶಿವಾಜಿಯ ಮಗ ರಾಜಾರಾಮನಿಗೆ ನೀಡಿದ್ದ ವಿಚಾರ ಒಂದು ಮರಾಠಿ ಪತ್ರದಲ್ಲಿ ಕಾಣಿಸಿದೆಯಂತೆ. ೧೬೭೩ರಲ್ಲಿ ಪಶ್ಚಿಮ ಕರಾವಳಿಗೆ ಭೇಟಿ ನೀಡಿದ ವಿದೇಶಿ ಪ್ರವಾಸಿ ಜಾನ್ ಫ್ರೈಯರ್‌ನ ಹೇಳಿಕೆಯಂತೆ ಸೋದೆಯು ಮೂವತ್ತು ಲಕ್ಷ ವರಹ (ಪಗೋಡ) ಆದಾಯವುಳ್ಳ ಸಮರ್ಥ ಪಾಳೆಯವಾಗಿತ್ತು.

ಹೆಂಗಸಿನ ಮಾನಭಂಗ ಮಾಡಿದ ಕಥೆಯೊಂದನ್ನು ಕೇಳಿದೆ. ಗುಡ್‌ಹೋಪ್ ಭೂಶಿರ ಮತ್ತು ಬ್ರೆಜಿಲ್‌ಗಳಲ್ಲಿಯೂ ಇಂಥ ಪ್ರಸಂಗಗಳು ನಡೆದ ವಿಷಯಗಳನ್ನು ಫಾದರುಗಳು ಹೇಳಿದರು. ಮುಸಿಯನಿಗೆ ಹುಟ್ಟಿದ ಮಕ್ಕಳಿಗೆ ಜ್ಞಾನಸ್ನಾನ ಮಾಡಿಸಬೇಕೇ ಬೇಡವೇ ಎಂಬ ಬಗ್ಗೆ ಡೊಮಿನಿಕನರು ಮತ್ತು ಜೆಸ್ಯೂಯಿಟರಲ್ಲಿ ಬಿಸಿಬಿಸಿ ಚರ್ಚೆಯಾಗಿ ಕೊನೆಗೆ ಮಾಡಬಾರದೆಂದು ತೀರ್ಮಾನವಾಯಿತು. ತಂದೆ ಗಂಡಾಗಿ ತಾಯಿ ಮುಸಿಯ ಆಗಿದ್ದರೆ ಮಾಡಬಹುದಿತ್ತೆಂದು ಅವರು ಅಭಿಪ್ರಾಯಪಟ್ಟರಂತೆ.

ಕೋತಿಗಳಿಗೆ ಸೀಯಾಳ (ಎಳನೀರು) ಕಂಡರೆ ತುಂಬಾ ಆಸೆ. ಇದನ್ನು ತಿಳಿದ ಇಂಡಿಯನರು ಅವನ್ನು ಹಿಡಿಯುವ ವಿಧಾನವನ್ನು ಕಂಡುಹಿಡಿದಿದ್ದಾರೆ. ಸೀಯಾಳದ ಕಣ್ಣಿನಕಡೆ ಒಂದು ತೂತುಮಾಡುತ್ತಾನೆ. ಕೋತಿ ಅದರೊಳಕ್ಕೆ ಕೈಹಾಕಿ ಹೊರಗೆ ತೆಗೆಯಲಾರದೆ ಒದ್ದಾಡುತ್ತದೆ; ಆಗ ಓಡಿಬಂದು ಕೋತಿಯನ್ನು ಹಿಡಿಯುತ್ತಾರೆ.

ಒಂಬತ್ತನೆಯ ತಾರೀಖು ಬುಧವಾರ ದಟ್ಟವಾದ ಕಾಡಿನ ಮೂಲಕ ಎಂಟು ಕ್ರೋಸ ದೂರ ದಾರಿ ಸಾಗಿಸಿ ಬಾಲಾಘಾಟ್ ಬೆಟ್ಟದ (ಘಟ್ಟದ) ಬುಡಕ್ಕೆ ಬಂದೆ. ಇಲ್ಲಿ ಕಾವಲುಗಾರರೂ ಸುಂಕದ ಕಟ್ಟೆಯವರೂ ಇದ್ದರು. ಇವರು ದುಡ್ಡು ಕೀಳುವುದರಲ್ಲಿ ನಿಸ್ಸೀಮರು. ಎರಡು ಸರ ಮುತ್ತಿನಹಾರಕ್ಕೆ ೧೨ ರೂಪಾಯಿ ಕಿತ್ತುಕೊಂಡರು.

ಆಮೇಲೆ ಎಂಟುಮೈಲಿ ದೂರ ಬೆಟ್ಟ ಹತ್ತಿದೆ. ಅಲ್ಲಿಯೂ ಕಾವಲುಗಾರರಿದ್ದರು. ಅವರು ಹೇಳದೆ ಕೇಳದೆ, ಒಂದು ರೂಪಾಯಿ ಕಸಿದುಕೊಂಡರು. ರಾತ್ರಿ ತಂಗಲು ಯಾವ ಮನೆಯೂ ಇರಲಿಲ್ಲ. ಕಾಡಿನ ಮಧ್ಯೆ ಮರಗಳಡಿಯಲ್ಲಿ ಮಲಗಿದೆ. ಈ ದಿನ ಒಟ್ಟು ೨೪ ಮೈಲಿಗಳಷ್ಟು ನಡೆದಿದ್ದೆ.

ಮುಂದೆ ದಾರಿ ಸಾಗಿಸಿದೆ. ೧೦ನೆಯ ತಾರೀಖು ಗುರುವಾರ 'ಬೊಜಾತ' (Bojatha = ಬಹುಶಃ ಭೋಜಾ ಅಂದರೆ ಹೊರೆ ಹೊರುವ ತಂಡ ?) ಸೂರ್ಯೋದಯಕ್ಕೆ ಮೂರು ಗಂಟೆ ಮೊದಲೇ ಹೊರಟುಬಿಟ್ಟಿತು. ನನ್ನ ರಕ್ಷಣೆಯ ದೃಷ್ಟಿಯಿಂದ ನಾನೂ ಅದರೊಡನೆ ಸ್ವಲ್ಪದೂರ ಹೋದೆ. ಈ ಬೊಜಾತದಲ್ಲಿ ಮುನ್ನೂರು ಎತ್ತುಗಳಿದ್ದುವು. ಗಲಗಲಿಯಲ್ಲಿದ್ದ[1] ಸೇನೆಯ ಶಿಬಿರಕ್ಕೆ ದಿನಸಿ ತೆಗೆದುಕೊಂಡು ಹೋಗುತ್ತಿದ್ದುವೆಂದು ಕಾಣುತ್ತದೆ. ದಾರಿಯಲ್ಲಿ ಹಣ್ಣು ಹಂಪಲುಗಳನ್ನೂ ಕಾಡುಕೋಣಗಳನ್ನೂ ಕಂಡೆ. ಮೇಲೆ ಹೇಳಿದ ದಾರಿಯಲ್ಲಿ ೧೪ ಕ್ರೋಸ್‌ಗಳಷ್ಟು ದೂರ ಪ್ರಯಾಣ ಮಾಡಿ ಬೊಮ್ಮನಹಳ್ಳಿ (ಉ. ಕ. ಜಿಲ್ಲೆಯಲ್ಲಿದೆ) ಎಂಬ ಗ್ರಾಮ ಸಿಕ್ಕಿತು. ೧೧ನೆಯ ತಾರೀಖು ಸಾಂಬ್ರಾಣಿ[2] ಎಂಬ ಗ್ರಾಮ ಸಿಕ್ಕಿತು. ಸಾಂಬ್ರಾಣಿಯಲ್ಲಿಯೇ ಸೋಂದೆ–ಕಿರಸಿ–ಕರಾಜ ಇರುವುದು. ಊರಿಗೆ ಮಣ್ಣಿನ ಕೋಟೆಯಿದೆ. ಇಲ್ಲಿ ಭಾರಿ ಸಂತೆ

---

೧. ಗಲಗಲಿ : ಮರಾಠರ ಹಾವಳಿಯನ್ನು ತಡೆಯಲು ಔರಂಗಜೇಬನೇ ಬ್ರಹ್ಮಪುರಿಯಲ್ಲಿ ಬಿಡಾರ ಮಾಡಿದ್ದ. ಬ್ರಹ್ಮಪುರಿ ಗಲಗಲಿಗೆ ಸಮೀಪದಲ್ಲಿದೆ.

೨. ಸಾಂಬ್ರಾಣಿ : ಇದು ಬೆಳಗಾವಿಗೆ ಸಮೀಪದಲ್ಲಿರುವ ಸಾಂಬ್ರೆ ಎಂಬ ಊರೆ ?

ನಡೆಯುತ್ತದೆ. ಈ ಊರೊಂದರಿಂದಲೇ ರಾಜನಿಗೆ ಮೂರು ಲಕ್ಷ ರೂಪಾಯಿಗಳ ವರಮಾನವಿದೆ. ಹಿಂದೂಗಳೂ ಮಹಮ್ಮದೀಯರೂ ಎಷ್ಟೊಂದು ತೆರಿಗೆ ಹೇರಿ ಜನರ ರಕ್ತ ಹೀರುತ್ತಿದ್ದಾರೆಂಬುದನ್ನು ನೀವೇ ಊಹಿಸಿಕೊಳ್ಳಬಹುದು.

೧೨ನೆಯ ತಾರೀಖು ಶನಿವಾರ ಸಾಂಬ್ರಾಣಿ ಬಿಟ್ಟು ನಾಲ್ಕುಮೈಲಿ ಹೋದನಂತರ ಮೊಗಲನ ರಾಜ್ಯದ ಗಡಿ ಸಿಕ್ಕಿತು. ಮಧ್ಯಾಹ್ನದವರೆಗೆ ಅಲ್ಕಲ್ ಎಂಬಲ್ಲಿ ತಂಗಿ ಅನಂತರ ಮುಂದೆ ಹೋಗೋಣ ಎಂಬುವಷ್ಟರಲ್ಲಿ ದಾರಿಯಲ್ಲಿ ಕಳ್ಳಕಾಕರ ಕಾಟ ಎಂದು ಹೆದರಿಸಿದರು. ಬೊಜಾತಕ್ಕಾಗಿ ಕಾಯುತ್ತ ಅಲ್ಲಿಯೇ ನಿಂತೆ. ಇಲ್ಲಿ ಒಂದು ದೇವಸ್ಥಾನ. ಅದರಲ್ಲಿ ಕೋತಿಯಂಥ ಮುಖವುಳ್ಳ ಮನುಷ್ಯಾಕಾರದ ವಿಗ್ರಹವನ್ನು (ಹನುಮಾನ್ ವಿಗ್ರಹ) ಕಂಡೆ. ಅದರ ಬಾಲದ ತುದಿಯಲ್ಲಿ ಗಂಟೆ ಇತ್ತು. ಯಾರೂ ನೋಡದಿದ್ದಾಗ ನನಗೆ ದಾರಿಯಲ್ಲಿ ಸಿಕ್ಕಿದ ವಿಗ್ರಹಗಳನ್ನೆಲ್ಲಾ ಒಡೆದುಹಾಕುತ್ತ ಬರುತ್ತಿದ್ದೆ. ಬೊಜಾತದ ಗಾಡಿ ಹೊಡೆಯುತ್ತಿದ್ದ ಜನ ತಮ್ಮ ಕುತ್ತಿಗೆಗೆ ಎರಡೆರಡು ಪೌಂಡು ತೂಕದ ಕಲ್ಲನ್ನು ಬಟ್ಟೆಯಲ್ಲಿ ಕಟ್ಟಿ ನೇತುಹಾಕಿಕೊಂಡಿದ್ದರು. ಈ ವಕ್ರ ಆಕಾರದ ಕಲ್ಲುಗಳ ಮೇಲೆ ಹೆಚ್ಚಾಗಿ ನನ್ನ ಕಣ್ಣು ಬೀಳುತ್ತಿತ್ತು. ಅವುಗಳನ್ನು ಚಚ್ಚಿಹಾಕುತ್ತಿದ್ದೆ.

ಭಾನುವಾರ ೧೩ನೆಯ ತಾರೀಖು ಬೊಜಾತಾದ ಜೊತೆ ಸೂರ್ಯೋದಯಕ್ಕೆ ನಾಲ್ಕು ಗಂಟೆ ಮೊದಲೇ ಹೊರಟು ಆರು ಕ್ರೋಶಗಳಷ್ಟು ದೂರ ಪ್ರಯಾಣಮಾಡಿದ ಮೇಲೆ ಕಂಕ್ರೆ (ಬೆಳಗಾವಿಗೆ ೨೮ ಮೈಲಿ ಆಗ್ನೇಯ ದಿಕ್ಕಿಗಿರುವ ಕಕೇರಿ) ಎಂಬ ಊರು ಸಿಕ್ಕಿತು. ಇಲ್ಲಿ ಊಟಮಾಡಿಕೊಂಡು ಸಂಜೆ ಎಟ್ಟೆ (ಇಟಗಿ) ಎಂಬ ಊರನ್ನು ತಲುಪಿದೆ. ಇಲ್ಲಿಯ ಭೂಮಿ ಬಹು-ಫಲವತ್ತಾಗಿದೆ. ಜಿಂಕೆ ಮುಂತಾದ ಪ್ರಾಣಿಗಳು ಹೆದರಿಕೆಯಿಲ್ಲದೆ ಮೇಯುತ್ತಿದ್ದುವು. ಮಾರನೆಯ ದಿನ ಮತ್ತೊಂದು ಬೊಜಾತದೊಡನೆ ಹೊರಟು ತಿಕ್ಲಿ (ತಿಗ್ಡಿ) ಎಂಬ ಸಣ್ಣ ಪಟ್ಟಣಕ್ಕೆ ಬಂದೆ. ಊಟವಾದ ನಂತರ ಪ್ರಯಾಣ ಮಾಡಿ ಸಂಜೆಗೆ ಒನೋರ್‌ಗೆ (ವನೂರು) ಬಂದೆ.

ಮಂಗಳವಾರದ ಪ್ರಯಾಣದಲ್ಲಿ ಮಂದಾಪುರ (ಮುಮದಾಪುರ) ಮತ್ತು ಬೆಟ್ಟೆ (ಬೆಟಗೇರಿ) ಸಿಕ್ಕಿದುವು. ರಾತ್ರಿಯನ್ನು ಬೆಟ್ಟೆಯಲ್ಲಿ ಕಳೆದೆ.

ಮೊಗಲನ ರಾಜ್ಯದಲ್ಲಿ ಪ್ರಯಾಣ ತುಂಬಾ ಕಷ್ಟ. ಸವಾರಿಗೆ ಗಾಡಿಗಳಿಲ್ಲ. ತಂಗಲು ಸತ್ರಗಳಿಲ್ಲ. ಊಟ ತಿಂಡಿಯ ಸೌಕರ್ಯವಿಲ್ಲ. ಕಳ್ಳಕಾಕರ ಕಾಟ ಬೇರೆ. ಸ್ವಂತ ಕುದುರೆಯಿಲ್ಲದವರಿಗೆ ಎತ್ತೇ ಗತಿ. ಅಡುಗೆ ಪಾತ್ರೆಗಳು ಜೊತೆಯಲ್ಲಿರಲೇಬೇಕು. ಅಕ್ಕಿ ಬೇಳೆ ಮುಂತಾದುವು ಮೊಗಲ್‌ಸ್ಥಾನರಿರುವ ದೊಡ್ಡ ದೊಡ್ಡ ಊರುಗಳಲ್ಲಿ ಮಾತ್ರ ಸಿಕ್ಕುತ್ತವೆ. ರಾತ್ರಿ ತಿಳಿಯಾದ ಆಕಾಶವೇ ಹೊದಿಕೆ ಅಥವಾ ಮರದಡಿಯಲ್ಲಿ ಮಲಗಬೇಕು. ಇದರ ಮೇಲೆ ಶಿವಾಜಿ ಕಡೆಯವರ ಕೊಳ್ಳೆಯಿಂದಾಗಿ ಆಸ್ತಿಪಾಸ್ತಿ ಪ್ರಾಣಗಳಿಗೆ ಸಂಚಕಾರ. ಕಳ್ಳತನದಲ್ಲಿ ಮೊಗಲರೇನೂ ಕಡಮೆಯಿಲ್ಲ. ಪ್ರಯಾಣಿಕರ ಹಣ ಮತ್ತು ಬಟ್ಟೆಬರೆಗಳನ್ನು ತಮ್ಮ ಅಪ್ಪನ ಆಸ್ತಿಯಂತೆ ಭಾವಿಸುತ್ತಾರೆ. ಒಮ್ಮೊಮ್ಮೆ

ಸ್ನೇಹಿತರಂತೆ ನಟಿಸಿ ಮೋಸಮಾಡುವುದೂ ಉಂಟು. ಇವೆಲ್ಲಾ ಹೆಚ್ಚಾಗಿ ಒಂದೇ ಸಮನೆ ಯುದ್ಧಗಳಲ್ಲಿ ತೊಡಗಿರುವ ಬಿಜಾಪುರದಲ್ಲಿ. ಮೊಗಲ್ ರಾಜ್ಯದ ಬೇರೆ ಕಡೆಗಳಲ್ಲಿ ಈ ತಾಪತ್ರಯಗಳು ಕಡಮೆ.

ಬುಧವಾರ ಮೂರು ಕ್ರೋಶ ಪ್ರಯಾಣಮಾಡಿ ಕೊಡೆಲ್ಕಿ (ಕಲ್ಲಿಗುಡಿ) ಎಂಬ ಹಳ್ಳಿಗೆ ಬಂದೆ. ಇಲ್ಲಿ ಕೇಳಿದಷ್ಟು ದುಡ್ಡು ಕೊಟ್ಟು ಯೂರೋಪಿನ ದ್ರಾಕ್ಷಿಗಳ ರುಚಿ ನೋಡಿದೆ. ಮುಂದೆ ಸಿಕ್ಕಿದ್ದು ಎಡೋರ್ (ಯುಡವಾಡ) ಎಂಬ ಊರು. ನನ್ನ ಈ ಪ್ರಯಾಣದ ಕಾಲದಲ್ಲಿ ನೋಡಿದ ಊರುಗಳಲ್ಲಿ ಇದೇ ದೊಡ್ಡದು. ತೆಂಕ ದಿಕ್ಕಿನಿಂದ ಬಂದ ವರ್ತಕರು ಇಲ್ಲಿ ತಮ್ಮ ಸರಕುಗಳ ಸಮೇತ ತಂಗುತ್ತಾರೆ. ಆಮೇಲೆ ಚಿಲ್ಲರೆ ವರ್ತಕರು ಬಂದು ಅವನ್ನು ತೆಗೆದುಕೊಂಡುಹೋಗಿ ಚಿಲ್ಲರೆಯಾಗಿ ಮಾರಾಟಮಾಡಿ ಬರುತ್ತಾರೆ. ನಾನು ಈ ಊರಿನ ಮಾರ್ಗವಾಗಿ ಹೋಗುತ್ತಿರುವಾಗ ಊರಿನಲ್ಲಿ ಪ್ಲೇಗು.

ಎಡೋರ್‌ನಲ್ಲಿ ಊಟಮುಗಿಸಿ ಐದು ಕ್ರೋಶ ದೂರ ಪ್ರಯಾಣಮಾಡಿ ಸಾಯಂಕಾಲ ಮುದ್ದೋಳ್ (ಮುಧೋಳ್) ತಲುಪಿದೆ. ಊರ ಪಕ್ಕದಲ್ಲಿ ನದಿ. ಇಲ್ಲಿಯವರೆಗೂ ಅನೇಕ ವೇಳೆ ದನ ಎಮ್ಮೆಗಳಿಂದ ಕೆಸರಾಗಿದ್ದ ನೀರು ಕುಡಿದು ಸಾಕಾಗಿದ್ದ ನನಗೆ ಈ ನದಿ ಕಂಡು ಸಂತೋಷವಾಯಿತು. ಇಲ್ಲಿ ಕುದುರೆಯಿಂದ ಇಳಿಯುವಾಗ ಧೊಪ್ಪೆಂದು ಬಿದ್ದುಬಿಟ್ಟೆ. ಕಾಲುಗಂಟೆಯ ಹೊತ್ತು ಉಸಿರಾಡಲೂ ಆಗಲಿಲ್ಲ. ಆಮೇಲೆ ಅನೇಕ ದಿನಗಳನಂತರ ಮೈ ಸ್ವಸ್ಥವಿಲ್ಲದೆ ಮಲಗಿಬಿಟ್ಟೆ. ರಕ್ತ ತೆಗೆಸಿ ಔಷಧಿಗಳನ್ನು ಸೇವಿಸಿದರೂ ಹಾಸಿಗೆ ಹಿಡಿಯುವುದು ತಪ್ಪಲಿಲ್ಲ.

೧೬೯೫ನೆಯ ಮಾರ್ಚ್ ಗುರುವಾರ ೧೭ನೆಯ ತಾರೀಖು ಮತೂರ್ (ಮಂತೂರು) ಎಂಬ ಊರಿನ ಮೂಲಕ ಮೊಗಲ್ ಬೀಡಿದ್ದ ಗಲಗಲ (ಗಲಗಲಿ) ಮುಟ್ಟಿದೆ. ಕಿಷಿನಾ (ಕೃಷ್ಣ) ನದಿ ದಾಟಿ ಮಹಮ್ಮದೀಯರ 'ಲಷ್ಕರಿ' ಎಂಬ ಬೀಡಿಗೆ ಹೋದೆ. ಅಲ್ಲಿದ್ದ ಆಗ್ರಾದ ಕೆಲವು ಕ್ರೈಸ್ತ ಸಿಪಾಯಿಗಳು ನನ್ನನ್ನು ಸತ್ಕರಿಸಿದರು.

ಶುಕ್ರವಾರ ಕ್ರೈಸ್ತ ಗೊಲಂದಾಜರ ಬೀಡಿಗೆ ಹೋಗಿ ಕ್ರಿಸ್ತ ಯಜ್ಞದಲ್ಲಿ (Mass) ಭಾಗವಹಿಸಿದೆ. ದೆಹ್ಲಿಯಲ್ಲಿ ಹುಟ್ಟಿದ ವೆನೀಷಿಯನೊಬ್ಬ ನನ್ನನ್ನು ತನ್ನ ಮನೆಗೆ ಕರೆದೊಯ್ದ. ಆತ ಕ್ರೈಸ್ತರ ಕ್ಯಾಪ್ಟನ್. ಒಂದು ಗಂಟೆಯ ಮೇಲೆ ಕುಡಿದಿದ್ದ ಇಬ್ಬರು ಮಹಮ್ಮದೀಯರನ್ನು ಅವನು ಮರಕ್ಕೆ ಕಟ್ಟಿಸಿ ಹೊಡೆಸಿದ್ದನ್ನು ಕಂಡೆ. ಹೊಡೆದ ಮೇಲೆ ಅವರನ್ನು ಬಿಟ್ಟು ಕಳುಹಿಸಿದ. ಹೋಗುವಾಗ ಅವರು ಅಡ್ಡಬಿದ್ದು ನಮಸ್ಕಾರ ಮಾಡಿಹೋದರು.

ಶನಿವಾರ ನಾನು ಗುಲಾಲ್‌ಬಾರ್‌ಗೆ ಹೋದೆ. ಚಕ್ರವರ್ತಿಯಿದ್ದ ಬೀಡಿಗೆ ಗುಲಾಲ್‌ಬಾರ್ ಎನ್ನುತ್ತಾರೆ. ಚಕ್ರವರ್ತಿ ದರ್ಬಾರಿನಲ್ಲಿ ಕುಳಿತಿದ್ದ. ಭಾರಿ ಜನರು ಸೇರಿದ್ದರು. ನನಗೆ ಚಕ್ರವರ್ತಿ ಸರಿಯಾಗಿ ಕಾಣಲಿಲ್ಲ. ಆತನ ಮತ್ತು ಸರದಾರರ ಬೀಡು

ಮೂರು ಮೈಲಿ ಸುತ್ತಳತೆಯಷ್ಟು ಹಬ್ಬಿತ್ತು. ಬೀಡಿನ ಸುತ್ತ ಮರದ ದಸಿಗಳನ್ನು ನೆಟ್ಟು, ಕಂದಕ ತೆಗೆದು, ಐನೂರು ಸಣ್ಣ ಫಿರಂಗಿಗಳನ್ನು ಏರಿಸಿದ್ದರು. ಬೀಡಿಗೆ ಹೋಗಲು ಮೂರು ಹೆಬ್ಬಾಗಿಲುಗಳಿದ್ದುವು. ಅವುಗಳಲ್ಲಿ ಒಂದು 'ಅರಮ್' (ಹೇರಂ=ರಾಣಿ ವಾಸದವರಿಗೆ) ಅವರಿಗೆ, ಮತ್ತೊಂದು ಚಕ್ರವರ್ತಿಗೆ ಮತ್ತು ಆತನ ಆಸ್ಥಾನಿಕರಿಗೆ.

ಮೊಗಲನ ಈ ಶಿಬಿರದಲ್ಲಿ ೬೦,೦೦೦ ಕುದುರೆಗಳೂ, ೧೦,೦೦,೦೦೦ ಪದಾತಿಗಳೂ, ಸಾಮಾನು ಸರಂಜಾಮು ಹೊರಲು ೫೦,೦೦೦ ಒಂಟೆಗಳೂ ಮತ್ತು ೩,೦೦೦ ಆನೆಗಳೂ ಇವೆಯೆಂದು ಹೇಳಿದರು. ಇದಕ್ಕಿಂತ ಹೆಚ್ಚಾಗಿ ಶಿಬಿರ ವ್ಯಾಪಾರಿಗಳೂ ವರ್ತಕರೂ ಮತ್ತು ವಿಧವಿಧ ಕುಶಲಕರ್ಮಿಗಳೂ ಇದ್ದರು. ಇಡೀ ಶಿಬಿರದಲ್ಲಿ ಐದುಲಕ್ಷ ಜನರಿದ್ದು ಅದು ಚಲಿಸುವ ನಗರದಂತ್ತಿತ್ತು. ದವಸ ಧಾನ್ಯಗಳಷ್ಟೇ ಅಲ್ಲದೆ ಯಾವುದು ಬೇಕಾದರೂ ಇಲ್ಲಿ ಸಿಕ್ಕುತ್ತಿದ್ದುವು. ಇನ್ನೂರೈವತ್ತು 'ಬಜಾರ್'ಗಳಿದ್ದುವು. ಪ್ರತಿಯೊಬ್ಬ ಅಮೀರ ನಿಗೂ ಆತನ ಜನಗಳಿಗೂ ಒಂದೊಂದು ಬಜಾರ್. ಒಟ್ಟಿನಲ್ಲಿ ಇಡೀ ಶಿಬಿರ ಮೂವತ್ತು ಮೈಲಿಗಳವರೆಗೆ ಹಬ್ಬಿಕೊಂಡಿತ್ತು.

ಅಮೀರರು ತಮ ತಮಗೆ ನಿಯಮಿತ ಸಂಖ್ಯೆಯ ಕುದುರೆಗಳನ್ನೂ ಪದಾತಿ ಗಳನ್ನೂ ಸಾಕಬೇಕು. ಅವರುಗಳಿಗೆ ಕೈ ತುಂಬ ಆದಾಯವಿದೆ. ಸೇನೆಯಲ್ಲಿ ಅನೇಕ ಫ್ರೆಂಚರು ಇದ್ದಾರೆ. ಇವರು ಹೇಳಿದರು, ಮೊಗಲನ ಸೇನೆಯಲ್ಲಿ ಕೆಲಸಮಾಡುವುದು ಬಹಳ ಸುಖ ಹಾಗೂ ಉಲ್ಲಾಸಕರ ಎಂದು. ಏಕೆಂದರೆ ಯುದ್ಧಮಾಡದವರು ಆ ದಿನದ ಸಂಬಳ ಕಳೆದುಕೊಳ್ಳುವುದು ಬಿಟ್ಟರೆ ಬೇರೆ ಯಾವ ಶಿಕ್ಷೆಯೂ ಇಲ್ಲ. ಆದರೆ ಯುದ್ಧದಲ್ಲಿ ಗಾಯಗೊಂಡವರಿಗೆ ಚಿಕಿತ್ಸೆಯೇ ಇಲ್ಲ. ಇಂತಹ ಅನಾಗರಿಕ ರಾಜನೊಬ್ಬನ ಸೇವೆಯಲ್ಲಿರುವುದು ತಮ್ಮ ಗೌರವಕ್ಕೆ ಕುಂದೆಂದು ಅಮೀರರ ಭಾವನೆಯಾಗಿದೆ. ಆದರೆ ಯಾರೂ ಈ ರಾಜನಷ್ಟು ಸಂಬಳ ಕೊಡುವುದಿಲ್ಲ. ಅಪರಿಚಿತನಾದವನೊಬ್ಬ ಸೇನೆ ಯನ್ನು ಸೇರಿದರೆ ಕೊಂಚ ಕಾಲದಲ್ಲಿಯೇ ಶ್ರೀಮಂತನಾಗಿಬಿಡುತ್ತಾನೆ. ಅದರಲ್ಲಿಯೂ ಫರಂಗಿಯವರೂ ಪರ್ಷಿಯನರೂ ಇನ್ನೂ ಜಾಗ್ರತೆ ಶ್ರೀಮಂತರಾಗುತ್ತಾರೆ. ಆದರೆ ಒಂದು ಸಲ ಸೈನ್ಯವನ್ನು ಸೇರಿದರೆ ಬಿಟ್ಟುಹೋಗುವುದು ಭಾರಿ ಕಷ್ಟ. ಆಗ ಓಡಿ ಹೋಗುವುದೊಂದೇ ಮಾರ್ಗ.

೨೧ನೆಯ ತಾರೀಖು ಸೋಮವಾರ ಆಗ್ರಾದ ಕ್ರೈಸ್ತನೊಬ್ಬನ ಮತ್ತು ಆವನ ಸ್ನೇಹಿತ ಖೋಜಾನೊಬ್ಬನ ಸಹಾಯದಿಂದ ಚಕ್ರವರ್ತಿಯನ್ನು ನೋಡುವ ಅದೃಷ್ಟ ದೊದಗಿತು.[1] ಚಕ್ರವರ್ತಿ ಭಾರಿ ಬೆಲೆಯಾದ ಜಮಖಾನೆಗಳ ಮೇಲೆ ದಿಂಬುಗಳನ್ನೊರಗಿ ಕುಳಿತಿದ್ದ. ಮೊಗಲ್ ರೀತಿಯಲ್ಲಿ ನಾನು ಸಲಾಮ್‌ಮಾಡಿ- ಹತ್ತಿರ ಹತ್ತಿರ ಹೋದೆ. ನನ್ನನ್ನು ಕರೆದುಕೊಂಡು ಹೋದ ಕ್ರೈಸ್ತನೇ ದುಭಾಷಿಯಾಗಿದ್ದ. ಚಕ್ರವರ್ತಿ 'ನೀನು ಯೂರೋಪಿನ ಯಾವ ದೇಶಕ್ಕೆ ಸೇರಿದವನು? ಯಾವಾಗ ಬಂದೆ? ಏನು ಬಂದದ್ದು?

---

೧. ಇದು ನಡೆದದ್ದು ೧೬೬೫ ರಲ್ಲಿ.

ನನ್ನ ಸೇನೆಯಲ್ಲಿರಲು ಇಷ್ಟವೇ? ಅಥವಾ ಹಿಂದಿರುಗಲು ಅಪೇಕ್ಷೆಯೇ?' ಎಂದೆಲ್ಲ ಪ್ರಶ್ನೆಗಳನ್ನು ಕೇಳಿದ. ಇದಕ್ಕೆ ಉತ್ತರವಾಗಿ ನಾನು, ನನ್ನ ದೇಶ ಬಿಟ್ಟು ಎರಡು ವರ್ಷಗಳಾಯಿತೆಂದೂ, ಏಷ್ಯಾದ ಚಕ್ರವರ್ತಿಯನ್ನು ನೋಡಬೇಕೆಂಬ ಉದ್ದೇಶದಿಂದ ಮಾತ್ರ ಬಂದುದಾಗಿಯೂ, ಚೀನಾದ ಚಕ್ರವರ್ತಿಯನ್ನು ನೋಡಿಕೊಂಡು ನನ್ನ ದೇಶಕ್ಕೆ ಹಿಂದಿರುಗುವುದಾಗಿಯೂ ಹೇಳಿದೆ. ಹಂಗೇರಿಯಲ್ಲಿ ಯೂರೋಪಿನ ರಾಜರುಗಳಿಗೂ ತುರುಕರಿಗೂ ನಡೆಯುತ್ತಿರುವ ಯುದ್ಧದ ವಿಷಯವಾಗಿ ಚಕ್ರವರ್ತಿ ಪ್ರಶ್ನೆಹಾಕಿದ. ನಾನು ತಿಳಿದವಟ್ಟಿಗೆ ಉತ್ತರಕೊಟ್ಟೆ. ಇಷ್ಟರಲ್ಲಿ ಸಾರ್ವಜನಿಕರಿಗೆ ಭೇಟಿ ಕೊಡುವ ಹೊತ್ತು ಸಮೀಪಿಸಿತು. ನಾನು ಹೋಗಬಹುದೆಂದು ಚಕ್ರವರ್ತಿ ಅಪ್ಪಣೆಮಾಡಿದ.

ಪಕ್ಕದಲ್ಲಿದ್ದ ಡೇರೆಯಲ್ಲಿ ದರ್ಬಾರಿಗೆ ಏರ್ಪಾಡು ನಡೆದಿತ್ತು. ಈ ಡೇರೆಯನ್ನು ಎರಡು ದೊಡ್ಡ ಸ್ತಂಭಗಳು ಹೊತ್ತಿದ್ದುವು. ಡೇರೆಯ ಸುತ್ತ ಕೆಂಪು ಬಟ್ಟೆಯನ್ನೂ, ಒಳಗೆ ಟಫೆಟಾ ಬಟ್ಟೆಯ ಪರದೆಗಳನ್ನೂ ಹಾಕಿದ್ದರು. ಚಕ್ರವರ್ತಿ ಕುಳಿತುಕೊಳ್ಳುವ ಸ್ಥಳ ಎರಡು ವಾಪುಗಳಷ್ಟು ಎತ್ತರವಾಗಿತ್ತು. ಸೊಗಸಾದ ಜಮಖಾನಗಳನ್ನು ಹಾಸಿದ್ದರು. ಮತ್ತಷ್ಟು ಎತ್ತರವಾದ ಸ್ಥಳದಲ್ಲಿ ಸಿಂಹಾಸನವಿತ್ತು. ಅದರ ಮೇಲೆ ಮೂರು ಒರಗುದಿಂಬುಗಳಿದ್ದುವು. ಈ ಡೇರೆಯೊಳಕ್ಕೆ ಚಕ್ರವರ್ತಿ ನಡೆದುಕೊಂಡು ಬಂದನು. ಆಗ ಅಮೀರರೂ ಇನ್ನಿತರ ಆಸ್ಥಾನಿಕರೂ ಅವನ ಮುಂದೆ ಬಂದುನಿಂತರು. ಚಕ್ರವರ್ತಿ ಬಿಳಿಯ ಪೇಟ ಸುತ್ತಿದ್ದ. ಅದರಲ್ಲಿ ನಾಲ್ಕು ಸಣ್ಣ ಪಚ್ಚೆಗಳಿದ್ದುವು. ಮಧ್ಯೆ ದೊಡ್ಡ ಪಚ್ಚೆಯೊಂದು ಶೋಭಾಯಮಾನವಾಗಿ ಕಾಣುತ್ತಿತ್ತು. ಸೊಂಟಕ್ಕೆ ರೇಷ್ಮೆ ವಸ್ತ್ರವನ್ನು ಬಿಗಿಯಲಾಗಿತ್ತು. ಅದು ಎಡಗಡೆ ಸಿಕ್ಕಿಸಿದ್ದ 'ಕಠಾರಿ' ಯನ್ನು ಮುಚ್ಚಿತ್ತು. ಕಾಲಿಗೆ ಮೂರಿಷ್ ಮಾದರಿಯ ಪಾದರಕ್ಷೆಗಳನ್ನು ಹಾಕಿಕೊಂಡಿದ್ದ. ಕಾಲುಚೀಲ ಗಳಿರಲಿಲ್ಲ. ಇಬ್ಬರು ಬಿಳಿಯ ಚಾಮರಗಳಿಂದ ಗಾಳಿ ಬೀಸುತ್ತಿದ್ದರು. ಒಬ್ಬನು ಹಸಿರು ಛತ್ರಿಯನ್ನು ತಲೆಯ ಮೇಲೆ ಹಿಡಿದಿದ್ದ. ಚಕ್ರವರ್ತಿ ಕುಳ್ಳಾಗಿದ್ದ. ದೊಡ್ಡ ಮೂಗು, ತೆಳ್ಳನೆಯ ಶರೀರ. ವಯಸ್ಸಾದ್ದರಿಂದ ಶರೀರ ಬಾಗಿತ್ತು. ಎಣ್ಣೆಗೆಂಪು ಬಣ್ಣದ ಮುಖದಲ್ಲಿ ಗೋಳಾಕಾರದ ಬಿಳಿಯ ಗಡ್ಡ ಎದ್ದುಕಾಣುತ್ತಿತ್ತು.

ಸಿಂಹಾಸನದ ಮೇಲೆ ಕುಳಿತನಂತರ ಆತನ ಕೈಗೆ ಕತ್ತಿ ಗುರಾಣಿಗಳನ್ನು ಕೊಟ್ಟರು. ಅವನ್ನು ಈಸಿಕೊಂಡು ಸಿಂಹಾಸನದ ಎಡಬದಿಯಲ್ಲಿಟ್ಟು ಅಹವಾಲು ಹೇಳಿಕೊಳ್ಳು ವವರು ಹತ್ತಿರ ಬರಬೇಕೆಂದು ಕೈಸನ್ನೆಮಾಡಿದ. ಕೆಲಸವಿದ್ದವರು ಹತ್ತಿರ ಹೋದರು. ಇಬ್ಬರು ಭಕ್ಷಿಗಳು ಅಹವಾಲುಗಳನ್ನು ಈಸಿಕೊಂಡು ಬೇಡಿಕೆಯೇನೆಂದು ಹೇಳಿ ಅವನ್ನು ಚಕ್ರವರ್ತಿಯ ಕೈಗಿತ್ತರು. ಚಕ್ರವರ್ತಿ ಸ್ವಹಸ್ತದಿಂದಲೇ ಪ್ರತಿ ಅರ್ಜಿಯ ಮೇಲೂ ಏನೋ ಬರೆದ. ಕಣ್ಣಿಗೆ ಕನ್ನಡಕವಿರಲಿಲ್ಲ. ಆತನ ಹಸನ್ಮುಖವನ್ನು ನೋಡಿದರೆ ಮನಸ್ಸು ಸಂತೋಷದಲ್ಲಿತ್ತೆಂದು ಹೇಳಬಹುದಿತ್ತು. ಈ ಮಧ್ಯೆ ಆನೆಗಳ ಪರಿಶೀಲನೆ ನಡೆಯಿತು. ಆನೆಯನ್ನು ನಡೆಯಿಸುವ 'ಕೊರ್ನಾಖಿಯ' (cornaccia, ಕೊರ್ನಾರ್ =ಮಾವುತ) ಆನೆಯು ಮೂರು ಸಲ ಚಕ್ರವರ್ತಿಗೆ ಸಲಾಂ ಮಾಡುವಂತೆ ಮಾಡಿದ.

ಆಮೇಲೆ ಷಾ ಆಲಮ್ ಮತ್ತು ಆತನ ಮಕ್ಕಳು ಬಂದು ಎರಡು ಸಲ ಬಗ್ಗಿ ನಮಸ್ಕರಿಸಿ ಸಿಂಹಾಸನದ ಕೆಳಗಿದ್ದ ಎತ್ತರವಾದ ಪೀಠದಲ್ಲಿ ಕುಳಿತುಕೊಂಡರು. ಆಮೇಲೆ ಔರಂಗಜೇಬನ ಮಗ ಆಜಂ ಷಾ ಬಂದು ಹಾಗೆಯೇ ಮಾಡಿ ತನ್ನ ಪೀಠದಲ್ಲಿ ಕುಳಿತುಕೊಂಡನು. ಈ ರಾಜಕುಮಾರರು ಬಣ್ಣ ಬಣ್ಣದ ಬುಟ್ಟಾರೇಷ್ಮೆ ಬಟ್ಟೆಗಳನ್ನು ತೊಟ್ಟಿದ್ದರು. ವಜ್ರವೈಢೂರ್ಯಗಳ ಆಭರಣಗಳನ್ನು ಧರಿಸಿದ್ದರು. ಸುಂದರವಾದ ಕತ್ತಿ, ಈಟಿ, ಮತ್ತು ಗುರಾಣಿಗಳನ್ನು ಹಿಡಿದಿದ್ದರು. ರಾಜಮನೆತನಕ್ಕೆ ಸೇರದವರು ಮೂರು ಸಲ ಬಗ್ಗಿ ನಮಸ್ಕರಿಸಬೇಕು.

ಡೇರೆಯ ಹೊರಗಡೆ ಬಂದೂಕು ಹಿಡಿದ ನೂರು ಸಿಪಾಯಿಗಳೂ, ಅದಕ್ಕಿಂತಲು ಹೆಚ್ಚು ಮುಳ್ಳುಗದೆಗಳನ್ನು ಹೊತ್ತ ಜನರೂ ಇದ್ದರು. ಅವರೆಲ್ಲ ಬಣ್ಣ ಬಣ್ಣದ ಉಡುಪು ಧರಿಸಿದ್ದರು. ಪರಿಚಯವಿಲ್ಲದವರಿಗೆ ಒಳಗೆ ಪ್ರವೇಶವಿರಲಿಲ್ಲ.

ಔರಂಗಜೇಬನಿಗೆ ಹಲವಾರು ಜನ ಮಕ್ಕಳಿದ್ದಾರೆ. ಹಿರಿಯ ಮಗ ಮಹಮೂದ್. ಇವನು ತನ್ನ ಪೂರ್ವಿಕರಂತೆ ತಂದೆ ಸಾಯುವುದಕ್ಕೆ ಮುಂಚೆಯೇ ಪಟ್ಟಕ್ಕೇರಲು ಪ್ರಯತ್ನಿಸಿದ. ಔರಂಗಜೇಬ, ಕಾದ ಕಬ್ಬಿಣದ ಸರಳನ್ನು ಅವನ ಪಾದದ ಮೂಲಕ ಮಂಡಿಯವರೆಗೆ ಹೋಗುವಂತೆ ಚುಚ್ಚಿಸಿ ಚಿತ್ರಹಿಂಸೆಯಿಂದ ಸಾಯಿಸಿದ. ಎರಡನೆಯ ಮಗ ಷಾ ಆಲಮನೂ[೧] ಸಿಂಹಾಸನಕ್ಕೆ ಆಸೆಪಟ್ಟ. ಅವನಿಗೆ ಸೆರೆಮನೆಯವಾಸ ಒದಗಿ ನಾನಿಲ್ಲಿಗೆ ಬರುವ ಕೆಲವು ದಿನಗಳಿಗೆ ಮೊದಲು ತನ್ನ ೬೦ನೆಯ ವಯಸ್ಸಿನಲ್ಲಿ ಕಾಲವಾದ. ಆಜಂಷಾ ಔರಂಗಜೇಬನ ಮೂರನೆಯ ಮಗ. ಈತ ವಿಜಾಪುರದ ರಾಜನೊಡನೆ ಸೇರಿ ತಂದೆಯ ಮೇಲೆ ಕತ್ತಿಕಟ್ಟಿದ. ಈತನಿಗೆ ಈಗ ೫೫ ವರ್ಷಗಳು. ಹೀಗೆ ಮಕ್ಕಳು ತಂದೆಯ ಮೇಲೆ ದ್ವೇಷ ಸಾಧಿಸುವುದು ವಂಶಪಾರಂಪರ್ಯವಾಗಿ ಬಂದುಬಿಟ್ಟಿದೆ.

ನಾಲ್ಕನೆಯ ಮಗ ಅಕ್ಬರನಿಗೆ ೪೫ ವರ್ಷ ವಯಸ್ಸು. ಅಪ್ಪನ ಮೇಲೆ ಕತ್ತಿ ಕಟ್ಟುವುದರಲ್ಲಿ ಈತ ಎಲ್ಲರನ್ನೂ ಮೀರಿಸಿದ್ದಾನೆ. ಔರಂಗಜೇಬನ ಕೊನೆಯ ಮಗ ಸಿಕಂದರ್. ಈತನಿಗೆ ೩೦ ವರ್ಷ. ಇವನಿಗೂ ಸಿಂಹಾಸನದ ಮೇಲೆ ಕಣ್ಣು.

ಔರಂಗಜೇಬ ಯಾವಾಗಲೂ ಯುದ್ಧದಲ್ಲಿ ತೊಡಗಿರುತ್ತಾನೆ. ಗಲಗಲಿಗೆ ಬಂದು ನಾಲ್ಕು ವರ್ಷಗಳಾದುವು. ಈತ ತನ್ನ ತಂದೆಗಿಂತಲೂ ಬುದ್ಧಿವಂತನೆಂದು ಭಾವಿಸಿದ್ದರೂ ಇವನಿಗೂ ತನ್ನ ಹಿರಿಯರಿಗಾದ ಗತಿಯೇ ಆಗುವುದರಲ್ಲಿ ಸಂದೇಹವಿಲ್ಲ. ನಾನು ಮೇಲೆ ಹೇಳಿದ ಈ ವಿಷಯಗಳನ್ನೆಲ್ಲಾ ಸಿಪಾಯಿಗಳಿಂದ ಸಂಗ್ರಹಿಸಿದೆ.

ದರ್ಬಾರಿನನಂತರ ರಾಜ ತನ್ನ ಬಿಡಾರವನ್ನು ಸೇರಿದ. ಹಾಗೆಯೇ ರಾಜಕುಮಾರರೂ, ಅಮೀರರೂ ಮತ್ತಿತರ ಆಸ್ಥಾನಿಕರೂ ಕುದುರೆಗಳಲ್ಲಿಯೋ ಪಲ್ಲಕ್ಕಿ

೧. ಇವನು ಮುವಾ ಆಜಂ.

ಗಳಲ್ಲಿಯೋ ತಮ್ಮ ತಮ್ಮ ಬಿಡಾರಗಳಿಗೆ ಹಿಂದಿರುಗಿದರು. ಕೊತ್ವಾಲ ಎಂಟು ಗೇಣು ಉದ್ದದ ತಾಮ್ರದ ಹಸಿರು ತುತ್ತೂರಿಯನ್ನು ಮೂರನೊಬ್ಬನಿಂದ ಊದಿಸಿಕೊಳ್ಳುತ್ತಾ ಹೋದ. ಆ ತುತ್ತೂರಿಯ ಶಬ್ದ ಕೇಳಿ ನನಗೆ ನಗು ಬಂತು. ಅದು ನಮ್ಮಲ್ಲಿ ಒಂದು ಹಂದಿ ತನ್ನ ಬಳಿಗೆ ಬೇರೆ ಹಂದಿಗಳನ್ನು ಕರೆಯಲು ಮಾಡುವ ಶಬ್ದದಂತಿತ್ತು.

ಮೊಗಲ್ ಚಕ್ರವರ್ತಿಯ ಭಂಡಾರಕ್ಕೆ ಅಸಂಖ್ಯಾತವಾದ ಹಣ ಸೇರುತ್ತಾ ಇರುತ್ತದೆ. ಪ್ರಪಂಚದಲ್ಲಿ ಚಲಾವಣೆಯಲ್ಲಿರುವ ಚಿನ್ನ ಬೆಳ್ಳಿಗಳೆಲ್ಲಾ ಕೊನೆಗೆ ಇಲ್ಲಿಯೇ ನೆಲೆಸುತ್ತವೆ. ಅಮೆರಿಕಾದ ಹಣ ಯೂರೋಪಿನ ಹಲವಾರು ರಾಜ್ಯಗಳ ಮೂಲಕ ತುರ್ಕಿ ಮತ್ತು ಪರ್ಷಿಯಾಗಳಿಗೆ ಬರುತ್ತದೆ.

ತುರುಕರಿಗೆ ಕಾಫಿ ಇಲ್ಲದಿದ್ದರೆ ಆಗುವುದಿಲ್ಲ. ಅದು ಹೈಮನ್ (ಯೆಮೆನ್) ನಿಂದಲೂ ಅರೇಬಿಯಾ ಫೆಲಿಕ್ಸ್‌ನಿಂದಲೂ ಬರುತ್ತದೆ.

ಮೊಗಲನಿಗೆ ತನ್ನ ವಂಶಪಾರಂಪರ್ಯವಾಗಿ ಬಂದ ರಾಜ್ಯಗಳಿಂದ ವರ್ಷಕ್ಕೆ ೮೨ ಕೋಟಿ ರೂಪಾಯಿಗಳ ಆದಾಯ ಇದೆ ಎಂದು ನನಗೆ ತಿಳಿಯಿತು. ಆತ ಗೆದ್ದು ಕೊಂಡಿರುವ ರಾಜ್ಯಗಳಿಂದ ಎಷ್ಟು ಬರುತ್ತೆ ಎಂದು ನನಗೆ ಗೊತ್ತಾಗಲಿಲ್ಲ. ಚೀನಾ ಚಕ್ರವರ್ತಿಯನ್ನು ಬಿಟ್ಟರೆ ಮೊಗಲನಷ್ಟು ಶ್ರೀಮಂತ ಹಾಗೂ ಬಲಾಢ್ಯ ಚಕ್ರವರ್ತಿ ಪ್ರಪಂಚದಲ್ಲಿಯೇ ಇಲ್ಲ.

ಹಿಂದುಸ್ಥಾನದ ಮಹಮ್ಮದೀಯರು ಬೇರೆ ವಿಧಗಳಲ್ಲಿ ಅನಾಗರೀಕರಂತಿದ್ದರೂ ತುರುಕರಲ್ಲಿರುವಂತಹ ಮೋಸ ಮತ್ತು ಜಂಭಗಳು ಇಲ್ಲ. ಕ್ರೈಸ್ತರನ್ನು ದ್ವೇಷಿಸುವವರೂ ಅಲ್ಲ. ಹಿಂದೂಗಳು ಪ್ರಯಾಣಿಕರ ಬಗ್ಗೆ ಇನ್ನೂ ಹೆಚ್ಚು ನ್ಯಾಯವಾಗಿ ನಡೆದು ಕೊಳ್ಳುತ್ತಾರೆ. ಧೈರ್ಯದಲ್ಲಿ ಮಹಮ್ಮದೀಯರೂ ಹಿಂದೂಗಳೂ ಒಂದೇ; ಅದೂ ಅಷ್ಟಕ್ಕಷ್ಟೆ.

ಆಸ್ಥಾನದ ಭಾಷೆಗಳು ಅರೇಬಿಯನ್ ಮತ್ತು ಪರ್ಷಿಯನ್. ತಮ್ಮ ಶ್ರೀಮಂತಿಕೆ ಯನ್ನೆಲ್ಲಾ ಅನೇಕ ಆಳುಕಾಳುಗಳಿಗೂ, ಅವರಿಗಿಂತ ಹೆಚ್ಚಾಗಿ ವೇಶ್ಯೆಯರಿಗೂ ವೆಚ್ಚ ಮಾಡುತ್ತಾರೆ.

ಮಹಮ್ಮದೀಯ ಹೆಂಗಸರು ಮುಖ ಮುಚ್ಚಿಕೊಂಡಿರುತ್ತಾರೆ. ಬಹಿರಂಗವಾಗಿ ಕಾಣಿಸಿಕೊಳ್ಳುವುದಿಲ್ಲ. ಬಡವರು ಮತ್ತು ಕೆಟ್ಟ ಚಾಳಿಯುವರು ಮಾತ್ರ ಬಹಿರಂಗವಾಗಿ ಕಾಣಿಸಿಕೊಳ್ಳುತ್ತಾರೆ.

ಇಂಡಿಯಾದ ಹಿಂದೂಗಳು ಒಂದೇ ಧರ್ಮಕ್ಕೆ ಸೇರಿದವರಾದರೂ ಅವರಲ್ಲಿ ೮೪ ಜಾತಿಗಳಿವೆ. ಮೊದಲನೆಯವರು ಬ್ರಾಹ್ಮಣರು. ಇವರಲ್ಲಿ ಹತ್ತು ಒಳಜಾತಿಗಳಿವೆ. ಮೊದಲನೆಯ ಐದು ಒಳಜಾತಿಗಳವರು ಶಾಖಾಹಾರಿಗಳು. ಇವರು ಯಾರೆಂದರೆ: ಮರಾತರು (ಮರಾಠ ಬ್ರಾಹ್ಮಣರು), ತೆಲಂಗರು, ಕನರಾದವರು (ಕನ್ನಡ ಬ್ರಾಹ್ಮಣರು), ದ್ರೊವರರು (ದ್ರಾವಿಡರು) ಮತ್ತು ಗುಜರಾತಿಗಳು. ಮೊದಲನೆಯ ನಾಲ್ಕು ಜಾತಿ ಗಳವರಲ್ಲಿ ಅಂತರ್ಭೋಜನ ಉಂಟು. ಆದರೆ ಗುಜರಾತಿಗಳ ಮನೆಯಲ್ಲಿ ಭೋಜನ

ಮಾಡುವುದಿಲ್ಲ. ಉಳಿದ ಐದು ಒಳಜಾತಿಗಳವರು ಮೀನು ಬಿಟ್ಟು ಉಳಿದ ಪ್ರಾಣಿಗಳ ಮಾಂಸ ತಿನ್ನುತ್ತಾರೆ. ಇವರು ಯಾರೆಂದರೆ: 'ಗೌರಿ' (ಗೌಡ ಬ್ರಾಹ್ಮಣರು), 'ಕನೋಜಿಯು' (ಕನೋಜ್ ಅಥವಾ ಕನ್ಯಾಕುಬ್ಜ ಬ್ರಾಹ್ಮಣರು), ಗೋವೆಯ ಬ್ರಾಹ್ಮಣರೆಂದು ಕರೆಯಲ್ಪಡುವ ತ್ರಿಯುತೊರಿ (ತ್ರಿಹುತಿ), ಗಗಾವಳಿ (ಗಯಾವಳಿ ಅಥವಾ ಗಯಾದವರು) ಮತ್ತು ಪೊಂಗಪುತ್ (ಗಂಗಪುತ್ರಾ?). ಇವರಲ್ಲಿ ಅಂತರ್ಭೋಜನವಿಲ್ಲ.

ಎರಡನೆಯ ಜಾತಿಯವರು ರಜಪೂತರು (ಕ್ಷತ್ರಿಯರು), ಮೂರನೆಯ ಜಾತಿಯವರು ಬನಿಯನರು (ವರ್ತಕರು). ಇವರಲ್ಲಿ ೨೦ ಒಳಜಾತಿಗಳುಂಟು. ಇವರು ಮೋಸಮಾಡುವುದರಲ್ಲಿ ಅರ್ಮೀನಿಯರನ್ನೂ ಯಹೂದಿಗಳನ್ನೂ ಮೀರಿಸುತ್ತಾರೆ.

'ಪರವೌ'ಗಳಲ್ಲಿ (ಪ್ರಭು ಅಥವಾ ಚಂದ್ರಸೇನೀಯ ಕಾಯಸ್ಥ ಪ್ರಭುಗಳಲ್ಲಿ) ಎರಡು ಜಾತಿಗಳಿವೆ. ಒಂದಕ್ಕೆ 'ಪತರ' ಎಂದು ಹೆಸರು. ಇನ್ನೊಂದರ ಹೆಸರು ಗೊತ್ತಿಲ್ಲ. ಇವರು ಹಂದಿಮಾಂಸವೊಂದನ್ನು ಬಿಟ್ಟು ಉಳಿದೆಲ್ಲಾ ಮಾಂಸಗಳನ್ನೂ ತಿನ್ನುತ್ತಾರೆ.

'ಸುತರ್' ಅಥವಾ ಬಡಗಿಗಳಲ್ಲಿ ಎರಡು ವಿಧ: 'ಕೊಂಕಣರು' ಮತ್ತು 'ಗುಜರತ್ತಿ'ಗಳು. 'ಕನ್ಸಾರರು' ಅಂದರೆ ತಾಮ್ರದ ಕೆಲಸ ಮಾಡುವವರಲ್ಲಿ ಕೊಂಕಣರು ಮತ್ತು ಗುಜರಾತಿಗಳೆಂದು ಎರಡು ವಿಧ.

ಹಾಲು ಮಾರುವ 'ಗೌಳಿ'ಗರು ದನಗಳನ್ನು ಸಾಕಿಕೊಂಡಿದ್ದಾರೆ. ಇವರು ದನದ ಮಾಂಸವಲ್ಲದೆ ಬೇರೊಂದು ಮಾಂಸ ತಿನ್ನುವುದಿಲ್ಲ (?) ಹಂದಿಗಳನ್ನೂ ಸಾಕಿ ತಿನ್ನುತ್ತಾರೆ. 'ಮಾಲಿ'ಗಳು ಎಂದರೆ ಹೂ ಮಾರುವವರು. 'ಸೋ ನಾರ' ಎಂದರೆ ಚಿನ್ನ ಬೆಳ್ಳಿ ಕೆಲಸ ಮಾಡುವವರು. ಇವರಲ್ಲಿ ಕೊಂಕಣರು ಮತ್ತು ಗುಜರಾತಿಗಳೆಂದು ಎರಡು ವಿಧ. 'ವಲೌರಿ' (Valuori = ಹೊಲೆಯರು?) ಎಂದು ತೋಟದ ಕೆಲಸ ಮಾಡುವ ಮತ್ತೊಂದು ಜಾತಿಯುಂಟು. ಇವರು ದನದ ಮತ್ತು ಹಂದಿಯ ಮಾಂಸ ಬಿಟ್ಟು ಉಳಿದೆಲ್ಲ ಮಾಂಸಗಳನ್ನೂ ತಿನ್ನುತ್ತಾರೆ.

'ಕೊಲಂಬಿನ್' (ಕುನ್ಬಿ, ಕಲಬಿ, ಅಥವಾ ಕುರ್ಮಿ) ಎಂಬುವರು ಬೇಸಾಯ ಮಾಡುವ ಒಂದು ಜಾತಿ ಜನ. ಇವರಲ್ಲಿ 'ಛೋದ್ರಿ' (ಚೌಧ್ರಿ ?), ಪಟೇ (ಪಟೇಲ್ ?), 'ರೌತರು' (ರಾವುತರು), 'ನಾಯಿಕ್' (ನಾಯಕ್), 'ಮೊರಿಯ', 'ಗೊರೆಲ್' ಮತ್ತು 'ದೊಬ್ಲ' ಎಂಬುವು ಒಳಜಾತಿಗಳು. ಗೊರೆಲರು ತಮ್ಮ ಮದುವೆಯಲ್ಲಿ ಕುದುರೆಯ ಮೇಲೆ ಹೋಗುತ್ತಾರೆ. ದೊಬ್ಲರು (ದೊಂಬರು ?) ಕಾಡುಗಳಲ್ಲಿದ್ದುಕೊಂಡು ಬಾವುಲಿ, ಉಡ, ಹಾವು ಮುಂತಾದ ಹೊಲಸು ಪ್ರಾಣಿಗಳನ್ನು ಹಿಡಿದು ತಿನ್ನುತ್ತಾರೆ. ಇವರ ಹೆಂಗಸರು ಸೊಂಟಕ್ಕೆ ಎಲೆಗಳನ್ನು ಸುತ್ತಿಕೊಳ್ಳುವುದು ಬಿಟ್ಟರೆ ಬೆತ್ತಲೆಯಾಗಿರುತ್ತಾರೆ. ('ಬತೇಲ' ಭತೇಲ) ಎಂಬ ಜನ ಬ್ರಾಹ್ಮಣರಂತೆ; ಮೂರು ಎಳೆ ಜನಿವಾರ ಹಾಕಿಕೊಳ್ಳುತ್ತಾರೆ.

'ಸುರ' (ಹೆಂಡ) ಇಳಿಸುವ 'ಬಂಡಾಲಿನ್'ರಲ್ಲಿ (ಭಂಡಾರಿಗಳಲ್ಲಿ) 'ರಾವುತಿ'

(ರಾವುತ), 'ಛೋದ್ರಿ', 'ಷಿಯುದ', 'ಕಿತ', 'ಚರದ' ಮುಂತಾದ ಒಳಜಾತಿಗಳುಂಟು;
'ದೊಬ್ಲಿ' (ದೋಭಿ=ಅಗಸರು?) ಗಳಲ್ಲಿ ಕೊಂಕಣರು ಮತ್ತು ಗುಜರಾತಿಗಳೆಂಬ ಎರಡು ಭೇದಗಳುಂಟು.

ಬೆಸ್ತರಲ್ಲಿ ಅನೇಕ ಜಾತಿಗಳೂ (Races) ಒಳಜಾತಿಗಳೂ ಉಂಟು. ಅವರು ಯಾರೆಂದರೆ 'ಕೊಲೆ' (ಕೋಲಿ ಅಥವಾ ಸೊಂಕಲಿಗರು), 'ಮವಿ'ಗಳು (ಗಬಿತರು ಎಂಬ ಇನ್ನೊಂದು ಹೆಸರಿನಿಂದ ಕರೆಯಲ್ಪಡುವ ಖಾರ್ವಿಗಳು), 'ಪುರುಬಿಯಾ'ಗಳು, 'ವೈತಿ'ಗಳು ಮತ್ತು 'ಬಿರ್ಮೃಸ್ಸಿ'ಗಳು.

'ಸೊತ್ರಿಯಾ'ರಲ್ಲಿ ಎರಡು ಬೇರೆ ಬೇರೆ ಜಾತಿಗಳುಂಟು. ಒಂದು 'ಸಾಲಂಕಿ'ಗಳು; ಇನ್ನೊಂದು 'ಕೊಲೆ' (ಕೋಲಿ)ಗಳು.

ಉಪ್ಪು ಸಾಗಿಸುವವರನ್ನು 'ಚರಣ'ರೆಂದು (ವಂಜಾರಿಗಳು ಅಥವಾ ಬಣಜಾರರು ಅಥವಾ ಲಂಬಾಣಿಗಳು ?) ಕರೆಯುತ್ತಾರೆ.

'ಬಂಗಸಾಲಿ'ಗಳು (ಭಂಗಸಾಲಿಗಳು ಅಥವಾ ವೇಗರು) ಎಂಬ ಇನ್ನೊಂದು ಜಾತಿ ಇದೆ.

'ಗಂತಿಯು' (ಭಟಿಯಾ ?) ರೆಂಬ ಜನರು ವ್ಯಾಪಾರದಲ್ಲಿ ನಿರತರು. ಮೀನು ಹೊರತು ಇತರ ಮಾಂಸ ತಿನ್ನುವುದಿಲ್ಲ. ಬೇರೆ ಜಾತಿಯುವರೊಡನೆ ಮದುವೆಯೂ ಆಗುವುದಿಲ್ಲ. ಈ ಕಾರಣ ಎಂತಹ ಬಡವನೂ ಸಹ ೫೦,೦೦೦ ಕ್ರೌನುಗಳಷ್ಟು ಹಣ ಕೊಟ್ಟು ಹೆಣ್ಣುಗಿಟ್ಟಿಸಿಕೊಳ್ಳಬೇಕು.

ಸೂರತ್ತಿನಲ್ಲಿ 'ಬಬ್ರಿಯಾ', 'ಕತಿ' (ಕಥಿ) ಮತ್ತು 'ರಾಜಪ್ಪುರ್' ಎಂಬ ಜಾತಿಯ ಜನರಿದ್ದಾರೆ.

'ಫರಸಿ'ಗಳೆಂಬ ಜನ ಎಕ್ಕಡ ಹೊಲಿಯುತ್ತಾರೆ. ಕೇಪ್ ಕೊಮೊರಿ ಎಂಬ ಕಡೆ 'ನಾಯ್ನೇ' (Naine=ನಾಯರ್) ಎಂಬ ನಾಡಿನಲ್ಲಿ 'ಪೊಲಿಯ' (ಹೊಲೆಯ) ರೆಂಬ ಅಸ್ಪೃಶ್ಯಜಾತಿಯ ಜನರಿದ್ದಾರೆ.

ಎಲ್ಲಾ ಜಾತಿಗಳಲ್ಲೂ 'ಜೋಗಿ'ಗಳೆಂಬ ಜನ ಇದ್ದಾರೆ. ಇವರು ಬಹು ಕಠಿಣ ವಾದ ಜೀವನ ನಡೆಸುತ್ತಾರೆ. ನಗ್ನರಾಗಿ ನಾನಾ ತರಹ ಭಂಗಿಗಳಲ್ಲಿ ಇರುತ್ತಾರೆ. ಇವರ ಸಂಪರ್ಕ ಬೆಳೆಸಿದ ಸ್ತ್ರೀಯರು ತಾವು ಪಾವನರಾದೆವೆಂದು ಭಾವಿಸುತ್ತಾರೆ. ಈ ಕಾರಣ ಇಂಡಿಯಾದಲ್ಲೆಲ್ಲಾ ಅಲೆದಾಡುತ್ತಿರುವ ಸಾವಿರಾರು 'ಫಕೀರ'ರನ್ನು ಕಾಣ ಬಹುದು. 'ಬರಾಘಿ' (ಬೈರಾಗಿ=ವೈರಾಗಿ) ಎಂಬ ಇನ್ನೊಂದು ಬಗೆಯ ಫಕೀರರು ಇದ್ದಾರೆ. ಈ ಫಕೀರರಿಗೂ ಜೋಗಿಗಳಿಗೂ ಆಗುವುದಿಲ್ಲ. ಕಂಡರೆ ಸಾಕು ಸಿಕ್ಕಾಬಟ್ಟೆ ಹೊಡೆದಾಡುತ್ತಾರೆ. ಈ ಫಕೀರರು ತಾವು 'ರೆವಂಘೆ–ರಾಮು' (ರಘುವಂಶ–ರಾಮ ?)ನ ವಂಶಸ್ಥರೆಂದು ಜಂಭಕೊಚ್ಚಿಕೊಳ್ಳುತ್ತಾರೆ.

ಇಷ್ಟೊಂದು ಜಾತಿಗಳೂ ಇಷ್ಟೊಂದು ಬಗೆಯ ನಡೆನುಡಿಗಳೂ ಇರುವ ದೇಶದ ಜನರು ಒಗ್ಗಟ್ಟಾಗಿರುವುದು ಅಸಾಧ್ಯವೇ ಸರಿ. ಈ ಕಾರಣದಿಂದಲೇ ತುಂಬಾ ಕಡಮೆ

ಸಂಖ್ಯೆಯಲ್ಲಿರುವ ಮಹಮ್ಮದೀಯರು ಈ ಅಸಂಖ್ಯಾತ ಹಿಂದೂಗಳನ್ನು ಆಳುತ್ತಿರುವುದು. ಇದು ಆಶ್ಚರ್ಯವಲ್ಲ. ಎಂಥ ಘನ ರಾಜ್ಯವೇ ಆಗಲಿ ಅದರ ನಿರ್ನಾಮಕ್ಕೆ ಅಲ್ಲಿಯ ಭೇದಭಾವನೆಗಳೇ ಮುಖ್ಯ ಕಾರಣವೆಂದು ಪ್ರಪಂಚಕ್ಕೇ ತಿಳಿದಿರುವ ವಿಷಯ.

ಹಿಂದೂಗಳು ಮೂಢನಂಬಿಕೆಯ ಮಡುವಿನಲ್ಲಿ ಮುಳುಗಿ ಕಣ್ಣಿದ್ದೂ ಕಣ್ಣಿಲ್ಲದ ಕುರುಡರಂತಿದ್ದಾರೆ. ತಮ್ಮ ದೇವರುಗಳನ್ನು ಮನುಷ್ಯರ ಮಟ್ಟಕ್ಕಿಳಿಸಿದ್ದಾರೆ. ರಾಮನನ್ನು ಕುರಿತು ದೊಡ್ಡ ಕಟ್ಟುಕಥೆಯನ್ನು ಹೇಳುತ್ತಾರೆ. ಹಾಗೆಯೇ ಕೃಷ್ಣನ ಬಗ್ಗೆಯೂ ಹೇಳುತ್ತಾರೆ. ಕೃಷ್ಣನಿಗೆ ೧೬,೦೦೦ ಹೆಂಡತಿಯರಿದ್ದರಂತೆ ! ಹೆಣ್ಣು ದೇವರುಗಳಲ್ಲಿ 'ಮಾಲಖಿಖೆ' (Malachiche = ಮಹಾಲಕ್ಷ್ಮಿಯೇ ?) ಎಂಬುವಳು ಮುಖ್ಯಳಾದವಳು. ಈಕೆ ತನ್ನ ಸಂಗ ಬಯಸಿದವರಾರಿಗೂ ಇಲ್ಲ ಎನ್ನುತ್ತಿರಲಿಲ್ಲವಂತೆ.

ಆರು ಸಾವಿರ ವರ್ಷಗಳ ಹಿಂದೆ ರಾಮನ ಮೂಲಕ ದೇವರು ಕಳುಹಿಸಿಕೊಟ್ಟ ನಾಲ್ಕು ಪುಸ್ತಕಗಳು (ವೇದಗಳು) ಇವೆಯೆಂದು ಹೇಳುತ್ತಾರೆ. ಇವುಗಳಲ್ಲಿ ಎರಡು ಮುಚ್ಚಿದವುಗಳು (ಅಂದರೆ ಬ್ರಾಹ್ಮಣರನ್ನು ಬಿಟ್ಟು ಬೇರೆಯವರು ಓದುವಂತಿಲ್ಲ); ಮತ್ತೆರಡು ತೆರೆದವುಗಳು.

ಬ್ರಾಹ್ಮಣನು ಜಾತಿಗೆಟ್ಟರೆ 'ಬೊಟೋ' (Boto—ಭಟ್ಟ)ನ ಮುಂದೆ ಜಾತಿಯವರೆಲ್ಲ ಸೇರಿ ಅವನ ತಪ್ಪು ರುಜುವಾತು ಮಾಡುತ್ತಾರೆ. ಆಗ ಬೊಟೋ ಜಾತಿಗೆಟ್ಟವನ 'ತಿಲ್ಲ' (ತಿಲಕ)ವನ್ನು ಅಳಿಸುತ್ತಾನೆ.

ಸಾಯುತ್ತಿರುವವನ ಬಾಯಿಗೆ ಗೋಮೂತ್ರ ಬೀಳುವಂತೆ ಮಾಡಿ ಅವನನ್ನು ಸ್ವರ್ಗಕ್ಕೆ ಕಳುಹಿಸುತ್ತೇವೆಂದು ಭಾವಿಸುತ್ತಾರೆ.

ನಾಯರ್ ಹೆಂಗಸಿಗೆ ಹಲವಾರು ಗಂಡಂದಿರು. ಆಕೆ ಬೇರೆ ಜಾತಿಯ ಗಂಡಸಿನ ಸಂಗ ಮಾಡಿದರೆ 'ಕನರಾ' ರಾಣಿಯ ಆಳಾಗಿ ಬಾಳಬೇಕು. ರಾಣಿಯ ಅಧೀನದಲ್ಲಿರುವ ನಾಯರುಗಳು ಬೆಟ್ಟ ಗುಡ್ಡವಾದ 'ಕನರಾ'ದಲ್ಲಿ ಕಳ್ಳಕಾಕರ ಕಾಟ ಇಲ್ಲದಂತೆ ಮಾಡಿದ್ದಾರೆ.

ಹಿಂದೂಗಳ ದೇವಸ್ಥಾನದಲ್ಲಿ ನಾನಾ ಬಗೆಯ ವಿಗ್ರಹಗಳಿವೆ. ನೋಡುವುದಕ್ಕೆ ಅಸಹ್ಯ. ದುಂಡಾದ ಕರಿಯ ಕಲ್ಲನ್ನೂ (ಲಿಂಗ) ಪೂಜಿಸುವ ಜನ ಇವರು. ಕೆಲವರು ಮರಗಿಡಗಳನ್ನೂ ಪೂಜಿಸುತ್ತಾರೆ. ನಾಲ್ಕು ಮುಖ್ಯ ಯಾತ್ರಾಸ್ಥಳಗಳಿವೆ. ಅವು ಯಾವುವೆಂದರೆ ; ಜಿಯಗ್ರನಾತೇ (Giagranate = ಜಗನ್ನಾಥ), ಬನಾರಸ್, ಮಥುರ ಮತ್ತು ತ್ರಿಪೆತಿ (ತಿರುಪತಿ).

ವಿಜಯನಗರ ರಾಜ್ಯದಲ್ಲಿ ಚಂದ್ರಶಿಲೆಯಿಂದ ನಿರ್ಮಿಸಿದ ಮುನ್ನೂರು ಕಂಬಗಳ ದೇವಸ್ಥಾನ ಇದೆ.

ಇಂಡಿಯಾದಲ್ಲಿ ನಲವತ್ತು ವರ್ಷಗಳ ಕಾಲ ಇದ್ದು ಕಣ್ಣಿನಿಂದ ಕಂಡ ಪೋರ್ಚುಗೀಸನೊಬ್ಬ ಹೇಳಿದ ವಿಷಯ ಏನೆಂದರೆ, ೧೦,೦೦೦ ರೂಪಾಯಿ ಖರ್ಚುಮಾಡಿ ಹದಿನೆಂಟು ಚಕ್ರಗಳ ರಥವೊಂದನ್ನು ನಿರ್ಮಿಸಿ ಅದರ ಮೇಲೆ ತಮ್ಮ ದೇವರ ವಿಗ್ರಹ

ಇಟ್ಟು ಬ್ರಾಹ್ಮಣರು ೨೦೦ ನರ್ತಕಿಯರೊಡನೆ ಆ ರಥದಲ್ಲಿ ಕುಳಿತುಕೊಳ್ಳುತ್ತಿದ್ದರು ಎಂದು. ಸಿಲೋನಿಗೆ ಹತ್ತಿರ ರಾಮನಸೊರ್ (ರಾಮೇಶ್ವರ) ಎಂಬ ದ್ವೀಪದಲ್ಲಿ ಅದೇ ಹೆಸರಿನ ದೇವಸ್ಥಾನ ಇದೆಯೆಂದೂ ಆತ ಹೇಳಿದ. ಈ ದೇವಸ್ಥಾನದಲ್ಲಿ 'ಲಿಂಗೊನ್' (Lingon = ಲಿಂಗಂ) ಎಂಬ ಗುಡಿಯಿದೆಯೆಂದೂ, ಇದನ್ನು ವರ್ಷಕ್ಕೊಂದು ಸಲ ತೆರೆಯುತ್ತಾರೆಂದೂ ತಿಳಿಸಿದ.

ಏಷ್ಯಾದ ರಾಜರುಗಳಲ್ಲಿ ವಿಗ್ರಹಾರಾಧಕರು ಯಾರೆಂದರೆ: ಕೊಚಿನ್, ಚೀನಾ, ತುಂಕಿನ್, ಅರಕಾನ್, ಪೆಗು, ಸಯಾಂ, ಚೀನಾದ ರಾಜರುಗಳು, ಟಾರ್ಟರಿಯ ಹಲವಾರು ಖಾನರು, ಜಪಾನ್, ಮೊಲಕ್ಕಾ ದ್ವೀಪದ ರಾಜರುಗಳು ಮತ್ತು ಮೊಗಲ್ ಚಕ್ರಾಧಿಪತ್ಯದ ರಾಜರುಗಳು.

ಮೊಗಲ್ ಚಕ್ರವರ್ತಿಯನ್ನು ನೋಡಿದ ಮೇಲೆ ವಿಸಾಪುರದ (ವಿಜಾಪುರದ) ರಾಜನನ್ನು ನೋಡುವ ಮನಸ್ಸಾಯಿತು. ಮಾರ್ಚಿ ೨೨ನೆಯ ತಾರೀಖು ಮಂಗಳವಾರ ನಾನು ಆಗ್ರಾದ ಕ್ರೈಸ್ತ ಕ್ಯಾಪ್ಟನನ ಸಹಾಯದಿಂದ ರಾಜನ ಡೇರೆಯ ಬಳಿಗೆ ಹೋದೆ. ಆತ ಹೊರಗೆ ಬಂದಾಗ ನೋಡಬೇಕೆಂದು ಅಲ್ಲಿ ಒಂದು ಗಂಟೆ ಕಾದೆ. ಆತ ಮೊಗಲ್ ಚಕ್ರವರ್ತಿಯನ್ನು ನೋಡಲು ತನ್ನ ಪರಿವಾರ ಸಮೇತ ಹೊರಗೆ ಬಂದ. ಈ ರಾಜ ಕೇವಲ ೨೫ ವರ್ಷದ ಯುವಕ. ಈತನ ರಾಜ್ಯವನ್ನು ೧೬೮೬ರಲ್ಲಿ ಮೊಗಲ್ ಚಕ್ರವರ್ತಿ ಕಿತ್ತುಕೊಂಡು ಈ ರಾಜನನ್ನು ತನ್ನ ಅಧೀನನನ್ನಾಗಿ ಮಾಡಿಕೊಂಡಿದ್ದಾನೆ.

ಬುಧವಾರ ೨೩ನೆಯ ತಾರೀಖು ಆಗ್ರಾದ ಕ್ಯಾಪ್ಟನ್ ಒಡನೆ ಭೋಜನಮಾಡಿದೆ. ೨೪ನೆಯ ತಾರೀಖು ಒಂದು ದೇವಸ್ಥಾನವನ್ನು ನೋಡಿಬಂದೆ.

ಇಷ್ಟೆಲ್ಲಾ ನೋಡಿದನಂತರ ಗೋವಾಕ್ಕೆ ಹಿಂದಿರುಗಲು ಯಾರಾದರೂ ಸಿಕ್ಕಿಯಾರೆ ಎಂದು ಹುಡುಕಿದೆ. ನನ್ನ ಬೇಗಾರ ಮತ್ತು ದುಭಾಷಿ ಇಬ್ಬರೂ ಓಡಿಹೋಗಿದ್ದರು. ಗೋವೆಗೆ ಹೋಗುವವರು ಯಾರೂ ಸಿಕ್ಕಲಿಲ್ಲ. ನಾನೊಬ್ಬನೇ ಹಿಂದಿರುಗುವುದೆಂದು ತೀರ್ಮಾನಿಸಿ ೨೭ನೆಯ ತಾರೀಖು ಭಾನುವಾರ ನನ್ನ ಕುದುರೆಯನ್ನೇರಿದೆ. ೨೮ನೆಯ ತಾರೀಖು ರೊಡೆಲ್ಕಿಗೆ ಬಂದೆ. ಗೋಧಿರೊಟ್ಟಿ ಮಾಡಿಕೊಡು ಎಂದು ಹಿಂದೂವೊಬ್ಬನಿಗೆ ಕೈಸನ್ನೆಮಾಡಿ ಹೇಳಿದೆ. ಆ ಕಳ್ಳಬಡವ ಗೋಧಿ ರೊಟ್ಟಿಗೆ ಬದಲು 'ಮಚಿನಿ'ಯ ರೊಟ್ಟಿ ಮಾಡಿದ. ಮಚಿನಿ (ಮೆಣಸು) ಕರಿಯಕಾಳು; ಇದನ್ನು ಯಾರೂ ತಿನ್ನುವುದಿಲ್ಲ. ದಿಕ್ಕಿಲ್ಲದೆ ಇದನ್ನು ತಿಂದು ನೀರು ಕುಡಿದೆ. ಆ ದಿನ ರಾತ್ರಿ ಮಂದಾಪುರದ ದೇವಸ್ಥಾನದ ಬಳಿ ಮಲಗಿದ್ದೆ.

೨೯ನೆಯ ತಾರೀಖು ಮಂಗಳವಾರ ಬನೊರ್‌ನಿಂದಾಚೆ ಎತ್ತಿನ ಗಾಡಿಗಳ ತಂಡ ಸಿಕ್ಕಿತು. ಅದರೊಡನೆ ಸಂಜೆಯವರೆಗೂ ಪ್ರಯಾಣಮಾಡಿ ರಾತ್ರಿ ಅಲ್ಲಿಯೇ ಮರಗಳ ಕೆಳಗೆ ಭಯದಿಂದಲೇ ಕಾಲಕಳೆದೆ.

೩೦ನೆಯ ತಾರೀಖು ಗಾಡಿಗಳ ಜಾಡು ಹಿಡಿದು ಬೆಲಿಗಾಂ (ಬೆಳಗಾಂ)ಗೆ ಬಂದೆ. ಇಲ್ಲಿ ಎತ್ತಿನ ಗಾಡಿಗಳ ತಂಡ ಸಿಕ್ಕಬಹುದೆಂದು ಭಾವಿಸಿದ್ದೆ. ಆದರೆ ಯಾರೂ ನಾನು ಹೇಳಿದ್ದನ್ನು ಅರ್ಥಮಾಡಿಕೊಳ್ಳದೇಹೋದರು. ಮಾರನೆಯ ದಿನ ಒಬ್ಬ ಮೂರನಿಗೆ ನನ್ನ ಪ್ರಶ್ನೆ ಅರ್ಥವಾಯಿತು. ಆತ ಸಿಯಪುರ (ಷಾಹಪುರ)ದಿಂದ ಹೊರಡುವುದರಲ್ಲಿದ್ದ ಗಾಡಿಗಳ ತಂಡದ ಬಳಿಗೆ ಕರೆದುಕೊಂಡುಹೋದ. ಆ ಗಾಡಿಗಳು ಬಾರ್ದೇಶಕ್ಕೆ ಹೋಗುವು ದಕ್ಕೆ ಸಿದ್ಧವಾಗಿದ್ದುವು. ಗಾಡಿಗಳಲ್ಲಿದ್ದ ಕನರಿನರು ನನ್ನ ಬಗ್ಗೆ ತುಂಬ ವಿಶ್ವಾಸದಿಂದ ನಡೆದುಕೊಂಡರು. ಮೂರು ದಿನಗಳಿಂದ ಹಸಿದಿದ್ದ ನನಗೆ ಕೋಳಿಸಾರು ಮತ್ತು ಅನ್ನದ ಊಟ ಕೊಟ್ಟರು. ಅವರೊಡನೆ ನಾನು ಹೊರಟೆ.

ಏಪ್ರಿಲ್ ೨ನೆಯ ತಾರೀಖು ನಾವು ಬಾಲಾಘಾಟ್ ಘಟ್ಟವನ್ನು ಇಳಿಯು ಲಾರಂಭಿಸಿದೆವು. ಅಲ್ಲಲ್ಲಿ ಸುಂಕ ಸಾರಿಗೆಯುವರ ಕಾಟ ಇದ್ದೇ ಇತ್ತು.

ನನ್ನ ಆರೋಗ್ಯ ಸರಿಯಾಗಿರಲಿಲ್ಲ. ಈ ಕಾರಣ ನಾನು ತಿವಿಗೆ ಹೋದೆ. ಅಲ್ಲಿದ್ದ ಒಬ್ಬ ಕ್ಯಾಸ್ಟೆಲಿಯನ್ ಮತ್ತು ಅವನ ಹೆಂಡತಿ ನನ್ನ ಕಾಯಿಲೆಯನ್ನು ಕಂಡು ಮುಂದೆ ಹೋಗಬೇಡವೆಂದರು. ಅಲ್ಲಿ ಕೆಲವು ದಿನಗಳಿದ್ದು ೫ನೆಯ ತಾರೀಖು ಮಂಗಳವಾರ ಗೋವೆ ತಲುಪಿದೆ. ಫಾದರುಗಳು ನನ್ನ ಆರೋಗ್ಯ ಸುಧಾರಿಸುವಂತೆ ನೋಡಿಕೊಂಡರು. ಆದರೂ ನಿಶ್ಶಕ್ತಿ ಇದ್ದೇ ಇತ್ತು. ಈ ಕಾರಣ ೬ನೆಯ ತಾರೀಖು ಬುಧವಾರ ನಾಲ್ಕು ಬೋಯಿಗಳು ಹೊತ್ತ ಅಂದಳದಲ್ಲಿ ಕುಳಿತು ಗೋವೆಯಲ್ಲಿ ನೋಡದೆ ಉಳಿದಿದ್ದ ಸ್ಥಳಗಳನ್ನು ನೋಡಿದೆ. ಆ ಬೋಯಿಗಳಿಗೆ ಒಟ್ಟು ೧೫ ಪರ್ದಾಂವ್‌ಗಳನ್ನು ಕೊಟ್ಟೆ. ಅವರಿಗೆ ತೃಪ್ತಿಯಾಯಿತು. ೭ನೆಯ ತಾರೀಖು ಸೆಂಟ್ ಫ್ರಾನ್ಸಿಸ್ ಸಾವಿಯರನ ಪಾರ್ಥಿವ ಶರೀರವನ್ನು ನೋಡಿದೆ. ೧೧ನೆಯ ತಾರೀಖು ವೈಸ್‌ರಾಯನ್ನು ಕಂಡೆ. ಅವರು ಫ್ರೆಂಚ್ ಭಾಷೆಯಲ್ಲಿ ಎರಡು ಗಂಟೆಗಳ ಕಾಲ ಮಾತನಾಡಿ ಯೂರೋಪಿ ನಿಂದ ಬಂದ ಸುದ್ದಿಗಳನ್ನು ತಿಳಿಸಿದರು. ಅವರಿಂದ ಚೀನಾದ ಜನರಲ್‌ಗೆ ಒಂದು ಪರಿಚಯ ಪತ್ರ ಪಡೆದೆ. ಮೇ ತಿಂಗಳಲ್ಲಿ ಹಡಗುಗಳು ಬರುತ್ತವೆ ಎಂದು ಗೊತ್ತಾಯಿತು. ಅಲ್ಲಿಯುವರೆಗೆ ಗೋವೆಯಲ್ಲಿ ಹಾಯಾಗಿ ಕಾಲಕಳೆದೆ.

ನನ್ನ ಆರ್ಮೀನಿಯನ್ ಸೇವಕ ನನ್ನೊಡನೆ ಚೀನಾಕ್ಕೆ ಬರಲು ಒಪ್ಪಲಿಲ್ಲ. ಆದ್ದರಿಂದ ನಾನು ಒಬ್ಬ ಕರಿಯ ಕಾಫಿರನನ್ನು ಹಣಕ್ಕೆ ಕೊಂಡುಕೊಂಡೆ. ಚೀನಾಕ್ಕೆ ಹೋಗುವ ಹಡಗುಗಳು ಆಗಲೇ ಗೋವೆಗೆ ಬಂದಿದ್ದುವು.

ಮೇ ೧೪ನೆಯ ತಾರೀಖು ಶನಿವಾರ ನನಗೆ ಬೇಕಾದವರಿಗೆಲ್ಲ ವಂದನೆಗಳನ್ನು ಸಲ್ಲಿಸಿ ಹಡಗಿಗೆ ಹೋದೆ. ೧೬ನೆಯ ತಾರೀಖು ಹಡಗುಗಳು ಹೊರಟವು. ೨೩ರಂದು ಕೊಚಿನ್ ತಲುಪಿದಾಗ ಭಾರೀ ಮಳೆ, ಬಿರುಗಾಳಿ. ೨೪ನೆಯ ತಾರೀಖು ಕೇಪ್ ಕಾಮೊರಿನ್ ಸಮೀಪಿಸಿದೆವು. ೨೫ರಂದು ಗೋವೆಯಿಂದ ೬೦೦ ಮೈಲಿಗಳಷ್ಟು ದೂರ ಯಾನ ಮಾಡಿ ಸಿಲೋನ್ ದಾಟಿ ಬಂಗಾಳ ಸಮುದ್ರವನ್ನು ಪ್ರವೇಶಿಸಿದೆವು. ಜೂನ್ ತಿಂಗಳು ೩ನೆಯ ತಾರೀಖು ಆ ಸಮುದ್ರದಲ್ಲಿ ನಿಕೊಬಾರ್ ಅಂಡಮಾನ್ ದ್ವೀಪಗಳನ್ನು ನೋಡಿದೆವು. ಹಡಗುಗಳು ಮಲೆಕ್ಕಾಕ್ಕೆ ಯಾನ ಮಾಡಿದುವು.

# ಜಾನ್ ಫ್ರೈಯರ್

ಡಾ॥ ಜಾನ್ ಫ್ರೈಯರ್ (Dr. John Fryer] ಎಂ.ಡಿ.ಎಫ್.ಆರ್.ಎಸ್. ಎಂಬೀತ ಲಂಡನ್ ವಿಲ್ಲಿಯಂ ಫ್ರೈಯರ್ ಎಂಬುವನ ಮಗ. ಹುಟ್ಟಿದ್ದು ೧೬೫೦ರಲ್ಲಿರಬಹುದೆಂದು ಗೊತ್ತಾಗುತ್ತದೆ. ಫ್ರೈಯರ್ ತನ್ನ ಪ್ರವಾಸಕಥನದಲ್ಲಿ ಸ್ವಂತ ವಿಷಯಗಳನ್ನೇ ಆಗಲಿ ಮನೆತನದ ವಿಷಯಗಳನ್ನೇ ಆಗಲಿ ಹೇಳಿಕೊಳ್ಳುವುದಿಲ್ಲ. ಹೀಗಾಗಿ ಆತನ ಬಗ್ಗೆ ಹೆಚ್ಚು ವಿಷಯಗಳು ದೊರೆಯುವುದಿಲ್ಲ. ೧೬೦೦ ನೆಯ ಇಸವಿಯ ಕೊನೆಯ ದಿನ ಎಲಿಜಬೆತ್ ರಾಣಿಯಿಂದ ಅಸ್ತಿತ್ವ ಪಡೆದ ಈಸ್ಟ್ ಇಂಡಿಯಾ ಕಂಪೆನಿಯ ಸಂಪರ್ಕ ಜಾನ್ ಫ್ರೈಯರ್‌ನ ಹಿರಿಯರಿಗೆ ಇದ್ದಿರಬಹುದೆಂದು ಊಹಿಸಲಾಗಿದೆ.

ಜಾನ್ ಫ್ರೈಯರ್‌ನ ವಿದ್ಯಾಭ್ಯಾಸವು ಕೆಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜಿನಲ್ಲಿ ಆಯಿತು. ೧೬೬೪ರಲ್ಲಿ ಕಾಲೇಜು ಸೇರಿದ ಈತ ೧೬೭೧ರಲ್ಲಿ ಎಂ. ಬಿ. ಡಿಗ್ರಿ ಪಡೆದು ೧೬೮೩ರಲ್ಲಿ ಎಂ.ಡಿ. ಡಿಗ್ರಿ ಪಡೆದ. ಈ ಕಾಲೇಜಿನೊಡನೆ ಈತ ಕೊನೆಯವರೆಗೂ ಸಂಪರ್ಕ ಇಟ್ಟುಕೊಂಡಿದ್ದಂತೆ ಕಾಣುತ್ತದೆ. ಏಕೆಂದರೆ, ತನ್ನ ಪ್ರವಾಸ ಕಥನದ ಪ್ರತಿಯನ್ನು ೧೬೯೮ರಲ್ಲಿ ಕಾಲೇಜಿನ ಪುಸ್ತಕ ಭಂಡಾರಕ್ಕೆ ಒಪ್ಪಿಸಿದ ದಾಖಲೆ ಇದೆ. ಈತನು ರಾಯಲ್ ಕಾಲೇಜು ಆಫ್ ಫಿಜಿಸಿಯನ್ ಎಂಬ ಮಹಾ ಸಂಸ್ಥೆಯ ಸದಸ್ಯನೂ ಆಗಿದ್ದನೆಂದು ಹೇಳುತ್ತಾರೆ. ಆದರೆ ಇದಕ್ಕೆ ಸರಿಯಾದ ಆಧಾರಗಳಿಲ್ಲ. ೧೬೭೧ರಲ್ಲಿ ತನ್ನ ಮೊದಲ ಡಿಗ್ರಿ ಪಡೆದ ಮಾರನೆಯ ವರ್ಷ ಜಾನನನ್ನು ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಸರ್ಜನ್ ಆಗಿ ನೇಮಿಸಿಕೊಳ್ಳಲಾಯಿತು. ತಲಬು ತಿಂಗಳಿಗೆ ೫೦ ಷಿಲ್ಲಿಂಗ್. ಅದೇ ವರ್ಷದ ಡಿಸೆಂಬರ್ ೯ರಂದು ಈತ ಇಂಗ್ಲೆಂಡಿನಿಂದ ಯೂನಿಟಿ ಎಂಬ ಹಡಗಿನಲ್ಲಿ ಇಂಡಿಯಾಕ್ಕೆ ಹೊರಟ. ಈ ಹಡಗಿನ ಜೊತೆ ಇನ್ನೂ ಒಂಬತ್ತು ಹಡಗುಗಳು ಹೊರಟವು. ಹಲವಾರು ತೊಂದರೆಗಳನ್ನು ಎದುರಿಸಿ ಇಂಡಿಯಾ ದೇಶವನ್ನು ಸಮೀಪಿಸಿದ. ಈ ಹಡಗು ತಂಡ ೧೬೭೩ನೆಯ ಜೂನ್ ೧೬ರಂದು ಸಿಲೋನ್ ದ್ವೀಪವನ್ನು ಹಾದು ಮಚ್ಛಲಿಪಟ್ಟಣದ ಕಡೆಗೆ ತನ್ನ ಯಾನ ಮುಂದುವರಿಸಿತು. ಹಡಗಿನಲ್ಲಿ ತಂದಿದ್ದ ಕಂಪೆನಿಯ ಹಣವನ್ನು ಇಳಿಸುವುದೇ ಅಲ್ಲಿಗೆ ಹೋದ ಉದ್ದೇಶವಾಗಿತ್ತು. ಆ ಸ್ಥಳವನ್ನು ೨೬ರಂದು ಮುಟ್ಟಿ ಭಂಡಾರವನ್ನು ಇಳಿಸಲಾಯಿತು. ಒಂದು ತಿಂಗಳು ಹಡಗುಗಳು ಇಲ್ಲಿ ತಂಗಿದ್ದವು. ಆ ವೇಳೆಯಲ್ಲಿ ಜಾನ್ ಫ್ರೈಯರ್ ಹಡಗಿನಿಂದ ತೀರಕ್ಕೆ ಹೋಗಿ ಮಚ್ಛಲಿಪಟ್ಟಣವನ್ನು ನೋಡಿ ಕೆಲವು ಉಪಯುಕ್ತ ಸಂಗತಿಗಳನ್ನು ಸಂಗ್ರಹಿಸಿದ. ಮಚ್ಛಲಿಪಟ್ಟಣದಿಂದ ಮದ್ರಾಸಿಗೆ ಬಂದ ಹಡಗುತಂಡ ಡಚ್ಚರ ಹಡಗುಗಳ ಧಾಳಿಯನ್ನು ಎದುರಿಸಬೇಕಾಯಿತು. ಈ ಧಾಳಿಯಿಂದ ಇಂಗ್ಲಿಷರ ಒಂದು ಹಡಗು ಮುಳುಗಿಹೋಯಿತು. ಎರಡು ಹಡಗುಗಳು ಡಚ್ಚರ ಕೈವಶವಾದುವು. ಉಳಿದ ಹಡಗುಗಳಿಗೆ ಆದ ಜಖಂ ಸರಿಪಡಿಸಿಕೊಂಡ ನಂತರ ಅಲ್ಲಿರುವುದು ಸರಿಯಲ್ಲವೆಂದೂ, ಅಲ್ಲದೆ ಈಶಾನ್ಯ ಮಾರುತಗಳ ತೊಂದರೆಯಿಂದ ಪಾರಾಗಲೂ ಹಡಗುಗಳು ಮಲಬಾರ್ ತೀರಕ್ಕೆ ಹೋದವು. ಜಾನ್ ಫ್ರೈಯರ್ ಮತ್ತೆ ಕೇಪ್ ಕಾಮೊರಿನ್ ಬಳಸಿ ತಾನೂರು, ಕ್ಯಾಲಿಕಟ್, ಹೊನ್ನಾವರ, ಮಿರ್ಜಾ ಎಂಬೀ ಊರುಗಳನ್ನು ಕಂಡು ಗೋವಾ ದಾಟಿ ೧೬೭೩ನೆಯ ಡಿಸೆಂಬರ್ ೯ನೆಯ ತಾರೀಖು ಬೊಂಬಾಯಿ ತಲುಪಿದ. ಇಲ್ಲಿಗೆ ಇಂಗ್ಲೆಂಡಿನಿಂದ ಹೊರಟು ಸರಿಯಾಗಿ ಒಂದು ವರ್ಷ ಆಗಿತ್ತು.

ಈ ವೇಳೆಗಾಗಲೇ ಬೊಂಬಾಯಿ ದ್ವೀಪವೂ ಅದರ ಅಧೀನ ಪ್ರದೇಶಗಳೂ ಇಂಗ್ಲಿಷರ ಕೈವಶವಾಗಿದ್ದವು. ಜಾನನು ಮಾಡಿದ ಅಂದಿನ ಬೊಂಬಾಯಿ ವರ್ಣನೆ ತುಂಬಾ ಸ್ವಾರಸ್ಯವಾಗಿದೆ. ಬೊಂಬಾಯಿಗೆ ಸಮೀಪದಲ್ಲಿದ್ದ ಕಾನೇರಿ ದ್ವೀಪವನ್ನೂ, ಅಲ್ಲಿದ್ದ ಬೌದ್ಧ ಗುಹೆಗಳನ್ನೂ ಸಂದರ್ಶಿಸಿ ಅವುಗಳ ವರ್ಣನೆ ಮಾಡಿದ್ದಾನೆ. ಮತ್ತು ೧೬೭೪ರಲ್ಲಿ ರಾಯಗಢದಲ್ಲಿ ಸಿಂಹಾಸನವನ್ನೇರಿದ ಶಿವಾಜಿಯ ಆಸ್ಥಾನದ ವಿಷಯವನ್ನೂ ತಿಳಿಸಿದ್ದಾನೆ.

ಮಳೆಗಾಲ ಕಳೆದ ಮೇಲೆ ಇಂಗ್ಲಿಷ್ ಪ್ರೆಸಿಡೆಂಟರು ಜಾನನನ್ನು ಸೂರತ್ತಿಗೆ ವರ್ಗ ಮಾಡಿದರು. ಅಲ್ಲಿಗೆ ಹೋದ ಜಾನ್ ಅಲ್ಲಿಯ ಇಂಗ್ಲಿಷ್ ಕಂಪೆನಿಯ ಬಗೆಗೂ ಊರಿನ ಜನರ ನಡೆನುಡಿಗಳ ಬಗೆಗೂ ಸ್ವಾರಸ್ಯವಾದ ಸಂಗತಿಗಳನ್ನು ಬರೆದಿದ್ದಾನೆ.

೧೬೭೫ನೆಯ ಏಪ್ರಿಲ್ ೪ರಂದು ಬೊಂಬಾಯಿಗೆ ಹಿಂದಿರುಗಿದ ಜಾನ್ ಅದೇ ತಿಂಗಳ ೨೩ನೆಯ ತಾರೀಖು ಬೊಂಬಾಯಿ ಗೌರ್ನರ್‌ನ ಅಪ್ಪಣೆಯಂತೆ ಪುಣೆ ಜಿಲ್ಲೆಯಲ್ಲಿರುವ ಜುನಾಘಡಕ್ಕೆ ಹೋದ. ಅಲ್ಲಿದ್ದ ಮೊಗಲ್ ನವಾಬನಿಗೆ ಜಾನನ ವೈದ್ಯಕೀಯ ಸೇವೆಯ ಅವಶ್ಯಕತೆ ಇತ್ತು. ಕಲ್ಯಾಣದ ಮೂಲಕ ಪಶ್ಚಿಮಘಟ್ಟಗಳನ್ನು ದಾಟಿ ಜುನಾಘಡಕ್ಕೆ ಹೋಗಿ ಅಲ್ಲಿ ತನ್ನ ಕೆಲಸ ಮುಗಿಸಿಕೊಂಡು ಬೇರೊಂದು ದಾರಿಯ ಮೂಲಕ ಥಾಣಾಕ್ಕೆ ಹಿಂದಿರುಗಿದನು.

ಅದೇ ವರ್ಷ ಮಳೆಗಾಲ ಮುಗಿದನಂತರ ಜಾನ್ ಕೇವಲ ಕುತೂಹಲಕ್ಕಾಗಿ ಕಾರವಾರದಲ್ಲಿದ್ದ ಫ್ಯಾಕ್ಟೊರಿ ಮುಖ್ಯಸ್ಥನೊಡನೆ ಅಲ್ಲಿಗೆ ಹೋಗಿ, ಅಲ್ಲಿಂದ ಗೋವಾಕ್ಕೂ ಹೋಗಿ, ಅಲ್ಲಿ ಕ್ರಿಸ್‌ಮಸ್ ಹಬ್ಬ ಕಳೆದು ೧೬೭೬ ಫೆಬ್ರವರಿ ೨ರಂದು ಕಾರವಾರಕ್ಕೆ ಹಿಂದಿರುಗಿದ.

ಕಾರವಾರದ ಇಂಗ್ಲಿಷ್ ದಲ್ಲಾಳಿಗಳ ಜೊತೆ ಸೇರಿಕೊಂಡು ಜಾನನು ಗೋಕರ್ಣಕ್ಕೆ ಹೋದನು. ಬೊಂಬಾಯಿಯ ಗೌರ್ನರ್ ಕಾಯಿಲೆಬಿದ್ದ ಕಾರಣ ಆತನನ್ನು ನೋಡಲು ಜಾನನು ಗೋಕರ್ಣದಿಂದ ಬೊಂಬಾಯಿಗೆ ಮರುಪ್ರಯಾಣಮಾಡಿದ. ಆದರೆ ಹವಾಮಾನದ ಕಾರಣ ಸಮುದ್ರದ ಮೇಲಿನ ಪ್ರಯಾಣವನ್ನು ಮುಂದುವರಿಸುವುದು ಸಾಧ್ಯವಾಗದೆ ಕಾರವಾರಕ್ಕೆ ಹೋಗಬೇಕಾಯಿತು. ಅಲ್ಲಿ ಮಳೆ ಮುಗಿಯುವವರೆಗೂ ಇದ್ದನು. ಇಷ್ಟರಲ್ಲಿ ಕಾಯಿಲೆಬಿದ್ದಿದ್ದ ಬೊಂಬಾಯಿ ಗೌರ್ನರ್ ಕಾಲವಾಗಿದ್ದ. ಅವನ ಸ್ಥಾನದಲ್ಲಿ ಬೇರೊಬ್ಬ ಗೌರ್ನರ್‌ನ ನೇಮಕ ಆಗಿತ್ತು. ಜಾನ್ ಬೊಂಬಾಯಿಗೆ ಹೊರಟ. ದಾರಿಯಲ್ಲಿ ಮತ್ತೆ ಗೋವಾಕ್ಕೆ ಹೋಗಿ ಡಿಸೆಂಬರ್ ೧೧ ರಂದು ಸೂರತ್ ತಲುಪಿದ. ಈ ನಡುವೆ ಇಂಗ್ಲೆಂಡಿನಲ್ಲಿದ್ದ ಕಂಪೆನಿಯಿಂದ ಸೂರತ್ತಿನ ಕಂಪೆನಿಗೆ ಒಂದು ಆಜ್ಞೆ ಬಂದಿತ್ತು. 'ಸರ್ಜನ್ ಆಗಿ ನಾವು ನೇಮಿಸಲ್ಪಟ್ಟಿರುವ ಮಿಸ್ಟರ್ ಫ್ರೈಯರ್ ಅವರ ವಾಯಿದೆ ಮುಗಿದಿರುವ ಕಾರಣ ಅವರ ತಲಬನ್ನು ತಿಂಗಳಿಗೆ ಮೂರು ಪೌಂಡುಗಳಂತೆ ನಿಗದಿ ಮಾಡಲಾಗಿದೆ' ಎಂಬುದೇ ಆ ಆಜ್ಞೆ.

ಸೂರತ್ತಿಗೆ ಬಂದ ಕೂಡಲೇ ಜಾನನಿಗೆ ಪರ್ಷಿಯಾಕ್ಕೆ ಹೋಗುವ ಅವಕಾಶ ಒದಗಿಬಂತು. ಪರ್ಷಿಯಾದ ಇಂಗ್ಲಿಷ್ ಏಜೆಂಟ್‌ನಿಂದ ಪತ್ರವೊಂದು ಬಂದಿತ್ತು. ಆ ಪತ್ರದಲ್ಲಿ ಇಂಗ್ಲಿಷರ ವ್ಯಾಪಾರ ಕುದುರಿಸಲು ಪರ್ಷಿಯನ್‌ಖಾರಿಯಲ್ಲಿ ಸರ್ಜನ್ ಆದ ಜಾನ್ ಫ್ರೈಯರ್‌ನ ಸಹಾಯ ಬೇಕಾಗಬಹುದೆಂದು ತಿಳಿಸಲಾಗಿತ್ತು. ಈ ಕಾರಣ ಫ್ರೈಯರ್ ಪರ್ಷಿಯಾಕ್ಕೆ ಹೊರಟು ೧೬೭೭ನೆಯ ಮಾರ್ಚಿ ೨೨ರಂದು ಅಲ್ಲಿಯ ಬಂದರ್ ಅಬ್ಬಾಸ್ ತಲುಪಿದ. ಅಲ್ಲಿಂದ ಹೊರಟು ಭೂಮಾರ್ಗವಾಗಿ ಆಗಸ್ಟ್ ೭ ನೆಯ ತಾರೀಖು ಪರ್ಷಿಯಾದ ರಾಜಧಾನಿ ಇಸ್ಫಹಾನ್ ಮುಟ್ಟಿದ. ಅಲ್ಲಿದ್ದ ಯೂರೋಪಿಯನ್ ಜನರಿಗೆ ವೈದ್ಯಕೀಯ ಸೌಕರ್ಯ ನೀಡುತ್ತಾ ಕೆಲವು ಕಾಲ ಇದ್ದವನು ಅಲ್ಲಿಯ ಹವಾ ಒಗ್ಗದೆ ಅವನೇ ಕಾಯಿಲೆ ಮಲಗಿದ. ಇಷ್ಟರಲ್ಲಿ ಸೂರತ್ತಿನಲ್ಲಿದ್ದ ಇಂಗ್ಲಿಷ್ ಅಧ್ಯಕ್ಷನು ಕಾಲವಾದನು. ಅವನ ಸ್ಥಾನಕ್ಕೆ ನೇಮಿಸಲ್ಪಟ್ಟ ಅಬ್ಬಾಸ್ ಬಂದರಿನಲ್ಲಿದ್ದ ಏಜೆಂಟ್ ಸೂರತ್ತಿಗೆ ಹೋಗಬೇಕಾಯಿತು. ಆತನ ಸ್ಥಾನಕ್ಕೆ ಇಸ್ಫಹಾನ್‌ನಲ್ಲಿದ್ದವನು ಬಂದರ್ ಅಬ್ಬಾಸಿಗೆ ಬಂದನು. ಆತನ ಜೊತೆ ಫ್ರೈಯರ್‌ನೂ ಹೋದನು. ಈಗ ಆತ ಕಾಯಿಲೆಯಿಂದ ಗುಣಮುಖನಾಗಿದ್ದ. ಅಲ್ಲಿಂದ ಫ್ರೈಯರ್ ಮತ್ತೆ ಷಿರಾಜಿಗೆ ಬಂದ. ಇಲ್ಲಿ ಮತ್ತೆ ಕಾಯಿಲೆ ಮಲಗಿದ. ಗುಣವಾದ ನಂತರ ಇಸ್ಫಹಾನಿಗೆ ಹೋದ. ಅಲ್ಲಿ ಕೊಂಚ ಕಾಲ ಇದ್ದವನು ಮತ್ತೆ ಸೂರತ್ತಿಗೆ ೧೬೭೯ನೆಯ ಜನವರಿ ೬ ರಂದು ಬಂದ. ಇಲ್ಲಿ ಕೆಲವು ಕಾಲ ಕಂಪೆನಿ ಸರ್ಜನ್ ಆಗಿದ್ದು ೧೬೮೨ನೆಯ ಜನವರಿ ೧೫ರಂದು ಇಂಗ್ಲೆಂಡಿಗೆ ಹೊರಟು ತನ್ನ ತಾಯ್ನಾಡನ್ನು ಅದೇ ವರ್ಷದ ಆಗಸ್ಟ್ ೨೦ ರಂದು ತಲುಪಿದನು. ಆಗ ಜಾನನಿಗೆ ಇನ್ನೂ ಮೂವತ್ತೆರಡು ವರ್ಷ ವಯಸ್ಸು. ಮದುವೆಯ ಯೋಚನೆಯಾಯಿತು. ಮದುವೆ ಆದ. ಒಳ್ಳೆಯ ಮನೆತನದ ಹೆಣ್ಣೇ ಆತನಿಗೆ ಸಿಕ್ಕಿತು. ಮದುವೆ ಆದ ಆತನಿಗೆ ಒಂದು ಹೆಣ್ಣುಮಗು ಆಯಿತು. ಆಕೆಯೇ ಅನಂತರ ತಂದೆಯ ಆಸ್ತಿಗೆ ವಾರಸುದಾರಳಾದಳು. ಬಹುಶಃ ಹೆಂಡತಿ ಈ ಮೊದಲೇ ತೀರಿಕೊಂಡಿರಬೇಕೆಂದು ಕಾಣುತ್ತದೆ. ಇಂಗ್ಲೆಂಡಿಗೆ ಹಿಂದಿರುಗಿದ ಹದಿನೈದು ವರ್ಷಗಳ ನಂತರ ಆತನನ್ನು ರಾಯಲ್ ಸೊಸೈಟಿಯ ಫೆಲೋ ಆಗಿ ಆರಿಸಲಾಯಿತು. ಯಾವ ಕಾರಣದಿಂದ ಈ ಗೌರವ ಆತನಿಗೆ ಸಂದಿತು ಎಂಬುದನ್ನು ತಿಳಿಯಲು ಯಾವ ದಾಖಲೆಗಳೂ ಇಲ್ಲ. ಬಹುಶಃ ವೈದ್ಯವೃತ್ತಿಯಲ್ಲಿ ಆತನ ಸ್ಥಾನ ಮತ್ತು ಆತನಿಗೆ ಇದ್ದ ವೈಜ್ಞಾನಿಕ

ಆಸಕ್ತಿಯ ಕಾರಣ ಈ ಗೌರವ ಸಂದಿರಬಹುದು. ೧೭೦೭ರ ವರೆಗೂ ಫ್ರೈಯರ್ ಫೆಲೋ ಆಗಿದ್ದ. ಅನಂತರ ಬಹಳ ಕಾಲದ ಮೇಲೆ ಅಂದರೆ ೧೭೩೩ನೆಯ ಮಾರ್ಚ್ ೩೧ರಂದು ಆತ ಕಾಲವಾದ. ಕಾಲವಾದಾಗ ಆತನ ವಯಸ್ಸು ೮೩.

ಫ್ರೈಯರನಿಗೆ ಮುಂಚೆ ತ್ಯವರ್ನ್ಯೇ, ಬೆರ್ನ್ಯೆ, ಸರ್ ಥಾಮಸ್ ಹೆರ್ಬರ್ಟ್, ಲಿನ್‌ಷೋಟೆನ್—ಇವರೆಲ್ಲ ಇಂಡಿಯಾ ದೇಶಕ್ಕೆ ಬಂದು ತಮ್ಮ ಪ್ರವಾಸಕಥನಗಳನ್ನು ಬರೆದು ಪ್ರಕಟಿಸಿದ್ದರು. ಇವನ್ನೆಲ್ಲ ಫ್ರೈಯರ್ ನೋಡಿರಬೇಕು.

ಫ್ರೈಯರನ ಪ್ರವಾಸಕಥನ ಆತನು ಆಗಾಗ್ಗೆ ಬರೆದ ಪತ್ರಗಳ ಮೂಲಕ ಮೈದೋರಿಕೊಂಡಿದೆ. ಈ ಪತ್ರಗಳನ್ನು ಯಾರಿಗೆ ಬರೆದನೆಂಬುದು ತಿಳಿಯುವುದಿಲ್ಲ. ಆದರೆ ಆ ಪತ್ರಗಳನ್ನು ಓದಿದಾಗ ಯಾರೋ ಒಬ್ಬ ಗಣ್ಯನೂ ದೊಡ್ಡ ವಿದ್ಯಾವಂತನೂ ಆದವನಿಗೆ ಬರೆದಿರಬೇಕೆಂದು ತಿಳಿಯುತ್ತದೆ. ಎಂಟು ಪತ್ರಗಳನ್ನು ಫ್ರೈಯರ್ ಬರೆದು ಕಳುಹಿಸಿದ. ಈ ಪತ್ರಗಳ ಜೊತೆಗೆ ಆತ ತನ್ನ ಟಿಪ್ಪಣಿ ಪುಸ್ತಕ ಅಥವಾ ದಿನಚರಿಯಲ್ಲಿ ತಾನು ಕಂಡು ಕೇಳಿದ ಸಂಗತಿಗಳನ್ನು ಬರೆದುಕೊಂಡಿರಬೇಕು. ಇವೆಲ್ಲವುಗಳನ್ನು ಉಪಯೋಗಿಸಿಕೊಂಡು ಆತ ತನ್ನ ಮೊದಲ ಪತ್ರಗಳನ್ನು ತಿದ್ದಿ, ಮತ್ತೆ ಬರೆದು ಪ್ರಕಟನೆಗೆ ಅಣಿಮಾಡಿರಬೇಕು. ಅಂತೂ ೧೬೯೮ರಲ್ಲಿ ಮೊಟ್ಟಮೊದಲ ಬಾರಿಗೆ ಆತನ ಪತ್ರಗಳ ಪ್ರವಾಸಕಥನ ಪ್ರಕಟವಾಯಿತು. ಇಂಡಿಯಾದಲ್ಲಿ ಫ್ರೈಯರನ ಪ್ರವಾಸ ಕೇವಲ ಸಮುದ್ರ ತೀರದ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ಅವನು ಹೋಗಿ ಬಂದ ಒಳನಾಡಿನ ಊರೆಂದರೆ ಬೊಂಬಾಯಿಂದ ಸುಮಾರು ೭೫ ಮೈಲಿ ದೂರದಲ್ಲಿರುವ ಜುನಾಘಡ ಒಂದೇ. ಆದರೂ ಆತನ ಪ್ರವಾಸಕಥನ ಬಹು ಉಪಯುಕ್ತವಾಗಿದೆ. ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳೂ ಬರುತ್ತಿದ್ದ ಕಾರಣ ತನ್ನ ಕಥನದ ತುಂಬು ಆ ಭಾಷೆಗಳ ಉಕ್ತಿಗಳನ್ನು ಧಾರಾಳವಾಗಿ ಉದ್ಧರಿಸುತ್ತಾನೆ.

ಫ್ರೈಯರ್ ಒಬ್ಬ ಮಾದರಿ ಪ್ರವಾಸಿ ಎಂದು ಹೇಳಬಹುದು. ಘನತೆ ಗೌರವಗಳ ನಡತೆ ಆತನದು, ಮೇಲಾಗಿ ತಮಾಷೆಯ ಮನುಷ್ಯ. ಕಾಣದ ದೇಶಗಳ ನಡೆ-ನುಡಿಗಳೂ ಅಲ್ಲಿಯ ಸ್ಥಿತಿಗತಿಗಳೂ ಬಿಳಿಯರಿಗೆ ತಾಪತ್ರಯವೇ ಸರಿ. ಆದರೆ ಅವನ್ನೆಲ್ಲಾ ಫ್ರೈಯರ್ ಹಗುರವಾಗಿಯೇ ಭಾವಿಸಿದನು. ಲಂಡನ್‌ನಲ್ಲಿ ಹುಟ್ಟಿ ಬೆಳೆದ ಆತ ಪಶ್ಚಿಮಘಟ್ಟವನ್ನು ಹತ್ತುವಾಗ ಅನುಭವಿಸಿದ ಕಷ್ಟದ ವರ್ಣನೆ ಅಷ್ಟೇನೂ ಉತ್ಪ್ರೇಕ್ಷೆ ಅಲ್ಲ ಎಂದೇ ಹೇಳಬೇಕು. ಇನ್ನು ಇಂಡಿಯಾ ದೇಶದ ಜನರ ಬಗ್ಗೆ ಆತನ ಭಾವನೆ ಅಷ್ಟೇನೂ ಹಿತಕರವಾಗಿಲ್ಲ. ಇಲ್ಲಿಯ ಜನರ ಆಚಾರ–ವಿಚಾರ ಅವನಿಗೆ ಹಿಡಿಸದೆ ಅವನ್ನು ಒಂದು ಬಗೆಯ ತಾತ್ಸಾರದಿಂದ ಟೀಕಿಸಿರುವುದು ಸರಿಯಲ್ಲವೆಂದು ನಮಗೆ ಕಂಡರೂ ಈ ಪರಕೀಯನು ಬೆಳೆದ ಬೇರೆ ಪರಿಸರವನ್ನು ಗಮನಿಸಿದರೆ ಅವನನ್ನು ಕ್ಷಮಿಸಬೇಕಾಗುತ್ತದೆ. ಇಲ್ಲಿಯ ಜನರ ಧರ್ಮ, ಆಚಾರ–ವಿಚಾರ ಹಾಗೂ ಜಾನಪದದ ಬಗ್ಗೆ ಆತನ ಅಭ್ಯಾಸ ಅಮೂಲ್ಯವಾದುದೆಂದೇ ಹೇಳಬೇಕು. ಇಂದು ನಮಗೆ ವಿಚಿತ್ರವಾಗಿ ಕಾಣುವ ಮೂಢನಂಬಿಕೆಗಳು ಆ ವಿದೇಶಿಯನಿಗೆ ಇಲ್ಲಿಗೆ ಮುನ್ನೂರು ವರ್ಷಗಳ ಮುಂಚೆ ಇನ್ನೂ ವಿಚಿತ್ರವಾಗಿ ಕಂಡುದು ಅಚ್ಚರಿಯೇನಲ್ಲ. ಒಟ್ಟಿನಲ್ಲಿ, ಒಂದು ಅಮೂಲ್ಯವಾದ ಪ್ರವಾಸಕಥನವನ್ನು ಫ್ರೈಯರ್ ನಮಗೆ ಬಿಟ್ಟುಹೋಗಿದ್ದಾನೆ. ಬೆರ್ನ್ಯೆ, ತವರ್ನ್ಯೇ ಮತ್ತು ಮನೂಚಿ ಇವರ ಪ್ರವಾಸ ಕಥನಗಳಷ್ಟು ಸ್ವಾರಸ್ಯವಿಲ್ಲದಿದ್ದರೂ ಉಪಯುಕ್ತವಾದ ಪ್ರವಾಸಕಥನ ಫ್ರೈಯರನದು.

ಮೊದಲನೆಯ ಪತ್ರ :

ಮಹನೀಯರೇ,

ತಾವು ಸಮುದ್ರಯಾನ ಮಾಡಲಿರುವ ಈ ಸ್ನೇಹಿತನ ಮೇಲೆ ಪ್ರೀತಿಯಿಟ್ಟು, ಮತ್ತು ನಾನು ಈ ದೀರ್ಘ ಸಮುದ್ರಯಾನದಿಂದ ಹಿಂದಿರುಗುವುದು ಅಸಂಭವವೆಂದು

ಭಾವಿಸಿ ನನ್ನನ್ನು ಹಡಗಿನಲ್ಲಿ ಕಂಡು ವಿದಾಯ ಹೇಳಿದಿರಿ. ತಾವು ತೋರಿದ ಪ್ರೀತಿ ವಿಶ್ವಾಸಗಳಿಗೆ ಪ್ರತಿಯಾಗಿ ಸಮುದ್ರಯಾನದಲ್ಲಿ ನಡೆದ ಸಂಗತಿಗಳನ್ನು ತಮಗೆ ತಿಳಿಸು ವುದು ನನ್ನ ಕರ್ತವ್ಯವಾಗಿದೆ. ಅದನ್ನೀಗ ಮಾಡುತ್ತಿದ್ದೇನೆ.

ನಾನು ಈಸ್ಟ್ ಇಂಡಿಯಾ ಕಂಪೆನಿ ಅಪ್ಪಣೆ ಮೇರೆಗೆ ೧೬೭೨ನೆಯ ಡಿಸೆಂಬರ್ ೯ನೆಯ ತಾರೀಖು 'ಯೂನಿಟಿ' ಎಂಬ ಹಡಗಿನಲ್ಲಿ ಹೊರಟಿದ್ದು ತಮಗೆ ಜ್ಞಾಪಕ ಇರಬಹುದು. 'ಲಂಡನ್' ಎಂಬ ಅಡ್ಮಿರಲ್ (Admiral) ಹಡಗು ಮತ್ತು ಇನ್ನಿತರ ಒಂಬತ್ತು ಹಡಗುಗಳು ಸೇರಿ 'ಈಸ್ಟ್ ಇಂಡಿಯಾ' ಎಂಬ ಹತ್ತು ಹಡಗುಗಳ ಪಡೆ (Fleet) ಎರಡನೆಯ ಚಾರ್ಲ್ಸ್ ದೊರೆಯಿಂದ ವ್ಯಾಪಾರದ ಅನುಮತಿ ಪಡೆದು ಹೊರಡಲು ಸಿದ್ಧವಾಯಿತು. ಈ ಅನುಮತಿಯ ಪ್ರಕಾರ ಹಡಗುಗಳು ದೊರೆಯ ಬಾವುಟ ಹಾರಿಸಬಹುದೆಂದೂ, ಈಗ ಇಂಗ್ಲಿಷರೂ ಫ್ರೆಂಚರೂ ಡಚ್ಚರ ಬಗ್ಗೆ ಬಹಿರಂಗ ಯುದ್ಧ ಘೋಷಿಸಿರುವುದರಿಂದ ನಾವು ಯುದ್ಧಯೋಧರಂತೆ ವರ್ತಿಸಬೇಕೆಂದೂ ತಿಳಿಸಲಾಗಿತ್ತು.

ಹವೆಯ ಏರುಪೇರುಗಳಿಂದಾಗಿ ನಾವು ಕಿಂಗ್ಸ್ ಚಾನೆಲ್ (Kings Channel = ಇಂಗ್ಲಿಷ್ ಕಡಲುಗಾಲುವೆ) ಮುಖಾಂತರ ಡೌನ್ (Down)[೧] ಮುಟ್ಟಲು ಹೊಸ ವರ್ಷವೇ ಆರಂಭವಾಯಿತು. ಹೊಸ ವರ್ಷದ ಹರುಷದಿಂದ ನಮ್ಮ ಮುಂದಿನ ಯಾನವನ್ನು ಆರಂಭಿಸಬೇಕೆನ್ನುವಷ್ಟರಲ್ಲಿ ನೈರುತ್ಯದ ಗಾಳಿ ಅದಕ್ಕೆ ಅಡ್ಡಿ ತಂದಿತು. ಮೂರು ವಾರ ಇದ್ದಕಡೆಯೇ ಇರಬೇಕಾಯಿತು. ಪೂರ್ವ ದಿಕ್ಕಿನ ಗಾಳಿ ಬೀಸಲಾರಂಭಿಸಿದ ಮೇಲೆ ನಾವು ಸಮುದ್ರಯಾನವನ್ನು ಆರಂಭಿಸಿದೆವು. ಬಿಸ್ಕೆ ಕೊಲ್ಲಿಯ ಬೆಟ್ಟದೆತ್ತರದ ಅಲೆಗಳ ಮೇಲೆ ಏರಿಳಿದು ಅಟ್ಲಾಂಟಿಕ್ ಸಾಗರದ ಕಡೆ ಹೊರಟೆವು. ಜಿಬ್ರಾಲ್ಟರ್ ಭೂಶಿರ ದಾಟಿ, ಮಳೆ ಗಾಳಿ ಚಳಿಗಳ ಹಾವಳಿಯಿಂದ ಪಾರಾಗಿ ಸಾವೋ ಥಿಯಾಗೋ (Sao Thiago) ಎಂಬ ದ್ವೀಪ ತಲುಪಿದೆವು.

ಮಧ್ಯಾಹ್ನ ನಾನು ಹಡಗು ಇಳಿದು ಎರಡು ಮೈಲಿ ದೂರದಲ್ಲಿದ್ದ ತೀರಕ್ಕೆ ಹೋದೆ. ಇಲ್ಲಿ ಒಳ್ಳೆಯ ನೀರು ದೊರೆಯುತ್ತದೆ. ತೀರದಲ್ಲಿ ಸ್ಥಳದ ನಿವಾಸಿಗಳ ಹಿಂಡೇ ನಮ್ಮನ್ನು ಎದುರುಗೊಂಡಿತು. ತಮ್ಮಲ್ಲಿ ದೊರೆಯುವ ಸರಕುಗಳನ್ನು ಮಾರಾಟಮಾಡಲು ಬಂದಿದ್ದರು. ತೆಂಗಿನಕಾಯಿ, ಕಿತ್ತಲೆ, ನಿಂಬೆ, ಮುಂತಾದ ಫಲ ಗಳನ್ನೂ ಇಂಗ್ಲೆಂಡಿನಲ್ಲಿ ಕೊಳ್ಳಲು ಸಿಗುವಂತಹ ಪಳಗಿಸಿದ ಹಸಿರುಬಣ್ಣದ ಕೋತಿಗಳನ್ನೂ ತಂದಿದ್ದರು. ಇವೆಲ್ಲಾ ಒಂದು ತುಂಡು ಬಟ್ಟೆಗೋ ಅಥವಾ ಅಲಂಕಾರದ ಪಟ್ಟಿಗಳ ಒಂದು ಗೊಂಚಲಿಗೋ (a bunch of ribbons) ಕಾಸಿಗೊಂದು ಕೊಸರಿಗೊಂದು ಎಂಬಂತೆ ಸಿಕ್ಕಿದುವು. ನಮಗೆ ಬೇಕಾದ ತಿಳಿನೀರಿನ ಝರಿಯೊಂದು

---

೧. ಡೌನ್ (Down) = Downs : ದಕ್ಷಿಣ ಇಂಗ್ಲೆಂಡ್‌ನಲ್ಲಿರುವ ಹುಲ್ಲುಬೆಳೆದುಕೊಂಡು ಗುಂಡಗುಂಡಗಿರುವ ಗುಡ್ಡಗಳು.

ಬಹುಸುಂದರವಾಗಿ ಕಾಣುತ್ತಿದ್ದ ತೆಂಗಿನ ಮತ್ತು ಕಿತ್ತಳೆ ತೋಟದ ಮಧ್ಯೆ ಹರಿದು ಬರುತ್ತಿತ್ತು. ನಮ್ಮ ನಮ್ಮ ಪೀಪಾಯಿಗಳಲ್ಲಿ ನೀರು ತುಂಬಿಕೊಂಡೆವು.

ತೆಂಗು ನೋಡಲು ಎಷ್ಟು ಆನಂದವೋ ಅಷ್ಟೇ ಉಪಯುಕ್ತವಾದುದು. ರೆಂಬೆ ಕೊಂಬೆಗಳಿಲ್ಲದೆ ಎತ್ತರವಾಗಿ ಬೆಳೆದು ತುದಿಯಲ್ಲಿ ಫಲಕೊಡುವ ಈ ಮರ ಪ್ರತಿ ತಿಂಗಳು (Moon) ಹೊಸ ಹೊಂಬಾಳೆಯನ್ನು ನೂಕಿ ಗರಿಬಿಡುತ್ತದೆ. ಎಳೆಯ ಹೊಂಬಾಳೆಗಳ ತುದಿಯನ್ನು ಕೊರೆದು ಅದಕ್ಕೆ ಮಣ್ಣಿನ ಗಡಿಗೆ ಸಿಕ್ಕಿಸಿ ಹೆಂಡ ತೆಗೆಯುತ್ತಾರೆ. ಆದರೆ ಹೆಂಡ ಕಟ್ಟುವ ಮರ ಹೆಚ್ಚು ಕಾಯಿ ಬಿಡುವುದಿಲ್ಲ.*

ಪ್ರೀತಿಯಿಂದ ಎದುರುಗೊಂಡ ಸ್ಥಳದ ನಿವಾಸಿಗಳು ನಮ್ಮನ್ನು ತಾವಿದ್ದ ಹಟ್ಟಿಗೆ ಕರೆದುಕೊಂಡುಹೋದರು. ಕಲ್ಲುಮಣ್ಣುಗಳಿಂದ ಕಟ್ಟಿದ ಗೋಡೆಗಳ ಮೇಲೆ ತೆಂಗಿನ ಸೋಗೆ ಹೊದಿಸಿ ಮರದ ಕಿಟಕಿ ಬಾಗಿಲಿನ ಸಣ್ಣ ಸಣ್ಣ ಮನೆಗಳು. ಅವರ ಮಮತೆಯ ಆಹ್ವಾನವನ್ನು ಒಲ್ಲೆ ಎನ್ನಲಾರದ ನಾವು ಅವರು ನೀಡಿದ ಹೊಗೆಸೊಪ್ಪಿನ ಹುಕ್ಕಾ ಸೇದಿದೆವು. ಅವರ ಪಾನೀಯ ಕೇವಲ ನೀರು ಅಷ್ಟೆ. ಇನ್ನೂ ಭೂಮಿತಾಯಿ ನೀಡಿದ ಫಲವೇ ಅವರ ಸರಳ ಆಹಾರ. ಅಲ್ಲಿದ್ದ ಸಾಧಾರಣವಾದ ಪುಟ್ಟ ಗುಡಿಯಲ್ಲಿ ಶಿಲುಬೆಯನ್ನು ನಿಲ್ಲಿಸಿದ್ದರು. ಇದು ಕರಿಯ ಪಾದ್ರಿಯೊಬ್ಬನ ವಾಸಸ್ಥಾನವಿರಬೇಕು.

ಈ ದ್ವೀಪವನ್ನು ಪೋರ್ಚುಗೀಸರು ತಮ್ಮ ದೊರೆಗಾಗಿ ೧೪೪೦ರಲ್ಲಿ ಕಂಡು ಹಿಡಿದರೆಂದು ತಿಳಿಯಿತು. ಒಳಭಾಗದಲ್ಲಿ ಪೋರ್ಚುಗೀಸರು ನೆಲೆಸಿದ್ದಾರೆಂದು ಅವರಿಗೆ ಸೇರಿದ ಒಂದು ತೋಟ ಇದೆಯೆಂದೂ ಗೊತ್ತಾಯಿತು. ನಿವಾಸಿಗಳ ಬಣ್ಣ ಕಪ್ಪು. ಕೂದಲು ಗುಂಗುರುಗುಂಗುರಾಗಿದೆ. ಎತ್ತರವಾದ ಮೈಕಟ್ಟು. ಆದರೆ ನರಿಯಂತಹ ಬುದ್ಧಿ ಮತ್ತು ಕಳ್ಳತನದ ಸ್ವಭಾವ. ಅವರ ಕಣ್ಣು ನಮ್ಮನ್ನು ದುರುಗುಟ್ಟಿಕೊಂಡು ನೋಡುತ್ತಿದ್ದರೆ ಕೈ ನಮ್ಮ ಜೇಬಿನಲ್ಲಿರುವ ಕರವಸ್ತ್ರ ಕದಿಯುತ್ತಿರುತ್ತದೆ. ಇವರ ಭಾಷೆ ಹರುಕು ಮುರುಕು ಪೋರ್ಚುಗಲ್. ಕೆಲವರು ಮೈತುಂಬ ಬಟ್ಟೆ ಹಾಕಿಕೊಂಡಿದ್ದರೆ ಉಳಿದವರ ಮೈಮೇಲೆ ಏನೂ ಇರುವುದಿಲ್ಲ. ಒಂದು ಹಳೆ ಹ್ಯಾಟ್ ಕೋಟು ಶರಾಯಿ ಸಿಕ್ಕಿದರೆ ಸಾಕು, ಅವನ್ನು ತೊಟ್ಟು ದೊಡ್ಡ ಮನುಷ್ಯರಂತೆ ಮೆರೆಯುತ್ತಾರೆ. ಹೆಂಗಸರು, ಗಂಡಸರಷ್ಟು ಲಕ್ಷಣವಾಗಿಲ್ಲ. ಊದಿಕೊಂಡಂತಿರುವ ತುಟಿ, ಧಡೂತಿ ಶರೀರ, ಕುಳ್ಳಾದ ಮೈಕಟ್ಟು ಉಳ್ಳ ಇವರು ಚಂಚಲಸ್ವಭಾವಕ್ಕೆ ಹೆಸರಾದವರು. ಸೊಂಟಕ್ಕೆ ಕೇವಲ ಒಂದು ತುಂಡು ಬಟ್ಟೆ ಸುತ್ತಿಕೊಂಡಿರುತ್ತಾರೆ. ಮೇಲೆ ಏನೂ ಇರುವುದಿಲ್ಲ. ಇವರದು ರೋಮನ್ ಚರ್ಚಿನ ಕ್ರೈಸ್ತಮತ.

---

* ಇಲ್ಲಿ ತೆಂಗಿನಮರ ಅದರ ಕಾಯಿ ಇವುಗಳ ಉಪಯೋಗ ಮುಂತಾದ ವಿವರಗಳು ಬರುತ್ತವೆ. ಅವೆಲ್ಲಾ ನಮಗೆ ತಿಳಿದವುಗಳಾದ್ದರಿಂದ ಅದರ ವರ್ಣನೆ ಬಿಟ್ಟು ಈತನೇ ಬರೆದಿರುವ ಚಿತ್ರವನ್ನು ಬೇರೊಂದೆಡೆ ಯಥಾವತ್ತಾಗಿ ನೀಡಲಾಗಿದೆ.

ಹೆಂಡ ಕಟ್ಟಿದ ತೆಂಗಿನಮರಗಳು ಚೆನ್ನಾಗಿ ಫಲ ಕೊಡುವುದಿಲ್ಲವೆಂದು ನಮ್ಮಲ್ಲಿಯೂ ಹೇಳುತ್ತಾರೆ.

ಸಂಜೆಯಾಗುತ್ತ ಬಂದಿತು. ಪೋರ್ಚುಗೀಸರ ಒಂದು ದೋಣಿ ಮದ್ಯಗಳನ್ನು ಹೇರಿಕೊಂಡು ತೀರಕ್ಕೆ ಬಂದಿತು. ನಾವು ಒಂದಷ್ಟು ಮದ್ಯ ಕೊಂಡೆವು.

ಸಾವ್ ಥಿಯಾಗೋದಲ್ಲಿ ನಾವು ನೋಡಬೇಕಾದ್ದು ಇನ್ನೇನೂ ಇಲ್ಲದ ಕಾರಣ ನಮ್ಮ ಯಾನವನ್ನು ಮುಂದುವರಿಸಿದೆವು. ಆಫ್ರಿಕಾ ದ್ವೀಪಗಳನ್ನೂ ಹಾಗೆಯೇ ನಮ್ಮ ಹಡಗುಪಡೆಯೊಂದನ್ನುಳಿದು ಉಳಿದೆಲ್ಲವನ್ನೂ ಹಿಂದೆ ಬಿಟ್ಟು ತೀರಕ್ಕೆ ಸಮೀಪವಾಗಿಯೇ ಹಡಗುಗಳನ್ನು ಸಾಗಿಸಿ ಭೂಮಧ್ಯರೇಖೆಯನ್ನು ದಾಟಿ ಉಷ್ಣವಲಯವನ್ನು ಪ್ರವೇಶಿಸಿದೆವು. ಇಲ್ಲಿ ಸಿಡಿಲುಗಳ ಆರ್ಭಟ; ಬೋರೆಂದು ಸುರಿಯುವ ಮಳೆ; ಮೇಲೆ ಸುಡುವ ಬಿಸಿಲು. ನಮ್ಮ ಜನಕ್ಕೆ ಉಪ್ಪುಹಾಕಿದ ತಿಂಡಿ ತಿಂದು ಸಾಕಾಗಿತ್ತು. ಬಗೆ ಬಗೆಯ ಮೀನು ಹಿಡಿದು ತಿಂದೆವು.

ಹಡಗುಗಳು ಬೆಟ್ಟದಷ್ಟು ಎತ್ತರದ ಸಮುದ್ರದ ಅಲೆಗಳನ್ನು ಏರಿಳಿದು ಮುಂದೆ ಸಾಗಿ ಗುಡ್‌ಹೋಪ್ ಭೂಶಿರವನ್ನು ಬಳಸಿ ಮಡಗಾಸ್ಕರ್ ದ್ವೀಪಕ್ಕೂ ಆಫ್ರಿಕಾ ದೇಶಕ್ಕೂ ಮಧ್ಯೆ ಯಾನ ಮಾಡಿದುವು. ಇಲ್ಲಿಂದ ಸಮುದ್ರವು 'ಓಸೀಯಾನಸ್ ಓರಿಯಂಟಲಿಸ್' (Oceanus orientalis—ಹಿಂದೂ ಮಹಾಸಾಗರ) ಎಂಬ ಹೆಸರು ಪಡೆಯುತ್ತದೆ. ಈಗ ಮೇ ತಿಂಗಳು ಆರಂಭವಾಯಿತು. ಹಡಗಿನಲ್ಲಿದ್ದ ಕೆಲವರು ಕಾಯಿಲೆಬಿದ್ದರು. ಅವರನ್ನು ಜೊಹಾನ್ನಾ (Johannah) ದ್ವೀಪಕ್ಕೆ ಕಳುಹಿಸಿದೆವು. ಅಲ್ಲಿಗೆ ಹೋದ ಅವರು ಬಹು ಸ್ವಲ್ಪಕಾಲದಲ್ಲಿಯೇ ಗುಣಮುಖರಾದರು. ಕಿತ್ತಳೆ ಹಣ್ಣು, ಹೊಸ ನಿಂಬೆ ಹಣ್ಣು ಹಾಗೂ ಭೂಮಿಯ ಮಣ್ಣಿನ ವಾಸನೆ—ಇವು ಅವರಿಗೆ ಮರುಹುಟ್ಟು ತಂದುಕೊಟ್ಟುವು. ಜೊಹಾನ್ನಾದಲ್ಲಿ ರಾಜನೊಬ್ಬ ನೆಲಸಿದ್ದಾನೆ. ಬೇರೆ ಸೋಗೆಮನೆಗಳಿಗಿಂತ ಸ್ವಲ್ಪ ಉತ್ತಮವಾದ ಮನೆ ಅವನದು. ನಾವು ಅವನನ್ನು ಕಾಣಲು ಹೋದೆವು. ಆತ ಒಂದು ಮಂಚದಂತಹ ಪೀಠದಮೇಲೆ ಕುಳಿತಿದ್ದ. ತನ್ನ ದುಭಾಷಿಗಳ ಮೂಲಕ ನಮಗೆ ಸ್ವಾಗತ ಕೋರಿದ. ಪರಸ್ಪರ ಮಾತುಗಳು ನಡೆದುವು. ತನಗೆ ಬೇಕಾದ ಸಿಡಿಮದ್ದು ಮತ್ತು ದಿಕ್ಸೂಚಿ ಸಿಕ್ಕುವುದೆ ಎಂದು ವಿಚಾರಿಸಿದ. ನಾವು ನಮಗೆ ಬೇಕಾದ ದನ, ಹಸು, ಆಡು, ಮತ್ತು ಕೋಳಿಗಳನ್ನು ಕೊಂಡುಕೊಳ್ಳಲು ಅನುಮತಿ ಕೇಳಿದೆವು. ಇದಕ್ಕೆ ಆತ ಒಪ್ಪಿದ. ಆತನಿಗೆ ಕೆಂಪುಬಟ್ಟೆ ಮುಂತಾದ ಯೂರೋಪಿನ ಅಪರೂಪದ ವಸ್ತುಗಳನ್ನು ಬಹುಮಾನವಾಗಿ ಕೊಟ್ಟೆವು. ಆತ ಆರಾಬಿಕ್ ಭಾಷೆಯಲ್ಲಿ ಮಾತಾಡಿದರೆ ನಾವು ಇಂಗ್ಲಿಷಿನಲ್ಲಿ ಮಾತಾಡಬೇಕಾಗಿತ್ತು. ಈ ತೊಂದರೆಯಿಂದ ಹೆಚ್ಚು ಮಾತನಾಡಲು ಆಗಲಿಲ್ಲ. ಹೊರಡಲು ಅನುಮತಿ ಪಡೆದೆವು. ಬರುವಾಗ ಆತನಿಗೂ ಆತನ ಆಪ್ತರಿಗೂ ಕೃತಕ ಹರಳುಗಳನ್ನು ಹದ್ದಿದ್ದ ಹಿತ್ತಾಳೆಯ ಉಂಗುರಗಳನ್ನು ಕೊಟ್ಟೆವು. ಇವುಗಳಿಂದ ಅವರಿಗೆ ತುಂಬಾ ತೃಪ್ತಿಯಾದಂತೆ ಕಂಡಿತು.

ಸುಂದರವಾದ ಈ ಸ್ಥಳದಲ್ಲಿ ನಾಲ್ಕು ದಿವಸ ಕಳೆದು ನಾವು ಭೂಮಿಯಿಂದ ಹಡಗಿಗೆ ಹಿಂದಿರುಗಿದೆವು. ಹಡಗುಗಳು ಮತ್ತೆ ಹೊರಟವು. ಮುಂದೆ ನಾವು ಸಿಲೋನ್

ದ್ವೀಪ ಹಾದು ಕಾರೊಮಂಡಲ ತೀರದ ಕಡೆಗೆ ಹೋಗಬೇಕೆಂಬ ಉದ್ದೇಶವಿಟ್ಟು ಕೊಂಡಿದ್ದೆವು. ಆಗ ನಡುರಾತ್ರಿ. ಈ ಸಮುದ್ರದಲ್ಲಿ ಬಂಡೆಗಳು ಅನೇಕ. ಈ ಬಂಡೆಗಳಿಗಾಗಿ ಹಡಗಿನ ಮುಂಬದಿಯಲ್ಲಿ ಇದ್ದು ನೋಡುತ್ತಿದ್ದವರು 'ಹೊಡೀತು! ಹೊಡೀತು!' ಎಂದು ಕೂಗಿಕೊಂಡರು. ಎಲ್ಲರೂ ಭಯಭೀತರಾಗಿ ತಮ್ಮ ಕೊನೆಗಾಲ ಸಮೀಪಿಸಿತೆಂದೇ ಭಾವಿಸಿದರು. ಯಾವ ಘಳಿಗೆ ಹಡಗು ಚೂರುಚೂರಾಗುವುದೋ ಎಂದು ಹೆದರಿದರು. ಆದರೆ ಹಡಗು ಅಪ್ಪಳಿಸಿದ್ದು ಬಂಡೆಗಲ್ಲ, ಕಡಲ ಹಂದಿಗಳ ಹಿಂಡಿಗೆ! ಇದು ತಿಳಿದಾಗ ಎಲ್ಲರಿಗೂ ಸಮಾಧಾನವಾಯಿತು; ಸುಖವಾಗಿ ನಿದ್ದೆ ಮಾಡಿದರು.

ಐದು ದಿನದ ಯಾನ ನಮ್ಮನ್ನು ಸಿಲೋನ್ ದ್ವೀಪದ ದರ್ಶನ ಮಾಡಿಸಿತು. ಇಂಡಿಯಾದಲ್ಲಿ ನಾವು ಕಂಡ ಮೊದಲ ನೆಲ ಇದು. ಮುಂದೆ ಮುಂದೆ ನಮ್ಮ ಯಾನ ಸಾಗಿತು. ಕೊಟ್ಟಕೊನೆಗೆ ಜೂನ್ ತಿಂಗಳ ಕೊನೆಯಲ್ಲಿ ಮಚ್ಚಲಿಪಟ್ಟಣದ ಬಳಿ ಲಂಗರು ಹಾಕಿದೆವು. ಇಲ್ಲಿ ಮೂರು ಪೋರ್ಚುಗಲ್ ಹಡಗುಗಳು ಇರುವುದನ್ನು ಕಂಡೆವು.

ನಾವು ಬಂದಿರುವ ಸಂತಸದ ಸುದ್ದಿಯನ್ನು ಫಿರಂಗಿ ಹಾರಿಸಿ ತುತ್ತೂರಿ ಊದಿ ತಿಳಿಸಿದೆವು. ಊರಿನಲ್ಲಿದ್ದ ಇಂಗ್ಲಿಷ್ ಫ್ಯಾಕ್ಟೊರಿ ತನ್ನ ಬಾವುಟ ತೋರಿಸಿ ನಮಗೆ ಆಹ್ವಾನ ನೀಡಿತು*

ಮಾರನೆಯ ದಿನ ಫ್ಯಾಕ್ಟೊರಿಯ ಎರಡನೆಯ ಮುಖ್ಯಸ್ಥರು–ಮೊದಲ ಮುಖ್ಯ ಸ್ಥರು ಸೆಂಟ್‌ಜಾರ್ಜ್‌ನಲ್ಲಿದ್ದ ಕಾರಣ–ಬಂದು ನಮ್ಮ ಆಡ್ಮಿರಲ್‌ನನ್ನು ಕಂಡು ನಾವು ತೆಗೆದುಕೊಂಡುಹೋಗಿದ್ದ ಭಂಡಾರವನ್ನು ತೀರಕ್ಕೆ ಸಾಗಿಸುವಂತೆ ತಿಳಿಸಿದರು. ಈ ಭಂಡಾರವನ್ನು ಸಾಗಿಸಲು ಬಂದ ದೋಣಿಯನ್ನು ನಡೆಸುತ್ತಿದ್ದವರು ಕರಿಯರು. ಇವರು ಉದ್ದನೆಯ ಕಪ್ಪುಕೂದಲು ಬಿಟ್ಟು ತಲೆಗೆ ಕಾಲಿಕಟ್ ಬಟ್ಟೆ ಸುತ್ತಿದ್ದರು. ಕಿವಿಗೆ ಚಿನ್ನದ ಕೊಂಡಿಲು ಹಾಕಿಕೊಂಡಿದ್ದರು. ಕೆಲವರು ಬರಿದಲೆಯಲ್ಲಿದ್ದರು. ತಮ್ಮ ದೇವರಾದ ಪೆರುಮಾಳನು ಬೇಕಾದಾಗ ಇವರನ್ನು ಸ್ವರ್ಗಕ್ಕೆ ಎಳೆದುಕೊಳ್ಳಲು ಅನುಕೂಲವಾಗು ವಂತೆ ಬಿಟ್ಟ ಜುಟ್ಟು ಇದು. ಆದರೆ ನನಗನ್ನಿಸುತ್ತದೆ, ಉದ್ದವಾದ ಕೂದಲು ಬಿಟ್ಟು ಅದನ್ನು ಸ್ವಚ್ಛವಾಗಿ ಇಡದಿದ್ದರೆ ಅದು ಜಡೆ ಹೆಣೆದುಕೊಳ್ಳುತ್ತದೆ. ಆದ್ದರಿಂದ ಇವರು ತಲೆಯನ್ನೆಲ್ಲಾ ಬೋಳಿಸಿಕೊಂಡು ನೆತ್ತಿಯಮೇಲೆ ಒಂದು ಬತ್ತಿ ಜುಟ್ಟು ಬಿಟ್ಟು ಕೊಂಡಿದ್ದಾರೆ ಎಂದು. ದೋಣಿಯಲ್ಲಿ ಬಂದಿದ್ದವರಲ್ಲಿ ಕೆಲವರು ಬೇರೆಯವರಿಗಿಂತ ಉತ್ತಮವಾದ ಉಡುಪು ಧರಿಸಿದ್ದರು. ತಲೆಗೆ ಕಾಲಿಕಟ್ ಬಟ್ಟೆಯನ್ನು ಪೇಟದೋಪಾದಿ ಯಲ್ಲಿ ಸುತ್ತಿ ಹಗುರವಾದ ಅಂಗಿ ತೊಟ್ಟು, ಸೊಂಟಕ್ಕೆ ಪಂಚೆ ಸುತ್ತಿಕೊಂಡಿದ್ದರು.

---

* ಇಂಗ್ಲಿಷರು ಮದ್ದುಗುಂಡುಗಳನ್ನು ಗುಟ್ಟಾಗಿ ಬಚ್ಚಿಟ್ಟುಕೊಳ್ಳುತ್ತಿದ್ದರು. ಏಕೆಂದರೆ ಗೋಲ್ಕೊಂಡಾ ಸುಲ್ತಾನನ ಆಜ್ಞೆಯಾಗಿತ್ತು, ಯಾರೂ ತನ್ನ ಆಧಿಪತ್ಯದಲ್ಲಿ ಮದ್ದುಗುಂಡುಗಳನ್ನು ಇಟ್ಟುಕೊಳ್ಳಕೂಡದು ಎಂದು. ಈ ಕಾರಣ ಇಂಗ್ಲಿಷರು ಕೇವಲ ಬಾವುಟ ತೋರಿಸುತ್ತಿದ್ದರು.

ಇವರು ಸ್ವಲ್ಪ ರುಸುಮಿಗೆ ನಮ್ಮ ಪರವಾಗಿ ದಳ್ಳಾಳಿತನ ಮುಂತಾದ ಕೆಲಸಮಾಡಲು ಒಪ್ಪಿದರು. ಇಂಗ್ಲಿಷ್ ಬಲ್ಲ ಇವರು ಎರಡು ತಿಂಗಳ ಹಿಂದೆ ಫ್ರೆಂಚ್ ಹಡಗುಗಳಲ್ಲಿ ಮೂರರ (ಮುಹಮ್ಮದೀಯರ) ನಾಲ್ಕು ಹಡಗುಗಳನ್ನು ಸುಟ್ಟಿದ್ದನ್ನೂ ಇನ್ನು ನಾಲ್ಕು ಹಡಗುಗಳನ್ನು ವಶಪಡಿಸಿಕೊಂಡದ್ದನ್ನೂ ತಿಳಿಸಿದರು. ಅಲ್ಲದೆ ಕೆಲವು ಡಚ್ ದಳ್ಳಾಳಿಗಳನ್ನು ಬೆದರಿಸಿ ಅವರಿಂದ ತಮಗೆ ಬೇಕಾದ ಊಟೋಪಚಾರದ ವಸ್ತುಗಳನ್ನು ಕಸಿದುಕೊಂಡಿದ್ದರೆಂದೂ ಹೇಳಿದರು. ಈ ಮಾತುಗಳಿಂದ ಇಲ್ಲಿಯವರಿಗೆ ಫ್ರೆಂಚರ ಬಗ್ಗೆ ಒಳ್ಳೆಯ ಅಭಿಪ್ರಾಯ ಇಲ್ಲವೆಂದು ಗೊತ್ತಾಯಿತು. ಫ್ರೆಂಚರಿಗೆ ಸಾಲ ದೊರೆಯುವುದೂ ಕಷ್ಟವಾಯಿತಂತೆ. ಇಲ್ಲಿ ಹಣವಿಲ್ಲದೆ ಏನೂ ಮಾಡುವಂತಿಲ್ಲ. ಅದೇ ವ್ಯಾಪಾರದ ಬೆನ್ನೆಲುಬು. ಅಷ್ಟೇ ಅಲ್ಲ, ವ್ಯಾಪಾರದ ಜೀವಾಳವೂ ಅದೇ.

ತೀರದಿಂದ ಕರೆ ಬಂದ ಕಾರಣ ನಾನು ನಾಡು ದೋಣಿಯೊಂದರಲ್ಲಿ ಮುಚ್ಚಲಿ ಪಟ್ಟಣಕ್ಕೆ ಹೋದೆ. ಆದರೆ ಅಲೆಗಳ ಸಪ್ಪಳ ನೈಲ್ ನದಿಯು ಧುಮುಕುವ ಶಬ್ದದಂತೆ ಕಿವಿ ಕಿವುಡಾಗುವಂತೆ ಇತ್ತು. ಪಟ್ಟಣದ ಸುತ್ತ ಮಣ್ಣುಗೋಡೆ ಇದೆ. ಗೋಡೆಯನ್ನು ಆವರಿಸಿ ದುರ್ವಾಸನೆ ಹೊಡೆಯುವ ನೀರಿನ ಅಗಳಿದೆ. ರಾಜಬೀದಿಗಳು ಅಗಲವಾಗಿವೆ. ಅಕ್ಕಪಕ್ಕ ಎತ್ತರವಾದ ಕಟ್ಟಡಗಳಿವೆ. ಮರ ಮತ್ತು ಗಾರೆಯ ಈ ಕಟ್ಟಡಗಳಿಗೆ ಮಡಚುವ ಮರದ ಕಿಟಕಿಗಳಿವೆ. ಮೇಲೆ ಹೆಂಚು ಹೊದಿಸಿದ್ದಾರೆ. ಊರ ಮಧ್ಯೆ ಬೇಸಿಗೆಯಲ್ಲಿ ಸ್ನಾನಮಾಡಲು ಒಂದು ಕೊಳವಿದೆ. ಮಣ್ಣಿನಗೋಡೆ ಮತ್ತು ಹುಲ್ಲು ಹೊದಿಸಿದ ಬಡವರ ಗುಡಿಸಲುಗಳು ರಾಜಬೀದಿಗಳಲ್ಲೂ ಗಲ್ಲಿಗಳಲ್ಲೂ ಜೇನುಗೂಡುಗಳಂತೆ ಕಾಣಿಸುತ್ತವೆ. ಬೇಸಿಗೆಯಲ್ಲಿ ಇವಕ್ಕೆ ಬೆಂಕಿ ಹೊತ್ತಿಕೊಂಡು ಎಲ್ಲವನ್ನು ಸುಟ್ಟು ಬೂದಿ ಮಾಡುತ್ತದೆ. ಮುಖ್ಯವಾದ ಬೀದಿಗಳಲ್ಲಿ ಸಣ್ಣ ಸಣ್ಣ ಮಸೀದಿಗಳೂ, ಸುಂಕದ ಕಟ್ಟೆಯೂ, ಒಂದು ನ್ಯಾಯಾಲಯವೂ ಇದೆ. ಮೂರು 'ಬಜಾರು'ಗಳಿವೆ. ಈ ಬಜಾರುಗಳ ತುಂಬಾ ಸರಕುಗಳನ್ನೂ ಜನರನ್ನೂ ನೋಡಬಹುದು. ಈ ಊರಿನ ನಿವಾಸಿಗಳು ಮೂರರು, ಪರ್ಷಿಯನರು, ಜೆಂಟೈಲರು (ಹಿಂದೂಗಳು), ಆರ್ಮೇನಿಯನರು, ಪೋರ್ಚುಗಲ್ಲರು, ಡಚ್ಚರು, ಇಂಗ್ಲಿಷರು ಮತ್ತು ಹಲವು ಫ್ರೆಂಚರು.

ಮೊದಲಿಗೆ ಜೆಂಟೈಲರೇ ಆಳುತ್ತಿದ್ದ ಈ ರಾಜ್ಯ ಅವರವರ ಒಳಜಗಳದಿಂದಾಗಿ ಮೂರರ (ಮುಹಮ್ಮದೀಯರ) ವಶವಾಯಿತು. ಜೆಂಟೈಲರಲ್ಲಿ ಅವರವರ ಕಸಬಿಗನುಸಾರ ಬೇರೆ ಬೇರೆ ಜಾತಿಗಳಿವೆ. ಉತ್ತಮವಾದ ಕಸಬಿನವನು ಉತ್ತಮಜಾತಿಗೆ ಸೇರಿದವನೆಂದು ಪರಿಗಣಿಸಲ್ಪಡುತ್ತಾನೆ. ಒಂದು ಜಾತಿಯವರು ಇನ್ನೊಂದು ಜಾತಿಯವರಲ್ಲಿ ಹೆಣ್ಣು ಕೊಡುವುದೂ ತರುವುದೂ ಇಲ್ಲ. ಎಲ್ಲಾ ಜಾತಿಗಳಿಗಿಂತ ಹೆಚ್ಚಿನ ಜಾತಿಯವರೆಂದರೆ ಬ್ರಾಹ್ಮಣರು. ಇವರಾದ ಮೇಲೆ ಕ್ಷತ್ರಿಯರು.

ಅಕ್ಕಸಾಲಿಗರು, ಬಡಗಿಗಳು ಮುಂತಾದ ಕುಶಲಕೆಲಸಗಾರರು ತುಂಬಾ ದುರಹಂಕಾರದ ಜನ. ಇವರು ತಮಗಿಂತ ಮೇಲ್ಪಟ್ಟವರನ್ನು ಅಗೌರವದಿಂದ ಕಾಣುವುದಲ್ಲದೆ

ತಮಗಿಂತ ಕೀಳಾದ ಬೇಸಾಯಗಾರರು ಮತ್ತು ಕೂಲಿಯವರನ್ನು ಬಹು ಕ್ರೂರವಾಗಿ ಕಾಣುತ್ತಾರೆ. ಹೀಗಾಗಿ ತಮ್ಮ ಅವನತಿಯನ್ನು ತಾವೇ ತಂದುಕೊಂಡುದಲ್ಲದೆ ತಮ್ಮ ಗುಲಾಮತನಕ್ಕೂ ಕಾರಣರಾದರು. ಇವರು ಮೂರರ ಕಡೆ ಸೇರಿಕೊಂಡ ಕಾರಣ ಮೂರರು ಇಡೀ ಜೆಂಟೈಲರ ಮೇಲೆ ಸವಾರಿಮಾಡುವಂತಾಯಿತು. ಮೂರರೆಂದರೆ 'ಹಲಾಲ್‌ಕೋರ್'. (Halalkhor = ಹಲಾಲ್‌ಖೋರರು) ಎಂಬ ನಿಕೃಷ್ಟ ಜಾತಿಯ ಜನರಿಗಿಂತ ಕೀಳು. ಹೊಲೆಯರು ಪಲ್ಲಕ್ಕಿಗಳಲ್ಲಿ ಅಡ್ಡಾಡುವಂತಿಲ್ಲ, ಕುದುರೆಯ ಮೇಲೆ ಕುಳಿತುಕೊಳ್ಳುವಂತಿಲ್ಲ. ಇಂಥವರಿಗೆ ಸಮಾನರಾದಂತಹ ಮೂರರು ಜೆಂಟೈಲ ರನ್ನು ತಮ್ಮ ಅಧೀನಮಾಡಿಕೊಂಡು ಜಬರ್ದಸ್ತಿನಿಂದ ಆಳುತ್ತಿದ್ದಾರೆ. ಇದನ್ನು ಜೆಂಟೈಲರು ಸಹಿಸಿಕೊಳ್ಳುತ್ತಿರುವುದಷ್ಟೇ ಅಲ್ಲ, ತಮ್ಮ ಹಿಂದಿನ ಸ್ವಾತಂತ್ರ್ಯವನ್ನು ಪಡೆಯಲು ಪ್ರಯತ್ನವನ್ನೂ ನಡೆಸುತ್ತಿಲ್ಲ.

ಈಗ ಆಳುವ ದೊರೆ ಮೂರ. ಅನಾಮಧೇಯನಾಗಿದ್ದ ಈತನನ್ನು ಸಿಂಹಾಸನಕ್ಕೆ ಏರಿಸಿದವನು ಇಂದಿನ ರಾಜನ ಮುಖ್ಯ ಖೋಜಾ ಸೀಗ್ಮಾನ್‌ಜಫ್ಫಾ.* ರಾಜನ ಆಸ್ಥಾನ ಇಲ್ಲಿಂದ ಹದಿನೈದು ದಿನಗಳ ಪ್ರಯಾಣದಷ್ಟು ದೂರದಲ್ಲಿರುವ ಗೋಲ್ಕೊಂಡಾ ಎಂಬಲ್ಲಿದೆ. ಸೀಗ್ಮಾನ್‌ಜಫ್ಫಾನನ್ನು ಬಿಟ್ಟರೆ ಮಚ್ಚಲಿಪಟ್ಟಣದ ನವಾಬ ಸ್ಥಾನಮಾನದಲ್ಲಿ ಎರಡನೆಯವನು. ಈತ ಜನರನ್ನು ಹಿಂಸಿಸಿ ಹಣಪಡೆದು ಭಾರಿ ಶ್ರೀಮಂತನಾಗಿದ್ದಾನೆ. ಅಲ್ಲದೆ ವಜ್ರದ ಗಣಿಗಳಿಂದಲೂ ಅಪಾರ ಆದಾಯ ಪಡೆಯುತ್ತಾನೆ. ನಾವು ಇಲ್ಲಿರು ವಾಗ ಈತ ಪಟ್ಟಣದ ಮೂಲಕ ತನ್ನ ಪರಿವಾರ ಸಮೇತ ಹಾದುಹೋದದ್ದನ್ನು ಕಂಡೆವು. ಪಲ್ಲಕ್ಕಿಯಲ್ಲಿ ಸಾಗಿದ ಆತನ ಮುಂದೆ ಆನೆ, ಹಿಂದೆ ಅವನ ಶ್ರೀಮಂತ ಸರದಾರರೂ, ಸಿಪಾಯಿಗಳೂ ಮತ್ತಿತರ ಅನುಚರರೂ ಇದ್ದರು. ಜೆಂಟೈಲರ ಮೇಲೆ ಕಟ್ಟುನಿಟ್ಟಾದ ಹತೋಟಿ ಇಟ್ಟುಕೊಂಡು ಅವರನ್ನು ಸಣ್ಣಪುಟ್ಟ ಕೆಲಸಗಳಿಗೆ ಮಾತ್ರ ಉಪಯೋಗಿಸಿಕೊಳ್ಳುತ್ತಾನೆ. ಹಿಂದೂಗಳಲ್ಲಿ ಹೇಳಿಕೊಳ್ಳುವಂತಹ ವರ್ತಕರು ಇಲ್ಲವೇ ಇಲ್ಲ. ಆದರೆ ಮೂರರೂ ಪರ್ಷಿಯನರೂ ವ್ಯಾಪಾರದ ಹಡಗುಗಳ ಮಾಲೀಕರಾಗಿ ಭಾರಿ ವ್ಯಾಪಾರ ಸಾಪಾರಗಳಲ್ಲಿ ತೊಡಗಿರುತ್ತಾರೆ. ಪರ್ಷಿಯನರು ತಮ್ಮ ದೇಶದಿಂದ ಸಾಮಾನ್ಯರಂತೆ ಬಂದು ರಾಜನ ಪ್ರೋತ್ಸಾಹದಿಂದ ಮುಂದುವರೆದಿದ್ದಾರೆ. ತಮ್ಮದೇ ಆದ ದೊಡ್ಡ ಪರಿವಾರವನ್ನಿಟ್ಟುಕೊಂಡು ಅದ್ದೂರಿಯಿಂದ ಬಾಳುತ್ತಿದ್ದಾರೆ. ಆದರೆ ಅದ್ದೂರಿಯ ಬಾಳು ನಡೆಸುವವರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯವರನ್ನು ಯಾರೂ ಮೀರಿಸುವುದಿಲ್ಲ. ಒಮ್ಮೆ ಕಂಪೆನಿಯ ಮುಖ್ಯಸ್ಥ ಕೋಟೆಯಿಂದ ಹಿಂದಿರುಗಿ ಬಂದಾಗ ಆತನ ಅದ್ದೂರಿ ಹೇಳತೀರದು. ಊರಿನ ಗಣ್ಯ ವರ್ತಕರೆಲ್ಲ ವಾದ್ಯ ಮತ್ತು ಹಿಡಿಗುದುರೆ

* ಗಂಡುಮಕ್ಕಳಿಲ್ಲದೆ ಕಾಲವಾದ ಅಬ್ದುಲ್ಲಾ ಖುತುಬ್ ಷಾನ ಮೂರನೆಯ ಅಳಿಯ ೧೬೭೨ರಲ್ಲಿ ಅಬುಲ್‌ಹಸನ್ ಖುತುಬ್ ಷಾ ಎಂಬುವನನ್ನು ಗೋಲ್ಕೊಂಡಾ ಸಿಂಹಾಸನಕ್ಕೆ ಏರಿಸಿದ ಪ್ರಧಾನ ಮಂತ್ರಿ ಸೈಯದ್ ಮಜಾಫರ್‌ನನ್ನು ಕುರಿತು ಹೇಳಿರಬಹುದೆಂದು ಕಾಣುತ್ತದೆ.

ಸಮೇತ ಆತನನ್ನು ಎದುರುಗೊಂಡರು. ಆತನ ಪಲ್ಲಕ್ಕಿಯ ಮುಂದೆ ಭವ್ಯವಾದ ಕುದುರೆ, ಬಾವುಟಗಳು ಮತ್ತು ಇಂಗ್ಲಿಷ್‌ವಾದ್ಯ ಸಾಗಿದ್ದವು. ಹಿಂದೆ ದಳ್ಳಾಳಿಗಳು ಕುದುರೆಯ ಮೇಲೆ ಬಂದರು. ಅವನ ಬಳಿ ದೃಢಕಾಯರಾದ ಜನ ಅರುಂಡೆಲ್ (Arundell) ಎಂಬ ದೊಡ್ಡ ಛತ್ರಿಗಳನ್ನು ಹಿಡಿದು ಓಡುತ್ತಾ ಬಂದರು. ಕನಿಷ್ಠ ಪಕ್ಷ ಇನ್ನೂರು ಜನ ಸಿಪಾಯಿಗಳೂ ಭರ್ಜಿಹಿಡಿದವರೂ ಇದ್ದರು. ಎಲ್ಲಕ್ಕಿಂತ ಹಿಂದೆ ಇಂಗ್ಲಿಷರು ಮತ್ತು ಇತರ ವರ್ತಕರಿಗೆ ಸೇರಿದ ಪಲ್ಲಕ್ಕಿಗಳ ಸಾಲು. ಭೋಜನದ ವೇಳೆ ಈತನ ಮೇಜಿನ ಸುತ್ತ ರಾಜಮಹಾರಾಜರ ಬಳಿ ಇದ್ದಂತೆ ಪರಿಚಾರಕರು ಇದ್ದು ಓಡಾಡಿಕೊಂಡು ಊಟಕ್ಕೆ ಬಡಿಸುತ್ತಾರೆ. ಊಟಮಾಡುವ ತಟ್ಟೆಗಳು ಚೀನಾದವುಗಳು. ಆಹಾರದಲ್ಲಿ ವಿಷ ಇದ್ದಲ್ಲಿ ಈ ತಟ್ಟೆಗಳು ಒಡೆದುಹೋಗುತ್ತವೆಯಂತೆ. ಇದು ನಿಜವೋ ಸುಳ್ಳೋ ಹೇಳಲಾರೆ. ಆದರೆ ವಿಷಪ್ರಯೋಗದಿಂದ ಎಚ್ಚರವಾಗಿರುವುದು ಈ ದೇಶ ದಲ್ಲಿ ಆವಶ್ಯಕ.[೧] ಬೆಳ್ಳಿ ಹಿಡಿಯುಳ್ಳ ನವಿಲುಗರಿಯ ದೊಡ್ಡ ದೊಡ್ಡ ಬೀಸಣಿಗೆಗಳಿಂದ ಗಾಳಿ ಹಾಕುತ್ತಿರುತ್ತಾರೆ. ಹಾಗೆ ಮಾಡದಿದ್ದರೆ ಇಡೀ ಮೇಜನ್ನು ನೊಣಗಳೇ ಆಕ್ರಮಿಸಿ ಬಿಡುತ್ತವೆ.

ಇಲ್ಲಿಯ ನಿವಾಸಿಗಳು ಬಿಳಿ ಅಂಗಿ, ತಲೆಗೆ ಸಣ್ಣಪೇಟ ಮತ್ತು ಹಿಮ್ಮಡಿಯವರೆಗೆ ಬರುವ ಉದ್ದನೆಯ ಶರಾಯಿ ಧರಿಸುತ್ತಾರೆ. ಜೆಂಟೂಗಳು ಬರಿಗಾಲಿನಲ್ಲಿರುತ್ತಾರೆ. ಮೂರರು ಮತ್ತು ಪರ್ಷಿಯನರು ಸ್ಯಾಂಡಲ್ (Sandal = ಪಾದರಕ್ಷೆ) ಹಾಕಿಕೊಂಡು ಹೆಗಲಮೇಲೆ ತಮಗಿಷ್ಟಬಂದ ಬಣ್ಣದ ರೇಷ್ಮೆವಸ್ತ್ರ ಎಸೆದುಕೊಳ್ಳುತ್ತಾರೆ. ಇಂಗ್ಲಿಷರು ತಮ್ಮ ಮಾಮೂಲು ಉಡುಪನ್ನೇ ಧರಿಸುತ್ತಾರೆ. ಆದರೆ ಉಡುಪು ಬಿಳಿ ಬಟ್ಟೆಯದು. ಆರ್ಮೀನಿಯನರು ಸ್ಥಳದವರಂತೆ ಉಡುಪು ಧರಿಸುತ್ತಾರೆ.

ಮೂರರು ಬಹು ಬಿಂಕದಿಂದ ನಡೆದುಕೊಳ್ಳುತ್ತಾರೆ. ಆಳುಕಾಳುಗಳಿಗೆ ನೇರವಾಗಿ ಉತ್ತರ ಕೊಡುವುದಿಲ್ಲ. ಅದೇನಿದ್ದರೂ ತಮ್ಮ ದುಭಾಷಿಯ ಮೂಲಕ. ಮನೆಯ ಬಾಗಿಲ ಬಳಿ ದೊಡ್ಡ ಪೀಠದಮೇಲೆ ಕುಳಿತು ಸೇವಕರ ಸೇವೆಯನ್ನು ಕೈಗೊಳ್ಳುತ್ತಾ ಹುಕ್ಕಾ ಸೇದುವುದು ಇವರ ಮುಖ್ಯವಾದ ಹವ್ಯಾಸ. ತಮ್ಮ ಹೆಂಗಸರನ್ನು ಗೋಷಾ ದಲ್ಲಿಟ್ಟು ಇನ್ನೊಬ್ಬರ ಕಣ್ಣಿಗೆ ಬೀಳದಂತೆ ನೋಡಿಕೊಳ್ಳುತ್ತಾರೆ. ಚಿಕ್ಕವಯಸ್ಸಿನಲ್ಲಿಯೇ ತಮ್ಮ ಮಕ್ಕಳಿಗೆ ಮದುವೆ ನಿಶ್ಚಯಮಾಡಿಬಿಡುತ್ತಾರೆ.

ಜೆಂಟೂಗಳಲ್ಲಿ ಈ ತರಹ ಕಟ್ಟುನಿಟ್ಟಾದ ಕ್ರಮ ಇಲ್ಲ. ಅವರ ಹೆಂಗಸರು ಗಂಡಸರು ಆರಾಮವಾಗಿ ಬೀದಿಗಳಲ್ಲಿ ತಿರುಗಾಡುತ್ತಾರೆ. ಹೆಂಗಸರು ಮೈ ಕೈ ತುಂಬ

---

೧. ಹಿಮಾಲಯದಲ್ಲಿರುವ ಲೆಪ್ಚಾಸ್ (Lepchas) ಎಂಬ ಜನ ಒಂದು ಬಗೆಯ ಮರದಿಂದ ಮಾಡಿದ ಲೋಟಗಳಿಂದ ಕುಡಿಯುತ್ತಾರೆಂದೂ, ಈ ಮರ ವಿಷಾಪಹಾರಿಯೆಂದೂ, ತಾನು ಇಂತಹ ಒಂದು ಬಟ್ಟಲಿಗೆ ಒಂದು ಗಿನಿ ಕೊಟ್ಟು ಕೊಂಡುಕೊಂಡುದಾಗಿಯೂ ಹೂಕರ್ ಎಂಬ ಪ್ರವಾಸಿ ಹೇಳಿದ್ದಾನೆ.

ಆಭರಣಗಳ ಹೊರೆಯನ್ನೇ ಹೊತ್ತಿರುತ್ತಾರೆಂದು ಹೇಳಬಹುದು. ಸೀರೆ ಉಟ್ಟು ಸೆರಗನ್ನು ಹೆಗಲ ಮೇಲೆ ಹಾಕಿಕೊಳ್ಳುತ್ತಾರೆ. ಉದ್ದವಾಗಿ ಬೆಳೆದ ಕೂದಲನ್ನು ಗಂಟು ಹಾಕಿ ಅದಕ್ಕೆ ಚಿನ್ನ ಮುತ್ತು ಹರಳುಗಳ ಮುಕುಟ ಸಿಕ್ಕಿಸುತ್ತಾರೆ. ಇವರು ಸೊಗಸಾದ ನರ್ತನ ಹಾಗೂ ಇನ್ನಿತರ ಶಾರೀರಿಕ ಚಟುವಟಿಕೆಗಳಲ್ಲಿ ನಿಪುಣೆಯರು. ಗಿಲೀಟು ಮಾಡಿದ ಒಂಬತ್ತು ಚೆಂಡುಗಳನ್ನು ತಮ್ಮ ಮೈ ಕೈಕಾಲುಗಳಿಂದ ಆಡಿಸುತ್ತಾ ಬಹು ಹೊತ್ತು ಅವು ನೆಲಕ್ಕೆ ಬೀಳದಂತೆ ಆಟ ಆಡುವುದನ್ನು ನಾನು ನೋಡಿದ್ದೇನೆ. ಹೆಂಗಸರ ಬಣ್ಣ ಗಂಡಸರ ಬಣ್ಣಕ್ಕಿಂತ ಮೇಲು.

ಬಹು ಚತುರರಾದ ಈ ಜನ ಲೆಕ್ಕಪಕ್ಕಗಳಲ್ಲಿ ಎತ್ತಿದಕೈ. ಲೇಖಣಿ ಹಿಡಿಯದೆ ಎಂತಹ ಭಿನ್ನರಾಶಿ ಲೆಕ್ಕವನ್ನು ಸಹ ಹೇಳಿಬಿಡುತ್ತಾರೆ. ಕ್ಯಾಲಿಕಟ್ ಬಟ್ಟೆಗಳಿಗೆ ಬಣ್ಣ ಹಾಕುವುದರಲ್ಲಿ ಇಲ್ಲಿಯವರು ಇಡೀ ಈಸ್ಟ್ ಇಂಡಿಯಾದಲ್ಲೇ ನಿಸ್ಸೀಮರು. ಬಟ್ಟೆಗಳನ್ನು ಮೊದಲಿಗಿಂತ ಸ್ವಚ್ಛವಾಗಿಯೂ ಸೊಗಸಾಗಿಯೂ ಒಗೆದು ಅದನ್ನು ನೆಲದ ಮೇಲೆ ಹಾಸಿ ಮಕ್ಕಳು ಮರಿಗಳೂ ದೊಡ್ಡವರೂ ಕುಳಿತು 'ಪೆನ್ಸಿಲ್' (Pencil = ಬಣ್ಣದ ಕಡ್ಡಿ ?) ನಿಂದ ಬಣ್ಣ ಹಾಕುತ್ತಾರೆ. ಈ ಕೆಲಸದಲ್ಲಿ ಇವರಷ್ಟು ನಿಪುಣರು ಬೇರೆ ಇಲ್ಲ. ಈ ಕಾರಣವೇ ಕ್ಯಾಲಿಕೋ ಬಟ್ಟೆಗಳಿಗಾಗಿ ಈ ಬಂದರು ಪ್ರಸಿದ್ಧಿಯಾಗಿರುವುದು.

ಆದರೆ ಇವರು ತುಂಬಾ ಅಂಜುಬುರುಕರು. ಒಬ್ಬ ಇಂಗ್ಲಿಷಿನವನು ಇವರ ಹೆಂಗಸರನ್ನು ಕೆಣಕಿದನೆಂಬ ಕಾರಣ ಇಡೀ ಊರು ಇಂಗ್ಲಿಷರ ಕೋಟೆಯ ಮೇಲೆ ಧಾಳಿಮಾಡಿತು. ಆದರೂ ಕೇವಲ ಇಪ್ಪತ್ತು ಇಂಗ್ಲಿಷ್ ಶಸ್ತ್ರಧಾರಿಗಳು ಅವರನ್ನು ಹಿಮ್ಮೆಟ್ಟಿಸಿದರು. ಅಂಜುಬುರುಕರ ಸ್ವಭಾವ ಗೊತ್ತೇ ಇದೆಯಲ್ಲ! ಅಪಾಯ ದೂರ ವಿದ್ದಾಗ ಮಿಂಚಿನ ವೇಗದಲ್ಲಿ ಮೇಲೆರಗುವುದು, ಹತ್ತಿರವಾದಾಗ ದಮ್ಮಯ್ಯ ಅನ್ನುವುದು.

ದೊಡ್ಡವರು ತಪ್ಪುಮಾಡಿದರೆ ಅವರಿಗೆ ಭಂಗ್ ಮತ್ತು ದತ್ರಿ (Dutry = ದತ್ತೂರ) ಇವುಗಳಿಂದ ಮಾಡಿದ 'ಪೋಸ್ಟ್ (Post = ಸಂಸ್ಕೃತದಲ್ಲಿ ಪುಸ್ತಾ) ಎಂಬ ಪಾನೀಯವನ್ನು ಕುಡಿಸಿ ನಿಧಾನವಾಗಿ ಸಾಯಿಸುತ್ತಾರೆ.

ಎಲ್ಲಾ ಮತಗಳ ಅನುಷ್ಠಾನಕ್ಕೆ ಇಲ್ಲಿ ಅವಕಾಶವಿದೆ. ಸ್ಥಳದ ನಿವಾಸಿಗಳು ವಿಗ್ರಹಾರಾಧಕರು. ಎಂತೆಂಥವೊ ದೇವರು ದಿಂಡರುಗಳನ್ನು ಪೂಜಿಸುತ್ತಾರೆ. ಹೆದರಿಕೆ ಯಿಂದ ಭೂತಗಳನ್ನು ಪೂಜಿಸುತ್ತಾರೆ.

ಹಿಂದೂಗಳು ನಾರು ಬೇರು, ಅಕ್ಕಿ, ಹಣ್ಣು ಹಂಪಲುಗಳನ್ನು ತಿಂದು ಹೇಗೋ ಕಾಲಹಾಕುತ್ತಾರೆ. ಪ್ರಾಣಿಗಳನ್ನು ಹೋಗಲಿ, ಮೊಟ್ಟೆಗಳನ್ನೂ ತಿನ್ನುವುದಿಲ್ಲ. ಹಾಲು ತುಪ್ಪ ಉಪಯೋಗಿಸುತ್ತಾರೆ. ಹೆಂಗಸರು ಗಂಡಸರೆಲ್ಲ ಮಲಬಾಧೆ ತೀರಿಸಿಕೊಳ್ಳಲು ಕ್ಲುಪ್ತವಾದ ಕಾಲದಲ್ಲಿ ಕೆರೆ ಕೊಳಗಳ ಕಡೆಗೆ ಕೈಯಲ್ಲಿ ತಂಬಿಗೆ ಹಿಡಿದು ಹೋಗುತ್ತಾರೆ. ಹೆಂಗಸರು ಬೇರೆ ಕಡೆ ಗಂಡಸರು ಬೇರೆ ಕಡೆ ಕುಳಿತು ಮಲಬಾಧೆ ತೀರಿಸಿಕೊಳ್ಳುತ್ತಾರೆ, ದಾರಿಯಲ್ಲಿ ಹೋಗುವವರ ಕಡೆ ಬೆನ್ನುಮಾಡಿ ಕುಳಿತೇ ಜಲಬಾಧೆ ತೀರಿಸಿ

ಕೊಳ್ಳುತ್ತಾರೆ. ನಿಂತುಕೊಂಡು ಹಾಗೆ ಮಾಡುವುದು ನಾಯಿಗಳ ಸ್ವಭಾವ ಎಂದು ಹಾಸ್ಯಮಾಡುತ್ತಾರೆ. ಇವರಿಗೆ ಬ್ರಾಹ್ಮಣರು ಗುರುಸಮಾನ. ಬ್ರಾಹ್ಮಣರು ಸ್ನಾನ ಸಂಧ್ಯಾವಂದನೆಗಳಲ್ಲಿ ನಿರತರಾಗಿರುತ್ತಾರೆ. ಇವರ ಪ್ರಕಾರ ಮನುಷ್ಯರು ಈ ಜನ್ಮದಲ್ಲಿ ಮಾಡಿದ ಕರ್ಮಕ್ಕೆ ತಕ್ಕಂತೆ ಸತ್ತಮೇಲೆ ಬಗೆಬಗೆಯ ಜನ್ಮಪಡೆಯುತ್ತಾರೆ. ಬಹು ಚಿಕ್ಕವಯಸ್ಸಿನಲ್ಲಿಯೇ ತಮ್ಮ ಮಕ್ಕಳನ್ನು ಮದುವೆಮಾಡಿಬಿಡುತ್ತಾರೆ. ಹೀಗಾಗಿ ಶೋಭನದ ವೇಳೆ ಬಂದಾಗಲೇ ಗಂಡ ಹೆಂಡತಿ ಯಾರೆಂದು ಗೊತ್ತಾಗುವುದು.

ಇವರ ಭಾಷೆ ಸಾಮಾನ್ಯವಾಗಿ ಜೆಂಟೊ (ಹಿಂದೂ) ಭಾಷೆ. ಓಲೆಗರಿಗಳ ಮೇಲೆ ಕಬ್ಬಿಣದ ಕಂಠದಿಂದ ಬರೆಯುತ್ತಾರೆ. ಆಡುವ ಭಾಷೆ ತೆಲಿಂಗಾ (Telinga= ತೆಲುಗು).*

ಮಹಮ್ಮದೀಯರು ಸತ್ತವರನ್ನು ಹೂಳುತ್ತಾರೆ; ಹಿಂದೂಗಳು ಸುಡುತ್ತಾರೆ. ಹಿಂದೂ ಸ್ತ್ರೀಯರು ಗಂಡ ಸತ್ತಾಗ ಆತನ ಚಿತೆಯಲ್ಲಿ ಬಿದ್ದು ದೇಹತ್ಯಾಗಮಾಡುತ್ತಾರೆ. ಹಾಗೆ ಮಾಡದಿದ್ದರೆ ತಲೆ ಬೋಳಿಸಿಕೊಂಡು ಜೀವನೋಪಾಯಕ್ಕಾಗಿ ವೇಶ್ಯಾವೃತ್ತಿ ಅನುಸರಿಸುತ್ತಾರೆ. ಆಕೆಯ ಸಂಬಂಧಿಕರು ಆಕೆಗೆ ದತ್ತೂರಿ ಕೊಟ್ಟು ಜ್ಞಾನ ತಪ್ಪಿಸಿ ಚಿತೆಯಲ್ಲಿ ಬೀಳುವಂತೆ ಮಾಡುತ್ತಾರೆ. ಅವಳು ಬೆಂಕಿಯಿಂದ ತಪ್ಪಿಸಿಕೊಳ್ಳದಂತೆ ದೊಡ್ಡ ದೊಡ್ಡ ಗಳುಗಳಿಂದ ಅವಳನ್ನು ಅದುಮಿ ಹಿಡಿಯುತ್ತಾರೆ.

ಇಲ್ಲಿ ಚಲಾವಣೆಯಲ್ಲಿರುವ ನಾಣ್ಯಗಳು ಯಾವುವೆಂದರೆ: 'ಪಗೋಡ್' (8 ಷಿಲಿಂಗ್), 'ಡಾಲರ್' (4 ಷಿಲಿಂಗ್ 6 ಪೆನ್ನಿ), 'ರುಪೀ' (2 ಷಿಲಿಂಗ್ 3 ಪೆನ್ನಿ), 'ಕಾಸ್' ($1\frac{1}{2}$ ಪೆನ್ನಿ) ಮತ್ತು $\frac{1}{4}$ ಕಾಸ್.

ಇಲ್ಲಿ ಸಿಕ್ಕುವ ಸರಕುಗಳೆಂದರೆ: ಚಿತ್ರಿಸಿದ ಬಿಳೀ ಕ್ಯಾಲಿಕಟ್ ಬಟ್ಟೆಗಳು, ಪಲೆಂಪೋರ್‌ಗಳು (Palempore=ಹಾಸಿಗೆಬಟ್ಟೆ), ಜಮಖಾನಗಳು, ಟೀ, ವಜ್ರ ಗಳು, ಬರೆಯುವ ಇಳಿಮೇಜುಗಳು, ಸ್ತ್ರೀಯರ ಥಳಕು ಪಳಕು ಅಲಂಕಾರ ವಸ್ತ್ರಗಳು. ಇಲ್ಲಿರುವ ಪ್ರಾಣಿಗಳು: ಹುಲಿ, ಸಿಂಹ, ಚಿರತೆ, ಕರಡಿ, ಕಾಡುಹಂದಿ, ಚಿಗರಿ, ಜಿಂಕೆ. ಉಳುಮೆ ಮತ್ತು ಗಾಡಿಗಾಗಿ ಎತ್ತು, ಕೋಣ, ಒಂಟೆಗಳನ್ನೂ, ಊರಿನ ಪ್ರತಿಯೊಂದು ಮನೆಗೂ ಚರ್ಮದ ತಿತ್ತಿಗಳಲ್ಲಿ ನೀರುಹೇರಲು ಕತ್ತೆಗಳನ್ನೂ ಉಪಯೋಗಿಸುತ್ತಾರೆ. ಕುದುರೆಗಳನ್ನು ಈ ಕೆಲಸಗಳಿಗೆ ಉಪಯೋಗಿಸದೆ ಅವನ್ನು ಬಹು ನಾಜೋಕಾಗಿ ಸಾಕುತ್ತಾರೆ. ಈ ಪ್ರಾಣಿಗಳಲ್ಲದೆ 'ಕೂಲಿ'ಗಳನ್ನೂ, 'ದೂತಿ' (duty=ದೂತಿ= ದೂತ) ಗಳನ್ನೂ, ಪಲ್ಲಕ್ಕಿ ಹೊರುವವರನ್ನೂ ಪ್ರಾಣಿಗಳೆಂದೇ ಹೇಳಬಹುದು. ಇವರು

---

* ಈ ಭಾಷೆಯ ಲಿಪಿಯೆಂದು ಹೇಳಲಾದ ಬರಹವನ್ನು ಬೇರೊಂದುಕಡೆ ಯಥಾವತ್ತಾಗಿ ಕೊಡಲಾಗಿದೆ. ಇದು ತೆಲುಗು ಲಿಪಿಯಲ್ಲವೆಂದೂ ಮಲೆಯಾಳಿ ಲಿಪಿಯೆಂದೂ ಇದರ ಅರ್ಥ ಏನೆಂದು ತಿಳಿಯುವುದಿಲ್ಲವೆಂದೂ ಭಾಷಾ ತಜ್ಞರು ಅಭಿಪ್ರಾಯಪಡುತ್ತಾರೆ.

ಮನುಷ್ಯರಾದರೂ ಯಂತ್ರಗಳ ಮೇಲೆ ಸವಾರಿಮಾಡಿದಂತೆ ಇವರ ಮೇಲೆ ಜನ ಸವಾರಿಮಾಡುತ್ತಾರೆ. ಕೂಲಿಗಳ ಮೇಲೂ ಸಾಮಾನುಗಳನ್ನು ಹೇರುತ್ತಾರೆ. ದೂತಿಗಳು ಕೈಯಲ್ಲಿ ಮುಸ್ಸಾಲ್ (Mussal = Mashal) ಹಿಡಿದು ಓಡುತ್ತಾ ಹೋಗುತ್ತಾರೆ. 'ಮುಸ್ಸಾಲ್' ಎಂದರೆ ಹಳೆಯ ಚಿಂದಿಬಟ್ಟೆಗಳನ್ನು ಸಿಂಬಿಗಳಾಗಿ ಮಾಡಿ ಎಣ್ಣೆಯಲ್ಲಿ ಅದ್ದಿ ಕಬ್ಬಿಣದ ಕಡ್ಡಿಗಳಿಗೆ ಸಿಕ್ಕಿಸಿ ಬೆಂಕಿ ಹಚ್ಚಿ ಬೆಳಕು ಮಾಡುವ ಸಾಧನ. ಇವರನ್ನು ಹಿಂಬಾಲಿಸಿ ಪಲ್ಲಕ್ಕಿಯುವರು ಸಾಗುತ್ತಾರೆ. ಪಲ್ಲಕ್ಕಿಯನ್ನು ಹೊರಲು ಬಿದಿರು ಎಳೆಯದಾಗಿರುವಾಗಲೇ ಬಗ್ಗಿಸಿ ಡೊಂಕುಮಾಡಿದ ಉದ್ದನೆಯ ಬೊಂಬನ್ನು ಉಪಯೋಗಿಸುತ್ತಾರೆ. ಇದನ್ನು ಮುಂದೆ ಇಬ್ಬರು ಹಿಂದೆ ಇಬ್ಬರು ಹೊರುತ್ತಾರೆ. ಈ ಬೊಂಬಿಗೆ ಸೊಗಸಾಗಿ ಮಾಡಿದ ಪಲ್ಲಕ್ಕಿಯನ್ನು ತೂಗುಹಾಕಿರುತ್ತಾರೆ. ರೇಶ್ಮೆ ವೆಲ್ವೆಟ್, ಹುಲಿಯ ಚರ್ಮ ಮುಂತಾದವುಗಳನ್ನು ಮೇಲೆ ಹೊದಿಸಿ ಕೆಳಕ್ಕೆ ಹಾಸಿ ಒರಗುದಿಂಬುಗಳನ್ನು ಹಾಕಿ ಅನುಕೂಲ ಮಾಡಿರುತ್ತಾರೆ. ನಾಲ್ಕು ಜನ ಸರದಿಯ ಪ್ರಕಾರ ಎಂಟು ಜನ ಈ ಪಲ್ಲಕ್ಕಿಯನ್ನು ಹೊರುತ್ತಾರೆ. ಈ ಎಂಟು ಜನ ಪೋಕರಿಗಳು ಎಂಥ ಕುದುರೆಯ ಓಟವನ್ನೂ ಮೀರಿಸಬಲ್ಲರು. ಒಂದು ತಿಂಗಳಾದರೂ ಸರಿ ಕುದುರೆ ಸೋಲಬೇಕೇ ಹೊರತು ಇವರು ಸೋಲುವುದಿಲ್ಲ.

ಇಲ್ಲಿಯ ಜನ ಹಾವು ಮುಂತಾದ ಜಂತುಗಳನ್ನು ಪಳಗಿಸಿ ಬುಟ್ಟಿಗಳಲ್ಲಿ ಹೊತ್ತು ಪುಂಗಿ ಊದಿ ಅವನ್ನು ಆಡಿಸಿ ದುಡ್ಡು ಸಂಪಾದಿಸುತ್ತಾರೆ. ಇಲ್ಲಿ ಕೋಳಿ ಕೊಕ್ಕರೆಗಳು ಸಾಕಷ್ಟು ಸಿಗುತ್ತವೆ. ಇವುಗಳಲ್ಲಿ ಸಾಕಿದ ಬಾತುಗಳೇ ಹೆಚ್ಚು. ಇಲ್ಲಿ ಮೀನು ಹೇರಳವಾಗಿ ಸಿಕ್ಕುತ್ತದೆ. ಈ ಕಾರಣವೇ ಈ ಊರಿಗೆ 'ಮಚ್ಛಲಿಪಟ್ಟಣ'೧ ಎಂಬ ಹೆಸರು ಬಂದಿರುವುದು.

ಹೆಚ್ಚಾಗಿ ಅಕ್ಕಿ, ಎಲ್ಲೋ ಸ್ವಲ್ಪ ಗೋಧಿ ಬೆಳೆಯುತ್ತಾರೆ. ಹಣ್ಣು ಹಂಪಲುಗಳೂ ಇವೆ. ಬಾವಿ ತೋಡಿ ನೀರು ಪಡೆಯುತ್ತಾರೆ. ನದಿಗಳು ಇಲ್ಲ ಎಂದಲ್ಲ, ಇವೆ. ಆದರೆ ಅವುಗಳ ನೀರು ಉಪ್ಪು.

ಮಚ್ಛಲಿಪಟ್ಟಣದಲ್ಲಿ ಜನಸಂಖ್ಯೆ ಹೇರಳವಾಗಿದೆ. ಅಲ್ಲದೆ ಸ್ಥಳವೂ ಸರಿಯಾಗಿಲ್ಲ. ಈ ಕಾರಣ ಇದು ಆರೋಗ್ಯಕರವಾದ ಊರಲ್ಲ. ಆದರೂ ಬಹಳ ಕಾಲ ಒಂದೇ ಕಡೆ ಇದ್ದು ಜನ ಸ್ಥಳಕ್ಕೆ ಹೊಂದಿಕೊಂಡುಬಿಟ್ಟಿದ್ದಾರೆ. ಈ ಕಾರಣದಿಂದ ಇಂಗ್ಲಿಷರು ಹಡಗುಗಳನ್ನು ಭರ್ತಿಮಾಡುವಾಗ ಮಾತ್ರ ಉತ್ತರಕ್ಕೆ ನಲವತ್ತು ಮೈಲಿ ದೂರದಲ್ಲಿರುವ ಮಾಧವಪಾಳ್ಯ ಎಂಬ ಇನ್ನೊಂದು ಊರಿಗೆ ಹೋಗಿ ಇರುತ್ತಾರೆ.

ಯುದ್ಧಕ್ಕೆ ಆನೆಗಳನ್ನು ಉಪಯೋಗಿಸುತ್ತಾರೆ. ಕುರಿ, ಆಡು, ಹಂದಿ, ಮೊಲ

೧. 'ಮಚ್ಛಲಿ' ಎಂದರೆ ಉರ್ದು ಭಾಷೆಯಲ್ಲಿ ಮೀನು ಎಂದರ್ಥ.

ಇವುಗಳನ್ನು ತಿನ್ನುತ್ತಾರೆ. ಮಹಮ್ಮದೀಯರು ಹಂದಿ ತಿನ್ನುವುದಿಲ್ಲ. ಜೆಂಟೂಗಳು ದನ ತಿನ್ನುವುದಿಲ್ಲ.

ನವೆಂಬರ್‌ನಿಂದ ಮೇ ತಿಂಗಳವರೆಗೆ ಮಳೆ ಎಂಬುದೇ ಇಲ್ಲ. ಬಿಸಿಲಿನ ಧಗೆ ಸಹಿಸಲು ಅಸಾಧ್ಯ. ಕೆಲವುವೇಳೆ ಹಾರುವ ಪಕ್ಷಿಗಳು ಸತ್ತು ಕೆಳಗೆ ಬೀಳುತ್ತವೆ ಎಂದರೆ ಆ ಧಗೆ ಎಷ್ಟೆಂಬುದನ್ನು ಊಹಿಸಿಕೊಳ್ಳಿ. ಮೇ ತಿಂಗಳಿನಿಂದ ಮಳೆ ಆರಂಭ ವಾಗುತ್ತದೆ. ಈ ಮಳೆ ಹಾಗೂ ಉಕ್ಕುವ ಸಮುದ್ರದ ಕಾರಣ ನೀರು ಭೂಮಿಯ ಮೇಲೆ ನುಗ್ಗುತ್ತದೆ. ಮಳೆಗಾಲದಲ್ಲಿ ಕಾಯಿಲೆ ಕಸಾಲೆಗಳು ಹೆಚ್ಚು. ಸೊಳ್ಳೆ, ನೊಣ, ತಿಗಣೆ, ಇರುವೆ ಮುಂತಾದವುಗಳ ಕಾಟ ವಿಪರೀತ. ಉಬ್ಬಸ ಮತ್ತು ಜ್ವರಗಳ ಬಾಧೆ ಗಳಿಂದ ಜನ ನರಳುತ್ತಾರೆ. ಹಾಸಿಗೆಮೇಲೆ ಹಾಸಿಕೊಂಡ ಕ್ಯಾಲಿಕಟ್ ಬಿಳೀಬಟ್ಟೆ ಒಂದು ಗಂಟೆಯೊಳಗೆ ಕ್ರಿಮಿಕೀಟಗಳ ರಕ್ತಮಯವಾಗಿಬಿಡುತ್ತದೆ. ನಾವು ಮೈ ತುಂಬ ಬಟ್ಟೆ ಹಾಕಿಕೊಂಡು, ತಲೆಗೂ ಮುಖಕ್ಕೂ ಮಫ್ಲರ್ ಸುತ್ತಿಕೊಂಡು ಒಬ್ಬ ಸೇವಕನಿಂದ ಪಂಖಾ ಹಾಕಿಸಿಕೊಂಡು ಮಲಗಿಕೊಳ್ಳುತ್ತಿದ್ದೆವು. ಇಲ್ಲದಿದ್ದರೆ ನಿದ್ದೆ ಎಂಬುದೇ ಇಲ್ಲ. ತಿಗಣೆಗಳಿಂದ ಪಾರಾಗುವುದೇ ಕಷ್ಟ. ಅವು ಮಂಚದ ಸಂದಿಗಳಲ್ಲೂ ಬಟ್ಟೆಗಳಲ್ಲೂ ಸೇರಿಕೊಂಡು ಕಚ್ಚುತ್ತಲೇ ಇರುತ್ತವೆ. ಸಿಟ್ಟು ಬಂದು ಇವುಗಳನ್ನು ಒಸಗಿದರೆ ಅಸಹ್ಯವಾದ ವಾಸನೆ.

ಈ ಊರಿನಿಂದ ಮೂರು ಮೈಲಿ ದೂರದಲ್ಲಿರುವ ಒಂದು ಸ್ಥಳ ತುಂಬಾ ಆರೋಗ್ಯಕರ. ಅಲ್ಲಿ ಇಂಗ್ಲಿಷರ ಒಂದು ತೋಟ ಇದೆ.

ಇಲ್ಲಿ ಒಂದು ತಿಂಗಳು ಇದ್ದಮೇಲೆ ಸೆಂಟ್ ಜಾರ್ಜ್‌ನಿಂದ ಬಂದ ಒಬ್ಬ 'ಪಟ ಮಾರ್' (ಕಾಲಾಳು) ಅಲ್ಲಿಂದ ಡಚ್ಚರು ಸಿಲೋನಿಗೆ ಹೊರಟುಹೋದರೆಂಬ ವಿಷಯ ತಿಳಿಸಿದನು. ನಮ್ಮ ಭಂಡಾರವನ್ನು ಮತ್ತೆ ಹಡಗಿಗೆ ಹಾಕಿಕೊಂಡು ಒಂದುವಾರದೊಳಗೆ ಸೆಂಟ್‌ಜಾರ್ಜ್‌ನ್ನು (ಮದ್ರಾಸ್) ತಲುಪಿದೆವು.

ನಾವು 'ಮುಸ್ಸೂಲಾ'[೧] (Mussoola = ಮಾಸೂಲ) ಎಂಬ ದೋಣಿಯಲ್ಲಿ ತೀರಕ್ಕೆ ಹೋದೆವು. ಬಗ್ಗಿಸಿದ ಹಲಗೆಗಳನ್ನು ತೆಂಗಿನ ನಾರಿನಿಂದ ಹೊಲಿದು 'ದಮ್ಮರ್' (Dammar = ದಾಮರು) ನಿಂದ ಸಂದುಗಳನ್ನು ಮುಚ್ಚಿ ಎಂಥಾ ಅಲೆಯನ್ನೂ ತಡೆದುಕೊಳ್ಳುವಂತೆ ಈ ದೋಣಿಗಳನ್ನು ಮಾಡಿರುತ್ತಾರೆ. ತೀರವನ್ನು ಸಮೀಪಿಸಿ ಮದರಾಸಿಗೆ (Maderas = ಮದರಾಸು) ಮೂರು ಮೈಲಿ ದಕ್ಷಿಣಕ್ಕಿರುವ ಸೆಂಟ್ ಥಾಮಸನ್ನು ಎಡಕ್ಕೆ ಬಿಟ್ಟು ಸೆಂಟ್ ಜಾರ್ಜ್‌ಗೆ ಹೋದೆವು. ದೋಣಿಯಿಂದ ಇಳಿದು ಕರಿಯರ ಹೆಗಲಮೇಲೆ ಕುಳಿತು ನೀರುದಾಟಿದೆವು. ಅಲೆಗಳ ನೀರಿನಿಂದ ಮೈಯೆಲ್ಲಾ

---

೧. ಮುಸ್ಸೂಲಾ (Mussoola = ಮಾಸೂಲ = ಮೀನು ಹಿಡಿಯುವ ದೋಣಿ; ಮತ್ಸ್ಯ (ಸಂ) = ಮಚ್ಛಿ (ಹಿಂದಿ).

ಒದ್ದೆಯಾಗಿದ್ದರೂ ಮರಳಿನ ಮೇಲೆ ಕಾಲಿಟ್ಟಾಗ ಅದು ಗಣಗಣ ಸುಡುತ್ತಿತ್ತು. ನಿಲ್ಲಲಾರದೆ ಕೋಟೆಗೆ ಧಾವಿಸಿದೆವು.

ಮದರಾಸಿನ ನಿಜವಾದ ಮಾಲೀಕರು ಇಂಗ್ಲಿಷರು. ತೊಂಬತ್ತು ವರ್ಷಗಳ ಹಿಂದೆ ಹಿಂದೂ ನಾಯಕನೊಬ್ಬ ಇದನ್ನು ಅವರಿಗೆ ಕೊಟ್ಟನು.[೨] ಈಚೆಗೆ ಮೂರರು ಅಧಿಪತ್ಯ ವಹಿಸಿಕೊಂಡನಂತರ ಗೋಲ್ಕೊಂಡಾಕ್ಕೆ ವರ್ಷಕ್ಕೆ ೭,೦೦೦ ಪಗೋಡ್ ಪೊಗದಿ ಕೊಡುತ್ತಿದ್ದಾರೆ. ಇಲ್ಲಿಯ ಕಂಪೆನಿ ಏಜೆಂಟನ ಹೆಸರು ಸರ್ ವಿಲಿಯಂ ಲಾಗ್‌ಹಾರ್ನ್ಸ್ ಎಂದು. ಕಾರೊಮಂಡಲ ತೀರದಲ್ಲಿರುವ ಎಲ್ಲಾ ಇಂಗ್ಲಿಷು ಗಡಂಗುಗಳ (Factories) ಮೇಲಿನ ಹತೋಟಿ ಈತನಿಗೆ ಸೇರಿದ್ದು. ತನ್ನದೇ ಆದ ಟಂಕಸಾಲೆ ಇಟ್ಟಿದ್ದಾನೆ. ಈ ನಾಡಿನ ಹಣ ಕೇವಲ 'ಫನಂ.'ಇದು ಚಿನ್ನದ್ದು ; ಮೂರು ಷಿಲ್ಲಿಂಗ್ ಬೆಲೆ. ಇದಲ್ಲದೆ 'ಕಾಸ್' ಎಂಬ ನಾಣ್ಯವೂ ಉಂಟು. ಇಪ್ಪತ್ತು ಕಾಸುಗಳಿಗೆ ಒಂದು ಫನಂ. ಏಜೆಂಟ್ ಬಹು ವೈಭವದಿಂದ ತನ್ನ ಅಧಿಕಾರ ನಡೆಸುತ್ತಾನೆ. ಮುನ್ನೂರು ನಾನೂರು ಜನ ಕರಿಯ ಅಂಗರಕ್ಷಕರಿದ್ದಾರೆ. ಸಮಯ ಬಂದಲ್ಲಿ ೧,೫೦೦ ಜನ ಸಿದ್ಧರಾಗುತ್ತಾರೆ. ಹೊರಗಡೆ ಹೋದಾಗ ಬಾಜಾ ಭಜಂತ್ರಿಗಳ ಸಮೇತ ತನ್ನ ಪರಿವಾರದೊಡಗೂಡಿ ಕುದುರೆಯ ಮೇಲೆ ಹೋಗುತ್ತಾನೆ. ಸ್ತ್ರೀಯರು ಪಲ್ಲಕ್ಕಿಗಳಲ್ಲಿ ಹೋಗುತ್ತಾರೆ.

ಇಲ್ಲಿಯ ಇಂಗ್ಲಿಷರ ಸಂಖ್ಯೆ ೩೦೦ ಇರಬಹುದು. ಇವರೆಲ್ಲ ಪ್ರೊಟೆಸ್ಟೆಂಟರು. ಪೋರ್ಚುಗೀಸರು ಸಾವಿರಾರು ಜನ ಇದ್ದಾರೆ. ಮೊದಲಿಗೆ ಸೆಂಟ್ ಥಾಮಸ್‌ನಲ್ಲಿ ಇದ್ದು ಅದು ಮೂರರ ವಶವಾದ ಮೇಲೆ ಅಲ್ಲಿಂದ ಓಡಿಸಲ್ಪಟ್ಟು ಇಲ್ಲಿಗೆ ಬಂದು ಇಂಗ್ಲಿಷರ ರಕ್ಷಣೆಯಲ್ಲಿದ್ದಾರೆ. ಇವರೆಲ್ಲ ಕ್ಯಾಥೋಲಿಕರು.

ಈಗ ಮದ್ರಾಸಿನ ವಿಷಯ. ಊರಿನ ಬೀದಿಗಳು ಬಹು ಉದ್ದವಾಗಿವೆ. ಅಲ್ಲಲ್ಲಿ ಅಡ್ಡಬೀದಿಗಳೂ ಇವೆ. 'ಚೌಲ್ಟ್ರಿ'ಗಳೂ (ಛತ್ರ ?=ಚಾವಡಿ), ಒಂದು ಸರಾಪ್ ಕಟ್ಟೆಯೂ, ಕಲ್ಲಿನ ಪೌಳಿಗೋಡೆಯ ಒಂದು ದೊಡ್ಡ ದೇವಸ್ಥಾನವೂ, ಸಣ್ಣ ಸಣ್ಣ ಗುಡಿಗಳೂ ಇವೆ. ಊರಿನ ಸುತ್ತ ಮಣ್ಣುಗೋಡೆ ಇದೆ. ಊರಿನ ಹೊರಗಡೆ ಬತ್ತದ

---

೨. ೧೬೪೭ರ ಹೊತ್ತಿಗೆ ಗೋಲ್ಕೊಂಡಾದ ಸುಲ್ತಾನನ ಮಹಾದಂಡನಾಯಕನಾದ ಮೀರ್ ಜುಮ್ಲಾನು ಮದ್ರಾಸಿನ ಸುತ್ತಮುತ್ತಣ ಪ್ರದೇಶಕ್ಕೆಲ್ಲಾ ಒಡೆಯನಾಗಿ ವಿಜೃಂಭಿಸುತ್ತಿದ್ದ. ಇಷ್ಟರಲ್ಲಿ ಇಂಗ್ಲಿಷರ ಏಜೆಂಟ್ ಡೇ ಎಂಬುವನು ಸ್ಥಳದ ನಾಯಕನೊಬ್ಬನಿಂದ ಒಂದು ಸಣ್ಣ ಜಾಗವನ್ನು ಪಡೆದು ಅಲ್ಲಿ ೧೬೪೦ರಲ್ಲಿ ಫೋರ್ಟ್ ಸೆಂಟ್ ಜಾರ್ಜ್ ಎಂಬ ಕೋಟೆ ಕಟ್ಟಿದ. ಸೆಂಟ್ ಜಾರ್ಜ್ ದಿನ ಕಟ್ಟಿಸಿದ ಕಾರಣ ಅದಕ್ಕೆ ಆ ಹೆಸರು ಬಂದಿರಬೇಕು. ಡೇ ಹೋದ ಮೇಲೆ ಗ್ರೀನ್‌ಹಿಲ್ ಎಂಬುವನು ವೆಲ್ಲೂರಿನಲ್ಲೋ ಚಂದ್ರಗಿರಿಯಲ್ಲೋ ಇದ್ದ ರಾಜ ಶ್ರೀರಂಗರಾಯನನ್ನು ಕಂಡು ಒಂದು 'ಕೌಲಿ'ನ ಮೂಲಕ ಮದ್ರಾಸಿನ ಸ್ವಾಧೀನ ಪಡೆದುಕೊಂಡ. ಆ ಕೌಲಿನಲ್ಲಿ 'ಪಾರ್ಥಿವ ಸಂವತ್ಸರ, ಕಾರ್ತಿಕ ಮಾಸ, ಕೃಷ್ಣ ಪಕ್ಷದಲ್ಲಿ ಇದನ್ನು ಇಂಗ್ಲಿಷರಿಗೆ ಕೊಟ್ಟೆದ' ಎಂದಿದೆ.

ಗದ್ದೆಗಳೂ, ಬಾಳೆ, ತೆಂಗು, ಸೀಪೆ, ಹಲಸು (Jawa), ಮಾವು, ದಾಳಿಂಬೆ, ವೀಳೆಯದೆಲೆ. ಅಡಕೆ ತೋಟಗಳೂ, ಬಗೆ ಬಗೆಯ ಹೂವಿನ ತೋಟಗಳೂ ಇವೆ. ಸ್ಥಳದ ಜನ ವೀಳೆಯದೆಲೆಗೆ ಸುಣ್ಣ ಹಚ್ಚಿ ಅಡಕೆ ಸಮೇತ ಮೆಲ್ಲುತ್ತಾರೆ.

ಮದರಾಸಿನ ಜನರು ಮಚ್ಛಲಿಪಟ್ಟಣದವರಂತೆ ಜೆಂಟೂಗಳು. ಇವರ ಮತ್ತು ಅವರ ಧರ್ಮ ನಂಬಿಕೆ ಇತ್ಯಾದಿಗಳು ಒಂದೇ. ಇವರು ಮೂರರ ಅಧೀನಕ್ಕೊಳಪಟ್ಟಿ ದ್ದಾರೆ. ಆದರೆ ಇಂಗ್ಲಿಷರ ಬಂದೂಕಗಳು ಎಷ್ಟು ದೂರ ಹಾರಬಲ್ಲವೋ ಅಷ್ಟರ ಒಳಗಿರು ವವರು ಇಂಗ್ಲಿಷರ ರಕ್ಷಣೆಯಲ್ಲಿದ್ದಾರೆ. ಈ ರಕ್ಷಣೆಗಾಗಿ ಅವರು ಇಂಗ್ಲಿಷರಿಗೆ 'ಟೋಲ್' (ಸುಂಕ) ಕೊಡುತ್ತಾರೆ. ದನದ ಸಗಣಿಯನ್ನು ಸುಂಕವಾಗಿ ಕೊಡುತ್ತಾರೆ. ಡಚ್ಚರಿಗೆ ಈ ರಾಜ್ಯದಲ್ಲಿ ಸಗಣಿಯೂ ಸಿಕ್ಕಲಿಲ್ಲ. ಮದ್ದುಗುಂಡು ತಯಾರಿಸುವುದಕ್ಕೆ ಮುಖ್ಯವಾಗಿ ಸಗಣಿ ಬೇಕು.

ಭೂಮಿ ಮರಳು ಮರಳು. ಆದರೂ ಬೇಕಾದ್ದೆಲ್ಲಾ ಬೆಳೆಯುತ್ತದೆ. ಎಲ್ಲಾ ಕಡೆ ಗಳಲ್ಲೂ ಮರದ 'ತೋಪು' ಗಳಿವೆ. ಇಂತಹ ಒಂದು ತೋಪಿನಲ್ಲಿದ್ದ ಮರದಮೇಲೆ ನಾನು ಒಂದು ಗೋಸುಂಬೆ ಕಂಡೆ. ಒಬ್ಬ ಕರಿಯನಿಗೆ ಹೇಳಿ ಆತನ ಬಿಲ್ಲಿನಿಂದ ಮಣ್ಣಿನ ಹೆಂಟೆ ಹೊಡೆದು ಅದು ಕೆಳಗೆ ಬೀಳುವಂತೆ ಮಾಡಿದೆ. ಬಿದ್ದ ಗೋಸುಂಬೆಯ ಕುತ್ತಿಗೆ ಯನ್ನು ಜೊಂಡಿನಿಂದ ಕಟ್ಟಿ ನನ್ನ ಮನೆಗೆ ತೆಗೆದುಕೊಂಡು ಬಂದ. ಗೋಸುಂಬೆ ಕೇವಲ ಗಾಳಿ ಕುಡಿದು ಜೀವಿಸುತ್ತದೆ ಎಂದು ಹೇಳುತ್ತಾರೆ. ಇದು ನಿಜವೇ ಎಂದು ನೋಡೋಣ ಎಂದು ಒಂದು ತಿಂಗಳಕಾಲ ಆದಕ್ಕೆ ಏನೂ ಕೊಡದೆ ಇಟ್ಟಿದ್ದೆ. ಆದರೂ ಹೊರಗೆ ಹುಳು ಉಪ್ಪಟೆಗಳನ್ನು ತಿನ್ನದೆ ಇರುತ್ತದೆ ಎಂದು ನಂಬಲಾರೆ. ಹಗಲಿನಲ್ಲಿ ಕೆಲವು ವೇಳೆ ಮಾತ್ರ ತನ್ನ ಬಣ್ಣ ಬದಲಾಯಿಸುತ್ತದೆ ಎಂಬುದು ನಿಜ.

ಇಲ್ಲಿ ನಮ್ಮ ಹಡಗುಗಳು ಒಂಬತ್ತು ದಿನಗಳು ಇದ್ದು ಮತ್ತೆ ಮಚ್ಛಲಿಪಟ್ಟಣಕ್ಕೆ ಹೊರಟುಹೋದುವು. ನಾವು ಇಲ್ಲಿಯೇ ನಿಂತೆವು.

ಸೆಂಟ್‌ಥಾಮಸ್ ಒಮ್ಮೆ ಶ್ರೀಮಂತಿಕೆಯಿಂದ ಮೆರೆದ ಪಟ್ಟಣವಾಗಿತ್ತು. ಈಗ ಅದು ಎಲ್ಲವನ್ನೂ ಕಳೆದುಕೊಂಡಿದೆ. ಇಲ್ಲಿಗೆ ಕೊಂಚ ದೂರದಲ್ಲಿ ಸೆಂಟ್ ಥಾಮಸ್ ಗುಡ್ಡವಿದೆ. ಈ ಗುಡ್ಡದ ಬಳಿ ಇರುವ ಒಂದು ಜಾತಿಯ ಜನರ ಕಾಲುಗಳು ಆನೆಯ ಕಾಲಿನಷ್ಟು ದಪ್ಪವಾಗಿರುವುದನ್ನು ಕಂಡೆ. ಸೆಂಟ್ ಥಾಮಸನನ್ನು ಕೊಲೆಮಾಡಿದ ಶಾಪದಿಂದ ಇವರಿಗೆ ಈ ಗತಿಯಾಗಿದೆ.[1]

ಆಗಸ್ಟ್‌ತಿಂಗಳ ಕೊನೆಯಲ್ಲಿ ಸುಗ್ಗಿಗೆ ಮುಂಚೆ ಹಿಂದೂಗಳು ಒಂದು ಹಬ್ಬ ಆಚರಿಸಿದರು. ದೇವರುಗಳನ್ನು ಹೊತ್ತು ಅಸಂಖ್ಯಾತ ಜನ ಮೆರವಣಿಗೆಯಲ್ಲಿ

---

೧. ಈ ತರಹ ಕಾಲಿನವರನ್ನು ಕೇರಳ, ದಕ್ಷಿಣ ಜಿಲ್ಲೆ ಈ ಕಡೆಗಳಲ್ಲೆಲ್ಲಾ ನೋಡಬಹುದು. ಸೆಂಟ್ ಥಾಮಸನ ಕೊಲೆಗೂ ಆನೆಕಾಲು ರೋಗಕ್ಕೂ ಏನೂ ಸಂಬಂಧವಿಲ್ಲ.

ಹೊರಟರು. ಮುಂದೆ ಬ್ರಾಹ್ಮಣರು ವಾದ್ಯಘೋಷ '(ವೇದಘೋಷ ?) ಮಾಡು ತ್ತಿದ್ದರು. ಅವರ ಹಿಂದೆ ದೇವದಾಸಿಯರು ನರ್ತನಮಾಡುತ್ತಿದ್ದರು. ಕೇವಲ ಲಂಗೋಟಿ ಧರಿಸಿದ ಹುಡುಗರು ಗುಂಪುಗುಂಪುಗಳಾಗಿ ಕೈಕಟ್ಟಿಕೊಂಡು ಕುಣಿಯುತ್ತಿದ್ದರು. ಮೆರವಣಿಗೆ ಸಾಗಿ ಅಡ್ಡಲಾಗಿ ನೆಟ್ಟಿದ್ದ ಒಂದು ಮರದ ಬಳಿಗೆ ಬಂದಿತು. ಆ ಮರಕ್ಕೆ ಒಂದು ತೆಂಗಿನಕಾಯಿ ತೂಗುಹಾಕಿದ್ದರು. ಅದನ್ನು ದೊಡ್ಡ ಗಳುವೊಂದರಿಂದ ಹೊಡೆ ಯಲು ಹಳದಿ ಬಣ್ಣದ ಟೋಪಿಧರಿಸಿದ 'ಹಿಂದೂ'ಗಳು ಪ್ರಯತ್ನಪಟ್ಟರು. ಹೀಗೆ ಮಾಡುವ ಮುನ್ನ ಬ್ರಾಹ್ಮಣರು ಅವರ ಮೇಲೆ ತೀರ್ಥ ಎಸೆದರು. ತೆಂಗಿನಕಾಯನ್ನು ಒಡೆಯುವ ಪ್ರಯತ್ನ ನಡೆದು ಕೊನೆಗೊಬ್ಬ ಅದನ್ನು ಒಡೆದ. ಸರಿ, ಆಗ ಜಯಜಯ ಕಾರವಾಯಿತು. ಈ ಆಟ ಆದಮೇಲೆ ವೀಳೆಯದೆಲೆ ತೆಂಗಿನಕಾಯಿಗಳ ಚೆಲ್ಲಾಟ ವಾಯಿತು. ಇವುಗಳಿಗಾಗಿ ಜನರ ಕಿತ್ತಾಟ ಹೇಳತೀರದು.

ಸೆಪ್ಟೆಂಬರ್ ಒಂದನೆಯ ತಾರೀಖು ನಮ್ಮ ಹತ್ತು ಹಡಗುಗಳಲ್ಲಿ ಏಳು ಹಡಗು ಮಚ್ಛಲಿಪಟ್ಟಣದಿಂದ ಹಿಂದಿರುಗಿದುವು. ಹಾಲ್ಯಾಂಡರಿಗೂ (ಡಚ್ಚರಿಗೂ) ನಮ್ಮ ಹಡಗುಗಳಿಗೂ ನಡೆದ ಯುದ್ಧದಲ್ಲಿ ನಮ್ಮ ಮೂರು ಹಡಗುಗಳು ನಾಶವಾದುವು; ನೂರಾರು ಜನ ಸತ್ತುಹೋದರು. ಈ ತೀರದಲ್ಲಿ (ಪೂರ್ವ ಕರಾವಳಿಯಲ್ಲಿ) ಡಚ್ಚರಿಗೆ ಸೇರಿದ ಫ್ಯಾಕ್ಟೊರಿಗಳು ಯಾವುವೆಂದರೆ: ಸಿಲೋನ್, ಜಫ್ನಾಪಟ್ಣ, ನಾಗಪಟ್ಣ, ಪುಲಿಕಾಟ್ ಮತ್ತು ಮಚ್ಛಲಿಪಟ್ಣ. ನಾವು ನಮ್ಮ ಹಡಗುಗಳಿಗೆ ಆಗಿದ್ದ ಜಖಂ ಸರಿ ಮಾಡಿಕೊಂಡು ಪೆಟ್ಲುಪ್ಪು ಮತ್ತು ನವರುಬಟ್ಟೆಗಳನ್ನು ಹೇರಿಕೊಂಡು ಮಲಬಾರ್ ತೀರದ ಕಡೆ ಸಾಗಿದೆವು. ಇನ್ನು ಇಲ್ಲಿರುವುದು ಸರಿಕಾಣಲಿಲ್ಲ. ಏಕೆಂದರೆ, ಹಾಲ್ಯಾಂಡರ ಹಾವಳಿಯ ಜೊತೆಗೆ ಮೊಸ್ಸೂನ್ಸ್ (Mossoons = Monsoons = ಈಶಾನ್ಯ ಮಾರುತಗಳು) ಗಳ ಹಾವಳಿ ಇತ್ತು.

ತುತುಕೊಡಿ, ಸಿಲೋನ್ ದಾಟಿ ಕೊಚಿನ್ ತಲುಪಿದೆವು. ತುತುಕೊಡಿ ಡಚ್ಚರಿಗೆ ಸೇರಿದೆ. ಅವರ ಕೈಗೆ ಸಿಕ್ಕಬಾರದೆಂದು ನಾವು ಮಲಬಾರ್ ತೀರಕ್ಕೆ ಸಾಗಿದೆವು. ಇಲ್ಲಿಗೆ ಕೆಟ್ಟ ಹವೆಯ ತಾಪತ್ರಯ ಹಾಗೂ ಡಚ್ಚರ ತಾಪತ್ರಯ ಎರಡೂ ಮುಗಿದುವು. ಕೊಚಿನ್‌ನಲ್ಲಿ ನಮಗೆ ಬೇಕಾದ ಮೆಣಸು ಸಿಕ್ಕಲಿಲ್ಲ. ಮುಂದೆ ಸಾಗಿ ತನೋರ್ (ತಾನೂರ್) ತಲುಪಿದೆವು. ನವೆಂಬರ್ ಒಂದನೆಯ ತಾರೀಖು.

ತೀರಕ್ಕೆ ಹೋದ ನಮ್ಮನ್ನು ಸ್ಥಳದ ಜನ ಸುತ್ತುವರಿದು ದುರುಗುಟ್ಟಿಕೊಂಡು ನೋಡಿದ್ದೂ ನೋಡಿದ್ದೆ. ನಾನು ಊರು ನೋಡಲು ಹೋದೆ. ಅಂಥ ಹೇಳಿಕೊಳ್ಳುವ ಊರಲ್ಲ ಇದು. ಗುಡಿಸಲ ಮನೆಗಳು. ಇಂಗ್ಲಿಷರ ಮನೆಯು ಅಷ್ಟೇನೂ ಹೇಳಿಕೊಳ್ಳು ವಂತಿರಲಿಲ್ಲ. ತಾಳೆಗರಿ ಹೊದಿಸಿದ ಮನೆ ಅದು. ಜನರು ತಮ್ಮ ತಮ್ಮ ಗುಡಿಸಲು ಗಳ ಮುಂದೆ ಮೆಣಸು, ಅರಿಶಿಣ, ಶುಂಠಿ, ದಾಲ್ಚಿನ್ನಿ, ಏಲಕ್ಕಿ, ತಂಬಾಕು, ಹುಕ್ಕಾ ಸೇದುವ ಲಾಳಿಕಡ್ಡಿಗಳು, ಅಡಕೆ—ಇವುಗಳನ್ನು ಇಟ್ಟುಕೊಂಡು ಮಾರುತ್ತಿದ್ದರು. ಸರಾಫರೂ ಇದ್ದರು.

ಇಲ್ಲಿಯ ಜನರ ಭಾಷೆ ಮಲಬಾರ್ (ಮಲೆಯಾಳಿ). ಕ್ಯಾಲಿಕಟ್ ಜಾಮೊರಿನ್‌ನ ಅಧೀನಕ್ಕೊಳಪಟ್ಟಿದೆ. ನಮಗೆ ಊರು ತೋರಿಸಲು ಆತನ ಕಡೆಯ ಪ್ರತಿನಿಧಿಯನ್ನು ಕಳುಹಿಸಿಕೊಟ್ಟಿದ್ದಲ್ಲದೆ ನಾವು ವ್ಯಾಪಾರ ಮಾಡಬಹುದೆಂದೂ ತಿಳಿಸಿದ. ಇಷ್ಟಲ್ಲದೆ ನಮಗೆ ಏಳು ತುಪಾಕಿಗಳ ಗೌರವ ನೀಡಿದ.

ಇಲ್ಲಿಯ ಜನರಲ್ಲಿ ಮೂರು ವರ್ಗಗಳಿವೆ. ಪುರೋಹಿತರದು ಮೊದಲನೆಯ ವರ್ಗ. ಇವರ ಮೈಮೇಲೆ ತುಂಬ ಕಡಮೆ ಬಟ್ಟೆ. ಮೈತುಂಬ ವಿಭೂತಿ ಬಳಿದುಕೊಂಡು ಕುದುರೆಯ ಬಾಲದಂತೆ ತಲೆಯ ಮೇಲೆ ಜುಟ್ಟುಬಿಟ್ಟುಕೊಂಡು ಓಡಾಡುತ್ತಾರೆ. ಎರಡನೆಯ ವರ್ಗದವರನ್ನು ನಾಯರ್‌ಗಳೆಂದು ಕರೆಯುತ್ತಾರೆ. ಇವರು ಯೋಧರು. ಮೂರನೆಯ ವರ್ಗದವರು ಕುಶಲ ಕೆಲಸಗಾರರು ಅಥವಾ ರೈತಾಪಿ ಜನಗಳು. ರೈತರ ದುಡಿಮೆಯೆಲ್ಲಾ ಭೂಮಾಲಿಕರ ಪಾಲು, ಭೂಮಾಲಿಕರು ಇವರನ್ನು ಮೈಮುರಿದು ದುಡಿಸಿಕೊಳ್ಳುತ್ತಾರೆ. ಹೀಗಾಗಿ ರೈತರು ತಮ್ಮ ಹೊಟ್ಟೆಪಾಡಿಗೆ ಮಕ್ಕಳನ್ನೇ ಮಾರುವ ಸ್ಥಿತಿ ಒದಗುತ್ತದೆ.

ಎಲ್ಲಾ ಜನರ ಉಡುಪೆಂದರೆ ಒಂದು 'ಲುಂಗಾ' (Lunga or ಲುಂಗಿ) ಅಷ್ಟೆ. ಶ್ರೀಮಂತರು ಕೈಗೆ ಚಿನ್ನದ ಕಪ್ಪ ತೊಡುತ್ತಾರೆ. ಹೆಂಗಸರು ಕಾರೊಮಂಡಲ ತೀರದ ಕಡೆಯ ಹೆಂಗಸರಂತೆ ಸೀರೆ ಉಡುತ್ತಾರೆ. ಇವರು ಹಾಕಿಕೊಂಡ ಚಿನ್ನದ ಆಭರಣಗಳು ಕಿವಿಯು ಆಲೆಯು ಹೆಗಲವರೆಗೂ ಇಳಿಯಬೀಳುವಷ್ಟು ಭಾರವಾಗಿರುತ್ತವೆ. ಮದ್ರಾಸಿನಲ್ಲಿ ಕಂಡಂತಹ ಆನೆಕಾಲಿನ ಜನರನ್ನು ಇಲ್ಲಿಯೂ ಕಂಡೆ. ಈ ರೋಗ ಯಾವುದೋ ವಿಷಕ್ರಿಮಿಯಿಂದಲೋ ಇಲ್ಲವೆ ಕೆಟ್ಟ ನೀರನ್ನು ಕುಡಿಯುವುದರಿಂದಲೋ ಬರುತ್ತದೆ ಎಂದು ನನಗನ್ನಿಸುತ್ತದೆ.

ಇಲ್ಲಿಯ ನಾಣ್ಯಗಳು ಚಿನ್ನದವುಗಳು. ಸೆಂಟ್ ಥಾಮಸ್‌ನ ೧೦ ಷಿಲ್ಲಿಂಗ್‌ಗಳಿಗೆ ಒಂದು ಫನಂ. ೭½ ಫನಂಗಳು ಒಂದು ಡಾಲರ್‌ಗೆ ಅಥವಾ ಪೈಸಾಕ್ಕೆ ಸಮ. ತಾಮ್ರದ ನಾಣ್ಯ ಬುಸೆರೂಕ್. ಇಪ್ಪತ್ತು ಬುಸೆರೂಕ್‌ಗಳಿಗೆ ಒಂದು ಫನಂ.

ತರುಮರಗಳಿಂದ ಕೂಡಿದ ಸುಂದರವಾದ ನಾಡು ಇದು. ಗುಡ್ಡಗಾಡು ಪ್ರದೇಶದಲ್ಲಿ ಮೆಣಸು ಬೆಳೆಯುತ್ತಾರೆ. ಬಾಲಮೆಣಸನ್ನೂ ಇಲ್ಲಿ ಬೆಳೆಯುತ್ತಾರೆ. ಇಂಡಿಯಾದ ಬೇರೆ ಕಡೆಗಳಲ್ಲಿ ಬೆಳೆಯುವ ಮರಗಿಡಗಳೂ ಹಣ್ಣುಗಳೂ ಇಲ್ಲಿ ಬೆಳೆಯುತ್ತವೆ. ಮುಖ್ಯ ಬೆಳೆ ಬತ್ತ. ಮೃಗಪಕ್ಷಿಗಳಿಗೂ ಇಲ್ಲಿ ಅಭಾವವಿಲ್ಲ. ಅಪ್ಪಟ ಕಪ್ಪು ಬಣ್ಣದ ಕೋಳಿಗಳನ್ನು ನಾನಿಲ್ಲಿ ಮೊದಲ ಬಾರಿಗೆ ಕಂಡೆ. ಇವುಗಳ ಚರ್ಮ ನೀಗ್ರೋಗಳ ಬಣ್ಣದಷ್ಟು ಕಪ್ಪು. ಕೋಳಿಯ ಮೂಳೆಗಳೂ ಅಷ್ಟೆ. ಆದರೆ ಮಾಂಸ ಮಾತ್ರ ಅಪ್ಪಟ ಬೆಳ್ಳಗೆ.

ಎರಡು ದಿನ ಇಂಗ್ಲಿಷರ ಮನೆಯಲ್ಲಿ ನೆಲದ ಮೇಲೆ ಮಲಗಿದ್ದೆ. ರಾತ್ರಿ ಹೊತ್ತು ಗುಳ್ಳೆನರಿಗಳ ಬಳ್ಳು. ಇದು ಸಾಲದು ಎಂಬಂತೆ 'ಟಾಡಿ' (ಹೆಂಡ) ಕುಡಿದ ಜನರ

ಕೂಗಾಟ. ರಾತ್ರಿಯಾಯಿತೆಂದರೆ ಚಳಿ ಬೇರೆ. ಸ್ಥಳೀಯ ಜನರು 'ಕೊಂಬಿ' (Comby=ಕಂಬಳಿ ?) ಹೊದ್ದು ಬೆಂಕಿಕಾಯಿಸಿಕೊಂಡು ಕಾಲಹಾಕುತ್ತಾರೆ.

ಒಂದು 'ಕ್ಯಾನೊ' ದೋಣಿಯಲ್ಲಿ ಕುಳಿತು ತುಂಬ ತಾಪತ್ರಯದಿಂದ ನಮ್ಮ ಹಡಗು ಸೇರಿಕೊಂಡೆ. ಇಲ್ಲಿ ಸಿಕ್ಕಿದಷ್ಟು ಮೆಣಸು ತೆಗೆದುಕೊಂಡು ನಮ್ಮ ಹಡಗುಗಳು ಕ್ಯಾಲಿಕಟ್‌ಗೆ ಪ್ರಯಾಣಮಾಡಿದುವು.

ಕ್ಯಾಲಿಕಟ್ ಹಿಂದೆ ಬಹು ಅದ್ದೂರಿಯಿಂದ ಬಾಳಿದ ಊರೆಂಬುದನ್ನು ಈಗ ಕಾಣುವ ಅವಶೇಷಗಳಿಂದ ಊಹಿಸಬಹುದು. ಜಾಮೊರಿನ್ ದೊರೆ ಇರುವುದು ಇಲ್ಲಿಯೇ. ಜನರು ಸುಸಂಸ್ಕೃತರು. ವ್ಯಾಪಾರ ಸಾಪಾರಗಳಲ್ಲಿ ತೊಡಗಿದ್ದಾರೆ.

ತೀರದಲ್ಲಿ ನಮ್ಮ ಕಣ್ಣಿಗೆ ಮೊದಲು ಬೀಳುವುದು ಇಂಗ್ಲಿಷರ ಮನೆ. ಅದರ ಹಿಂಬದಿಯಲ್ಲಿ ಪೋರ್ಚುಗೀಸರ ಪಾಳುಬಿದ್ದ ಮನೆ ಇದೆ. ಹಿಂದೆ ಈ ಊರಿನಲ್ಲಿ ನಡೆಯುತ್ತಿದ್ದ ವ್ಯಾಪಾರವೆಲ್ಲ ಪೋರ್ಚುಗೀಸರ ಜೊತೆಯೇ ಗೋವಾಕ್ಕೆ ಹೋಗಿಬಿಟ್ಟಿದೆ. ಜಾಮೊರಿನ್ ಪೋರ್ಚುಗೀಸರನ್ನು ಇಲ್ಲಿಂದ ಓಡಿಸಿಬಿಟ್ಟಿದ್ದಾನೆ.

ಇಲ್ಲಿಯ ನಾಣ್ಯಗಳೆಂದರೆ ಬೆಳ್ಳಿಯ 'ತಾರ್' (ತಾರಾ). ಈ ೨೮ ನಾಣ್ಯಗಳಿಗೆ ಒಂದು ಫನಂ. ಪರ್ಷಿಯಾದೊಡನೆ ವ್ಯವಹರಿಸಲು' ಅಬ್ಸೀ' (Absee=ಅಬ್ಬಾಸ್) ಎಂಬ ನಾಣ್ಯಗಳಿವೆ. ಇಲ್ಲಿ ತಾಮ್ರದ ನಾಣ್ಯಗಳೇ ಇಲ್ಲ. ಇಲ್ಲಿಯ ಜನರ ವ್ಯಾಪಾರ ವೆಂದರೆ ಅಡಕೆ, ತೆಂಗಿನಕಾಯಿ, ಎಣ್ಣೆ ಮತ್ತು ಮೀನು.

ಎತ್ತರವಾದ ಬೆಟ್ಟಗಳ' ಕಾರಣ ಆ ಕಡೆ ಉದಯವಾದ ಸೂರ್ಯ ಈಕಡೆ ಕಾಣಿಸಿಕೊಳ್ಳುವುದಕ್ಕೆ ಎಷ್ಟೋ ಹೊತ್ತಾಗುತ್ತದೆ.

ಕ್ಯಾಲಿಕಟ್‌ನಿಂದ ಹೊರಟು ಧರ್ಮಪಟಂಗೆ ಹೋದೆವು. ಇಲ್ಲಿ ಬೇರೆಕಡೆಗಳಲ್ಲಿ ಸಿಕ್ಕಿದ್ದಕ್ಕಿಂತ ಹೆಚ್ಚು ಮೆಣಸು ಸಿಕ್ಕಿತು. ಈ ಮೆಣಸನ್ನು ಹೇರಿಕೊಂಡು ಮುಂದೆ ಕನ್ನಾನೂರಿಗೆ ಹೊರಟೆವು. ಆದರೆ ಇಲ್ಲಿರುವ ಡಚ್ಚರು ಗುಂಡುಹಾರಿಸಿ ನಮ್ಮನ್ನು ಬೆದರಿಸಿದ ಕಾರಣ ಮುಂದೆ ಸಾಗಿ ಫಲಪಟನ್ (Phala ಪಟನ್=ಬೆಲಿಯಪಟಂ) ತಲುಪಿದೆವು. ನಾನು ಒಂದು ದೋಣಿ ತೆಗೆದುಕೊಂಡು ನದಿಯಮೇಲೆ ಹೋದೆ. ದೋಣಿ ಸಾಗಿಸುವವರನ್ನು 'ಲಾಸ್ಕರ್' (Laskar) ಎಂದು ಕರೆಯುತ್ತಾರೆ. ಇವರನ್ನು ನಾವಿಕರೆಂದು ಕರೆಯಲು ನಾಚಿಕೆಯಾಗುತ್ತದೆ. ಮನಸ್ಸಿಗೆ ಬಂದಂತೆ ಬೈದರೂ ಇವರು ಮೈಬಗ್ಗಿಸಿ ಕೆಲಸಮಾಡುವುದಿಲ್ಲ. ಮಹಮ್ಮದೀಯರಾದ ಈ ಹುಟ್ಟುಸೋಮಾರಿಗಳು ಏನೋ ಹಾಡಿಕೊಂಡು ಆಗಾಗ್ಗೆ 'ಅಲ್ಲಾ' 'ಅಲ್ಲಾ' ಎಂದು ಹೇಳುತ್ತಾರೆಯೇ ವಿನಃ ಮೈಬಗ್ಗಿಸಿ ಕೆಲಸಮಾಡುವುದೇ ಇಲ್ಲ. ನದಿಯ ಇಕ್ಕೆಲಗಳ ಪ್ರಕೃತಿ ಸೌಂದರ್ಯ ಬಹು ರಮ್ಯವಾಗಿತ್ತು. ಅಂದಚೆಂದದ ಮರಗಿಡಗಳು. ಅಲ್ಲಲ್ಲಿ ಸುಂದರವಾದ ಹಳ್ಳಿಗಳು. ನದಿಯಲ್ಲಿ ಮೊಸಳೆಗಳು! ಅವು ನದಿಯ ಮರಳಿನ ಮೇಲೆ ಆರಾಮವಾಗಿ ಜನರ ಹೆದರಿಕೆಯಿಲ್ಲದೆಯೇ ಮಲಗಿದ್ದುವು. ಬ್ರಾಹ್ಮಣರು ಮಂತ್ರಹಾಕಿ

ಇವುಗಳು ಹಾವಳಿ ಮಾಡದಂತೆ ತಡೆದಿದ್ದಾರೆಂದು ಹೇಳಿದರು. ಇದು ಸುಳ್ಳೋ ನಿಜವೋ ಹೇಳಲಾರೆ. ಅಂತೂ ಅವು ಯಾರ ತಂಟೆಗೂ ಹೋಗದೆ ಸುಮ್ಮನೆ ಬಿದ್ದು ಕೊಂಡಿದ್ದುವು. ಬ್ರಾಹ್ಮಣರು ಕಾಡಿನ ಹುಲಿಗಳನ್ನೂ ಮಂತ್ರದಿಂದ ಸುಮ್ಮನಿರಿಸಿದ್ದಾರೆಂದು ಹೇಳಿದರು.

ನದಿಯಮೇಲೆ ಒಂದು ಮೈಲಿ ಹೋದಮೇಲೆ 'ಕುಟ್ಟಿಕೊನಿ' (Cutty-cony)ಎಂಬ ಸುಂದರವಾದ ಅರಮನೆ ಸಿಕ್ಕಿತು. ಗುಡ್ಡದ ಮೇಲಿರುವ ಇದು ಈಗ ಇಂಗ್ಲಿಷರ ವಶದಲ್ಲಿದೆ. ಮೊದಲಿಗೆ ಇದು ಬ್ರಾಹ್ಮಣ ಆಚಾರ್ಯರ ಪೀಠವಾಗಿತ್ತಂತೆ. ಇಲ್ಲಿ ಈಗ ಇಂಗ್ಲಿಷರು ಸಿಪಾಯಿಗಳನ್ನೂ ಫಿರಂಗಿಗಳನ್ನೂ ಇಟ್ಟಿದ್ದಾರೆ. ಇಂಗ್ಲಿಷ್ ಸಿಪಾಯಿಗಳ ಜೊತೆಗೆ ನಾಯರ್ ಸಿಪಾಯಿಗಳೂ ಇದ್ದಾರೆ. ಈ ಅರಮನೆಯಲ್ಲಿ ಹೇರಳವಾಗಿ ಚಿನ್ನ ಬೆಳ್ಳಿ ವಿಗ್ರಹಗಳಿದ್ದುವಂತೆ. ಅವನ್ನೆಲ್ಲಾ ಬ್ರಾಹ್ಮಣರು ದೋಚಿಕೊಂಡರಂತೆ. ಈಗ ಏನೂ ಮಾಡಲಾಗದೆ ಅವರು ತೆಪ್ಪಗಿದ್ದಾರೆ. ಈ ಅರಮನೆಯ ಹೊರಗಡೆ ಆಚೆ 'ಮೆಸ್ತಿಕೊ' ಎಂಬ ಅರೆಪೋರ್ಚುಗೀಸ್ ಜನ ಇದ್ದಾರೆ. ವೇಶ್ಯಾಗೃಹಗಳಿಗೂ ಸೂಳೆಗೇರಿಗಳಿಗೂ ಲೆಕ್ಕವಿಲ್ಲ. ಮಲಬಾರ್ ತೀರದ ಹೆಂಗಸರು ವ್ಯಭಿಚಾರಿಣಿಯರು. ಇವರು ಗಂಡಸರಂತೆ ಸಂಭೋಗಮಾಡುತ್ತಾರೆ.

ಇಲ್ಲಿಯ ೧೬ ತಾರಾಗಳಿಗೆ ಒಂದು ಫನಂ. ನಾಲ್ಕು ಕಾಸುಗಳು ಒಂದು ರೂಪಾಯಿನ ಎಂಟನೆಯ ಒಂದು ಭಾಗ. ಮಂಗಳೂರಿನಲ್ಲಿ ಡಚ್ಚರಿಗೆ ಸೇರಿದ ಒಂದು ಕೋಟೆ ಇದೆ. ಉತ್ತರಕ್ಕೆ ಆರುಮೈಲಿ ದೂರದಲ್ಲಿ ಫ್ರೆಂಚರ ಬಾವುಟ ಹಾರಾಡುತ್ತಿದೆ.

ಫಲಪಟನ್‌ನಲ್ಲಿಯೂ ಇಂಗ್ಲಿಷರು ಇದ್ದಾರೆ. ಇಲ್ಲಿಯೂ ಗುಡ್ಡಗಾಡುಗಳಲ್ಲಿ ಒಳ್ಳೆಯ ಏಲಕ್ಕಿ ಹೇರಳವಾಗಿ ಬೆಳೆಯುತ್ತದೆ. ಇಲ್ಲಿಯ ೧೬ ತಾರಾಗಳಿಗೆ ಒಂದು ಫನಂ. ನಾಲ್ಕು ಕಾಸುಗಳು ಒಂದು ರೂಪಾಯಿನ ⅛ ಭಾಗ.

ನಾವು ನಮ್ಮ ಸಮುದ್ರಯಾನವನ್ನು ಮುಂದುವರಿಸಿ ಮಲಬಾರ್ ತೀರವನ್ನು ಹಾದು ಕನಾಟಿಕ್ (Canatic = ಕರ್ನಾಟಕ) ತೀರದಲ್ಲಿರುವ ಬಟ್ಟಿಕಲೈ (Batticalai = ಭಟ್ಕಳ) ಸಮೀಪದಲ್ಲಿರುವ ಒನೋರ್ (ಹೊನ್ನಾವರ) ಮುಟ್ಟಿದೆವು. ಇದಕ್ಕೆ ಮುಂಚೆ ಎರಡು ದ್ವೀಪಗಳ ಮಧ್ಯೆ ಮಲಬಾರ್ ಕಡಲುಗಳ್ಳರು ನಮ್ಮನ್ನು ಕೊಳ್ಳೆಹೊಡೆಯಲು ಸಂಚುನಡೆಸಿದ್ದರು. ಆದರೆ ಅದು ಸಾಗದೆ ತಮ್ಮ ದೋಣಿಗಳನ್ನು ಜೋರಾಗಿ ಸಾಗಿಸಿ ನಮ್ಮ ಕೈಗೆ ಸಿಕ್ಕದೆ ಓಡಿಹೋದರು.

ಹೊನ್ನಾವರಕ್ಕೆ ಬಂದ ಮಾರನೆಯ ದಿನ ನಾನು ಊರು ನೋಡಲು ಹೋದೆ. ಇಲ್ಲಿ ಡಚ್ಚರಿಗೆ ಸೇರಿದ ಒಂದು ಮನೆ ಇದೆ. ಊರಿನ ಒಂದು ಕಡೆ ಪೋರ್ಚುಗಲ್ಲರು ಕಟ್ಟಿದ ದುರ್ಗ (Castle) ಇದೆ. ಇದನ್ನು ಕಟ್ಟಿದವರು ಪೋರ್ಚುಗಲ್‌ರಾದರೂ ಕನರೀನರು (Canareens) ಡಚ್ಚರ ಸಹಾಯದಿಂದ ತಮ್ಮ ವಶಮಾಡಿಕೊಂಡಿದ್ದಾರೆ. ಈ ಊರು ಡಚ್ಚರು ಮತ್ತು ಪೋರ್ಚುಗಲ್‌ರಲ್ಲಿ ಹಂಚಲ್ಪಟ್ಟಿದೆ. ಇಲ್ಲಿರುವ ಬಹುತೇಕ

ಜನ ಕ್ರೈಸ್ತಮತಕ್ಕೆ ಸೇರಿದವರು. ನಾಯರ್‌ಗಳಾಗಲೀ ಮೂರರಾಗಲೀ ಇಲ್ಲ. ಜನರು ಭಯಭೀತಿಗಳಿಲ್ಲದೆ ಬೀದಿಗಳಲ್ಲಿ ತಿರುಗಾಡುತ್ತಾರೆ. ಕಟ್ಟುಕಟ್ಟಳೆಗಳನ್ನು ಜನರು ಶಿಸ್ತಿನಿಂದ ಆಚರಿಸುತ್ತಾರೆ.

ಇಲ್ಲಿಂದ ನಾವು ಇದೇ ರಾಜ್ಯದಲ್ಲಿರುವ ಮಿರ್ಜಾ (Mirja = Mirjan) ಎಂಬ ಊರಿಗೆ ಹೋದಮೇಲೆ ನಾನು ಊರು ನೋಡಲು ಹೋದೆ. ದೋಣಿಯಿಂದ ಇಳಿದಾಗ ನನ್ನನ್ನು ಎದುರುಗೊಂಡವನು ಇಲ್ಲಿಯ ರಾಜಕುಮಾರರಲ್ಲಿ (Prince) ಒಬ್ಬ. ಮರದ ನೆರಳಿನಲ್ಲಿ ಹಾಸಿದ ಜಮಖಾನದ ಮೇಲೆ ಕುಳಿತಿದ್ದ. ಆತನ ಪರಿವಾರದವರು ನಿಂತುಕೊಂಡಿದ್ದರು. ಈತ ಕನರಾದ (Canara) ರಾಜನ ಪೋಷಕ (Protector)ನಿಗಾಗಿ ಕಾಯುತ್ತಾ ಇದ್ದ. ಪ್ರಾಪ್ತವಯಸ್ಕನಲ್ಲದ ರಾಜನ ಪರವಾಗಿ ಆತನ ಪೋಷಕ ಆಡಳಿತ ನಡೆಸುತ್ತಿದ್ದಾನೆ. ನಾನಿದ್ದಂತೆಯೇ ಆ ಪೋಷಕ ದೊಡ್ಡ ಪರಿವಾರ ಸಮೇತ ಅದ್ದೂರಿಯಿಂದ ಅಲ್ಲಿಗೆ ಆಗಮಿಸಿದ. ಆತನೊಡನೆ ಕುದುರೆಗಳ 'ಲಷ್ಕರಿ' (Laskarry = ಸೈನ್ಯ) ಯೂ ಬಂದಿತು. ಕುದುರೆಗಳಿಗೆ ಮಾಡಿದ ಅಲಂಕಾರ ಇಂಗ್ಲೆಂಡಿನ ಎಂತಹ ಕುದುರೆಗೂ ಮಾಡಿರುವುದಿಲ್ಲ. ಬಂದ ಕೂಡಲೇ ಪೋಷಕನು ನಮ್ಮ ಹಡಗುಗಳನ್ನು ನೋಡಲು ಸಮುದ್ರದಮೇಲೆ ಹೋದ. ಮೂವತ್ತಾರು ಜನ ನಡೆಸಿದ ದೋಣಿಯಲ್ಲಿ ಕುಳಿತು ಭಾರಿ ವಾದ್ಯದೊಡನೆ ಬಹು ವೈಭವದಿಂದ ಸಮುದ್ರದಮೇಲೆ ಸಾಗಿದ. ನಮ್ಮ ಎರಡು ಮೂರು ಹಡಗುಗಳಿಗೆ ಹೋದಾಗ ಹಡಗುಗಳು ಗುಂಡು ಹಾರಿಸಿ ಮರ್ಯಾದೆ ತೋರಿಸಿದುವು. ಜಯಘೋಷಗಳಾದುವು. ಕೆಂಪುಬಟ್ಟೆ ಮರ್ಯಾದೆಗಳು ನಡೆದವು. ಈ ಪೋಷಕ ತನ್ನ ಪ್ರಜೆಗಳಂತೆ ಜೆಂಟೈವರ ಜಾತಿಗೆ ಸೇರಿದವನು. ಸೂರತ್ತಿಗೆ ಬೇಕಾದ ಮೆಣಸು, ಪೆಟ್ಲುಪ್ಪು ಮತ್ತು ಅಡಕೆಗಳನ್ನು ತುಂಬಿಕೊಂಡು ಇಲ್ಲಿಂದ ಹೊರಟೆವು.

ಕಾರವಾರದ ಬಳಿ ಅಂಜೆದೀಪ ದ್ವೀಪ ಇದೆ. ಇದು ನಮ್ಮ ದೇಶದ ನೂರಾರು ಜನರ ಸಮಾಧಿಗೆ ಹೆಸರಾಗಿದೆ. ಕಾರವಾರ ಒಮ್ಮೆ ವಿಜಯಪುರಕ್ಕೆ (Visiapour ವಿಜಾಪುರ) ಸೇರಿದ ಮುಖ್ಯ ಬಂದರಾಗಿತ್ತು. ಈಗ ಇದು ರಾಜನ ಮೇಲೆ ದಂಗೆ ಎದ್ದಿರುವ ಶಿವಾಜಿಗೆ ಸೇರಿದೆ. ಇದಲ್ಲದೆ ಗುಜರಾತ್‌ವರೆಗಿನ ಪ್ರದೇಶವೆಲ್ಲ ಆತನ ಅಧೀನವಾಗಿದೆ. ಈ ಶಿವಾಜಿಯಿಂದಾಗಿ ಇಂಗ್ಲಿಷರಿಗೂ ಅವರ ಫ್ಯಾಕ್ಟೊರಿಗಳಿಗೂ ತುಂಬಲಾರದ ನಷ್ಟ ಉಂಟಾಗಿದೆ. ಈ ಶಿವಾಜಿ ಯಾರು, ಈತನು ಹೇಗೆ ಬೇರೆಯವರನ್ನು ಗೆದ್ದುಕೊಂಡ—ಎಂಬೀ ವಿಷಯಗಳನ್ನು ಸರಿಯಾಗಿ ತಿಳಿಯಲು ಇನ್ನೂ ಕಾಲ ಬೇಕು. ಇವನ ಹೆಸರು ಕೇಳಿದರೆ ಎಲ್ಲರೂ ಗಡಗಡ ನಡುಗುತ್ತಾರೆ. ಅವರೆಲ್ಲ ಇವನ ಶಕ್ತಿಯ ಪ್ರವಾಹದಲ್ಲಿ ಕಸಕಡ್ಡಿಗಳಂತೆ ಕೊಚ್ಚಿಹೋಗುತ್ತಿದ್ದಾರೆ.

ಇಲ್ಲಿಯ ಜನ ಮೂರರು ಮತ್ತು ಜೆಂಟೈಲರು. ಶಿವಾಜಿ ದೇಶದಲ್ಲೆಲ್ಲಾ ಅಲ್ಲೋಲ ಕಲ್ಲೋಲವನ್ನುಂಟುಮಾಡುವತನಕ ಮತ್ತು 'ಡೆಕ್ಕನ್' ಮತ್ತು ವಿಜಿಯಾಪುರ ಒಂದೇ

ರಾಜ್ಯದಲ್ಲಿರುವವರೆಗೆ ವಿಜಯಾಪುರದ ರಾಜ ಮೊಗಲನಿಗೆ ಪೊಗದಿ ಮುಂತಾದ್ದು ಕೊಡುತ್ತಿರಲಿಲ್ಲ.

ಕಾರವಾರದಿಂದ ಹದಿನೈದು ಹರಿದಾರಿ ದೂರದಲ್ಲಿ ಉತ್ತರಕ್ಕೆ ಗೋವಾ ಇದೆ. ಪೋರ್ಚುಗಲ್ಲರು ಮೊಟ್ಟಮೊದಲು ಕಂಡುಹಿಡಿದ ವಸಾಹತುಗಳಲ್ಲಿ ಈಗ ಅವರ ಕೈಯಲ್ಲಿರುವುದು ಇದೊಂದೇ.

ಈಗ ಡಿಸೆಂಬರ್ ತಿಂಗಳ ಆರಂಭ. ವಾಯುವ್ಯದ ಕಡೆಯಿಂದ ಬೀಸುವ ಗಾಳಿಯಿಂದಾಗಿ ತಡೆಯಲಾರದಷ್ಟು ಚಳಿ. ನಾವು ಉತ್ತರಕ್ಕೆ ಯಾನಮಾಡಿ ಪೋರ್ಚುಗಲ್ಲರಿಗೆ ಸೇರಿದ ಚೌಲ್ (Chaul = ಚೌಲ್) ದಾಟಿ ಬೊಂಬಾಯಂ (Bombaim) ಕಂಡೆವು. ಡಿಸೆಂಬರ್ ೮ನೆಯ ತಾರೀಖು ಅಲ್ಲಿಯ ಕೋಟೆಯ ಮೇಲೆ ಹಾರಾಡುತ್ತಿದ್ದ ಯೂನಿಯನ್ ಜಾಕ್ ಬಾವುಟಕ್ಕೆ ನಮ್ಮ ಗೌರವ ಸಲ್ಲಿಸಿದೆವು. ಈ ಬಂದರು ಎಷ್ಟು ದೊಡ್ಡದಾಗಿದೆಯೆಂದರೆ ನಮ್ಮ ಯೂರೋಪಿನ ಅತ್ಯುತ್ತಮವಾದ ಸಾವಿರ ಹಡಗುಗಳು ಇಲ್ಲಿ ಸುರಕ್ಷಿತವಾಗಿ ತಂಗಬಹುದು..

ಮಾರನೆಯ ದಿನ ಸಂಜೆ ನನ್ನನ್ನು ತೀರಕ್ಕೆ ಕಳುಹಿಸಿಕೊಟ್ಟರು. ಮಾನ್ಯ ಜೆರಾಲ್ಡ್ ಆಂಜಿಯ (Gerald Aungier) ಎಂಬುವರು ಎದುರುಗೊಂಡರು. ಇವರು ರಾಜನ ಮತ್ತು ಕಂಪೆನಿಯ ಗೌರ್ನರ್ ಹಾಗು ಈಸ್ಟ್ ಇಂಡೀಸ್‌ನ ಅಧ್ಯಕ್ಷರು.

ಹೀಗೆ ಒಂದು ವರ್ಷದ ಸಮುದ್ರಯಾನದನಂತರ ನಿಮ್ಮ ಕೃಪೆಯಿಂದ ನಾನು ಬೊಂಬಾಯಿಯಲ್ಲಿ ಕಾಲಿಟ್ಟೆ.

—ಇತಿ ನಿಮ್ಮವ[೧]

---

೧. ಫ್ರೈಯರ್ ಬೊಂಬಾಯಿ ಮುಟ್ಟಿದ್ದು ೧೬೭೩ನೆಯ ಡಿಸೆಂಬರ್ ೯ನೆಯ ತಾರೀಖು. ಈತ ತನ್ನ ಎರಡನೆಯ ಪತ್ರ ಬರೆದದ್ದು ೧೬೭೫ನೆಯ ಜನವರಿ ೧೫ರಂದು. ಆದ್ದರಿಂದ ಮೊದಲನೆಯ ಪತ್ರವನ್ನು ಇದಕ್ಕಿಂತ ಮುಂಚೆಯೇ ಬರೆದು ಕಳುಹಿಸಿರಬೇಕು.

## ಎರಡನೆಯ ಪತ್ರ

ನಾನು ಸೂರತ್ತಿಗೆ ಫಾಲ್ಕರ್ ಎಂಬ ಹಡಗಿನಲ್ಲಿ ಹೊರಟಾಗ ತಾವು ಆರೋಗ್ಯದಿಂದಿರುವ ಸುದ್ದಿಯೂ ಹಾಲ್ಯಾಂಡ್ ಜೊತೆ ಶಾಂತಿ ಒಪ್ಪಂದ ಆದುದೂ ತಿಳಿದು ತುಂಬಾ ಸಂತೋಷವಾಗಿದೆ. ಈ ದೀರ್ಘಪತ್ರಕ್ಕಾಗಿ ನಾನು ತಮ್ಮ ಕ್ಷಮೆ ಕೋರುವ ಆವಶ್ಯಕತೆ ಇಲ್ಲವೆಂದು ಭಾವಿಸುತ್ತೇನೆ. ಅಂತೆಯೇ ಮೊದಲ ಪತ್ರ ತಲುಪಿ ಅದರ ಬಗ್ಗೆ ತಾವು ಏನು ಹೇಳುವಿರೆಂಬುದನ್ನು ತಿಳಿಯುವುದಕ್ಕೆ ಕಾಯುವುದೂ ಆಗುವುದಿಲ್ಲ. ಏಕೆಂದರೆ, ನಮ್ಮಿಬ್ಬರಿಗೂ ಇರುವ ದೂರವನ್ನೂ ಇಂಗ್ಲೆಂಡಿಗೆ ಹಡಗು ಹೊರಟಿರುವುದನ್ನೂ ಗಮನಿಸಿ ಈ ಎರಡನೆಯ ಪತ್ರವನ್ನು ಬರೆಯುತ್ತಿದ್ದೇನೆ.

ಬೊಂಬಾಯಿ ಈಸ್ಟ್ ಇಂಡಿಯಾದ ಸಲ್ಸೆಟ್ (Salset) ದ್ವೀಪಗಳಲ್ಲಿ ಒಂದು. ಈ ದ್ವೀಪಗಳ ಸಂಖ್ಯೆ ಏಳು. ಇವು ಯಾವುವೆಂದರೆ : ಬೊಂಬಾಯಿ, ಕನೊರಿನ್, (Canorein), ತ್ರಂಬೆ (Trumbay = ತ್ರಾಂಬೆ), ಎಲಿಫಾಂಟೊ' (Elephanto), ಪುಟಚೋಸ್ (Putachos), ಮುಂಚುಂಬೇ (Munchumbay) ಮತ್ತು 'ಕರೆಂಜಾವ್' (Karenjau). ಇವು ಸಮುದ್ರ ಮಧ್ಯದಿಂದ ಎದ್ದ ಪರ್ವತಗಳಂತೆ ಕಾಣುತ್ತವೆ. ಸಮುದ್ರ ಇಳಿದಾಗ ಒಂದು ದ್ವೀಪದಿಂದ ಇನ್ನೊಂದು ದ್ವೀಪಕ್ಕೆ ನಡೆದುಕೊಂಡು ಹೋಗಬಹುದು. ಸಮುದ್ರ ಏರಿದಾಗ ಹಾಗೆ ಮಾಡುವುದು ಕಷ್ಟ. ಬೊಂಬಾಯಿ ದ್ವೀಪ ಸಮುದ್ರದೊಳಕ್ಕೆ ಬಹುದೂರ ಚಾಚಿಕೊಂಡಿದೆ. ವಿಶಾಲವಾದ ಮುಂಬಾಯುಳ್ಳ ಕೊಲ್ಲಿಯ ಕಾರಣ ಈ ದ್ವೀಪಕ್ಕೆ ಬೊಂಬಾಯಿಂ (ಮುಂಬಯಿ = ಮುಂಬಾಯಿ) ಎಂಬ ಹೆಸರು ಬಂದಿದೆ. ಇದು ಮತ್ತು ಇತರ ದ್ವೀಪಗಳೂ ಸೇರಿ ಇಂಡಿಯಾದಲ್ಲಿಯೇ ಅತ್ಯುತ್ತಮವಾದ ಬಂದರನ್ನು ನಿರ್ಮಿಸಿವೆ. ಎಷ್ಟು ದೊಡ್ಡ ಹಡಗಾಗಲೀ ಸಣ್ಣ ಹಡಗಾಗಲೀ ಮುಂಗಾರಿನ ಹೊಡೆತದಿಂದ ಸುರಕ್ಷಿತವಾಗಿ ಇಲ್ಲಿ ತಂಗಬಹುದು. 'ಸಾಲ್ಸೆಟ್' ಎಂಬ ಹೆಸರು ಕನೊರಿನ್ (ಕನ್ನಡ ?) ಭಾಷೆಯಿಂದ ಬಂದದ್ದು ಎಂದು ನನ್ನ ಊಹೆ. 'ಕನೊರಿನ್' ಎಂದರೆ ಆ ಭಾಷೆಯಲ್ಲಿ ಕಣಜ (Granary) ಎಂದು ಅರ್ಥ. ವಾಸ್ತವವಾಗಿ ಗೋವಾದ ಉತ್ತರಕ್ಕಿರುವ ಪೋರ್ಚುಗಲ್ಲರಿಗೂ ಗೋವಾಕ್ಕೂ ಕೂಡ ಇದು ಈಗಲೂ ಕಣಜದಂತಿದೆ. ಅವರಿಗೆ ಬೇಕಾದ ಅಕ್ಕಿ ಇಲ್ಲಿಂದಲೇ ಸರಬರಾಜಾಗಬೇಕು. ಅಥವಾ ಗೋವಾ ಬಳಿ ಇರುವ ಇದೇ ಹೆಸರಿನ ಫಲವತ್ತಾದ ಪರ್ಯಾಯದ್ವೀಪದಿಂದ (Peninsula) ಸಾಮ್ಯರೂಪವಾಗಿ ಈ ಹೆಸರು ಬಂದಿರಬಹುದು. ಇದು ಹೇಗಾದರೂ ಇರಲಿ, ಬೊಂಬಾಯಿಗೆ ಮಹತ್ವದ ಸ್ಥಾನವಿದೆ.

ಈ ಬೊಂಬಾಯಿ ಮತ್ತು ಇತರ ದ್ವೀಪಗಳು ೧೬೬೧ರವರೆಗೆ ಪೋರ್ಚುಗೀಸರ ಕೈಯಲ್ಲಿದ್ದು ಆ ವರ್ಷ ಈ ದ್ವೀಪಗಳೂ ಬಂದರೂ ಗ್ರೇಟ್ ಬ್ರಿಟನ್ ರಾಜನಿಗೆ ಸೇರಿದುವು. ಪೋರ್ಚುಗಲ್ ದೊರೆಯ ಸಹೋದರಿ ದೊನ್ನಾ ಇನ್‌ಫಾಂತಾ ಕಾತರೀನಾ

ಎಂಬುವಳನ್ನು ಎರಡನೇ ಚಾರ್ಲ್ಸ್ ದೊರೆಗೆ ಮದುವೆಮಾಡಿಕೊಟ್ಟಾಗ ಆಕೆಗೆ ಬಳುವಳಿಯಾಗಿ ಈ ದ್ವೀಪವನ್ನು ಕೊಡಲಾಯಿತು.

ಆದರೆ ಒಪ್ಪಂದದಂತೆ ಈ ದ್ವೀಪಗಳನ್ನು ಪೋರ್ಚುಗೀಸರು ಇಂಗ್ಲಿಷರಿಗೆ ಬಿಟ್ಟು ಕೊಡಲಿಲ್ಲ. ಈಸ್ಟ್ ಇಂಡಿಯಾದ ಪೋರ್ಚುಗೀಸರಿಗೆ ತಮ್ಮದೇ ಆದ ಹಿತಾಸಕ್ತಿಗಳಿದ್ದುದರಿಂದಲೂ ಯುರೋಪಿನ ಪೋರ್ಚುಗಲ್ ಈಸ್ಟ್ ಇಂಡಿಯಾಕ್ಕೆ ಬಹುದೂರದಲ್ಲಿದ್ದುದರಿಂದಲೂ ಅವನ್ನು ಬಿಟ್ಟುಕೊಡಲು ತಕರಾರು ಹೂಡಿದರು. ಇಂಗ್ಲೆಂಡ್ ದೊರೆ ದ್ವೀಪಗಳನ್ನು ವಶಪಡಿಸಿಕೊಳ್ಳಲು ಐದು ಹಡಗುಗಳನ್ನು ಕಳುಹಿಸಿದ. ಆದರೂ ಪೋರ್ಚುಗೀಸರು ಬಿಟ್ಟುಕೊಡದೇಹೋದರು. ಕೊನೆಗೆ ತಕರಾರು ಮಾಡಿ ಬೊಂಬಾಯಿ ದ್ವೀಪವನ್ನು ಮಾತ್ರ ೧೬೬೪ರಲ್ಲಿ ಬಿಟ್ಟುಕೊಟ್ಟರು. ಯಾವ ರಕ್ಷಣೆಯೂ ಇಲ್ಲದ ಈ ಊರಿನಲ್ಲಿ ಇಂಗ್ಲಿಷರು ಫಿರಂಗಿಗಳನ್ನು ಏರಿಸಿ ತಮ್ಮ ಶಕ್ತಿಯನ್ನು ಬೆಳೆಸಿಕೊಂಡರು. ಒಬ್ಬರಾದ ಮೇಲೆ ಒಬ್ಬರನ್ನು ವೈಸ್‌ರಾಯ್ ಆಗಿ ಇಂಗ್ಲೆಂಡ್ ದೊರೆ ನೇಮಿಸುತ್ತಾ ಬಂದರು. ಆದರೆ ಇಲ್ಲಿಗೆ ಬಂದ ವೈಸ್‌ರಾಯ್‌ಗಳು ಇಂಡಿಯನರನ್ನು ಬಹಳವಾಗಿ ಪೀಡಿಸತೊಡಗಿದರು. ಇಂಡಿಯನರಿಗೆ ಇಂಗ್ಲೆಂಡ್ ದೊರೆ ಮತ್ತು ಕಂಪೆನಿ ಎರಡೂ ಒಂದೇ ಎಂಬ ಭಾವನೆ ಇತ್ತು. ಇದರಿಂದ ಕಂಪೆನಿಯ ವರ್ತಕರ ವ್ಯಾಪಾರಕ್ಕೆ ಧಕ್ಕೆಯಾಗತೊಡಗಿತು. ಇಂಗ್ಲೆಂಡಿನ ಕೆಳಮಟ್ಟದ ಅವಿದ್ಯಾವಂತರೂ, ಅನನುಭವಿಗಳೂ ಆದ ಜನ ಇಂಡಿಯಾಕ್ಕೆ ಬಂದು ಇಲ್ಲಿಯ ಅದ್ದೂರಿಯ ಬಾಳಿನಿಂದಾಗಿ ಜಂಭ ಹಾಗೂ ದುರಹಂಕಾರದಿಂದ ಮೆರೆಯುತೊಡಗಿದರು. ಆದರೆ ಈ ರೀತಿಯ ವರ್ತನೆಯಿಂದ ಇಂಗ್ಲಿಷ್ ವ್ಯಾಪಾರಕ್ಕೆ ಅಡ್ಡಿಯುಂಟಾಯಿತು. ನಮ್ಮ ಹತ್ತು ಹಡಗುಗಳ ಪರಿಸ್ಥಿತಿಯನ್ನೇ ಹೇಳುವುದಾದರೆ ಹಡಗುಗಳನ್ನು ಬಾಡಿಗೆ ಪಡೆದ ವರ್ತಕರ ನಡೆನುಡಿಯೇ ಒಂದಾದರೆ ಹಡಗುಗಳ ಮಾಲೀಕರಾದ ಕಮ್ಯಾಂಡರುಗಳ ವರ್ತನೆಯೇ ಬೇರೊಂದು ತೆರನಾಗಿರುತ್ತಿತ್ತು. ಹೀಗಾಗಿ ಹಾಲ್ಯಾಂಡರ ಧಾಳಿಯನ್ನು ಒಮ್ಮುಖವಾಗಿ ಎದುರಿಸದೆ ಅವರಿಂದ ಪೆಟ್ಟುತಿಂದು ನಮ್ಮ ಧೇಶಕ್ಕೇ ಕೆಟ್ಟ ಹೆಸರು ತಂದರು. ಈ ಕಾರಣಗಳಿಂದ ನನಗನ್ನಿಸುತ್ತದೆ, ಹಾಲ್ಯಾಂಡರು ಹೇಗೆ ತಮ್ಮ ಕಂಪೆನಿಯನ್ನು ರಾಷ್ಟ್ರೀಯ ಕಂಪೆನಿಯನ್ನಾಗಿ ಮಾಡಿದ್ದರೋ ಹಾಗೆಯೆ ಈಸ್ಟ್ ಇಂಡಿಯಾ ಕಂಪೆನಿಯನ್ನೂ ದೊರೆಯ ಕಂಪೆನಿ ಅಥವಾ ರಾಷ್ಟ್ರೀಯ ವ್ಯಾಪಾರ ಸಂಸ್ಥೆಯಾಗಿ ಮಾಡುವುದೊಳ್ಳೆಯದು ಎಂದು. ಆಗ ಕಂಪೆನಿಯು ತನ್ನ ಇಚ್ಛಾನುಸಾರ ಗೌರ್ನರುಗಳನ್ನು ನೇಮಿಸಬಹುದು.

ಬೊಂಬಾಯಿ ತನ್ನ ಸ್ವಾಧೀನಕ್ಕೆ ಬಂದಮೇಲೆ ಸೂರತ್ತಿನಲ್ಲಿದ್ದ ಕಂಪೆನಿಯ ಅಧ್ಯಕ್ಷ ತನ್ನ ಪರವಾಗಿ ಬೊಂಬಾಯಿಗೆ ಗೌರ್ನರುಗಳನ್ನು ನೇಮಿಸುತ್ತಾ ಬಂದನು. ಒಬ್ಬರಾದ ಮೇಲೆ ಒಬ್ಬರು ಗೌರ್ನರುಗಳು ಬಂದುಹೋದರು. ಆದರೆ ಇವರು ಸರಿಯಾಗಿ ನಡೆದುಕೊಳ್ಳದೇಹೋದ ಕಾರಣ ಅಧ್ಯಕ್ಷ ತಾನೇ ೧೬೭೧ರಲ್ಲಿ ಬೊಂಬಾಯಿಯ ಆಧಿಪತ್ಯ ವಹಿಸಿಕೊಂಡ. ಈತ ಕೋಟೆಯನ್ನು ಭದ್ರಪಡಿಸಿ ಹಾಲ್ಯಾಂಡರು ತಮ್ಮ ತಂಟೆಗೆ

ಬರದಂತೆ ಮಾಡಿದ. ಕೋಟೆಯೊಳಗೆ ೩೦೦ ಫಿರಂಗಿಗಳನ್ನು ಏರಿಸಿದ. ಸೈನ್ಯಕ್ಕೂ ಮತ್ತು ಭಂಡಾರಿಗಳಿಗೂ ಬೇಕೆಂದಾಗ ನೆರವಾಗಲು ೬೦ ಫಿರಂಗಿಗಳನ್ನು ಗಾಡಿಗಳ ಮೇಲೆ ಸಿದ್ಧಪಡಿಸಿದ. ಆಗ ಕೋಟೆಯಲ್ಲಿ ೩೦೦ ಇಂಗ್ಲಿಷರು, ೪೦೦ 'ಟೊಪಾಜೆ' (Topaze=ಟೋಪಿ ಧರಿಸಿದ ಅರೆ ಪೋರ್ಚುಗೀಸ್ ಗೋಲಂದಾಜರು)ಗಳೂ ಇಂಗ್ಲಿಷ್ ಮುಖಂಡತ್ವದಲ್ಲಿ ಸಶಸ್ತ್ರರಾದ ೫೦೦ ಪೋರ್ಚುಗೀಸರೂ ಇದ್ದರು., ಭಂಡಾರಿಗಳ ಸಂಖ್ಯೆ ೩೦೦ ಇತ್ತು. ಭಂಡಾರಿಗಳೆಂದರೆ ತೆಂಗಿನಮರದಿಂದ ಹೆಂಡ ತೆಗೆಯುವ ಜನ. ಇವರಿಗೆ ದೊಣ್ಣೆಗಳನ್ನೂ ಇತರ ಆಯುಧಗಳನ್ನೂ ಒದಗಿಸಿ ಸಜ್ಜುಮಾಡಲಾಗಿತ್ತು. ಇವರಲ್ಲದೆ ಇನ್ನು ೧,೦೦೦ ಜನರನ್ನು ತೋರಿಕೆಗೆ ಸಿದ್ಧಮಾಡ ಲಾಗಿತ್ತು ; ಮತ್ತು ಹಡಗು ನಿಲ್ಲೆಡೆಗಳಲ್ಲಿ ಮುವತ್ತು ಫಿರಂಗಿಗಳನ್ನು ಹೊತ್ತ ಹಡಗು ಗಳು ಉಸ್ತುವಾರಿ ನೋಡುತ್ತಿದ್ದುವು.

ಹೀಗಿತ್ತು ಬೊಂಬಾಯಿ ನಾವು ಇಲ್ಲಿಗೆ ಬಂದಾಗ.

ಈಗ ಬೊಂಬಾಯಿ ಊರು ಹೇಗಿದೆ ಎಂದು ಹೇಳುತ್ತೇನೆ. ಊರಿನಲ್ಲಿ ಎಲ್ಲೆಂದರೆ ಅಲ್ಲಿ ಇಂಗ್ಲಿಷರು, ಪೋರ್ಚುಗೀಸರು, ತೊಪಾಜೆಗಳೂ, ಜೆಂಟೂಗಳೂ, ಮೂರರೂ 'ಕೂಲಿ' ಕ್ರೈಸ್ತರೂ (ಇವರು ಬಹುಮಟ್ಟಿಗೆ ಬೆಸ್ತರು)—ವಾಸಿಸುತ್ತಾರೆ. ಊರಿನ ಉದ್ದ ಒಂದು ಮೈಲಿಯೇ ಆಗುತ್ತದೆ. ಮನೆಗಳು ಎತ್ತರವಾಗಿಲ್ಲ. ತಾಳೆಮರದ ಅಥವಾ ತೆಂಗಿನಮರದ ಗರಿಗಳನ್ನು ಹೊದಿಸಿದ್ದಾರೆ. ಕಂಪೆನಿಯೂ ಕೆಲವು ಮನೆಗಳನ್ನು ಅಂದರೆ ಸುಂಕದಕಟ್ಟೆ ಮತ್ತು ಗಡಂಗಗಳನ್ನು ಕಟ್ಟಿಸಿದೆ. ಈ ಮನೆಗಳಿಗೆ ಹೆಂಚು ಹೊದಿಸಿ ಸುಣ್ಣ ಬಳಿದಿದ್ದಾರೆ. ಕಿಟಕಿಗಳಿಗೆ ಗಾಜುಗಳ ಬದಲು ಸಿಂಪಿಗಳ (oyster) ಚಿಪ್ಪು ಗಳನ್ನು ಉಪಯೋಗಿಸಿದ್ದಾರೆ. ಒಂದು ಒಳ್ಳೆಯ 'ಬಜಾರ್' ಕೂಡ ಇದೆ.

ಪಟ್ಟಣದ ಕೊನೆಯಲ್ಲಿ ಹಸು ಎಮ್ಮೆಗಳು ಮೇಯುವ ಹೊಲದಲ್ಲಿ ಪೋರ್ಚು ಗಲ್ಲರ ಒಂದು ಮನೆಯೂ ಇಗರ್ಜಿಯೂ ಇವೆ. ಇಂಗ್ಲಿಷರಿಗೆ ಸೇರಿದ ಒಂದು ಸ್ಮಶಾನ ಇದೆ. ಹರಿಯುವ ಹೊಳೆ ಮತ್ತು ನದಿಗಳಿಲ್ಲದ ಕಾರಣ ಕುಡಿಯುವುದಕ್ಕೆ ಕೊಳಗಳ ನೀರನ್ನು ಉಪಯೋಗಿಸುತ್ತಾರೆ. ಜೊತೆಗೆ ಬಾವಿಗಳನ್ನು ತೋಡಿಕೊಂಡಿದ್ದಾರೆ. ಅನುಕೂಲಸ್ಥರು ಮಜಗಾಂವ್ ಎಂಬಲ್ಲಿ ನೀರು ತರಿಸಿಕೊಳ್ಳುತ್ತಾರೆ. ಮಜಗಾಂವ್ ಎಂಬುದು ಮೀನುಗಾರರ ದೊಡ್ಡ ಊರು. ಇಲ್ಲಿ 'ಬಂಬೆಲೊ' (Bumbelo Bummeo=Bombil) ಎಂಬ ಮೀನು ಹೇರಳವಾಗಿ ಸಿಕ್ಕುತ್ತದೆ. ಬಡಬಗ್ಗರೆಲ್ಲ ಈ ಮೀನು ಮತ್ತು ಬತ್ತಿ (Batti=ಕನ್ನಡದ ಬತ್ತ) ತಿಂದು ಜೀವಿಸುತ್ತಾರೆ. ತೆಂಗಿನಮರದ 'ಟಾಡಿ' (ಹೆಂಡ) ಕುಡಿಯುತ್ತಾರೆ. ಮಜಗಾಂವ್ ಆಚೆ 'ಪರೇಲ್' (Parell) ಮತ್ತು ಸಿಯಾಂ ಇವೆ. ಸಿಯಾಂನಲ್ಲಿ ಹೊಲಗದ್ದೆಗಳನ್ನು ಕೊಲಂಬೀನ್ (Colombeen=ಕುನಬಿ=ಕುನ್ಬಿ) ಎಂಬ ಜನರು ಸಾಗುವಳಿ ಮಾಡುತ್ತಾರೆ. ಇಲ್ಲಿ 'ಫ್ರಾಸ್ಸೆ' (Prasse=Paraāsh) ಎಂಬ ಸಣ್ಣಪುಟ್ಟ ಕೆಲಸಮಾಡುವ ಕೂಲಿ

ಜನರೂ ಇದ್ದಾರೆ. ಬೇರೆ ಬೇರೆ ಜಾತಿಯ ಈ ಜನರ ಮೇಲೆ ಆದೇ ಜಾತಿಯ ಮಂದ ದೊರೆ (Mandadore=ಮಂದೆಗೆ ದೊರೆ ?) ಎಂಬ ಮೇಲ್ವಿಚಾರಕ ಇರುತ್ತಾನೆ. ಈತ ಇಂಗ್ಲಿಷರು ಹೇಳಿದಂತೆ ಕೇಳಿಕೊಂಡು ತನ್ನ ಜನರಿಂದ ದುಡಿಮೆಮಾಡಿಸುತ್ತಾನೆ. ಸಮುದ್ರವು ಉಕ್ಕೇರಿದಾಗ ಎತ್ತರವಾದ ಸ್ಥಳಗಳಲ್ಲಿ ನೀರನ್ನು ನಿಲ್ಲಿಸಿ ಉಪ್ಪು ತಯಾರಿಸುತ್ತಾರೆ.

ಈ ದ್ವೀಪಕ್ಕೆ ಎದುರಾಗಿ ಸಮುದ್ರಕ್ಕೆ ಚಾಚಿದ ಕೊಲ್ಲಿಯನ್ನು 'ಮಲಬಾರ್' ಹಿಲ್ (Malabar Hill) ಎಂದು ಕರೆಯುತ್ತಾರೆ. ಬಂಡೆಗಳೂ, ಮರಗಳೂ, ಹಾಗೂ ಎತ್ತರವಾಗಿ ಬೆಳೆದ ಹುಲ್ಲಿನಿಂದ ಕೂಡಿದ ಇದರ ಮೇಲೆ ಈಚೆಗೆ ನಿರ್ಮಿಸಿದ ಒಂದು ಪಾರ್ಸಿ ಸಮಾಧಿ ಇದೆ. ಸಮುದ್ರದ ಕಡೆಗೆ ಇಳಿಜಾರಾದ ಪ್ರದೇಶದಲ್ಲಿ ಒಂದು ಭಾರಿ ದೇವಸ್ಥಾನದ ಅವಶೇಷಗಳಿವೆ. ಈ ದೇವಸ್ಥಾನದ ಬಳಿ ಒಂದು ಕೊಳ ಇದೆ. ಮಲಬಾರಿಗಳು ನೀರು ತೆಗೆದುಕೊಂಡು ಹೋಗಲು ಇಲ್ಲಿಗೆ ಬರುತ್ತಿದ್ದರು.[೧]

ಹೀಗೆ ಊರನ್ನು ಒಂದು ಸುತ್ತುಹಾಕಿದರೆ ಆದರ ಸುತ್ತಳತೆ ಇಪ್ಪತ್ತು ಮೈಲಿಗಳಷ್ಟಾಗುತ್ತದೆ; ಮತ್ತು ಎಂಟು ಮೈಲಿ ಉದ್ದ ಆಗುತ್ತದೆ. ಅಜ್ಜ ದ್ವೀಪ ಏನೇನೂ ಫಲವತ್ತಾಗಿಲ್ಲ. ಅದನ್ನು ಕಂಪೆನಿಯ ಜಿಂಕೆಗಳಿಗೂ ಮತ್ತು ಇತರ ಖುಷಿಗಾಗಿ ಇಟ್ಟ ಪ್ರಾಣಿಗಳಿಗೂ ಉಪಯೋಗಿಸಲಾಗುತ್ತಿದೆ. ಇಲ್ಲಿ ಅಕ್ಕಪಕ್ಕದ ಪ್ರದೇಶಗಳಿಂದ ಬಂದ ಬಗೆ ಬಗೆಯ ಜನರು ನೆಲಸಿದ್ದಾರೆ. ಸುಮಾರು ೬೦,೦೦೦ ಜನರಿದ್ದಾರೆಂದು ಹೇಳಬಹುದು. ಇವರಿಗೆಲ್ಲ ಆಹಾರ ದೊರೆಯುವುದು ಕಷ್ಟ. ಹೀಗಾಗಿ ಹೊರಗಿನಿಂದ, ದವಸ, ಧಾನ್ಯ ಮತ್ತು ಮಾಂಸಗಳನ್ನು ತಂದು ಮಾರುತ್ತಾರೆ. ಇಡೀ ಸೂರತ್ತಿನ ಮೂರರಿಗೆ ಒಂದು ವರ್ಷದಲ್ಲಿ ಬೇಕಾದ ಮಾಂಸ ಇಲ್ಲಿಯ ಇಂಗ್ಲಿಷರಿಗೆ ಒಂದು ತಿಂಗಳಿಗೆ ಬೇಕಾಗುತ್ತದೆ.

ಈಗ ಇಲ್ಲಿ ಇಂಗ್ಲಿಷರ ಸರ್ಕಾರ ಇದೆ. ಸಿಪಾಯಿಗಳಿಗೆ ಸೈನಿಕ ಶಾಸನವೂ ಜನ ಸಾಮಾನ್ಯರಿಗೆ ಸಾಮಾನ್ಯ ಶಾಸನವೂ ಅನ್ವಯವಾಗುತ್ತವೆ. ಇಂಗ್ಲಿಷರ ಪ್ರೆಸಿಡೆಂಟನು ಇಲ್ಲಿದ್ದಾನೆ. ಇವನ ಸಲಹಾಮಂಡಲಿ ಸೂರತ್ತಿನಲ್ಲಿದೆ. ಈತನು ಕುದುರೆಗಳ ಮೇಲೆ ತನ್ನ ಪರಿವಾರ ಸಮೇತ ಅಡ್ಡಾಡುತ್ತಾನೆ. ಇವನಿಗೆ ಪಾದ್ರಿಗಳು, ವೈದ್ಯರು, ಸರ್ಜನ್‌ಗಳು ಮತ್ತು ಪರಿಚಾರಕರು ಇತ್ಯಾದಿ ಸೌಕರ್ಯಗಳನ್ನು ಒದಗಿಸಲಾಗಿದೆ. ಒಬ್ಬ ದುಭಾಷಿಯೂ ಟಂಕಸಾಲೆ ಅಧಿಕಾರಿಯೂ ಇದ್ದಾರೆ. ತುತ್ತೂರಿ ಊದಿ ಭೋಜನದ ವೇಳೆಯನ್ನು ಸೂಚಿಸುತ್ತಾರೆ. ಭೋಜನಮಾಡುವಾಗ ಸುಶ್ರಾವ್ಯವಾದ ಸಂಗೀತ

---

1 ಈ ಸ್ಥಳದ ಪೂರ್ವನಾಮ ಶ್ರೀಗುಂದಿ (Srigundi) ಎಂದೂ, ಇಲ್ಲಿಗೆ ಮಲಬಾರ್ ಕಡಲುಗಳ್ಳರು ಆಗ ಇದ್ದ ವಲೂಕೇಶ್ವರ ದೇವಸ್ಥಾನಕ್ಕೆ ಬರುತ್ತಿದ್ದರೆಂದು ಹೇಳಲಾಗಿದೆ.

ನಡೆಯುತ್ತದೆ. ಕೆಲವು ವೇಳೆ ಈತ ಹಾಲುಬಿಳುಪಿನ ಎತ್ತುಗಳಿಂದ ಎಳೆಯಲ್ಪಟ್ಟ ರಥದಲ್ಲಿ ಕುಳಿತು ಊರಿನಲ್ಲಿ ಅಡ್ಡಾಡುತ್ತಾನೆ. ಪಲ್ಲಕ್ಕಿಯಲ್ಲಿಯೂ ಹೋಗುವುದುಂಟು. ಪಲ್ಲಕ್ಕಿ ಹೊರುವವರು 'ಕೊಹೊರ್' (Kohor = Kahar = ಕಹಾರ್) ಎಂಬ ಮುಸಲ್ಮಾನ ಬೋಯಿಗಳು. ಇವನು ಎಲ್ಲಿದ್ದರು ಸರಿ ತಲೆಯಮೇಲೆ ಯಾವಾಗಲೂ ಸೊಂಬ್ರೊರೊ (Sombrero = ಛತ್ರಿ) ಹಿಡಿದಿರುತ್ತಾರೆ.

ಇಷ್ಟೆಲ್ಲಾ ಅದ್ದೂರಿಯಿಂದ ಬಾಳಿದರೂ ಇವರಿರುವುದು ಹೆಣಮಾಳಿಗೆಯಲ್ಲಿ ಎಂದು ನನಗನಿಸುತ್ತದೆ. ಇಲ್ಲಿಯ ಹವಾ ತುಂಬಾ ಕೆಟ್ಟದ್ದು. ಇದಕ್ಕೆ ಕಾರಣ ಕೊಳೆತ ಮೀನು ಎಂದು ಮೊದಲಿಗೆ ಭಾವಿಸಲಾಗಿತ್ತು. ಅದನ್ನು ತಡೆದಮೇಲೂ ಹವಾ ಅಪಾಯಕಾರಿ ಯಾಗಿಯೇ ಇದೆ. ಈ ಸ್ಥಳವೇ ಅಂಥಾದ್ದು ಎಂದು ನನ್ನ ಭಾವನೆ. ಈ ಕಾರಣವಾಗಿ ಇಲ್ಲಿ ಬರುವ ರೋಗಗಳು ಒಂದಲ್ಲ ಎರಡಲ್ಲ. ಜ್ವರ, ಮಹೋದರ, ಊದು ಒಸಡು, ಕೈಕಾಲು ಆಡಿಸಲಾಗದಂತಹ ನಿಶ್ಶಕ್ತಿಯ ಒಂದು ಬಗೆಯ ರೋಗ, ಸಂಧಿವಾತ, ಮೂತ್ರ ಕೋಶದ ಕಲ್ಲು—ಈ ಕಾಯಿಲೆ ಕಸಾಲೆಗಳಿವೆ. ಇವುಗಳಲ್ಲದೆ ಶರಾಬಿನ ಅಮಲು ಮತ್ತು ಹೊಲಸು ಹೆಂಗಸರು. ಈ ಹೆಂಗಸರ ಸಹವಾಸ ತಪ್ಪಿಸಲೂ ತಮ್ಮ ಜನಸಂಖ್ಯೆಯನ್ನು ಹೆಚ್ಚಿಸಲೂ ಕಂಪೆನಿಯು ಇಂಗ್ಲಿಷ್ ಹೆಂಗಸರನ್ನು ಇಲ್ಲಿಗೆ ಕಳುಹಿಸಿಕೊಡುತ್ತಿದೆ. ಆದರೆ ಇವರಲ್ಲಿ ಹುಟ್ಟಿದ ಮಕ್ಕಳೂ ಅದೇ ಕಾಯಿಲೆಯಿಂದ ನರಳುತ್ತಿರುತ್ತವೆ. ಡಚ್ಚರು ಹೇಳುವಂತೆ ಯೂರೋಪಿನ ಗಂಡು ಮತ್ತು ಇಂಡಿಯಾದ ಹೆಣ್ಣಿಗೆ ಹುಟ್ಟಿದ ಮಕ್ಕಳೇ ಗಟ್ಟಿಯಾಗಿರುತ್ತವೆ. ಬೇರೆ ಮಕ್ಕಳು ಹುಟ್ಟುವಾಗಲೇ ಕಾಯಿಲೆ ಕಸಾಲೆಗಳಿಂದ ನರಳುತ್ತಿರುತ್ತವೆ. ಇಲ್ಲಿಗೆ ಬರುವ ಇಂಗ್ಲಿಷ್ ಹೆಂಗಸರು ಎಂಥವರೆಂಬ ವಿಷಯ ಬೇರೆ. ಬಂದವರು ತಮ್ಮ ಮನಸೇಚ್ಛೆ ನಡೆದುಕೊಳ್ಳುತ್ತಾರೆ. ಬಹು ಹಿಂದೆಯೇ ಅರಿಸ್ಟಾಟಲ್ ಹೇಳಿದಂತೆ, ಮಿತಿಮೀರಿದ ಕುಡಿತದಲ್ಲಿ ತೊಡಗಿದ ಇವರ ಎದೆಹಾಲು ಕೆಡುತ್ತದೆ. ಆದರೆ ಸ್ಥಳದ ದಾದಿಯರು ಅಂತಹ ಮದ್ಯಪಾನದಲ್ಲಿ ತೊಡಗದಿರುವ ಕಾರಣ ಅವರು ಒಳ್ಳೆಯ ದಾದಿಯರಾಗಿದ್ದಾರೆ.

ಇಂಗ್ಲಿಷರಿಗೆ ಒದಗುವ ಸಾವು ಸ್ಥಳದ ನಿವಾಸಿಗಳಿಗೂ ದೇಶೀಯತೆಯನ್ನು ಪಡೆದ ಪೋರ್ಚುಗೀಸರಿಗೂ ಬರುವುದಿಲ್ಲ. ಇವರು ಮುಪ್ಪಾಗುವವರೆಗೂ ಬದುಕಿರುತ್ತಾರೆ. ಇದಕ್ಕೆ ಕಾರಣ, ಅವರು ಮದ್ಯಪಾನದಿಂದ ದೂರ ಇರುವುದೇ ಆಗಿದೆ ಎಂದು ಹೇಳು ತ್ತಾರೆ. ಅಲ್ಲದೆ ಇವರು ನಮ್ಮಂತೆ ಮಾಂಸವನ್ನು ಮುಕ್ಕದಿರುವುದೂ ಒಂದು ಕಾರಣ. ಆದರೆ ನನಗನ್ನಿಸುತ್ತದೆ, ಹೊಸಗಿಡದಂತಿರುವ ನಾವು ಭೂಮಿಗೆ ಇನ್ನೂ ಹೊಂದಿ ಕೊಳ್ಳಲಾಗಿಲ್ಲ ಎಂದು. ಇಲ್ಲಿಗೆ ಬಂದ ಐನೂರು ಇಂಗ್ಲಿಷರಲ್ಲಿ ಬದುಕಿ ಉಳಿಯುವವರು ನೂರು. ಆ ನೂರರಲ್ಲಿ ಕಾಲು ಭಾಗ ಮಾತ್ರ ಸ್ಥಾನಮಾನಗಳನ್ನು ಪಡೆಯುತ್ತಾರೆ. ಹಾಗೆ ಪಡೆದವರು ಹತ್ತು ವರ್ಷಗಳಲ್ಲಿ ಒಮ್ಮೆ ತಮ್ಮ ಮಾತೃಭೂಮಿಯನ್ನು ನೋಡು ತ್ತಾರೆ. ಆದರೂ ಹಣದ ಆಸೆಗೆ ಇಲ್ಲಿ ಬಾಳುವೆ ಮಾಡುತ್ತಾರೆ—ಬಾವಿಯೊಳಗಿನ ಕಪ್ಪೆಯಂತೆ.

ನಾವು ಈಗ ಗಮನಿಸಬೇಕಾದ್ದು ಮೂರು ಶಕ್ತಿಗಳನ್ನು : ಪೋರ್ಚುಗಲ್ಲರು, ಶಿವಾಜಿ ಮತ್ತು ಮೊಗಲರು. ನಮಗೆ ಪೋರ್ಚುಗಲ್ಲರ ಪರಸ್ಪರ ಸ್ನೇಹ ಬೇಕಾಗಿದೆ. ಶಿವಾಜಿಯ ಮೇಲೆ ಸ್ನೇಹದ ತೋರಿಕೆ ಮಾತ್ರ. ಮೊಗಲರಿಂದ ಹೆಚ್ಚು ಹೆಚ್ಚು ವ್ಯಾಪಾರ. ಮೊದ ಲಿಬ್ಬರಿಂದ ಹೊಟ್ಟೆಗೆ ಬೇಕಾದ ಅನ್ನ ಮತ್ತು ಇರಲು ಮನೆ ಬೇಕಾಗಿವೆ. ಮೂರನೆಯ ಯವರಿಂದ ವ್ಯಾಪಾರದ ಉನ್ನತಿ ಆಗಬೇಕಾಗಿದೆ. ಇವು ಮೂರನ್ನೂ ಒಟ್ಟಿಗೆ ನಡೆಸು ವುದು ಕಷ್ಟ. ಏಕೆಂದರೆ, ಮೂವರ ಮುಖ ಒಂದೊಂದು ಕಡೆ. ಮೊಗಲರ ಹಡಗುಗಳು ಮಳೆಗಾಲದಲ್ಲಿ ಇಲ್ಲಿಗೆ ಲಂಗರುಹಾಕಲು ಬಂದರೆ ಶಿವಾಜಿಗೆ ಸಿಟ್ಟು. ಅದನ್ನು ತಪ್ಪಿಸಿ ದರೆ ನಮ್ಮ ವ್ಯಾಪಾರಕ್ಕೆ ಪೆಟ್ಟು. ಇವರಿಬ್ಬರನ್ನೂ ಅನುಸರಿಸಿದರೆ ಪೋರ್ಚುಗಲ್ಲರಿಗೆ ಕೋಪ. ಡಚ್ಚರ ಕಣ್ಣು ನಮ್ಮ ಮೇಲೆ ಇದ್ದೇ ಇದೆ. ವ್ಯಾಪಾರದ ದೃಷ್ಟಿಯಿಂದ ಬೊಂಬಾಯಿ ಎಲ್ಲಕ್ಕೂ ಅನುಕೂಲವಾಗಿದೆ. ಇಲ್ಲಿಯ ಬನಿಯರು ಸೂರತ್ತಿನ ಬನಿಯರಿ ಗಿಂತ ಹೆಚ್ಚು ಸ್ವತಂತ್ರರಾಗಿದ್ದಾರೆ. ಸುಂಕ ಸಾರಿಗೆಗಳು ಅಲ್ಲಿರುವಷ್ಟು ಇಲ್ಲಿಲ್ಲ. ಇವರ ಸಹಾಯದಿಂದ ನಾವು ಒಳನಾಡಿನಲ್ಲಿ ವ್ಯಾಪಾರ ಸಾಪಾರಗಳನ್ನು ವೃದ್ಧಿಪಡಿಸುವ ಅವಕಾಶವಿದೆ. ಆದರೆ ಇದಕ್ಕೆಲ್ಲಾ ಕಾಲ ಬೇಕು; ಮತ್ತು ಅಧಿಕಾರವೂ ಅವಶ್ಯಕ.

ಬೊಂಬಾಯಿ ದ್ವೀಪದಿಂದ ಅರ್ಧಮೈಲಿ ಅಗಲದ ಹೊಳೆ ದಾಟಿದರೆ ಕನೊರೀನ್ (Canorien = kānheri ಕನ್ಹೇರಿ) ದ್ವೀಪ ಇದೆ. ಇಲ್ಲಿದ್ದ ಜೆಸೂಯಿಟ್ ಫಾದರ್ ಅವರನ್ನು ನೋಡಿಕೊಂಡುಬರಲು ಕಂಪೆನಿಯ ಅಧ್ಯಕ್ಷರು ತಮ್ಮ 'ಬಲೂನ್' (Baloon = ಒಂದು ಬಗೆಯ ದೋಣಿ) ನಲ್ಲಿ ಕಳುಹಿಸಿಕೊಟ್ಟರು. ಈ ದ್ವೀಪದ ಹೆಚ್ಚು ಭಾಗ ಜೆಸೂಯಿಟರಿಗೆ ಸೇರಿದೆ. ಇವರು ಇಲ್ಲಿ ಆರಾಮವಾಗಿ ಇದ್ದಾರೆ. ನಮ್ಮನ್ನು ಬಹು ಅದ್ದೂರಿಯಿಂದ ಸತ್ಕರಿಸಿದರು. ಇಲ್ಲಿರುವ ಪಟ್ಟಣ ದೊಡ್ಡದು. ಮನೆಗಳು ಹೆಂಚಿನವು. ಪಟ್ಟಣವನ್ನು 'ಬಾಂದ್ರ' ಎಂದು ಕರೆಯುತ್ತಾರೆ. ಊರಿನ ರಕ್ಷಣೆಗೆ ಮದ್ದುಗುಂಡುಗಳನ್ನು ಇಟ್ಟುಕೊಂಡಿದ್ದಾರೆ.

ಕುತೂಹಲಕ್ಕಾಗಿ ಮತ್ತೊಮ್ಮೆ ಕನೊರೀನ್ ದ್ವೀಪಕ್ಕೆ ಹೋಗಿ ಬಂದೆ. ಹಲವಾರು ದಿವಸಗಳು ಅಲ್ಲಿ ಇದ್ದು ಬರಲು ಅನುಮತಿ ಪಡೆದುಕೊಂಡಿದ್ದೆ. ನನ್ನ ಜೊತೆ ಬೇರೆ ಹಲವಾರು ಜನರೂ ಬಂದರು. ನಮ್ಮ ಉಪಯೋಗಕ್ಕೆ ಬೇಕಾದ ಆಳುಕಾಳುಗಳು, ಕುದುರೆಗಳು, ಪಲ್ಲಕ್ಕಿಗಳನ್ನು ಮುಂಚೆಯೇ ದೋಣಿಗಳಲ್ಲಿ ಕಳುಹಿಸಿಕೊಟ್ಟೆವು. ನಾವು ಆಮೇಲೆ ಹೋದೆವು. ನಮ್ಮನ್ನು ಜೆಸೂಯಿಟರ ಕಡೆಯವರು ಎದುರುಗೊಂಡು ಫಾದರುಗಳ ಬಳಿಗೆ ಕರೆದುಕೊಂಡು ಹೋದರು. ಮಧ್ಯಾಹ್ನದವರೆಗೂ ನಮ್ಮನ್ನು ಇರಿಸಿಕೊಂಡು ಅದ್ದೂರಿಯ ಮೇಜುವಾನಿ ಏರ್ಪಡಿಸಿದರು. ವಾದ್ಯ ಮತ್ತು ಸಂಗೀತ ಗಳ ಸವಿಯುಣ್ಣಿಸಿದರು. ಮೇಲಾಗಿ ಬಹು ರುಚಿಯಾದ ಮದ್ಯಗಳನ್ನು ಒದಗಿಸಿದರು. ಅದೇರಾತ್ರಿ ನಾವು 'ಮಾಗಾಠಾಣಾ' (Magatana = Magatana) ಎಂಬಲ್ಲಿಗೆ ಹೋದೆವು. ದಾರಿಯುದ್ದಕ್ಕೂ ನವಿಲು, ಪಾರಿವಾಳಗಳು, ಚಿರತೆಗಳನ್ನು ಕಂಡೆವು. ಅವುಗಳನ್ನು ಬೇಟೆಯಾಡುತ್ತ ಸಾಗಿದೆವು.

ರಾತ್ರಿಯನ್ನು ಬಹು ಸುಖವಾಗಿ ಕಳೆದು ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ಬಹು ಪುರಾತನವಾದ ಆದರೆ ಈಗ ಹಾಳುಬಿದ್ದಿರುವ ಕನೋರೀನ್ ನಗರಕ್ಕೆ ಹೋದೆವು. ಅಲ್ಲಿಗೆ ಹೋಗುವ ದಾರಿ ಎಷ್ಟು ಸೊಗಸಾಗಿತ್ತೆಂದರೆ ನಾವು ಇಂಗ್ಲೆಂಡಿನಲ್ಲಿ ಇರುವೆವೊ ಎಂಬ ಭಾವನೆಯಾಯಿತು. ಇಂಥ ಸುಂದರವಾದ ದಾರಿಯಲ್ಲಿ ಐದುಮೈಲಿ ನಡೆದು ನಗರವು ಇರುವ ಗುಡ್ಡದ ಬುಡ ತಲುಪಿದೆವು. ದಾರಿಯಲ್ಲಿ ಅರ್ಧ ಮೈಲಿ ದೂರ ಭಾರಿ ಕಾಡೊಂದು ಸಿಕ್ಕಿತು. ಈ ಕಾಡಿನಲ್ಲಿ ಕೋತಿ, ಹುಲಿ, ಕಾಡೆಮ್ಮೆ, ಗುಳ್ಳೆನರಿ ಮುಂತಾದ ಪ್ರಾಣಿಗಳನ್ನು ಕಂಡೆವು.

ನಮ್ಮ ವಾಹನಗಳಿಂದ ಇಳಿದಾಗ ಸೂರ್ಯೋದಯವಾಯಿತು. ಇಲ್ಲಿಂದ ಮುಂದಿನ ದಾರಿ ಭಾರಿ ಇಕ್ಕಟ್ಟು. ಇಬ್ಬರು ಮಾತ್ರ ಜೊತೆಯಾಗಿ ಹೋಗಬಹುದಾದಷ್ಟು ಬಂಡೆಯಲ್ಲಿ ಕೊರೆದು ಮಾಡಿದ ದಾರಿ. ಈ ದಾರಿಯಲ್ಲಿ ಹೋದರೆ ಮುಂದೆ ಸಿಕ್ಕುವುದು ನಗರ. ಇಡೀ ನಗರವನ್ನು ಬಂಡೆಯನ್ನು ಕಡಿದು ನಿರ್ಮಾಣಮಾಡಿದ್ದಾರೆ. ಆರಂಭ ದಲ್ಲಿಯೇ ಒಂದು ಸುಂದರವಾದ ದೇವಸ್ಥಾನ. ಅದರ ಆ ಕಡೆ ಈ ಕಡೆ ಎರಡು ರಾಕ್ಷಸಾಕಾರದ ವಿಗ್ರಹಗಳು. ಗುಹೆಗೆ ಎರಡು ಸಣ್ಣ ಬಾಗಿಲುಗಳು ಮತ್ತು ಒಂದು ಹೆಬ್ಬಾಗಿಲು. ಗುಹೆಯೊಳಕ್ಕೆ ಬೆಳಕು ಈ ಬಾಗಿಲುಗಳ ಮತ್ತು ದ್ವಾರಮಂಟಪದ ಕಿಟಕಿಗಳ ಮೂಲಕ ಮಾತ್ರ ಬರುತ್ತಿತ್ತು. ಈ ಕಾರಣದಿಂದ ಆ ಗುಹೆ ಒಂದು ಬಗೆಯ ಭವ್ಯತೆಯಿಂದ ಕಾಣುತ್ತಿತ್ತು. ಗುಹೆಯ ಮೇಲ್ಭಾಗ ಕಮಾನು. ಅದೇ ಬಂಡೆಯಿಂದ ಕಡೆದ ಮೂವತ್ತುನಾಲ್ಕು ಕಂಬಗಳು ಮೇಲ್ಛಾವಣಿಯನ್ನು ಹೊತ್ತಿದ್ದವು. ಕೆಲವು ಕಂಬಗಳು ದುಂಡಾಗಿವೆ, ಮತ್ತೆ ಕೆಲವು ಚಚ್ಚೌಕವಾಗಿವೆ. ಕಪೋತ (cornice) ಗಳನ್ನು ಆನೆ, ಕುದುರೆ ಮತ್ತು ಹುಲಿಗಳ ವಿಗ್ರಹಗಳಿಂದ ಅಲಂಕಾರ ಮಾಡಿದ್ದಾರೆ. ಗುಹೆಯು ಇನ್ನೊಂದು ಕೊನೆ ಬಿಲ್ಲಿನಾಕಾರಕ್ಕೆ ಇದೆ. ಇಲ್ಲಿ ಪ್ರಾರ್ಥನಾ ಮಂದಿರವಿದೆ. ಇದರ ಉದ್ದ ೧೦೦ ಅಡಿ, ಎತ್ತರ ೫೦ ಅಡಿ ಅಥವಾ ಅದಕ್ಕಿಂತ ಹೆಚ್ಚು. ಇದಾದ ಮೇಲೆ ಬಂಡೆಯಲ್ಲಿಯೇ ಕೊರೆದ ದರ್ಬಾರ್ ಗುಹೆ ಇದೆ. ಇದು ೫೦ ಅಡಿ ಚಚ್ಚೌಕವಾಗಿದೆ. ಹಳೆಯಕಾಲದ ಮಾದರಿಯಲ್ಲಿ ಶಿಲ್ಪದ ಸೊಗಸಾದ ಕೆತ್ತನೆ ಕೆಲಸ ಮಾಡಿದ್ದಾರೆ. ಇದರ ಒಂದು ಬದಿಯಲ್ಲಿ 'ಜೋಗಿಯು' ಕುಳಿತಿದ್ದ. ನಮ್ಮ ಜೊತೆ ಬಂದಿದ್ದ ಬ್ರಾಹ್ಮಣರು ಅವನಿಗೆ ಗೌರವದಿಂದ ನಮಸ್ಕಾರ ಮಾಡಿದರು. ಇಲ್ಲಿಂದ ಅಮೃತಶಿಲೆಯ ಮೆಟ್ಟಿಲಿಳಿದು ಸಾಗಿದರೆ ಮುಂದೆ ರಾಜನ ಅಶ್ವಾಲಯ ಸಿಕ್ಕಿತು. ಪ್ರತಿ ಆಲಯದ ಕೊನೆಯಲ್ಲಿ ಒಂದು ಪೂಜಾಮಂದಿರವಿದೆ. ಇವು ಸಂನ್ಯಾಸಿಗಳ ವಾಸಸ್ಥಳಗಳೆಂದು ನನ್ನ ಊಹೆ. ಇಲ್ಲಿಂದಾಚೆ ರಾಜನ ಅರಮನೆ. ಇದು ವಿಶಾಲವೂ ಭವ್ಯವೂ ಆಗಿದೆ.

ಇದನ್ನೆಲ್ಲಾ ನೋಡಲು ಒಂದು ತಿಂಗಳೇ ಆಗುವುದು. ಆದರೂ ನಮಗಿದ್ದ ವೇಳೆಯಲ್ಲಿ ಆದಷ್ಟು ನೋಡಬೇಕೆಂದುಕೊಂಡು ನಾವು ಗುಡ್ಡದ ಅತ್ಯಂತ ಎತ್ತರವಾದ ಸ್ಥಳವನ್ನೇರಿ ಅಲ್ಲಿ ನಿಂತು ಸುತ್ತಮುತ್ತ ಕಾಣುವ ಗುಹೆಗಳನ್ನು ನೋಡಿ ನಮ್ಮ

ಕಣ್ಣುಗಳಿಗೆ ಆನಂದವನ್ನುಂಟುಮಾಡಿದೆವು. ಈ ಕೆಲಸ ಯಾರದು? ಏತಕ್ಕೋಸ್ಕರ? ಇಂದು ಯಾರಿಗೂ ಗೊತ್ತಿಲ್ಲ. ಆದರೆ ಹಿಂದೂಗಳಿಗೆ ಇದು ಬಹು ಪವಿತ್ರವಾದ ಸ್ಥಳ. ಈ ಕೆಲಸ ಅಲೆಕ್ಸಾಂಡರನಿಂದ ಆಯಿತು ಎಂದು ಕೆಲವರು ಹೇಳುತ್ತಾರೆ. ಆದರೆ ಇದನ್ನು ನಂಬಲು ಆಗುವುದಿಲ್ಲ. ಆತ ಈ ಕಡೆ ಬಂದಿರಲೇ ಇಲ್ಲ. ಮತ್ತು ಈ ಬೃಹತ್ ಕೆಲಸವನ್ನು ಮಾಡಿಸುವಷ್ಟು ಕಾಲ ಆತ ಇಂಡಿಯಾದಲ್ಲಿ ಇರಲೂ ಇಲ್ಲ. ಇದು ವಿಧರ್ಮಿಗಳ (ಹಿಂದೂಗಳ) ದೇವಾಲಯವಿರಬೇಕೆಂದು ನನಗನ್ನಿಸುತ್ತದೆ. ಈ ಸ್ಥಳದ ಪಾವಿತ್ರ್ಯತೆಯ ಬಗ್ಗೆ ವಿಗ್ರಹಾರಾಧಕರು ಇಟ್ಟುಕೊಂಡಿರುವ ನಂಬಿಕೆಗಳು ನನ್ನ ಮಾತಿಗೆ ಆಧಾರ. ಆದರೆ ಈಗ ಇದರ ಒಡೆಯರಾಗಿರುವ ಪೋರ್ಚುಗೀಸರು ಇದನ್ನು ನಿರ್ನಾಮ ಮಾಡಲು ಯತ್ನಿಸುತ್ತಿದ್ದಾರೆ—ಇದರ ನಿರ್ಮಾಪಕರ ಹೆಸರೇ ಉಳಿಯದಂತೆ ಮಾಡಲು.[೧]

ಮುಖ್ಯಪಟ್ಟಣ 'ತಾಣೌ' (Tanaw = ಠಾಣಾ). ಇಲ್ಲಿ ಏಳು ಇಗರ್ಜಿಗಳಿವೆ.[೨] ಹೆಂಚು ಹೊದಿಸಿದ ತಗ್ಗು ಮನೆಗಳು. ರೇಷ್ಮೆ ಮತ್ತು ಹತ್ತಿ ಬಟ್ಟೆಗಳನ್ನು ಸೊಗಸಾಗಿ ತಯಾರಿಸುತ್ತಾರೆ.

ಇಲ್ಲಿ ಮೀನ್ (Mien = Mane?) ಎಂಬ ಇನ್ನೊಂದು ದೊಡ್ಡ ಪಟ್ಟಣ ಇದೆ. ಅಲ್ಲಿ ಕೋಟೆಯೂ ಸಿಪಾಯಿಗಳೂ ಇದ್ದಾರೆ.

ಕನೊರೀನ್ ದ್ವೀಪದಲ್ಲಿ ಕ್ರೈಸ್ತರಿಗೆ ಮಾತ್ರ ಪೋರ್ಚುಗೀಸರು ಅವಕಾಶ ಕೊಡುತ್ತಾರೆ. ಇಲ್ಲಿ ನದಿಗಳಿಲ್ಲ. ಆದರೆ ಬಂಡೆಗಳಿಂದ ಹರಿದುಬರುವ ಝರಿಗಳಿವೆ. ಭೂಮಿ ಬಹು ಫಲವತ್ತಾಗಿದೆ. ಕೋಸು, ಮೂಲಂಗಿಗಳು ಬೆಳೆಯುತ್ತವೆ. ಇಲ್ಲಿ ತಿಂದ ರುಚಿಯಾದ ಮೂಲಂಗಿಯನ್ನು ನಾನು ಬೇರೆಲ್ಲಿಯೂ ತಿನ್ನಲಿಲ್ಲ. ತೋಟಗಳಲ್ಲಿ ಬೆಳೆಯುವ ಹಣ್ಣುಹಂಪಲುಗಳಲ್ಲದೆ ಕಲ್ಲಂಗಡಿ ಮತ್ತು ಈರುಳ್ಳಿ ಬೆಳೆಯುತ್ತಾರೆ. ಇಲ್ಲಿ ಬೆಳೆಯುವ ಈರುಳ್ಳಿ ಸೇಬಿನಷ್ಟು ಸಿಹಿ. ಇಷ್ಟು ಫಲವತ್ತಾದ ಭೂಮಿ ಸುತ್ತಮುತ್ತಣ ದ್ವೀಪಗಳಿಗೂ ಗೋವೆಗೂ ಬೇಕಾದ್ದನ್ನು ಒದಗಿಸುತ್ತದೆ. ಈ ದ್ವೀಪದ ಉದ್ದ ೨೦ ಮೈಲಿ; ಸುತ್ತಳತೆ ೭೦ ಮೈಲಿ.

ಬೇಸಗೆ ಇನ್ನೂ ಮುಗಿದಿರಲಿಲ್ಲ, ಆಗ ಬಸ್ಸೀನ್‌ನಲ್ಲಿದ್ದ (Bassein = ವಸಾಯ್) ಗೌರ್ನರ್ ಜಾನ್ ದೆ ಮೆಂಡೋಸನಿಂದ ನನಗೆ ಕರೆ ಬಂದಿತು. ಈತ ಒಳ್ಳೆಯ ಮನೆತನಕ್ಕೆ ಸೇರಿದವನು. ಈತನಿಗೆ ಒಬ್ಬಳೇ ಮಗಳು. ಬಹು ಸುಂದರವಾಗಿದ್ದಾಳೆ. ಆಕೆಗೆ

---

೧. ಗೋವೆಯಲ್ಲಿ ಪೋರ್ಚುಗೀಸರು ಮತೀಯನ್ಯಾಯಸ್ಥಾನವನ್ನು (Inquisition) ಸ್ಥಾಪಿಸಿದ ಮೇಲೆ ಫ್ರಾನ್ಸಿಸ್ಕಾನ್ ಫಾದರುಗಳು ಕನ್ಹೇರಿ ಮತ್ತು ಮಂಡಪೇಶ್ವರ ಗುಹೆಗಳನ್ನು ತಮ್ಮ ಸ್ವಾಧೀನ ಪಡಿಸಿಕೊಂಡು ಅಲ್ಲಿದ್ದ ಜೋಗಿಗಳನ್ನು ಹೊರಹಾಕಿ ಶಿಲ್ಪವನ್ನು ಹಾಳುಮಾಡಲು ಶತಪ್ರಯತ್ನಪಟ್ಟರು.

೨. ಈಗ ಇರುವುದು ಒಂದೇ ಒಂದು ಚರ್ಚು—ಸೆಂಟ್ ಜಾನ್ ಚರ್ಚು. ಇದನ್ನು ೧೫೪೮ರಲ್ಲಿ ಕಟ್ಟಲಾಯಿತೆಂದು ತಿಳಿದುಬರುತ್ತದೆ.

ಇನ್ನೂ ಹನ್ನೆರಡು ವರ್ಷ ವಯಸ್ಸಾಗಿದ್ದರೂ ಒಬ್ಬ ನೌಕಾಧಿಪತಿಗೆ ಲಗ್ನ ಮಾಡಿ ಕೊಡಲು ಏರ್ಪಾಟು ನಡೆಯಿತು. ಈಕೆಯ ಶುಶ್ರೂಷೆಗಾಗಿ ನನ್ನನ್ನು ಅಲ್ಲಿಗೆ ಕರೆಸಿ ಕೊಳ್ಳಲಾಯಿತು.

ಬೊಂಬಾಯಿಂದ ಹೊರಟು ತ್ರುಂಬೆ (ತ್ರಾಂಬೆ) ಮತ್ತು ತಾಣಾ ಮೂಲಕ ಬಸ್ಸೀನ್ ತಲುಪಿದೆ. ಇದರ ಸುತ್ತ ಕಲ್ಲಿನಕೋಟೆ ಇದೆ. ಆದರೆ ಇದು ಇಂಗ್ಲಿಷರ ಧಾಳಿಯನ್ನು ತಡೆಯಬಲ್ಲಷ್ಟು ಭದ್ರವಾಗಿಲ್ಲ. ಊರಿನಲ್ಲಿ ಆರು ಚರ್ಚುಗಳೂ, ನಾಲ್ಕು ಕಾನ್‌ವೆಂಟ್‌ಗಳೂ, ಎರಡು ಕಾಲೇಜುಗಳೂ ಇವೆ. ಇಲ್ಲಿರುವ ಫಿದಾಲ್ಗೋ (ಪೋರ್ಚು ಗೀಸ್ ಶ್ರೀಮಂತರು) ಮನೆಗಳು ಬಹು ಚೆನ್ನಾಗಿವೆ. ಇವರು ತಮ್ಮ ದೊಡ್ಡಸ್ತಿಕೆ ಯನ್ನು ತಾವು ಇಟ್ಟುಕೊಳ್ಳುವ ಸೇವಕರ ಸಂಖ್ಯೆಯಿಂದ ತೋರಿಸಿಕೊಳ್ಳುತ್ತಾರೆ. ಹೊತ್ತುಮೀರಿ ಬೀದಿಯಲ್ಲಿ ಹೋಗಬಾರದು, ಹೋದರೆ ಈ ಕಳ್ಳಬಡವರ ಕೈಗೆ ಸಿಕ್ಕಬೇಕಾಗುತ್ತದೆ. ಕ್ರೈಸ್ತರು ಮಾತ್ರ ಊರೊಳಗೆ ಇದ್ದಾರೆ. ಬನಿಯನರು ಊರ ಹೊರಗೆ ಇದ್ದಾರೆ.

ಇಲ್ಲಿಯ ಭೂಮಿ ಫಲವತ್ತಾಗಿದೆ. ಕಬ್ಬು, ಬತ್ತ ಮತ್ತು ಇತರ ಧಾನ್ಯಗಳನ್ನು ಬೆಳೆಯುತ್ತಾರೆ. ಇತ್ತೀಚೆಗೆ ನಡೆದ ಮಸ್ಕತ್ತಿನ ಅರಬರ ಧಾಳಿಯಿಂದ ಬಹು ಭಾಗದ ಬೆಳೆ ನಾಶವಾಗಿದೆ. ಆಗಾಗ್ಗೆ ಅವರ ಹಾವಳಿ ಇದ್ದೇ ಇರುತ್ತದೆ. ಅವರು ದ್ವೀಪದ ಮೇಲೆ ಧಾಳಿಮಾಡಿ ಫಿದಾಲ್ಗೋಗಳನ್ನೂ ಅವರ ಹೆಂಡತಿ ಮಕ್ಕಳನ್ನೂ ಸೆರೆಹಿಡಿದು, ಪಾದ್ರಿಗಳನ್ನು ಕಡಿದುಹಾಕಿ, ಚರ್ಚುಗಳಿಗೆ ನುಗ್ಗಿ ದರೋಡೆ ಮಾಡಿಕೊಂಡುಹೋಗು ತ್ತಾರೆ. ಪೋರ್ಚುಗೀಸರು ಮಸ್ಕತ್‌ನಲ್ಲಿ ಮಾಡಿದ ಕ್ರೂರ ಕೃತ್ಯಗಳಿಗೆ ಅವರ ಮೇಲೆ ಸೇಡುತೀರಿಸಿಕೊಳ್ಳಲು ಅರಬ್ಬರು ಈ ರೀತಿ ಮಾಡುತ್ತಿದ್ದಾರೆ. ಆದರೆ ಇದಕ್ಕೆ ಮುಖ್ಯ ಕಾರಣ ಮತೀಯ ವೈಷಮ್ಯ.

ಇಲ್ಲಿ ಒಂದುವಾರ ಇದ್ದು ನನ್ನ ಕೆಲಸಮುಗಿಸಿಕೊಂಡು ಹಿಂದಿರುಗುವಾಗ ದೋಣಿ ಯನ್ನು ದಕ್ಷಿಣಕ್ಕೆ ನಡೆಸಿ ಎಲಿಫಾಂಟೊ ಎಂಬ ಗುಹೆಗಳನ್ನು ನೋಡಲು ಹೋದೆ. ಒಂದು ಭಾರಿ ಬಂಡೆಯಲ್ಲಿ ಕೊರೆದಿರುವ ಎಲಿಫೆಂಟ್ (ಆನೆ) ಮತ್ತು ಅದರ ಬೆನ್ನಿನ ಮೇಲಿರುವ ಮರಿಯಾನೆಯಿಂದಾಗಿ ಈ ಸ್ಥಳಕ್ಕೆ ಎಲಿಫಾಂಟೊ ಎಂಬ ಹೆಸರು ಬಂದಿದೆ. ಇಲ್ಲಿಂದ ಸ್ವಲ್ಪ ದೂರದ ಕಣಿವೆಯಲ್ಲಿ ಕುದುರೆಗಳ ವಿಗ್ರಹಗಳನ್ನು ಕಡೆದು ನಿಲ್ಲಿಸಿದ್ದಾರೆ. ನಾವು ಈ ದ್ವೀಪದಲ್ಲಿಯೇ ಅತ್ಯಂತ ಎತ್ತರವಾದ ಗುಡ್ಡವನ್ನೇರಿ ನೋಡಿದಾಗ ಭಾರಿ ಬಂಡೆಯಲ್ಲಿ ಮಾಡಿದ ಬಹು ಅಚ್ಚರಿಯಾದುದನ್ನು ಕಂಡೆವು. ಪೂರ್ವ ದಿಕ್ಕಿಗೆ ಮಾತ್ರ ಬಾಗಿಲಿರುವ ಚಚ್ಚೌಕವಾದ ಜಾಗದಲ್ಲಿ ಮೂರು ಮುಖದ ವಿಗ್ರಹವಿದೆ. ಗೋಡೆಗಳ ತುಂಬ ದೊಡ್ಡ ದೊಡ್ಡ ವಿಗ್ರಹಗಳನ್ನು ಕೆತ್ತಿದ್ದಾರೆ. ಕೆಲವು ವಿಗ್ರಹಗಳಿಗೆ ಎಂಟು ಕೈಗಳಿವೆ. ಇವುಗಳ ಮುಂದೆ ತುಂಬಿದ 'ಟ್ಯಾಂಕ್' (ಕೊಳ) ಇದೆ. ಇದಾದ ಮೇಲೆ ವಿಗ್ರಹಗಳಿರುವ ಇನ್ನೊಂದು ಜಾಗವಿದೆ. ಕನೋರಿನ್‌ಗಿಂತ ಇದು ಈಚಿನದು ಎಂದು ಕಾಣುತ್ತದೆ. ಇಲ್ಲಿರುವ ವಿಗ್ರಹಗಳನ್ನು ಪೋರ್ಚುಗೀಸರು ಊನ ಮಾಡಿದ್ದಾರೆ. ಹತ್ತು ಮೈಲಿ ಸುತ್ತಳತೆಯ ಈ ದ್ವೀಪದಲ್ಲಿರುವವರು ಬಡಬಗ್ಗರು ಮಾತ್ರ.

ನಾವು ಬೊಂಬಾಯಿಗೆ ಹಿಂದಿರುಗಿದೆವು. ಬೇಸಗೆ ಬಿಸಿಲು ಹೆಚ್ಚಾಗುತ್ತಾ ಬಂದಿತು. ತೆಂಕಣಗಾಳಿ ಜೋರಾಗಿ ಬೀಸಲಾರಂಭಿಸಿತು. ಹೆಂಡದಮರಗಳಿಗೆ ಕಟ್ಟಿದ ಗಡಿಗೆಗಳಲ್ಲಿ ಹೆಂಡ ಹುಳಿಯಾಗುತ್ತಿತ್ತು. ಇದು ಮುಂದೆ ಮಳೆ ಬರುವ ಸೂಚನೆ. ಮುಂಗಾರು ಮಳೆ ಮೇ ತಿಂಗಳ ಮೊದಲ ಹುಣ್ಣಿಮೆಯ ದಿನ ಆರಂಭವಾಗಿ ಹದಿನೈದು ದಿನಗಳು ಸುರಿಯುತ್ತದೆ. ಈ ಕಾಲ ಆರೋಗ್ಯಕರವಲ್ಲ. ಆಮೇಲೆ ಹದಿನೈದು ದಿನಗಳು ಮಳೆಯಿಂದ ಬಿಡುವು. ಅನಂತರ ಮಳೆಗಾಲ ಆರಂಭವಾಗುತ್ತದೆ.

ಮಳೆಗಾಲದಲ್ಲಿ ಮೊಗಲನ ನೌಕಾಧಿಪತಿಯಾದ ಸಿದ್ದಿಯು (Syddy= ಸೈಯಂದ್) ಇಲ್ಲಿಗೆ ಬಂದು ಲಂಗರು ಹಾಕುತ್ತಾನೆ. ವಾಸ್ತವವಾಗಿ ಹೇಳುವುದಾದರೆ ಶಿವಾಜಿಯ ಕಾಟದಿಂದ ತಪ್ಪಿಸಿಕೊಳ್ಳಲು ಇಲ್ಲಿಗೆ ಬರುತ್ತಾನೆ. ಶಿವಾಜಿಯ ಬಲ ದಿನೇ ದಿನೇ ಹೆಚ್ಚುತ್ತಿದೆ. ದಂಡಾ ರಾಜಪುರದ ಸುಭದ್ರವಾದ ದುರ್ಗದಲ್ಲಿ ಸೇರಿಕೊಂಡು ಸೈಯದನನ್ನು ತಿರಸ್ಕಾರದಿಂದ ಕಾಣುತ್ತಿದ್ದಾನೆ. ರಾಯರಿ (ರಾಯಗಢ) ಆಸ್ಥಾನದಲ್ಲಿ 'ಮಹಾರಾಜ'ನಾಗಿ ಸಿಂಹಾಸನವನ್ನೇರಲು ಸಿದ್ಧತೆ ಮಾಡಿಕೊಳ್ಳುತ್ತಿದ್ದಾನೆ. ನಾವು ಆತನ ಬಳಿಗೆ ರಾಯಭಾರ ಕಳುಹಿಸಿ ನಮ್ಮ ಹಿತವನ್ನು ಕಾಪಾಡಿಕೊಳ್ಳಬೇಕಾಗಿದೆ.

ಮನುಷ್ಯನೊಬ್ಬನೇ ಬುದ್ಧಿವಂತನಲ್ಲ, ಪ್ರಾಣಿಗಳಿಗೂ ಬುದ್ಧಿ ಇದೆ. ಇಲ್ಲಿ ಒಂದು ಹಕ್ಕಿ ಇದೆ. ಇದು ತಾನು ಗೂಡು ಕಟ್ಟುವ ಹೆಂಡದ ಮರ (ಈಚಲು ಮರ) ದಿಂದ ತನ್ನ ಹೆಸರು ಪಡೆದಿದೆ. ಅಳಿಲಿನ ಕಾಟದಿಂದ ಪಾರಾಗಲು ಈ ಹಕ್ಕಿ ಮರದ ಗರಿಯ ತುದಿಯಲ್ಲಿ ತೂಗಾಡುವ ಗೂಡು ಕಟ್ಟುತ್ತದೆ. ಹುಲ್ಲಿನ ಗರಿಗಳಿಂದ ಬಹು ಚಮತ್ಕಾರ ವಾಗಿ ಗೂಡುಕಟ್ಟುವುದನ್ನು ನೋಡಿದರೆ ಅಚ್ಚರಿಯಾಗುತ್ತದೆ. ಎಂತಹ ಗಾಳಿ ಮಳೆಗೂ ಈ ಗೂಡು ಜಗ್ಗುವುದಿಲ್ಲ. ಇಂತಹ ನೂರಾರು ಗೂಡುಗಳು ಮರಗಳ ತುದಿಯಿಂದ ತೂಗಾಡುತ್ತಿರುವುದನ್ನು ನೋಡಬಹುದು. ತಾಳೆಯ ಮರದಿಂದಲೂ ಈ ಗೂಡು ಗಳು ನೇತಾಡುವುದನ್ನು ಕಾಣಬಹುದು.[೨]

ಮಳೆ ಆರಂಭವಾಯಿತು. ಎಲ್ಲಾ ವ್ಯಾಪಾರ ವಹಿವಾಟುಗಳೂ, ಧಾಳಿ ಪ್ರತಿ ಧಾಳಿಗಳೂ ನಿಂತುಹೋಗಿವೆ. ಮಳೆಗಾಲಕ್ಕಾಗಿ ಎಲ್ಲರೂ ಸಿದ್ಧರಾಗುತ್ತಿದ್ದಾರೆ ಇರುವೆಗಳಂತೆ. ಸಮುದ್ರದ ಮೇಲೆ ಹೋಗುವಂತಿಲ್ಲ; ಭೂಮಿಯ ಮೇಲೂ ಅಡ್ಡಾಡು ವಂತಿಲ್ಲ. ಮನೆಯಲ್ಲಿ ಕುಳಿತು ಸ್ನೇಹಿತರೊಡನೆ ಕಾಲ ಕಳೆಯುವುದೊಂದೇ ಕೆಲಸ. ಮಳೆ ಭೋರೆಂದು ಸುರಿಯುತ್ತಿದೆ—ಪ್ರಳಯವೇ ಬಂದಿತೊ ಎಂಬಂತೆ. ಗುಡುಗು ಸಿಡಿಲುಗಳು

---

೧. ಫ್ರೈಯರ್ ಮಾಡಿರುವ ವರ್ಣನೆ ಎಲಿಫಾಂತಾ ಗುಹೆಗಳನ್ನು ಕುರಿತದ್ದು. ಎಲಿಫೆಂತಾ ದ್ವೀಪಕ್ಕೆ ಘಾರ್‌ಪುರಿ ಅಂದರೆ ಗುಹೆನಗರಿ ಎಂದೂ ಹೆಸರುಂಟು. ಮೂರು ತಲೆಯ ವಿಗ್ರಹ ಹೆಸರಾದ ತ್ರಿಮೂರ್ತಿ ವಿಗ್ರಹ. ಫರ್ಗುಸನರ ಪ್ರಕಾರ ಈ ಗುಹೆಗಳು ಕಾನ್ಹೇರಿ ಗುಹೆಗಳಿಗಿಂತ ಮೂರು ಶತಮಾನ ಗಳಷ್ಟು ಈಚಿನವು. ಯಾವ ಆನೆಯ ವಿಗ್ರಹಗಳಿಂದ ದ್ವೀಪಕ್ಕೆ ಈ ಹೆಸರು ಬಂದಿತೋ ಆ ವಿಗ್ರಹ ಗಳನ್ನು ಈಗ ಬೊಂಬಾಯಿ ವಿಕ್ಟೋರಿಯಾ ಉದ್ಯಾನವನದಲ್ಲಿ ಇಡಲಾಗಿದೆ.

೨. ಇದು ಗೀಜಗನ ಗೂಡು.

ಆರ್ಭಟಿಸುತ್ತಿವೆ. ಆಗಸ್ಟ್ ತಿಂಗಳಿನ ಹುಣ್ಣಿಮೆಯುವರೆಗೆ ಹೀಗೆಯೇ. ಆಗ ಯೂರೋಪಿನ ಹಡಗುಗಳು ಗುಡ್‌ಹೋಪ್ ಭೂಶಿರ ಬಳಸಿ ಬದುಕಿ ಉಳಿದರೆ ಇಲ್ಲಿಗೆ ಬರುತ್ತವೆ. ಹುಣ್ಣಿಮೆಯ ನಂತರ ಬನಿಯನರು ಬ್ರಾಹ್ಮಣರೊಡಗೂಡಿ ಸಮುದ್ರತೀರಕ್ಕೆ ಹೋಗಿ ಸಮುದ್ರಪೂಜೆ ಸಲ್ಲಿಸಿ ತಮ್ಮ ಸಮುದ್ರದ ಮೇಲಿನ ಯಾನಕ್ಕೂ ವ್ಯಾಪಾರಕ್ಕೂ ಸಿದ್ಧರಾಗುತ್ತಾರೆ.೧

ಈಗ ಶಿವಾಜಿಯ ಬಳಿಗೆ ಹೋಗಿದ್ದ ನಮ್ಮ ರಾಯಭಾರಿಗಳು ಹಿಂದಿರುಗಿ ಪ್ರೆಸಿಡೆಂಟ್‌ರಿಗೆ ಮಾಡಿದ ವರದಿಯನ್ನು ತಮ್ಮ ಅವಗಾಹನೆಗೆ ಯಥಾಸ್ಥಿತಿ ತಿಳಿಸುತ್ತಿದ್ದೇನೆ. ದಯಮಾಡಿ ಕೇಳಿ:

ರಾಯಭಾರಿ ತನ್ನ ಕರ್ತವ್ಯಗಳೇನೆಂಬುದನ್ನು ಪ್ರೆಸಿಡೆಂಟರಿಂದ ತಿಳಿದುಕೊಂಡು, ಪ್ರಯಾಣಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಕೊಂಡವನು ಬೊಂಬಾಯಿ ಶೆಬಾರ್ (Bombaim Shebar = ತೀರದಲ್ಲಿ ಅಡ್ಡಾಡುವ ಒಂದು ಬಗೆಯ ಹಡಗು)ನಲ್ಲಿ ಹೊರಟು ಪೋರ್ಚುಗಲ್ಲರಿಗೆ ಸೇರಿದ ಚೌಲ್‌ನ್ನು ತಲುಪಿದ. ಅವನ ಜೊತೆ ಇಬ್ಬರು ಇಂಗ್ಲಿಷ್ ದಳ್ಳಾಳಿಗಳೂ (Factors) ಇದ್ದರು. ಈ ಊರು ತಲುಪಲು ರಾತ್ರಿ ಗಂಟೆ ಒಂಬತ್ತಾಯಿತು. ಆಗಲೇ ಊರಿನ ಬಾಗಿಲುಗಳನ್ನು ಮುಚ್ಚಿಬಿಟ್ಟಿದ್ದರಿಂದ ರಾಯಭಾರಿ ಊರ ಹೊರಗಿದ್ದ ಸೆಂಟ್ ಸೆಬಾಸ್ಟಿಯನ್ ಚರ್ಚಿನಲ್ಲಿ ಇರಬೇಕಾಯಿತು. ಮಾರನೆಯ ಮಧ್ಯಾಹ್ನ ಹೊರಟು 'ಮೇಲಿನ ಚೌಲ್' ಎಂಬಲ್ಲಿಗೆ ಹೋದರು. ಇದು ರಾಜನಿಗೆ (ಶಿವಾಜಿಗೆ) ಸೇರಿದ ಊರು. ಹಿಂದೆ ಡಕ್ಕನ್ ಸರಕುಗಳಿಗೆ ಭಾರಿ ಹೆಸರುವಾಸಿಯಾಗಿತ್ತು. ಆದರೆ ಈಚೆಗೆ ಮೊಗಲನಿಗೂ ಶಿವಾಜಿಗೂ ನಡೆದ ಯುದ್ಧಗಳ ಕಾರಣ ಸಂಪೂರ್ಣವಾಗಿ ನಾಶವಾಗಿದೆ. ಶಿವಾಜಿಯು ಈ ಊರನ್ನು ಕೊಳ್ಳೆಹೊಡೆದು ಪಾಳುಗೆಡವಿದ. ಇಲ್ಲಿಗೆ ಬಂದ ರಾಯಭಾರಿ ಈ ಊರಿನ ಸುಬೆದಾರ್ (Subidar = ಸುಬಾದಾರ್ = ಮೊಗಲ್ ಪ್ರಾಂತ್ಯವೊಂದರ ಗೌರ್ನರ್)ನನ್ನು ಕಂಡು ಅವನಿಗೆ ಒಂದೆರಡು 'ಪಾಮೆರಿನ್' (Pāmerin = Pimari = ಒಂದು ಬಗೆಯ ತಲೆಯುಡುಗೆ) ಬಹುಮಾನ ಒಪ್ಪಿಸಿ ಕುಶಲ ಸಂಭಾಷಣೆ ನಡೆಸಿದ. ಮಾರನೆಯ ದಿನ ದೋಣಿಯಲ್ಲಿ ಕುಳಿತು ಚೌಲ್ ನದಿಯ ಮೇಲೆ ಸಾಗಿ 'ಎಸ್ತಮಿ' (ಅಸ್ತಮಿ) ಮತ್ತು ನಿಜಾಂಪುರ ಊರುಗಳ ಮುಖಾಂತರ ರಾಯಘಡಕ್ಕೆ ಪ್ರಯಾಣಮಾಡಿದ. ರಾಯಘಡದ ಬುಡದಲ್ಲಿ 'ಪಂಚಾರ್ರಾ' (ಪಾಚಾಡ್) ಎಂಬ ಊರು ಇದೆ. ಶಿವಾಜಿಯು ಪ್ರತಾಪಘಡದಲ್ಲಿರುವ ಭವಾನಿದೇವಿಗೆ ಪೂಜೆ ಸಲ್ಲಿಸಲು ಹೋಗಿದ್ದಾನೆಂದು ತಿಳಿಯಿತು. ಕಿರೀಟಧಾರಣಕ್ಕೆ ಮುಂಚೆ ಈ ದೇವಿಯ ಪೂಜೆ ಮಾಡಿ ೧೪ ಮಣ ಅಂದರೆ ನಲವತ್ತೆರಡು ಪೌಂಡು ತೂಕವುಳ್ಳ ಭಂಗಾರದ 'ಲುಂಬ್ರಿಕೊ' (ಆರತಿ) ಒಪ್ಪಿಸಿದನಂತೆ. ಇಲ್ಲಿ

೧. ಇದು ಶ್ರಾವಣದ ಹುಣ್ಣಿಮೆಯ ದಿನ ಆಚರಿಸುವ 'ತೆಂಗಿನಕಾಯಿ ಹುಣ್ಣಿಮೆ.'

ನಮ್ಮ ರಾಯಭಾರಿಯು ನಾರಾಯಣಜೀ ಪಂಡಿತನೆಂಬ ವಕೀಲನ ಬಳಿ ತಾವು ಬಂದ ಕಾರ್ಯವನ್ನು ಹೇಳಿ ಕಂಪೆನಿಯ ಪತ್ರಗಳನ್ನು ಒಪ್ಪಿಸಿದರು. ಮತ್ತು ಶಿವಾಜಿಗೆಂದು ತಂದಿದ್ದ ಬಹುಮಾನಗಳನ್ನು ತೋರಿಸಿದರು. ನಾರಾಯಣಜೀ ಕೆಲಸ ನಿರ್ವಹಿಸುವುದಾಗಿ ಭರವಸೆ ನೀಡಿದ. ಕಂಪೆನಿಯ ಪತ್ರಗಳನ್ನು ಮರಾಠಿ ಭಾಷೆಗೆ ಅನುವಾದಿಸಲಾಗಿತ್ತು. ನಮ್ಮ ಉದ್ದೇಶ ವ್ಯಾಪಾರವಲ್ಲದೆ ಬೇರೇನೂ ಇಲ್ಲವೆಂದೂ, ಘಟ್ಟದ ಮೇಲಿಂದ ಬಾಲಾ ಘಾಟ್ ಮೂಲಕ ನಮ್ಮ ವರ್ತಕರು ಯಾವ ತೊಂದರೆಯು ಇಲ್ಲದೆ ಸರಕುಗಳನ್ನು ಬಂದರಿಗೆ ಸಾಗಿಸಲು ಸೌಕರ್ಯ ಒದಗಿಸಬೇಕೆಂದೂ ಅದರಲ್ಲಿ ತಿಳಿಸಲಾಗಿತ್ತು. ನಾರಾಯಣಜೀಗೆ ಒಂದು ವಜ್ರದ ಉಂಗುರವನ್ನೂ ಆತನ ಮಗನಿಗೆ ಒಂದೆರಡು ಮೇಲೊದಪ್ಪುಗಳನ್ನೂ ಉಡುಗೊರೆಯಾಗಿ ನೀಡಿದರು.

ಶಿವಾಜಿ ಪುರಂಧರಘಡದಿಂದ ರಾಯಘಡಕ್ಕೆ ಹಿಂದಿರುಗಿದಾಗ ರಾಯಭಾರಿಗಳು ರಾಯಘಡವನ್ನೇರಬಹುದೆಂದು ಅನುಮತಿ ಸಿಕ್ಕಿತು. ರಾಯಘಡವನ್ನು ಏರುವುದು ತುಂಬಾ ಕಷ್ಟ. ಬಹು ಕಡಿದಾದ ಬೆಟ್ಟ ಇದು. ಹತ್ತಲು ಒಂದೇ ಒಂದು ದಾರಿ. ಬೆಟ್ಟದ ಮೇಲೆ ಕೆಲವು ಭದ್ರವಾದ ಕಟ್ಟಡಗಳಿವೆ. ರಾಜನ ಅರಮನೆ, ಮಂತ್ರಿಮಾನ್ಯರ ಗೃಹಗಳು ಇತ್ಯಾದಿ ಮುನ್ನೂರು ಮನೆಗಳಿವೆ.

ನಾಲ್ಕುದಿನಗಳ ನಂತರ ರಾಯಭಾರಿಗಳು ನಾರಾಯಣಜೀ ಪಂಡಿತನ ಸಹಾಯ ದಿಂದ ರಾಜನನ್ನು ಭೇಟಿ ಮಾಡುವ ಅವಕಾಶ ಸಿಕ್ಕಿತು. ಸಿಂಹಾಸನಾರೋಹಣ ಮತ್ತು ಮದುವೆಯ ದೊಡ್ಡ ಕಾರ್ಯಗಳಿದ್ದರೂ ರಾಜ ನಮ್ಮವರನ್ನು ಭೇಟಿ ಮಾಡುವ ಮನಸ್ಸು ಮಾಡಿದ. ನಮ್ಮ ರಾಯಭಾರಿಗಳು ರಾಜನಿಗೂ ಆತನ ಮಗ 'ಸಾಂಬಾಜಿ ರಾಜ'ನಿಗೂ ಉಡುಗೊರೆಗಳನ್ನು ಒಪ್ಪಿಸಿದರು. ಇವುಗಳಿಂದ ಅವರಿಗೆ ತೃಪ್ತಿಯಾಯಿತು. ನಾವು ಮಾಡಿಕೊಂಡ ಅಹವಾಲುಗಳನ್ನು ಪರಿಶೀಲಿಸುವಂತೆ ಶಿವಾಜಿ ತನ್ನ 'ಪೇಶ್ವೆ' ಮೋರೋಪಂಡಿತನಿಗೆ ತಿಳಿಸಿದ. ನಮ್ಮ ಕೆಲಸಗಳು ಸಲೀಸಾಗಿ ಸಾಗಬೇಕಾದರೆ ಮೋರೋಪಂಡಿತನಿಂದ ಹಿಡಿದು ಎಲ್ಲರಿಗೂ ಸೂಕ್ತ ಉಡುಗೊರೆ ಸಲ್ಲಿಸಬೇಕಾಗುವು ದೆಂದೂ ಇಲ್ಲದಿದ್ದರೆ ಒಂದಲ್ಲ ಒಂದು ತಕರಾರು ಮಾಡುತ್ತಾರೆಂದೂ ನಾರಾಯಣಜೀ ಪಂಡಿತ ತಿಳಿಸಿದ. ಅವನು ಹೇಳಿದಂತೆ ನಾವು ಮೋರೋ ಪಂಡಿತನಿಗೆ ನಾಲ್ಕು ಪಾಮಾರಿ ಗಳನ್ನೂ, ವಖನವೀಸನಿಗೆ (ವರದಿಗಾರ) ೧೫೫ ರೂಪಾಯಿ ಬೆಲೆ ಬಾಳುವ ವಜ್ರ ದುಂಗುರವನ್ನೂ, ಧಬೀರನಿಗೆ (ಕಾರ್ಯದರ್ಶಿ), ಶಾಮ್‌ಜೀ ನಾನಾಜೀ ಎಂಬ ರಾಜ ಮುದ್ರೆಯ ರಕ್ಷಕನಿಗೆ ಮತ್ತು ಆಬಾಜಿ ಪಂಡಿತನಿಗೆ ತಲಾ ನಾಲ್ಕು ನಾಲ್ಕು ಪಾಮಾರಿ ಗಳನ್ನೂ ಕೊಟ್ಟು ತೃಪ್ತಿಪಡಿಸಿದ.

ರಾಜನಿಗೆ ಹಿಂದೂ ಪದ್ಧತಿಯಂತೆ ತುಲಾಭಾರ ಮಾಡಿದರು. ೧೬೦೦೦ ಪಗೋಡ್ ಬೆಲೆಯ ಚಿನ್ನದಲ್ಲಿ ತೂಗಿದರು. ಇದನ್ನೂ ಒಂದು ಲಕ್ಷ ಹಣವನ್ನೂ ರಾಜನು ಸಿಂಹಾಸನ ವನ್ನೇರುವ ದಿನ ಬ್ರಾಹ್ಮಣರಿಗೆ ದಾನ ಮಾಡುತ್ತಾರೆ. ದೇಶದ ನಾನಾ ಕಡೆಗಳಿಂದ ಬ್ರಾಹ್ಮಣರು ಸಹಸ್ರಾರು ಸಂಖ್ಯೆಯಲ್ಲಿ ಬಂದಿದ್ದಾರೆ.

ರಾಯಭಾರಿಗಳು ಬಂದು ಒಂದು ತಿಂಗಳಾದ ಮೇಲೆ ರಾಜನು ಸಿಂಹಾಸನಾರೋಹಣ ಮಾಡಿದನು. ಆ ದಿನ ಬೆಳಗ್ಗೆ ರಾಯಭಾರಿ ಆಸ್ಥಾನಕ್ಕೆ ಹೋದನು. ಆತ ಭವ್ಯವಾದ ಸಿಂಹಾಸನದ ಮೇಲೆ ಕುಳಿತಿದ್ದನು. ಅವನ ಆಸ್ಥಾನಿಕರು ದಿವ್ಯವಾದ ಉಡುಪುಗಳನ್ನು ಧರಿಸಿ ನಿಂತಿದ್ದರು. ರಾಜನ ಮಗ ಸಾಂಬಾಜಿರಾಜ, ಪೇಶ್ವೆ ಮೋರಾ ಪಂಡಿತ ಮತ್ತು ಆಸ್ಥಾನ ಪಂಡಿತನಾದ ಒಬ್ಬ ಬ್ರಾಹ್ಮಣ ಸಿಂಹಾಸನದ ಕೆಳಗೆ ಕುಳಿತಿದ್ದರು. ನಮ್ಮ ಇಂಗ್ಲಿಷರು ಕೊಂಚ ದೂರದಲ್ಲಿ ನಿಂತು ತಮ್ಮ ಗೌರವ ಸಲ್ಲಿಸಿದರು. ನಮ್ಮವರು ಉಡುಗೊರೆಯಾಗಿ ತೆಗೆದುಕೊಂಡು ಹೋಗಿದ್ದ ವಜ್ರದುಂಗುರವನ್ನು ನಾರಾಯಣ ಸಿನಾಯ್ ರಾಜನ ಮುಂದೆ ಹಿಡಿದನು. ಹತ್ತಿರಕ್ಕೆ ಬರಬೇಕೆಂದು ಇಂಗ್ಲಿಷರಿಗೆ ರಾಜನ ಅಪ್ಪಣೆಯಾಯಿತು. ಅವರು ಸಿಂಹಾಸನದ ಹತ್ತಿರಕ್ಕೆ ಹೋದಾಗ ರಾಜನು ಅವರಿಗೆ ಸೂಕ್ತ ಮರ್ಯಾದೆ ಮಾಡಿದನು. ಅರಮನೆಯಿಂದ ಹೊರಗೆ ಬರುವಾಗ ಹೆಬ್ಬಾಗಿಲ ಬಳಿ ಎರಡು ಪಟ್ಟದಾನೆಗಳೂ ಎರಡು ಪಟ್ಟದ ಕುದುರೆಗಳೂ ಇದ್ದುದನ್ನು ಕಂಡರು. ಅವುಗಳನ್ನು ಬಹು ಸೊಗಸಾಗಿ ಅಲಂಕರಿಸಲಾಗಿತ್ತು. ಅವನ್ನು ಬೆಟ್ಟದ ಮೇಲೆ ಹೇಗೆ ತಂದರೆಂಬುದು ನಮ್ಮವರಿಗೆ ಅಚ್ಚರಿಯನ್ನುಂಟುಮಾಡಿತು. ಏಕೆಂದರೆ ದಾರಿ ಬಹು ಕಡಿದು ಮತ್ತು ಅಪಾಯಕಾರಿ.

ಎರಡು ದಿನಗಳನಂತರ ರಾಜ ನಾಲ್ಕನೆಯ ಮದುವೆ ಮಾಡಿಕೊಂಡ. ಪ್ರತಿದಿನ ಬ್ರಾಹ್ಮಣರಿಗೆ ದಾನ ಧರ್ಮಗಳನ್ನು ನಡೆಸಿದ.

ಕೆಲವು ದಿನಗಳನಂತರ ನಾರಾಯಣಜೀ ಪಂಡಿತನಿಂದ ತಿಳಿಯಿತು, ರಾಜನು ನಮ್ಮ ಬೇಡಿಕೆಗಳಲ್ಲಿ ಒಂದನ್ನು ಬಿಟ್ಟು ಉಳಿದೆಲ್ಲವುಗಳನ್ನೂ ಒಪ್ಪಿಕೊಂಡಿದ್ದಾನೆ ಎಂದು. ಒಪ್ಪದೇ ಹೋದ ಒಂದು ಬೇಡಿಕೆ ಯಾವುದೆಂದರೆ, ನಮ್ಮ ನಾಣ್ಯ ರಾಜನ ರಾಜ್ಯದಲ್ಲಿಯೂ ಮತ್ತು ಅದಕ್ಕೆ ಪ್ರತಿಯಾಗಿ ರಾಜನ ನಾಣ್ಯ ಬೊಂಬಾಯಲ್ಲಿಯೂ ಚಲಾವಣೆಯಲ್ಲಿರಬೇಕೆಂಬುದು. ಒಟ್ಟಿನಲ್ಲಿ, ಹೋದ ಕೆಲಸ ಸಾಂಗವಾಗಿ ನೆರವೇರಿತು.

ಇಲ್ಲಿಯ ಜನರ ಊಟೋಪಚಾರಗಳ ಬಗ್ಗೆ ಒಂದು ಮಾತು. ಜನರ ಊಟ ಬಹು ಸರಳ ಹಾಗೂ ಅಗ್ಗ. ಇವರಿಗೆ ಬಹುವಾಗಿ ಹಿಡಿಸುವ ಊಟವೆಂದರೆ ಕಿಚಡಿ, ಅಂದರೆ ಅನ್ನ, ಬೇಳೆ ಮತ್ತು ತುಪ್ಪದ ಊಟ. ಈ ಊಟ ನಮ್ಮವರಿಗೆ ಸರಿಯಾಗಲಿಲ್ಲ. ದಿನಾ ಮಾಂಸ ತಿಂದು ಅಭ್ಯಾಸ. ಈ ವಿಷಯವನ್ನು ರಾಜನ ಗಮನಕ್ಕೆ ತರಲಾಯಿತು. ಅಲ್ಲಿದ್ದ ಕೆಲವು ಮೂರರಿಗೆ ಒಬ್ಬ ಕಟುಕ ಮಾಂಸ ಒದಗಿಸುತ್ತಿದ್ದ. ಅವನೇ ನಮ್ಮವರಿಗೂ ಆಡಿನ ಮಾಂಸ ಒದಗಿಸಬಹುದೆಂದು ತಿಳಿಸಲಾಯಿತು. ನಮ್ಮವರು ದಿನಕ್ಕೆ ಅರ್ಧ ಆಡು ತಿಂದು ಮುಗಿಸುತ್ತಿದ್ದರು. ಇಷ್ಟೊಂದು ಮಾಂಸ ತಿನ್ನುವ ಇವರನ್ನು ನೋಡುವ ಕುತೂಹಲವಾಯಿತು ಕಟುಕನಿಗೆ. ಆತನಿಗೆ ವಯಸ್ಸಾಗಿದ್ದರೂ ಇವರನ್ನು ನೋಡುವ ಇಚ್ಛೆಯಿಂದ ಕಷ್ಟಪಟ್ಟು ಬೆಟ್ಟ ಹತ್ತಿ ಮೇಲೆ ಬಂದ. ಹಲವಾರು ವರ್ಷಗಳಲ್ಲಿ ಖರ್ಚಾಗುವಷ್ಟು ಮಾಂಸ ಕೆಲವೇ ದಿನಗಳಲ್ಲಿ ಖರ್ಚಾದುದು ಆತನಿಗೆ ಅಚ್ಚರಿಯನ್ನುಂಟುಮಾಡಿತು.

ಏಕೆಂದರೆ, ಜೆಂಟೈಲರು ಮಾಂಸ ತಿನ್ನುವುದಿಲ್ಲ. ಮೂರರು ಮತ್ತು ಪೋರ್ಚುಗಲ್ಲರು ಮಾಂಸವನ್ನು ಸಾರುಮಾಡಿಕೊಂಡು ಊಟ ಮಾಡುತ್ತಾರೆ. ಆದರೆ ಯಾರೂ ನಮ್ಮಂತೆ ಸುಟ್ಟ ಮಾಂಸ ತಿನ್ನುವುದಿಲ್ಲ. ಸುಟ್ಟ ಮಾಂಸ ತಿನ್ನುವುದು ಸರಿಯಲ್ಲ ಎನಿಸುತ್ತದೆ. ಇಲ್ಲಿಯ ಉಷ್ಣದ ಹವೆಗೆ ತಕ್ಕಂತೆ ಬೇಯಿಸಿಯೋ, ಸಾರುಮಾಡಿಯೋ ತಿನ್ನುವುದು ಆರೋಗ್ಯಕರ.

ಮಳೆಗಾಲ ಮುಗಿದ ಮೇಲೆ ಮತ್ತು ಈಶಾನ್ಯಗಾಳಿಯಿಂದ ಹವೆಯು ತಂಪಾದ ಮೇಲೆ ನಾನು ನಮ್ಮ ಪ್ರೆಸಿಡೆಂಟರ ಅಪ್ಪಣೆಯಂತೆ ಸೂರತ್ತಿಗೆ ಹೋದೆ. ಸೂರತ್ತಿಗೆ ಸೇರಿದ ಸ್ವಾಲ್ಲಿ ಬಂದರಿನಲ್ಲಿ ಎಂಟು ಹಡಗುಗಳು ಲಂಗರುಹಾಕಿದ್ದವು. ಇಂಗ್ಲಿಷರು, ಫ್ರೆಂಚರು ಮತ್ತು ಡಚ್ಚರ ಬಾವುಟಗಳು ಅದಕ್ಕೆಂದೇ ನಿರ್ಮಿಸಿದ ಧ್ವಜಸ್ತಂಭಗಳ ಮೇಲೆ ಹಾರಾಡುತ್ತಿದ್ದುವು. ಮ್ಯಾಥ್ಯೂ ಗ್ರೇ ಎಂಬುವರು ಇಲ್ಲಿಯ ವೈಸ್ ಪ್ರೆಸಿಡೆಂಟರು ಹಾಗೂ ಭಾರಿ ವರ್ತಕರು. ಇವರು ನಮ್ಮನ್ನು ಪ್ರೀತಿಯಿಂದ ಎದುರುಗೊಂಡರು. ಸಲಹಾ ಮಂಡಲಿಯ ಮತ್ತಿತರರೂ ಇದ್ದರು. ಇವರು ನಮ್ಮ ಬಿಡಾರದ ಬಗ್ಗೆ ಆಸಕ್ತಿ ವಹಿಸಿ ದರು. ಆದರೆ ಆ ಬಿಡಾರ ಏರ್ಪಡಿಸಿದ್ದು 'ಚೌಲ್ಟ್ರಿ' (Choultry = ಛತ್ರ) ಗಳೆಂದು ಕರೆಯಲ್ಪಡುವ ಕಿರುಕೋಣೆಗಳಲ್ಲಿ.

ಇಲ್ಲಿ ಎರಡು ಬಗೆ ಕ್ರಿಮಿಗಳಿವೆ. ಒಂದು, ಸೊಳ್ಳೆ; ಇನ್ನೊಂದು, ಬನಿಯ. ಮರಳ ಮೇಲೆ ತಿರುಗಾಡುವಾಗ ಸೊಳ್ಳೆಗಳು ನಮ್ಮನ್ನು ಕಚ್ಚಿ ರಕ್ತ ಹೀರುತ್ತವೆ. ಬನಿಯರೂ ಅಷ್ಟೆ. ಇವರು ಕುದುರೆಜಿಗಳಿಗಳಂತೆ (ತೊಣಚಿಗಳಂತೆ) ನಮಗೆ ಅಂಟಿ ಕೊಂಡು ಹಣ ಕೀಳುವವರೆಗೂ ಬಿಡುವುದಿಲ್ಲ. ಹಡಗಿನಿಂದ ಇಳಿದ ಕೂಡಲೇ ಇವರು ನಮ್ಮನ್ನು ಮುತ್ತಿಕೊಳ್ಳುತ್ತಾರೆ. ಮುಂದೆ ಹೋಗಲೂ ಬಿಡುವುದಿಲ್ಲ. ಬೈಯ್ದರೆ ಬೈಯ್ಸಿಕೊಳ್ಳುತ್ತಾರೆ. ಆದರೆ ತಮ್ಮ ಕೆಲಸ ಮಾಡಿಕೊಳ್ಳದೆ ಬಿಡುವುದಿಲ್ಲ. ಯಹೂದಿ ಗಳನ್ನೂ ಮೀರಿಸುವ ಇವರು ಸುಳ್ಳು ಮೋಸ ದಗಾಗಳಲ್ಲಿ ಎತ್ತಿದಕೈ.

ಸ್ವಾಲ್ಲಿಯಿಂದ ಸೂರತ್ತಿಗೆ ಹತ್ತು ಮೈಲಿಗಳು. ಕಂಪೆನಿಗೆ ಸೇರಿದ ಎರಡು ಚಕ್ರದ ಎತ್ತಿನಗಾಡಿಗಳಲ್ಲಿ ಕುಳಿತು ಅಲ್ಲಿಗೆ ಹೋದೆವು. ಚುರುಕಾದ ಎರಡು ಗಿಡ್ಡೆತ್ತುಗಳನ್ನು ಗಾಡಿಗೆ ಕಟ್ಟಿದ್ದರು. ನಮ್ಮೊಡನೆ ಕಂಪೆನಿಯ ಹೆಂಗಸರೂ ಇದ್ದದ್ದರಿಂದ ನದಿಯ ಆ ಕಡೆ ಇದ್ದ ಸುಂಕದಕಟ್ಟೆಯಲ್ಲಿ ಮೂರರು ನಮ್ಮ ಶೋಧನೆ ಮಾಡಲಿಲ್ಲ. ಹೆಂಗಸರು ಕುಳಿತಿದ್ದ ಗಾಡಿಗಳಿಗೆ ಕಮಾನು ಕಟ್ಟಿದ್ದರು. ನಮ್ಮವು ಬೋಳುಗಾಡಿಗಳು. ಕಮಾನು ಗಾಡಿಗಳಿಗೆ ಕಂಡಿ ಇರುವ ಬಿದಿರಿನ ತಟ್ಟಿ (ಚೀಕ್ಸ್ = Cheek) ಗಳನ್ನು ಮುಚ್ಚಿದ್ದರು. ಹೊರಗಿನವರಿಗೆ ಕಾಣಿಸದೆ ಒಳಗಿದ್ದವರು ಹೊರಗಿನದನ್ನೆಲ್ಲಾ ನೋಡಬಹುದು.

ಇಂಗ್ಲಿಷ್ ಮನೆ ಮುಟ್ಟಿದಾಗ ನಮಗೆ ಆದರದ ಸ್ವಾಗತ ದೊರೆಯಿತು. ಹಗಲಿನ ಬಿಸಿಲಿನಿಂದ ನಾವು ಸುಸ್ತಾಗಿಬಿಟ್ಟಿದ್ದೆವು. ಇಂಗ್ಲಿಷರ ಮನೆ ಭದ್ರವಾಗಿ ಕಟ್ಟಿದ ಮಹಡಿ ಮನೆ. ಇಲ್ಲಿ ಬೆಳಗಿನಿಂದ ಸಂಜೆತನಕ ವ್ಯಾಪಾರಸಾಪಾರಗಳು ನಡೆಯುತ್ತಲೇ

ಇರುತ್ತವೆ. ಕೊಳ್ಳುವ ಮತ್ತು ಮಾರುವ ಬನಿಯರು ಕೂಗಾಡಿಕೊಂಡು ವ್ಯಾಪಾರ ನಡೆಸುತ್ತಾರೆ. ಕೆಳಗಿನ ಮನೆಯಲ್ಲಿ ಹಮಾಲರೂ ಗಡಂಗುದಾರರೂ ವರ್ತಕರೂ ಸರಕುಗಳನ್ನು ತರುವುದು ಕೊಡುವುದು ಮುಂತಾದ ಕೆಲಸಗಳನ್ನು ಮಾಡುತ್ತ ಭಾರಿ ಗದ್ದಲದಲ್ಲಿ ತೊಡಗಿರುತ್ತಾರೆ. ಗದ್ದಲ ಮಾಡದಿದ್ದರೆ ಇವರು ಏನೂ ಕೆಲಸ ಮಾಡುವುದಿಲ್ಲ ವೆಂದೇ ನನ್ನ ಭಾವನೆ. ಕಂಪೆನಿಯ ವಹಿವಾಟುಗಳನ್ನು ನೋಡಿಕೊಳ್ಳಲು ನಾಲ್ಕು ಜನ ಅಧಿಕಾರಿಗಳಿದ್ದಾರೆ. ಮೊದಲನೆಯವನು ಅಕೌಂಟೆಂಟ್. ಪ್ರೆಸಿಡೆಂಟ್ ಬಿಟ್ಟರೆ ಈತನ ಸ್ಥಾನಮಾನ ದೊಡ್ಡದು. ಇಡೀ ಇಂಡಿಯಾದ ಲೆಕ್ಕ ಪತ್ರಗಳೆಲ್ಲಾ ಇವನ ಮೂಲಕವೇ ನಡೆಯಬೇಕು. ಇವನಾದ ಮೇಲೆ ಗಡಂಗುದಾರ (Warehouse Keeper). ಇವನು ಮಾರಿದ ಮತ್ತು ಕೊಂಡ ಸರಕುಗಳ ಲೆಕ್ಕ ಇಡುತ್ತಾನೆ. ಇವನ ಕೆಳಗೆ ಪರ್ಸರ್ ಮರೀನ್ (Purser Marine) ಅಂದರೆ ಕೋಶಾಧಿಕಾರಿ. ಆತನು ರಫ್ತುಗಳ ಲೆಕ್ಕ ಇಡುವುದು, ನಾವಿಕರ ಸಂಬಳ ಸಾರಿಗೆ ಬಟವಾಡೆ ಮಾಡುವುದು, ಗಾಡಿಗೆ ಬಟ್ಟೆ ಗಳನ್ನು ಒದಗಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತಾನೆ. ಕೊನೆಯದಾಗಿ ಸೆಕ್ರೆಟರಿ. ಕಾಗದ ಪತ್ರಗಳನ್ನು ಬರೆಯುವವನು ಮತ್ತು ಅವುಗಳಿಗೆ ಪ್ರೆಸಿಡೆಂಟರಿಂದ ಮತ್ತು ಸಲಹಾಮಂಡಲಿಯವರಿಂದ ರುಜು ಪಡೆಯುವವನು ಇವನೆ. ಕಂಪೆನಿಯ ಮುದ್ರೆ ಇವನ ಬಳಿ ಇರುತ್ತದೆ.

ಕಂಪೆನಿ ಭಾರಿ ಸಿಬ್ಬಂದಿಯನ್ನೇ ಇಟ್ಟುಕೊಂಡಿದೆ. ವರ್ತಕರು, ದಲ್ಲಾಳಿಗಳು ಮತ್ತು ರೈಟರುಗಳು. ನೀಲಿ ಅಂಗಿ ಹುಡುಗರೂ ಸಿಬ್ಬಂದಿಯಲ್ಲಿ ಸೇರಿದ್ದಾರೆ. ಏಳು ವರ್ಷಗಳ ತರಪೇತಿಯ ನಂತರ ಇವರನ್ನು ಸಿಬ್ಬಂದಿಯಲ್ಲಿ ಸೇರಿಸಿಕೊಳ್ಳಲಾಗುವುದು.

ಕಂಪೆನಿಯ ಅಧ್ಯಕ್ಷನಿಗೆ ವರ್ಷಕ್ಕೆ ೫೦೦ ಪೌಂಡು ಸಂಬಳ. ಅರ್ಧ ಸಂಬಳ ಇಲ್ಲಿ ಕೊಡುತ್ತಾರೆ. ಇನ್ನರ್ಧವನ್ನು ಸ್ವದೇಶಕ್ಕೆ ಹಿಂದಿರುಗಿದಾಗ ಕೊಡುತ್ತಾರೆ. ೫,೦೦೦ ಪೌಂಡುಗಳಿಗೆ ಬಾಂಡ್ ಬರೆದುಕೊಡಬೇಕು. ಅಕೌಂಟೆಂಟನಿಗೆ ವರ್ಷಕ್ಕೆ ೭೨ ಪೌಂಡ್ ಸಂಬಳ. ೫೦ ಪೌಂಡುಗಳನ್ನು ಇಲ್ಲಿ ಕೊಟ್ಟು ಉಳಿದುದನ್ನು ಸ್ವದೇಶದಲ್ಲಿ ಕೊಡುತ್ತಾರೆ. ಕಂಪೆನಿ ವರ್ತಕರುಗಳಿಗೆ ವರ್ಷಕ್ಕೆ ೪೦ ಪೌಂಡ್ ಸಂಬಳ ; ಜೊತೆಗೆ ಕಂಪೆನಿ ಒದಗಿಸುವ ಊಟ ವಸತಿಗಳು. ದಲ್ಲಾಳಿಗಳಿಗೆ ವರ್ಷಕ್ಕೆ ೨೦ ಪೌಂಡು ಸಂಬಳ. ಸಾವಿರ ಪೌಂಡು ಗಳಿಗೆ ಬಾಂಡ್ ಬರೆದುಕೊಡಬೇಕು. ರೈಟರುಗಳ ಸಂಬಳ ವರ್ಷಕ್ಕೆ ೧೦ ಪೌಂಡುಗಳು. ೫೦೦ ಪೌಂಡಿಗೆ ಬಾಂಡ್ ಬರೆದುಕೊಡಬೇಕು. ರೈಟರುಗಳನ್ನು ಬಿಟ್ಟರೆ ಉಳಿದವರೆಲ್ಲರ ಸಂಬಳದಲ್ಲಿ ಅರ್ಧ ಇಲ್ಲಿ ಕೊಡುತ್ತಾರೆ, ಉಳಿದರ್ಧ ಸ್ವದೇಶಕ್ಕೆ ಹಿಂದಿರುಗಿದ ಮೇಲೆ ಕೊಡುತ್ತಾರೆ.

ಬನಿಯರನ್ನು ಸಣ್ಣಪುಟ್ಟ ದಲ್ಲಾಳಿ ಕೆಲಸಗಳಿಗಾಗಿ ಉಪಯೋಗಿಸಿಕೊಳ್ಳುತ್ತಾರೆ. ಇಂತಹ ಕೀಳ್ಮಟ್ಟದ ಕೆಲಸಗಳಿಗೆ ಇವರೇ ಲಾಯಖ್. ಇವರಿಗೆ ಶೇ ೨ರಷ್ಟು ದಲ್ಲಾಳಿ ಕೊಡುತ್ತಾರೆ. ಇದರ ಮೇಲೆ ಅವರಿವರನ್ನು ಹಿಂಡಿ ಗುಟ್ಟಾಗಿ ಹಣ ಗಿಟ್ಟಿಸಿಕೊಳ್ಳುವುದು ಇದ್ದೇ ಇದೆ.

ಫ್ಯಾಕ್ಟೊರಿಗೆ ಸೇರಿದ ಇನ್ನೂ ಇಪ್ಪತ್ತು ಜನ ಸಿಬ್ಬಂದಿ ಇದ್ದಾರೆ: ಒಬ್ಬ ಪಾದ್ರಿ, ಒಬ್ಬ ಸರ್ಜನ್ ಇತ್ಯಾದಿ.

ಇಂಡಿಯಾದಲ್ಲಿ ಸೂರತ್ತಿನ ಪ್ರೆಸಿಡೆಂಟರ ಸ್ಥಾನ ದೊಡ್ಡದು. ಇವರಿಗೆ ಪಲ್ಲಕ್ಕಿ, ಹಿಡಿಗುದುರೆ, ನವಿಲುಗರಿ ಬೀಸಣಿಗೆ, ಆಳುಕಾಳುಗಳ ಸೇವೆ ಇವೆಲ್ಲಾ ಮರ್ಯಾದೆಗಳಿವೆ.

ಇಲ್ಲಿಂದ ಬಂಟಾಮಿಗೆ ಬಟ್ಟೆ ರವಾನಿಸುತ್ತಾರೆ. ಚೀನಾದಿಂದ ಸಕ್ಕರೆ, ಟೀ, ಪಿಂಗಾಣಿ, ಬಣ್ಣದ ಸಾಮಾನು, ಪಾದರಸ, ಸತುವು ಮತ್ತು ತಾಮ್ರ ತರಿಸಿಕೊಳ್ಳುತ್ತಾರೆ. ಸಯಾಂ ಮತ್ತು ಫಿಲಿಪ್ಪೈನ್ ದ್ವೀಪಗಳಿಂದ ಕವಡೆ, ಸುಮಾತ್ರದಿಂದ ಚಿನ್ನ ಮತ್ತು ಆನೆಯ ದಂತ, ಪರ್ಷಿಯಾದಿಂದ ಔಷಧಿ ಸಾಮಾನುಗಳು ಮತ್ತು ಒಂದು ಬಗೆಯ ಉಣ್ಣೆ, ಮೊಕೊದಿಂದ (Moco) ಕೊಹೊರ್ (Cohor) ಅಥವಾ ಕಾಫಿ ತರಿಸಿಕೊಳ್ಳುತ್ತಾರೆ. ಇಂಡಿಯಾ ದೇಶದ ಅಹಮದಾಬಾದಿನಿಂದ ರೇಶ್ಮೆ ಮತ್ತು ಜರತಾರಿ ಸಾಟಿನ್ ಬಟ್ಟೆ, ಆಗ್ರಾದಿಂದ ನೀಲಿ, ಅರಗು, ಒರಟುಬಟ್ಟೆ, ನವುರುಬಟ್ಟೆ, ಕ್ಯಾಲಿಕೋ ಬಟ್ಟೆಗಳನ್ನೂ, ತೀರಪ್ರದೇಶದ ಊರುಗಳಾದ ಬೊಂಬಾಯಿ, ರಾಜಾಪುರಗಳಿಂದ 'ಸಾಲು' (Salu = ಶಾಲು ?) ಗಳನ್ನೂ, ಕಾರವಾರದಿಂದ 'ಡಂಗರಿ' (ಒರಟು ಬಟ್ಟೆ) ಮತ್ತು ಗಟ್ಟಿ ಮೆಣಸುಗಳನ್ನೂ, ಕ್ಯಾಲಿಕಟ್‌ನಿಂದ ಸಂಬಾರ, ಅಫೀಮು, ಪೆಟ್ಲುಪ್ಪು ಗಳನ್ನೂ ತರಿಸಿಕೊಳ್ಳುತ್ತಾರೆ. ಮೊಟ್ಟಮೊದಲು ಯೂರೋಪಿಗೆ ಕ್ಯಾಲಿಕಟ್‌ನಿಂದ ಬಟ್ಟೆಗಳನ್ನು ತರಿಸಿಕೊಂಡ ಕಾರಣ ಆ ಬಟ್ಟೆಗಳಿಗೆ ಕ್ಯಾಲಿಕೋ ಎಂದು ಹೆಸರು ಬಂದಿತು. ಆದರೆ ಈಗ ಕ್ಯಾಲಿಕಟ್‌ನಿಂದ ಬಟ್ಟೆ ಬರುವುದಿಲ್ಲ. ಈ ಸರಕುಗಳೆಲ್ಲ ಸೂರತ್ತಿಗೆ ಬಂದು ಇಲ್ಲಿಂದ ಹಡಗುಗಳಲ್ಲಿ ರವಾನೆಯಾಗುತ್ತವೆ.

ಸೂರತ್ತಿನ ಸುತ್ತಮುತ್ತ ಬಗೆಬಗೆಯ ಕ್ಯಾಲಿಕೋ ಬಟ್ಟೆಗಳು ದೊರೆಯುತ್ತವೆ. ಆದರೆ ಹೆಚ್ಚು ಸಿಗುವುದಿಲ್ಲ. ಅಲ್ಲದೆ ಬೆಲೆಯೂ ಹೆಚ್ಚು. ಈ ಕಾರಣ ದಲ್ಲಾಳಿಗಳನ್ನು ಕಳುಹಿಸಿ ಅವರ ಮೂಲಕ ಹತ್ತಿ ನೂಲನ್ನು ಕೊಂಡು ನೇಕಾರರಿಗೆ ಕೊಟ್ಟು ಮಳೆಗಾಲದಲ್ಲಿ ಬಟ್ಟೆ ನೇಯಿಸಿ ಹಡಗುಗಳು ಬರುವ ವೇಳೆಗೆ ಸಾಕಷ್ಟು ಬಟ್ಟೆ ಸಿದ್ಧಪಡಿಸುತ್ತಾರೆ. ಇಲ್ಲದಿದ್ದರೆ ನಂಬಿಕೆಯಿಂದ ಈ ಕೆಲಸ ಮಾಡಬಲ್ಲ ಪ್ರಮುಖ ದಳ್ಳಾಳಿ ಬನಿಯರನ್ನು ನೇಮಿಸುತ್ತಾರೆ.

ಹೀಗೆ ಈ ಚಕ್ರಗಳ ಮೇಲೆ ಪೂರ್ವಪ್ರಪಂಚದ ವ್ಯಾಪಾರ ಸಾಗುತ್ತಿದೆ. ಆಲಿವರ್ ಕ್ರಾಮ್‌ವೆಲ್‌ನ ಕಾಲದಿಂದ ಲೈಸೆನ್ಸ್ ಪಡೆದ ಕಾರ್ಪೊರೇಷನ್ ಮುಂತಾದುವುಗಳಿಗಿಂತ ಈಗ ನಡೆಯುತ್ತಿರುವ ವ್ಯಾಪಾರ ಅಧಿಕ. ಆದರೆ ಈ ಮುಕ್ತ ವ್ಯಾಪಾರದಿಂದ ಇಂಗ್ಲೆಂಡಿಗೆ ಏನು ಅನುಕೂಲ ಎಂಬುದನ್ನು ನೋಡಬೇಕಾಗಿದೆ. ಈಗ ಯೂರೋಪಿನ ಸರಕುಗಳು ಮಾರುಕಟ್ಟೆಯಲ್ಲಿ ತುಂಬಿವೆ. ಹೀಗಾಗಿ ಬೆಲೆಗಳು ಇಳಿಯುತ್ತಿವೆ. ಇದರಿಂದ ನಮ್ಮ ವ್ಯಾಪಾರಕ್ಕೆ ಧಕ್ಕೆಯಲ್ಲವೆ ? ಇತ್ತೀಚೆಗೆ ಇಂಡಿಯಾ ತೀರದ ವ್ಯಾಪಾರದಿಂದ ಕಂಪೆನಿಯು ಲಾಭ ನಷ್ಟಗಳನ್ನು ಸರಿದೂಗಿಸುವುದೇ ಕಷ್ಟವಾಗುತ್ತಿದೆ.

ಈ ವರ್ಷಕ್ಕೆ ಇಷ್ಟು ಸಾಕು. ಬದುಕಿದರೆ ಮುಂದಿನ ಪತ್ರದಲ್ಲಿ ಇನ್ನೂ ಹೆಚ್ಚು ಸಂಗತಿಗಳನ್ನು ತಿಳಿಸುತ್ತೇನೆ.

[ಈ ಪತ್ರವನ್ನು ಬರೆದದ್ದು ಸೂರತ್ತಿನಿಂದ ೧೬೭೫ನೆಯ ಜನವರಿ ೧೫ರಂದು].

## ಮೂರನೆಯ ಪತ್ರ

ಸೂರತ್ ನಗರವನ್ನು ನೋಡುವ ಉದ್ದೇಶದಿಂದ ನಾನು ಹೊರಗೆ ಹೋದೆ. ಇಂಗ್ಲೆಂಡಿನ ಬೀದಿಗಳಲ್ಲಿ ಅಪರಿಚಯಸ್ಥರ ಹಿಂದೆ ಓಡಿಬರುವ ತುಂಟಹುಡುಗರ ಕಾಟ ಇಲ್ಲಿ ಇಲ್ಲದಿದ್ದರೂ, ಮುಸಲ್ಮಾನ್ ಜಾತಿಗೆ ಸೇರಿದ ಫಕೀರರ ಕಾಟ ಇದೆ. ಸುಂದರವಾಗಿ ಸಜ್ಜುಗೊಳಿಸಲ್ಪಟ್ಟ ಕುದುರೆಮೇಲೆ ಕುಳಿತು ಬಿಂಕದಿಂದ ನಾವು ಬೀದಿಗಳಲ್ಲಿ ಹೊರಟರೆ ಆ ಜನ ಕುಡಿದು ಧೂರ್ತರಂತೆ ವರ್ತಿಸುತ್ತಾರೆ. ಕುದುರೆಯಿಂದ ಇಳಿಸಿ ನಡೆಮುಕೊಂಡು ಹೋಗುವಂತೆ ಮಾಡುತ್ತಾರೆ. ಏನಾದರೂ ಭಿಕ್ಷೆ ಕೊಡಬೇಕೆಂದು ಪ್ರಾಣ ಹಿಂಡುತ್ತಾರೆ. ಹಾಜ್ ಯಾತ್ರೆ ಹೋಗುವವರನ್ನಂತೂ ತುಂಬಾ ಪೀಡಿಸುತ್ತಾರೆ. ಈ ಜನರ ವಾಸ ಗೋರಿಗಳಿರುವ ಕಡೆ. ಉಳಿದ ಜನ ಮರ್ಯಾದಸ್ಥರು. ನಾವಿಕರು ಅಥವಾ ಸಿಪಾಯಿಗಳು ಹೆಂಡ ಕುಡಿದು ಅಥವಾ ಭಂಗಿ ಸೇದಿ ತುಂಟಾಟ ಮಾಡಿದರೆ ಅವರನ್ನು ಮನಬಂದಂತೆ ಅನ್ನುತ್ತಾರೆ. ಅದನ್ನು ನಾವು ಸಹಿಸಿಕೊಳ್ಳದೆ ಬೇರೆ ಮಾರ್ಗವಿಲ್ಲ.

ಊರಿನಲ್ಲಿ ದೊಡ್ಡ ದೊಡ್ಡ ಮನೆಗಳಿವೆ. ಮೂರ್ ವರ್ತಕರು ಇವನ್ನು ಕಟ್ಟಿಸಿದ್ದಾರೆ. ಆದರೆ ಬಹು ಜನ ಸಣ್ಣ ಸಣ್ಣ ಮನೆಗಳಲ್ಲಿಯೋ ಗುಡಿಸಲುಗಳಲ್ಲಿಯೋ ವಾಸ ಮಾಡುತ್ತಾರೆ. ಇವರಿಗೆ ಗಾಳಿ ಎಂಬುದು ಅಪೂರ್ವವಾದ ಸರಕು. ನಾಲ್ಕೈದು ಸಂಸಾರಗಳು ತಮ್ಮ ಆಡು ದನಗಳ ಸಮೇತ ಒಟ್ಟಿಗೆ ಇರುತ್ತಾರೆ. ಕ್ರಿಮಿಕೀಟಗಳ ಕಾಟ, ಆ ವಾಸನೆ ಹೇಳತೀರದು. ಆದರೂ ಅವರಿಗೇನೂ ಅನ್ನಿಸುವುದಿಲ್ಲ. ಕಡಿವರೆ ಸುಮ್ಮನೆ ಕೆರೆದುಕೊಳ್ಳುತ್ತಾರೆ. ಏಕೆಂದರೆ, ಅವನ್ನು ಕೊಲ್ಲುವುದು ಮಹಾಪಾಪ. ಕ್ರೈಸ್ತರು ಪವಿತ್ರಜಲವನ್ನು ಪ್ರೋಕ್ಷಿಸಿಕೊಂಡಂತೆ ಮತ್ತು ಮುಸಲ್ಮಾನರು ತಮ್ಮ ಗಡ್ಡಕ್ಕೆ ಅತ್ತರು ಚಿಮುಕಿಸಿಕೊಂಡಂತೆ ಇವರು ಗಂಜಲವನ್ನು ಮನೆಗೆಲ್ಲಾ ಎರಚುತ್ತಾರೆ. ಮತ್ತು ತಮ್ಮ ಮೇಲೂ ಪ್ರೋಕ್ಷಿಸಿಕೊಳ್ಳುತ್ತಾರೆ.

ಮುಸಲ್ಮಾನರು ಊಟ ಮಾಡುವಾಗ ಒಟ್ಟಿಗೆ ಕುಳಿತು ಊಟ ಮಾಡುತ್ತಾರೆ. ಬೆಣ್ಣೆ ಹಾಗೂ ಮಸಾಲೆಗಳನ್ನು ಹಾಕಿ ಆವಿಯಲ್ಲಿ ಬೇಯಿಸಿದ ಎಲ್ಲಾ ಬಗೆಯ ಮಾಂಸಗಳನ್ನು ತಿನ್ನುತ್ತಾರೆ. ಆವಿಯಲ್ಲಿ ಬೇಯಿಸಿದ ಮಾಂಸಕ್ಕೆ 'ದವಪ್‌ಪೊಕಡ್' ಎಂದು ಹೇಳುತ್ತಾರೆ. ಮಾಂಸ, ಕೋಳಿ ಮತ್ತು ಮೀನುಗಳ ಪಲಾವ್ ಮಾಡುತ್ತಾರೆ. ಕ್ರೈಸ್ತರನ್ನು ತಮ್ಮ ಮನೆಗೆ ಕರೆದಾಗ ಅವರಿಗೆ ಬೇರೆ ಬಡಿಸುತ್ತಾರೆ. ದಿನದಲ್ಲಿ ಆಗಾಗ್ಗೆ 'ಕೊಹೊ' (ಕಾಫಿ) ಕುಡಿಯುತ್ತಾರೆ. ಹೊಗೆಸೊಪ್ಪು ಮೆಲ್ಲುತ್ತಾರೆ. ಎಲೆ ಅಡಕೆ ಹಾಕಿಕೊಳ್ಳುತ್ತಾರೆ. ಅತಿಥಿಗಳಿಗೆ ಮಾಡುವ ದೊಡ್ಡ ಸತ್ಕಾರವೆಂದರೆ ಅವರನ್ನು ಅತ್ತರ್‌ಗಳಿಂದ ನೆನೆಸಿಬಿಡುವುದು. ಬಹಿರಂಗವಾಗಿ ಮದ್ಯ ಕುಡಿಯುವುದಿಲ್ಲ. ಆದರೆ ಗುಟ್ಟಾಗಿ ಶರಾಬು ಬ್ರಾಂದಿಗಳನ್ನು ಪಟ್ಟಾಗಿ ಕುಡಿಯುತ್ತಾರೆ. ಮನೆಗೆ ಬಂದ ಅತಿಥಿಗಳನ್ನು ತುಂಬಾ ಗೌರವದಿಂದ ಎದುರುಗೊಳ್ಳುತ್ತಾರೆ.

ಹೊರಗೆ ಹೋದಾಗ ಒಳ್ಳೆ ಉಡುಪು ಹಾಕಿಕೊಂಡು ಸೊಂಟಕ್ಕೆ 'ಕಠಾರಿ'

ಸಿಕ್ಕಿಸಿಕೊಳ್ಳುತ್ತಾರೆ. ಇವರ (ಮುಸಲ್ಮಾನರ) ಹೆಂಗಸರು ಶರಾಯಿ ತೊಟ್ಟುಕೊಂಡು ಮೈತುಂಬ ಆಭರಣ ಹಾಕಿಕೊಳ್ಳುತ್ತಾರೆ. ಒಡವೆಗಳು ಬಹುತೇಕ ಬೆಳ್ಳಿಯಿಂದ ಮಾಡಿದವುಗಳು. ಏಕೆಂದರೆ, ಚಿನ್ನ ಇವರಿಗೆ ಅಪವಿತ್ರ.

ಪ್ರಾರ್ಥನೆಯ ವೇಳೆ ತಪ್ಪದೆ ಪ್ರಾರ್ಥನೆ ಸಲ್ಲಿಸುತ್ತಾರೆ. ಹಗಲಿನ ಬಿಸಿಲಿನ ತಾಪ ತಡೆಯಲಾರದೆ ಮಲಗಿ ಕಾಲಕಳೆಯುತ್ತಾರೆ. ರಾತ್ರಿಯ ತಂಪು ಹೊತ್ತಿನಲ್ಲಿ ಪೂಜಾ ಮಾಡುತ್ತಾರೆ. ಗಂಡು ಹುಡುಗರಿಗೆ ಎಂಟು ವರ್ಷ ಆಯಿತೆಂದರೆ ಮುಂಜಿ ಮಾಡಿಸು ತ್ತಾರೆ. ಖಾಜಿ ಮದುವೆ ಮಾಡಿಸುತ್ತಾನೆ. ಸಾಕಷ್ಟು ಅನುಕೂಲವಿರುವ ಮುಸಲ್ಮಾನ ನಾಲ್ಕು ಹೆಂಡಿರನ್ನು ಕಟ್ಟಿಕೊಳ್ಳಬಹುದು. ಅಲ್ಲದೆ ತನಗಿಷ್ಟಬಂದಷ್ಟು ಹೆಂಗಸರನ್ನು ಇಟ್ಟುಕೊಳ್ಳಬಹುದು. ಮೊದಲನೆಯ ಮಗನನ್ನು ಹೆತ್ತವಳಿಗೆ ಹಿರಿಯ ಹೆಂಡತಿಯ ಸ್ಥಾನ.

ಹೆರಿಗೆಯಾಗುವಾಗ ಸೂಲಗಿತ್ತಿಯರನ್ನು ಕರೆಸುವುದು ಅಪರೂಪ. ಏಕೆಂದರೆ, ಇವರಿಗೆ ಹೆರಿಗೆ ಸಲೀಸು. ಅಲ್ಲದೆ ಸರಿಯಾದ ಸೂಲಗಿತ್ತಿಯರೂ ಇಲ್ಲ. ನಲವತ್ತು ದಿನ ಬಾಣಂತಿತನ ಮಾಡಿದಮೇಲೆ ಬಾಣಂತಿಗೆ ಸ್ನಾನಮಾಡಿಸಿ ಮಗುವಿಗೆ ಹೆಸರಿಡು ತ್ತಾರೆ.

ಸತ್ತವರನ್ನು ಉತ್ತರ ದಕ್ಷಿಣವಾಗಿ ಹೂಳುತ್ತಾರೆ. ನಾವು ಪೂರ್ವ ಪಶ್ಚಿಮವಾಗಿ ಹೂಳುತ್ತೇವೆ. ಮುಲ್ಲಾ ಪ್ರಾರ್ಥನೆ ಮಾಡುತ್ತಾನೆ. ಈ ಮುಲ್ಲಾಗಳೇ ಮಸೀದಿ ಗಳಿಂದ ಪ್ರತಿ 'ಪೊರ್'ಗೆ (ಪಹರೆಗೆ) ಒಂದು ಸಲ ಗಟ್ಟಿಯಾಗಿ ಕೂಗಿ ಪ್ರಾರ್ಥನೆಗೆ ಕರೆಯುವುದು. ಅಂದರೆ ದಿನಕ್ಕೆ ನಾಲ್ಕು ಸಲ ಕೂಗುತ್ತಾರೆ.

ಮುಸಲ್ಮಾನ ಫಕೀರರ ಹಾವಳಿ ಹೇಳತೀರದು. ಇಡೀ ರಾಷ್ಟ್ರಕ್ಕೇ ಇವರೊಂದು ಪಿಡುಗು.

ಊರಿನ ತುಂಬೆಲ್ಲಾ ಶಿವಾಜಿಯ ಹಾವಳಿಯಿಂದ ಆದ ಅನಾಹುತದ ಅವಶೇಷ ಗಳನ್ನು ನೋಡಬಹುದು. ಇನ್ನೂ ಅವನ ಬಗ್ಗೆ ಹೆದರಿಕೆ ಇದ್ದೇ ಇದೆ. ಅವನ ಧಾಳಿ ಯಿಂದ ಪಾರಾಗಲು ಊರ ಸುತ್ತ ಇರುವ ಕೋಟೆಯನ್ನು ಭದ್ರಪಡಿಸುತ್ತಿದ್ದಾರೆ. ಅದರ ವೆಚ್ಚಕ್ಕಾಗಿ ಒಂದು ಲಕ್ಷ ರೂಪಾಯಿ ಸಂಗ್ರಹಿಸುತ್ತಿದ್ದಾರೆ. ಕೋಟೆ ಕಾಯಲು ೭೦೦ ಜನರನ್ನು ನೇಮಿಸಿದ್ದಾರೆ. ಊರಿನ ಆರು ಹೆಬ್ಬಾಗಿಲುಗಳಲ್ಲೂ ಯೂರೋಪಿನ ಗೋಲಂದಾಜರಿದ್ದಾರೆ. ಕೋಟೆಯನ್ನು ಹತ್ತಿಬರದಂತೆ ತಡೆಯಲು ಚೂಪಾದ ಮರದ ದಸಿಗಳನ್ನು ನೆಟ್ಟಿದ್ದಾರೆ. ಹೆಬ್ಬಾಗಿಲಿನ ಕದಗಳಿಗೆ ಚೂಪಾದ ಕಬ್ಬಿಣ ಹಾಕಿದ್ದಾರೆ. ಇದರಿಂದ ಆನೆಗಳು ಹೆಬ್ಬಾಗಿಲನ್ನು ನೂಕುವುದಕ್ಕಾಗುವುದಿಲ್ಲ.

ಬ್ರೋಚ್ ಹೆಬ್ಬಾಗಿಲಿನ ಮೂಲಕ ನಾವು ಗೌರ್ನರ್ ಅನುಮತಿ ಪಡೆದು ಊರಿನ ಹೊರಗಡೆ ಹೋಗಿದ್ದೆವು. ಪ್ರತಿ ಹೆಬ್ಬಾಗಿಲಿನ ಬಳಿ ಒಬ್ಬ ಚೌಕಿದಾರ ಇರುತ್ತಾನೆ. ಈತನ

ಕೆಲಸ ಚಕ್ರವರ್ತಿಗೆ ತೆರಬೇಕಾದ ಸುಂಕ ವಸೂಲುಮಾಡುವುದು. ಊರ ಹೊರಗಡೆ ಎಲ್ಲೆಲ್ಲೂ ಮುಸಲ್ಮಾನರ ಗೋರಿಗಳೇ. ಇಲ್ಲಿಂದ ಸ್ವಲ್ಪ ದೂರದಲ್ಲಿ ಟಾಂ ಕಾರ್ಯಾತ್‌ನ[೧] ಗೋರಿ ಇದೆ. ಈತನನ್ನು ಇಂಗ್ಲಿಷ್ 'ಪಕೀರ' ಎಂದು ಕರೆಯುತ್ತಿದ್ದರು. ಇಂಗ್ಲಿಷ್ ವರ್ತಕರಿಂದ ಕೊಲೆಯಾದ ಈತನನ್ನು ಕ್ರೈಸ್ತ ಗೋರಿಗಳಿರುವ ಕಡೆ ಹೂಳಿದ್ದಾರೆ. ಫ್ರೆಂಚರು, ಡಚ್ಚರು, ಆರ್ಮೇನಿಯನರು, ಇಂಗ್ಲಿಷರು ಇವರ ಗೋರಿಗಳು ಬೇರೆ ಬೇರೆ ಇವೆ.

ಒಂದು ಒಂದೂವರೆ ಮೈಲಿ ದೂರದಲ್ಲಿ ನದಿಯ (ತಪತಿ) ಬಳಿ ಫೂಲ್‌ಪಾರಾ ಎಂಬ ಬ್ರಾಹ್ಮಣರ ಅಗ್ರಹಾರವಿದೆ. ನದಿಯ ಸ್ನಾನಘಟ್ಟದ ಬಳಿ ಬ್ರಾಹ್ಮಣರು ಸ್ನಾನ ಮಾಡುತ್ತಾ ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದುದನ್ನು ಕಂಡೆ. ಇಲ್ಲಿಂದ ಕೊಂಚ ದೂರ ದಲ್ಲಿ ಬನಿಯರ ಮತ್ತು ಇತರ ಹಿಂದೂಗಳ ಸ್ಮಶಾನಗಳಿವೆ. ಅನೇಕ ಹಿಂದೂ ಫಕೀರ ರನ್ನು (ಜೋಗಿಗಳನ್ನು) ಇಲ್ಲಿ ಕಂಡೆ. ಇವರು ವಿಧ ವಿಧ ಭಂಗಿಗಳಲ್ಲಿ ಕುಳಿತು ಧ್ಯಾನ ಮಗ್ನರಾಗಿದ್ದರು.

ಸೂರತ್ತಿನ ಹೊರಗಡೆ ಒಂದು ದೊಡ್ಡ ಕೆರೆ ಇದೆ.[೨] ಊರಿನ ಸುತ್ತಮುತ್ತ ತೋಟ ತುಡುಕೆಗಳಿವೆ. 'ರಾಣಿಯ ಉದ್ಯಾನ' ಎಂಬ ಉದ್ಯಾನವೂ, ಚೌಲ್ಟ್ರಿ (Choultry = ಛತ್ರ)ಗಳೂ ಇವೆ. ಬಾವಿಗಳನ್ನು ತೋಡಿ ಚರ್ಮದ ಬಾನಿಗಳಿಂದ ನೀರೆತ್ತಿ ತೋಟಗಳಿಗೆ ಹಾಯಿಸುತ್ತಾರೆ. ಕಪಿಲೆಗಳಿಗೆ ಎತ್ತುಗಳನ್ನು ಹೂಡುತ್ತಾರೆ. ಭಂಗಿಗಿಡಗಳನ್ನು ಬೆಳೆದು ಭಂಗಿ ಮತ್ತು ದತ್ತೂರಿ ಸೇರಿಸಿ ಪಾನೀಯವೊಂದನ್ನು ತಯಾರಿಸುತ್ತಾರೆ. ತೋಟಗಳಲ್ಲಿ ಆಲೂಗೆಡ್ಡೆ, ಯಾಂ, ಬದನೆಕಾಯಿ, ಸೌತೆಕಾಯಿ, ಕುಂಬಳಕಾಯಿ, ಸೋರೆಕಾಯಿಗಳನ್ನು ಬೆಳೆಯುತ್ತಾರೆ. ಗುಲಾಬಿ, ಮಲ್ಲಿಗೆ ಮುಂತಾದ ಸುವಾಸನೆಯ ಹೂಬಿಡುವ ಗಿಡಬಳ್ಳಿಗಳು ಇವೆ. ತೋಟಗಳಿಗೆ ಹಾಲುಗಳ್ಳಿ ಬೇಲಿ ಹಾಕಿದ್ದಾರೆ. ಈ ಹಾಲು ತಾಗಿದರೆ ಮೈ ಕೈ ಊದಿಕೊಳ್ಳುತ್ತದೆ. ಕಬ್ಬು ಮತ್ತು ಹೊಗೆಸೊಪ್ಪನ್ನು ಹೇರಳವಾಗಿ ಬೆಳೆಯುತ್ತಾರೆ.

ತಪತಿ ನದಿ ಊರಿನ ಬಳಿಯೇ ಹರಿಯುತ್ತದೆ. ಇದು ತುಂಬಿ ಹರಯುವಾಗ ಸಾವಿರ ಟನ್ ತೂಕದ ಹಡಗುಗಳು ಸೂರತ್ತಿನ ಕೋಟೆಗೋಡೆವರೆಗೆ ಬರಬಹುದು. ಒಮ್ಮೊಮ್ಮೆ ನೂರಾರು ಬಗೆಯ ಹಡಗುಗಳೂ ದೋಣಿಗಳೂ ಇಲ್ಲಿ ಕಿಕ್ಕಿರಿದು ನಿಂತಿರು ತ್ತವೆ. ದೋಣಿ ನಡೆಸುವವರನ್ನು 'ಲಾಸ್ಕರ್' (Laskar) ಎಂದೂ, ದೋಣಿಯ ರಕ್ಷಣೆ ಮಾಡುವ ಸಿಪಾಯಿಗಳನ್ನು 'ಲುಸ್ಕಾರ್' (Luskar) ಎಂದೂ ಕರೆಯುತ್ತಾರೆ. ದೋಣಿಯ ಯಜಮಾನನನ್ನು 'ನಾಖುದಾ' (Nucquedah = Captain)

---

೧. ಈತನ ಪ್ರವಾಸಕಥನಕ್ಕೆ ಪ್ರವಾಸಿ ಕಂಡ ಇಂಡಿಯಾ ಸಂಪುಟ ಮೂರು ನೋಡಿ.
೨. ಇದೇ ಮೋತಿ ತಲಾವ್ ಎಂಬ ಕೆರೆ.

ಎಂದೂ, ದೋಣಿ ನಡೆಸುವವರ ಯಜಮಾನನನ್ನು 'ತಿಂದಾಲ್' (Tindal=Tandal=ತಂಡದ ನಾಯಕ) ಎಂದೂ ಕರೆಯುತ್ತಾರೆ.

ಈಗ ನಾನು ಸೂರತ್ತಿನಲ್ಲಿ ನಡೆಯುವ ಆಟಗಳ ಹಾಗೂ ಹಬ್ಬಗಳ ಬಗ್ಗೆ ಹೇಳುತ್ತೇನೆ. ಮುಸಲ್ಮಾನರು ನವೆಂಬರ್‌ನಲ್ಲಿ ತಮ್ಮ ರಂಜಾನ್ ಹಬ್ಬ ಆಚರಿಸುತ್ತಾರೆ. ಹಸನ್ ಹುಸೇನ್ ಎಂಬ ಮೊಹರಂ ಹಬ್ಬ ನಡೆಸುತ್ತಾರೆ. ಸೂರ್ಯಗ್ರಹಣ ಚಂದ್ರ. ಗ್ರಹಣಗಳಾದಾಗ ಮೂರರು ತಮ್ಮ ಮನೆಯ ಮಡಕೆ ಕುಡಿಕೆಗಳನ್ನೆಲ್ಲಾ ಚಚ್ಚಿಹಾಕಿ ಭಾರಿ ಶಬ್ದ ಮಾಡುತ್ತಾರೆ; ಮತ್ತು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಸೂರ್ಯ ಗ್ರಹಣ ಚಂದ್ರಗ್ರಹಣಗಳು ಆಗುವುದನ್ನು ಬ್ರಾಹ್ಮಣರು ಮುಂಚೆಯೇ ಹೇಳುತ್ತಾರೆ. ಆಗ ಹಿಂದೂಗಳು ಉಪವಾಸ ಸ್ನಾನ ಮುಂತಾದುವುಗಳನ್ನು ಆಚರಿಸುತ್ತಾರೆ.

ಹಿಂದೂ ಸ್ತ್ರೀಯರು ಸತ್ತ ಗಂಡಂದಿರೊಡನೆ ಸಹಗಮನ ಮಾಡಲು ಮೂರರು ಅವಕಾಶ ಕೊಡುತ್ತಿಲ್ಲ. ಇಲ್ಲಿ ಮದುವೆಗಳು ತುಂಬಾ ವೈಭವದಿಂದ ನಡೆಯುತ್ತವೆ. ಹೆಣ್ಣು ಗಂಡುಗಳನ್ನು ಕುದುರೆಗಳ ಮೇಲೋ ಪಲ್ಲಕ್ಕಿಗಳಲ್ಲೋ ಅಥವಾ ಎತ್ತು ಹೋತಗಳು ಎಳೆಯುವ ರಥಗಳಲ್ಲೋ ಕುಳ್ಳಿರಿಸಿ ಮೆರವಣಿಗೆ ಮಾಡುತ್ತಾರೆ. ವಾದ್ಯಗಳು ಭೋರ್ಗರೆಯುತ್ತವೆ. ಛತ್ರ ಚಾಮರಗಳನ್ನು ಹಿಡಿಯುತ್ತಾರೆ. ಹೆಂಗಸರು ಸೋಬಾನೆ ಪದ (Epithalamium) ಹಾಡುತ್ತಾರೆ. ಎಲೆ ಅಡಿಕೆ ತೆಂಗಿನಕಾಯಿಗಳನ್ನು ಧಾರಾಳವಾಗಿ ಹಂಚುತ್ತಾರೆ.

ಅಕ್ಟೋಬರ್‌ನಲ್ಲಿ ಬನಿಯರು ತಮ್ಮ ದೀಪಾವಳಿ ಹಬ್ಬವನ್ನು ಧೂಂ ಧಾಂನಿಂದ ಆಚರಿಸುತ್ತಾರೆ. ತಮ್ಮ ಒಡೆಯರಿಗೆ ಬಹುಮಾನಗಳನ್ನು ನೀಡುತ್ತಾರೆ. ಊಟ ಉಪಚಾರಗಳು ಬಹು ದೊಡ್ಡದಾಗಿ ಜರುಗುತ್ತವೆ.

ಮಾರ್ಚ್ ತಿಂಗಳಿನಿಂದ ಆಟಗಳು ಆರಂಭವಾಗುತ್ತವೆ. ಕುಸ್ತಿಗಳು ನಡೆಯುತ್ತವೆ. ಹುಲಿ ಚಿರತೆಗಳನ್ನು ಬೇಟೆಯಾಡುತ್ತಾರೆ. ಆನೆಗಳನ್ನೂ ಕೋಣಗಳನ್ನೂ ಟಗರುಗಳನ್ನೂ ಕಾಳಗಕ್ಕೆ ಬಿಟ್ಟು ನೋಡಿ ಸಂತೋಷಪಡುತ್ತಾರೆ. ಲಾಠಿ ವರಸೆ ಮಾಡುತ್ತಾರೆ. ಬನಿಯರ ಮುಖ್ಯ ಆಟವೆಂದರೆ, ಪರಸ್ಪರ ಮೋಸಮಾಡುವುದು. ಪಗಡೆ ಆಟ ಆಡುತ್ತಾರೆ. ಆಗ ಒಬ್ಬನ ಪೇಟವನ್ನು ಇನ್ನೊಬ್ಬ ಕಿತ್ತುಹಾಕುವ ಜಗಳ ಆಗುತ್ತದೆ. ಇದರಿಂದ 'ಬನಿಯರ ಜಗಳ' ಎಂಬ ಗಾದೆಯೇ ಆಗಿದೆ. ಆದರೆ ತಮ್ಮ ಗುಟ್ಟನ್ನು ಮಾತ್ರ ರಟ್ಟು ಮಾಡುವುದಿಲ್ಲ.

ಮರಳಿನಲ್ಲಿ ತಿದ್ದಿ ಮಕ್ಕಳಿಗೆ ಅಕ್ಷರ ಕಲಿಸುತ್ತಾರೆ. ಆಮೇಲೆ ಕಡತದ ಮೇಲೆ ಬರೆಯುವುದನ್ನು ಕಲಿಸುತ್ತಾರೆ. ಕಾಗದದ ಮೇಲೆ ಬರೆಯುವಂತಾದರೆ ಓದು ಮುಗಿದಂತೆ. ಸೋಮಾರಿಗಳಾದ ಮೂರರು ತಮ್ಮ ಮಕ್ಕಳಿಗೆ ಓದುವುದು ಬರೆಯುವುದು ಕಲಿಸುವುದಿಲ್ಲ. ಹೀಗಾಗಿ ಭಾರಿ ವರ್ತಕನಾದರೂ ಅವನಿಗೆ ಓದುವುದು ಬರೆಯುವುದು

ಬರುವುದಿಲ್ಲ. ಹಿಂದೂ ಗುಮಾಸ್ತರ ಮೂಲಕ ತಮ್ಮ ಲೆಕ್ಕಪತ್ರಗಳನ್ನು ಬರೆಸುತ್ತಾರೆ. ಹೀಗಾಗಿ ಬನಿಯನರೇ ಮೂರರ ಪರವಾಗಿ ವ್ಯಾಪಾರ ವಹಿವಾಟುಗಳನ್ನೂ ಹಣಕಾಸಿನ ವ್ಯವಹಾರಗಳನ್ನೂ ನಡೆಸುವವರು. ಬಟ್ಟೆಯಲ್ಲಿ ಕೈಗಳನ್ನು ಮುಚ್ಚಿಕೊಂಡು ವ್ಯವಹಾರ ನಡೆಸುತ್ತಾರೆ. ಈ ಜನರ ಮುಚ್ಚುಮರೆ ವ್ಯಾಪಾರಕ್ಕೆ ಸೂರತ್ ಸರಿಯಾದ ಊರು.

ಫೆಬ್ರುವರಿಯಲ್ಲಿ ಬಸ್ಸೋರದಿಂದಲೂ ಆಗಸ್ಟ್‌ನಲ್ಲಿ ಕೆಂಪು ಸಮುದ್ರದ ಜಡ್ಡಾದಿಂದಲೂ ಹಡಗುಗಳು ಬರುತ್ತವೆ. ಯೂರೋಪಿನ ಹಡಗುಗಳೂ ಬರುತ್ತವೆ. ಈ ಹಡಗುಗಳಲ್ಲಿ ಇಲ್ಲಿಂದ ಭಾರಿ ಮೊತ್ತದ ನೀಲಿ, ಹತ್ತಿ, ಹತ್ತಿಬಟ್ಟೆ ಮತ್ತು ರೇಷ್ಮೆ ರವಾನೆಯಾಗುತ್ತದೆ. ಈ ಹಡಗುಗಳು ಹಿಂದಿರುಗುವಾಗ ಖಾಲಿ ಬರದೆ ಖರ್ಜೂರ, ಪರ್ಷಿಯಾ ಮತ್ತು ಅರಬ್ಬೀ ದೇಶದ ಔಷಧಿಗಳು, ಕುದುರೆಗಳು, ಚಿನ್ನ ಬೆಳ್ಳಿ ಮತ್ತು ಮುತ್ತು—ಇವುಗಳನ್ನು ಹೇರಿಕೊಂಡು ಬರುತ್ತವೆ. ಚಿನ್ನ ಬೆಳ್ಳಿ ಮತ್ತು ಮುತ್ತುಗಳಿಗೆ ಪ್ರಪಂಚದ ಬೇರೆ ಕಡೆಗಳಿಗಿಂತ ಇಲ್ಲಿ ಗಿರಾಕಿ ಹೆಚ್ಚು. ರಾಜನಿಂದ ಹಿಡಿದು ಪ್ರಜೆಗಳೆಲ್ಲರೂ ಇವನ್ನು ಬಹು ಜೋಪಾನವಾಗಿ ಕೂಡಿಡುತ್ತಾರೆ.

ನಾನು ಒಬ್ಬ 'ಹಿಂದೂ' (Hindu) ಮನೆಗೆ ಹೋಗಿ ಹವಳಗಳಿಗೆ ಸಾಣೆ ಹಿಡಿಯುವ ಕೆಲಸವನ್ನು ನೋಡಿದೆ. ಯೂರೋಪಿನಲ್ಲಿಯೂ ಕಾಣಲಾರದಂತಹ ಆಯುಧಗಳನ್ನು ಇಲ್ಲಿ ಕಂಡೆ. ಕೈ ಕಾಲುಗಳನ್ನು ಉಪಯೋಗಿಸಿ ಅವುಗಳಿಂದ ಬಹು ಚಮತ್ಕಾರವಾಗಿ ಹವಳಗಳಿಗೆ ಸಾಣೆ ಹಿಡಿಯುವುದನ್ನು ನೋಡಿದೆ. ಅದೇ ದಿನ ಒಬ್ಬ ಮೂರನ ಮನೆಗೆ ಹೋಗಿ ಪ್ರಶಸ್ತ ಹರಳುಗಳಿಗೆ ಸಾಣೆಕಲ್ಲಿನಿಂದ ಸಾಣೆ ಹಿಡಿಯುವ ಕೆಲಸ ನೋಡಿದೆ. ಕೈಯಿಂದ ತಿರುಗಿಸುವ ಸಾಣೆ ಕಲ್ಲಿನಿಂದ ವಜ್ರಗಳಿಗೆ ಸಾಣೆ ಹಿಡಿಯುತ್ತಾರೆ. ತೀರಾ ಬಡವನಂತೆ ಕಾಣುವ ಬನಿಯನ ಪೇಟದಲ್ಲಿ ಸಾವಿರಾರು ಪೌಂಡ್ ಬೆಲೆ ಬಾಳುವ ವಜ್ರಗಳು ಇರುತ್ತವೆ.

ಸೂರತ್ ನಗರ ಹೊಲಸು. ಕಕ್ಕಸುಗಳಿಲ್ಲ. ಮನೆ ಮುಂದೆಯೇ ಪಾಯಿಖಾನೆ ಮಾಡಿ ಎಲ್ಲೆಲ್ಲೂ ಗಲೀಜು ಮಾಡಿರುತ್ತಾರೆ. ಆದರೂ 'ಪ್ಲೇಗ್' ಕಾಯಿಲೆ ಇಲ್ಲ. ಹೊಲಸೆಲ್ಲವೂ ಬಿಸಿಲಿನಲ್ಲಿ ಒಣಗಿ ಮಳೆಯಲ್ಲಿ ಕೊಚ್ಚಿಹೋಗುತ್ತದೆ. ಆಯಾಯ ಕಾಲದಲ್ಲಿ ಬೇರೆ ಬೇರೆ ಕಾಯಿಲೆ ಕಸಾಲೆಗಳು ತಾಂಡವವಾಡುತ್ತವೆ. ಕೆಮ್ಮು, ಜ್ವರ ಜನರನ್ನು ಪೀಡಿಸುತ್ತವೆ. ಸಿಡುಬು ಇಂಡಿಯಾದ ಬೇರೆ ಕಡೆಗಳಲ್ಲಿ ಇರುವಂತೆ ಇಲ್ಲಿಯೂ ಮಕ್ಕಳಿಗೆ ಬರುವ ಪಿಡುಗು. ಬೇಸಿಗೆಯಲ್ಲಿ ಕಾಲರ ಕಾಣಿಸಿಕೊಳ್ಳುತ್ತದೆ. ಮಳೆಗಾಲದಲ್ಲಿ ಅತಿಸಾರದ ಕಾಯಿಲೆಗಳು ಬರುತ್ತವೆ. ಇದರ ನಿವಾರಣೆಗೆ 'ಹಿಂಗ್' (Hing = ಹಿಂಗು) ಉಪಯೋಗಿಸುತ್ತಾರೆ. ಮಾಂದ್ಯದ ವಿಕಾರಗಳಿಗೆ ಬೆಳ್ಳುಳ್ಳಿ ಮತ್ತು ಶುಂಠಿಗಳನ್ನು ಎಣ್ಣೆ ಅಥವಾ ತುಪ್ಪದಲ್ಲಿ ತಿನ್ನಿಸುತ್ತಾರೆ.

ವಾಂತಿಭೇದಿ ಮತ್ತು ರಕ್ತಭೇದಿಗಳನ್ನು ಬರೆಹಾಕಿ ವಾಸಿಮಾಡುತ್ತಾರೆ. ಔಷಧಿ ಕೊಡುವ ವೈದ್ಯರುಗಳಿಗಂತೂ ಲೆಕ್ಕವಿಲ್ಲ. ಯಾರು ಬೇಕಾದರೂ ಕೊಡಬಹುದು; ಯಾರು ಬೇಕಾದರೂ ಸಾಯಬಹುದು. ಕೆಲವರು ವಂಶಪಾರಂಪರ್ಯವಾಗಿ ಪಂಡಿತ ತನ ನಡೆಸಿಕೊಂಡು ಬರುತ್ತಾರೆ. ಒಬ್ಬನನ್ನು ಗುಣ ಮಾಡಿದ ಔಷಧಿ ಮತ್ತೊಬ್ಬನಿಗೆ ಸರಿ ಎಂದು ಭಾವಿಸುತ್ತಾರೆ. ಶಸ್ತ್ರ ಚಿಕಿತ್ಸೆಯಲ್ಲಿ ಇವರಿಗೆ ಏನೇನೂ ತಿಳುವಳಿಕೆ ಇಲ್ಲ. ಅರೇಬಿಯನ್ ಪದ್ಧತಿ ಅನುಸರಿಸುವ (ಯುನಾನಿ) ಮೂರ್ ವೈದ್ಯರಿಗು ಸಹ ಏನೂ ಗೊತ್ತಿಲ್ಲ. ಮನುಷ್ಯನ ಶರೀರವನ್ನು ಕತ್ತರಿಸುವುದು ಸರಿಯಲ್ಲ ಎಂಬುದು ಇವರ ಭಾವನೆ. ಇದರ ಬದಲು ರಕ್ತ ತೆಗೆಯಲು ನೂರಾರು ಜಿಗಣೆಗಳನ್ನು ದೇಹಕ್ಕೆ ತಗಲಿಸು ತ್ತಾರೆ. ತಗಲಿಸಿದ ಮೇಲೆ ಅವನ್ನು ಕೀಳುವುದಕ್ಕಾಗದೆ ಒದ್ದಾಡುತ್ತಾರೆ. ಅವು ಹೊಟ್ಟೆ ತುಂಬ ಕುಡಿದು ಅವೇಳಗಿ ಬಿದ್ದುಹೋಗಬೇಕು. ಎಷ್ಟು ಔಷಧಿ ಕೊಡಬೇಕು ಎಂಬುದರ ಬಗ್ಗೆ ನಿಗದಿಯಾದ ತೂಕ ಇಲ್ಲ. ಎಲ್ಲಾ ಕೈತೂಕ, ಬಾಯಿಬಣ್ಣ.

ನಾಡಿ ಪರೀಕ್ಷೆ ಮಾಡಲು ಬರುತ್ತೆ ಎಂಬಂತೆ ನಟಿಸುತ್ತಾರೆ. ಆದರೆ ಮೂತ್ರ ಪರೀಕ್ಷೆ ಮಾಡುವುದೇ ಇಲ್ಲ. ಹಜಾಮನೊಬ್ಬ ಜ್ವರ ಬಂದ ರೋಗಿಯನ್ನು ಬೆನ್ನುಮೇಲೆ ಮಲಗಿಸಿ ಒಣಮಣ್ಣು ತುಂಬಿದ ಮಡಕೆಯನ್ನು ಹೊಟ್ಟೆಯ ಮೇಲೆ ಭದ್ರವಾಗಿ ಬಿಗಿದು ಚಿಕಿತ್ಸೆ ಮಾಡಲು ಪ್ರಯತ್ನಪಟ್ಟುದನ್ನು ನಾನೇ ನೋಡಿದೆ. ಕೆಲವು ರೋಗಿಗಳನ್ನು ಹೀಗೆ ಗುಣಪಡಿಸಿದ್ದನಂತೆ. ಆದರೆ ನಾನು ನೋಡಿದ ರೋಗಿ ಸತ್ತೇಹೋದ.

ಯಂತ್ರ ತಂತ್ರಗಳಿಗೆ ಈ ಜನ ಮರುಳಾಗುತ್ತಾರೆ. ಅಡುಗೂಲಜ್ಜಿ ಹೇಳಿದ್ದನ್ನು ನಂಬುತ್ತಾರೆ. ಪ್ರತಿದಿನ ನಮ್ಮ ಫ್ಯಾಕ್ಟೊರಿಗೆ ಒಬ್ಬ ಬ್ರಾಹ್ಮಣ ಬಂದು ಎಲ್ಲರ ನಾಡಿ ಪರೀಕ್ಷೆ ಮಾಡಿ ದಾಲ್ಚಿನ್ನಿ ಕಷಾಯ ಕುಡಿಸಿ ಹೋಗುತ್ತಾನೆ.

ಸೂಲಗಿತ್ತಿಯರ ಸೇವೆ ಶ್ರೀಮಂತರಿಗೆ ಮಾತ್ರ. ಬಡಬಗ್ಗರು ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿರುವಾಗಲೇ ಮಲ ಮೂತ್ರ ವಿಸರ್ಜನೆಗೆ ಹೋಗುವಂತೆ ಹೋಗಿ ಮಗು ಹೆತ್ತು, ಅದನ್ನು ತೊಳೆದು ತಂದು ಬಟ್ಟೆಯ ಮೇಲೆ ಮಲಗಿಸಿ ಮತ್ತೆ ತಮ್ಮ ಕೆಲಸ ಆರಂಭಿಸುತ್ತಾರೆ.

ಒಂದೊಂದು ಜಾತಿಯ ಜನ ಒಂದೊಂದು ಬಗೆಯಲ್ಲಿ ಪೇಟ ಸುತ್ತುತ್ತಾರೆ. ಈ ಪೇಟದಿಂದಲೇ ಆಯಾ ಜಾತಿಯನ್ನು ಗುರುತಿಸಬಹುದು. ಆದರೆ ಇದು ಅಷ್ಟು ಸುಲಭವಲ್ಲ. ಇಲ್ಲಿಯ ಜನ ಪರದೇಶದವರನ್ನು—ಅವರು ಎಷ್ಟೇ ಕೆಳದರ್ಜೆಯ ಜನ ರಾಗಿರಲಿ—ಅಮೀರರುಗಳನ್ನು ಕಂಡಂತೆ ಗೌರವದಿಂದ ಕಾಣುತ್ತಾರೆ.

ನಾವಿದ್ದ ಮನೆಗಳಲ್ಲಿ ನಾನು ಕಂಡುದೇನೆಂಬುವನ್ನು ಈಗ ಹೇಳುತ್ತೇನೆ. ಏಕ ಶೃಂಗಿಯ ಕೊಂಬು, ಹೇಸರಗತ್ತೆಯ ಚರ್ಮ, ಪಲ್ಲಿ ಹೊಡೆಯುವ ಪಾರಿವಾಳಗಳು, ಚಂಪಾದೇಶದಿಂದ ತರಿಸಿದ ಕೋಳಿಗಳು, ಬಸ್ಸೋರದಿಂದ ತರಿಸಿದ ಹಾಲುಬಿಳುಪಿನ

ಪಾರಿವಾಳಗಳು, ಬಂಟಾಂನಿಂದ ತರಿಸಿದ 'ಕೊಕಟೂ' (Cockatoo=ಕುಕ್ಕುಟ)ಗಳು ಮತ್ತು ಗಿಣಿಗಳು, ಕಬ್ಬಿಣವನ್ನು ತಿಂದು ಅರಗಿಸಿಕೊಳ್ಳುವ 'ಕಿಸ್ಸಾವರ್' ಎಂಬ ಹಕ್ಕಿಗಳು, ಅಹಮದಾಬಾದಿನಿಂದ ತರಿಸಿದ ಪುಟ್ಟ ಪಕ್ಷಿಗಳು—ಇವೆಲ್ಲಾ ಇವೆ. ಅಲ್ಲದೆ ಭಾರಿ ಹೆಗ್ಗಣಗಳು, ಮುಂಗುಸಿಗಳು, ಅಳಿಲುಗಳು, ಪುನಗಿನ ಇಲಿಗಳು, 'ಗಯಾನ' ಎಂಬ ಉಡಗಳು, ಹಾವು, ಹಲ್ಲಿ, ಜೇಡಗಳೂ ಇವೆ.

ನದಿಯ ಬಳಿ ಹಿಂದೂ ಹೆಂಗಸರು ಗಂಡಸರು ತಮ್ಮ ಸ್ನಾನ ಮಡಿಗಳಲ್ಲಿ ತೊಡಗಿರುವ ಅಪೂರ್ವ ದೃಶ್ಯವನ್ನು ಕಂಡೆ. ಸ್ನಾನ ಮಡಿಗಳನಂತರ ಬಹು ಚೆಲುವೆಯು ರಾದ ಹುಡುಗಿಯರು ತಲೆಯ ಮೇಲೆ ಬಿಂದಿಗೆಗಳನ್ನು ಹೊತ್ತು ಮನೆಗೆ ಹೋಗುವ ದೃಶ್ಯ ನೋಡತಕ್ಕದ್ದು. ಕೆಲವರು ಎರಡು ಮೂರು ಬಿಂದಿಗೆಗಳನ್ನು ಒಂದರ ಮೇಲೊಂದನ್ನು ಇರಿಸಿಕೊಂಡು ಹೋಗುತ್ತಿದ್ದುದು ಅಚ್ಚರಿಯೇ ಸರಿ.

ನದಿಯ ಮತ್ತೊಂದು ದಂಡೆಯಲ್ಲಿ 'ಪಾರ್ಸಿ' ಎಂಬ ಜನರ ನಿವಾಸಗಳನ್ನು ಕಂಡೆ. ಇವರು ಪುರಾತನ ಪರ್ಷಿಯಾದ ಜನ. ಅಗ್ನಿಯನ್ನು ಪೂಜಿಸುತ್ತಾರೆ. ಅದನ್ನು ಆರದಂತೆ ಇಟ್ಟುಕೊಳ್ಳುತ್ತಾರೆ. ಸತ್ತವರನ್ನು ಹಕ್ಕಿ ಪಕ್ಷಿಗಳು ತಿನ್ನಲಿ ಎಂದು ಅದಕ್ಕಾಗಿ ಕಟ್ಟಿದ ಮಾಳಿಗೆಯ ಮೇಲೆ ಇಡುತ್ತಾರೆ. ಮನೆಯಲ್ಲಿ ಎಷ್ಟೇ ಜನ ಇರಲಿ ಒಟ್ಟಾಗಿ ಇರುತ್ತಾರೆ. ಇವರಿಗೆ ವ್ಯಾಪಾರ ಸಾಪಾರಗಳಿಗಿಂತ ಬೇಸಾಯದಲ್ಲಿ ಹೆಚ್ಚು ಆಸಕ್ತಿ. ಹಡಗುಗಳಿಗೆ ಬೇಕಾದ ನೀರು ನಿಡಿಗಳನ್ನು ಒದಗಿಸುತ್ತಾರೆ. ಹೆಂಗಸರು ಬಾವಿಗಳಿಂದ ನೀರು ಸೇದಿಕೊಳ್ಳುತ್ತಾರೆ. ಮೂರರು ತಮಗೆ ಬೇಕಾದ ನೀರನ್ನು ಕೋಣ ಮತ್ತು ಎತ್ತುಗಳ ಮೇಲೆ ತರಿಸಿಕೊಳ್ಳುತ್ತಾರೆ. ಇಂಥ ಕೆಲಸಗಳಿಗೆ ಈ ದೇಶದಲ್ಲಿ ನಮ್ಮಂತೆ ಕುದುರೆಗಳನ್ನು ಉಪಯೋಗಿಸುವುದಿಲ್ಲ. ಕುದುರೆಗಳೇನಿದ್ದರೂ ಯುದ್ಧಕ್ಕಾಗಿ ಮತ್ತು ಸವಾರಿಗಾಗಿ ಮಾತ್ರ. ಒಳ್ಳೆಯ ಕುದುರೆಗಳೆಂದರೆ ಪರದೇಶದಿಂದ ತರಿಸಿದವುಗಳು. ಇಂಥ ಒಂದು ಕುದುರೆಗೆ ೩೦೦ ಪೌಂಡ್ ಬೆಲೆ. ಇದೂ ಅಗ್ಗ ಎಂದೇ ಹೇಳಬೇಕು.

ಇಲ್ಲಿ ಹಾಲುಬಿಳುಪಿನ ಭಾರಿ ಭಾರಿ ಎತ್ತುಗಳನ್ನು ಸಾಕುತ್ತಾರೆ. ಚಿನ್ನಬೆಳ್ಳಿಯ ಅಥವಾ ಹಿತ್ತಾಳೆಯ ಕೊಂಬು ಅಣಸು ಹಾಕಿ, ಗೌಸು ಹೊದಿಸಿ, ಮೂಗಿಗೆ ಮೂಗು ದಾರ ಚುಚ್ಚಿ ಕುತ್ತಿಗೆಗೆ ಗಂಟೆ ಸರ ಕಟ್ಟಿ, ಬಹು ಎಚ್ಚರಿಕೆಯಿಂದ ಸಾಕುತ್ತಾರೆ. ಗಾಡಿಗೆ ಕಟ್ಟಬಹುದಾದ ಒಂದು ಎತ್ತಿನ ಬೆಲೆ ೩೦–೪೦ ಪೌಂಡುಗಳಷ್ಟಾಗುತ್ತದೆ. ಇವನ್ನು ಇಡ ಮಾಡುತ್ತಾರೆ. ನಮ್ಮಂತೆ ಬೀಜ ತೆಗೆಯುವುದಿಲ್ಲ.

ಚಳಿಗಾಲ ಮುಗಿದು ಮಳೆಗಾಲಕ್ಕೆ ಮುಂಚೆ ಜೋರಾಗಿ ಬೀಸುವ ಗಾಳಿ ಆರಂಭ ವಾಗುವವರೆಗೂ ಸೂರತ್ತಿನಲ್ಲಿ ಇದ್ದು ೧೬೭೫ನೆಯ ಏಪ್ರಿಲ್ ೪ ರಂದು ಬೊಂಬಾಯಿಗೆ ಹೋದೆ. ಅಲ್ಲಿರುವ ವೇಳೆ ನಾವಿದ್ದ ಕೋಟೆಗೆ ಒಂದು ಬಾರಿ ಕಡಲು ಆಮೆಯನ್ನು ತಂದರು. ಇದು ಆರು ಅಡಿ ಉದ್ದವಾಗಿತ್ತು. ಇದರ ಶಕ್ತಿ ಎಷ್ಟೆಂಬುದನ್ನು ನೋಡುವ ಉದ್ದೇಶದಿಂದ ನಾನು ಮತ್ತು ಇಬ್ಬರು ಅದರ ಮೇಲೆ ಕುಳಿತುಕೊಂಡೆವು. ಅದು

ಸಲೀಸಾಗಿ ನಮ್ಮನ್ನು ಹೊತ್ತುಕೊಂಡು ಹೋಯಿತು. ಆಮೆ ಹೆಂಗಸಿನಂತೆ ನಿಟ್ಟುಸಿರು ಬಿಡುತ್ತದೆ. ಮಗುವಿನಂತೆ ಅಳುತ್ತದೆ. ಅಂಗಾತನಾಗಿ ಮಲಗಿಸಿದರೆ ಅದು ಅಲ್ಲಾಡದೆ ಬಿದ್ದಿರುತ್ತದೆ.

ಇಲ್ಲಿರುವ ಅಧ್ಯಕ್ಷರು ಬೊಂಬಾಯಿ ದ್ವೀಪದ ಏಳಿಗೆಯ ದೃಷ್ಟಿಯಿಂದ ಶಿವಾಜಿಯ ರಾಜ್ಯದ ಮೂಲಕ ಡಕ್ಕನ್ ಪ್ರದೇಶಕ್ಕೆ (ಮೊಗಲ್ ಪ್ರದೇಶಕ್ಕೆ) ಹೋಗಿಬರಲು ಒಬ್ಬ ರಾಯಭಾರಿಯನ್ನು ಕಳುಹಿಸಿಕೊಟ್ಟಿದ್ದರು. ಆದರೆ ಈ ರಾಯಭಾರ ಯಶಸ್ವಿಯಾಗ ಲಿಲ್ಲ. ಹೀಗಾಗಿ ಆ ಕೆಲಸವನ್ನು ನನಗೆ ವಹಿಸಲಾಯಿತು. ಹದಿನೇಳು ಸಾವಿರ ಅಶ್ವದಳ ಹಾಗೂ ಮೂರು ಸಾವಿರ ಪಥಾತಿ ಸೈನ್ಯವುಳ್ಳ ಮೊಗಲ್ ಸರದಾರನೊಬ್ಬ ಜುನಾರ್ (ಜುನ್ನಾರ್) ಗೌರ್ನರ್ ಆಗಿದ್ದ. ಆತನಿಗೆ ನನ್ನ ವೈದ್ಯಕೀಯ ಸಲಹೆ ಬೇಕಾಗಿತ್ತು. ಅಲ್ಲಿಗೆ ಹೋಗಿಬರಲು ನನಗೆ ಪ್ರೆಸಿಡೆಂಟರ ಬಾಯಿಮಾತಿನ ಅಪ್ಪಣೆಯಾಯಿತು. ಬೊಂಬಾಯಿ ದೋಣಿಯೊಂದರಲ್ಲಿ ಹೊರಟೆ. ಹನ್ನೆರಡು ಹುಟ್ಟುಗಳ ದೋಣಿ ಇದು. ಮೊಗಲ್ ಗೌರ್ನರ್ (ನವಾಬನ) ಕಡೆಯ ಇಬ್ಬರು ಸೇವಕರು, ನಾಲ್ಕು ಮೂರ್ ಪ್ಯೂನ್‌ಗಳು, ಒಬ್ಬ ಪೋರ್ಚುಗೀಸ, ನನ್ನ ಸ್ವಂತ ಸೇವಕರು, ದುಭಾಷಿ ಬ್ರಾಹ್ಮಣ, ಕುದುರೆ ನೋಡಿಕೊಳ್ಳುವವ ಒಬ್ಬ, ನನ್ನ ಪಲ್ಲಕ್ಕಿ ಹೊರಲು ಎಂಟು ಜನ ಬೋಯಿಗಳು, ಗುಡಿಸುವುದು, ಹಾಸುವುದು ಮುಂತಾದ ಕೆಲಸಗಳನ್ನು ಮಾಡುವ ಹನ್ನೆರಡು ಜನ 'ಫರಾಷ್'ಗಳು—ಇಷ್ಟು ಜನ ದೋಣಿಯಲ್ಲಿದ್ದರು. ಮೇಲೆ ಒಂದು ಕುದುರೆಯೂ ಇತ್ತು.

ಈ ಸಿದ್ಧತೆಗಳನ್ನು ಮಾಡಿಕೊಂಡು ಮಧ್ಯಾಹ್ನ ಮೂರು ಗಂಟೆಗೆ ಹೊರಟು, ಅದೇ ರಾತ್ರಿ ಒಂಬತ್ತು ಗಂಟೆಗೆ ಥಾಣಾದ ಈ ಕಡೆ ಲಂಗರು ಹಾಕಿದೆವು. ನದಿಯ ಮೇಲೆ ಹೋಗುವಾಗ ದೂರದಲ್ಲಿ ಇದ್ದ ಪರ್ವತಗಳ ಮೇಲೆ ಶಿವಾಜಿಗೆ ಸೇರಿದ ಹಲವಾರು ದುರ್ಗಗಳು ಇರುವುದನ್ನು ಕಂಡೆವು. ಈ ದುರ್ಗಗಳ ರಕ್ಷಣೆಗೆ ಯಾವ ಫಿರಂಗಿಗಳ ಆವಶ್ಯಕತೆಯೂ ಇಲ್ಲ. ಮೇಲಿನಿಂದ ಉರುಳಿಸಿದ ಕಲ್ಲು ಗುಂಡುಗಳು ಫಿರಂಗಿಯ ಗುಂಡುಗಳಂತೆ ಶತ್ರುಗಳನ್ನು ನಾಶಗೊಳಿಸಬಲ್ಲವು. ಮಾರನೆಯ ದಿನ ಹಾಳುಬಿದ್ದ ಬಸ್ಸೀನ್ ನಗರವನ್ನು ಹಿಂದೆ ಬಿಟ್ಟು ಬೇರೊಂದು ದೊಡ್ಡ ನದಿಯ ಮೇಲೆ ದೋಣಿ ಸಾಗಿಸಿ, ಅದರ ಮಾರನೆಯ ದಿನ ಬೆಳಗ್ಗೆ ಒಂಬತ್ತು ಗಂಟೆಗೆ ಭೂಮಿಯ ಮೇಲೆ ಇಳಿದೆವು. ಅಲ್ಲಿದ್ದ ಚೌಲ್ಟ್ರಿಯ (Choultry = ಛತ್ರ) 'ಹವಾಲ್ದಾರ'ನಿಗೆ ನಾವು ಬಂದಿರುವ ಸುದ್ದಿ ತಿಳಿಸಿದಾಗ ಆತ ನಮ್ಮ ಬಿಡಾರಕ್ಕೆ ಒಂದು ಮಸೀದಿಯಲ್ಲಿ ವ್ಯವಸ್ಥೆ ಮಾಡಿದ. ನಾನು ಪ್ರೆಸಿಡೆಂಟರಿಂದ ತಂದಿದ್ದ ಪತ್ರವನ್ನು ಆತನಿಗೆ ಮುಟ್ಟಿಸುವುದಕ್ಕಾಗಿ ನನ್ನ ಕಡೆಯ ಬ್ರಾಹ್ಮಣನನ್ನು ಕಳುಹಿಸಿಕೊಟ್ಟೆ. ನಾನು ಬಂದ ಉದ್ದೇಶವನ್ನು ತಿಳಿದು ಕೊಂಡ ಆತ ನನಗೆ ಹೇಳಿಕಳುಹಿಸಿದ. ಆತನ ಪರಿವಾರದ ಕೆಲವರು ಕಾಯಿಲೆಯಿಂದ ನರಳುತ್ತಿದ್ದರು. ಅವರನ್ನು ಗುಣಪಡಿಸಲು ಹೇಳಿದ. ನನ್ನ ಕೆಲಸ ಸಲೀಸಾಗಿ ಆದರೆ ಸಾಕೆಂದುಕೊಂಡು ನಾನು ಅವರನ್ನು ಉಪಚರಿಸಿದೆ. ಇದರಿಂದಾಗಿ ಮುಂದೆ ಹೋಗಲು

ಆತನಿಂದ 'ಚಿಟ್ಟಿ' (Chetty=ಪರವಾನಗಿ; ಚೀಟಿ) ದೊರೆಯಿತು. ದಾರಿ ತೋರಿಸಲು ಇಬ್ಬರು ಮಾರ್ಗದರ್ಶಿಗಳನ್ನು ಕಳುಹಿಸಿದ.

ಮಾರನೆಯ ದಿನ ಇಲ್ಲಿಂದ ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ಹಿಂದೆ ಈ ಊರು (ಕಲ್ಯಾಣ್) ಉನ್ನತ ಸ್ಥಿತಿಯಲ್ಲಿತ್ತು. ದೊಡ್ಡದಾಗಿ ವ್ಯಾಪಾರ ಸಾಪಾರಗಳು ಆಗುತ್ತಿದ್ದುವು. ಆದರೆ ಪೋರ್ಚುಗಲ್ಲರು, ಆಮೇಲೆ ಮೊಗಲರು, ಆನಂತರ ಶಿವಾಜಿ ಮತ್ತೆ ಮೊಗಲರು—ಇವರುಗಳ ಧಾಳಿಗೆ ಒಳಗಾದ ಮೇಲೆ ಹಾಳುಬಿದ್ದಿದೆ. ಧಾಳಿಗೊಳಗಾದ ಭಾರಿ ಭಾರಿ ಕಟ್ಟಡಗಳನ್ನು ಈಗಲೂ ನೋಡಬಹುದು.

ಮಧ್ಯಾಹ್ನ ಹನ್ನೆರಡು ಗಂಟೆ ಹೊತ್ತಿಗೆ 'ಇಂತವಳ್ಳಿ' (Intavally=ತಿತವಾಳ) ಎಂಬ ಊರಿಗೆ ಬಂದೆವು. ಇದು 'ಕಲ್ಯಾಣಿ' (ಕಲ್ಯಾಣ) ದಿಂದ ಏಳು ಮೈಲಿ ದೂರದಲ್ಲಿದೆ. ಈ ಊರು ಮೊಗಲರ ಧಾಳಿಗೆ ತುತ್ತಾಗಿದೆ. ಬೆಂಕಿ ಇಟ್ಟು ಸುಟ್ಟ ಮನೆಗಳ ಬೂದಿ ಇನ್ನೂ ಆರಿಲ್ಲ. ಮೊಗಲರ ಸೈನ್ಯ ದಾರಿಯಲ್ಲಿ ಸಿಕ್ಕಿದ ಹಳ್ಳಿಗಳನ್ನೂ ಧಾನ್ಯಗಳನ್ನೂ ಹುಲ್ಲು ಸೊಪ್ಪುಗಳನ್ನೂ ನಾಶ ಮಾಡಿದೆ. ದನಕರುಗಳನ್ನು ತಮ್ಮೊಡನೆ ಹೊಡೆದುಕೊಂಡು ಹೋಗುತ್ತದೆ. ಗಂಡಸರು ಹೆಂಗಸರು ಮಕ್ಕಳನ್ನು ತನ್ನ ಗುಲಾಮರನ್ನಾಗಿ ಮಾಡಿಕೊಳ್ಳುತ್ತದೆ. ಕೈಗೆ ಸಿಕ್ಕದೆ ಓಡಿಹೋದವರು ಮಾತ್ರ ಬದುಕಿಕೊಳ್ಳಲು ಸಾಧ್ಯ. ನಾವು ಬಂದ ಈ 'ಗಾಮ್' (Gom=ಗ್ರಾಮದ) ಸುತ್ತ ಮಾವಿನ ಮರದ ತೋಪು ಆವರಿಸಿದೆ. ಇಲ್ಲಿ ನಾನೂ ನನ್ನ ಕೂಲಿಯವರೂ ವಿಶ್ರಾಂತಿ ಪಡೆದೆವು. ಅಷ್ಟೊಂದು ಸಾಮಾನು ಹೊರಲು ತಮ್ಮಿಂದ ಸಾಧ್ಯವಿಲ್ಲವೆಂದು ಆಳುಗಳು ಗೊಣಗಾಡಿದರು. ಅದಕ್ಕಾಗಿ ಒಂದು ಎತ್ತನ್ನು ಬಾಡಿಗೆಗೆ ತೆಗೆದುಕೊಂಡೆ. ಸಂಜೆ ಮುರ್ಬಾದ್ ಎಂಬ ಬಡ ಹಳ್ಳಿಯಲ್ಲಿ ತಂಗಿದೆವು. ಇಲ್ಲಿ ಇರಲು ಯಾವ ಮನೆಯಾಗಲೀ ಗುಡಿಸಲಾಗಲೀ ಸಿಕ್ಕದಿದ್ದ ಕಾರಣ ಅರೆ ಮುಗಿಸಿದ ಒಂದು ಗುಡಿಸಿಲಿನಲ್ಲಿ ತಂಗಬೇಕಾಯಿತು. ರಾತ್ರಿ ಹುಲಿ ಮುಂತಾದ ಕಾಡುಪ್ರಾಣಿಗಳ ಮತ್ತು ಕಳ್ಳಕಾಕರ ಕಾಟ ಇದ್ದುದರಿಂದ ಕೂಲಿಗಳನ್ನು ಕಾವಲಿಗೆ ನೇಮಿಸಿದೆ.

ಮಾರನೆಯ ದಿನ ಮಧ್ಯಾಹ್ನ ನಾಲ್ಕು ಗಂಟೆಗೆ ಮುಂದೆ ಪ್ರಯಾಣ ಮಾಡಿದೆವು. ಗಾಳಿ ಇಲ್ಲ. ಬಿಸಿಲ ಧಗೆ. ಈ ಕಾರಣ ತಂಪು ಹೊತ್ತಾಗುವವರೆಗೂ ಇಲ್ಲಿಯೇ ಇರಬೇಕಾಯಿತು. ಬೆಳಗ್ಗೆ ಸೆಖೆ ತಡೆಯಲಾರದೆ ಊರ ಹೊರಗೆ ಅಡ್ಡಾಡಿ ಬೇಟೆ ಆಡಿದೆ. ಬೆಳಗಿನ ತಿಂಡಿಗೆ ಏನಾದರೂ ತನ್ನಿ ಎಂದು ನನ್ನ ಸೇವಕರನ್ನು ಕಳುಹಿಸಿದೆ. ಆದರೆ ಇಲ್ಲಿ ಏನೂ ಸಿಕ್ಕುವುದಿಲ್ಲ. ಜನ ಶುದ್ಧ ಸೋಮಾರಿಗಳು. ತುಂಬಾ ಮೂಢ ನಂಬಿಕೆಯುಳ್ಳವರು. ಶಕುನಗಳಲ್ಲಿ ಅಪಾರ ನಂಬಿಕೆ. ಒಂದು ಮೊಲ ದಾರಿಗೆ ಅಡ್ಡಲಾಗಿ ಹೋದರೂ, ಕಾಗೆ ಬಲಗಡೆಯಿಂದ ಎಡಗಡೆಗೆ ಹಾರಿಹೋದರೂ ಅದು ಕೆಟ್ಟ ಶಕುನವೆಂದು ಏನೂ ಕೆಲಸ ಮಾಡದೆ ಆ ದಿನವೆಲ್ಲಾ ಸೋಮಾರಿಗಳಾಗಿ ಕಾಲಕಳೆಯುತ್ತಾರೆ. ನನ್ನ ಸೇವಕರು ಹುಡುಕಿ ತಡಕಿ ಒಂದು ಕೋಳಿ ಕೊಂಡುಕೊಂಡು ಬಂದರು. ಭೂಮಿ

ಯನ್ನೇನೋ ಉತ್ತು ಹದಮಾಡಿದ್ದಾರೆ. ಆದರೆ ಬೆಳೆದದ್ದನ್ನೆಲ್ಲಾ ಶಿವಾಜಿ ಕೊಳ್ಳೆ ಹೊಡೆದುಬಿಡುತ್ತಾನೆ. ರೈತರಿಗೆ ಏನೂ ಉಳಿಯುವುದಿಲ್ಲ.

ಇಲ್ಲಿಂದ ಹೊರಟು ಖಾನನ ಸೇವಕರ ಮಾರ್ಗದರ್ಶನದಲ್ಲಿ ದಾರಿ ಸಾಗಿಸಿದೆವು. ಬೆಟ್ಟಗುಡ್ಡಗಳಲ್ಲಿ ನಮ್ಮ ದಾರಿ ಸಾಗಿತು. ಬೆಳೆದು ಒಣಗಿದ್ದ ಹುಲ್ಲನ್ನು ಸುಟ್ಟುಹಾಕಿದ್ದರು. ಹೀಗೆ ಸುಡುವುದರಿಂದ ಮುಂದೆ ಮಳೆ ಬಂದಾಗ ಹುಲ್ಲು ಚೆನ್ನಾಗಿ ಬೆಳೆಯುತ್ತದೆ. ಮುಂದೆ ಗೋಡೆಯಂತಿದ್ದ ಮುಗಿಲು ಮುಟ್ಟುವ 'ಘಾಟು' (ಘಟ್ಟ). ರಾತ್ರಿ ಹನ್ನೊಂದು ಗಂಟೆಗೆ ಘಟ್ಟದ ತಪ್ಪಲಿನಲ್ಲಿದ್ದ 'ದಸಾಯ್' ಎಂಬ ಊರನ್ನು ತಲುಪಿದೆವು. ಊರಿನ ಜನರೆಲ್ಲ ಶಸ್ತ್ರಸಜ್ಜಿತರಾಗಿ ಊರನ್ನು ಕಾಯುತ್ತಿದ್ದರು. ನೀರು ತರಲು ತಮ್ಮ ಹೆಂಗಸರನ್ನು ತಕ್ಕ ರಕ್ಷಣೆಯಿಲ್ಲದೆ ಹೊರಕ್ಕೆ ಬಿಡುತ್ತಿರಲಿಲ್ಲ. ಊರು ಕಾಯುತ್ತಿದ್ದ ಜನ ನನ್ನನ್ನು ಮಾರುಕಟ್ಟೆಯ ಬಳಿಗೆ ಕರೆದುಕೊಂಡುಹೋದರು. ಕಲ್ಯಾಣದ ನವಾಬರು ಕೊಟ್ಟಿದ್ದ ಚಿಟ್ಟಿಯನ್ನು ಇಲ್ಲಿಯ ಖಾನನಿಗೆ ಕಳುಹಿಸಿಕೊಟ್ಟೆ. ಆತ ಅದನ್ನು ಸಂತೋಷದಿಂದ ಸ್ವೀಕರಿಸಿದ.

ನಾನೂ ನನ್ನ ಪರಿವಾರವೂ ದಾರಿ ನಡೆದು ಸಾಕಾಗಿದ್ದೆವು. ನಾವು ಇಲ್ಲಿ ತಂಗಿದ್ದು ಒಂದು ಸಿಂಹವನ್ನು ಕೆಣಕಿದಂತಾಯಿತು. ಭಂಗಿ ಕುಡಿದು ಮಲಗಿದ್ದ ಒಬ್ಬ ಫಕೀರ ಭಾರಿ ಗಲಾಟೆ ಎಬ್ಬಿಸಿದ. ಈ ಗಲಾಟೆ ಕೇಳಿ ಊರಿನ ಕಾವಲುಗಾರರು ನನ್ನ ಮೇಲೆ ಬೀಳುತ್ತಿದ್ದರೋ ಏನೋ. ಆದರೆ ಅವರೆಲ್ಲ ಊರನ್ನು ಕಾಯುತ್ತ. ದೀಪ ಆರಿಹೋದಾಗ ಮಕ್ಕಳು ಹೆದರಿ ಕಿರುಚಿಕೊಳ್ಳುತ್ತಿದ್ದುದರಿಂದ ನಮ್ಮ ಈ ಸಿಂಹದ ಅಬ್ಬರ ಅವರಿಗೆ ಕೇಳಿಸಲಿಲ್ಲ. ನನ್ನ ಸಂಗಾತಿಯನ್ನು ಸುಮ್ಮನಿರಿಸುವುದಕ್ಕೆ ಒಂದು ಉಪಾಯ ಹುಡುಕಿದೆ. ನನ್ನ ಬಳಿ ಇದ್ದ ಅರಾಕ್ (ಶರಾಬ್) ಕುಡಿಸಿದೆ. ಕುಡಿದನೋ ಇಲ್ಲವೋ ಆತ ಗಪ್‌ಚಿಪ್ ಆದ. ಮಾರನೆಯ ದಿನ ಬೆಳಕು ಹರಿದಾಗ ಈ ಫಕೀರ ಪೂಜಿಸುತ್ತಿದ್ದ ವಿಗ್ರಹವೊಂದನ್ನು ಕಂಡೆ. ಕಲ್ಲಿನಿಂದ ಕಡೆದ ಈ ವಿಗ್ರಹ ನೋಡಲು ಭಯಂಕರವಾಗಿ ಕಾಣುತ್ತಿತ್ತು. ಅದರ ಬಾಲ ತಲೆಯಮೇಲೆ ಇತ್ತು. ಸೊಂಟದವರೆಗೆ ಕೆಂಪು ಬಣ್ಣ ಬಳಿದು ಎಣ್ಣೆ ಹಚ್ಚಿದ್ದರು. ಅನೇಕ ಭಕ್ತರು ಬಂದು ಇದಕ್ಕೆ ಸಲಾಮ್ ಮಾಡಿ ಹೋದರು.[೧]

ಘಾಟ್ ಹತ್ತಿಹೋಗಲು ಪರವಾನಗಿ ದೊರೆಯುವುದೇ ಎಂದು ತಿಳಿದುಬರಲು ನನ್ನ ಕಡೆಯ ಒಬ್ಬನನ್ನು ಹವಾಲ್ದಾರನಬಳಿಗೆ ಕಳುಹಿಸಿಕೊಟ್ಟೆ. ರಾತ್ರಿಯೆಲ್ಲಾ ನಿದ್ದೆಗೆಟ್ಟ ಕಾರಣ ಆತ ಇನ್ನೂ ಎದ್ದಿಲ್ಲವೆಂದು ತಿಳಿಯಿತು. ನಾನು ಊರು ನೋಡಲು ಹೋದೆ. ಊರಲ್ಲೆಲ್ಲಾ ಜನ ತುಂಬಿದ್ದರು. ಬಡತನ ಎಂದರೆ ಬಡತನ. ಇಲ್ಲಿ ಶಿವಾಜಿಯು ತನ್ನ ಕುದುರೆಗಳ ಲಾಯ ಇಟ್ಟಿದ್ದಾನೆ. ಕುದುರೆಗಳಿಗೆ ಬೇಕಾದ ಹುಲ್ಲು ಮತ್ತು ಹುರುಳಿ ಸಿಕ್ಕುವುದರಿಂದ ಇಲ್ಲಿ ಕುದುರೆಗಳನ್ನೂ ತನ್ನ ಹವಾಲ್ದಾರನನ್ನೂ ಇಟ್ಟಿದ್ದಾನೆ. ಊರು

---

೧. ಇದು ಹನುಮಾನ್ ಅಥವಾ ಮಾರುತಿ ವಿಗ್ರಹ.

ಬಿಟ್ಟು ಹೊರಗಡೆ ಬಯಲಿಗೆ ಹೋಗಿ ಅಲ್ಲಿ ಅಡ್ಡಾಡಿದೆ. ಮಾವು ಮತ್ತು ಹುಣಸೆ ತೋಪುಗಳೂ ಅವುಗಳ ಒಂದು ಕಡೆ ಹಾಳುಮಾಡಿದ ಮಸೀದಿಯೂ ಮುಸಲ್ಮಾನರ ಗೋರಿಗಳೂ ಕಂಡವು. ನನಗೆ ಬಹಳ ಆನಂದವನ್ನುಂಟುಮಾಡಿದ್ದೆಂದರೆ, ಕರಿಯಕಲ್ಲಿನಲ್ಲಿ ಕಟ್ಟಿದ ಇಳಿಯುವ ಬಾವಿ ಮತ್ತು ಅಲ್ಲಿ ಜಿನಿಯುತ್ತಿದ್ದ ನೀರನ್ನು ಬಿಂದಿಗೆಗಳಲ್ಲಿ ತುಂಬಿಕೊಂಡು ಹೋಗುತ್ತಿದ್ದ ಅಂದವಾದ ಹೆಂಗಸರನ್ನು ಕಂಡುದು.

ನನ್ನ ಬಿಡಾರಕ್ಕೆ ಹಿಂದಿರುಗಿದೆ. ನನಗೆ ರಾತ್ರಿ ತಾಪತ್ರಯ ಕೊಟ್ಟ ಫಕೀರ ತನ್ನ ಸಾಮಾನುಗಳಾದ ಭಂಗಿ, ಬಟ್ಟಲು ಮತ್ತು ಹುಕ್ಕಾವನ್ನು ಕಟ್ಟಿಕೊಂಡು ನನ್ನೊಡನೆ ಹೊರಡಲು ಸಿದ್ಧವಾಗಿದ್ದ. ಹವಾಲ್ದಾರನನ್ನು ಈಗ ನೋಡಬಹುದೆಂದು ನನ್ನ ಮನುಷ್ಯ ತಿಳಿಸಿದ. ಅವನನ್ನು ನೋಡಲು ಹೋದೆ. ಹೋಗುವಾಗ ಆ ಹವಾಲ್ದಾರನ ಸೈನಿಕರ ಸಾಲನ್ನು ನೋಡಿದೆ. ಪಕರಿ (ಪಗಡಿ—ಪೇಟ್) ಧರಿಸಿ ಕಿವಿಗಳ ಮೇಲೆ ತಲೆ ಗೂದಲನ್ನು ಇಳಿಯಬಿಟ್ಟ ಇವರನ್ನೂ ಇವರ ಆಯುಧಗಳನ್ನೂ ನೋಡಿ ನನಗೆ ನಗು ಬಂತು. ಹವಾಲ್ದಾರ ಒಂದು ಜೋಪಡಿಯಲ್ಲಿ ಕುಳಿತು ತನ್ನ ಕಾರುಬಾರು ನಡೆಸುತ್ತಿದ್ದ. ಅವನಿಂದ ದೂರದಲ್ಲಿ ಅನೇಕ ಬ್ರಾಹ್ಮಣರು ಕುಳಿತು ಲೆಕ್ಕ ಪತ್ರ ಬರೆಯುತ್ತಿದ್ದರು. ಅವನಿಗೆ ಹತ್ತಿರದಲ್ಲಿ ಅವನ ಸಲಹೆಗಾರರು ಕುಳಿತಿದ್ದರು. ನನ್ನನ್ನು ಆತನ ಎಡಬದಿಯಲ್ಲಿ ಕುಳ್ಳಿರಿಸಿದರು. ನಾನು ಬಂದ ಉದ್ದೇಶವನ್ನು ನನ್ನ ದುಭಾಷಿ ತಿಳಿಸಿದ. ಘಾಟನ್ನು ಹತ್ತಲು ಅನುಮತಿಕೊಡುವುದಕ್ಕೆ ತನಗೆ ಅಧಿಕಾರವಿಲ್ಲವೆಂದು ಖಾಲಿ ತಕರಾರು ಹೇಳಿದ. ನನ್ನಿಂದ ಏನಾದರೂ ಬಹುಮಾನ ಗಿಟ್ಟಿಸಿಕೊಳ್ಳುವುದೇ ಅವನ ಉದ್ದೇಶವೆಂದು ಭಾವಿಸಿದ ನಾನು ಆತನಿಗೆ ಪುಟ್ಟ ಬಹುಮಾನವೊಂದನ್ನು ಒಪ್ಪಿಸಿದೆ. ಆಗ ಆತ ಪರವಾನಗಿಗೆ ರುಜು ಹಾಕಿ, ಒಂದು ಕವಳಿಗೆ ವೀಳೆಯದೆಲೆಯ ಮರ್ಯಾದೆ ಮಾಡಿ ಕಳುಹಿಸಿಕೊಟ್ಟ.

ನಾನು ನನ್ನ ಪ್ರಯಾಣ ಮುಂದುವರಿಸಿದೆ. ಆ ಫಕೀರನೂ ನನಗೆ ಗಂಟುಬಿದ್ದ. ಆದರೆ ಮೂರು ಮೈಲಿ ಹೋಗುವಷ್ಟರಲ್ಲಿ ಆತ ಕುಡಿದಿದ್ದ ಮದ್ಯ ತನ್ನ ಕೆಲಸ ಮಾಡಿತು. ಸುಸ್ತಾಗಿಬಿಟ್ಟು ತನ್ನ ಕುದುರೆ ಬೇಕೆಂದು ಹೇಳಿದ. ಅದರ ಮೇಲೆ ಪೋರ್ಚುಗೀಸ ಹೋಗುತ್ತಿದ್ದ. ಆತನನ್ನು ಇಳಿಸಿ ಈ ಫಕೀರನನ್ನು ಕುಳ್ಳಿರಿಸಿದೆ. ಕುಳಿತನೋ ಇಲ್ಲವೋ ವಾಂತಿ ಮಾಡಿಕೊಂಡುಬಿಟ್ಟ. ಕುದುರೆ ಬಾಲ ಎತ್ತಿ ಬಂದ ದಾರಿಯಲ್ಲಿ ಹಿಂದಕ್ಕೆ ದೌಡಾಯಿಸಿತು. ಅದರ ಹಿಂದೆ ಪೋರ್ಚುಗೀಸ ಓಡಿದ.

ನಮ್ಮ ಮುಂದಿನ ದಾರಿ ತುಂಬ ಪ್ರಯಾಸವಾಗತೊಡಗಿತು. ಪಲ್ಲಕ್ಕಿಯಲ್ಲಿ ದಾರಿ ಸಾಗಿಸುವುದು ಕಷ್ಟವಾಯಿತು. ಆದ್ದರಿಂದ ನಾನು ಇಳಿದು ನಡೆಯಲಾರಂಭಿಸಿದೆ. ಕೂಲಿಗಳು ದೊಣ್ಣೆ ಊರಿಕೊಂಡು ಹತ್ತುತ್ತಿದ್ದರು. ಕಾಡಿನಲ್ಲಿ ಕಪಿಗಳು ಬಗೆಬಗೆಯ ಚೇಷ್ಟೆ ಮಾಡುತ್ತಾ ಮರದಿಂದ ಮರಕ್ಕೆ ನೆಗೆದಾಡುತ್ತಿದ್ದುವು. ದಾರಿ ಇನ್ನೂ ಇಕ್ಕಟ್ಟಾಗುತ್ತಾ ಬಂದಿತು. ಕಡಿದಾದ ದಾರಿಯನ್ನು ಕೈಊರಿಕೊಂಡು ಹತ್ತಬೇಕಾಯಿತು.

ಹೀಗೆ ಹತ್ತುತ್ತಿರುವಲ್ಲಿ ಕೆಳಗಡೆ ನಮ್ಮ ಕಡೆಯುವರು ಹೋ ಎಂದು ಕೂಗಿಕೊಂಡರು. ನೋಡಿದರೆ ನಮ್ಮ ಎತ್ತೊಂದು ಮುಗ್ಗರಿಸಿ ಬಿದ್ದುಬಿಟ್ಟಿತ್ತು. ಕೂಲಿಗಳನ್ನು ಬೈಯ್ದು ಎತ್ತು ಬಿದ್ದ ಕಡೆಗೆ ಕಳುಹಿಸಿ ಅದನ್ನು ಮೇಲೆತ್ತಿ ತರುವಂತೆ ಹೇಳಿದೆ. ನನ್ನೊಡನಿದ್ದ ತುರ್ಕಿ ಕುದುರೆ ಎಲ್ಲರಿಗಿಂತ ಮುಂದೆ ಸಾಗುತ್ತಿತ್ತು. ಅದು ಹತ್ತುವಾಗ ಅದರ ಕಾಲಿನಿಂದ ಚಿಮ್ಮಲ್ಪಟ್ಟ ಕಲ್ಲುಗಳು ನಮ್ಮ ಕಡೆಗೆ ಉರುಳಿಬರುತ್ತಿದ್ದುವು. ಈ ಕಾರಣ ಅದನ್ನು ನಿಧಾನವಾಗಿ ನಡೆಸುವಂತೆ ಹೇಳಬೇಕಾಯಿತು. ರಾತ್ರಿ ಒಂಬತ್ತು ಘಂಟೆಗೆ ನಮ್ಮ ನೆತ್ತಿಯ ಮೇಲೆ ಚಂದ್ರ ಕಾಣಿಸಿಕೊಂಡ. ಒಂದು ಘಂಟೆ ಹೊತ್ತು ಬೆಟ್ಟ ಹತ್ತಿ ಅದರ ಮೇಲಕ್ಕೆ ಬಂದೆವು. ನಾನೇ ಎರಡನೆಯುವನು ಮೇಲಕ್ಕೆ ಹತ್ತಿಬರಲು. ಪಲ್ಲಕ್ಕಿ ಒಂದು ಘಂಟೆಯ ನಂತರ ಬಂದಿತು. ಉಳಿದವರು ಬರಬೇಕಾದರೆ ಎರಡು ಘಂಟೆ ಆಯಿತು. ಮಾತು ಕೊಟ್ಟಂತೆ ಎಲ್ಲರಿಗೂ ಅರಾಕ್ ಹಂಚಿದೆ. ಅದನ್ನು ಕುಡಿದು ಖುಷಿಯಾದ ನನ್ನವರು ಬೆಳಗಿನವರೆಗೆ ದಾರಿ ಸಾಗಿಸಿ ಉಪ್ಪರ್‌ಘಾಟ್ ಎಂಬಲ್ಲಿಗೆ ಬಂದರು. ಆಗ ಬೆಳಕು ಹರಿಯಿತು.

ನಾನು ಏರಿಬಂದ ಗರ್ (Gur=ಘಡ) ನಾಲ್ಕು ದಾರಿ (Course) ಎತ್ತರದಲ್ಲಿದೆ. ಒಂದು ದಾರಿಗೆ ಒಂದೂವರೆ ಮೈಲಿ. ಇಷ್ಟು ಎತ್ತರದ ಸ್ಥಳದಲ್ಲಿ ನಿಂತು ನೋಡಿದಾಗ ಕೆಳಗಡೆಯ ಪ್ರದೇಶವೆಲ್ಲಾ ಮೋಡಗಳಿಂದ ಆವೃತವಾಗಿರುವುದು ಕಂಡಿತು. ಸಮುದ್ರದವರೆಗೂ ಮೋಡಗಳು ಹಬ್ಬಿದ್ದುವು. ಕೆಳಗೆ ನಾವು ಅನುಭವಿಸಿದ ಧಗೆ ಇಲ್ಲಿ ಇರಲಿಲ್ಲ. ಅದರ ಬದಲು ಮೈಕೊರೆಯುವ ಚಳಿ.

ಈ ಪಟ್ಟಣ ತೀರಾ ಸಾಮಾನ್ಯವಾದ ಊರು. ಇಲ್ಲಿ ಒಬ್ಬ 'ಸುಬೇದಾರ' ಇದ್ದ. ಸುಂಕ ತೀರಿಸಿದ ಬಗ್ಗೆ ನನ್ನಲ್ಲಿದ್ದ ಪತ್ರವನ್ನು ಘಡದ ಹವಾಲ್ದಾರನಿಗೆ ಕಳುಹಿಸಿಕೊಡುವುದಾಗಿಯೂ ಆತನಿಂದ ಅನುಮತಿ ಬರುವವರೆಗೆ ಮುಂದೆ ಹೋಗಬಾರದೆಂದೂ ತಡೆ ಹಾಕಿದ. ನಾವು ಇಲ್ಲಿ ಇರುವಾಗ 'ಕೊಂಬಿ' (Combi=Kunbi=ಕುನ್ಬಿ) ಎಂಬ ಜನರು ಘಡಕ್ಕೆ ದವಸಧಾನ್ಯಗಳನ್ನು ಹೊತ್ತು ಹೋಗುತ್ತಿದ್ದುದನ್ನು ಕಂಡೆವು. ಮಧ್ಯಾಹ್ನ ಮೂರುಗಂಟೆಯವರೆಗೂ ಕಾದು ಸಾಕಾದ ನಾನು ಇನ್ನು ಕಾಯಲು ಆಗುವುದಿಲ್ಲ ಎಂದು ಮುಂದೆ ಹೊರಟೇಬಿಟ್ಟೆ. ನನ್ನನ್ನೂ ನನ್ನ ಕೂಲಿಗಳನ್ನೂ ತಡೆಯಲು ಸುಬೇದಾರ ಪ್ರಯತ್ನಪಟ್ಟ. ಆದರೆ ನಾವು ಹೆದರದೆ ಮುಂದೆ ಸಾಗಿಯೇಬಿಟ್ಟೆವು. ನನ್ನೊಡನೆ ಬರಲು ಹೆದರಿದ ಕಲ್ಯಾಣದ ಪ್ಯೂನ್‌ಗಳನ್ನು ಕೈಬಿಟ್ಟು ಪರವಾನಗಿ ಸಿಕ್ಕಿದಾಗ ಇಷ್ಟವಿದ್ದರೆ ಬನ್ನಿ ಎಂದು ಹೇಳಿ ಹೊರಟೆ. ಕಣಿವೆ ಇಳಿದು ದಾರಿ ಸಾಗಿಸುತ್ತಿರುವಾಗ ದವಸಧಾನ್ಯಗಳನ್ನು ಹೇರಿದ್ದ ಎತ್ತುಗಳ ತಂಡವನ್ನು ಕಂಡೆವು. ಹತ್ತು ದಾರಿ ದೂರ ನಡೆದು ರಾತ್ರಿ ಹತ್ತು ಗಂಟೆಗೆ 'ಅಂಬೆಗಾವ್'[೧] ಎಂಬ ಊರನ್ನು ತಲುಪಿದೆವು. ನನ್ನ ಕೂಲಿ

---

೧. ಅಂಬೆಗಾವ್—ಪುಣೆ ಜಿಲ್ಲೆಯ ಘೋಡ್ ನದಿಯ ದಂಡೆಯಲ್ಲಿರುವ ಊರು.

ಗಳಿಗೆ ನನ್ನ ಹೆದರಿಕೆಗಿಂತ ಶಿವಾಜಿಯ ಹೆದರಿಕೆ ಹೆಚ್ಚಾಗಿತ್ತು. ಆದ್ದರಿಂದ ಅವರು ಆತುರಾತುರವಾಗಿ ದಾರಿ ನಡೆದು ಬಂದಿದ್ದರು.

ಅಂಬೆಗಾವ್‌ನಲ್ಲಿ ಜನರೇ ಇರಲಿಲ್ಲ. ಜುನ್ನಾರಿನ ನವಾಬ ಮುಖ್ಲೀಸ್ ಖಾನನ ಕಡೆಯ ರಾವುತರು ಇಲ್ಲಿಯ ಜನರನ್ನೆಲ್ಲಾ ಅಟ್ಟಿಸಿಕೊಂಡು ಹೋಗಿಬಿಟ್ಟಿದ್ದರು. ಬಜಾರಿನಲ್ಲಿದ್ದ ಒಂದು ಅಂಗಡಿಯಲ್ಲಿ ನಾನು ಬಿಡಾರ ಹೂಡಿದೆ. ಬೆಳಗ್ಗೆ ಐದು ಗಂಟೆಗೇ ಎದ್ದು ನಮಗಾಗಬಹುದಾದ ತೊಂದರೆಗೆ ಹೆದರಿ ಇಲ್ಲಿಂದ ಹೊರಟು ಗುಡ್ಡಗಳನ್ನು ಹತ್ತಿ ಇಳಿದು ತಿಳಿನೀರಿನ ಕೊಳವೊಂದರ ಬಳಿಗೆ ಬಂದೆವು. ಅಲ್ಲೊಂದು ಸೊಗಸಾದ ಅಂಜೂರದ ಮರ ಇತ್ತು. ಇನ್ನೂ ಹಸುರಾಗಿಯೇ ಇದ್ದ ಅಂಜೂರದ ಹಣ್ಣುಗಳನ್ನು ನನ್ನ ಕೂಲಿಗಳು ಆನಂದದಿಂದ ತಿಂದರು. ಅಕ್ಕಿ ಬೇಕೆಂದರೂ ಸಿಕ್ಕಲಿಲ್ಲ. ಹಣ್ಣು ತಿಂದು ಅವರು ಮುಂದಿನ ದಾರಿ ಸಾಗಿಸಿದರು. ಇಷ್ಟರಲ್ಲಿ ಮಧ್ಯಾಹ್ನ ಆಯಿತು. ಐವತ್ತು ಮೈಲಿ ದೂರವನ್ನು ಕೇವಲ ಹಣ್ಣು ತಿಂದು ನಡೆದಿದ್ದರು ನನ್ನ ಕೂಲಿಗಳು. ಸುಸ್ತಾಗಿ ಬೆಲ್ಸಾರ್ ಎಂಬ ಊರಿನಲ್ಲಿ ಹೊತ್ತ ಸಾಮಾನುಗಳನ್ನು ಕೆಳಗಿಳಿಸಿದರು. ಇಲ್ಲಿಂದ ಜುನಾರ್ ಎರಡು ದಾರಿ ದೂರ ಇತ್ತು. ಆದುದರಿಂದ ಕಾಡಿ ಬೇಡಿ ಅನ್ನ ಕೇಳಿ ಈಸಿಕೊಂಡು ಹೊಟ್ಟೆ ತುಂಬಿಸಿಕೊಂಡರು.

ಸಂಜೆ ಹೊರಟು ಜುನಾರ್ ಹೊರಗಡೆ ಠಿಕಾಣೆ ಹಾಕಿದೆ. ಅಲ್ಲಿದ್ದ ನವಾಬನ ಕಡೆಯವರಿಗೆ ನಾನು ಬಂದಿರುವ ವಿಷಯವನ್ನು ತಿಳಿಸಬೇಕೆಂದು ಕೇಳಿಕೊಂಡೆ. ನವಾಬನ ಕಡೆಯಿಂದ ಬಂದ ಜನರು ಆತನು ಕಳುಹಿಸಿಕೊಟ್ಟ ಊಟದ ತಟ್ಟೆಯನ್ನು ನಮಗೆ ಕೊಟ್ಟು ಹೋದರು. ನಾನು ಇಲ್ಲಿಗೆ ಬಂದದ್ದು ಏಪ್ರಿಲ್ ತಿಂಗಳ ಕೊನೆಯ ದಿನದ ಹಿಂದಿನ ದಿನ. ಅಂದು ಗುರುವಾರ. ಮಾರನೆಯ ದಿನ ಶುಕ್ರವಾರ.

ಶುಕ್ರವಾರ ಮಸೀದಿಗೆ ಹೋಗಬೇಕಾದ ದಿನವಾದ್ದರಿಂದ ನನ್ನನ್ನು ನೋಡಲು ಸಾಧ್ಯವಾಗುವುದಿಲ್ಲವೆಂದು ನವಾಬನು ಹೇಳಿಕಳುಹಿಸಿದ. ಮೇ ಒಂದನೆಯ ತಾರೀಕು ಆತ ನನಗೆ ಹೇಳಿಕಳುಹಿಸಿದ. ಅಶ್ವದಳದ ಗೌರವ ರಕ್ಷಣೆಯಲ್ಲಿ ನನ್ನನ್ನು ದುರ್ಗಕ್ಕೆ ಕರೆದುಕೊಂಡುಹೋಗಲಾಯಿತು. ನವಾಬನ ನಿವಾಸ ದುರ್ಗದ ಮಧ್ಯದಲ್ಲಿತ್ತು. ಅದರ ಸುತ್ತ ಮರಗಿಡಗಳು ಬೆಳೆದಿದ್ದುವು. ನವಾಬ ತನ್ನ ಪರಿವಾರದೊಡನೆ ಹುಕ್ಕಾ ಸೇದುತ್ತಾ ಕುಳಿತಿದ್ದ. ನೆಲಕ್ಕೆಲ್ಲಾ ಮೆತ್ತನೆಯ ಹಾಸು ಹಾಸಿ ಅದರ ಮೇಲೆ ಕ್ಯಾಲಿಕೊ ಬಟ್ಟೆ ಹಾಸಿದ್ದರು. ನಾನು ನವಾಬನಿಗೆ ನನ್ನ ಗೌರವ ಸಲ್ಲಿಸಿ ನಮ್ಮ ಪ್ರೆಸಿಡೆಂಟರು ಕೊಟ್ಟಿದ್ದ ಪತ್ರವನ್ನು ಒಪ್ಪಿಸಿದೆ. ನಾನು ನೋಡಬೇಕಾದ ರೋಗಿಗಳು ಯಾರು ಎಂಬುದನ್ನಷ್ಟೇ ಭೇಟಿಯಲ್ಲಿ ನವಾಬ ನನಗೆ ತಿಳಿಸಿದ್ದು. ಏಕೆಂದರೆ ಮುಖ್ಯವಾದ ರಾಜಕಾರ್ಯಗಳನ್ನು ನಡೆಸಲು ಆ ದಿನ ಪ್ರಶಸ್ತವಾಗಿರಲಿಲ್ಲವಂತೆ. ಮಳೆಗಾಲ ಸಮಿಾಪಿಸುತ್ತಿರುವುದರಿಂದ ನಿಧಾನ ಮಾಡದೆ ನಾನು ಬಂದ ಕಾರ್ಯ ನಡೆಸಿಕೊಡಬೇಕೆಂದು ಕೇಳಿಕೊಂಡೆ. ಕೋಟೆಯ ಒಳಗಡೆ ಇದ್ದ ವ್ಯವಸ್ಥೆಯನ್ನು ನೋಡಿದರೆ ಯಾವಾಗ ಎಂದರೆ ಆಗ

ಶಿವಾಜಿಯ ಧಾಳಿಯನ್ನು ಎದುರಿಸಲು ಸಿದ್ಧವಾಗಿದ್ದಂತೆ ಕಂಡಿತು. ಇಲ್ಲಿಂದ ಮೂರು ದಿನದ ಪ್ರಯಾಣದಷ್ಟು ದೂರದಲ್ಲಿ ನಲವತ್ತು ಸಾವಿರ ಕುದುರೆ ಸೈನ್ಯ ಸಿದ್ಧವಾಗಿದೆ ಯೆಂದು ತಿಳಿಯಿತು.

ಪರದೇಶದವನಾದ ನನ್ನನ್ನು ನೋಡಲು ಎಲ್ಲರಿಗೂ ಕುತೂಹಲ. ನಾನು ವಸತಿ ಮಾಡಿದ್ದ ಕಡೆಗೆ ಜನ ಬಂದು ನನ್ನನ್ನು ದುರುಗುಟ್ಟಿಕೊಂಡು ನೋಡಿ, ನನ್ನ ದೇಶ, ಅಲ್ಲಿಯ ನಡೆನುಡಿಗಳು ಇವನ್ನೆಲ್ಲಾ ಕೇಳಿ ತಿಳಿದುಕೊಂಡರು. ಅಷ್ಟೇ ಅಲ್ಲ, ತಮ್ಮ ವಿಷಯಗಳನ್ನೂ ಮುಚ್ಚುಮರೆಯಿಲ್ಲದೆ ಹೇಳಿಕೊಂಡರು. ಎಲ್ಲರೂ ನನ್ನ ಬಗ್ಗೆ ತುಂಬಾ ಗೌರವದಿಂದ ನಡೆದುಕೊಂಡರು.

ಒಂದು ಶುಭದಿನ ನವಾಬನು ನನಗೆ ಹೇಳಿಕಳುಹಿಸಿದ. ತನ್ನ ಹೇರಂ (ಅಂತಃಪುರ)ನಲ್ಲಿದ್ದ ಹೆಂಡತಿಯನ್ನು ನೋಡಬೇಕೆಂದು ನನಗೆ ತಿಳಿಸಿದ. ಒಬ್ಬ ಹುಡುಗ ನನ್ನನ್ನು ಹೇರಂನೊಳಕ್ಕೆ ಕರೆದುಕೊಂಡುಹೋದ. ದುಭಾಷಿ ಮಾತ್ರ ನನ್ನ ಜೊತೆ ಇದ್ದ. ಅಂತಃಪುರದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಮುದುಕಿಯೊಬ್ಬಳು ನಾವು ಬರುತ್ತಿರುವ ವಿಷಯವನ್ನು ಚಪ್ಪಾಳೆ ತಟ್ಟಿ ಒಳಗಿದ್ದವರಿಗೆ ಸೂಚಿಸಿದಳು. ನಾವು ಅಂತಃಪುರದಲ್ಲಿ ಮುಂದೆ ಸಾಗಿದೆವು. ಒಂದು ಕೋಣೆಗೆ ನಮ್ಮನ್ನು ಕರೆದುಕೊಂಡು ಹೋಗಲಾಯಿತು. ಅಲ್ಲಿ ಒಂದು ಪಲಂಗ ಇತ್ತು. ಅದನ್ನು ರೇಷ್ಮೆ ಬಟ್ಟೆಯಿಂದ ಮರೆಮಾಡಿದ್ದರು. ನಾನು ಎಲ್ಲಿ ಕುಳಿತುಕೊಂಡು ರೋಗಿಯ ನಾಡಿ ಪರೀಕ್ಷೆ ಮಾಡಬೇಕು ಮತ್ತು ಏನು ಮಾತಾಡಬೇಕು ಎಂದು ತಿಳಿಸಲಾಯಿತು. ನಾನೆಂತಹ ವೈದ್ಯ ಎಂದು ತಿಳಿಯಲು ಅವರು ಮೊದಲು ಒಬ್ಬ ಸೇವಕಿಯ ಕೈ ಕೊಡಿಸಿದರು. ನಾನು ನಾಡಿ ಪರೀಕ್ಷೆಮಾಡಿ ಆಕೆಗೆ ಯಾವ ರೋಗವೂ ಇಲ್ಲವೆಂದು ತಿಳಿಸಿದೆ. ಇದನ್ನು ಕೇಳಿ ಅವರು ನನ್ನ ಯೋಗ್ಯತೆಯನ್ನು ಪರೀಕ್ಷೆ ಮಾಡಲು ಬೇರೊಬ್ಬಳ ಕೈ ಕೊಡಲಾಯಿತೆಂದು ಹೇಳಿ ಸರಿಯಾದ ಕೈ ಕೊಡಿಸಿದರು. ಅದರ ನಾಡಿ ನೋಡಿ ಆಕೆಗೆ ನಿಶ್ಶಕ್ತಿಯಿದೆ ಎಂದು ಹೇಳಿದೆ. ಇದನ್ನು ಕೇಳಿ ಎಲ್ಲರೂ ತಮ್ಮ ಮೆಚ್ಚಿಗೆ ಸೂಚಿಸಿದರು. ಆಮೇಲೆ ನನ್ನನ್ನು ಹೋದ ದಾರಿಯಲ್ಲಿಯೇ ಹಿಂದಿರುಗಿ ಕರೆದುಕೊಂಡು ಬಂದರು.

ನಡೆದದ್ದನ್ನೆಲ್ಲಾ ಖಾನನಿಗೆ ವರದಿ ಮಾಡಿದಾಗ ಆತ ಸಂತೋಷಪಟ್ಟು, ಮಾರನೆಯ ದಿನ ತನ್ನ ನಾಲ್ಕನೆಯ ಹೆಂಡತಿಯ ಪರೀಕ್ಷೆ ಮಾಡಬೇಕೆಂದು ತಿಳಿಸಿದ. ಖಾನನಿಗೆ ಮುನ್ನೂರು ಜನ ಹೆಂಗಸರಿದ್ದರೂ ತನ್ನ ಧರ್ಮದಂತೆ ನಾಲ್ಕು ಹೆಂಡಿರನ್ನು ಮಾತ್ರ ಆತ ಮದುವೆಯಾಗಬಹುದಾಗಿತ್ತು. ಈಕೆಯ ನಾಡಿ ಪರೀಕ್ಷೆ ಮಾಡುವಾಗ ಒಳಗಿದ್ದ ಹೆಂಗಸರು ಕುತೂಹಲದಿಂದ ಮುನ್ನುಗ್ಗಿದಾಗ ಅಡ್ಡಲಾಗಿದ್ದ ಪರದೆ ಕೆಳಕ್ಕೆ ಬಿದ್ದುಬಿಟ್ಟಿತು. ಆಗ ಒಳಗಿದ್ದ ಹೆಂಗಸರ ಇಡೀ ಗುಂಪೇ ನನಗೆ ಕಾಣಿಸಿತು. ಬೇಡನ ಬಲೆಗೆ ಬಿದ್ದ ಹಕ್ಕಿಗಳು ಪಟಪಟಿಸುವಂತೆ ಅವರು ಆ ಪರದೆಯೊಳಗೆ ಒದರಾಡುತ್ತಾ ತಮ್ಮ ಮುಖ ಮುಚ್ಚಿಕೊಂಡು ಬೆರಳುಗಳ ಮೂಲಕ ನನ್ನನ್ನು ನೋಡುತ್ತಿದ್ದರು. ನನ್ನ ನಾಡಿ

ಪರೀಕ್ಷೆಗೆ ಒಳಗಾದವಳು ಒಳ್ಳೆ ಧಡೂತಿ ಹೆಂಗಸು. ಕೈ ಮುಟ್ಟಿದ ಕೂಡಲೇ ಆಕೆಯ ಮುಖ ಕೆಂಪೇರಿತು. ಬಿದ್ದುಹೋದ ಪರದೆಯನ್ನು ಮತ್ತೆ ನೇತುಹಾಕಬೇಕೆಂದು ಆಕೆ ಆಜ್ಞೆ ಮಾಡಿದಳು. ನಾನು ಆಕೆಯ ರಕ್ತ ತೆಗೆದೆ. ಇದರಿಂದ ಸಂತೋಷಪಟ್ಟು ಆಕೆ ಚಿನ್ನದ ನಾಣ್ಯಗಳನ್ನು ರಕ್ತದ ಬೋಗುಣಿಯಲ್ಲಿ ಸುರಿದಳು. ನನ್ನ ಕಡೆಯ ಮನುಷ್ಯ ಅವನ್ನು ತಡಕಿ ಹೊರಕ್ಕೆ ತೆಗೆದ.

ಅಂತಃಪುರದ ಸ್ತ್ರೀಯರನ್ನು ನೋಡಿದಾಗ ನನಗನ್ನಿಸಿತು. ಅವರೇನೂ ಕೆಲಸ ಮಾಡದವರಲ್ಲ ಎಂದು. ಕೆಲವರು ಮಾವಿನಹಣ್ಣು ಕೊಯ್ಯುತ್ತಿದ್ದರು. ಕೆಲವರು ಉಪ್ಪಿನಕಾಯಿ ಹಾಕಲು ಅದು ಇದು ಹಣ್ಣುಗಳನ್ನು ಎಚ್ಚುತ್ತಿದ್ದರು. ಮತ್ತೆ ಕೆಲವರು ಕಸೂತಿ ಹಾಕುತ್ತಿದ್ದರು. ಇವರ ಮೇಲೆ ಕಣ್ಣಿಟ್ಟು ಉಸ್ತುವಾರಿ ನೋಡಿಕೊಳ್ಳಲು ಹಲ್ಲುಬಿದ್ದ ಮುದುಕಿಯರೂ ಗಡ್ಡ ಇಲ್ಲದ ಖೋಜಾಗಳೂ ಇದ್ದರು.

ಪ್ರತಿದಿನ ನವಾಬ ನನಗೆ ಹೊಸ ಹೊಸ ಕೆಲಸ ಹೇಳುತ್ತಿದ್ದ. ಈ ಅವಕಾಶವನ್ನು ಉಪಯೋಗಿಸಿಕೊಂಡು ಬೊಂಬಾಯಿ, ಬಸ್ರೋರಾ, ಪರ್ಷಿಯಾ ಮತ್ತು ಮೋಖಾ ದೇಶಗಳೊಡನೆ ನಡೆಸಬಹುದಾದ ವ್ಯಾಪಾರವನ್ನೂ, ಅದನ್ನು ಸಾಧಿಸುವ ವಿಧಾನವನ್ನೂ ಹೇಳುತ್ತಾಬಂದೆ. ಖಾನನು ಶಿವಾಜಿಯ ಹಾವಳಿಯಿಂದಾಗಿ ವ್ಯಾಪಾರ ಸಾಧ್ಯವಾಗಲಾರ ದೆಂದೂ ಆದರೆ ಇಂಗ್ಲಿಷರ ಪ್ರೆಸಿಡೆಂಟರು ಕೇಳಿದರೆ ಕೆಲವು ಫ್ಯಾಕ್ಟ್ರೊರಿಗಳನ್ನು ಸ್ಥಾಪಿಸಲು ಅನುಮತಿ ಕೊಡುವುದಾಗಿಯೂ ತಿಳಿಸಿದ. ಅಲ್ಲದೆ ಪ್ರೆಸಿಡೆಂಟರ ಪತ್ರಕ್ಕೆ ಸೂಕ್ತ ಉತ್ತರ ಬರೆಸಿಕೊಡುವುದಾಗಿಯೂ ಹೇಳಿದ.

ರಾತ್ರಿ ವೇಳೆ ಬಿರುಗಾಳಿ ಭೋರೆಂದು ಬೀಸುತ್ತಿತ್ತು. ಮನೆಗಳ ಮೇಲ್ಛಾವಣಿ ಗಳನ್ನು ಹಾರಿಸಿ ಇಬ್ಬರು ಕಾವಲುಗಾರರನ್ನು ಬಲಿ ತೆಗೆದುಕೊಂಡಿತು. ಇದು ಮುಂಗಾರು ಮಳೆಯ ಮುನ್ಸೂಚನೆ. ಇಲ್ಲಿಗೆ ಸಮೀಪದಲ್ಲಿ ಪಾಳುಬಿದ್ದ ಒಂದು ಅರಮನೆ ಇದೆ. ಔರಂಗಜೇಬನು ತನ್ನ ತಂದೆ ರಾಜ್ಯಭಾರ ಮಾಡುತ್ತಿದ್ದ ವೇಳೆ ಫಕೀರನ ವೇಷದಲ್ಲಿ ಈ ಅರಮನೆಯಲ್ಲಿ ಇರುತ್ತಿದ್ದನಂತೆ. ಅಲ್ಲಿಗೆ ಹೋಗಿ ಅದನ್ನು ನೋಡಿಕೊಂಡು ಬಂದೆ. ಇಲ್ಲಿ ಹತ್ತಿಯನ್ನೂ ಗೋಧಿ ಮುಂತಾದ ದವಸಧಾನ್ಯಗಳನ್ನೂ ಬೆಳೆಯುತ್ತಾರೆ. ರಾತ್ರಿ ಗುಡ್ಡಗಳಿಂದ ಇಳಿದುಬಂದ ನರಿಗಳು ಇವನ್ನು ತಿಂದು ಹಾಳುಮಾಡುತ್ತವೆ.

ಮಳೆ ಶುರುವಾಯಿತು. ಗುಡುಗು, ಮಿಂಚುಗಳ ಆರ್ಭಟ ಹೆಚ್ಚಾಯಿತು. ಒಂದು ದಿನ ಗಣೇಶನ ವಿಗ್ರಹವಿದ್ದ 'ಗಣೇಶ್ ದೊಂಗರ್' ಎಂಬ ಗುಡ್ಡಕ್ಕೆ ಹೋಗಿ ಬಂದೆ. ಕಾನ್ಹೇರಿಯಲ್ಲಿ ಇದ್ದ ದೇವಸ್ಥಾನದಂತೆ ಈ ದೇವಸ್ಥಾನವನ್ನೂ ಬಂಡೆ ಕಡಿದು ಮಾಡಿದ್ದಾರೆ.

ನಾನು ಬೊಂಬಾಯಿಗೆ ಹಿಂದಿರುಗುವ ಯೋಚನೆ ಮಾಡಿದ್ದೇನೆಂದು ತಿಳಿದ ನವಾಬನು ನನ್ನನ್ನು ಒಂದು ದಿನ ಘಡಕ್ಕೆ ಕಳುಹಿಸಿಕೊಟ್ಟ. ಪಲ್ಲಕ್ಕಿಯಲ್ಲಿ ಕುಳಿತು ನಾನು ಕಡಿದಾದ ಘಡವನ್ನು ಏರಿದೆ. ಘಡದಲ್ಲಿ ಖಿಲ್ಲೇದಾರ ಇದ್ದಾನೆ. ಈತನಿಗೆ

ಫರಂಗಿಯವರೆಂದರೆ ತುಂಬ ಇಷ್ಟ. ಪರ್ಷಿಯನ್, ಅರಾಬಿಕ್ ಭಾಷೆಗಳನ್ನು ಚೆನ್ನಾಗಿ ಮಾತಾಡಬಲ್ಲ. ಈತ ನನ್ನನ್ನು ಪ್ರೀತಿ ವಿಶ್ವಾಸಗಳಿಂದ ಕಂಡು, ನೃತ್ಯ ಮುಂತಾದುವು ಗಳಿಂದ ಸಂತೋಷಗೊಳಿಸಿದ. ಬಗೆಬಗೆಯ ಭಕ್ಷ್ಯ ಭೋಜ್ಯಗಳನ್ನು ಬಡಿಸಿ ತೃಪ್ತಿ ಪಡಿಸಿದ. ಆದರೆ ಕುಡಿಯಲು ಶರಬತ್ ಮಾತ್ರ ಕೊಟ್ಟ. ಹೀಗಾಗುವುದೆಂದು ನಾನು ಮೊದಲೇ ಊಹಿಸಿ ನನ್ನ ಚರ್ಮದ ಚೀಲದಲ್ಲಿ ನೀರಿಗೆ ಬದಲು ಮದ್ಯ ತುಂಬಿಕೊಂಡು ಹೋಗಿದ್ದೆ. ಊಟ ಆದ ಮೇಲೆ ನಾನು ಖಿಲ್ಲಾದಾರನಿಗೆ ಮದ್ಯದ ಶೀಷೆಯೊಂದನ್ನು ಒಪ್ಪಿಸಿದೆ. ಆತ ನನ್ನ ಯೂರೋಪಿನ ಉಡುಪನ್ನು ನೋಡಿ ತುಂಬಾ ಮೆಚ್ಚಿಕೊಂಡು ನನ್ನ ಸೇವಕನನ್ನು ಕೇಳಿದ, ನಾನು ಉಟ್ಟಬಟ್ಟೆಯಲ್ಲಿಯೇ ಮಲಗಿಕೊಳ್ಳುತ್ತೇನೊ ಹೇಗೆ ಎಂದು. ಇವರು ಹಗಲು ಉಟ್ಟ ಬಟ್ಟೆಯಲ್ಲಿಯೇ ರಾತ್ರಿ ಮಲಗಿಕೊಳ್ಳುವ ಪದ್ಧತಿ. ತನ್ನ ಗಂಡುಮಕ್ಕಳನ್ನೆಲ್ಲಾ ಕರೆಸಿ ಅವರಿಗೆ ಇರುವ ಕಾಯಿಲೆ ಕಸಾಲೆಗಳೇನೆಂದು ವಿವರಿಸಿದ. ಆತನ ಬಳಿ ಚಿನ್ನದಿಂದ ಮಾಡಿದ ಪಾನ್ ಪೆಟ್ಟಿಗೆಗಳಿದ್ದುವು. ತನ್ನ ವಿಶ್ವಾಸ ತೋರಿಸಲು ತನ್ನ ಹೆಬ್ಬೆರಳಿನಲ್ಲಿದ್ದ ಉಂಗುರವನ್ನು (Bow-ring) ಕೊಟ್ಟು, ಗೌರವಿಸಿದ. ಇದು ಕಾಶ್ಮೀರದಲ್ಲಿ ಮಾಡಿದ ಉಂಗುರ. ಇದನ್ನು ಹಾಕಿಕೊಂಡರೆ ಸಿಡಿಲಿನ ಅಪಾಯವಿಲ್ಲ.

ನಾನು ಘಡದಲ್ಲಿ ಅಡ್ಡಾಡಿಬರಬಹುದೆಂದು ಖಿಲ್ಲಾದಾರ ತಿಳಿಸಿದ. ನಾನು ಹಾಗೆಯೇ ಮಾಡಿದೆ. ಅಡ್ಡಾಡುವಾಗ ಶಿವಾಜಿ ಹತ್ತಿಬರಲು ಪ್ರಯತ್ನ ಮಾಡಿದನೆಂಬ ಸ್ಥಳ ನೋಡಿದೆ. ತೀರ ಕಡಿದಾದ ಆ ಜಾಗದಲ್ಲಿ ಆತ ಹೇಗೆ ಹತ್ತಿಬರಲು ಪ್ರಯತ್ನಿಸಿದನೆಂದು ಆಶ್ಚರ್ಯವಾಯಿತು. ಆದರೂ ಆತನ ಕಡೆಯ ಇಬ್ಬರು ಹತ್ತಿದರಂತೆ. ಹೀಗೆ ಮಾಡುವಾಗ ಬಂಡೆಯೊಂದು ಅಕಸ್ಮಾತ್ ಉರುಳಿ ಮುಂದಿನ ಸಾಹಸಕ್ಕೆ ಅಡ್ಡಿಯುಂಟು ಮಾಡಿತು. ಕೈಗೆ ಸಿಕ್ಕಿದ ಆ ಇಬ್ಬರನ್ನು ಖಿಲ್ಲಾದಾರ ಕೆಳಗೆ ನೂಕಿಸಿ ತನ್ನ ಸೇಡು ತೀರಿಸಿಕೊಂಡ. ಕೆಳಗೆ ಬಿದ್ದರೆ ಸಾವು ಖಂಡಿತ ಎಂಬುದನ್ನು ಧೃಢಪಡಿಸಲು ಒಂದು ದೊಡ್ಡ ಕಲ್ಲನ್ನು ಕೆಳಗೆ ನೂಕಿದರು. ಅದು ಭಾರಿ ಬಿರುಸಿನಿಂದ ಉರುಳುತ್ತಾ ಗಿಡಗೆಂಡೆಗಳನ್ನು ನುಚ್ಚುನೂರು ಮಾಡಿ ಕೊನೆಗೆ ಕೆಳಗಿನ ಕಣಿವೆಯಲ್ಲಿ ಧೊಪ್ಪೆಂದು ಬಿದ್ದಿತು.

ಇಲ್ಲಿ ಎಲ್ಲೆಲ್ಲೂ ಬಂಡೆಯಲ್ಲಿ ಕೊರೆದ ಕಣಜಗಳಿರುವುದನ್ನು ಕಂಡೆ. ಮೊದಲು ಧಾರ್ಮಿಕ ಉದ್ದೇಶಕ್ಕಾಗಿ ಇವನ್ನು ನಿರ್ಮಾಣ ಮಾಡಿದರೆಂದು ಕಾಣುತ್ತೆ. ಈಗ ಇವುಗಳನ್ನು ಬೇರೆ ಉದ್ದೇಶಕ್ಕಾಗಿ ಉಪಯೋಗಿಸುತ್ತಿರುವುದರಿಂದ ಇನ್ನೂ ನಾಜೂಕಾಗಿ ಮಾಡಿದ್ದಾರೆ. ಹಲವಾರು ಟ್ಯಾಂಕ್‌ಗಳಲ್ಲಿ ನಾನೂರು ವರ್ಷದ ತುಪ್ಪ (Butter) ತುಂಬಿಟ್ಟಿದ್ದಾರೆ. ಹಳೆಯ ತುಪ್ಪ ಚಿನ್ನದಷ್ಟು ಬೆಲೆಯಾದದ್ದು ಎಂದು ಜೆಂತೈಲರು (ಹಿಂದೂಗಳು) ಭಾವಿಸುತ್ತಾರೆ.[೩] ಈ ತುಪ್ಪ ಹಳೆಯ ನೋವು (Old-aches)

೩. ಹಳೆಯ ತುಪ್ಪವನ್ನು ಈಗಲೂ ನಾಟೀವೈದ್ಯದಲ್ಲಿ ಔಷಧಿಯಾಗಿ ಉಪಯೋಗಿಸುತ್ತಾರೆ. ಫ್ರೈಯರ್ ಕಂಡ ತುಪ್ಪದ ಕಣಜಗಳ ವಿಷಯ ಹೆಳವರು ಹೇಳುವ ಕಥೆಯಲ್ಲಿಯೂ ಬರುತ್ತದೆ. ಒಬ್ಬ

ಮತ್ತು ಕಣ್ಣುನೋವುಗಳಿಗೆ ಒಳ್ಳೆಯದಂತೆ. ನನಗೋಸ್ಕರ ಒಂದು ಕಣಜ ತೆಗೆದು ಅದರಲ್ಲಿದ್ದ ದುರ್ವಾಸನೆ ಹೊಡೆಯುತ್ತಿದ್ದ ಕಪ್ಪು ಮುಲಾಮನ್ನು (Balsam) ಕೊಟ್ಟರು. ಕೆಲವು ಟ್ಯಾಂಕ್‌ಗಳಲ್ಲಿ ಅಂದರೆ ಕೊಳಗಳಲ್ಲಿ ನೀರು ನಿಂತು ಆವಸೆ ಹತ್ತಿತ್ತು; ಹಸಿರು, ಹಳದಿ ಮತ್ತು ಕೆಂಪು ಬಣ್ಣದ ಹೊಲಸು ನೀರು ನಿಂತಿತ್ತು. ಘಡದಲ್ಲಿ ಸಿಕ್ಕುವ ನೀರು ಎಷ್ಟು ಹೊಲಸಾಗಿರುತ್ತದೆ ಎಂದರೆ, ಅದರ ಹೊಲಸನ್ನು ನಿವಾರಿಸಲು ಕುಡಿಯುವಾಗ ಈರುಳ್ಳಿ ಉಪಯೋಗಿಸಬೇಕು. ನಮ್ಮಲ್ಲಿ ಅಂದರೆ ಇಂಗ್ಲೆಂಡಿನಲ್ಲಿ ಬೆಳ್ಳುಳ್ಳಿ ಹಳ್ಳಿಯುವರ (ಬಡವರ) ಅಮೃತ (treacle) ಎಂದು ಭಾವಿಸಲಾಗಿದೆ.[೪]

ಈ ಘಡದಲ್ಲಿ ಸಾವಿರ ಸಂಸಾರಗಳಿಗೆ ಏಳು ವರ್ಷಗಳ ಕಾಲ ಆಗುವಷ್ಟು ಆಹಾರದ ದಾಸ್ತಾನು ಮಾಡಲಾಗಿದೆ. ಇಪ್ಪತ್ತೆರಡು ಅಡಿ ಉದ್ದದ ಎರಡು 'ಸಾಕೆರ್' (Saker =ಸಾಕೆರ್—ಒಂದು ಬಗೆಯ ಗಿಡಗನ ಹೆಸರಿನಿಂದ ಕರೆಯಲ್ಪಟ್ಟ ಬಂದೂಕ) ಗಳನ್ನು ಬಿಟ್ಟರೆ ಬೇರೆ ಮದ್ದು ಗುಂಡುಗಳಿಲ್ಲ. ಕಲ್ಲುಗಳೇ ಇವರ ಮದ್ದು ಗುಂಡುಗಳು.

ನಾನು ಘಡದಲ್ಲಿ ನೋಡಬೇಕಾದ್ದನ್ನೆಲ್ಲಾ ನೋಡಿಕೊಂಡು ಹಿಂದಿರುಗಿದೆ. ಅಮಾವಾಸ್ಯೆಯ ದಿನ ಸಿಪಾಯಿಗಳಿಗೆಲ್ಲಾ ಸಂಬಳ. ಅವರು ತಲಬು ಪಡೆಯಲು ನವಾಬನ ಮನೆಯ ಮುಂದೆ ಸೇರಿದರು. ಇವರಿಗೆ ಸಂಬಳ ಕೊಟ್ಟು ಹದಿನಾಲ್ಕು ತಿಂಗಳುಗಳಾಗಿದ್ದುವು. ಟಾಸಿಟಸ್ (Tacitus) ಎಂಬುವನು ಹೇಳುವಂತೆ, ಸಿಪಾಯಿಗಳ ಉದ್ದೇಶ ಸಂಬಳ ಪಡೆಯುವುದು; ಹಣದ ಉದ್ದೇಶ ಸಂಬಳ. ಈ ದೇಶದಲ್ಲಿ ಸಿಪಾಯಿಗಳಿಗೆ ಸಕಾಲದಲ್ಲಿ ಸಂಬಳ ಕೊಡದೆ ಸತಾಯಿಸುತ್ತಾರೆ. ಹೀಗಾಗಿ ಸಿಪಾಯಿಗಳು ಸಾಲ ಸೋಲ ಮಾಡಿಕೊಂಡಿರುವ ಕಾರಣ ನಗದಾಗಿ ಅರ್ಧ ಸಂಬಳ ಕೊಟ್ಟರೂ ಈಸಿಕೊಳ್ಳುತ್ತಾರೆ. ಇಷ್ಟಾದರೂ ತಾವು ಯಾವ ಕಡೆ ಸೇರಿಕೊಂಡಿರುವರೋ ಆ ಪಕ್ಷ ಬಿಟ್ಟುಬರುವುದಿಲ್ಲ. ಸಂಬಳ ಸಾರಿಗೆ ಕೊಡುವುದರಲ್ಲಿ ಶಿವಾಜಿ ಅನುಸರಿಸುವ ಕ್ರಮವೇ ಬೇರೆ. ಆತ ಒಂದು ಬಗೆಯ ಕೊಳ್ಳೆಗಾರ. 'ಕೊಳ್ಳೆ ಇಲ್ಲ ಸಂಬಳವೂ ಇಲ್ಲ' ಎಂದು ಆತನ ತತ್ವ. ಆದರೆ ಕೊಳ್ಳೆ ಸುಲಭವಲ್ಲ. ಮೂರರೂ (ಮಹಮ್ಮದೀಯರು) ಆತನ ಸೈನ್ಯದಲ್ಲಿದ್ದಾರೆ. ಉಪ್ಪು ಇಟ್ಟವರಿಗೆ ಎರಡು ಬಗೆಯಬಾರದೆಂದು ಈ ಜನರು ಭಾವಿಸಿ

---

ಹೆಳವನು ಹೇಳಿದ 'ಕಲಿಯುಗದ ಆರಂಭ—ಗೌಡರ ಮೂಲ' ಎಂಬ ಕಥೆಯಲ್ಲಿ 'ಪದುಮಣ್ಣನು ತನ್ನ ಹೆಂಡತಿಯನ್ನು ಕರೆದುಕೊಂಡು ಕಲ್ಯಾಣ ಪಟ್ಟಣಕ್ಕೆ ಹೊರಟನು. ಉಳಿದ (ಅವನ) ಅಣ್ಣಗಳು ಸರೂರು ಪಟ್ಟಣವನ್ನು ಬಿಟ್ಟು ದಿಲ್ಲಿ ಪಕ್ಕ ದ್ವಾರಕಾನಗರಕ್ಕೆ ಹೋದರು...ಅಲ್ಲಿ ಅವರು ಒಂದೊಂದು ಬಣ್ಣಕ್ಕೆ ಒಂದು ಲಕ್ಷ ಗೋವನ್ನಿಟ್ಟರು. ಗೋವಿನ ತುಪ್ಪವನ್ನು ತೆಗೆದು ನೆಲದ ಹಗೇವಿನಲ್ಲಿ ಬಚ್ಚಿಟ್ಟರು ...' ಎಂಬೀ ಮಾತುಗಳು ಬರುತ್ತವೆ (ನೋಡಿ: 'ಹೆಳವರು ಮತ್ತು ಅವರ ಕಾವ್ಯಗಳು' ಎಚ್. ಎಲ್. ನಾಗೇಗೌಡ—ಪುಟ ೫೭).

೪. ಬೆಳ್ಳುಳ್ಳಿ ಬಡವರ ಕಸ್ತೂರಿ ಎಂದು ನಮ್ಮಲ್ಲಿಯೂ ಭಾವಿಸಲಾಗಿದೆ. ಇದು ವಿಷಾಪಹಾರಿ ಎಂದು ೧೫೭೮ರಲ್ಲಿ ಲೈಟ್ (Lyte) ಎಂಬುವನು ತನ್ನ 'ಹರ್ಬೆಲ್' (Herbel) ಎಂಬ ಪುಸ್ತಕದಲ್ಲಿ ಹೇಳಿದ್ದಾನೆ.

ಒಂದು ಕಡೆ ಸೈನ್ಯಕ್ಕೆ ಸೇರಿದರೆ ಬಿಟ್ಟುಹೋಗುವುದಿಲ್ಲ. ಈ ಕಾರಣ ಮೊಗಲನ ಸೈನ್ಯದಲ್ಲಿ ಹಿಂದೂಗಳೂ ಇದ್ದಾರೆ. ಅಶ್ವದಳದಲ್ಲಿ ಮುಸಲ್ಮಾನರೂ ಕಾಲ್ದಳದಲ್ಲಿ ಹಿಂದೂಗಳೂ ಹೆಚ್ಚಾಗಿ ಇರುತ್ತಾರೆ.

ಸೈನಿಕರು ಬಂದು ತಮ್ಮ ತಮ್ಮ ತುಕಡಿಯ ನಾಯಕನೊಡನೆ ನವಾಬನಿಗೆ ಸಲಾಂ ಮಾಡುತ್ತಾರೆ. ಒಟ್ಟು ಸಂಬಳವನ್ನು ನವಾಬನು ತುಕಡಿಯ ನಾಯಕನಿಗೆ ಕೊಡುತ್ತಾನೆ. ನಾಯಕ ಸಿಪಾಯಿಗಳಿಗೆ ಬಟವಾಡೆ ಮಾಡುತ್ತಾನೆ. ಈ ಮಧ್ಯೆ ಅವರಿವರು ಅಷ್ಟಿಷ್ಟು ಲಪಟಾಯಿಸುತ್ತಾರೆ. ಹೀಗಾಗಿ ಸಿಪಾಯಿಯ ಕೈಗೆ ಹೋಗುವುದರೊಳಗೆ ಅದು ಅರ್ಧ ಆಗಿಬಿಡುತ್ತದೆ. 'ರಾಜನ ಬೆಣ್ಣೆ ಅರ್ಧ ಹಾಳು' ಎಂಬ ಗಾದೆ ಮಾತು ಈ ಸಂದರ್ಭಕ್ಕೆ ಸೂಕ್ತವಾಗಿ ಒಪ್ಪುತ್ತದೆ. ಸೈನ್ಯದ ದಂಡನಾಯಕರು ತಮ್ಮ ಸಜ್ಜಾದ ಪರ್ಷಿಯನ್, ಅರಬ್ಬೀ ಮತ್ತು ತುರ್ಕಿ ಕುದುರೆಗಳ ಮೇಲೆ ಬಂದು ಸಂಬಳ ಪಡೆದು ಹೋಗುತ್ತಾರೆ.

ಮಳೆಗಾಲ ಸಮೀಪಿಸುತ್ತಾ ಬಂದ ಕಾರಣ ನಾನು ಖಾನನ ಅಪ್ಪಣೆ ಪಡೆದು ಹೊರಡಲು ಸಿದ್ಧತೆ ಮಾಡಿಕೊಂಡೆ. ಖಾನನು ತನ್ನ ಮಾನ್ಯರ ಸಭೆಯಲ್ಲಿ ನನ್ನನ್ನು ಬೀಳ್ಕೊಟ್ಟನು. ಅಲ್ಲಿ ನನಗೆ ತಿಳಿಯಿತು, ನಾನು ಅಂಬೆಗಾವ್ ತಲುಪುವವರೆಗೆ ಶಿವಾಜಿ ಕಡೆಯ ಜನ ನನ್ನನ್ನು ಹಿಂಬಾಲಿಸಿದರು ಎಂದು. ನನ್ನನ್ನು ಹಿಂದಕ್ಕೆ ಹೊತ್ತುಕೊಂಡು ಹೋಗುವ ಉದ್ದೇಶ ಅವರಿಗೆ ಇತ್ತಂತೆ. ಆದರೆ ಮೊಗಲರ ಸೈನ್ಯದ ಚಲನವಲನವಿರುವುದನ್ನು ಅರಿತ ಅವರು ಆ ಪ್ರಯತ್ನ ಕೈಬಿಟ್ಟರಂತೆ. ಈ ಕಾರಣ ನಾನು ಬೇರೆ ಮಾರ್ಗವಾಗಿ ಹಿಂದಿರುಗಬೇಕೆಂದು ನವಾಬನು ಸಲಹೆಮಾಡಿ ತನ್ನ ಗಡಿಯವರೆಗೆ ನನ್ನೊಡನೆ ತಕ್ಕ ರಕ್ಷಣಾ ತಂಡವನ್ನು ಕಳುಹಿಸುವುದಾಗಿ ತಿಳಿಸಿದ. ಪ್ರೆಸಿಡೆಂಟರಿಗೆ ಒಂದು ಪತ್ರ ಬರೆಸಿ ಅದನ್ನು ಜರತಾರಿ ಬಟ್ಟೆಯ ಚೀಲದಲ್ಲಿ ಹಾಕಿ ಮೊಹರು ಮಾಡಿಸಿ ನನ್ನ ಕೈಗೆ ಕೊಟ್ಟನು.

ನಾನು ಜೂನ್ ಒಂದನೆಯ ತಾರೀಕು ಇಲ್ಲಿಂದ ಹೊರಟು 'ನಾನಾ ಘಾಟ್' ಮುಖಾಂತರ ನನ್ನ ಮರುಪ್ರಯಾಣ ಆರಂಭಿಸಿದೆ. ಘಾಟನ್ನು ಇಳಿಯುವಾಗ ಉಪ್ಪು ಹೇರಿದ ಮುನ್ನೂರು ಎತ್ತುಗಳ ತಂಡವು ಅಡ್ಡಬಂದ ಕಾರಣ ದಾರಿ ಸಾಗಿಸುವುದು ಕೊಂಚ ನಿಧಾನವಾಯಿತು. ಉಪ್ಪನ್ನು ಘಟ್ಟದ ಮೇಲಕ್ಕೆ ಸಾಗಿಸುತ್ತಿದ್ದರು. ಒಂದು ಗಂಟೆ ಉರಿಬಿಸಿಲಿನಲ್ಲಿ ಒಣಗಿ ದಾರಿಬಿಡಿಸಿಕೊಂಡು ಹೊರಟು ಹೊತ್ತುಮುಳುಗುವ ಸಮಯಕ್ಕೆ ಮೈದಾನ ಪ್ರದೇಶವನ್ನು ಮುಟ್ಟಿದೆ. ಅಲ್ಲಿ ಕಾವಲು ಕಾಯುತ್ತಿದ್ದ ಸುಬೇದಾರನೊಬ್ಬ ನನ್ನಿಂದ ಮದ್ಯ ಈಸಿಕೊಂಡು ಕುಡಿದು ಕಾವಲು ಕೆಲಸ ಮಾಡುವ ಬದಲು ನನಗೆ ಮುಂದಿನ ದಾರಿ ತೋರಿಸಿದ.

ಈ ದಿನ ಹದಿನೈದು ದಾರಿ ನಡೆದಿರಬಹುದು. ಉದ್ದಕ್ಕೂ ಬಿಸಿಲಿನಲ್ಲಿಯೇ ದಾರಿ ಸಾಗಿಸಿದೆವು. ರಾತ್ರಿ ಒಂದು ಹಳ್ಳಿಯ ಬಳಿ ಮರದಡಿ ತಂಗಿದೆವು. ನನ್ನ ಕೂಲಿಗಳು

ಹೊಟ್ಟೆಗಿಲ್ಲದೆ ಒದ್ದಾಡುತ್ತಿದ್ದರು. ಏನಾದರೂ ಕೊಂಡುಕೊಳ್ಳಲೂ ಸಿಕ್ಕುತ್ತಿರಲಿಲ್ಲ. ಮಾರಿದರೆ ತಮಗೇನು ತೊಂದರೆಯೋ ಎಂದು ಹಳ್ಳಿ ಜನ ಹೆದರಿದ್ದರು. ಅವರಲ್ಲಿ ಯಾರ ಬಗ್ಗೆಯೂ ನಂಬಿಕೆ ಇರಲಿಲ್ಲ. ಹೊಸಬರನ್ನು ಕಂಡರೆ ಓಡಿಹೋಗಿ ಕಾಡುಗುಡ್ಡಗಳಲ್ಲಿ ಸೇರಿಕೊಳ್ಳುತ್ತಾರೆ. ಕಟ್ಟಿಹಾಕಿದ್ದ ನನ್ನ ಕುದುರೆ ಅಕಸ್ಮಾತ್ ಬಿಚ್ಚಿಕೊಂಡು ಗ್ರಾಮದಲ್ಲಿ ಅಡ್ಡಾಡಿದ್ದೇ ಸಾಕಾಗಿತ್ತು, ಔರಂಗಜೇಬನ 'ಲಷ್ಕರಿ' ಬಂದುಬಿಟ್ಟಿದೆ ಎಂದು ಜನರಿಗೆ ಭಯ ಹುಟ್ಟಿಸಲು. ಪಾಪ, ಈ ಬಡಪಾಯಿ ಜನ ಹೀಗೆ ಕಾಲ ಹಾಕುತ್ತಿದ್ದಾರೆ.

ಮಾರನೆಯ ಮಧ್ಯಾಹ್ನ ಹನ್ನೆರಡು ಗಂಟೆಗೆ ಪ್ರಯಾಣ ಹೊರಟು ಮೂರ್ರಾಪದಿಗೆ ಬಂದು ನಮ್ಮ ಹಳೆಯ ದಾರಿ ಹಿಡಿದೆವು. ಇಲ್ಲಿಯೇ ನಾವು ಬರುವಾಗ ದಾರಿ ತಪ್ಪಿದ್ದು. ರಾತ್ರಿಯಾಗುತ್ತಲೇ ಮಿಣುಕುಹುಳುಗಳು ಕಾಣಿಸಿಕೊಂಡುವು. ಮರಗಳನ್ನು ಮುತ್ತಿಕೊಂಡ ಅವನ್ನು ನನ್ನ ಕೂಲಿಗಳು ಬೆಂಕಿ (ಕೊಳ್ಳಿದೆವ್ವ?) ಎಂದು ಭಾವಿಸಿ ಹೆದರಿಹೋದರು. ನಾನು ನನ್ನ ಕತ್ತಿಯಿಂದ ಒಂದೆರಡು ಗಿಡ ಕತ್ತರಿಸಿ ಅವು ದೆವ್ವ ಅಲ್ಲ ಎಂದು ಅವರಿಗೆ ಮನದಟ್ಟು ಮಾಡಿಕೊಡಬೇಕಾಯಿತು. ಏಳು ದಾರಿ ನಡೆದು ಬರವಿ ಎಂಬ ದೊಡ್ಡ ಹಳ್ಳಿಗೆ ಬಂದೆವು. 'ಕುನ್ಬಿ' ಜನ ಇರುವ ಊರು ಇದು.

ಇವರ ದನಕರುಗಳಿಗೆ ಕಾಡು ಮೃಗಗಳ ಕಾಟ ವಿಪರೀತ. ಹಿಂದಿನ ದಿನ ಕಾಡು ಪ್ರಾಣಿಯೊಂದು ಊರಿಗೆ ನುಗ್ಗಿ ಒಂದು ಎಮ್ಮೆ ಕರುವನ್ನು ನಾನಿಳಿದುಕೊಂಡಿದ್ದ ಮನೆಯಿಂದ ಎತ್ತಿಕೊಂಡು ಹೋಯಿತಂತೆ. ಇಡೀ ರಾತ್ರಿಯೆಲ್ಲಾ ಬೆಂಕಿ ಹಾಕಿಕೊಂಡಿರಬೇಕೆಂದು ಎಚ್ಚರಿಕೆ ನೀಡಿದರು. ಇಲ್ಲದಿದ್ದರೆ ನನ್ನ ಕುದುರೆ ಮತ್ತು ಎತ್ತುಗಳೂ ಕಾಡು ಪ್ರಾಣಿಗಳ ಪಾಲಾಗಿಬಿಡುತ್ತವೆ ಎಂದರು. ನಾನು ಬೆಂಕಿ ಹಾಕಿಸಿ ಸರದಿಯ ಮೇಲೆ ಕಾವಲು ಕಾಯಲು ಕೂಲಿಗಳಿಗೆ ಹೇಳಿದೆ. ಅವರು ರಾತ್ರಿಯೆಲ್ಲಾ ಕೂಗುತ್ತಾ ಕಾವಲು ಕಾದರು. ಹುಲಿ, ತೋಳ ಮತ್ತು ನರಿಗಳು ಕೂಗಿಕೊಳ್ಳುತ್ತಲೇ ಇದ್ದುವು.

ಕೋಳಿ ಕೂಗಿದ ಕೂಡಲೇ ಮುಂದೆ ಹೊರಟೆವು. ಬೆಳಕಿನಲ್ಲಿ ಕುನ್ಬಿ ಜನರ ಮನೆಗಳನ್ನು ನೋಡಿದಾಗ ಅವು ಸಣ್ಣ ಗುಡಿಸಲುಗಳೆಂಬುದು ಕಂಡಿತು. 'ತೇಕ' (Teke=ತೇಗ) ಮರದ ಅಗಲವಾದ ಎಲೆಗಳನ್ನು ಅವಕ್ಕೆ ಹೊದಿಸಿದ್ದರು—ಜೇನು ಗೂಡಿನಂತೆ.

ಏಳು ಗಂಟೆಯ ಹೊತ್ತಿಗೆ ಒಂದು ಹಳ್ಳದ ಬಳಿಗೆ ಬಂದೆವು. ಮಳೆಯ ನೀರಿನಿಂದ ಹಳ್ಳ ತುಂಬಿ ಹರಿಯುತ್ತಿತ್ತು. ಅದು ಇಳಿಯುವವರೆಗೂ ಕಾದು ಅದನ್ನು ದಾಟಿ ಹನ್ನೊಂದು ಗಂಟೆಗೆ ಕಲ್ಯಾಣಕ್ಕೆ ಬಂದೆವು.

ಕುನ್ಬಿಗಳು ಕಾಡು ನಿವಾಸಿಗಳು. ಅವರ ಕಷ್ಟದ ಬಾಳನ್ನು ಕಂಡು ನನ್ನ ಕೂಲಿಗಳಿಗೆ ತಮ್ಮ ಬಾಳು ಎಷ್ಟೋ ಸುಖ ಅನ್ನಿಸಿತು. ಇಂಗ್ಲಿಷ್ ಸರ್ಕಾರದ ಆಶ್ರಯದಲ್ಲಿ ಇರುವುದು ಎಷ್ಟೋ ಮೇಲು ಎಂದು ಅವರು ತಮ್ಮ ಪ್ರಯಾಣದ ವೇಳೆ ಅಂದುಕೊಳ್ಳು

ತ್ತಿದ್ದರು. ಕುನ್ಬಿಗಳ ಕಷ್ಟ ಏನೆಂದು ಹೇಳೋಣ. ಭೂಮಿಯನ್ನು ಉಳುವುದಕ್ಕೆ ಧೈರ್ಯ ಬಾರದು. ಉತ್ತು ಬೆಳೆದದ್ದು ಅವರ ಕೈ ಸೇರುವುದಿಲ್ಲ. ಮನೆಯಲ್ಲೂ ಇರುವಂತಿಲ್ಲ. ಕಾಡುಮೇಡುಗಳಲ್ಲಿ ಅವಿತುಕೊಂಡು ಕಾಲ ಹಾಕಬೇಕು. ಏಕೆಂದರೆ, ದಿನಬೆಳಗೆದ್ದರೆ ಕೊಳ್ಳೆಯ ಹಾವಳಿ!

ನಾನು ಹಿಂದೆ ತಂಗಿದ್ದ ಸ್ಥಳದಲ್ಲಿ ಈಗಲೂ ತಂಗಿದೆ. ಇಲ್ಲಿಯ ಸುಬೇದಾರನಿಗೆ ಹೇಳಿ ಕಳುಹಿಸಿ ಒಂದು ದೋಣಿ ಬೇಕೆಂದು ತಿಳಿಸಿದೆ. ಮಳೆಗಾಲ ಸಮೀಪಿಸುತ್ತಿರು ವುದರಿಂದ ದೋಣಿಗಳನ್ನೆಲ್ಲಾ ದಡಕ್ಕೆ ತಂದು ಕಟ್ಟಿಹಾಕಿಬಿಟ್ಟಿದ್ದರು. ಈ ಕಾರಣ ಅವು ಸಿಕ್ಕುವುದು ಕಷ್ಟ ಎಂದು ತಿಳಿದುಬಂತು. ಕೊನೆಗೆ ಒಬ್ಬನಿಂದ ಬಲಾತ್ಕಾರವಾಗಿ ಒಂದು ದೋಣಿ ಕಿತ್ತುಕೊಂಡು ನನಗೆ ಕೊಟ್ಟರು. ಆದರೆ ರಾತ್ರಿಯೆಲ್ಲಾ ನಿದ್ದೆಯೇ ಬರಲಿಲ್ಲ. ಕಾರಣ ಕಪ್ಪೆಗಳ ವಟ ವಟ ಶಬ್ದ. ಆ ರಾತ್ರಿ ಬಿದ್ದ ಮೊದಲ ಮಳೆಯ ಕಾರಣ ಅವು ಕಿವಿ ಕಿವುಡಾಗುವಂತೆ ಅರಚುತ್ತಿದ್ದುವು. ಬೆಳಗ್ಗೆ ಎದ್ದು ಆ ದಪ್ಪ ದಪ್ಪ ಕಪ್ಪೆಗಳನ್ನು ನೋಡಿ ನನಗೆ ಆಶ್ಚರ್ಯವಾಯಿತು. ಎಲ್ಲಿಯೋ ಅಡಗಿಕೊಂಡಿರುವ ಕಪ್ಪೆಗಳು ಮೊದಲ ಮಳೆ ಬಿದ್ದಾಗ ಹೊರಗೆ ಬಂದು ತಮ್ಮ ಗಾನ ಆರಂಭಿಬಿಸಿಡುತ್ತವೆ. ಪ್ಲಿನಿ (Pliny) ಎಂಬುವನು ಹೇಳಿರುವ ಮಾತು ಸತ್ಯ ಎನಿಸಿತು ನನಗೆ.

ನಾನು ಒಬ್ಬ ಹಿಂದೂವಿನಿಂದ ಬಾಡಿಗೆ ಪಡೆದಿದ್ದ ಎತ್ತನ್ನು ಇಲ್ಲಿ ಬಿಟ್ಟು, ಇಲ್ಲಿಗೆ ಬಂದ ಬೊಂಬಾಯಿ ದೋಣಿಯೊಂದರಲ್ಲಿ ಕುಳಿತು ಮೇ ೨೭ ರಂದು ಥಾಣಾಕ್ಕೆ ಬಂದು, ಮಾರನೆಯ ದಿನ ಬೆಳಗ್ಗೆ ಮೂರು ಗಂಟೆಗೆ ಬೊಂಬಾಯಿ ಬಂದರು ತಲುಪಿದೆ. ಖಾನನಿಂದ ತಂದಿದ್ದ ಪತ್ರವನ್ನು ಪ್ರೆಸಿಡೆಂಟರಿಗೆ ತಲುಪಿಸಿದೆ.

## ನಾಲ್ಕನೆಯ ಪತ್ರ

ನಾನು ಬರೆದ ಪತ್ರಗಳಿಗೆ ತಮ್ಮಿಂದ ಉತ್ತರ ಬರುವವರೆಗೂ ನನ್ನ ಮನಸ್ಸಿಗೆ ಸಮಾಧಾನವೇ ಇರಲಿಲ್ಲ. ಅವುಗಳ ಬಗ್ಗೆ ಏನು ಹೇಳುತ್ತೀರೋ ಎಂಬ ಕುತೂಹಲ ಇತ್ತು. ಈಗ ತಮ್ಮ ಉತ್ತರ ಬಂದ ಮೇಲೆ ನನಗೆ ಸಮಾಧಾನವಾಗಿದೆ. ಆ ನೆಮ್ಮದಿ ಯಿಂದ ಈ ಪತ್ರ ಬರೆಯುತ್ತಿದ್ದೇನೆ.

ಇಂಗ್ಲಿಷರಿಗೂ ಡಚ್ಚರಿಗೂ ಶಾಂತಿ ಏರ್ಪಟ್ಟನಂತರ ಬೊಂಬಾಯಿಯಲ್ಲಿ ತನಗೇನೂ ಕೆಲಸ ಇಲ್ಲವೆಂದು ಪ್ರೆಸಿಡೆಂಟರು ಸೂರತ್ತಿಗೆ ಹೊರಟುಹೋದರು. ಅವರ ಸ್ಥಾನದಲ್ಲಿ ಮಿಸ್ಟರ್ ಫಿಲ್ಲಿಪ್ ಗಿಫರ್ಡ್ ಎಂಬುವರನ್ನು ನೇಮಿಸಿದ್ದಾರೆ.

ಕೆಲವು ಕಾಲದನಂತರ ನನಗೆ ಗೋವಾ ನೋಡುವ ಕುತೂಹಲವುಂಟಾಯಿತು. ಕಾರವಾರದ ಮುಖ್ಯಸ್ಥನೊಡನೆ ಅಲ್ಲಿಗೆ ಹೊರಟೆ. ದಾರಿಯಲ್ಲಿ ದಂಡಾ ರಾಜಾಪುರಕ್ಕೆ ದಕ್ಷಿಣದಲ್ಲಿರುವ ಸೆರಪಟನ್ (ಶ್ರೀವರ್ಧನ) ಎಂಬಲ್ಲಿ ಶಿವಾಜಿಗೆ ಸೇರಿದ ಬಲವಾದ

ದುರ್ಗವನ್ನು ಕಾಯುತ್ತಾ ಮೂವತ್ತು ಸಣ್ಣ ಹಡಗುಗಳು ಮತ್ತು ದೋಣಿಗಳು ಇದ್ದುದನ್ನು ಕಂಡೆವು. ಈ ನೌಕಾಪಡೆಯ ಅಧಿಪತಿ ತನ್ನ ಬಿಳಿಯ ಬಾವುಟ ಹಾರಿಸಿದ್ದ.

ಕಾರವಾರ ತಲುಪಿದ ಮೇಲೆ ಮುಖ್ಯಸ್ಥನು ತೀರಕ್ಕೆ ಹೋದನು. ಅವನನ್ನು ನದಿಯ ಮೇಲೆ ಅಲ್ಲಿಯ 'ಗೌರ್ನರ್' ತನ್ನ ಎರಡು ದೋಣಿಗಳ ಸಮೇತ ಎದುರುಗೊಂಡ. ಭೂಮಿಯ ಮೇಲೆ ಕಾಲಿಟ್ಟಾಗ ಇಂಗ್ಲಿಷ್ ಮನೆಯಿಂದ ಕುಶಾಲುತೋಪುಗಳು ಹಾರಿದುವು.

ಹಾಳಾಗಿ ಉಳಿದಿರುವ ಕಾರವಾರವನ್ನು ಈಗ ಶಿವಾಜಿ ಗೆದ್ದುಕೊಂಡಿದ್ದಾನೆ. ಇದಾದ ಮೇಲೆ ಅಂಕೋಲಾ, ಫೊಂಡಾ, ಕಾದ್ರಾ, ಶಿವೇಶರ (ಹಳೇಕೋಟೆ) ಇವುಗಳನ್ನು ಪಡೆದುಕೊಂಡಿದ್ದಾನೆ. ಶಿವಾಜಿ ಈ ಊರಿನ ಮೇಲೆ ಧಾಳಿ ಮಾಡಿದಾಗ ಇಂಗ್ಲಿಷರು ತಮ್ಮ ರಕ್ಷಣೆಗಾಗಿ ಒಂದು ಮನೆ ಕಟ್ಟುತ್ತಿದ್ದರು. ಧಾಳಿಯಲ್ಲಿ ಊರೆಲ್ಲಾ ಸುಟ್ಟು ಬೂದಿಯಾದರೂ ತಮ್ಮ ಮನೆ ಉಳಿಸಿಕೊಂಡರು. ಊರ ಜನರೆಲ್ಲ ಗುಡ್ಡಗಾಡಿಗೆ ಓಡಿಹೋದರು. ಹೀಗೆ ಊರುಗಳು ಕೈಬದಲಾವಣೆ ಆಗುತ್ತಲೇ ಇರುತ್ತವೆ. ಸ್ಥಿರವಾದ ಆಡಳಿತ ಇಲ್ಲ.೧

ನಮ್ಮ ಮನೆ (ಇಂಗ್ಲಿಷರ ಮನೆ) ನದಿಯ ದಡದಲ್ಲಿ ಒಂದು ದಿಣ್ಣೆಯ ಮೇಲೆ ಇದೆ. ಮನೆಯಿಂದ ನೋಡಿದರೆ ಎದುರಿಗೆ ಹಕ್ಕಿ ಪಕ್ಷಿಗಳಿರುವ ಒಂದು ಸುಂದರವಾದ ದ್ವೀಪ ಕಾಣಿಸುತ್ತದೆ. ಅದು ಊರಿನ ದುರ್ಗ. ಗುಡ್ಡಗಳಿಗೆ ಹತ್ತಿರವಾಗಿ ನದಿಯ ಮೇಲ್ಭಾಗದಲ್ಲಿದೆ.

ಶಿವಾಜಿಯು ಮೂರರಂತೆ ತನ್ನ ರಾಜ್ಯಭಾರದ ವ್ಯವಸ್ಥೆ ಮಾಡಿದ್ದಾನೆ. ಕೋಟೆ ಮತ್ತು ಪೇಟೆಗಳಿಗೆ ಬೇರೆ ಬೇರೆ ಗೌರ್ನರುಗಳನ್ನು ನೇಮಿಸಿ ಅವರ ಮೇಲೆ ಆಳಿದಾಡುವ ಸೈನ್ಯ ಪಡೆಯ ನಾಯಕನನ್ನು ನೇಮಿಸಿದ್ದಾನೆ. ನಂಬಿಕೆ ಹಾಗೂ ಜವಾಬ್ದಾರಿಯ ಸ್ಥಾನಗಳಿಗೆ ಬ್ರಾಹ್ಮಣರನ್ನು ಮಾತ್ರ ನೇಮಿಸುತ್ತಾನೆ. ಅವರನ್ನು ಬಿಟ್ಟರೆ ವೈದ್ಯವೃತ್ತಿ ನಡೆಸುವ 'ಪಂಡಿತ'ರನ್ನು ನೇಮಿಸುತ್ತಾನೆ. ಇವರಲ್ಲದೆ 'ಫೌಜುದಾರ್', 'ಸುಬೇದಾರ್', 'ಹವಾಲ್ದಾರ್' ಮುಂತಾದ ನಾಗರಿಕ ಅಧಿಕಾರಿಗಳೂ ಸೈನ್ಯಾಧಿಕಾರಿಗಳೂ ಇದ್ದಾರೆ. ಇವರಿಂದ ದೇಶಕ್ಕೆ ಯಾವ ಲಾಭವೂ ಇಲ್ಲ. ನಂಬಿಕೆಗೆ ಅರ್ಹರೂ ಅಲ್ಲ. ಇವರು ಸ್ವಹಿತ ಚಿಂತಕರು. ತಮ್ಮ ಸರಕು ಮಾರಾಟವಾದರೆ ಸಾಕು, ಯಾವ ಮಟ್ಟಕ್ಕಾದರೂ ಇಳಿಯಬಲ್ಲರು. ತಮ್ಮಲ್ಲಿ ವ್ಯಾಪಾರ ಮಾಡಲು ವರ್ತಕರನ್ನು ಆಹ್ವಾನಿಸಿ ಆಮೇಲೆ ಅವರನ್ನು ಸುಲಿಗೆ ಮಾಡುತ್ತಾರೆ; ಇಲ್ಲವೇ ದುಬಾರಿ ಸುಂಕ ಹೇರುತ್ತಾರೆ. ತಮ್ಮ ಒಡೆಯನಿಗೆ ಸಲ್ಲಬೇಕಾದ್ದನ್ನು ಸಲ್ಲಿಸದೆ ತಾವೇ ಲಪಟಾಯಿಸುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ವ್ಯಾಪಾರ ಸ್ಥಿಮಿತಗೊಳ್ಳುವುದು ಅಸಂಭವ. ಸಮುದ್ರತೀರದ ಪ್ರದೇಶ

---

೧. ಫ್ರೈಯರ್ ಹೇಳಿರುವ ಧಾಳಿ ನಡೆದುದು ೧೬೬೫ರಲ್ಲಿ. ಆಗ ಶಿವಾಜಿಗೆ ಇಂಗ್ಲಿಷರು ೧೧೨೦ ರೂಪಾಯಿ ಹಣ ತೆತ್ತರು.

ವೆಲ್ಲ ಶಿವಾಜಿಗೆ ಸೇರಿದ್ದರೂ, ಅವನ ಅನುಮತಿಯಿಲ್ಲದೆ ಏನೂ ಹೊರಗೆ ಹೋಗಲು ಸಾಧ್ಯವಿಲ್ಲದಿದ್ದರೂ ಇಷ್ಟೆಲ್ಲಾ ಕಾರುಬಾರು ನಡೆಯುತ್ತಿರುತ್ತದೆ.

ಶಿವಾಜಿಯು ದೌರ್ಜನ್ಯದ ಆಡಳಿತದ ನೋವನ್ನು ಜನರು ಅನಿವಾರ್ಯವಾಗಿ ಅನುಭವಿಸುತ್ತಿದ್ದಾರೆ. 'ದೇಸಾಯಿ'ಗಳ ಭೂಮಿಯ ಮೇಲೆ ಒತ್ತಾಯವಾಗಿ ಒಂದಕ್ಕೆರಡು ಬೆಲೆ ಹೇರಲಾಗುತ್ತಿದೆ. ಅವರು ಹಣವಂತರಾಗಿಯೂ ಇದಕ್ಕೆ ಒಪ್ಪದಿದ್ದರೆ ಅವರನ್ನೆಲ್ಲ ಸೆರೆಮನೆಗೆ ಹಾಕಿ ಅನ್ನ ಕೊಡದೆ ಸಾಯಿಸಲಾಗುವುದು. ತಮ್ಮ ಹಣ ಎಲ್ಲಿ ಬಚ್ಚಿಟ್ಟಿದ್ದಾರೆಂದು ಹೇಳುವವರೆಗೂ ಅವರಿಗೆ ಚಿತ್ರಹಿಂಸೆ. ಕಾದ ಕಬ್ಬಿಣದಿಂದ ಇರಿಸಿಕೊಂಡು ಮೈ ಕೈಗೆ ಬರೆಹಾಕಿಸಿಕೊಂಡ ಬ್ರಾಹ್ಮಣರನ್ನು ಈಗಲೂ ಸೆರೆಮನೆಯಲ್ಲಿ ನೋಡಬಹುದು. ಬ್ರಾಹ್ಮಣರನ್ನು ಪೀಡಿಸುವುದು ಅಪರಾಧವಾಗಿದ್ದರೂ ಅವರಿಗೆ ಈ ಶಿಕ್ಷೆ ವಿಧಿಸಲಾಗುತ್ತಿದೆ. ಇದು ಇಡೀ ಇಂಡಿಯಾದಲ್ಲಿ ಇರುವ ವಿಧಾನ. ರಾಜರು ನವಾಬರನ್ನು ವಜಾ ಮಾಡಿದಾಗಲೂ ಅವರು ದುರ್ಮಾರ್ಗದಿಂದ ಪಡೆದ ಆಸ್ತಿಪಾಸ್ತಿಯನ್ನು ಕಿತ್ತುಕೊಳ್ಳಲು ಇದೇ ಮಾರ್ಗ ಅನುಸರಿಸುತ್ತಾರೆ. ಹಾಗೆ ಮಾಡಿ ಮತ್ತೆ ಅವನನ್ನೇ ನೇಮಕ ಮಾಡಿದರೂ ಮಾಡಬಹುದು. ದೇಸಾಯಿಗಳೂ ತಮ್ಮ ಭೂಮಿ ಗೇಯುವ ಕುನ್ಬಿಗಳ ಬಗ್ಗೆಯೂ ಇದೇ ಮಾರ್ಗ ಅನುಸರಿಸುತ್ತಾರೆ. ಒಟ್ಟಿನಲ್ಲಿ, ದೊಡ್ಡ ಮೀನು ಸಣ್ಣ ಮೀನನ್ನು ನುಂಗುತ್ತದೆ. ಇದರಿಂದ ಅವರೂ ಅವರ ಸಂಸಾರವೂ ಶಾಶ್ವತವಾದ ಜೀತದಲ್ಲಿ ಕಾಲಹಾಕುತ್ತಾರೆ.

ಆದರೆ ಬಿಜಾಪುರದ ರಾಜನು ವಿಧಿಸುತ್ತಿದ್ದ ಕಂದಾಯ ಕವಳಿಗೆಗಳು ಇಷ್ಟು ಕ್ರೂರವಾಗಿರಲಿಲ್ಲ. ಜನರು ಹೆಚ್ಚು ನೆಮ್ಮದಿಯಿಂದ ಬಾಳುತ್ತಿದ್ದರು. ಆದರೆ ಹಿಂದಿನ ರಾಜ ಕಾಲವಾದ ಮೇಲೆ ಪ್ರಾಪ್ತವಯಸ್ಕನಲ್ಲದ ಅವನ ಮಗನ ರಕ್ಷಣೆಯನ್ನು ಒಬ್ಬನಿಗೆ ವಹಿಸಿದ ಮೇಲೆ ನವಾಬರು ತಮಗೆ ತಿಳಿದಂತೆ ವರ್ತಿಸಲಾರಂಭಿಸಿದ್ದಾರೆ. ರಕ್ಷಕನ ದಳಪತಿಯಾಗಿದ್ದ ಬಹ್ಲೋಲ್‌ಖಾನ್ ಎಂಬುವನು ಈಚೆಗೆ ಅವನ ಮೇಲೆಯೇ ಬಿದ್ದು ಅವನನ್ನು ಕೊಲೆಮಾಡಿದ್ದಾನೆ. ಈತ ಶಿವಾಜಿಯು ಕಡೆಯುವರಿಗೆ ಸಿಂಹಸ್ವಪ್ನವಾಗಿದ್ದಾನೆ. ಇನ್ನೂ ಏನೇನೋ ಅನಾಹುತಗಳು ಆಗಬಹುದು. ಶಿವಾಜಿ ಮತ್ತು ಮೊಗಲ್— ಇವರಿಬ್ಬರೂ ವಿಜಾಪುರ ರಾಜ್ಯವನ್ನು ಕಬಳಿಸುವ ಯತ್ನದಲ್ಲಿದ್ದಾರೆ. ಬಹ್ಲೋಲ್ ಖಾನನು ಪಠಾಣ. ಅವನ ಹೆಸರು ಕೇಳಿದರೆ ಡೆಕ್ಕನ್ ರಾಜರು ಹೆದರಿ ನಡುಗುತ್ತಾರೆ. ಅಷ್ಟು ಕ್ರೂರಿ ಅವನು.

ಇದರಿಂದಾಗಿ ಜನಗಳು ಎಂಥ ಕಷ್ಟ ಅನುಭವಿಸುತ್ತಾರೆ ಎಂಬುದಕ್ಕೆ ಒಂದೇ ಒಂದು ಉದಾಹರಣೆ ಕೊಡುತ್ತೇನೆ. ನಾನು ಗೋವಾಕ್ಕೆ ಹೊರಡುವ ಹಿಂದಿನ ದಿನ ಬೆಳಗ್ಗೆ ದಳವಾಯಿ ತನ್ನ ೨೦೦೦ ಜನರ ಸೈನ್ಯ ಸಮೇತ ಬಂದು ಊರಿನ ಮೇಲೆ ಧಾಳಿ ಮಾಡಿದ. ಶಿವಾಜಿಯು ೧೦೦ ಜನ ಕಾಲ್ದಳ ಮತ್ತು ೨೫ ರಾವುತರು ಕೋಟೆ ಸೇರಿಕೊಂಡರು. ಈ ಸೈನಿಕರನ್ನು ಸೈನಿಕರೆಂದು ಕರೆಯಲು ನಾಚಿಕೆಯಾಗುತ್ತದೆ. ಅವರು ನಮ್ಮ

13

ಪುರಾತನ ಬ್ರಿಟನ್ನಿನವರಂತೆ ಅರೆನಗ್ನಾವಸ್ಥೆಯಲ್ಲಿದ್ದ ಜನರಂತೆ ಕಂಡರು. ವಾದ್ಯಗಳ ಭಾರಿ ಘೋಷದೊಡನೆ ನಮ್ಮ ಮನೆಯ ಬಳಿಗೆ ಬಂದು ಬೀಡುಬಿಟ್ಟರು. ಜನರ ನೂಕು ನುಗ್ಗಲು ಅಸಾಧ್ಯವಾಗಿತ್ತು. ದಳವಾಯಿ ಹುಟ್ಟಿನಲ್ಲಿ ಹಿಂದು, ಕಸುಬಿನಲ್ಲಿ ಸಿಪಾಯಿ. ಅವನ ಗುರಿ ಒಂದೇ ಒಂದು : ಯಾರು ಕೈತುಂಬ ಕೊಡುವರೋ ಅವರ ಸೇವೆ.

ಮಧ್ಯಾಹ್ನದ ಹೊತ್ತಿಗೆ ಊರಿನ ಗಂಡಸರು ಹೆಂಗಸರು ಮಕ್ಕಳೆಲ್ಲಾ ಇದ್ದು ಬಿದ್ದುದನ್ನು ಕಟ್ಟಿಕೊಂಡು ಊರಿನಿಂದ ಪರಾರಿಯಾಗಲಾರಂಭಿಸಿದರು. ಶಿವಾಜಿಯ ಸೈನ್ಯ ಊರ ಕಡೆ ಬರುತ್ತಿದೆಯೆಂದು ನಮಗೆ ಗೊತ್ತಾಯಿತು. ಬೇರೆ ಸೈನ್ಯಕ್ಕಿಂತ ಶಿವಾಜಿಯ ಸೈನ್ಯಕ್ಕೆ ಜನ ತುಂಬಾ ಹೆದರಿಕೊಳ್ಳುತ್ತಾರೆ. ಆದರೆ ದೇಸಾಯಿಯ ಒಂದು ತುಕಡಿ ಸೈನ್ಯ ಬರುತ್ತಿದೆಯೆಂದು ಕೇಳಿ ದಳವಾಯಿಯ ಸೈನ್ಯ ಹಿಂದಕ್ಕೆ ಕಾಲ್ತೆಗೆಯಿತು. ಈ ದೇಸಾಯಿ ವಿಜಾಪುರದ ರಾಜನಿಗೆ ಅಧೀನನಾಗಿದ್ದು, ಈ ಪ್ರದೇಶದ ಕಂದಾಯ ಕವಳಿಗೆಗಳನ್ನು ವಸೂಲುಮಾಡಿಕೊಡುತ್ತಿದ್ದ. ಆದರೆ ಈಚೆಗೆ ಶಿವಾಜಿಯ ತಂತ್ರಗಳಿಗೆ ಒಳಗಾಗಿ ಅವನ ಕಡೆ ಸೇರಿದ್ದಾನೆ. ಇವನ ಅಧೀನದಲ್ಲಿ ಸಾವಿರ ಸೈನ್ಯ ಇದೆ. ರಾತ್ರಿ ನಮಗೆ ಪತ್ರಗಳು ಬಂದುವು. ನಮಗೆ ಇಬ್ಬರೂ 'ಸಲಾಮ್' ಹಾಕುತ್ತಾರೆ. ನಾನಿರುವ ಮನೆ ಸುಭದ್ರವಾಗಿದೆ. ಇಲ್ಲದಿದ್ದರೆ ನಾವು ಇಬ್ಬರ ಕ್ರೌರ್ಯಕ್ಕೂ ಒಳಗಾಗಬೇಕಾಗುವುದು. ದಳವಾಯಿಯ ಸೈನ್ಯ ನದಿ ದಾಟಿ ಹೊರಟುಹೋಗುತ್ತಿರುವಾಗ ಶಿವಾಜಿಯ ಸೈನ್ಯವು ೬೦ ಜನರ ರಕ್ಷಣೆಯಲ್ಲಿ ಹಿಂದೆ ಬಿಟ್ಟುಹೋದ ದಳವಾಯಿಯ ಸಾಮಾನು ಸರಂಜಾಮುಗಳನ್ನು ಕೊಳ್ಳೆಹೊಡೆದರು. ಕೊಳ್ಳೆಹೊಡೆದ ಸಾಮಾನು ಸರಂಜಾಮುಗಳನ್ನೂ ಆ ೬೦ ಜನ ಸೈನಿಕರನ್ನೂ ಕೋಟೆಗೆ ತೆಗೆದುಕೊಂಡುಹೋದರು. ಕಾದಾಟದಲ್ಲಿ ಎರಡು ಕುದುರೆಗಳನ್ನೂ ಒಬ್ಬ ರಾವುತನನ್ನೂ ಕೊಂದುಹಾಕಿದರು. ಈ ಬಗೆಯ ಸ್ಥಿತಿಯಲ್ಲಿ ಜನಸಾಮಾನ್ಯರು ಒದ್ದಾಡುತ್ತಿದ್ದಾರೆ. ವಿಜಾಪುರದಿಂದ ಯಾವ ಸಹಾಯವೂ ಬರುವುದಿಲ್ಲ ಎಂದು ನಿರಾಶರಾಗಿದ್ದಾರೆ.

ಮಾರನೆಯ ದಿನ ೧೬ ಹುಟ್ಟುಗಳ ದೋಣಿಯಲ್ಲಿ ನಾವು ಗೋವಾಕ್ಕೆ ಹೊರಟೆವು. ನಮ್ಮ ದೋಣಿಯಲ್ಲಿ ಏಳು ಜನ ಫ್ರೆಂಚ್‌ಗಳೂ, ಇಬ್ಬರು ಇಂಗ್ಲಿಷ್ ಸಿಪಾಯಿಗಳೂ, ಇಬ್ಬರು ದಳ್ಳಾಳಿಗಳೂ, ನಾನೂ ಇದ್ದೆವು. ಸಾಕಷ್ಟು ಮದ್ದು ಗುಂಡುಗಳನ್ನು ದೋಣಿಯಲ್ಲಿ ಇಟ್ಟುಕೊಂಡಿದ್ದೆವು. ನದಿಯ ಮೇಲೆ ಹೆಚ್ಚು ದೂರ ಹೋಗಿಲ್ಲ, ಆಗ ಶಿವಾಜಿಯ ಸೈನ್ಯವನ್ನು ಬಲಪಡಿಸಲು ಎರಡು ದೋಣಿಗಳ ತುಂಬ ಜನ ಬರುತ್ತಿದ್ದುದನ್ನು ನೋಡಿದೆವು. ಸೂರ್ಯ ಮುಳುಗುವ ಹೊತ್ತಿಗೆ ಒಂದು ಸಿಂಪಿ (Oyster)[೨] ದ್ವೀಪವೊಂದನ್ನು ತಲುಪಿ ಅಲ್ಲಿ ಇಳಿದೆವು. ಚಳಿಗಾಲವಾದ್ದರಿಂದ ಸಿಂಪಿಗಳಿಗೆ ಬರ

೨. ಇದು ಕಾರವಾರದಿಂದ ಎರಡು ಮೈಲಿ ದೂರದಲ್ಲಿರುವ 'ದೇವಘಡ' ಎಂಬ ದ್ವೀಪಸ್ತೋಮ.

ಇರಲಿಲ್ಲ. ಹುಟ್ಟುಹಾಕುತ್ತಿದ್ದ ನಮ್ಮ ಜನ ನೀರಿನಲ್ಲಿ ಒಂಬತ್ತು–ಹತ್ತು ನಿಮಿಷಗಳ ವರೆಗೆ ಮುಳುಗಿ ಸಿಂಪಿಗಳ ಗೊಂಚಲನ್ನೇ ಮೇಲೆ ತರುತ್ತಿದ್ದರು. ಕೆಲವು ಗೊಂಚಲುಗಳು ಒಬ್ಬ ಮನುಷ್ಯ ಹೊರುವಷ್ಟು ದೊಡ್ಡದಾಗಿದ್ದುವು. ನಾವು ಸಿಂಪಿಗಳನ್ನು ತಿಂದು ತೇಗಿದೆವು. ನಾವು ನಮ್ಮ ಪ್ರಯಾಣ ಬೆಳೆಸಿ ಮಧ್ಯಾಹ್ನ ಮೂರು ಗಂಟೆಗೆ ಗೋವಾ ನದಿಯನ್ನು ಪ್ರವೇಶಿಸಿದೆವು. ಸಂಜೆಯಾದಾಗ ಪಂಜಿಂನಲ್ಲಿರುವ ಕ್ಯಾಪ್ಟನ್ ಗಾರಿ ಅವರ ಮನೆ ತಲುಪಿದೆವು.

ಮಾರನೆಯ ದಿನ ನದಿಯ ಮೇಲೆ ಹೊರಟೆವು. ಉದ್ದಕ್ಕೂ ಭವ್ಯವಾದ ಇಗರ್ಜಿ ಗಳನ್ನು ಕಂಡೆವು. ಮಧ್ಯಾಹ್ನ ನಮಗೆ ಗೋವಾ ಕಾಣಿಸಿತು. ದೂರಕ್ಕೆ ಗೋವಾ ಬಹು ಸುಂದರವಾಗಿ ಕಾಣಿಸುತ್ತದೆ. ನದಿಯಲ್ಲಿ ಹತ್ತು ಮೈಲಿ ಹೋದರೆ ಗೋವಾ ಸಿಕ್ಕುತ್ತದೆ. ಏಳು ಗುಡ್ಡಗಳ ಮೇಲೆ ಊರು ಕಟ್ಟಿದ್ದಾರೆ. ಎಲ್ಲೆಲ್ಲೂ ಕಾಲೇಜುಗಳು, ಇಗರ್ಜಿಗಳು ಮತ್ತು ಇತರ ಭವ್ಯ ಭವನಗಳು. ಹಾಳುಬಿದ್ದ ಮನೆಗಳೂ ಇವೆ. ಒಂದು ಮದ್ಯದ ಅಂಗಡಿ ಕಡೆಗೆ ದಾರಿ ತೋರಿಸಿದರು. ಅಲ್ಲಿಂದ ನಮ್ಮನ್ನು ಡೊಮಿನಿಕನರ ಕಾಲೇಜಿಗೆ ಕರೆದುಕೊಂಡುಹೋದರು. ಇದೊಂದು ಭವ್ಯವಾದ ಕಟ್ಟಡ. ಇಲ್ಲಿಯೇ ಮತೀಯನ್ಯಾಯಾಧಿಪತಿ (Inquisitor) ಇರುವುದು. ಪ್ರಾರ್ಥನಾ ಮಂದಿರಕ್ಕಿಂತ ಇಗರ್ಜಿ ಭಾರಿ ದೊಡ್ಡದು. ಕಂಬಗಳಿಗೆ ಚಿನ್ನದ ಮುಲಾಮು ಹಾಕಲಾಗಿದೆ. ಪೂಜಾ ಸ್ಥಳದಲ್ಲಿ ಬೆಳ್ಳಿಯ ಭಾರಿ ಮೋಂಬತ್ತಿಗಳೂ ಮತ್ತಿತರ ಬೆಲೆಯಾದ ಪೂಜಾ ಬಟ್ಟಲು ಗಳೂ ಇವೆ. ಕಾಲೇಜಿನ ತುಂಬ ಭಕ್ತರು ತುಂಬಿದ್ದಾರೆ.

ಪಾಲಿಸ್ಟೈನರಿಗೆ ಅಂದರೆ ಸೆಂಟ್ ಪಾಲ್ ಭಕ್ತರಿಗೆ ಸೇರಿದ ಮಠವು ಎಲ್ಲಾ ಮಠಗಳಿಗಿಂತ ದೊಡ್ಡದು. ಅದರಲ್ಲಿ ಒಂದು ಪುಸ್ತಕಭಂಡಾರ, ಒಂದು ಆಸ್ಪತ್ರೆ ಮತ್ತು ಒಂದು ಔಷಧಿ ಅಂಗಡಿ ಇವೆ. ಔಷಧಿ ಅಂಗಡಿಯಲ್ಲಿ ಗಾಸ್ಪರ್ ಆಂಟೋನಿಯೋ ಎಂಬ ಕ್ರೈಸ್ತ ಭಕ್ತನಿದ್ದಾನೆ. ಈತ 'ಗೋವಾ ಶಿಲೆ' ಎಂಬ ಶಿಲೆಗಳ ಪಿತೃವೇ ಆಗಿದ್ದಾನೆ. ಐವತ್ತು ಸಾವಿರ ಷೆರಾಫಿನ್‌ಗಳಷ್ಟು ಬೆಲೆಯ ಶಿಲೆಗಳನ್ನು ತಯಾರಿಸುತ್ತಾನೆ. ಈತ ಮುದುಕ. ಕಣ್ಣು ಕಾಣುವುದಿಲ್ಲ. ವೈದ್ಯ ವೃತ್ತಿಯಲ್ಲಿ ಬಹು ದಿನದಿಂದ ಇರುವುದ ರಿಂದ ಎಲ್ಲರೂ ಇವನ ಬಳಿಗೆ ಬಂದು ಔಷಧಿ ಪಡೆಯುತ್ತಾರೆ.

ಸೆಂಟ್ ಸಾವಿಯರನ ಪಾರ್ಥಿವ ಶರೀರ ಇರುವ ಭವ್ಯವಾದ ಇಗರ್ಜಿಗೆ ಭೇಟಿ ಕೊಟ್ಟೆವು. ಎರಡು ಸಾವಿರ ವರ್ಷಗಳಿಗೆ ಮುಂಚೆ ಚೀನಾ ಮುಂತಾದ ಪೌರ್ವಾತ್ಯ ದೇಶಗಳಲ್ಲಿ ಕ್ರೈಸ್ತಮತ ಪ್ರಸಾರ ಮಾಡಿದ ಮಹಾ ಸಂತ ಈತ. ಈತನ ಶರೀರವನ್ನು ವರ್ಷಕ್ಕೊಮ್ಮೆ ಪ್ರದರ್ಶನ ಮಾಡುತ್ತಾರೆ.

ಇಲ್ಲಿಯ ನೀತಿ ನಿಯಮ ಹಾಗೂ ವ್ಯಾಪಾರ ಸಾಪಾರಗಳೆಲ್ಲಾ ಪಾಲಿಸ್ಟೈನರ ಕೈಯಲ್ಲಿವೆ.

ನಾವು ಫ್ರಾನ್ಸಿಸ್ಕನರ ಇಗರ್ಜಿಯನ್ನು ನೋಡಿದೆವು. ಕಾರ್ವಲೈಟರ ಕಾಲೇಜು ಒಂದು ಗುಡ್ಡದ ಮೇಲಿದೆ. ಇಲ್ಲಿಂದ ಇಡೀ ಊರನ್ನೆಲ್ಲಾ ನೋಡಬಹುದು. ಇಲ್ಲಿ ನೆಲದ ಮೇಲೆ ಮಂಡಿಯೂರಿ ಪ್ರಾರ್ಥನೆಯಲ್ಲಿ ನಿರತರಾಗಿದ್ದ ಅನೇಕ ವೃದ್ಧ ಕ್ರೈಸ್ತರನ್ನು ಕಂಡೆವು.

ನಾನು ಒಂದು ಸಂಜೆಯನ್ನು ರಾಜನ ಆಸ್ಪತ್ರೆಯಲ್ಲಿ (Kings Hospital) ಕಳೆದೆ. ಇಲ್ಲಿ ರೋಗಿಗಳನ್ನು ಉಪಚರಿಸುವ ಬಗೆ ಮೆಚ್ಚತಕ್ಕದ್ದು. ಒಂದು ಔಷಧಿ ಅಂಗಡಿಯೂ ಇದೆ. ಇಲ್ಲಿರುವ ವೈದ್ಯರು ರಕ್ತ ತೆಗೆಯುವುದರಲ್ಲಿ ಹೆಸರಾದವರು. ರಕ್ತನಾಳದಲ್ಲಿ ರಕ್ತವೇ ಇಲ್ಲದಂತೆ ಮಾಡಿಬಿಡುತ್ತಾರೆ! ಹೀಗಾಗಿ ರಕ್ತ ತೆಗೆಸಿಕೊಂಡವರು ಆಮೇಲೆ ಏನೇನೋ ತಾಪತ್ರಯಗಳನ್ನು ಹೇಳಿಕೊಳ್ಳುತ್ತಾರೆ.

ಕನ್ಯಾಸ್ತ್ರೀಯರ ಮಠವೊಂದನ್ನು ನೋಡಿದೆವು. ಅನೇಕ ಕನ್ಯೆಯರು ಪ್ರಾರ್ಥನೆ ಯಲ್ಲಿ ತೊಡಗಿದ್ದರು. ಸುಂದರವಾದ ಮುಖ, ಸುಶ್ರಾವ್ಯವಾದ ದನಿ ಉಳ್ಳವರು ಇವರು. ಕ್ಯಾಪ್ಟನ್ ಗಾರಿಯವರು ನಮಗೆ ಅರಮನೆ ತೋರಿಸಿದರು. ಹಜಾರದಲ್ಲಿ ಇಲ್ಲಿಯ ವರೆಗೆ ಈಸ್ಟ್ ಇಂಡಿಯಾಕ್ಕೆ ಬಂದ ವೈಸರಾಯರುಗಳ ಚಿತ್ರಪಟಗಳನ್ನು ನೇತುಹಾಕಿ ದ್ದಾರೆ. ಒಂದು ತುದಿಯಲ್ಲಿ ಸಿಂಹಾಸನವಿದೆ. ನಾವು ಬಂದಿರುವ ವಿಷಯ ವೈಸ್‌ರಾಯ್‌ಗೆ ತಿಳಿಸಿದರು. ನಮಗೆ ಅವರ ಬಳಿ ಹೋಗಲು ಅನುಮತಿ ಸಿಕ್ಕಿತು. ಎದ್ದುನಿಂತುಕೊಂಡು ನಮ್ಮನ್ನು ಸ್ವಾಗತಿಸಿದರು. ಕೊಂಚ ಹೊತ್ತು ಮಾತುಕತೆ ಆದ ಮೇಲೆ ನಮ್ಮನ್ನು ಅಲ್ಲಿಂದ ಕಳುಹಿಸಿಕೊಡಲಾಯಿತು. ನಮ್ಮಂತಹ ಹೊಸಬರನ್ನು ಮರ್ಯಾದೆಯಿಂದ ಕಂಡ ಈತನ ಹೆಸರು ಲೂಯಿ ಮೆಂಡೋಸಾ ದೆ ಆಲ್ಬುಕೇರ್ಕ್ ಎಂದು.

ರಾತ್ರಿ ಯಾರೋ ಒಬ್ಬ ತನ್ನ ರಕ್ಷಣೆಗಾಗಿ ನಾವಿದ್ದ ಮನೆಗೆ ನುಗ್ಗಿ ಗೊಂದಲ ಉಂಟುಮಾಡಿದ. ಸಂಬಳ ಇಲ್ಲದ ಸಿಪಾಯಿಗಳೂ ಹೊಟ್ಟೆಗಿಲ್ಲದ ಕಾಫರುಗಳೂ (Cofferies) ರಾತ್ರಿ ಹೊತ್ತು ಮನಬಂದಂತೆ ವರ್ತಿಸುತ್ತಾರೆ. ಹೀಗಾಗಿ ಸಂಜೆ ಯಾಯಿತೆಂದರೆ ಜನರು ತಮ್ಮ ರಕ್ಷಣೆಗಾಗಿ ಕೈಯಲ್ಲಿ ಕತ್ತಿ ಹಿಡಿದು ತಿರುಗಾಡಬೇಕಾಗಿದೆ. ಮನೆಯೊಳಗಿದ್ದ ನಾವು ತಲೆದಿಂಬಿನ ಅಡಿ ಕತ್ತಿ ಇಟ್ಟುಕೊಂಡೇ ಮಲಗಬೇಕಾಯಿತು.

ಮಾರನೆಯ ದಿನ ಬೆಳಗ್ಗೆ ಅಳಿವೆ ದಾಟಿ ವೆಂಗೂರ್ಲಾಕ್ಕೆ ಹೊರಟೆವು. ಹನ್ನೆರಡು ಗಂಟೆ ಸಮಯಕ್ಕೆ ಮಲಬಾರ್ ಕಡಲುಗಳ್ಳರು ನಮ್ಮ ಮೇಲೆ ಬಿದ್ದರು. ಅವರ ದೋಣಿ ನಮ್ಮದಕ್ಕಿಂತ ಹತ್ತರಷ್ಟು ದೊಡ್ಡದಾಗಿತ್ತು. ದೋಣಿ ನಡೆಸುವವರಲ್ಲದೆ ಬೇರೆ ಅರವತ್ತು ಜನ ಇದ್ದರು. ನಮ್ಮ ಬಳಿ ಒಂದು ಸಣ್ಣ ಫಿರಂಗಿ ಇತ್ತು. ಇದನ್ನು ಹಾರಿಸಲು ಯಾರೂ ನಮ್ಮಲ್ಲಿರಲಿಲ್ಲ. ಇದ್ದ ಗೋಲಂದಾಜನೊಬ್ಬ ಗೋವಾದ ಸೂಳೇಗೇರಿಯ ಹೆಂಗಸೊಬ್ಬಳೊಡನೆ ಓಡಿಹೋಗಿದ್ದ. ಈ ಕಾರಣ ನಮ್ಮ ದಲ್ಲಾಳಿಯೇ ಗೋಲಂದಾಜನ ಕೆಲಸ ಮಾಡಿದ. ಶತ್ರುಗಳು ಕಲ್ಲುಗಳನ್ನು ಬೀರುತ್ತಿದ್ದರು. ಕೈಬಾಂಬುಗಳನ್ನು ಎಸೆಯು ತ್ತಿದ್ದರು. ನಾವು ನಮ್ಮ ಫಿರಂಗಿಗಳನ್ನೂ ಬಂದೂಕಗಳನ್ನೂ ಹಾರಿಸಿ ಅವರನ್ನು ಓಡಿಸಿದೆವು. ಮತ್ತೊಮ್ಮೆ ಅವರು ನಮ್ಮ ತಂಟೆಗೆ ಬರಲಿಲ್ಲ.

ನಮ್ಮ ಈ ಹೋರಾಟವನ್ನು ತೀರದಲ್ಲಿ ನೋಡಿದವರು ಯಾರೆಂದರೆ, ಡಚ್ಚರ ಮುಖ್ಯಸ್ಥ ಹಾಗು ಗೌರ್ನರ್. ಹನ್ನೆರಡು ಫಿರಂಗಿಗಳ ಅವರ ಹಡಗು ಲಂಗರು ಹಾಕಿತ್ತು. ಮೂರುಗಂಟೆಯ ಹೊತ್ತಿಗೆ ನಾವು ತೀರಕ್ಕೆ ಬಂದೆವು. ನಮಗೆ ಅಲ್ಪಸ್ವಲ್ಪ ಗಾಯಗಳಾಗಿದ್ದುವು. ನಮ್ಮನ್ನು ಡಚ್ಚರು ಪ್ರೀತಿಯಿಂದ ಸ್ವಾಗತಿಸಿದರು. ಸಂಜೆ ಪಟ್ಟಣ ಪ್ರವೇಶಿಸಿ ಅಲ್ಲಿದ್ದ ಡಚ್ಚರ ಚೌಲ್ಟ್ರಿಯಲ್ಲಿ ತಂಗಿದೆವು. ಹತ್ತಿರದಲ್ಲಿದ್ದ ನದಿಯಲ್ಲಿ ಸ್ನಾನಮಾಡಿದೆವು. ರಾತ್ರಿ ಊಟವಾದ ಮೇಲೆ ಡಚ್ಚರು ನಮ್ಮ ಸಂತೋಷಕ್ಕಾಗಿ ನರ್ತಕಿಯರ ನಾಟ್ಯ ಏರ್ಪಡಿಸಿದ್ದರು. ಕುಡಿಯಲು ಬ್ರಾಂದಿ, ಬೀರುಗಳನ್ನು ಕೊಟ್ಟರು. ಬಹಳ ಹೊತ್ತಿನವರೆಗೂ ಎಚ್ಚರವಾಗಿದ್ದು ನಿದ್ದೆ ಹೋದೆವು. ಈ ಊರಿನ ಕೊಂಚ ಭಾಗ ಮೊಗಲನ ಕಡೆಯುವರಿಂದ ಹಾಳಾಗಿದೆ. ಮೂರನೆಯ ದಿನ ಗೌರ್ನರ್ ನೋಡಿದೆವು. ಆತ ನಮಗೆ ಶಹಭಾಸ್‌ಗಿರಿ ಕೊಟ್ಟು ಗೌರವಿಸಿದ. ಶಿವಾಜಿಯ ಕ್ರೂರ ಆಡಳಿತದಲ್ಲಿ ಈತ ಕಾಲ ಹಾಕುತ್ತಿದ್ದಾನೆ.

ಈ ನಾಡಿನಲ್ಲಿ ಬಗೆ ಬಗೆಯ ಕ್ರೂರ ಪದ್ಧತಿಗಳನ್ನು ಆಚರಿಸುತ್ತಾರೆ. ಸತ್ತ ಗಂಡ ನೊಡನೆ ಹೆಂಡತಿ ಆತನ ಚಿತೆ ಏರಲು ಅನುಮತಿ ಉಂಟು. ಅಷ್ಟೇ ಅಲ್ಲದೆ ಚಿತೆ ಏರಿದವರಿಗೆ ಅನೇಕ ಸ್ಮಾರಕಗಳನ್ನೂ ಎತ್ತಿದ್ದಾರೆ. ಈ ರಾಜ್ಯದ 'ಹುಬ್ಲಿ' (Hubly) ಎಂಬಲ್ಲಿ 'ಲಿಂಗಾಯಿತ್' (Linguit = ಲಿಂಗಾಯಿತ) ಎಂಬ ಜಾತಿ (Cast) ಜನ ಇದ್ದಾರೆ. ಇವರು ತಮ್ಮಲ್ಲಿ ಸತ್ತವರನ್ನು ನೆಟ್ಟಗೆ ಕುಳ್ಳಿರಿಸಿ ಹೂಳುತ್ತಾರೆ. ಹೆಂಡತಿ ಗಂಡನನ್ನು ಅನುಸರಿಸುತ್ತೇನೆಂದರೆ ಆಕೆಯನ್ನು ಜೀವಸಹಿತ ಅದೇ ಗುಂಡಿಯಲ್ಲಿ ಹೂಳುತ್ತಾರೆ. ಮೊದಲು ಕುತ್ತಿಗೆವರೆಗೆ ಮಣ್ಣು ಹೇರಿ, ಆಮೇಲೆ ಕೆಲವು ಕ್ರಿಯೆಗಳನ್ನು ಮಾಡಿದ ಮೇಲೆ ಕುತ್ತಿಗೆ ತಿರಿಚಿ ಮೇಲೆ ಮಣ್ಣು ಮುಚ್ಚುತ್ತಾರೆ.

ಇಲ್ಲಿ ನಿಂತಿದ್ದ ಹಡಗಿನಿಂದ ನಮ್ಮ ದಲ್ಲಾಳಿಗಳು ಕೆಲವು ಸರಕುಗಳನ್ನು ಎರಡು ದೋಣಿಗಳಲ್ಲಿ ತುಂಬಿಕೊಂಡು ಹೊರಟುಹೋದರು. ಅವರು ಯಾನ ಮಾಡಿದ ಮೇಲೆ ನಾನು ಕ್ಯಾಪ್ಟನ್ ಗಾರಿಯವರ ದೋಣಿಯಲ್ಲಿ ಮತ್ತೆ ಗೋವಾ ಕಡೆ ಹೊರಟೆ. ಗೋವೆ ಯನ್ನು ದೂರದಿಂದಲೇ ನೋಡಿದಾಗ ಪೋರ್ಚುಗೀಸರು ಆ ಊರನ್ನು ಶತ್ರುಗಳ ಧಾಳಿಯಿಂದ ತಪ್ಪಿಸಲು ಎಷ್ಟು ಭದ್ರಪಡಿಸಿಕೊಂಡಿದ್ದಾರೆಂಬುದನ್ನು ಕಂಡೆ. ಆದರೆ ನಾರ್ವೆ (Norway = ನರೋವಾ ಅಥವಾ ನಾರ್ವಾ = ಗೋವೆಯಿಂದ ಎರಡು ಮೈಲಿ ದೂರದಲ್ಲಿರುವ ದ್ವೀಪ) ಎಂಬ ಊರು ಶಿವಾಜಿಯ ಕೈವಶವಾಗಿದೆ. ಈ ಸ್ಥಳ ವೇಶ್ಯೆ ಯರಿಗೆ ಹೆಸರಾದದ್ದು. ಮರ್ಮಗೋವಾ ಮತ್ತು ಹಳೆಯ ಗೋವಾಗಳನ್ನು ದೋಣಿ ಯಲ್ಲಿ ಕುಳಿತೇ ನೋಡಿದೆವು. ಬಹು ಸುಂದರವಾದ ಸ್ಥಳ ಇವು. ಇವನ್ನೆಲ್ಲಾ ನೋಡಿ ಕೊಂಡು ರಾತ್ರಿ ಒಂದು ಚೀನೀ ಸತ್ರದಲ್ಲಿ ಇಳಿದುಕೊಂಡೆವು. ಈ ಚೀನೀಯರು ಕ್ರೈಸ್ತ ರಾಗಿರುವ ಕಾರಣ ಇಲ್ಲಿರಲು ಇವರಿಗೆ ಅವಕಾಶ ಸಿಕ್ಕಿದೆ. ಮಾರನೆಯ ದಿನ ಮಠೀಯ

ನ್ಯಾಯಾಧಿಪತಿಗೆ ಸೇರಿದ ಸೆರೆಮನೆಯನ್ನೂ ಶಿಕ್ಷೆಗೊಳಗಾದವರನ್ನು ಗಲ್ಲಿಗೇರಿಸು ವುದನ್ನೂ ಕಂಡೆವು.

ವಿಜಾಪುರಕ್ಕೆ ಸೇರಿದ್ದ ಪೊಂಡಾ ಎಂಬ ದೊಡ್ಡ ಊರನ್ನು ಈಚೆಗೆ ಶಿವಾಜಿ ತನ್ನ ವಶಪಡಿಸಿಕೊಂಡಿದ್ದಾನೆ. ಈ ಊರು ವಶವಾದ ಮೇಲೆ ಕಾರವಾರದವರೆಗಿನ ಸಮುದ್ರ ತೀರದ ತಗ್ಗು ಪ್ರದೇಶವನ್ನೆಲ್ಲಾ ಶಿವಾಜಿ ಸುಲಭವಾಗಿ ಗೆದ್ದುಕೊಂಡ. ಹೀಗಾಗಿ ವಜ್ರಗಳ ವ್ಯಾಪಾರಕ್ಕೆ ಅಡ್ಡಿಯಾಗಿದೆ. ಇಷ್ಟೇ ಅಲ್ಲ, ಆ ಮಾರ್ಗವಾಗಿ ಹೇರಳವಾಗಿ ಬರುತ್ತಿದ್ದ ಕಟುಕರ ಮಾಂಸಕ್ಕೂ (Butchers Meat) ಅಡ್ಡಿಯಾಗಿದೆ. ಮಾಂಸಕ್ಕೆ ಅಷ್ಟೇ ಅಲ್ಲ, ಸೌದೆಗೂ ಮನೆಯ ಮರಮುಟ್ಟುಗಳಿಗೂ ಅಡ್ಡಿಯಾಗಿದೆ. ಈ ಅನಾಹುತಗಳ ಜೊತೆಗೆ ಶಿವಾಜಿಯ ಸೈನ್ಯ ಬರುತ್ತಿರುವುದೂ ಜನರಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿದೆ. ಶಿವಾಜಿಯ ಸೈನ್ಯದಲ್ಲಿ ಯೂರೋಪ್ ಜನರನ್ನು ಸೇರಿಸಿಕೊಂಡಿರುವುದೂ ಜನರ ಭೀತಿಗೆ ಕಾರಣವಾಗಿದೆ. ಹೀಗಾಗಿ ಗೋವೆಯ ಪಾದ್ರಿಗಳು ಪ್ರಾರ್ಥನೆಯ ಜೊತೆಗೆ ಕಾದಾಟವನ್ನೂ ಮಾಡಬೇಕಾಗಿದೆ.

ಗೋವೆಯು ಈಸ್ಟ್ ಇಂಡಿಯಾದ ಪೋರ್ಚುಗಲ್ಲರ ರಾಜಧಾನಿ. ಇಲ್ಲಿಯೇ ವೈಸರಾಯ್ ಇರುವುದು. ಈತನಿಗೆ ಲೌಕಿಕರ ಬಗ್ಗೆ (Secular) ಕಾನೂನು ಕಟ್ಟಲೆಗಳನ್ನು ಚಲಾಯಿಸುವ ಅಧಿಕಾರ ಇದೆ. ಆದರೆ ಫಿದಾಲ್ಗೋಗಳಿಗೆ ಮರಣದಂಡನೆ ವಿಧಿಸುವ ಅಧಿಕಾರ ಇಲ್ಲ. ಆ ಅಧಿಕಾರ ಪೋರ್ಚುಗಲ್ ರಾಜನಿಗೆ ಮಾತ್ರ ಉಂಟು. ಅಂತಹ ಫಿದಾಲ್ಗೋಗಳನ್ನು ಪೋರ್ಚುಗಲ್ಲಿಗೆ ಕಳುಹಿಸಿಕೊಟ್ಟು ಅಲ್ಲಿ ವಿಚಾರಣೆ ನಡೆಸಿ ಶಿಕ್ಷೆ ವಿಧಿಸಲಾಗುವುದು. ಧಾರ್ಮಿಕ ವಿಷಯಗಳಲ್ಲಿ ಆರ್ಚ್‌ಬಿಷಪ್ಪರದೇ ಸಂಪೂರ್ಣ ಅಧಿಕಾರ. ಸ್ವಚ್ಛತೆಯಲ್ಲಿ ಹಾಗೂ ಭವ್ಯವಾದ ಕಟ್ಟಡಗಳಲ್ಲಿ ಗೋವೆ ಇಂಡಿಯಾದ ರೋಮ್. ಕಟ್ಟಡ ಗಳಲ್ಲಿ ಅತಿ ಮುಖ್ಯವಾದುವುಗಳೆಂದರೆ ಇಗರ್ಜಿಗಳು ಮತ್ತು ಮಠಗಳು. ಲೌಕಿಕರ ಮನೆಗಳೂ ಕಲ್ಲಿನಿಂದ ಕಟ್ಟಿದ ದೊಡ್ಡ ಮನೆಗಳು. ಬೀದಿಗಳಿಗೆ ಕಲ್ಲು ಮುಂತಾದುವು ಗಳನ್ನು ಹಾಸಿ ಮನೆಯ ಮೇಲ್ಛಾವಣಿಗಳಿಗಿಂತ ಸ್ವಚ್ಛವಾಗಿ ಇಟ್ಟಿದ್ದಾರೆ. ಹಾದಿಬೀದಿಗಳಲ್ಲಿ ಪಾಯಖಾನಿ ಮಾಡಿ ಹೊಲಸುಮಾಡದೆ ಮನೆಯೊಳಗೇ ಅದಕ್ಕೆ ವ್ಯವಸ್ಥೆ ಮಾಡಿ ಕೊಂಡಿದ್ದಾರೆ. ಹೊರಗೆ ಬಹು ವೈಭವದಿಂದ ಅಡ್ಡಾಡುತ್ತಾರೆ. ಆಳುಕಾಳುಗಳ ಸಮೇತ ಛತ್ರಿ ಹಿಡಿಸಿಕೊಂಡು ಹೋಗುತ್ತಾರೆ. ಬರಿದಲೆಯಲ್ಲೇ ತಿರುಗಾಡುತ್ತಾರೆ; ಮರ್ಯಾದೆಗಾಗಿ ಹ್ಯಾಟ್ ತೆಗೆಯುವ ತೊಂದರೆ ಬೇಡ ಎಂದು. ತಮ್ಮ ಆತ್ಮಗೌರವಕ್ಕೆ ಧಕ್ಕೆ ಬಂದರೆ ಸುಮ್ಮನಿರುವವರಲ್ಲ. ದೊಡ್ಡ ಮನುಷ್ಯರ ಮನೆಯ ಹೆಣ್ಣಿಗೆ ಕಣ್ಣುಹೊಡೆದರೆ ಕೋವಿಯ ಸವಿ ನೋಡಬೇಕಾಗುತ್ತದೆ. ಬೀದಿಯಲ್ಲಿ ಹೋಗುವ ಫಿದಾಲ್ಗೋಗೆ ನಮಸ್ಕಾರ ಮಾಡದಿದ್ದರೆ ಬೈಗುಳ ತಿನ್ನಬೇಕಾಗುತ್ತದೆ. ಇವರು ಸಾಮಾನ್ಯವಾಗಿ ಪಲ್ಲಕ್ಕಿಗಳಲ್ಲಿ ಅಡ್ಡಾಡುತ್ತಾರೆ. ಕೆಲವು ವೇಳೆ ಕುದುರೆಗಳ ಮೇಲೂ ಹೋಗುತ್ತಾರೆ.

ಕ್ರೈಸ್ತ ಪುರೋಹಿತ ವರ್ಗ ಹೊರಗಡೆ ಹೋದಾಗ ಯಾವ ತೋರಿಕೆಯನ್ನೂ ಮಾಡುವುದಿಲ್ಲ. ಇವರು ಸಾಮಾನ್ಯವಾಗಿ ಜೊತೆಜೊತೆಯಾಗಿ ತಿರುಗಾಡುತ್ತಾರೆ.. ಜನರು ಫಾದರ್ ಅವರ ಉಡುಪಿಗೆ ಮುತ್ತಿಟ್ಟು ಆಮೇಲೆ ಅವರ ಆಶೀರ್ವಾದ ಪಡೆಯುತ್ತಾರೆ.

ಜನಸಾಮಾನ್ಯರೆಂದರೆ ಕನೊರಿನ್ (Canorein) ಎಂಬ ಜನ. ಆದರೆ ಇವರ ನಡೆ ನುಡಿಗಳು ಪೋರ್ಚುಗೀಸರಂತೆ. ಬಿಳಿಯರನ್ನು ಕಂಡರೆ ಇವರು ತುಂಬಾ ಗೌರವ ತೋರಿಸುತ್ತಾರೆ. ಅವರು ಎದುರಿಗೆ ಬಂದರೆ ವಿನಯದಿಂದ ಒಂದು ಕಡೆಗೆ ಸರಿದು ನಮಸ್ಕಾರ ಮಾಡಬೇಕು. ಇಲ್ಲದಿದ್ದರೆ ಕತ್ತಿಯ ಇರಿತದ ಸವಿನೋಡಬೇಕಾಗುತ್ತದೆ.

ಹೆಂಗಸರು, ಅವರು ಬಿಳಿಯರಾಗಿರಲಿ ಕರಿಯರಾಗಿರಲಿ, ಮನೆಯೊಳಗೇ ಇರಬೇಕು. ಹೊರಗೆ ಬಂದಾಗ ಮುಖ ಮುಚ್ಚಿಕೊಳ್ಳಬೇಕು. ಶ್ರೀಮಂತ ಹೆಂಗಸರು ಆಭರಣಗಳ ಹೊರೆಯನ್ನೇ ಹೊತ್ತಿರುತ್ತಾರೆ. ಕೊರಳಿಗೆ ಚಿನ್ನದ ಸರ, ಕೈಗೆ ಕಡಗ, ಮುತ್ತಿನ ಹಾರ, ವಜ್ರದ ತುರುಬುಸೂಜಿ (Bodkin) ಹಾಗೂ ಕಿವಿಯ ಓಲೆ—ಇವು ಇವರ ಆಭರಣಗಳು. ಸೊಂಟದವರೆಗೆ ಬಟ್ಟೆಯ 'ಲುಂಗಿ' ಉಡುತ್ತಾರೆ. ಹೊರಗೆ ಹೋಗುವಾಗ ಅಂಗಿ ಹಾಕುತ್ತಾರೆ. ಸೊಂಟದಿಂದ ಕೆಳಕ್ಕೆ ಇನ್ನೊಂದು 'ಲುಂಗಿ' ತೊಡುತ್ತಾರೆ. ಕಾಲುಗಳಿಗೆ ಕಾಲ್ಚೀಲಗಳಿಲ್ಲ. ಆದರೆ ಬಹು ಬೆಲೆಯಾದ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಾರೆ. ಇವರಲ್ಲಿ ಕೆಲವರು ಬಹು ರೂಪವತಿಯರಿದ್ದಾರೆ. ಆದರೆ ನಮ್ಮ ಇಂಗ್ಲಿಷ್ ಲೇಡಿಗಳ ಮಟ್ಟಕ್ಕೆ ಬರಲಾರರು. ನಡೆನುಡಿಗಳೂ ಅವರ ಅಂತಸ್ತಿಗೆ ತಕ್ಕಂತೆ ಇರುವುದಿಲ್ಲ. ಗೃಹಕೃತ್ಯದಲ್ಲಿ ತೊಡಗಿ ಮನೆಯಲ್ಲೇ ಇರುವ ಇವರು ಒಂದು ಬಗೆಯ ನಾಚಿಕೆ ಸ್ವಭಾವದವರು. ಸಂಗೀತದಲ್ಲಿ ಮತ್ತು ಕೊಳಲು ನುಡಿಸುವುದರಲ್ಲಿ, ಸಿಹಿತಿಂಡಿ ತಯಾರಿಸುವುದರಲ್ಲಿ, ಉಪ್ಪಿನಕಾಯಿ ಹಾಕುವುದರಲ್ಲಿ ಮತ್ತು ಮಾಂಸದ ಅಡಿಗೆಯಲ್ಲಿ ಎತ್ತಿದಕೈ. ಬಹು ರುಚಿಯಾದ ಮಾವಿನಕಾಯಿ ಉಪ್ಪಿನಕಾಯಿ ಹಾಕುವುದರಲ್ಲಿ ಇವರನ್ನು ಬಿಟ್ಟರೆ ಬೇರೆ ಇಲ್ಲ. ಇವರು ಮಾಡಿದ ಮಾಂಸದ ಊಟ ಉಂಡರೆ ಕೂಡಲೇ ಜೀರ್ಣವಾಗುತ್ತದೆ. ಬಗೆಬಗೆಯ ಸಾರುಗಳನ್ನು ಮಾಡುವುದರಲ್ಲಿ ಇವರನ್ನು ಮೀರಿಸುವವರಿಲ್ಲ. ಇವನ್ನು ಪುಟ್ಟ ಚೀನೀ ಪಿಂಗಾಣಿ ತಟ್ಟೆಗಳಲ್ಲಿಯೂ ಬಟ್ಟಲುಗಳಲ್ಲಿಯೂ ಬಡಿಸುತ್ತಾರೆ. ಒಂದು ಸಾಕೆನ್ನುವಷ್ಟರಲ್ಲಿ ಇನ್ನೊಂದು ತಂದು ಬಡಿಸುತ್ತಾರೆ. ಹತ್ತಾರು ಜನರಿಗೆ ಬಡಿಸುವಾಗ ಆರೇಳು ಬಗೆಯ ಭಕ್ಷ್ಯ-ಭೋಜ್ಯಗಳಿಂದ ತೃಪ್ತಿಪಡಿಸುತ್ತಾರೆ. ನಂಚಿಕೊಳ್ಳಲು ಇಡುವ ಪದಾರ್ಥಗಳು ನಮ್ಮವಷ್ಟು ಖಾರ ಅಲ್ಲದಿದ್ದರೂ ಅಷ್ಟೇ ತೃಪ್ತಿಕೊಡುತ್ತವೆ. ಯಾರೇ ಇದ್ದರೂ ಅವರ ಮುಂದೆಯೇ ಅದು ಇದು ಬಡಿಸು ಎಂದು ಹೇಳುವ ಇವರ ಸರಳ ರೀತಿ ನನಗೆ ತುಂಬಾ ಹಿಡಿಸಿತು. ಗಂಡನ ಜೊತೆ ಹೊಸಬರು ಊಟಮಾಡುವಾಗ ಹೆಂಡತಿ ನಮ್ಮ ಹೆಂಗಸರಂತೆ ಜೊತೆಯಲ್ಲಿ ಎಷ್ಟೇ ಒತ್ತಾಯ ಮಾಡಿದರೂ ಊಟಮಾಡುವುದಿಲ್ಲ. ಅಲ್ಲದೆ ಆಕೆ ಮಾಡಿದ್ದನ್ನೆಲ್ಲಾ ನಾವು ರುಚಿ ನೋಡದಿದ್ದರೆ ಮನಸ್ಸಿಗೆ ಬೇಜಾರುಪಟ್ಟುಕೊಳ್ಳುತ್ತಾಳೆ. ಮಕ್ಕಳು ಮನೆಯಲ್ಲಿ

ಬುಂಡಗೆ ಓಡಾಡುತ್ತಿರುತ್ತವೆ. ವಯಸ್ಸಾದ ಮೇಲೆಯೇ ಅವು ಬಟ್ಟೆ ಬರೆ ಹಾಕಿಕೊಳ್ಳುವುದು.

ಪ್ರಪಂಚದಲ್ಲಿಯೇ ಅತ್ಯುತ್ತಮವಾದ ರೊಟ್ಟಿ(Bread)ಯನ್ನು ಇಲ್ಲಿ ತಯಾರಿಸುತ್ತಾರೆ. ಮೋಂಬತ್ತಿಗಳಿಗೆ ಬೇಕಾದ ಅತ್ಯಂತ ಸ್ವಚ್ಛವಾದ ಮೇಣ ತಯಾರಿಸುವುದು ಇಲ್ಲಿಯೆ. ನೆರುಲ್ ಎಂಬ ಊರಿನಲ್ಲಿ ಬಹು ಸೊಗಸಾದ 'ಅರಾಕ್' (ತೆಂಗಿನ ಹೆಂಡ=ಶರಾಬು) ತಯಾರಿಸುತ್ತಾರೆ. ಇದನ್ನು ಸೇರಿಸಿ ಸಮುದ್ರತೀರದಲ್ಲಿರುವ ಇಂಗ್ಲಿಷರು ಬಹು ಶಕ್ತಿದಾಯಕವಾದ 'ಪಂಚ್' (ಹಿಂದೂಸ್ತಾನಿ ಭಾಷೆಯಲ್ಲಿ ಪಾಂಚ್ ಅಥವಾ ಐದು ಎಂದರ್ಥ) ತಯಾರಿಸುತ್ತಾರೆ. ಐದು ವಸ್ತುಗಳನ್ನು ಸೇರಿಸಿ ಈ ಮದ್ಯ ತಯಾರಿಸುತ್ತಾರೆ.

ಸಮುದ್ರದ ಮೇಲೆ ಹೋಗುವ ಹಡಗುಗಳ ಬಗ್ಗೆ ಸೂಚನೆ ಕೊಡುವ ರೀತಿ ಹೀಗಿದೆ: ರಾಜನ ಬಾವುಟ ಹಾರಿಸಿ ಅದರ ಜೊತೆಗೆ ಎಷ್ಟು ಹಡಗುಗಳಿವೆಯೋ ಅಷ್ಟು ಬುಟ್ಟಿಗಳನ್ನು ಏರಿಸುತ್ತಾರೆ. ಅದನ್ನು ನೋಡಿ ಇನ್ನೊಬ್ಬ ಕಾವಲುಗಾರ ಹಾಗೆಯೇ ಮಾಡುತ್ತಾನೆ. ಹೀಗೆ ಒಬ್ಬ ಕಾವಲುಗಾರನಿಂದ ಇನ್ನೊಬ್ಬ ಕಾವಲುಗಾರನಿಗೆ ಸೂಚನೆ ಹೋಗಿ ಕೊನೆಗೆ ಸುದ್ದಿ ಪಟ್ಟಣ ತಲುಪುತ್ತದೆ.

ಹೊಸ ವರ್ಷದ ದಿನ ನಾನು ಕ್ಯಾಪ್ಟನ್ ಗಾರಿ ಅವರೊಡನೆ ಹತ್ತು ಹುಟ್ಟಿನ ದೋಣಿಯಲ್ಲಿ ಕಾರವಾರಕ್ಕೆ ಹೊರಟೆ. ದೋಣಿಯಲ್ಲಿ ಆರು ಜನ ಸೇವಕರಿದ್ದರು. ಸಾಲ್ಸೆಟ್ ಬಿಟ್ಟು ಅರ್ಧ ದೂರ ಹೋಗಿದ್ದೆವು. ಚಂದ್ರನು ಮೂಡಿ ಎರಡು ತಾಸು ಆಗಿರಬಹುದು. ಆಗ ನಮಗೆ ಒಂದು ಬೆಳಕು ಕಾಣಿಸಿತು. ನಮ್ಮನ್ನು ಹಿಂಬಾಲಿಸಿ ಮೂರು ದೋಣಿಗಳು ಬರುತ್ತಿದ್ದುವು. ಇನ್ನೊಂದು ತೀರದ ಕಡೆಯಿಂದ ನಮ್ಮ ಕಡೆಗೆ ಬರುತ್ತಿತ್ತು. ನಮ್ಮ ಜನ ಧೈರ್ಯಗೆಡದೆ ಹುಟ್ಟುಹಾಕಿ ತೀರದ ಕಡೆಗೆ ನಡೆಸಿದರು. ಕೊಲ್ಲಾ ಎಂಬ ಸ್ಥಳಕ್ಕೆ ಹೋದೆವು. ಅಲ್ಲಿ ಉಪ್ಪು ಹಾಕಿದ ಮೀನಿನ ಗುಡ್ಡವೇ ಇತ್ತು. ಆ ಮೀನನ್ನು ಸಾಗಿಸಲು ಹಲವಾರು ದೋಣಿಗಳು ಇದ್ದುವು. ಮೀನಿನ ದುರ್ವಾಸನೆ ಹೇಳತೀರದು. ನಾವು ಆ ರಾತ್ರಿ ಒಂದು ಗುಡಿಸಲಿನಲ್ಲಿ ಕಾಲ ಹಾಕಿದೆವು. ಮಾರನೆಯ ದಿನ ಹೊತ್ತಿನಂತೆ ಎದ್ದು ಸಾಲ್ ನದಿಗೆ ಬಂದೆವು. ಅಲ್ಲಿ ಮಲಬಾರ್ ಕಡಲುಗಳ್ಳರಿಂದ ತಪ್ಪಿಸಿಕೊಂಡುಬಂದ ಎಂಟು ದೋಣಿಗಳಿದ್ದುವು. ನಾವು ಪೆಂಗೂರ್ಲಾದ ಬಳಿ ಈ ಕಡಲುಗಳ್ಳರಿಗೆ ಕೊಟ್ಟ ಪೆಟ್ಟಿಗೆ ಸೇಡು ತೀರಿಸಿಕೊಳ್ಳಲು ಐದು ದೋಣಿಗಳು ನಮ್ಮ ಮೇಲೆ ಬೀಳಲು ಸನ್ನಾಹ ಮಾಡಿವೆಯೆಂದು ತಿಳಿಯಿತು. ಅವರ ಕಡೆಯ ಯಜಮಾನನನ್ನೂ ಇನ್ನು ಮೂರು ನಾಲ್ಕು ಜನ ಮುಖ್ಯಸ್ಥರನ್ನೂ ಹಲವಾರು ಸಿಪಾಯಿಗಳನ್ನೂ ಸಾಯಿಸಿದ್ದೆವಂತೆ. ಅವರನ್ನೆಲ್ಲಾ ಅಂಜೆದೀಪ್‌ನಲ್ಲಿ ಮಣ್ಣುಮಾಡಿ ನಮ್ಮ ಮೇಲೆ ಸೇಡುತೀರಿಸಿಕೊಳ್ಳಲು ಹೊರಟಿದ್ದರಂತೆ. ಈ ಕಾರಣ ರಾತ್ರಿಯನ್ನು ಇಲ್ಲೇ ಕಳೆದೆವು. ಬಯಲಿನಲ್ಲಿ ನದಿಯ ಬಳಿ ಇದ್ದೆವು. ಮಂಜಿನಲ್ಲಿ ತೊಯ್ದು ಒದ್ದೆಯಾದೆವು.

ಕೇವಲ ಖುಷಿಗಾಗಿ ಈ ಸಮುದ್ರಯಾನ ಕೈಗೊಂಡಿದ್ದ ಕ್ಯಾಪ್ಟನ್ ಗಾರಿಯವರು ಈ ಅಪಾಯಕ್ಕೆ ತಲೆಕೊಡಬಾರದೆಂದು ಭಾವಿಸಿ ನಮ್ಮ ಮುಂದೆ ದಾರಿತೋರಿಸಿಕೊಂಡು ಹೋಗಲು ಒಂದು ದೋಣಿ ಗೊತ್ತುಮಾಡಿದರು. ದಾರಿ ಸಲೀಸಾಗಿದ್ದರೆ ಈ ದೋಣಿ ಬಿಳಿ ಬಾವುಟ ತೋರಿಸಬೇಕೆಂಬ ಸೂಚನೆ ಕೊಟ್ಟರು. ಅದರಂತೆ ನಾವು ಪ್ರಯಾಣ ಮಾಡಿ ಕಾರವಾರದ ನದಿಯ ಅಳಿವೆಗೆ ಬಂದೆವು. ನಾವು ಬರುವ ಸುದ್ದಿ ತಿಳಿದಿದ್ದ ಇಲ್ಲಿಯ ಮುಖ್ಯಸ್ಥ ಕುದುರೆಯ ಮೇಲೆ ಬಂದು ನಮ್ಮನ್ನು ಸ್ವಾಗತಿಸಿ ನಮ್ಮೊಡನೆ ದೋಣಿಯಲ್ಲಿ ಕುಳಿತು ಮನೆಗೆ ಕರೆದುಕೊಂಡು ಹೋದ.

ಕ್ಯಾಪ್ಟನ್ ಗಾರಿ ಎಂಬುವರು ಬೊಂಬಾಯಿಯಲ್ಲಿ ನಮ್ಮ ರಾಜನು ನೇಮಿಸಿದ್ದ ಕೊನೆಯ ಗೌರ್ನರ್. ಪಾದರಸದಂತಹ ಬುದ್ಧಿ ಇವರದು. ಸಿಪಾಯಿತನಕ್ಕಿಂತ ವ್ಯಾಪಾರ ದಲ್ಲಿ ಹೆಚ್ಚು ತಿಳುವಳಿಕೆ. ಸ್ಥಳದ ಭಾಷೆಗಳೆಲ್ಲಾ ಬರುತ್ತವೆ. ಅರ್‍ಯಾಬಿಕ್ ಭಾಷೆಯಲ್ಲಿ ಏನೋ ಬರೆದು ವೈಸ್‌ರಾಯ್‌ಗೆ ಅರ್ಪಿಸಬೇಕೆಂದಿದ್ದಾರೆ. ವೈಸ್‌ರಾಯ್‌ಗೂ ಇವರಿಗೂ ತುಂಬಾ ಕೇವಲ. ಅಜೀನ್‌ನಲ್ಲಿಯೂ ಇದ್ದರು ಇವರು. ಅಲ್ಲಿಯ ರಾಣಿ ಇವರಿಗೆ ನೋಬಲ್ ಬಿರುದು ಕೊಟ್ಟು ಗೌರವಿಸಿದಳು. ಇಂಗ್ಲಿಷ್ ತಂದೆ ತಾಯಿಗಳಿಗೆ ವೆನೀಸ್‌ನಲ್ಲಿ ಹುಟ್ಟಿದ ಇವರಿಗೆ ಇಟಾಲಿಯನ್, ಪೋರ್ಚುಗೀಸ್ ಮತ್ತು ಲಾಟಿನ್ ಭಾಷೆಗಳು ಕರಗತವಾಗಿವೆ.

ಗೋವೆಯಿಂದ ನೇರವಾಗಿ ದಕ್ಷಿಣಕ್ಕೆ ಗೋಕರ್ಣ ಇದೆ. ನಾನು ಇಲ್ಲಿಗೆ ಯಾತ್ರೆ ಹೊರಟೆ. ನನ್ನೊಡನೆ ಒಬ್ಬ ದಲ್ಲಾಳಿ, ನಾಲ್ಕು ಪ್ಯೂನ್‌ಗಳು ಮತ್ತು ಇಬ್ಬರು 'ಬಿಗ್ಗರೀನ್'[೩] ಅಂದರೆ ಹೊರೆ ಹೊರುವವರು ಇದ್ದರು. ಫೆಬ್ರುವರಿ ಎರಡನೆಯ ತಾರೀಖು ಬೆಳಗ್ಗೆ ಹತ್ತು ಗಂಟೆಗೆ ನಡೆದುಕೊಂಡು ಹೊರಟೆವು. ಬೇಸಗೆ ಕಾಲ ಆಗತಾನೆ ಆರಂಭವಾಗಿತ್ತು. ತುಂಬಾ ಪ್ರಯಾಸದಿಂದ ಅಂಕೋಲಾ ಪರ್ವತ (Mountain = ಗುಡ್ಡ) ಹತ್ತಿದೆವು. ಕಾಡಿನಿಂದ ಕೂಡಿದ ಈ ಗುಡ್ಡ ಭಾರಿ ಎತ್ತರವಾಗಿದೆ. ಗುಡ್ಡದ ಮೇಲೆ ಕೊಂಚ ಹೊತ್ತು ವಿಶ್ರಾಂತಿ ಪಡೆದು ಅದನ್ನು ಇಳಿಯಲಾರಂಭಿಸಿದೆವು. ಗುಡ್ಡ ಇಳಿಯುವಾಗ ಚಚ್ಚೌಕವಾದ ಭಾರಿ ಕಲ್ಲುಮಂಟಪದಲ್ಲಿ 'ಹವಾಲ್ದಾರ'ನ ಕುದುರೆಯ ಒಂದು ವಿಗ್ರಹ ಇರುವುದನ್ನು ಕಂಡೆವು. ಅದರ ಮೇಲೆ ಸವಾರನ ವಿಗ್ರಹವೂ ಇತ್ತು.[೪] ಇನ್ನೂ ಕೊಂಚ ಕೆಳಗಿಳಿದಾಗ ನಮ್ಮನ್ನು ಕಾಡ್ಗಿಚ್ಚು ಆವರಿಸಿತು. ಇದರಲ್ಲಿ ಸಿಕ್ಕಿಕೊಂಡಿದ್ದರೆ ನಾವು ಜೀವಸಹಿತ ಬೆಂದು ಕರಕಲಾಗಿಹೋಗುತ್ತಿದ್ದೆವು. ಆದರೆ ಉಪಾಯದಿಂದ ತಪ್ಪಿಸಿಕೊಂಡು ಬಯಲಿನ ಕಡೆ ಹೋದೆವು. ಆಗ ನಮಗೆ ಕಂಡದ್ದು ವಿಶಾಲವಾದ ಸಾಗರ. ಮೇಲೆ ಹೇಳಿದ ಕಿಚ್ಚನ್ನು ಬೇಕಾಗಿಯೇ ಹಚ್ಚಿದ್ದಾರೆಂದು ನನ್ನ

---

೩. ಬಿಗ್ಗರೀನ್ = Begar = ಬೇಗಾರ = ಬೇಹುಗಾರರು ಎಂಬ ಪದ ಬೇಗಾರ್ ಎಂದಾಗಿರ ಬಹುದು. ಕರ್ನಾಟಕದ ಕೆಲವು ಕಡೆ ಊರಿನ ತಳವಾರರಿಗೆ ಬೇಗಾರರೆಂಬ ಹೆಸರಿದೆ.

೪. ಇದು ಯುದ್ಧದಲ್ಲಿ ಮಡಿದ ವೀರನ 'ವೀರಗಲ್ಲು' ಅಥವಾ 'ಪಾಳಿಯಾ' ಇರಬಹುದು.

ಭಾವನೆ. ಶಿವಾಜಿಯ ದಳವಾಯಿ ಈ ಕಡೆ ಧಾಳಿ ನಡೆಸಿ ಬಹಳ ದಿನ ಆಗಿರಲಿಲ್ಲ. ಆತನ ಕಡೆಯವರೇ ಈ ಬೆಂಕಿ ಹಚ್ಚಿರಬೇಕೆಂದು ಕಾಣುತ್ತದೆ. ಈ ಕಾಡ್ಗಿಚ್ಚಿನಿಂದ ಪಾರಾದ ನಮ್ಮ ತಳಮಳವನ್ನು ಏನಾದರೂ ತಿಂದು ಪರಿಹರಿಸಿಕೊಳ್ಳೋಣವೆಂದು ಅದಕ್ಕಾಗಿ ಹುಡುಕಿದೆವು. ಏನೂ ಸಿಕ್ಕಲಿಲ್ಲ. ಇಲ್ಲಿಯ ನಿವಾಸಿಗಳು ಬೆಸ್ತರು. ದಳವಾಯಿಯು ಅವರ ಮೀನು, ದೋಣಿ, ಬಲೆ ಮತ್ತು ದವಸ-ಧಾನ್ಯಗಳನ್ನೆಲ್ಲಾ ಕೊಳ್ಳೆ ಹೊಡೆದುಕೊಂಡು ಹೋಗಿಬಿಟ್ಟಿದ್ದಾನೆ. ಹೀಗಾಗಿ ಹೊಟ್ಟೆಗೆ ಏನೂ ಸಿಕ್ಕಲಿಲ್ಲ. ರಾತ್ರಿಯಾದಾಗ ಒಂದು ಮಾವಿನ ಮರದ ಕೆಳಗೆ ಬರಿಹೊಟ್ಟೆಯಲ್ಲಿ ಮಲಗಿದೆವು. ಆದರೆ ಹಸಿವಿನಿಂದ ನಿದ್ದೆ ಬರಲಿಲ್ಲ. ಬೆಳಗ್ಗೆ ಹೊತ್ತಿನಂತೆ ಎದ್ದು ಅಂಕೋಲಾ ಕಡೆಗೆ ನಡೆದೆವು. ಇಲ್ಲಿಯ ಬಜಾರ ಕೂಡ ಅರ್ಧಂಬರ್ಧ ಸುಟ್ಟುಹೋಗಿತ್ತು. ಸುಡದೇ ಉಳಿದಿದ್ದ ಅಂಗಡಿಗಳಲ್ಲಿ ಯಾರೂ ಇರಲಿಲ್ಲ. ಇಲ್ಲಿಯ ಗೌರ್ನರ್ (Governor) ಬಳಿಗೆ ನಮ್ಮ ಪರವಾನಗಿ (Pass) ಕಳುಹಿಸಿಕೊಟ್ಟು ಅದರ ಬದಲು ಬೇರೊಂದು ಪಡೆದು ಹೊಟ್ಟೆಗಾಗಿ ಅನ್ನ ಹುಡುಕಿಕೊಂಡು ಹೊರಟೆವು.

ಶಿವಾಜಿಯು ಇಲ್ಲಿಯ ಕೋಟೆಯನ್ನು ವಶಪಡಿಸಿಕೊಂಡಾಗ ಈ ಊರನ್ನು ಹಾಳುಮಾಡದೆ ಬಿಡಲಿಲ್ಲ. ಹೀಗಾಗಿ ಇದು ಹಾಳುಬಿದ್ದಿದೆ. ಸಿಪಾಯಿಗಳು ಅಪರಿಚಿತರಿಂದ ಕೊಳ್ಳೆಹೊಡೆದುದನ್ನು ತಿಂದು ಕಾಲಹಾಕುತ್ತಿದ್ದಾರೆ. ಇಲ್ಲಿಯ ಕೋಟೆ ಚೆನ್ನಾಗಿದೆ. ಒಳ್ಳೆಯ ಸೈನ್ಯವೂ ಇದೆ. ಐವತ್ತು ಹಿತ್ತಾಳೆ ಫಿರಂಗಿಗಳನ್ನು ಕೋಟೆಯ ಮೇಲೆ ಏರಿಸಲಾಗಿದೆ. ಇಲ್ಲಿಂದ ಮೂರರು ಪೋರ್ಚುಗೀಸರ ಹಡಗೊಂದರಲ್ಲಿ ಪರಾರಿಯಾದರು. ದಕ್ಷಿಣಕ್ಕಿರುವ 'ಗಂಗೊಳೆ' ನದಿಯವರೆಗೆ ಶಿವಾಜಿಯ ರಾಜ್ಯ ವ್ಯಾಪಿಸಿದೆ. ದಕ್ಷಿಣಕ್ಕೆ ಆತನ ರಾಜ್ಯದ ಗಡಿ ಇಲ್ಲಿಗೆ ಕೊನೆಯಾಗುತ್ತಿದೆ. ನಾವು ಈ ಊರು ಬಿಟ್ಟು ಎರಡು ಮೂರು ಮೈಲಿ ಪ್ರಯಾಣ ಮಾಡಿ ಹಕ್ಕಿಗಳನ್ನು ಹೊಡೆದು ಬೇಯಿಸಿ ತಿಂದು ಹೊಟ್ಟೆಗೆ ಒಂದಿಷ್ಟು ಆಧಾರ ಮಾಡಿಕೊಂಡೆವು. ಈ ಆಧಾರದಿಂದ ನಮ್ಮ ದಾರಿ ಸಾಗಿಸಿ ಗಂಗೊಳೆ ನದಿಯ ಬಳಿಗೆ ಬಂದೆವು. ಇಲ್ಲಿ ದೋಣಿಯ ಸಹಾಯದಿಂದ ನದಿ ದಾಟಿ, ಗಂಗೊಳೆ (ಗಂಗೊಳ್ಳಿ) ಊರಿನಲ್ಲಿ ರಾತ್ರಿ ಬಿಡಾರ ಹೂಡಿದೆವು. 'ಕರ್ನಾಟಿಕ' (Carnatick) ಎಂಬ ಹೆಸರನ್ನು ಇನ್ನೂ ಪಡೆದಿರುವ ಈ ನಾಡಿನಲ್ಲಿ ಗಂಗೊಳೆಯೇ ಮೊದಲ ಊರು. ಸರಿಯಾಗಿ ನೋಡಿದರೆ ಗುಜರಾತಿನಿಂದ ಹಿಡಿದು ನಾವು ಇಲ್ಲಿಯವರೆಗೆ ಅಡ್ಡಾಡಿದ ಪ್ರದೇಶವೆಲ್ಲವೂ ಕರ್ನಾಟಕ ಎಂದು ಕರೆಸಿಕೊಳ್ಳಲು ಅರ್ಹವಾಗಿದೆ. ಮೊದಲಿಗೆ ಆ ಹೆಸರು ಈ ಪ್ರದೇಶಕ್ಕೆ ಇತ್ತು. ಇದನ್ನು ಮುಂದೆ ಸಮರ್ಥಿಸಿ ಹೇಳಲಿದ್ದೇನೆ.೫

ಈ ರಾಜ್ಯದ ಜನರು ಒಳ್ಳೆಯ ಆಡಳಿತದಿಂದಾಗಿ ಸುಖ, ಶಾಂತಿಯಿಂದ ಇದ್ದಾರೆ.

ಮಾರನೆಯದಿನ ಬೆಳಕು ಹರಿಯುವ ಹೊತ್ತಿಗೆ ನಾವು ಗೋಕರ್ಣ ತಲುಪಿದೆವು. ಇಲ್ಲಿ ನಾವು ನಮ್ಮ ಇಂಗ್ಲಿಷ್ ಉಡುಪುಗಳನ್ನು ತೆಗೆದು ಮೂರರ ಬಟ್ಟೆ ತೊಟ್ಟು

---

೫. ಗಂಗೊಳೆ ಎಂಬುದು ಧಾರವಾಡ ಜಿಲ್ಲೆಯಲ್ಲಿ ಹುಟ್ಟಿ ಗೋಕರ್ಣದ ಬಳಿ ಸಮುದ್ರ ಸೇರುವ ಗಂಗಾವಳಿ ಅಥವಾ ಬೆಡ್ತಿ (Bedthi) ನದಿ. ಗಂಗಾವಳಿ ಎಂಬ ಊರು ಮತ್ತು ಬಂದರು ಅಂಕೋಲಾದಿಂದ ಉತ್ತರಕ್ಕೆ ಐದು ಮೈಲಿ ದೂರದಲ್ಲಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿಯೂ ಗಂಗೊಳೆ ನದಿ ಮತ್ತು ಗಂಗೋಳ್ಳಿ ಎಂಬ ಊರು ಇವೆ. ನದಿಯು ಸಮುದ್ರ ಸೇರುವ ಮುನ್ನ ಹಲವಾರು ಕವಲುಗಳಾಗಿ ಒಡೆದು ವಿಶಾಲವಾಗಿ ಹರಿಯುವ ಪ್ರದೇಶವನ್ನು 'ಗಂಗಾವಳಿ' ಅಥವಾ 'ಗಂಗೊಳೆ' ಎಂದೂ ಅಲ್ಲಿ ಕಟ್ಟಿದ ಊರಿಗೆ ಗಂಗೆಹಳ್ಳಿ ಅಥವಾ ಗಂಗೊಳ್ಳಿ ಎಂದೂ ಕರೆದಿರಲು ಸಾಕು.

ಕೊಂಡೆವು. ಆದರೆ ಇದು ಗುಟ್ಟಾಗಿ ಉಳಿಯಲಿಲ್ಲ. ಪಿತೃತರ್ಪಣ ಕೊಡಲು ನಮ್ಮೊಡನೆ ಬಂದಿದ್ದ ಬನಿಯನಿಗೆ ಇದು ಗೊತ್ತಾಗಿಬಿಟ್ಟಿತು. ಇಬ್ಬರು ಇಂಗ್ಲಿಷರು ತಮಾಷೆಗಾಗಿ ಬಟ್ಟೆ ಬದಲಾಯಿಸಿಕೊಂಡಿದ್ದಾರೆಂದು ತಿಳಿದ ಆತ ಮೂವತ್ತು ನಲವತ್ತು ಜನರೊಡ ಗೂಡಿ ನಾವಿದ್ದಲ್ಲಿಗೆ ಬಂದನು. ಆಗ ನಾವು ಮೊಗಲರ ವೇಷದಲ್ಲಿ ಇಲ್ಲಿ ನೋಡ ಬೇಕಾದ್ದನ್ನು ನೋಡಲು ಇಚ್ಛಿಪಡುವುದಾಗಿ ತಿಳಿಸಿದಾಗ ಆತನಿಗೆ ಸಮಾಧಾನವಾಯಿತು. ನಾವು ಉಡುಪಿನಲ್ಲಿ ಊರನ್ನು ಪ್ರವೇಶಿಸಿದೆವು. ಊರು ಸಮುದ್ರದ ತಡಿಯಲ್ಲಿ ಕಣಿವೆ ಯೊಳಗೆ ಇದೆ. ಹಿಂದೆ ಇದು ಬಹು ಭವ್ಯವಾಗಿದ್ದಿರಬೇಕು. ಆದರೆ ಈಗ ಇಲ್ಲ. ಹಾಳುಬಿದ್ದ ಅನೇಕ ದೇವಸ್ಥಾನಗಳಷ್ಟೇ ಇರುವುದು. ಬ್ರಾಹ್ಮಣರ ಮಹಾಪೀಠವಾದ ಇಲ್ಲಿ ಈಗ ಎರಡು ಮುಖ್ಯ ದೇವಸ್ಥಾನಗಳು ಮಾತ್ರ ಸುಸ್ಥಿತಿಯಲ್ಲಿವೆ. ತುಂಬ ದೊಡ್ಡ ದಾಗಿರುವ ಈ ದೇವಸ್ಥಾನಗಳನ್ನು ಕಲ್ಲಿನಿಂದ ಚೆನ್ನಾಗಿ ಕಟ್ಟಿದ್ದಾರೆ. ಇವರ ಪ್ರಾಚೀನ ಶಿಲ್ಪದ ಮಾದರಿಯಲ್ಲಿ ಇವುಗಳ ನಿರ್ಮಾಣ ಆಗಿದೆ. ಎಲ್ಲಾ ದೇವಸ್ಥಾನಗಳಲ್ಲಿರುವಂತೆ ಒಂದು ಕೊನೆಯಲ್ಲಿ ಕತ್ತಲೆಯ ಗರ್ಭಗುಡಿ ಇದೆ. ಇದರಲ್ಲಿ ಯಾವಾಗಲೂ ದೀಪಗಳು ಉರಿಯುತ್ತಿರುತ್ತವೆ. ಗರ್ಭಗುಡಿಯಲ್ಲಿರುವ ವಿಗ್ರಹಕ್ಕೆ ನಿತ್ಯವೂ ಪೂಜೆ ಪುರಸ್ಕಾರಗಳನ್ನು ಸಲ್ಲಿಸುತ್ತಾರೆ.

ಅತ್ಯಂತ ಪುಣ್ಯಕ್ಷೇತ್ರವೆಂದು ಪರಿಗಣಿಸಲ್ಪಟ್ಟಿರುವ ಇಲ್ಲಿಗೆ 'ಇಂಡಿಯಾ'ದ ಮೂಲೆ ಮೂಲೆಗಳಿಂದ ಭಕ್ತರು ತಂಡೋಪತಂಡವಾಗಿ ಬರುತ್ತಾರೆ. ಇದರಿಂದ ಬ್ರಾಹ್ಮಣರಿಗೆ ಭಾರಿ ಆದಾಯವಿದೆ. ನಾವಿಲ್ಲಿಗೆ ಬಂದಾಗ ಹಾದಿಬೀದಿಗಳಲ್ಲಿ ಜನ ತುಂಬಿದ್ದರು. ಇವರ ಮಧ್ಯೆ ದಾರಿ ಮಾಡಿಕೊಂಡು ಮುಂದೆ ಸಾಗುವುದೇ ಕಷ್ಟವಾಯಿತು. ಹೇಗೋ ಮಾಡಿ ನಾವು ಬಜಾರನ್ನು ತಲುಪಿದೆವು. ಈ ದೊಡ್ಡ ಬಜಾರಿನ ಬೀದಿಯ ಒಂದೊಂದು ತುದಿಯಲ್ಲಿ ಮೇಲೆ ಹೇಳಿದ ಎರಡು ದೇವಸ್ಥಾನಗಳಿವೆ. ಬೀದಿಯ ಇಕ್ಕೆಲಗಳಲ್ಲಿ ಈ ಸಂದರ್ಭಕ್ಕಾಗಿ ಡೇರೆಗಳನ್ನು ಹಾಕಿ ವ್ಯಾಪಾರ ನಡೆಸುತ್ತಿದ್ದರು. ಜನರ ನೂಕುನುಗ್ಗಲಿನ ಪ್ರವಾಹ ನಮ್ಮನ್ನು ಊರ ಹೊರಗಿದ್ದ ಒಂದು ದೊಡ್ಡ ಕೊಳದ ಬಳಿಗೆ ಕೊಂಡೊಯ್ಯಿತು. ಈ ಕೊಳದ ನಾಲ್ಕು ಕಡೆಯೂ ಇಳಿಯುವುದಕ್ಕೆ ಮೆಟ್ಟಲುಗಳಿದ್ದುವು. ಕೊಳದ ಮಧ್ಯೆ ಅಮೃತಶಿಲೆಯ ನಾಲ್ಕು ಕಂಬಗಳನ್ನು ನಿಲ್ಲಿಸಿ ಮಾಡಿದ ಮಂಟಪದಲ್ಲಿ ಒಂದು ಸುಂದರವಾದ ಗುಡಿ ಇದೆ. ಈ ಜಾತ್ರೆಯ ವೇಳೆ ಸಾಯಂಕಾಲ ಲಕ್ಷ ದೀಪಗಳನ್ನು ಹಚ್ಚಿಸುತ್ತಾರೆ. ಈ ಕೊಳದಲ್ಲಿ ಸ್ತ್ರೀಪುರುಷರು ಸ್ನಾನಮಾಡಿ ಬ್ರಾಹ್ಮಣರಿಗೆ ಅಕ್ಕಿ ಮತ್ತು ಕಾಣಿಕೆ ಒಪ್ಪಿಸುತ್ತಾರೆ. ಈ ಕೊಳದಲ್ಲಿರುವ ಮೀನುಗಳಿಗೂ ಬೇಕಾದಷ್ಟು ತಿಂಡಿ ದೊರೆಯುತ್ತದೆ. ಮೀನುಗಳು ಎಷ್ಟು ಪಳಗಿ ಬಿಟ್ಟಿವೆ ಎಂದರೆ, ನಾವು ಅವುಗಳನ್ನು ಕೈಯಿಂದ ಹಿಡಿದುಕೊಳ್ಳಬಹುದು. ಆದರೆ ಈ ಮೀನುಗಳನ್ನು ಕೊಲ್ಲುವುದು ಮಹಾಪಾಪ.

ತೀರಿಹೋದ ಪಿತೃಗಳಿಗೆ ಪಿಂಡ ಹಾಕಲು ಜನರು ಇಲ್ಲಿಗೆ ಬರುತ್ತಾರೆಯಷ್ಟೆ. ಬಂದವರು ತಮ್ಮ ತಲೆ ಬೋಳಿಸಿಕೊಳ್ಳುತ್ತಾರೆ. ಈ ಕೊಳದ ನೀರನ್ನು ತಲೆಯ ಮೇಲೆ

ಪ್ರೋಕ್ಷಿಸಿಕೊಂಡ ಮೇಲೆ ಹಜಾಮನು ತಲೆಬೋಳಿಸುತ್ತಾನೆ. ಬೋಳಿಸಿದ ಕೂದಲನ್ನು ಗಂಟು ಕಟ್ಟಿ ಬ್ರಾಹ್ಮಣರಿಗೆ ಒಪ್ಪಿಸುತ್ತಾರೆ. ಬ್ರಾಹ್ಮಣನು ಹಸು ಕರುಗಳನ್ನು ನೀರಿನ ಬಳಿಗೆ ತರುತ್ತಾನೆ. ಅವುಗಳನ್ನು ಭಕ್ತಿಯಿಂದ ಪೂಜಿಸಿದನಂತರ ಭಕ್ತರು ಅವುಗಳ ಪೋಷಣೆಗೆ ಬೇಕಾದ ಹಣ ಆಭರಣ ಮುಂತಾದುವುಗಳನ್ನು ಕೊಡುತ್ತಾರೆ. ಇಷ್ಟು ಮಾಡಿದ ನಂತರ ಬ್ರಾಹ್ಮಣನು ಭಕ್ತರನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಪೂಜೆ ಮಾಡಿಸಿ ತೂಗುಹಾಕಿರುವ ಗಂಟೆ ಬಾರಿಸುತ್ತಾನೆ. ಅಲ್ಲಿಗೆ ಹರಕೆ ತೀರಿಸಿದಂತಾಯಿತು. ಹರಕೆ ಹೊತ್ತ ಯಹೂದಿಗಳಲ್ಲಿಯೂ ಹೀಗೆ ದೇವರಿಗೆ ಮುಂಡೆ ಕೊಡುವ ಹಳೆಯ ಪದ್ಧತಿ ಇತ್ತು.

ನಾವು ಸಮುದ್ರತೀರದಲ್ಲಿಯೇ ಸಾಗಿ ಬಹು ದೊಡ್ಡ ದೇವಸ್ಥಾನದ ಪೌಳಿಯ ಬಳಿಗೆ ಬಂದೆವು. ಹೆಬ್ಬಾಗಿಲ ಬಳಿ ಒಂದು ಚೌಲ್ಟ್ರಿಯಲ್ಲಿ ನಲವತ್ತಕ್ಕೂ ಹೆಚ್ಚು ಬೆತ್ತಲೆ 'ಜೋಗಿ'ಗಳು ಕುಳಿತಿದ್ದರು. ಮೈಗೆ ವಿಭೂತಿ ಬಳಿದುಕೊಂಡು ಜಟಾಧಾರಿಗಳಾಗಿದ್ದರು. ಇವರಲ್ಲಿ ಒಬ್ಬ ಜೋಗಿ ತಲೆಯನ್ನು ತಗ್ಗಿಸಿ ಕಣ್ಣು ಮುಚ್ಚಿ ಸ್ಥಿರನಾಗಿ ಪದ್ಮಾಸನದಲ್ಲಿ ಕುಳಿತಿದ್ದ. ಅವನ ಉಗುರು ಹಕ್ಕಿಯ ಉಗುರುಗಳಂತೆ ಉದ್ದವಾಗಿ ಬೆಳೆದಿದ್ದವು. ಇನ್ನೊಬ್ಬ ಜೋಗಿ ತನ್ನ ಪುರುಷಾಂಗಕ್ಕೆ ಚಿನ್ನದ ಬಳೆ ಹಾಕಿಕೊಂಡಿದ್ದ.[೬]

ನಾವು ಮುಖ್ಯ ಮಾರುಕಟ್ಟೆಯ ಬಳಿಗೆ ಬಂದು ಆ ಸ್ಥಳದ ಮುಖ್ಯ ದಳವಾಯಿಯ ಬಳಿ ಸ್ಥಳ ಕೇಳಿ ಉತ್ಸವ ನೋಡಲು ಕುಳಿತೆವು. ರಾಜಬೀದಿಯ ಒಂದು ತುದಿಯಲ್ಲಿ ಎರಡು ರಥಗಳು ಇದ್ದುವು. ಎರಡು ಅಂತಸ್ತಿನ ಈ ರಥಗಳನ್ನು ಬಣ್ಣ ಬಣ್ಣದ ಬಾವುಟಗಳಿಂದಲೂ ಮತ್ತಿತರ ಅಲಂಕಾರದ ವಸ್ತುಗಳಿಂದಲೂ ಸಿಂಗಾರಮಾಡಿದ್ದರು. ರಥಗಳ ಮೇಲ್ಭಾಗದಲ್ಲಿ ಕಳಸ ಹಾಕಿದ್ದರು. ಕೆಳ ಅಂತಸ್ತಿನಲ್ಲಿ ದೇವರ ವಿಗ್ರಹ ಇಟ್ಟಿದ್ದರು. ಬಿಳಿಯ ಪಂಚೆ ಉಟ್ಟು, ಹಸಿರು ಶಲ್ಯ ಹೊದ್ದ, ತಲೆಯ ಮೇಲೆ 'ಪಗರಿ' (ಪಗಡಿ) ಇಟ್ಟುಕೊಂಡ ಪ್ರಧಾನ ಅರ್ಚಕರು ವಿಗ್ರಹದ ಬಳಿ ಕುಳಿತಿದ್ದರು.

'ಮಶಾಲ್' (ಮಸಾಲ್ಚಿ = ಪತ್ತು) ಹಿಡಿದಿದ್ದರು. ಜರತಾರಿ ಹಾಗೂ ಮಖಮಲ್ಲಿನ ಬಟ್ಟೆಯ 'ಅಪ್ತಗಿರಿ' ಹಿಡಿದಿದ್ದರು.

ಮುಖ್ಯ ನಾಯಕ ತನ್ನ ಭಾರಿ ವಾದ್ಯಗಳ ಸಮೇತ ದೇವರ ಸೇವೆಗಾಗಿ ಸಿದ್ಧನಾಗಿ ನಿಂತಿದ್ದ. ಬ್ರಾಹ್ಮಣರು ಸಣ್ಣ ಸಣ್ಣ ವಾದ್ಯಗಳನ್ನು ಹಿಡಿದಿದ್ದರು. ಕೈಕಾಲುಗಳಿಗೆ ಗೆಜ್ಜೆ ಕಟ್ಟಿಕೊಂಡು ತಬಲಾ ಹಿಡಿದು ನರ್ತಕಿಯರು ಹಾಡುತ್ತಾ ಕುಣಿಯುತ್ತಿದ್ದರು. ಹಲವಾರು ಛಿತೂರಿ (Chitoori = ಛತ್ರಿ) ಗಳನ್ನೂ ಬೆಲೆಯಾದ ಪುಟ್ಟ 'ಕಿಟ್ ಸೋಲ್' ಗಳನ್ನೂ ಹಿಡಿದಿದ್ದರು. ಕಿಟ್‌ಸೋಲ್‌ಗಳೆಂದರೆ ಛತ್ರಿಗಳಿಗೆ ಬೇರೆ ಬೇರೆ ನಾಡುಗಳಲ್ಲಿ ಇಟ್ಟ ಹೆಸರುಗಳು. ಹಿತ್ತಾಳೆಯ ಮತ್ತು ಕಬ್ಬಿಣದ ಭರ್ಜಿಗಳನ್ನು ಹಿಡಿದ

---

೬. ಶೈವ ಜಂಗಮರಾದ ಕರಲಿಂಗಿಗಳಲ್ಲಿ ಈ ಪದ್ಧತಿ ಇದೆಯಂತೆ.

೫೦೦ ಜನ ಇದ್ದರು. ಬಂದೂಕುಗಳನ್ನು ಹೊತ್ತ ಜನರ ಸಂಖ್ಯೆ ಇನ್ನೂ ಹೆಚ್ಚಾಗಿತ್ತು. ನಾಯಕನನ್ನು ೨೦೦ ಜನ ಸಿಬ್ಬಂದಿಯುವರು ಹಿಂಬಾಲಿಸಿ ಬರುತ್ತಿದ್ದರು. ಇವರ ಹಿಂದೆ ಘಟ ಬಾರಿಸುತ್ತಾ ಮತ್ತು ತಾಳಗಳನ್ನು ಹಾಕುತ್ತಾ ಉತ್ಸಾಹದಿಂದ ಕುಣಿಯುತ್ತಿದ್ದ ಜನ ಇದ್ದರು. ರಥವು ಸಾಗಿ ತಮ್ಮ ಬಳಿಗೆ ಬಂದಾಗ ಜನರು ಕೈಯೆತ್ತಿ ಮುಗಿದು ಚಪ್ಪಾಳೆ ತಟ್ಟುತ್ತಿದ್ದರು. ಉತ್ಸವವು ಸಾಗಿ ಎದುರಿಗಿದ್ದ ಇನ್ನೊಂದು ದೇವಸ್ಥಾನದ ಬಳಿಗೆ ಹೋಯಿತು. ಮದ್ದು ಗುಂಡುಗಳನ್ನು ಹಾರಿಸಿದ ಮೇಲೆ ಉತ್ಸವ ಕೊನೆಗೊಂಡಿತು. ಈ ಉತ್ಸವದಲ್ಲಿ ಬೇರೆ ದೇವರುಗಳೂ ಮೆರವಣಿಗೆ ಹೊರಟಿದ್ದುವು.

ಈ ದೇವರುಗಳ ಜೊತೆ ಹೆಣ್ಣುಮಕ್ಕಳು ಧೂಪ ದೀಪಗಳನ್ನು ಹಿಡಿದು ಸಾಗಿದ್ದರು. ಭಕ್ತರು ಚಾಪಟಿಯಿಂದ ಬಾರಿಸಿಕೊಳ್ಳುವುದು ಮುಂತಾದ ಪ್ರದರ್ಶನ ಮಾಡುತ್ತಿದ್ದರು. ಈ ಜನರ ಅಗಾಧ ಭಕ್ತಿ ಹೇಳತೀರದು.

ಇಲ್ಲಿರುವ ಪ್ರತಿಯೊಂದು ದೇವರ ಹಾಗೂ ದೇವಸ್ಥಾನಗಳ ವರ್ಣನೆ ಮಾಡಲು ಸಾಧ್ಯವಾಗುವುದಿಲ್ಲ. ಬೆಂಕಿಯ ಅನಾಹುತದಿಂದ ಪಾರಾಗಿ ಉಳಿದ ಒಂದೇ ಒಂದು ವಿಗ್ರಹದ ಬಗ್ಗೆ ಮಾತ್ರ ನಾನು ಹೇಳಬಲ್ಲೆ. ಕರಿಯುಶಿಲೆಯಿಂದ ಮಾಡಿದ ಮನುಷ್ಯನ ಎತ್ತರದ ನಾಲ್ಕು ತಲೆಯ ನಾಲ್ಕು ಕೈಗಳ ವಿಗ್ರಹ ಇದು. ಬಿದ್ದುಹೋದ ಗುಡಿಯಲ್ಲಿ ಈ ವಿಗ್ರಹ ಇದೆ. ಇಂತಹ ವಿಗ್ರಹ ವಿಗ್ರಹಾರಾಧಕರ ಮತ್ತೊಂದು ಯಾತ್ರಾಸ್ಥಳವಾದ ಬನಾರಸ್‌ನಲ್ಲಿಯೂ ಇಲ್ಲವೆಂದು ಹೇಳುತ್ತಾರೆ. ಇವನ್ನು ಯಾರು ಮಾಡಿದರು ಎಂಬುದನ್ನು ಇವರ 'ಸಂಸ್ಕೃತ' ಪುಸ್ತಕಗಳಾಗಲೀ ಕಥೆಗಳಾಗಲೀ ತಿಳಿಸುವುದಿಲ್ಲ. ಅಂತೂ ಕಾಲ ಕಳೆದಂತೆ ಮತ್ತು ಮೂರರು ಈ ದೇಶಕ್ಕೆ ಬಂದನಂತರ ಇವು ಹಾಳಾಗುತ್ತಾ ಬಂದಿವೆ. ಇದು ಈ ಜನರ ಮುಖ್ಯ ಪೀಠವಾದರೂ ಇಲ್ಲಿ ದೊಡ್ಡ ಪುಸ್ತಕ ಭಂಡಾರವಾಗಲೀ ವ್ಯಾಟಿಕನ್‌ನಂತಹ ಪೀಠವಾಗಲೀ ಇಲ್ಲ. ಇರುವ ಪುಸ್ತಕ ಭಂಡಾರಗಳಲ್ಲಿ ತಮ್ಮವೇ ಆದ ಪುರಾತನ ಗ್ರಂಥಗಳು ಮಾತ್ರ ಇವೆ. ಇವನ್ನು ಬ್ರಾಹ್ಮಣರು ಮಾತ್ರ ಓದಬಲ್ಲರು. ಈ ಜನರು (ಅರ್ಚಕರು) ತಮ್ಮ ತಮ್ಮ ಪುಟ್ಟ ಮನೆಗಳಲ್ಲಿ ವಾಸಮಾಡುತ್ತಾರೆ. ಈ ಮನೆಗಳನ್ನು ದಿನವೂ ಸಗಣಿಯಿಂದ ಸಾರಿಸುತ್ತಾರೆ. ಇವರು ಬ್ರಹ್ಮಚಾರಿಗಳಾಗಿರಬೇಕೆಂಬ ನಿಯಮವೇನಿಲ್ಲ. ಈ ಕಾರಣ ಇವರು ಮದುವೆಯಾಗಿ ಸಂಸಾರಿಗಳಾಗಿ ದೇವರ ಪೂಜಾರಿಗಳಾಗಿದ್ದಾರೆ. 'ಸಿನಾಯ್' ಜಾತಿಯ ಒಬ್ಬನು ಮಾತ್ರ ಬ್ರಹ್ಮಚಾರಿಯಾಗಿದ್ದುಕೊಂಡು ಅನೇಕ ಬ್ರಾಹ್ಮಣ ಶಿಷ್ಯರನ್ನು ಹೊಂದಿದ್ದಾನೆ.[೭] ವೃದ್ಧನಾದ ಈತನನ್ನು ಬಹಳ ಭಕ್ತಿಯಿಂದ ಕಾಣುತ್ತಾರೆ. ಇವನು ತಲೆಗೆ ಕೆಂಪು ಟೋಪಿ ಧರಿಸುತ್ತಾನೆ. ಬೇರೆ ಕಡೆಯುವರು ರುದ್ರಾಕ್ಷಿಮಾಲೆ ಹಿಡಿದು ಜಪ ಮಾಡಿದರೆ ಇವನು

೭. ಇಲ್ಲಿ ಹೇಳಿರುವ ಸಿನಾಯ್ ಜಾತಿಯ ಗುರು ಯಾರೆಂದರೆ ಕೊಂಕಣಸ್ಥರ ಗುರು. ಕೊಂಕಣಿ ಗುರುಗಳ ಪೀಠ ಇರುವುದು ಗೋಕರ್ಣದಲ್ಲಿ.

ಕವಡೆ ಸರಮಾಲೆ ಹಿಡಿದು ಜಪ ಮಾಡುತ್ತಾನೆ. 'ಭಟ್ಟ' ಎಂಬ ಜನರೂ ಕಟ್ಟುನಿಟ್ಟಾದ ಜೀವನ ನಡೆಸುತ್ತಾರೆ.

ಬ್ರಾಹ್ಮಣರನ್ನು ಅವರ ಜನಿವಾರದಿಂದ ಗುರುತಿಸಬಹುದು. ಇವರು (ಅರ್ಚಕರು) ದಿನಾ ನಾಲ್ಕು ಸಲ ವಾದ್ಯ ಹಾಗೂ ನರ್ತಕಿಯರ ಸಮೇತ ಕೊಳಕ್ಕೆ ಹೋಗಿ ದೇವರ ಪೂಜೆಗೆ ನೀರು ತರುತ್ತಾರೆ. ನರ್ತನ ಮಾಡುವ ಸ್ತ್ರೀಯರು 'ದೌವಳಿ' (Dowly) ಎಂಬ ಜಾತಿಯವರು. ಈ ಜಾತಿಯಲ್ಲಿ ಮೊದಲನೆಯ ಗಂಡನ್ನೋ ಅಥವಾ ಹೆಣ್ಣನ್ನೋ ದೇವರಿಗೆ ಬಿಡುತ್ತಾರೆ.

ಇಷ್ಟು ಹೇಳಿ ಈ ಜನರ ಸ್ವಭಾವದ ಬಗ್ಗೆ ಒಂದು ಮಾತು. ಇವರ ಮತವು ಇವರನ್ನು ಉತ್ಸಾಹಹೀನರಾಗಿ ಮಾಡಿದೆಯೋ, ಇಲ್ಲವೆ ಇವರ ನಡತೆಯು ಗುಣ ಧರ್ಮವೋ ಏನೋ ಇವರು ಪರಕೀಯರ ಬಗ್ಗೆ ನಿರಾಸಕ್ತರಾಗಿರುವುದನ್ನು ಕಾಣಬಹುದು. ಪರಕೀಯರ ವಿಶಿಷ್ಟ ನಡತೆಯ ಬಗೆಗಾಗಲೀ ಅಥವಾ ಅವರ ಆಡಂಬರದ ಉಡುಪಿನ ಬಗೆಗಾಗಲೀ ಏನೊಂದೂ ಆಸಕ್ತಿ ತೋರುವುದಿಲ್ಲ.

ನಾವು ಇಲ್ಲಿಂದ ಹೊರಟು ಮಿರ್ಜಾ ಎಂಬ ನದಿಯ ಬಳಿ ಇರುವ ತುದೇರಾ (Tudera = ತದ್ರಿ) ಎಂಬಲ್ಲಿಗೆ ಹೋದೆವು. ಊರು ಒಂದು ಬೋಳುಗುಡ್ಡದ ಮೇಲೆ ಇದೆ. ಇಲ್ಲಿ ನಮ್ಮನ್ನು ಕಂಪನಿಯ ಬಲೂನ್ (ದೋಣಿ) ಎದುರುಗೊಂಡಿತು. ಇದರಲ್ಲಿ ಹೊರಟ ನಾವು (ಮಿರ್ಜಾ = ಮಿರ್ಜಾನ್) ಎಂಬಲ್ಲಿಗೆ ಹೋದೆವು. ಇಲ್ಲಿ ನಮ್ಮ ಚೊಟಿ ಬನಿಯ ಹುಡುಗಿಯರ ನರ್ತನ ಏರ್ಪಡಿಸಿದ್ದ. ಇವನ ಅಪ್ಪ ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋದ ಕಾರಣ ಈತ ತನ್ನ ಜಾತಿಯ ಜಿಪುಣತನಕ್ಕೆ ವಿರುದ್ಧ ವಾಗಿ ಖುಷಿಯಲ್ಲಿ ಕಾಲ ಕಳೆಯುತ್ತಿದ್ದಾನೆ.

ಮಿರ್ಜಾನ್‌ನಲ್ಲಿ ಹಳೆಯದಾದರೂ ಸೊಗಸಾದ ಎರಡು ಸುತ್ತಿನ ಕೋಟೆಯೂ ಅಗಳೂ ಇವೆ. ಎತ್ತರವಾದ ಬುರುಜುಗಳಿವೆ. ಮೂರ್ (ಮಹಮ್ಮದೀಯ) ಗೌರ್ನರನ ಮೋಸದಿಂದಾಗಿ ಈ ಕೋಟೆಯು 'ಕರ್ನಾಟಿಕ್ ರಾಣ್ಣಾ'[೮] ಎಂಬುವನ ಅಧೀನದಲ್ಲಿದೆ. ಊರಿನಲ್ಲಿ ದೊಡ್ಡ ಬಜಾರ್ ಬೀದಿ ಇದೆ. ಈ ಬೀದಿಯ ಕೊನೆ ಯಲ್ಲಿ ಮೂರರ ಗೋರಿಗಳು ಇವೆ.

ನಾನು ಸುಸ್ತಾಗಿಬಿಟ್ಟಿದ್ದೆ, ನರ್ತಕಿಯರ ಹಾಡುಪಾಡು ಕೇಳಿ ಸಾಕಾಗಿತ್ತು. ಹಾಗೆಯೇ ನದಿಯ ದಡದಲ್ಲಿ ಒಂದು ಮಾವಿನ ಮರದ ನೆರಳಿನಲ್ಲಿ ಮಲಗಿದೆ. ಆಗ ಭಾರಿ ಹಾವೊಂದು ಬುಸುಗುಟ್ಟಿತು. ಅದರಿಂದ ಎಚ್ಚರಗೊಂಡ ನಾನು ಕೂಡಲೇ ಎದ್ದು ದೂರಕ್ಕೆ ಓಡಿದೆ. ಇಲ್ಲದಿದ್ದರೆ ಆ ದಿನ ನನ್ನ ಗತಿ ಮುಗಿಯುತ್ತಿತ್ತು. ಹಾವು

---

೮. ಕರ್ನಾಟಕ್ ರಾಣ್ಣಾ = ಬಿದನೂರಿನ ಶಿವಪ್ಪನಾಯಕ.

ಸಿಟ್ಟಿನಿಂದ ಹೆಡೆ ಎತ್ತಿ ನೋಡಿ ನದಿಯ ದಂಡೆಯ ಪೊದೆಯಲ್ಲಿ ಮಾಯವಾಯಿತು. ಈ ಸ್ಥಳದ ಜನರಿಗೆ ಹಾವುಗಳಿಂದ ಭಾರಿ ಅಪಾಯವುಂಟು. ನನಗಾದ ಅನುಭವ ಹೇಳಿದಾಗ ಅವರು ನಾನು ಬದುಕಿಬಂದದ್ದು ಅದೃಷ್ಟ ಎಂದು ಅಚ್ಚರಿಪಟ್ಟರು. ಇಲ್ಲಿ ಭಾರಿ ಪ್ರಾಣಿಗಳನ್ನು ನುಂಗುವ ಹಾವೂ ಇವೆಯೆಂದು ಆ ಜನ ಹೇಳಿದರು.

ಕರ್ನಾಟಕ ದೇಶವು ಕರಾವಳಿಯಲ್ಲಿರುವ ಗಂಗಾವಳಿಯಿಂದ ಮಲಬಾರಿನ ಜಾಮೊರಿನ್ ದೇಶದವರೆಗೆ ಹಬ್ಬಿದೆ ಎಂದು ಸ್ಥಳದವರಿಂದ ತಿಳಿಯಿತು. ಮತ್ತು ಒಳನಾಡಿನಲ್ಲಿ ಸುಂದಾದವರೆಗೂ, ಸೆರ್ಜಿಖಾನನ ರಾಜ್ಯದವರೆಗೂ ಹಬ್ಬಿದೆಯಂತೆ. ಈ ಕರ್ನಾಟಕ ದೇಶದ ರಾಜಧಾನಿ ಬೆದನೂರು (Bedanur=ಬಿದನೂರು). ಅದು ಇಲ್ಲಿಂದ ಐದು ದಿನದ ದಾರಿಯಷ್ಟು ದೂರದಲ್ಲಿದೆ. ರಾಣ್ವಾನು ಇರುವುದು ಇಲ್ಲಿಯೆ. ಕನೋರದ ರಾಜನಾದ ಶಾಮ್‌ಶಂಕರ್ ನಾಯಕನನ್ನು ಅವನ ಸರದಾರರು ಕೊಲೆಮಾಡಿದ ಮೇಲೆ ಆತನ ವಿಧವೆಯು ಚಿಕ್ಕವಯಸ್ಸಿನ ಮಗ ಬಸಪ್ಪನಾಯಕನ ಹೆಸರಿನಲ್ಲಿ ರಾಜ್ಯ ಆಳುತ್ತಿದ್ದಾಳೆ. ಇವಳ ಬೆಂಬಲಕ್ಕೆ ತಿಮ್ಮನಾಯಕನೆಂಬುವನು ಇದ್ದಾನೆ. ಈತ ಈಡಿಗರವನು (Toddyman). ಈತನು ತನ್ನ ಶಕ್ತಿಗಿಂತ ಹೆಚ್ಚಾಗಿ ಕುಯುಕ್ತಿಯಿಂದ ದೊಡ್ಡ ಸ್ಥಾನಕ್ಕೆ ಏರಿ ಅಧಿಕಾರ ನಡೆಸುತ್ತಿದ್ದಾನೆ. ಈತನಿಗೂ ವಿಜಯಪುರದ ರಾಜ್ಯದ ಸರ್ಜಿಖಾನನಿಗೂ ಒಂದು ಒಪ್ಪಂದ ಆಗಿದೆ. ಇವರಿಬ್ಬರೂ ಈಚೆಗೆ ಒಟ್ಟಿಗೆ ಊಟ ಮಾಡಿದರಂತೆ. ಈ ಕಾರಣ ತಿಮ್ಮಪ್ಪನಾಯಕ ಮುಹಮ್ಮದೀಯನಾಗುವ ಕಾಲ ದೂರ ಇಲ್ಲವೆಂದು ಹೇಳುತ್ತಾರೆ.

ಮಲಬಾರಿನಲ್ಲಿ ಆಳುವ ಜನ ನಾಯರ್‌ಗಳೆಂದು ಹೆಸರಿಟ್ಟುಕೊಂಡರೆ ಇಲ್ಲಿಯವರು ನಾಯಕ ಎಂದು ಇಟ್ಟುಕೊಳ್ಳುತ್ತಾರೆ. ಮಲಬಾರಿನಿಂದ ಸೂರತ್‌ವರೆಗೆ ಇರುವ ಜನರ ಭಾಷೆ ಕನೋರಿನ್ (Canorein=ಕನರೀಸ್=ಕನ್ನಡ). ಇದು ಪ್ರಾಚೀನವಾದ ಭಾಷೆ. ಆ ನಾಡಿನ ಭಾಷೆಗಿರುವಂತೆ ನಾಡಿಗೂ ಕನೋರಿನ್ ಎಂದೇ ಹೆಸರು. ಅಲ್ಲಲ್ಲಿ ಆಡುವ ಭಾಷೆಯಲ್ಲಿ ಕೊಂಚ ವ್ಯತ್ಯಾಸವಿರುತ್ತದೆ. ನಾಡಿನ ಹೆಸರು ಯುದ್ಧದ ಜಯಾಪಜಯದಂತೆ ಬದಲಾವಣೆಯಾಗುತ್ತಾ ಇದೆ.

ಇಲ್ಲಿ ಕಾಡಾನೆಗಳು, ಕೊಂಚ ಮೆಣಸು, ಹೇರಳವಾಗಿ ಅಡಕೆ ಮತ್ತು ಕಾಡು ಜಾಜಿಕಾಯಿ ಇವೆ. ಕಾಡು ಜಾಜಿಕಾಯಿಯನ್ನು ಬಣ್ಣಕ್ಕೆ ಉಪಯೋಗಿಸುತ್ತಾರೆ. ಪ್ರಪಂಚದಲ್ಲೇ ಅತ್ಯುತ್ತಮವಾದ ಮೆಣಸು ಬೆಳೆಯುವುದು ಸುಂದಾದಲ್ಲಿ. ಇದಕ್ಕೆ ಇಂಗ್ಲೆಂಡಿನಲ್ಲಿ 'ಕಾರವಾರ ಮೆಣಸು' ಎಂದು ಕರೆಯುತ್ತಾರೆ. ಸುಂದಾ ಕಾರವಾರಕ್ಕೆ ಐದೇ ಮೈಲಿ ದೂರದಲ್ಲಿದ್ದರೂ ಅಲ್ಲಿ ಬೆಳೆಯುವ ಮೆಣಸಿಗೆ ಕಾರವಾರ ಮೆಣಸು ಎಂಬ ಹೆಸರು ಬಂದಿದೆ. ಅತ್ಯುತ್ತಮವಾದ ಈ ಮೆಣಸನ್ನು ರಾಜನು ಅತ್ಯಂತ ಹೆಚ್ಚಿನ ಬೆಲೆಗೆ ಮಾರುತ್ತಾನೆ. ಘಟ್ಟದ ಮೇಲೆ ಈ ಮೆಣಸಿಗೆ ಭಾರಿ ಗಿರಾಕಿ ಉಂಟು. ಹೀಗಾಗಿ

ಯುರೋಪಿನಲ್ಲಿ ಸಿಕ್ಕುವುದು ಬಹಳ ಕಡಮೆ. ಈ ರಾಜನು ಸುಂದಾದಲ್ಲಿಯೇ ಇದ್ದು ವಿಜಯಪುರದ ಇತರ ಸಾಮಂತ ರಾಜರಷ್ಟೆ ಅಧಿಕಾರ ಅಂತಸ್ತುಗಳನ್ನು ಹೊಂದಿದ್ದಾನೆ.

ಇಲ್ಲಿ ಶ್ರೀರಂಗಪಟ್ಟಣದ 'ರಾಜ'ನ ವಿಷಯ ಹೇಳದೆ ಬಿಡಬಾರದು. ಏಕೆಂದರೆ, ಆತನು ಯುದ್ಧ ಮಾಡುವ ವಿಧಾನ ಅಕ್ಕಪಕ್ಕದ ರಾಜರುಗಳ ಯುದ್ಧಕ್ಕಿಂತ ಭಿನ್ನವಾಗಿದೆ. ಆತನು ತನ್ನ ಸೈನಿಕರು ಒಂದು ಬಗೆಯ ವಿಶಿಷ್ಟ ಆಯುಧವನ್ನು ಉಪಯೋಗಿಸುವುದರಲ್ಲಿ ನಿಪುಣರನ್ನಾಗಿ ಮಾಡಿದ್ದಾನೆ. ಈ ಆಯುಧದಿಂದ ಸೈನಿಕರು ಶತ್ರುಗಳು ಯುದ್ಧರಂಗ ದಲ್ಲಿರಲಿ ಅಥವಾ ಪಾಳೆಯದಲ್ಲಿರಲಿ ಅವರ ಮೇಲೆ ಎರಗಿ ಅವರ ಮೂಗುಗಳನ್ನು ಬಹು ಚಾಕಚಕ್ಯತೆಯಿಂದ ಕೊಯ್ದುಬಿಡುತ್ತಾರೆ. ಒಮ್ಮೆ ಹೀಗೆ ಕೊಯ್ದ ಮೂಗುಗಳನ್ನು ಗಾಡಿಗಳಲ್ಲಿ ತುಂಬಿ ತಮ್ಮ ರಾಜನ ಉಪಹಾರಕ್ಕೆ ಒದಗಿಸಿದರಂತೆ.

ಹೀಗೆ ಮೂಗು ಕೊಯ್ಸಿಕೊಂಡು ತಮ್ಮ ವಿಕಾರವಾದ ಮುಖವನ್ನು ತೋರಿಸ ಲಾರದ ಶತ್ರುಸೈನ್ಯವು ರಾಜನ ತಂಟೆಗೆ ಹೋಗುವುದಿಲ್ಲ. ರಾಜನ ರಾಜ್ಯ ಜ಼ಾಮೊರಿನ್ ರಾಜನ ರಾಜ್ಯದ ಹಿಂಬದಿಗೆ ಇದೆ. ಇವನ ರಾಜ್ಯದಿಂದಾಚೆ ಮದರಿ [ಮದುರೆ] ರಾಜನ ರಾಜ್ಯ ಕೇಪ್ ಕಾಮೊರಿನ್‌ವರೆಗೆ ವ್ಯಾಪಿಸಿದೆ.

ಇವರೆಲ್ಲ ವಿಜಾಪುರದ ರಾಜ್ಯದಿಂದ ಕಳಚಿಕೊಂಡ ರಾಜರುಗಳು. ಇವರಲ್ಲಿ ಪರಸ್ಪರ ನಂಬಿಕೆ ಇಲ್ಲ. ದೇಶದ ಹಿತಕ್ಕಾಗಿ ಒಗ್ಗಟ್ಟಾಗುವುದೂ ಇಲ್ಲ. ಶಿವಾಜಿ ಇವರಲ್ಲಿ ಕ್ಷೋಭೆಯನ್ನುಂಟುಮಾಡಿರುವ ಕಾರಣ ತಾವು ಯಾರ ಕಡೆ ಇರಬೇಕೆಂಬುದು ಗೊತ್ತಿಲ್ಲ. ಅವನ ಉದ್ದೇಶ ಏನೆಂಬುದೂ ಇವರಿಗೆ ಗೊತ್ತಾಗಿಲ್ಲ. ಡೆಕ್ಕನ್ನಿನ ತನ್ನ ಸಮಾನ ರಾಜರು ಗಳ ಪರವಾಗಿ ಹೋರಾಡುತ್ತಿದ್ದೇನೆಂದು ಶಿವಾಜಿ ಹೇಳಿಕೊಳ್ಳುತ್ತಿದ್ದಾನೆ, ನಿಜ. ಆದರೆ ತಮ್ಮ ದೇಶಕ್ಕಾಗಿ ಅವನಂತೆ ಹೋರಾಡುವ ರಾಜರು ಯಾರೂ ಇಲ್ಲ. ಅವನು ಆಗೊಮ್ಮೆ ಈಗೊಮ್ಮೆ ಇವರನ್ನು ಕೊಳ್ಳೆಹೊಡೆಯುವುದು ತನಗಾಗಿ ಮತ್ತು ತನ್ನ ಸೈನಿಕರಿಗಾಗಿ. ಹೀಗಾಗಿ ಈ ರಾಜರುಗಳು ಶಿವಾಜಿಗೆ ಘಾತಕತನ ಬಗೆಯು ತ್ತಿದ್ದೇವೆಂದು ಭಾವಿಸದೆ ಅಥವಾ ಪರದೇಶದವನಾದ ಬಹ್ಲೋಲ್‌ಖಾನನ ಸೊಕ್ಕಿಗೆ ಸೊಪ್ಪುಹಾಕದೆ ಒಳಸಂಚುಗಳಿಗೆ ಕೈ ಹಾಕಿ ಮೊಗಲರ ಸಹಾಯ ಕೋರುತ್ತಾರೆ. ಆದರೆ. ಈ ಪರಸ್ಪರ ಸಹಾಯದ ಬಗ್ಗೆ ಯಾವ ಒಪ್ಪಂದವೂ ಆಗಿಲ್ಲ. ಈ ಪರಿಸ್ಥಿತಿಯನ್ನು ಗಮನಿಸಿದ ಶಿವಾಜಿ ಅದನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತಾನೆ. ಯಾವ ರಾಜ್ಯವೆಂದರೆ ಆ ರಾಜ್ಯದ ಮೇಲೆ ಬಿದ್ದು ಕೊಳ್ಳೆಹೊಡೆಯುತ್ತಿದ್ದಾನೆ. ವಿಜಯಪುರ, ಗೋಲ್ಕೊಂಡಾ, ಗೋಲ್ಕೊಂಡಾದ ಭಾಗ್‌ನಗರ (ಹೈದರಾಬಾದ್) ಈ ಕಡೆಗಳಿಗೆ ತನ್ನ ಮಗ ಸಾಂಬಾಜಿಯನ್ನು ಒಂದು ತುಕಡಿ ಸೈನ್ಯ ಸಮೇತ ಕಳುಹಿಸಿಕೊಟ್ಟಿದ್ದಾನೆ. ಇನ್ನೊಂದು ತುಕಡಿ ಸೈನ್ಯದ ಸಮೇತ ತಾನೇ ಸ್ವತಃ ಸೂರತ್‌ವರೆಗೂ ಧಾವಿಸಿದ್ದಾನೆ. ತನ್ನ ಮುಖ್ಯ ಸೈನ್ಯವನ್ನು ಗೋವಾಕ್ಕೆ ಹತ್ತಿರದ ಪೊಂಡಾದಲ್ಲಿ ಇಟ್ಟಿದ್ದಾನೆ. ಮಗನು ಭಾಗ್‌ನಗರವನ್ನು ಕೊಳ್ಳೆಹೊಡೆದು ಬೆಂಕಿ ಇಟ್ಟು ಸುಟ್ಟು ಅಲ್ಲಿಂದ ಹುಬ್ಬಳ್ಳಿ, ರಾಯ

ಬಾಗ್ ಮುಂತಾದ ಊರುಗಳ ಕಡೆ ಧಾವಿಸಿ ಅವುಗಳನ್ನು ಕೊಳ್ಳೆಹೊಡೆದನು. ಶಿವಾಜಿ ಅತ್ತ ರಾಮನಗರ ಎಂಬ ರಾಜ್ಯದ ಮೂಲಕ ತನ್ನ ಸೈನ್ಯವನ್ನು ಸಾಗಿಸಿ ಸೂರತ್ತಿಗೆ ನುಗ್ಗಿ ಅದನ್ನು ಸೂರೆಮಾಡಿದನು. ರಾಮನಗರದ ನಿವಾಸಿಗಳು ಕೂಲಿ (Cooly) ಎಂಬ ಜನ. ಇದರ ಅನಾಹುತವನ್ನು ಅರಿತ ಬುಲ್ಲಾಲ್‌ಖಾನನು ಇದಕ್ಕೆ ಕಾರಣರಾದ ಸೆರ್ರಿಖಾನ ಮತ್ತು ತಿಮ್ಮನಾಯಕನನ್ನು ಸದೆಬಡಿದು ಅವರ ಸ್ಥಾನದಲ್ಲಿ ಸಣ್ಣ ಪುಟ್ಟವರನ್ನು ಪಟ್ಟಕ್ಕೇರಿಸಿದನು. ತಿಮ್ಮನಾಯಕನು ಸತ್ತಮೇಲೆ ಆತನ ಹೆಂಡತಿ ಮತ್ತು ಅಪ್ರಾಪ್ತ ವಯಸ್ಸಿನ ಮಗನಿಗೆ ಕೂಡುಂಬಳಿ ಕೊಟ್ಟು ಇಟ್ಟಿದ್ದಾನೆ. ಮಗನ ರಕ್ಷಣೆಗೆ ಒಬ್ಬನನ್ನು ನೇಮಿಸಿ ಆತನ ಮೂಲಕ ರಾಜ್ಯಭಾರ ನಡೆಸುತ್ತಿದ್ದಾನೆ. ಈ ಕಾರುಬಾರುಗಳಿಗೆಲ್ಲ ಮೊಗಲನ ದಂಡಾಧಿಕಾರಿ ಬಹಾದೂರ್ ಖಾನನ ಮುದ್ರೆ ಆಗ ಬೇಕಾಗಿತ್ತು.

ಬಹಾದೂರ್ ಖಾನನು ತನ್ನ ಭಾರಿ ಸೈನ್ಯ ಸಮೇತ ವಿಜಯಪುರದ ಮೇಲೆ ಎರಡು ಸಲ ಧಾಳಿ ಮಾಡಿದ್ದ. ಡೆಕ್ಕನ್ನರಿಗೆ ಒಳಿತನ್ನು ಮಾಡುವುದು ಮತ್ತು ಬುಲ್ಲಾಲ್ ಖಾನನನ್ನು ಹತೋಟಿಯಲ್ಲಿಡುವುದೇ ತನ್ನ ಉದ್ದೇಶವೆಂದು ನಟಿಸಿದ. ಆದರೆ ಬುಲ್ಲಾಲ್ ಖಾನನು ಅವನಿಗೆ ಸೊಪ್ಪು ಹಾಕಲಿಲ್ಲ. ತನ್ನ ೧೨,೦೦೦ ಪಠಾಣ ಸೈನ್ಯದ ಸಹಾಯದಿಂದ ಅವನಿಗೆ ಮಣ್ಣುತಿನ್ನಿಸಿದ. ಈ ಹಿಂದೆ ಮೊಗಲ್ ದಂಡನಾಯಕನು ತನ್ನ ಖಜಾನೆ, ಆನೆ ಮತ್ತು ೧೦೦೦ ಒಂಟೆಗಳು ಮತ್ತು ಮದ್ದುಗುಂಡುಗಳನ್ನು ಬಿಟ್ಟು ಓಡಿಹೋಗುವಂತೆ ಮಾಡಿದ್ದನಲ್ಲದೆ ಆತನ ಮಗನ ತಲೆಯನ್ನು ಕತ್ತರಿಸಿ ಅದನ್ನು ಬೊಂಬಿಗೆ ಸಿಕ್ಕಿಸಿ ಊರಿನ ಕೋಟೆಯ ಮೇಲೆ ಏರಿಸಿದ್ದ. ನಾಲ್ಕೈದು ಸಾವಿರ ಸಾಮಾನ್ಯ ಸೈನಿಕರನ್ನು ಬಲಿ ತೆಗೆದು ಕೊಂಡಿದ್ದ. ಇಷ್ಟಾದರೂ ತನ್ನ ಕಡೆ ಹೆಚ್ಚು ನಷ್ಟ ಆಗದಂತೆ ನೋಡಿಕೊಂಡಿದ್ದ. ಈ ಅನಾಹುತಗಳಿಂದ ಮೊಗಲನ ದಂಡನಾಯಕನಿಗೆ ತುಂಬಾ ಖೇದವಾಗಿರಬೇಕು. ಹೊಟ್ಟೆ ತುಂಬಿದ ಡೆಕ್ಕನೀಯರು ತನ್ನ ಸಹಾಯಕ್ಕೆ ಬಂದರೆ ಮಾತ್ರ ಮೊಗಲನು ಮತ್ತೆ ಹೊಸ ಸೈನ್ಯವನ್ನು ಕಳುಹಿಸಿಕೊಡಲು ಸಾಧ್ಯ. ಆದರೆ ಡೆಕ್ಕನೀಯರು ಅಂತಹ ಸಹಾಯ ನೀಡಲು ಮನಸ್ಸು ಮಾಡಿಲ್ಲ. ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಶಿವಾಜಿಯು ತನ್ನ ೧,೫೦೦ ಕುದುರೆ ಮತ್ತು ೩೦,೦೦೦ ಕಾಲ್ದಳದೊಡನೆ ಘಟ್ಟವನ್ನೇರಿ ತನ್ನ ಕೊಳ್ಳೆ ಸುಲಿಗೆಗಳನ್ನು ನಡೆಸುತ್ತಿದ್ದಾನೆ.

ಶಿವಾಜಿಯ ಸ್ಥಿತಿಯು ಸಹ ಅಷ್ಟೇನೂ ಹಿತಕರವಾಗಿಲ್ಲ. ಆತನೂ ಡೆಕ್ಕನ್ನಿನ ರೋಗಪೀಡಿತ ಅಂಗದಂತೆ ಇದ್ದಾನೆ. ಶರೀರದಲ್ಲಿ ಭಾರಿ ಬಾವು ಬಂದಂತಹ ಸ್ಥಿತಿಯಾಗಿದೆ ಆತನದು. ಮೊಗಲನನ್ನು ಡೆಕ್ಕನಿಗೆ ಕಾಲಿಡದಂತೆ ಮಾಡುತ್ತಿರುವುದು ಆತನಿಗೆ ಅನು ಕೂಲವಾದರೆ ತನ್ನನ್ನೇ ತಾನು ಸಾಕಿಕೊಳ್ಳುವುದು ಕಷ್ಟವಾಗಿದೆ. ಆತನಿಗೆ ಸೇರಿದ ಸಮುದ್ರತೀರದ 'ಕೊಂಕಣ' ದೇಶ ಆತನನ್ನು ಸಾಕುವುದಕ್ಕೆ ಸಾಲದಾಗಿದೆ. ಒಳನಾಡಿ ನಲ್ಲಿ ಆತನಿಗೆ ಹೆಚ್ಚು ಅನುಕೂಲತೆಗಳು ಇಲ್ಲ. ಪಶ್ಚಿಮ ಘಟ್ಟವು ಆತನ ಆಶೋತ್ತರ

ಗಳಿಗೆ ಗೋಡೆಯಂತೆ ಅಡ್ಡ ಬಂದಿದೆ. ಬೆಟ್ಟಗಳ ಮೇಲೆ ಬೆಟ್ಟಗಳನ್ನು ಏರಿ ಆತ ಡೆಕ್ಕನ್ನಿಗೆ ಪ್ರವೇಶ ಮಾಡಬೇಕು. ಬೆಟ್ಟಪ್ರದೇಶದಲ್ಲಿರುವ ಕೋಟೆ ಕೊತ್ತಲಗಳನ್ನೇನೊ ವಶ ಮಾಡಿಕೊಂಡಿದ್ದಾನೆ. ಅಲ್ಲಿಗೆ ಸಾಮಾನುಗಳನ್ನು ಒದಗಿಸುವ ಬಂದರುಗಳನ್ನು ಬಂದ್ ಮಾಡಿದ್ದಾನೆ. ಹೀಗಾಗಿ ಡೆಕ್ಕನ್ನಿಗೆ ಏನಾದರೂ ಹೋಗಬೇಕಾದರೆ, ಅದರಲ್ಲಿಯೂ ಅರಬ್ ಕುದುರೆಗಳನ್ನು ತರಿಸಬೇಕಾದರೆ, ತುತ್ತುಕೂಡಿಯಿಂದ ಆಚೆ ಇರುವ ಪೊರ್ಟೊ ನೋವೊ (ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿದೆ) ಬಂದರೇ ಗತಿ.

ಇವರಿಗಷ್ಟೇ ಅಲ್ಲ ಶಿವಾಜಿ ಮಾಡಿರುವ ತೊಂದರೆ. ಮೊಗಲನಿಗೂ ಇದೇ ಗತಿಯಾಗಿದೆ. ಸೂರತ್‌ವರೆಗಿನ ಬಂದರುಗಳೆಲ್ಲವೂ, ಪೋರ್ಚುಗೀಸರು ಮತ್ತು ಇಂಗ್ಲಿಷರಿಗೆ ಸೇರಿದ ಬೊಂಬಾಯಿ ಬಿಟ್ಟರೆ, ಶಿವಾಜಿಯ ವಶದಲ್ಲಿವೆ. ತನ್ನ ವಶ ದಲ್ಲಿರುವ ಬಂದರುಗಳಿಂದಲೂ ಆತನಿಗೆ ಉಪಯೋಗವಿಲ್ಲ. ಏಕೆಂದರೆ, 'ಕಫಾಲ'ಗಳು (ದೊಡ್ಡ ದೋಣಿಗಳು) ಈ ಬಂದರುಗಳಿಗೆ ಬರಲು ಅವಕಾಶ ಕೊಡುವುದಿಲ್ಲ. ಹೀಗೆಲ್ಲ ಮಾಡುವ ಬದಲು ಈ ಬಂದರುಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಹೇರಳ ವಾಗಿ ಹಣ ಸಂಪಾದಿಸಬಹುದು. ಕೊಳ್ಳೆ ಹೊಡೆದು, ಕಳ್ಳತನ ಮಾಡಿ, ಖಡ್ಗ ಧರಿಸಿ ಮತ್ತು ಬೆಂಕಿ ಹಚ್ಚಿ ಹಿಂಸೆಮಾಡಿ ದರೋಡೆಕಾರ ಎಂಬ ಹೆಸರು ಪಡೆಯುವ ಬದಲು ಸರಿಯಾದ ವಿಧಾನ ಅನುಸರಿಸಿ ಅವುಗಳ ಮೇಲೆ ಜಯಗಳಿಸಿ ಕೀರ್ತಿ ಪಡೆಯಬಹುದು. ಇದರ ಬದಲು ಡೆಕ್ಕನ್ ಮತ್ತು ಮೊಗಲ್ ರಾಜ್ಯಗಳಲ್ಲಿ ಅವನು ಎಸಗುತ್ತಿರುವ ಅಸಹನೀಯವಾದ ಕ್ರೂರಕೃತ್ಯ ಹಾಗೂ ವಿನಾಶಗಳಿಂದ ಏನು ಉಪಯೋಗ? ಮೊಗಲ ರಿಂದ ಸುಮಾರು ಅರವತ್ತು ಕೋಟೆಗಳನ್ನು ವಶಪಡಿಸಿಕೊಂಡಿದ್ದಾನೆ. ನಿರ್ಜನ ಪ್ರದೇಶ ದಲ್ಲಿರುವ ಈ ಕೋಟೆಗಳನ್ನು ಮೊಗಲರು ತಮ್ಮ ವಶದಲ್ಲಿಟ್ಟುಕೊಳ್ಳುವುದು ಬೇಡ ವೆಂದು ಅವನಿಗೆ ಬಿಟ್ಟುಬಿಟ್ಟಿದ್ದಾರೆ. ಈ ಕೋಟೆಗಳಲ್ಲಿ ಸೇರಿಕೊಂಡು ಶಿವಾಜಿಯು ಮೊಗಲರ ಮೇಲೆ ಅತ್ಯಂತ ಕ್ಷಿಪ್ರವಾದ ಧಾಳಿ ಮಾಡಿ ಕೊಳ್ಳೆ ಸುಲಿಗೆಗಳನ್ನು ನಡೆಸಿ ಬಿಡುತ್ತಾನೆ. ಈ ಕಾರಣದಿಂದಲೇ ಶಿವಾಜಿಯನ್ನು ಔರಂಗಜೇಬನು "ಬೆಟ್ಟದ ಇಲಿ" ಎಂದು ಕರೆಯುವುದು. ಹೀಗಾಗಿ ಮೊಗಲ್ ಸಾಮ್ರಾಜ್ಯದ ಬಲಿಷ್ಠ ಚಕ್ರವರ್ತಿಗೂ ಜನರೊಡನೆ ಹೋರಾಡುವುದಕ್ಕಿಂತ ಬೆಟ್ಟಗುಡ್ಡಗಳೊಡನೆ ಹೋರಾಡುವುದು ಕಷ್ಟ ವಾಗಿದೆ.

ಶಿವಾಜಿಯು ಬೋನ್‌ಸ್ಲೇ ಮನೆತನಕ್ಕೆ ಸೇರಿದವನು. ಇವನ ತಾತನ ಹೆಸರು 'ವೆಂಗೂಜಿ ರಾಜ'. ಈತ ನಿಜಾಂಷಾನ ಬಳಿ ಪ್ರಧಾನ ಸ್ಥಾನದಲ್ಲಿದ್ದ. ಈತನ ಮಗ ನಾದ ಷಾಹಜೀಯನ್ನು ಅದೇ ನಿಜಾಂಷಾ ಜುನಾಘಡದ ರಕ್ಷಣೆಗಾಗಿ ನೇಮಿಸಿದ. ಈ ಕಲ್ಲುಗುಡ್ಡದಲ್ಲಿ ಷಾಹಜಿ ಹೆಂಡತಿಯ ಹೊಟ್ಟೆಯಲ್ಲಿ ಶಿವಾಜಿ ಹುಟ್ಟಿದ. ಷಾಹಜೀಗೆ ಇವನೇ ಹಿರಿಯ ಮಗ. ಎರಡನೆಯ ಮಗನ ಹೆಸರು ಸಾಂಬಾಜಿ ಎಂದು. ಷಾಹಜೀಯ ಇನ್ನೊಬ್ಬ ಹೆಂಡತಿಯ ಹೊಟ್ಟೆಯಲ್ಲಿ ಏಕೋಜಿ ಎಂಬುವನು ಹುಟ್ಟಿದ. ನಿಜಾಂಷಾನ

ಪತನದ ನಂತರ ಷಾಹಜೀ ಮತ್ತು ಅವನ ಮಕ್ಕಳು ವಿಜಾಪುರದ ರಾಜನ ಆಶ್ರಯ ಪಡೆಯಬೇಕಾಯಿತು. ಆದರೆ ಶಿವಾಜಿಯು ಸುಮ್ಮನಿರಲಿಲ್ಲ. ಸಣ್ಣಪುಟ್ಟ ರಾಜರುಗಳನ್ನು ಪರಸ್ಪರ ಎತ್ತಿಕಟ್ಟಿ ಅವರ ಜಗಳದಿಂದ ತಾನು ತನ್ನ ಹಿರಿಮೆಯನ್ನು ಮೆರೆಯಲೆತ್ನಿಸಿದ. ಇದು ತಂದೆಗೆ ಸರಿಬಾರದೆ 'ಬೆಂಗಳೂರ್' (Bengalur)ನ ದೊರೆತನವನ್ನು (Rajahship) ತನ್ನ ಎರಡನೆಯ ಮಗ ಏಕೋಜಿಗೆ ವಹಿಸಿದನು. ಬೆಂಗಳೂರಿನ ದೊರೆತನದಿಂದ ಹೇಳಿಕೊಳ್ಳುವ ಅನುಕೂಲವಿರಲಿಲ್ಲ. ತೀರಾ ಕಡಮೆ ಆದಾಯದ ಇದು ಡೆಕ್ಕನ್ನಿನ ತೊಂದರೆ ತಾಪತ್ರಯಗಳನ್ನು ಎದುರಿಸುವುದು ಸಾಧ್ಯವಾಗಲಿಲ್ಲ. ಏಕೋಜಿ ಬೆಂಗಳೂರಿನಲ್ಲಿ ತೆಪ್ಪಗೆ ಕುಳಿತಿದ್ದರೆ, ಆ ಯುವಕನಾದ ತುಂಟ ಶಿವಾಜಿ ಉನ್ನತ ಸ್ಥಾನಕ್ಕೆ ಏರಲು ಸಾಹಸಪಡುತ್ತಿದ್ದನು. ಶಿವಾಜಿಯ ಈ ಏಳ್ಗೆಯನ್ನು ಸಹಿಸಲಾರದ ವಿಜಾಪುರದ ರಾಜ ಅವನನ್ನು ಬಲಿಹಾಕಲು ಅಬ್ದುಲ್ ಖಾನನೆಂಬ ಅನುಭವಸ್ಥ ಸೇನಾನಿಯನ್ನು ಕಳುಹಿಸಿದ. ಆದರೆ ಶಿವಾಜಿ ಆತನಿಗೆ ಚಳ್ಳೆಹಣ್ಣು ತಿನ್ನಿಸಿದ. ಅಬ್ದುಲ್ ಖಾನನ ಕೊಲೆಯಾಯಿತು. ಆಮೇಲೆ ವಿಜಾಪುರದ ರಾಜ ಬುಲ್ಲಾಲ್ ಖಾನನನ್ನು ಶಿವಾಜಿಯ ಮೇಲೆ ಕಳುಹಿಸಿಕೊಟ್ಟನು. ಅವನಿಗೂ ಶಿವಾಜಿಯನ್ನು ಬಲಿಹಾಕಲು ಸಾಧ್ಯವಾಗಲಿಲ್ಲ. ಶಿವಾಜಿ ವಿಜಾಪುರದ ಮೇಲೆ ಧಾಳಿ ಮಾಡಿದ. ಸಿದ್ದಿ ಜೋರ್ [Siddi Jore = ಸೈಯದ್ ಜೋಹರ್] ಎಂಬುವನು ವಿಜಾಪುರದ ಸಹಾಯಕ್ಕೆ ಬರದಿದ್ದರೆ ಅದು ಶಿವಾಜಿಯ ವಶವಾಗಿಬಿಡುತ್ತಿತ್ತು. ಆದರೆ ಸಿದ್ದಿಯೇ ಕೊನೆಗೆ ವಿಜಾಪುರದ ರಾಜನಿಗೆ ಕೈಕೊಟ್ಟ. ಅವನ ಮೇಲೆ ಬುಲ್ಲೂಲ್ ಖಾನನನ್ನು ಕಳುಹಿಸಬೇಕಾಯಿತು.

ಈ ಅಂತರ್ಜಗಳದಿಂದ ಆಗಬಹುದಾದ ಅನಾಹುತವನ್ನು ಗಮನಿಸಿದ ರಾಜ ತಾನೇ ಯುದ್ಧರಂಗಕ್ಕೆ ಇಳಿದ. ಸಿದ್ದಿಯ ಕಡೆಯವರೇ ಅವನ ಕೊಲೆಮಾಡಿ ಅವನ ತಲೆಯನ್ನು ತಂದು ರಾಜನಿಗೆ ಒಪ್ಪಿಸಿದರು. ಹೀಗಾಗಿ ವಿಜಾಪುರದ ರಾಜ್ಯದಲ್ಲಿ ಅಂತಃಕಲಹ ಮಿತಿಮೀರಿಹೋಗಿದೆ. ಶಿವಾಜಿಯು ಇದನ್ನು ತನ್ನ ಕಾರ್ಯ ಸಾಧನೆಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾನೆ. ಹೀಗಿರುವಲ್ಲಿ ವಿಜಾಪುರದ ರಾಜ ಕಾಲವಾದನು. ಕೇವಲ ಒಂದು ಹಸುಗೂಸನ್ನು ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ಬಿಟ್ಟುಹೋದ. ಇದು ಶಿವಾಜಿಗೆ ಇನ್ನೂ ಅನುಕೂಲವಾಯಿತು. ಸೂರತ್‌ವರೆಗೆ ಧಾಳಿ ಮಾಡಿ ಕೊಳ್ಳೆ ಹೊಡೆದನು. ಇದು ನಡೆದದ್ದು, ಸಹೋದರರನ್ನು ಕೊಂದು ತಂದೆಯನ್ನು ಸಾವಿಗೀಡುಮಾಡಿ ಔರಂಗಜೇಬನು ಸಿಂಹಾಸನವನ್ನು ಏರಿದಾಗ. ಶಿವಾಜಿಯನ್ನು ಪುಸಲಾಯಿಸಿ ತನ್ನ ಕಡೆಗೆ ಒಲಿಸಿಕೊಳ್ಳಲು ಪ್ರಯತ್ನಿಸಿದ ಔರಂಗಜೇಬನು ಒಳ್ಳೆಯ ಮಾತಿನಿಂದ ತನ್ನ ಆಸ್ಥಾನಕ್ಕೆ ಆತನನ್ನು ಬರಮಾಡಿಕೊಂಡ. ಇದರಲ್ಲಿ ಏನೋ ಮೋಸವಿದೆಯೆಂದು ಅರಿತ ಶಿವಾಜಿ ಉಪಾಯದಿಂದ ತಪ್ಪಿಸಿಕೊಂಡನು. ಹೀಗೆ ತಪ್ಪಿಸಿಕೊಂಡನಂತರ ಶಿವಾಜಿ ಮತ್ತೊಂದು ಸಲ ಸೂರತ್ತಿನ ಮೇಲೆ ಧಾಳಿ ಮಾಡಿದ. ಈಚೆಗೆ ರಾಮನಗರವನ್ನು ತನ್ನ ವಶಪಡಿಸಿಕೊಂಡಿದ್ದಾನೆ. ಇತ್ತ ತನ್ನ ಕಿರುಕುಳವನ್ನು ಗೋವೆಯವರೆಗೂ ವಿಸ್ತರಿಸಿ

ಕರ್ನಾಟಿಕ್ ಮತ್ತು ಸುಂದಾ ರಾಜರುಗಳನ್ನೂ ಬೆದರಿಸುತ್ತಿದ್ದಾನೆ. ಶಿವಾಜಿಯು ಇರುವುದು ರಾಯಘಡದಲ್ಲಿ. ಅಲ್ಲಿ ಸೇರಿಕೊಂಡು ಮೊಗಲ್ ಚಕ್ರವರ್ತಿ, ಗೋಲ್ಕೊಂಡಾ, ಡಕ್ಕನ್, ಪೋರ್ಚುಗೀಸ್ ಮತ್ತು ಇಡೀ ಪ್ರಪಂಚವನ್ನೇ ಕಡೆಗಣಿಸಿದ್ದಾನೆ. ಎರಡು ವರ್ಷಗಳ ಹಿಂದೆ ಮಹಾರಾಜನೆಂದು ಕರೆದುಕೊಂಡು ಸಿಂಹಾಸನವನ್ನೇರಿದ್ದಾನೆ. ಇದ ನ್ನಾಗಲೇ ನಾನು ನನ್ನ ಹಿಂದಿನ ಪತ್ರದಲ್ಲಿ ತಿಳಿಸಿದ್ದೇನೆ.

ಶಿವಾಜಿಯ ಮಾತೃಭಕ್ತಿ ತುಂಬಾ ಮೆಚ್ಚತಕ್ಕದ್ದು. ಈತನಿಗೆ ನಾಲ್ಕು ಜನ ಹೆಂಡತಿಯರಿದ್ದಾರೆ. ಇವರಲ್ಲದೆ ಇನ್ನೊಬ್ಬ ಹೆಣ್ಣಿನ ಮೇಲೆ ಈತ ಕಣ್ಣು ಹಾಕುವುದಿಲ್ಲ. ಹೀಗೆ ತನ್ನ ಧರ್ಮದ ಬೋಧನೆಯನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾನೆ. ಬ್ರಾಹ್ಮಣರ ಮಾತಿಗೆ ತುಂಬ ಬೆಲೆ ಕೊಡುತ್ತಾನೆ.

ಇವನ ಸೈನಿಕರು ಬೆಟ್ಟಗುಡ್ಡಗಳ ಕಷ್ಟ ನಷ್ಟಗಳನ್ನು ಸಹಿಸಬಲ್ಲ ಧೀರರು. ಬಹಳ ಅಂದರೆ ಇವನಲ್ಲಿ 20,000 ಕುದುರೆಗಳಿವೆ. ಕಾಲ್ದಳಕ್ಕೆ ಲೆಕ್ಕವಿಲ್ಲ.

ಇವನನ್ನು ಕಂಡರೆ ವರ್ತಕರಿಗೆ ಆಗದು. ಸಾಮಾನ್ಯ ಜನರ ಬಗ್ಗೆ ಶಿವಾಜಿ ಹೇಳುವುದೇನೆಂದರೆ, 'ಅವರಿಗೆ ಹಣದಿಂದ ಅನಾನುಕೂಲ. ಹೊಟ್ಟೆ ತುಂಬ ಅನ್ನಹಾಕಿ ಅಂಡು ಮುಚ್ಚಲು ಬಟ್ಟೆ ಕೊಟ್ಟರೆ ಸಾಕು' ಎಂದು. ಜನಸಾಮಾನ್ಯರೆಲ್ಲಾ ಜಂಟೂಗಳು (ಹಿಂದೂಗಳು). ಅವರ ಮಾತುಕತೆ 'ಮರಾಠಿ'. ಕೆಲವರು ಮೂರರೂ (ಮಹ ಮ್ಮದೀಯರು) ಇದ್ದಾರೆ. ಶಿವಾಜಿ ತನ್ನ ಸೈನ್ಯದಲ್ಲಿ ವೇಶ್ಯೆಯರಿಗೂ, ನರ್ತಕಿಯರಿಗೂ ಅವಕಾಶ ಕೊಟ್ಟಿಲ್ಲ. ಸಿಥಿಯಾದ ಅಟಿಯಾಸ್ ರಾಜನಂತೆ (Scythian Ateas) ಈ ಅನಾಗರೀಕ ಸೇನಾನಾಯಕ (Barbarian Commander). ಸಿಥಿಯಾದ ಆ ರಾಜ ಕೊಳಲಿನ ನಾದ ಕೇಳುವ ಬದಲು ಕುದುರೆಯ ಕೆನೆತವನ್ನೋ, ಕಹಳೆಯ ಕೂಗನ್ನೋ ಕೇಳುವುದೊಳ್ಳೆಯದು ಎಂದು ತೀರ್ಮಾನ ಮಾಡಿದನಂತೆ. ಹಾಗೆ ಈ ಶಿವಾಜಿಯು ಸಹ. ಶಿವಾಜಿ ಸಮುದ್ರದ ಮೇಲಿನ ಯುದ್ಧದಲ್ಲಿ ಅಷ್ಟೇನೂ ಬಲಾಢ್ಯನಲ್ಲ.

ವಿಜಾಪುರ ರಾಜ್ಯವು ಹಿಂದೆ ಬಹು ವಿಶಾಲವಾಗಿತ್ತು. ಜಾಮೊರಿನ್ ಮತ್ತು ಮಲಬಾರ್ ಪ್ರದೇಶಗಳೂ ಅದಕ್ಕೆ ಸೇರಿದ್ದುವು. ಮೂರರಾದ ಮೂವರು ರಾಜರು ಈ ರಾಜ್ಯವನ್ನು ಹಂಚಿಕೊಂಡು ಬಹಳ ಕಾಲ ಆಳಿದರು. ಒಬ್ಬನ ಮೇಲೆ ಯಾರಾದರೂ ಯುದ್ಧಕ್ಕೆ ಬಂದರೆ ಇನ್ನಿಬ್ಬರು ಆತನ ಸಹಾಯಕ್ಕೆ ಹೋಗುತ್ತಿದ್ದರು. ಅವರ ಮನಸ್ಸು ಉದ್ದೇಶಗಳೆಲ್ಲ ಒಂದೇ ಆಗಿದ್ದವು. ಹೀಗಾಗಿ ಅವರವರ ರಾಜ್ಯಗಳು ಅದ್ದೂರಿಯಿಂದ ಇದ್ದುವು. ಸಣ್ಣಪುಟ್ಟ ಆಳರಸರು ಅವರಿಗೆ ಅಧೀನರಾಗಿ ನಡೆದುಕೊಳ್ಳುತ್ತಿದ್ದರು. ಆದರೆ

---

* ಸಿಥಿಯಾ—ದಕ್ಷಿಣ ಯೂರೋಪ್ ಮತ್ತು ಏಷಿಯಾದ ರಷ್ಯಾಗಳನ್ನೊಳಗೊಂಡ ಪುರಾತನ ರಾಜ್ಯ. ಇಲ್ಲಿದ್ದ ಅನಾಗರಿಕ ಜನಾಂಗವೊಂದು ಕ್ರಿ. ಪೂ. ೭ನೆಯ ಶತಮಾನದಲ್ಲಿ ಪಶ್ಚಿಮ ಏಷ್ಯಾವನ್ನು ಗೆದ್ದುಕೊಂಡಿತು.

ಯಾವಾಗ ಒಗ್ಗಟ್ಟು ಹೋಯಿತೊ ಆಗ ಅವರು ಒಡೆದ ಹಾಲಾದರು. ಈಗಾಗಲೇ ಡಕ್ಕನ್ ಅವರ ಕೈಬಿಟ್ಟಿದೆ. ವಿಜಾಪುರ ಅವನತಿಯ ಹಾದಿಯಲ್ಲಿದೆ. ಶಿವಾಜಿಯಂ ಮೇಲ್ಪಂಕ್ತಿಯನ್ನು ಉಳಿದವರು ಅನುಸರಿಸಿ ತಮ್ಮ ದಾಸ್ಯದ ನೊಗವನ್ನು ಕಿತ್ತೊಗೆಯುತ್ತಿದ್ದಾರೆ. ಈಗ ಅವರನ್ನು ಮತ್ತೆ ಒಗ್ಗೂಡಿಸಲು ಸಾಧ್ಯವೇ ಇಲ್ಲವಾಗಿದೆ.

ಡಕ್ಕನ್ನರು ಯುದ್ಧದಲ್ಲಿ ಕುಶಲರು. ಕಿರುಕುಳ ಕೊಡುವ ಜನ. ಇನ್ನೊಬ್ಬರಂ ತಮ್ಮ ಮೇಲೆ ಸವಾರಿ ಮಾಡುವುದನ್ನು ಸಹಿಸುವುದಿಲ್ಲ. ತಲೆಯೆತ್ತಿಕೊಂಡು ಧೈರ್ಯದಿಂದ ಬಾಳುವ ಜನ. ಇವರ ಸೈನ್ಯವು ಮೊಗಲನ ಸೈನ್ಯಕ್ಕಿಂತ ಬಹು ಶಕ್ತಿಯುತವಾಗಿದೆ. ತಮ್ಮ ಆನೆ, ಕುದುರೆ ಮತ್ತು ಭರ್ಜಿಗಳನ್ನು ಬೆಳ್ಳಿ ಗಂಟೆಗಳಿಂದಲೂ ಚೌರಿಗಳಿಂದಲೂ ಅಲಂಕರಿಸಿಕೊಳ್ಳುತ್ತಾರೆ. ಸೈನಿಕರ ಉಡುಪು ನೋಡಲು ಆಡಂಬರಯುತವಾಗಿದೆ. ಛತ್ರಿ ಚಾಮರಗಳನ್ನು ಹಿಡಿದುಕೊಳ್ಳುತ್ತಾರೆ. ಜನರು ಕಂದು ಬಣ್ಣಕ್ಕಿದ್ದಾರೆ. ಇವರಲ್ಲಿ ಎಲ್ಲ ಮತೀಯರೂ ಉಂಟು. ನಾಡು ಸಮೃದ್ಧವಾಗಿದೆ. ಸಮುದ್ರದ ಕಡೆಗಿರುವ ಪ್ರದೇಶದಲ್ಲಿ ಮಾತ್ರ ಬೆಟ್ಟಗುಡ್ಡಗಳಲ್ಲಿ ಮರಗಳೂ ದನಕರುಗಳೂ ಇವೆ. ಬೆಟ್ಟದ ಕಣಿವೆಗಳಲ್ಲಿ ಬತ್ತ, ತೆಂಗುಕಂಗುಗಳು ಸೊಂಪಾಗಿ ಬೆಳೆಯುತ್ತವೆ. ನದಿಗಳು ತುಂಬಿ ಹರಿಯುತ್ತವೆ. ನದಿಗಳ ನೀರು ಸಿಹಿ. ಆದರೆ ತೀರದಲ್ಲಿ ಮಾತ್ರ ಉಪ್ಪು. ಗುಡ್ಡಗಾಡುಗಳಲ್ಲಿ ನೆಲೆಸಿರುವ ಜನ ಒರಟು ಸ್ವಭಾವದವರು; ಮತ್ತು ಕಷ್ಟಪಟ್ಟು ದುಡಿಯುವವರು. ಸಂಗೀತ, ಬಟ್ಟೆಬರೆ ಬಿಂಕ ಬಡಿವಾರಗಳಿಂದ ಕೊಂಚ ದೂರ. ಹೊಟ್ಟೆಗಿಲ್ಲದ ಬೆತ್ತಲೆ ಬಡಪಾಯಿಗಳು. ಶಿವಾಜಿಯ ಜನ ಯಾವ ಕಷ್ಟಗಳನ್ನಾದರೂ ಸಹಿಸಬಲ್ಲವರಾದ ಕಾರಣ ತ್ವರಿತವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಬಲ್ಲರು. ಸುಖ ಸಂತೋಷಗಳಿಗೆ ಅಷ್ಟಾಗಿ ಗಮನ ಕೊಡುವುದಿಲ್ಲ. ಆದರೆ ಬೇರೆಯವರು ಸುಲಿಗೆ ಬಿಟ್ಟರೂ ಬಿಟ್ಟಾರು ಊಟ ಮಾತ್ರ ಬಿಡುವುದಿಲ್ಲ. ಸೈನ್ಯವು ಹೊರಟರೆ ಅದ್ದೂರಿಯಿಂದ ಹೊರಡಬೇಕು. ಅವರ ಅಸ್ತ್ರಶಸ್ತ್ರಗಳನ್ನು ಮುಂದೆ ಹೊತ್ತುಕೊಂಡು ಹೋಗಬೇಕು. ತಮ್ಮ ಹೆಂಗಸರು ಹಿಂದೆಯೇ ಬರುತ್ತಿರಬೇಕು. ನೃತ್ಯ ಸಂಗೀತಗಳು ಸಾಗುತ್ತಿರಬೇಕು. ಶತ್ರುವು ಮೇಲೆ ಬೀಳಲಿ ಎಂದು ಕಾಯುವರೇ ಹೊರತು ತಾವೇ ಆಗಿ ಶತ್ರುವಿನ ಮೇಲೆ ಬೀಳುವುದಿಲ್ಲ. ಹೀಗಿದ್ದರೂ ಶತ್ರುವಿನ ಧಾಳಿಯನ್ನು ಎದುರಿಸಬಲ್ಲರು. ಆದರೆ ಶಿವಾಜಿಯ ಜನ ಹಾಗಲ್ಲ. ಎದುರಿಗೆ ನಿಂತು ಯುದ್ಧ ಮಾಡುವುದೇ ಇಲ್ಲ. ಕಾಣದಂತೆ ಏಕಾಏಕಿ ಶತ್ರುಗಳ ಮೇಲೆ ಬಿದ್ದು ಕೊಳ್ಳೆ ಲೂಟಿ ಮಾಡುವುದರಲ್ಲಿ ನಿಸ್ಸೀಮರು. ಆದರೂ ಧೈರ್ಯೋತ್ಸಾಹಗಳಲ್ಲಿ ಕಡಮೆ ಇಲ್ಲ.

ವಿಜಾಪುರದ ಭಾಷೆ ವಿಚಿತ್ರವಾಗಿದೆ. ಈ ರಾಜ್ಯದ ವ್ಯಾಪಾರ ಸ್ಥಳಗಳೆಂದರೆ 'ಹುಬ್ಳಿ', 'ರಾಬಾಗ್' (ರಾಯಬಾಗ್), ಮತ್ತು 'ಹತ್ತನಿ' (ಅಥಣಿ). ಅದಕ್ಕೆ ಸೇರಿದ ಬಂದರುಗಳು ಯಾವುವೆಂದರೆ 'ಗಲ್ಲಿಯಾನ್' (ಕಲ್ಯಾಣ ?) ಮತ್ತು 'ಬಿಂಬ್ಲಿ' (ಭಿವಂಡಿ ?). ಆದರೆ ಇವನ್ನು ಪೋರ್ಚುಗೀಸರು ಹಿಡಿದುಕೊಂಡಿದ್ದಾರೆ. ರಾಜಾಪುರ,

ದಬೂಲ್, ವಿಂಗೂರ್ಲಾ, ಕಾರವಾರ್ ಇವೂ ಆ ರಾಜ್ಯಕ್ಕೆ ಸೇರಿದ ಬಂದರುಗಳು. ಆದರೆ ಇವುಗಳನ್ನು ಶಿವಾಜಿ ಹಿಡಿದುಕೊಂಡಿದ್ದಾನೆ. ಉಳಿದ ಪೋರ್ಟೊನೋವೊ ವರೆಗಿನ ಬಂದರುಗಳು ಮಲಬಾರಿಗಳ ವಶದಲ್ಲಿವೆ. ಪೋರ್ಟೊನೋವೊ ಒಂದು ಮಾತ್ರ ರಾಜನಿಗೆ ಸೇರಿದೆ. ಈ ಬಂದರಿನಿಂದ ಭಾರಿ ಆದಾಯವಿದೆ. ಆದರೆ ಜನ ಹೇಳುವಷ್ಟು ಇಲ್ಲ.

ಇಲ್ಲಿಯ ಆಟಪಾಟಗಳು ಇಂಡಿಯಾದ ಬೇರೆ ಕಡೆಗಳಂತೆಯೇ ಇವೆ. ಕೋಳಿ ಜೂಜು ಒಂದು ವಿಶೇಷ. ಇದಕ್ಕಾಗಿಯೇ ಟರ್ಕಿ ಕೋಳಿಗಳಷ್ಟು ಭಾರಿಯಾದ ಕೋಳಿಗಳನ್ನು ಸಾಕಿದ್ದಾರೆ. ಇವುಗಳ ಕಾಲಿಗೆ ಎರಡು ಅಂಗುಲ ಉದ್ದದ ಹರಿತವಾದ ಕತ್ತಿ ಕಟ್ಟಿ ಜಗಳಕ್ಕೆ ಬಿಡುತ್ತಾರೆ. ಪಟಾರನೆ ಒಂದು ಹೊಡೆದರೆ ಸಾಕು ಇನ್ನೊಂದು ಭೂಮಿಗೆ ಒರಗುತ್ತದೆ. ಹೀಗಾಗಿ ಜಗಳ ಬಹಳ ಹೊತ್ತು ನಡೆಯುವುದಿಲ್ಲ. ಒಂದೆರಡು ಏಟಿನಲ್ಲೇ ಮುಕ್ತಾಯವಾಗುತ್ತದೆ.[೧]

ಆದರೆ ನಮ್ಮ ಖುಷಿಯ ಶಿಕಾರಿ ಬಿಟ್ಟರೆ ಇಲ್ಲಿ ಬೇರೆ ಅವಕಾಶಗಳು ಇಲ್ಲ. ಕಾಡು ನದಿಗಳ ಸಮೀಪದಲ್ಲಿ ಬೇಟೆಯಾಡುತ್ತಾ ನಾವು ಇಡೀ ಒಂದು ವಾರವನ್ನೇ ಕಳೆದೆವು. ನಮಗೆ ಕೋಳಿ ಅಥವಾ ಮಾಂಸ ಬೇಕೆಂದರೆ ತುಂಬಾ ಪರದಾಡಬೇಕಾಗಿತ್ತು. ಇಲ್ಲಿ ದನದ ಮಾಂಸದ ಸುದ್ದಿಯೇ ಇಲ್ಲ. ಬೇಕೆಂದರೆ ಮೇಲ್ನಾಡಿನ ಮೂರರಿಂದ ಪಡೆಯಬಹುದಾಗಿತ್ತು. ಹೀಗಾಗಿ ನಾವು ಮೀನು, ನೀರುಕೋಳಿ, ನವಿಲು, ಹಸಿರು ಪಾರಿವಾಳ, ಜಿಂಕೆ, ಸಾಂಬಾರ್, ಕಾಡುಹಂದಿ, ಕೆಲವು ಬಗೆಯ ಕಾಡುಹಸುಗಳು (wild cow) ಇವುಗಳನ್ನಷ್ಟೇ ತಿನ್ನಬೇಕಾಗುತ್ತಿತ್ತು. ಒಂದು ಸಲ ಇವುಗಳ ಬೇಟೆಗೆ ಹೋದ ನಮ್ಮ ಕಡೆಯ ಯುವಕನೊಬ್ಬ ಒಂದು ದೊಡ್ಡ ಹುಲಿಯನ್ನೇ ಕೊಂದುಬಿಟ್ಟ. ಅದನ್ನು ಮೂವತ್ತು ನಲವತ್ತು ಕುನ್ಬಿಗಳು ಊರಿಗೆ ಹೊತ್ತುಕೊಂಡುಬಂದರು. ಒಂದು ಉದ್ದನೆಯ ಬೊಂಬಿಗೆ ಅದನ್ನು ನೇತುಹಾಕಿಕೊಂಡು ಬಾಲ ನೇತಾಡಿಸುತ್ತಾ ತಂದು ನಾವಿದ್ದ ಮನೆಯಲ್ಲಿ ಇಟ್ಟರು. ಅದರ ತಲೆಗೊಂದು, ಮೈಯಿಗೊಂದು ಮತ್ತು ಕಾಲಿಗೊಂದು—ಹೀಗೆ ಮೂರು ಗುಂಡುಗಳು ಹೊಕ್ಕಿದ್ದವು. ಬಾಲ ಬಿಟ್ಟು ಅದರ ಉದ್ದ ಐದು ಅಡಿ ಇತ್ತು. ಎತ್ತರ ಮೂರುವರೆ ಅಡಿ ಇತ್ತು. ಅದು ತನ್ನ ರೋಷದಲ್ಲಿ ಕಲ್ಲೊಂದಕ್ಕೆ ಬಡಿದು ತನ್ನ ಎರಡು ಹಲ್ಲುಗಳನ್ನೂ ಮುರಿದುಕೊಂಡಿತ್ತು. ನೀರು

---

೧. ಕೋಳಿ ಜಗಳ ಅಥವಾ ಕೋಳಿ ಕಾಳಗ ವೇದಗಳಷ್ಟೇ ಪುರಾತನವಾದುದು. ಬುಲ್ ಬುಲ್, ಲಾವಕ್ಕಿ, ಕವುಜಗ ಹಕ್ಕಿಗಳನ್ನೂ ಜಗಳಕ್ಕೆ ಬಿಡುತ್ತಿದ್ದರು. ಜಗಳ ಆಡುವ ಲಾವಕ್ಕಿಗೆ ೨೫ ರೂಪಾಯಿ ಬೆಲೆ ಇತ್ತಂತೆ. ಹೈದರಾಬಾದಿನಲ್ಲಿ ಇದರ ಬೆಲೆ ೧೫೦ ರೂಪಾಯಿಗಳಷ್ಟು.

ಲಕ್ನೋದ ದೌಲತ್‌ಖಾನನ ಅರಮನೆಯಲ್ಲಿ ನವಾಬ್ ಅಸಾಹುದ್ದೌಲನ ಕೋಳಿಗಳಿಗೂ ರೆಸಿಡೆಂಟ್‌ನ ಕೋಳಿಗಳಿಗೂ ನಡೆದ ಕಾಳಗವನ್ನು ಜೊಪ್ಪರಿ (Zoffary) ಎಂಬುವನು ಚಿತ್ರಿಸಿದ್ದ. ಇದು ಸಿಪಾಯಿದಂಗೆ ಕಾಲದಲ್ಲಿ ಹಾಳಾಯಿತು. ಕೋಳಿ ಕಾಳಗ ಈಗಲೂ ದಕ್ಷಿಣ ಇಂಡಿಯಾ, ಬೊಂಬಾಯಿ, ಗ್ವಾಲಿಯರ್, ಮಧ್ಯಪ್ರಾಂತ್ಯ ಹಾಗೂ ಬರ್ಮಾಗಳಲ್ಲಿ ಇದೆ.

ಕುಡಿಯಲು ಬಂದ ಜಿಂಕೆ ಎಂದು ಭಾವಿಸಿ ನಮ್ಮವನು ಈ ಹುಲಿಗೆ ಹೊಡೆದಿದ್ದ. ಆತ ರಾತ್ರಿಯ ವೇಳೆ 'ಛೌಸ್' (chouse = ಛಾವಣಿ)ಯ ಮೇಲೆ ಕುಳಿತು ಗುಂಡು ಹಾರಿಸಿದಾಗ ಮೊದಲ ಗುಂಡು ಎದೆಗೆ ತಗುಲಿ ಹುಲಿ ಮೂರು ಸಲ ತುಂಬಾ ಎತ್ತರಕ್ಕೆ ಹಾರಿ 'ಛೌಸ್' ಮೇಲೆ ಬಿದ್ದಿತು. ಅಲ್ಲಿಂದಲೇ ಅದು ಬಂದೂಕದ ಬೆಂಕಿಯನ್ನು ಕಂಡಿತು. 'ಛೌಸ್'ನಲ್ಲಿ ನಮ್ಮ ಇಂಗ್ಲಿಷಿನವನ ಜೊತೆ ಎಂಟುವರ್ಷದ ಒಬ್ಬ ಹುಡುಗ ಮಲಗಿದ್ದ. ಏಟುತಿಂದ ಹುಲಿ ಕಾಲಿನಿಂದ ಹುಲ್ಲನ್ನು ಕಿತ್ತೆಸೆಯಿತು. ಆದರೆ ಮಲಗಿದ್ದ ಹುಡುಗನ ತಂಟೆಗೆ ಹೋಗಲಿಲ್ಲ. ಎಲ್ಲರೂ ಹೆದರಿ ಓಡಿಹೋದರು. ನೋವನ್ನು ತಾಳಲಾರದ ಆ ಹುಲಿ ಕಾಡಿಗೆ ಕಾಡೇ ನಡುಗುವಂತೆ ಅಬ್ಬರಿಸಿ ಅಲ್ಲಿಂದ ಹೊರಟಿತು. ಇಷ್ಟರಲ್ಲಿ ಇಂಗ್ಲಿಷ್ ಯುವಕ ರಕ್ತ ಸುರಿದ ದಾರಿಯಲ್ಲಿಯೇ ಹೋಗಿ ಹುಲಿಯ ಹಣೆಗೆ ಗುರಿಯಿಟ್ಟು ಗುಂಡುಹಾರಿಸಿದ. ಹುಲಿ ತೆಪ್ಪಗಾಯಿತು. ಅನುಮಾನ ಪರಿಹಾರಕ್ಕೆ ಮತ್ತೊಂದು ಗುಂಡುಹಾರಿಸಿದ. ಅದು ಕಾಲಿಗೆ ತಗುಲಿತು. ಈ ವೇಳೆಗೆ ಚಂದ್ರನಿಗೆ ಮೋಡ ಅಡ್ಡಬಂದಿತು. ಇಷ್ಟು ಹೊತ್ತಿನವರೆಗು ಮಲಗಿದ್ದ ಮಗು ಮಲಗಿಯೇ ಇತ್ತು. ಹೆದರಿ ಓಡಿಹೋಗಿದ್ದ ಅವನ ಅಪ್ಪನು ಇನ್ನೂ ಅನೇಕರ ಸಮೇತ ಹಿಂದಿರುಗಿಬಂದ– 'ಪರಂಗೀ!' 'ಪರಂಗೀ!'ಎಂದು ಕೂಗಿಕೊಳ್ಳುತ್ತ. ಯೂರೋಪಿನವರನ್ನೂ 'ಫ್ರಾಂಕ'ರನ್ನೂ ಇಲ್ಲಿಯ ಜನ ಕರೆಯುವುದು ಹೀಗೆ. ಹುಡುಗ ಎಚ್ಚರವಾಗಿ ಅಲ್ಲಿಯೇ ಆಡ್ತಾಡುತ್ತಿದ್ದ.

ಹುಲಿಯ ಚರ್ಮ ಸುಲಿಸಿದಾಗ ನಮಗೆ ಮೊದಲು ಕಂಡದ್ದು ಎರಡು ದೊಡ್ಡ ಚಪ್ಪೆಗಳು. ಈ ಮೂಳೆಗಳಿಗೂ ಬೇರೆ ಮೂಳೆಗಳಿಗೂ ಸಂಬಂಧ ಇರಲಿಲ್ಲ. ಈ ಬಗ್ಗೆ ಒಂದು ನಂಬಿಕೆ ಇದೆ. ಅದೇನೆಂದರೆ, ಹಸಿದಾಗ ಹುಲಿಯು ತನ್ನ ಬಲದೋಳನ್ನು ನೆಕ್ಕಿ ಹಸಿವು ತೀರಿಸಿಕೊಳ್ಳುತ್ತದೆ ಎಂದು. ಆದರೆ ಇದು ನಿಜ ಇರಲಾರದು. ಅದಕ್ಕೆ ಹೆಚ್ಚಿನ ಶಕ್ತಿ ನೀಡಲು ಪ್ರಕೃತಿಯೇ ಈ ರೀತಿ ಚಪ್ಪೆಗಳನ್ನು ಯಾವುದಕ್ಕೂ ಸೇರಿಸದೆ ಬಿಟ್ಟಿರಬೇಕು. ಹೊಟ್ಟೆಯ ಕರುಳಿನಲ್ಲಿ ಅಂಥ ವಿಶೇಷವೇನೂ ಕಾಣಲಿಲ್ಲ. ಆದರೆ ಗುಂಡಿಗೆ ಮಾತ್ರ ಭಾರಿಯಾಗಿತ್ತು. ಈಲಿಯಲ್ಲಿ ಮಾತ್ರ ಅದರ ವಯಸ್ಸಿಗೆ ತಕ್ಕಂತೆ ಹಾಲೆಗಳು (lobes) ಇದ್ದುವು. ಈ ಹುಲಿಯಲ್ಲಿ ಆರೂವರೆ ಹಾಲೆಗಳಿದ್ದವು.[೧]

---

೧. ಹುಲಿ ಮತ್ತು ಸಿಂಹಗಳಲ್ಲಿ ಚಪ್ಪೆ ಎಲುಬುಗಳು (Clavicles) ಮಾಂಸದಿಂದ ಆವೃತ್ತವಾಗಿರುತ್ತವೆಂದೂ, ಎದೆ ಎಲುಬಿಗಾಗಲೀ, ಹೆಗಲ ಎಲುಬಿಗಾಗಲೀ ಕೂಡಿಕೊಂಡಿರುವುದಿಲ್ಲ ವೆಂದೂ ಗೊತ್ತಾಗುತ್ತದೆ. ಈ ಎಲುಬುಗಳಲ್ಲಿ ಮಂತ್ರಶಕ್ತಿ (charm) ಇರುವುದೆಂಬ ಕಾರಣ ಇಂಗ್ಲಿಷ್ ಹೆಂಗಸರು ಇವುಗಳನ್ನು ಬ್ರೋಚ್‌ಗಳಾಗಿ ಸಿಕ್ಕಿಸಿಕೊಳ್ಳುತ್ತಾರಂತೆ.

ಸ್ಯಾಂಡರ್‍ಸನ್ ಎಂಬುವನು ತನ್ನ 'ಇಂಡಿಯಾದ ಕಾಡುಮೃಗಗಳೊಡನೆ ಹದಿಮೂರು ವರ್ಷಗಳು' ಎಂಬ ಪುಸ್ತಕದಲ್ಲಿ ಹುಲಿ ಮತ್ತು ಚಿರತೆಗಳ ಬಗ್ಗೆ ಹೀಗೆ ಹೇಳಿದ್ದಾನೆ: 'ಹುಲಿ ಮತ್ತು ಚಿರತೆಗಳ ವಯಸ್ಸನ್ನು ಅವುಗಳ ಈಲಿಯಲ್ಲಿರುವ ಹಾಲೆಗಳಿಂದ ಹೇಳಬಹುದೆಂದು ಇಲ್ಲಿಯ ನಿವಾಸಿಗಳು ಹೇಳುತ್ತಾರೆ. ಒಂದು ವರ್ಷ ವಯಸ್ಸಿಗೆ ಒಂದು ಹಾಲೆ ಇರುತ್ತದೆಯಂತೆ. ಇದನ್ನು ಅಂಗರಚನಾ ಶಾಸ್ತ್ರಜ್ಞರು ಒಪ್ಪುವುದಿಲ್ಲ. ಆದರೆ ಬೇರೆ ಬೇರೆ ಪ್ರಾಣಿಗಳಲ್ಲಿರುವ ಹಾಲೆಗಳ ಸಂಖ್ಯೆ ಹೆಚ್ಚು ಕಡಮೆ ಇರುವುದು

ಮುಖ್ಯಸ್ಥನು ಆ ಹುಡುಗನ ಧೈರ್ಯವನ್ನು ಮೆಚ್ಚಿ ಇಲ್ಲಿಯ ಪದ್ಧತಿಗೆ ಅನುಸಾರವಾಗಿ ನೆರೆದ ಎಲ್ಲರ ಮುಂದೆ ತನ್ನ ವೆನೀಸಿನ ಜರತಾರಿ ಅಂಗಿಯನ್ನು ತೆಗೆದು ಆತನಿಗೆ ತೊಡಿಸಿದನು. ಯಾರಾದರೂ ಇಂತಹ ಅಪಾಯಕಾರಿಯಾದ ಸಾಹಸದ ಕೆಲಸ ಮಾಡಿದರೆ ಅಂಥವರನ್ನು ಅಮೀರರು ಮರ್ಯಾದೆ ಮಾಡುತ್ತಾರೆ. ಈ ಸಾಹಸದಲ್ಲಿ ಯಾರಾದರೂ ಗಾಯಗೊಂಡರೆ ಅಂಥವರಿಗೆ ಅವರು ತಮ್ಮ ನಡುಪಟ್ಟಿಯನ್ನೋ ತಲೆಯುಡುಗೆಯನ್ನೋ ತೊಡಿಸಿ ಮರ್ಯಾದೆ ಮಾಡುತ್ತಾರೆ. ಹಾಗೆಯೇ ಇಂಥ ಸಾಹಸ ಕೆಲಸದಲ್ಲಿ ಉಪಯೋಗಿಸಿದ ಬಂದೂಕಿಗೂ ಕೆಂಪು ಮಖಮಲ್ಲು ತೊಡಿಸುತ್ತಾರೆ.

ಕಾಡಿನಲ್ಲಿ ವಾಸ ಮಾಡುವ ಜನರು ಹುಲಿಯ ಬಗ್ಗೆ ಹೇಳುವ ಕಥೆ ಸ್ವಾರಸ್ಯವಾಗಿದೆ. ಕಾಡಿನಲ್ಲಿ ಕೋತಿಗಳಿಗೆ ಲೆಕ್ಕವಿಲ್ಲ. ಇವನ್ನು ತಿನ್ನಲು ಹುಲಿ ಅನುಸರಿಸುವ ವಿಧಾನ ಹೀಗಿದೆ. ಹುಲಿಯನ್ನು ಕಂಡರೆ ಸಾಕು ಕೋತಿಗಳು ಕಿರಿಚಾಡುತ್ತಾ ಎತ್ತರವಾದ ಮರದ ಕೊಂಬೆ–ರೆಂಬೆಗಳ ಮೇಲೆ ಅಡಗಿಕೊಳ್ಳುತ್ತವೆ. ಹುಲಿ ಮರದ ಬುಡದಲ್ಲಿ ಸುಮ್ಮನೆ ಅವಿತು ಕುಳಿತುಕೊಳ್ಳುತ್ತದೆ. ಕೊಂಚ ಹೊತ್ತು ಹೀಗೇ ಇದ್ದು ಇದ್ದಕ್ಕಿದ್ದಂತೆ ಅಬ್ಬರಿಸುತ್ತದೆ. ಈ ಅಬ್ಬರಕ್ಕೆ ಹಿಡಿತ ತಪ್ಪಿದ ಕೋತಿಗಳು ಕೆಳಕ್ಕೆ ಬಿದ್ದುಬಿಡುತ್ತವೆ. ಕೆಳಕ್ಕೆ ಬಿದ್ದ ಕೋತಿಗಳನ್ನು ಹುಲಿಯು ನಿಧಾನವಾಗಿ ಒಂದೊಂದಾಗಿ ತಿನ್ನುತ್ತದೆ. ಹೀಗೆ ಹುಲಿ ತನ್ನ ಆಹಾರ ಪಡೆಯುತ್ತದೆ. ಮನುಷ್ಯನನ್ನು ತಿನ್ನುವುದು ಅಪರೂಪ. ಹಾಗೇನಾದರೂ ಅದು ಮನುಷ್ಯನನ್ನು ತಿಂದರೆ ಆತ ಯಾವುದೋ ಮಹಾ ಪಾಪ ಮಾಡಿದ್ದಾನೆಂದು ಭಾವಿಸಲಾಗುತ್ತದೆ. ಹುಲಿ ಅಷ್ಟು ವೇಗವಾಗಿ ಓಡುವ ಪ್ರಾಣಿ ಅಲ್ಲ. ಮೂರು ನೆಗೆತ ಸಾಕು ಅದನ್ನು ಸುಸ್ತುಮಾಡಲು. ಹೆಣ್ಣುಹುಲಿ ಹನ್ನೆರಡು ವರುಷಕ್ಕೊಮ್ಮೆ ಒಂದೇಒಂದು ಮರಿ ಹಾಕುತ್ತದೆ. ಹೆಣ್ಣು ಗಂಡುಗಳು ಮೂರು ತಿಂಗಳ ದೀರ್ಘಕಾಲ ತಮ್ಮ ಪ್ರಣಯ ನಡೆಸುತ್ತವೆ. ಹೀಗೆ ಪ್ರಕೃತಿಯೇ ಈ ಕ್ರೂರಮೃಗಗಳ ಬೆಳವಣಿಗೆಯನ್ನು ಕಡಮೆಮಾಡಿದೆ. ಅಲ್ಲದೆ ಹೆಣ್ಣುಹುಲಿ ತನ್ನ ಜೀವಿತದಲ್ಲಿ ಒಂದೇಸಲ ಮರಿ ಹಾಕುತ್ತದೆ, ಒಂದಕ್ಕಿಂತ ಹೆಚ್ಚುಸಲ ಮರಿ ಹಾಕಿದರೆ ಅದು ಬಹು ಅಪರೂಪ ಎಂಬ ನಾಣ್ಣುಡಿಯೂ ಇದೆ.

ಚಿರತೆಯು ಹುಲಿ ಮತ್ತು ಇತರ ಪ್ರಾಣಿಗಳಿಗಿಂತ ಹೆಚ್ಚು ಕ್ರೂರವಾದ ಪ್ರಾಣಿ. ಕೋತಿಗಳೇ ಚಿರತೆಗಳಿಗೆ ಆಹಾರ. ಚಿರತೆಯ ಮಲವನ್ನು ನೋಡಿದರೆ ಸಾಕು, ಅದರಲ್ಲಿ ಕೋತಿಗಳ ಚರ್ಮ ಹಾಗೂ ಕೂದಲು ಇರುವುದನ್ನು ನೋಡಬಹುದು.

ಎಲ್ಲೆಲ್ಲೂ ಕೋತಿಗಳ ಕಾಟವೇ ಕಾಟ. ನಾನು ಎಷ್ಟೋ ಕೋತಿಗಳನ್ನು ಕೊಂದು ಹಾಕಿದ್ದೇನೆ. ಆದರೆ ಇವುಗಳನ್ನು ಕೊಲ್ಲುವುದು ಇಲ್ಲಿಯ ಜನರ ದೃಷ್ಟಿಯಲ್ಲಿ ತಪ್ಪು.

---

ಮಾತ್ರ ನಿಜ. ವಯಸ್ಸಾದಂತೆ ಇವುಗಳ ಸಂಖ್ಯೆ ಹೆಚ್ಚಾಗಿರುತ್ತದೆ. ಒಂಬತ್ತರಿಂದ ಹದಿನೈದು ಹಾಲೆಗಳಿರುವ ಹುಲಿ ಚಿರತೆಗಳನ್ನು ನಾನೇ ಹೊಡೆದಿದ್ದೇನೆ. ಹಾಲೆಗಳಿಗೂ ವಯಸ್ಸಿಗೂ ಏನೂ ಸಂಬಂಧ ವಿಲ್ಲದ ಪಕ್ಷದಲ್ಲಿ ಇದಕ್ಕೆ ಕಾರಣ ಏನು ಎಂಬುದನ್ನು ಶಾಸ್ತ್ರಜ್ಞರು ಹೇಳಬಲ್ಲರೆ?'

ಕಾಡಿನಲ್ಲಿ ಬಿದಿರಿನ ಮೆಳೆಗಳು ಬೆಳೆದುನಿಂತಿವೆ. ಈ ಬಿದಿರು ಇನ್ನೂ ಎಳೆಯ ದಾಗಿರುವಾಗಲೇ ಅದನ್ನು ಪಲ್ಲಕ್ಕಿಯ ಹಡ್ಡೆಗಾಗಿ ಹೇಗೆಂದರೆ ಹಾಗೆ ಬಗ್ಗಿಸಿ ಬೆಳೆಯು ವಂತೆ ಮಾಡುತ್ತಾರೆ. ಬಿದಿರಿನ ಕಳಲೆ ಉಪ್ಪಿನಕಾಯಿ ಬಹು ರುಚಿ.

ಕಕ್ಕೆಮರ ಹೇಗಿದೆ ಎಂದು ನೋಡಬೇಕೆಂದು ನಾನು ಗುಡ್ಡ ಹತ್ತಿ ಹೋಗಿ ಬಂದೆ. ಸಣ್ಣ ಬುಡದ ಈ ಮರ ಎತ್ತರವಾಗಿ ಬೆಳೆಯುತ್ತದೆ. ಜೊಂಪೆಜೊಂಪೆಯಾಗಿ ಕಾಯಿ ಬಿಡುತ್ತದೆ. ಈ ಕಾಯನ್ನು ಸ್ಥಳೀಯರು 'ಸಿಂಗ' (Singa) ಎಂದು ಕರೆಯುತ್ತಾರೆ.

ಕಾರವಾರದ ಸುತ್ತಮುತ್ತಲ ಕಾಡುಗಳಲ್ಲಿ ಕಾಡುದಾಲ್ಚಿನ್ನಿ ಮತ್ತು ಹುಣಿಸೆ ಬೆಳೆಯುತ್ತದೆ. ಇಲ್ಲಿ ಬೆಳೆಯುವ ತೇಕೆ (Teke = ತೇಗ) ಮರವನ್ನು ಮನೆಗಳಿಗೆ ಉಪಯೋಗಿಸುತ್ತಾರೆ. 'ತೇಕೆ' ಎಂಬುದು ಪೋರ್ಚುಗೀಸ್ ಭಾಷೆಯ ಪದ. ಮೂರರು ಇದನ್ನು 'ಸೊಗ್‌ವಾನ್' (Sogwan = ಸಾಗವಾನಿ) ಎಂದು ಕರೆಯು ತ್ತಾರೆ. ಈ ಮರಕ್ಕೆ ಗೆದ್ದಲು ಹಿಡಿಯುವುದಿಲ್ಲ; ಕುಟ್ಟೆ ಹೊಡೆಯುವುದಿಲ್ಲ. ಈ ಕಾರಣ ಮನೆಯನ್ನು ಕಟ್ಟುವುದಕ್ಕೆ ಇದಕ್ಕಿಂತ ಉತ್ತಮವಾದ ಮರ ಪ್ರಪಂಚದಲ್ಲಿ ಬೇರೆ ಇಲ್ಲ. ಇದನ್ನು ಇಂಡಿಯಾದ ಕಾಡಿನ ರಾಜ ಎಂದು ಕರೆಯಬಹುದು. ಆದರೆ ನೋಡಲು ಈ ಮರ ಅಷ್ಟು ಅಂದವಾಗಿರುವುದಿಲ್ಲ. ಇನ್ನೊಂದು ಬಗೆಯ ದೊಡ್ಡ ಮರದಲ್ಲಿ ಕಿತ್ತಳೆಯಷ್ಟು ಗಾತ್ರದ ಹಣ್ಣು ಬಿಡುತ್ತವೆ. ಹಣ್ಣಿನ ಒಳಗಡೆ ಬಿಳಿಯ ತಿರುಳು ಇರುತ್ತದೆ. ಇದರ ಬೀಜಗಳನ್ನು ಜನರು ಆಯ್ದು ಇಟ್ಟುಕೊಳ್ಳುತ್ತಾರೆ.[೧] ಗುಹ್ಯ ರೋಗಗಳಿಗೆ ಈ ಬೀಜಗಳು ಸಿದ್ಧೌಷಧ. ಸಮುದ್ರ ತೀರದಲ್ಲಿ ಕಡಲು ಈರುಳ್ಳಿ (Sea onions) ಮತ್ತು ಒಂದು ಬಗೆಯ 'ಸರಸಪರಿಲ್ಲಾ' (Sarsaparilla), ಗದ್ದೆಗಳಲ್ಲಿ ಭತ್ತ ಅಲ್ಲದೆ ನಚೇರಿ (nuchery = ನಾಚನೀ = ನಾಚ್ಣೀ), 'ಕುಷ್ ಕುಷ್', ಅರಿಶಿಣ, ಶುಂಠಿ, ಆಲೂಗೆಡ್ಡೆ (potatoe = ಗೆಣಸು ?) ಮುಂತಾದುವನ್ನು ಬೆಳೆಯುತ್ತಾರೆ.

ಇಲ್ಲಿಯ ಜನರ ಮೂಢನಂಬಿಕೆ ಹೇಳತೀರದು. ಭೂತಪ್ರೇತಗಳನ್ನು ಭಯ ಭಕ್ತಿಯಿಂದ ಪೂಜಿಸುವ ಈ ಜನರಿಗೆ ಬುದ್ಧಿಯೇ ಇಲ್ಲವೆಂದು ಹೇಳಬಹುದು. ನಾನು ಇಲ್ಲಿದ್ದ ವೇಳೆ 'ಸೆಮಿಸ್ಸಾರ್ (Semissar = ಶಿವೇಶ್ವರ) ಎಂಬಲ್ಲಿರುವ 'ಪ್ರಿಯಾಪಸ್' ಎಂಬ ವಿಗ್ರಹಕ್ಕೆ ಸ್ತ್ರೀಯರು ಹರಕೆ ಮಾಡಿಕೊಂಡು ತಮ್ಮ ಕನ್ನೆತನವನ್ನು ಅದಕ್ಕೆ ಒಪ್ಪಿಸಿಕೊಳ್ಳುವುದನ್ನು ನೋಡಿದೆ. ನಾವು ಇದ್ದ ಮನೆಯ ಆ ಕಡೆ ನೀರಿನ ಆಚೆ ಇದು ನಡೆದುದನ್ನು ಕಂಡೆ.

ಈ ನಾಡಿನ 'ಲಿಂಗುಯಿತ್' (Linguit = ಲಿಂಗಾಯಿತರು) ಎಂಬುವರಲ್ಲಿ ಜೋಗಿ (Jougye = ಜೋಗಿ) ಜಂಗಮರೂಗಳೆಂಬ ಜನ ಇದ್ದಾರೆ. ಇವರನ್ನು ಗೃಹಸ್ಥರು

---

೧. nux vomica = strychos

ತಮ್ಮ ಮನೆಗಳಿಗೆ ಕರೆದು ಅವರ ಪಾದಪೂಜೆ ಮಾಡಿ ಆತಿಥ್ಯ ನಡೆಸುತ್ತಾರೆ. ಅವರು ತಮ್ಮ ಮನೆಯಲ್ಲಿರುವಷ್ಟು ಕಾಲ ತಮ್ಮ ಹೆಂಡತಿಯೊಡನೆ ಸುಖಪಡಬಹುದು.

ಇಲ್ಲಿಯವರಲ್ಲಿ ಇನ್ನೊಂದು ಪದ್ಧತಿ ಇದೆ. ಅದೇನೆಂದರೆ ಹರಿತವಾದ ಚಾಕುವಿನಿಂದ ಮೈಕೈಗೆ ಹೊಡೆದುಕೊಳ್ಳುವುದು. ಮತ್ತೆ ಕೆಲವರು ಬೆನ್ನಿನ ನರಕ್ಕೆ ಕೊಕ್ಕೆ ಸಿಕ್ಕಿಸಿಕೊಂಡು ಗಂಟೆಗಟ್ಟಲೆ ತೂಗಾಡುವುದು.[೧]

## ಆರನೆಯ ಪತ್ರ

ಫ್ರೈಯರ್‌ನ ಐದನೆಯ ಪತ್ರ ಪರ್ಷಿಯಾಕ್ಕೆ ಸಂಬಂಧಪಟ್ಟದ್ದು. ಅದು ತುಂಬಾ ದೀರ್ಘವಾದ ಪತ್ರ. ಅದು ನಮಗೆ ಇಲ್ಲಿ ಪ್ರಕೃತವಲ್ಲವಾದ್ದರಿಂದ ಈ ಆರನೆಯ ಪತ್ರದಿಂದ ಆತನ ಪ್ರವಾಸಕಥನವನ್ನು ಮುಂದುವರಿಸುತ್ತಿದ್ದೇವೆ. ೧೬೭೭ರಲ್ಲಿ ಪರ್ಷಿಯಾಕ್ಕೆ ಹೋದ ಫ್ರೈಯರ್ ೧೬೭೯ರಲ್ಲಿ ಇಂಡಿಯಾಕ್ಕೆ ಹಿಂದಿರುಗಿದ.

ಹಿಂದಿನ ಪತ್ರವನ್ನು (ಐದನೆಯ ಪತ್ರವನ್ನು) ನಾನೇ ತಮ್ಮ ಕೈಗೆ ಮುಟ್ಟಿಸಬೇಕೆಂದಿದ್ದೆ. ಆದರೆ ಇನ್ನೂ ಇಲ್ಲಿಯೇ ಇರಬೇಕಾಗಿರುವುದರಿಂದ ಮತ್ತೆ ತಮಗೆ ಈ ಪತ್ರ ಬರೆದು ತೊಂದರೆಕೊಡಬೇಕಾಗಿದೆ.

ಬ್ರೋಚ್ ಸೂರತ್ತಿನಿಂದ ಉತ್ತರಕ್ಕೆ ಇದೆ. ಸೂರತ್ತಿನಲ್ಲಿರುವ ಇಂಗ್ಲಿಷರ ಗಡಂಗಿನ ಶಾಖೆ ಬ್ರೋಚ್‌ನಲ್ಲಿದೆ. ಅಲ್ಲಿ ನಮ್ಮ ವರ್ತಕರು ಕಾಯಿಲೆ ಬಿದ್ದರೆ ಇಲ್ಲಿಗೆ ಆಳಿನ ಮೂಲಕ ಹೇಳಿಕಳಿಸುತ್ತಾರೆ. ನಾನು ತುರ್ತಾಗಿ ಬರಬೇಕೆಂದು ಅಲ್ಲಿಂದ ಒಬ್ಬ ಆಳು ಬಂದು ಹೇಳಿಹೋದ. ನನಗೂ ಆ ಊರು ನೋಡಬೇಕೆಂಬ ಆಸೆ ಇತ್ತು. ಪ್ರೆಸಿಡೆಂಟರೂ ಅಲ್ಲಿಗೆ ಹೊರಟಿದ್ದರು. ಅವರ ಜೊತೆ ನಾನೂ ಹೊರಟೆ.

ಬ್ರೋಚ್‌ಗೆ ಎರಡು ಮಾರ್ಗಗಳಿವೆ. ಒಂದು ಸಮುದ್ರದ ಮೂಲಕ, ಇನ್ನೊಂದು ಭೂಮಿಯ ಮೂಲಕ. ಸಮುದ್ರದ ಮೂಲಕ ಹೋದರೆ 'ಸ್ವಾಲ್ಲಿ ಹೊಳೆ'ಯ ಮೂಲಕ ಊರನ್ನು ಪ್ರವೇಶಿಸಬೇಕು. ಭೂಮಿಯ ಮೂಲಕ ಹೋಗುವವರು ಗಾಡಿಗಳ ಮೇಲೊ ಕುದುರೆಗಳ ಮೇಲೊ ಹೋಗಬೇಕು. ಇವೆರಡರ ಅನುಕೂಲಗಳೂ ನನಗೆ ದೊರೆತವು. ನಮ್ಮ ಹಿಂದೆ ಕಂಪನಿಯ 'ಪ್ಯೂನ್'ಗಳು ಇದ್ದರು. ಪರ್ಷಿಯಾದಲ್ಲಿ ನಮ್ಮ ಪ್ರಯಾಣಕ್ಕೆ ಯಾವ ತೊಂದರೆಗಳು ಇರುವುದಿಲ್ಲ. ಆದರೆ ಇಲ್ಲಿ ದಾರಿಯ ಉದ್ದಕ್ಕೂ ಎತ್ತು, ಒಂಟೆ ಅಥವಾ ಎಮ್ಮೆಗಳು ಅಡ್ಡಿಬರುತ್ತವೆ. ಬಗೆಬಗೆಯ ಸರಕುಗಳನ್ನು ತುಂಬಿದ ಗಾಡಿಗಳು ಬರುತ್ತಿರುತ್ತವೆ. ಒಂದೊಂದು ಗಾಡಿಗೆ ಎಂಟೊ ಹನ್ನೆರಡೊ ಅಥವಾ ಹದಿನಾರೊ ಎತ್ತುಗಳನ್ನು ಕಟ್ಟಿ ಎಳೆಸುತ್ತಾರೆ. ಅಲ್ಲಿ (ಪರ್ಷಿಯಾ

೧. ಇದು ಕರ್ನಾಟಕದ ಅದರಲ್ಲೂ ಹಳೆಯ ಮೈಸೂರು ಭಾಗದಲ್ಲಿ ಈಗಲೂ ಕಾಣಬಹುದಾದ ಸಿಡಿ ಆಡುವ ಪದ್ಧತಿ. ಉತ್ತರ ಕನ್ನಡ ಜಿಲ್ಲೆಯಲ್ಲಿ ಇದಕ್ಕೆ 'ಭಂಡ್' (Bhand) ಎಂದು ಕರೆಯುತ್ತಾರಂತೆ.

ದಲ್ಲಿ) ನಮಗೆ ದಾರಿ ತೋರಿಸಲು ಜನ ಇದ್ದಾರೆ. ಇಲ್ಲಿ ನಮ್ಮ ರಕ್ಷಣೆಗೆ ಜನ ಇರುತ್ತಾರೆ. ಏಕೆಂದರೆ, ಇಲ್ಲಿ ಕಳ್ಳಕಾಕರ ಕಾಟ ಹೆಚ್ಚು. ಅಲ್ಲಿ ವರ್ಷದ ಯಾವ ಕಾಲದಲ್ಲಾದರೂ ಪ್ರಯಾಣ ಮಾಡಬಹುದು. ಹವೆಯ ಅಥವಾ ದರೋಡೆಕಾರರ ತೊಂದರೆಯಿಲ್ಲ. ಇಲ್ಲಿ ಕೆಲವು ಕಾಲಗಳಲ್ಲಿ ಮಾತ್ರ ಪ್ರಯಾಣ ಮಾಡಬೇಕು. ಅದೂ ಸಾಕಷ್ಟು ರಕ್ಷಣೆ ಮಾಡಿ ಕೊಂಡು. ಇಲ್ಲಿ ರಾತ್ರಿಹೊತ್ತು ತಂಗಲು ಛತ್ರಗಳು ಇಲ್ಲ. ಡೇರೆ ಅಥವಾ ಗುಡಾರ ಇಲ್ಲದಿದ್ದರೆ ಮರದ ಕೆಳಗೋ ಅಥವಾ ಮಸೀದಿ ಕಟ್ಟಡಗಳಲ್ಲೋ ತಂಗಬೇಕು. ಎಲ್ಲೋ ಒಂದೊಂದು ಕಡೆ 'ಚೌಕಿ'ಗಳು ಇರುವುದುಂಟು. ಇಲ್ಲಿ ಸುಂಕ ವಸೂಲು ಮಾಡುವ 'ಚೌಕಿದಾರ' ಇರುತ್ತಾನೆ. ಆದರೆ ಇಲ್ಲಿ ಒಳ್ಳೊಳ್ಳೆಯ ನದಿಗಳು ಅಲ್ಲಲ್ಲಿ ಸಿಕ್ಕುತ್ತವೆ. ಅವಿಲ್ಲದಿದ್ದರೆ ನೀರಿನ ಕೊಳಗಳೋ ತೋಡಿದ ಬಾವಿಗಳೋ ಇವೆ. ಬಾವಿಗಳಿಗೆ ಕಲ್ಲಿನ ಮೆಟ್ಟಿಲುಗಳಿರುತ್ತವೆ. ಒಳಗಡೆ ತಂಪಾದ ಕೋಣೆಗಳೋ ಗುಹೆಗಳೋ ಇರುತ್ತವೆ. ಈ ಬಾವಿಗಳಿಂದ ಚರ್ಮದ ದೊಡ್ಡದೊಡ್ಡ ಬಾನಿಗಳಿಂದಲೋ ಅಥವಾ ಚಕ್ರಕ್ಕೆ ಜೋಡಿಸಿದ ತೊಟ್ಟಿಗಳಿಂದಲೋ (Persian wheel) ಎತ್ತುಗಳನ್ನು ಹೂಡಿ ತೋಟತುಡಿಕೆಗಳಿಗೆ ನೀರು ಎತ್ತುತ್ತಾರೆ. ಇನ್ನೊಂದು ದೊಡ್ಡ ಅನುಕೂಲವೆಂದರೆ ಬೇಕಾದ ದವಸ ಧಾನ್ಯಗಳು ಪ್ರತಿ ಹಳ್ಳಿಯಲ್ಲಿಯೂ ಸಿಕ್ಕುತ್ತವೆ. ಅಲ್ಲಿ ಈ ಅನುಕೂಲ ಇಲ್ಲ.

ರಥಗಳು (coaches) ಮತ್ತು ಗಾಡಿಗಳು (carts) ಎರಡೂ ಒಂದೆ. ಗಾಡಿಯನ್ನು ದಪ್ಪ ಮೂಕಿಮರ ಹಾಕಿ ಭದ್ರವಾಗಿ ಮಾಡಿರುತ್ತಾರೆ. ರಥವನ್ನು ಎತ್ತುಗಳು ಎಳೆಯುತ್ತವೆ. ಹಾಲುಬಿಳುಪಿನ ಎರಡು ಎತ್ತುಗಳು. ಇದ್ದಿಲು ಬಣ್ಣದ ಕೋಡುಗಳು. ಕೋಡಿಗೆ ಹಿತ್ತಾಳೆಯ ಅಣಸುಗಳು. ಅಣಸುಗಳಿಂದ ತಲೆಯವರೆಗೆ ಹಿತ್ತಾಳೆಯ ಸರಪಳಿಗಳ ಜೋಡಣೆ. ಕೆಂಪುಬಣ್ಣದ ಕೊರಳಪಟ್ಟಿ. ಆ ಪಟ್ಟಿಗೆ ಜೋಡಿಸಿದ ಗಂಟೆಗಳು. ಪಟ್‌ಪಟ್‌ನೆ ಬಡಿಯುವ ಕಿವಿಗಳಿಗೆ ಬಣ್ಣಬಣ್ಣದ ಅಲಂಕಾರ. ಕೆಂಪುಬಟ್ಟೆಯನ್ನು ಸುತ್ತಿದ ಮೂಗುದಾರ. ನಮ್ಮ ರಥದಂತೆ ಇಲ್ಲಿಯ ರಥ ಆ ಕಡೆ ಈ ಕಡೆ ವಾಲಾಡುವುದಿಲ್ಲ. ಇರ್ಚಿಯ ಮೇಲೆ ಚಚ್ಚೌಕವಾದ ಪೀಠದ ಮೇಲೆ ಕಮಾನು ಕಡ್ಡಿಗಳು. ಪೀಠವನ್ನು ದಂತದಿಂದ ಮಾಡಿರುತ್ತಾರೆ ಅಥವಾ ಅವರವರ ಇಷ್ಟದಂತೆ ಅದನ್ನು ಇನ್ನೂ ಚಂದ ಮಾಡಿಕೊಳ್ಳುತ್ತಾರೆ. ಈ ಪೀಠದ ಮೂಲೆಗಳಿಗೆ ಕಡೆದ ಮರದ ಗೂಟಗಳು. ಅವುಗಳ ಮೇಲೆ ಹೊದಿಸಿದ ಅಂದಚಂದದ ಕೆಂಪು ಬಟ್ಟೆ. ಕೆಳಗೆ ಜಮಖಾನ. ಮೂರುನಾಲ್ಕು ಜನ ಚಕ್ಕಲುಬೊಕ್ಕಲು ಹಾಕಿಕೊಂಡು ಕುಳಿತುಕೊಳ್ಳಬಹುದು. ಈ ರಥಕ್ಕೆ ಸಣ್ಣ ಸಣ್ಣ ಎರಡೇ ಚಕ್ರಗಳು. ಸಾರಥಿ ಮೂಕಿಯ ಮೇಲೆ ನೊಗದ ಬಳಿ ಕುಳಿತುಕೊಳ್ಳುತ್ತಾನೆ. ನೊಗಕ್ಕೂ ಕೆಂಪುಬಟ್ಟೆಯ ಅಲಂಕಾರ ಮತ್ತು ಕಡತದ ಕೆಲಸ ಮಾಡಿರುತ್ತಾರೆ. ಸಾರಥಿಯ ಕೈಯಲ್ಲಿ ಚಾವಟಿ ಇರುವುದಿಲ್ಲ; ಕೋಲು (goad) ಇರುತ್ತದೆ. ಮಳೆಗಾಲದಲ್ಲಿ ಸಾಮಾನ್ಯವಾಗಿ ಪ್ರಯಾಣ ಇಲ್ಲ. ಹಾಗೇನಾದರೂ ಹೋಗಬೇಕಾದರೆ 'ಮುಮ್‌ಜುಮಾ' (mumjuma = munjamah) ಎಂಬ

ಮೇಣದ ಬಟ್ಟೆಯನ್ನು ರಥಕ್ಕೆ ಹೊದಿಸುತ್ತಾರೆ. ಪ್ರಯಾಣಕ್ಕೆಂದೇ ಮಾಡಿದ ರಥಗಳನ್ನು ಹೆಚ್ಚು ಭದ್ರವಾಗಿ ಮಾಡಿರುತ್ತಾರೆ. ಊರಿನಲ್ಲಿ ಓಡಾಡಲು ಅಥವಾ ಷೋಕಿಗಾಗಿ ತಿರುಗಾಡಲು ಇರುವ ರಥಗಳು ಹಗುರವಾಗಿರುತ್ತವೆ. ಷೋಕಿಗಾಗಿ ಮಾಡಿದ ರಥಗಳಿಗೆ ಚುರುಕಾದ ಹೋರಿಗಳನ್ನು ಕಟ್ಟಿ ಹೊಲಗಳಲ್ಲಿ ಓಟದ ಸ್ಪರ್ಧೆ (ಕಂಬಳ) ನಡೆಸುತ್ತಾರೆ. ಗೆದ್ದವರಿಗೆ ಹಾರದ ಮರ್ಯಾದೆ. ಒಲಿಂಪಿಕ್ ಬಹುಮಾನದಷ್ಟೇ ಅದಕ್ಕೆ ಬೆಲೆ. ಹೋರಿಗಳು ಓಡುವುದನ್ನು ನೋಡುವುದಕ್ಕೆ ಒಂದು ಚಂದ. ಹಿಂಗಾಲುಗಳನ್ನು ಎತ್ತಿ ನಾಗಾಲೋಟದಲ್ಲಿ ಎತ್ತುಗಳು ಓಡುತ್ತವೆ. ಕೆಲವು ಸಲ ಅವುಗಳ ಮೇಲೆ ಕುಳಿತು ಓಡಿಸುವುದೂ ಉಂಟು.

ಕಾಲುಗಳನ್ನು ಇಳಿಬಿಟ್ಟುಕೊಂಡು ಕುಳಿತುಕೊಳ್ಳುವಂತಹ ರಥಗಳು ಇಲ್ಲಿ ಇಲ್ಲ. ಕೆಲವು ಯೂರೋಪಿನವರು ಮಾತ್ರ ಲಂಡನ್‌ನಲ್ಲಿ ಮಕ್ಕಳು ಆಟವಾಡುವಂತಹ ನಾಲ್ಕು ಚಕ್ರದ ಗಾಡಿಗಳನ್ನು ಉಪಯೋಗಿಸುತ್ತಾರೆ. ಇವಕ್ಕೂ ಎತ್ತುಗಳನ್ನು ಕಟ್ಟಿ ಹೊಡೆಯುತ್ತಾರೆ. ಕುದುರೆಗಳನ್ನು ಕಟ್ಟುವುದೇ ಇಲ್ಲ.

ನಾವು ಬೆಳಕು ಹರಿಯುವಾಗ ಹೊರಟು ಹುಲುಸಾಗಿ ಬೆಳೆದ ಧಾನ್ಯಗಳ ಹೊಲಗಳನ್ನೂ ಹೊಗೆಸೊಪ್ಪಿನ ಹೊಲಗದ್ದೆಗಳನ್ನೂ ನೋಡುತ್ತಾ ಬಿಸಿಲೇರಿದಾಗ ಒಂದು ತಾಳೆಮರದ ತೋಪಿನಲ್ಲಿ ತಂಗಿದೆವು. ಸಂಜೆ ಕಾಗೆಗಳು ತಂಡತಂಡವಾಗಿ ಮರಗಳ ಮೇಲೆ ಗೂತ್ತುಕೂತಾಗ ನಾವು ಹೊರಟು ಮಧ್ಯರಾತ್ರಿ ಹೊತ್ತಿಗೆ ಅಂಕ್ಲೇಶ್ವರ ತಲುಪಿದೆವು. ಇಲ್ಲಿ ಸುಂಕ ವಸೂಲುಮಾಡುತ್ತಾರೆ. ಸುಂಕ ಕೊಡದೆ ತಪ್ಪಿಸಿಕೊಂಡಾರೆಂದು ಅಡ್ಡಲಾಗಿ ಮರಹಾಕಿ ಅದಕ್ಕೆ ಮುಳ್ಳನ್ನು ಕಟ್ಟಿರುತ್ತಾರೆ. ಇಲ್ಲಿ ನಾವು ನಮ್ಮ ದಳ್ಳಾಳಿಯ ಮನೆಯಲ್ಲಿ ತಂಗಿದ್ದು ಬೆಳಗ್ಗೆ ಪ್ರಯಾಣ ಮುಂದುವರೆಸಿ ಬ್ರೋಚ್ ನದಿಯನ್ನು ಸಮೀಪಿಸಿದೆವು. ಹೋಗುವಾಗ ದಾರಿಯಲ್ಲಿ ಒಳನಾಡಿಗೆ ಉಪ್ಪನ್ನು ಸಾಗಿಸುತ್ತಿದ್ದ ೫೦೦ಕ್ಕೂ ಹೆಚ್ಚು ಹೇರೆತ್ತುಗಳನ್ನು ನೋಡಿದೆವು. ೯ ರಿಂದ ೧೦ ಘಂಟೆಯ ಒಳಗೆ ಅದನ್ನು ದಾಟಿದೆವು. ಕ್ಯಾಂಬೆ ಚಕ್ರಾಧಿಪತ್ಯವಾಗಿದ್ದಾಗ ಬ್ರೋಚ್ ಅದರ ರಾಜಧಾನಿಯಾಗಿತ್ತು. ಅದು ಪೋರ್ಚುಗೀಸರು ಈ ಕಡೆ ತಮ್ಮ ಕಾರುಬಾರು ನಡೆಸುತ್ತಿದ್ದಾಗ. ಅವರೇ ಮೊಗಲರು ಇಲ್ಲಿಗೆ ಬರಲು ದಾರಿಮಾಡಿಕೊಟ್ಟವರು. ಈಗ ಆಳುತ್ತಿರುವ ಔರಂಗಜೇಬನ ತಂದೆ ಷಾಜಹಾನನ ಸೈನ್ಯಕ್ಕೆ ಅಡ್ಡಿಬಂದ ಕಾರಣ ಆ ಸೈನ್ಯ ಬ್ರೋಚ್‌ನ ಕೋಟೆಯ ಮೇಲೆ ಧಾಳಿ ಮಾಡಿ ಅದನ್ನು ಹಾಳುಮಾಡಿತು. ಈ ಕೋಟೆಗೆ ಆರು ಹೆಬ್ಬಾಗಿಲುಗಳಿದ್ದುವು. ಕೋಟೆಯ ಒಳಗಡೆ ಒಂದು ಹಿಂದೂ ದೇವಸ್ಥಾನ ಇತ್ತು. ಇದನ್ನು ಈಗ ಮಸೀದಿಯಾಗಿ ಉಪಯೋಗಿಸುತ್ತಿದ್ದಾರೆ.* ಇಲ್ಲಿಂದ ಒಂದು ಮೈಲಿ ದೂರದಲ್ಲಿ ಹಿಂದೆ ಇಲ್ಲಿ ಆಳಿದ ಮಹಮ್ಮದ್ ಸುಲ್ತಾನನ ಗೋರಿ ಇದೆ. ಈತ ಮೊಗಲ್

---

* ಇದೇ ಹೆಸರಾದ ಜುಮ್ಮಾ ಮಸೀದಿ. ಇದಕ್ಕೆ ಉಪಯೋಗಿಸಲ್ಪಟ್ಟಿರುವ ಕಂಬಗಳು ಪೂರ್ತ ಹಿಂದೂ ದೇವಸ್ಥಾನದ ಕಂಬಗಳೆಂದು ಹೇಳಲಾಗಿದೆ.

ಚಕ್ರವರ್ತಿಯಿಂದ (ಅಕ್ಬರನಿಂದ ೧೫೭೩ರಲ್ಲಿ) ಸೋಲಿಸಲ್ಪಟ್ಟು ಅವನು ಕಾಲವಾದ ನಂತರ ಇಲ್ಲಿ ಸಮಾಧಿಯಾಗಿದ್ದಾನೆ.

ಈ ಪ್ರದೇಶದಿಂದ ಮೊಗಲ್ ಚಕ್ರವರ್ತಿಗೆ ಭಾರಿ ಆದಾಯ ಉಂಟು. ಈಗ ಇದಕ್ಕೆ ಅಡ್ಡಿ ಬಂದಿದೆ. ಏಕೆಂದರೆ ಔರಂಗಜೇಬನು ಸಿಂಹಾಸನವನ್ನೇರಲು ಸಹಾಯ ಮಾಡಿದ ಜಿಸ್ವಂತ್ ಸಿಂಹನ ಮರಣದನಂತರ ಆತನ ವಿಧವೆಯು ಚಕ್ರವರ್ತಿಗೆ ತನ್ನ ಭಂಡಾರ ಹಾಗೂ ರಾಜ್ಯವನ್ನು ಒಪ್ಪಿಸಲಿಲ್ಲ. ಅವನ್ನು ಒಪ್ಪಿಸಬೇಕೆಂದು ಚಕ್ರವರ್ತಿ ಹೇಳಿ ಕಳುಹಿಸಲು ಆಕೆ 'ಹಣ ನನ್ನಲ್ಲಿಲ್ಲ, ಸಾಕಷ್ಟು ಕತ್ತಿಗಳಿವೆ' ಎಂದು ಉತ್ತರ ನೀಡಿದಳು. ಹೀಗಾಗಿ ಮೊಗಲನು ಈಗ ಯುದ್ಧದಲ್ಲಿ ತೊಡಗಿದ್ದಾನೆ.

ಈ ಸಮಯವನ್ನು ಶಿವಾಜಿ ತನ್ನ ಕಾರ್ಯಸಾಧನೆಗೆ ಉಪಯೋಗಿಸಿಕೊಳ್ಳುತ್ತಿದ್ದಾನೆ. ಒಮ್ಮೆ ಆತ ಆಗಲೇ ಸೂರತ್ತನ್ನು ಕೊಳ್ಳೆಹೊಡೆದು ಇನ್ನೊಂದಕ್ಕೆ ಸಿದ್ಧನಾಗುತ್ತಿದ್ದಾನೆ. ಅವನೂ ಕಷ್ಟನಷ್ಟಗಳನ್ನು ಅನುಭವಿಸಿದ್ದಾನೆ. ಈ ವರ್ಷ ಭಾರಿ ಮಳೆ. ಎಲ್ಲವೂ ನೀರಿನಲ್ಲಿ ಮುಳುಗಿತು. ಕೇವಲ ಮರಗಳ ತುದಿ ಮಾತ್ರ ಕಾಣಿಸುತ್ತಿತ್ತು. ಮಳೆ ನಿಂತಮೇಲೆ ಔರಂಗಜೇಬನು ಪೇಗನರ ಮೇಲೆ ತನ್ನ ದಂಡಯಾತ್ರೆ ಆರಂಭಿಸಿದ. ಷಾಜಹಾನಾಬಾದ್ (ದೆಹ್ಲಿ)ಯಿಂದ ಒಂದು ಲಕ್ಷ ಸೈನ್ಯ, ಮದ್ದು ಗುಂಡು, ಆನೆ ಇತ್ಯಾದಿಗಳ ಸಮೇತ ಹೊರಟನು.[೧]

ಅತ್ತ ರಜಪೂತರ ಮೇಲೆ ಔರಂಗಜೇಬನು ಹೊರಟರೆ ಇತ್ತ ಅವನ ಹಿರಿಯಮಗ ಬುರ್ಹಾನ್‌ಪುರದ ಮೇಲೆ ಭಾರಿ ಸೈನ್ಯದೊಡನೆ ಹೊರಟಿದ್ದಾನೆ. ಶಿವಾಜಿ ತನ್ನ ಕೊಳ್ಳೆ ಲೂಟಿಗಳನ್ನು ಮುಂದುವರಿಸುತ್ತಿದ್ದಾನೆ. ತನ್ನ ತಂದೆ ಏನೇನು ನಡೆಸುತ್ತಾನೆ ಎಂದು ನೋಡಿಕೊಂಡು ಮಗ ಸುಲ್ತಾನನು ಶಿವಾಜಿಯನ್ನು ಎದುರಿಸುತ್ತಾನೆಯೇ ಹೊರತು ಸುಮ್ಮನೆ ಅವನೊಡನೆ ಯುದ್ಧಕ್ಕೆ ಹೋಗುವುದಿಲ್ಲ. ಆತನಿಗೆ ಮುಖ್ಯವಾಗಿ ಸಿಂಹಾಸನದ ಮೇಲೆ ಕಣ್ಣು. ಹೀಗಾಗಿ ರೈತರಿಗೂ ವರ್ತಕರಿಗೂ ಪೆಟ್ಟಿನ ಮೇಲೆ ಪೆಟ್ಟು. ಅವರ ದರೋಡೆ ಸುಲಿಗೆಗಳು ನಡೆದದ್ದೂ ನಡೆದದ್ದೆ. ಹೇಳುವವರಿಲ್ಲ ಕೇಳುವವರಿಲ್ಲ.

ಈ ವರ್ಷ ಎರಡು ಭಾರಿ ಅನಾಹುತಗಳಾದವು. ಒಂದು ಒಳನಾಡಿನಲ್ಲಿ. ಹನ್ನೆರಡು ಗಂಟೆಗಳ ಕಾಲ ರಕ್ತದ ಮಳೆ ಸುರಿಯಿತು. ಇನ್ನೊಂದು ಸಮುದ್ರ ತೀರದಲ್ಲಿ. ಸಮುದ್ರ ಉಕ್ಕಿದ ಕಾರಣ ಮಚ್ಛಲಿಪಟ್ಟಣದಲ್ಲಿ ೧೬,000 ಜನ ಸತ್ತುಹೋದರು.[೨]

ಸೂರತ್ | ಇತಿ

ಡಿಸೆಂಬರ್ ೩೧–೧೬೭೯ ಜಾನ್ ಫ್ರೈಯರ್

---

೧. ಈ ದಂಡಯಾತ್ರೆಯನ್ನು ಔರಂಗಜೇಬನು ೧೬೮೦ರ ಮಳೆಗಾಲ ಮುಗಿದ ಮೇಲೆ ರಜಪೂತರ ಮೇಲೆ ಆರಂಭ ಮಾಡಿದನೆಂದು ಚಾರಿತ್ರಿಕ ದಾಖಲೆಗಳಿಂದ ಗೊತ್ತಾಗುತ್ತದೆ.

೨. ಮನೂಚಿಯೂ ಸಮುದ್ರದಿಂದಾದ ಅನಾಹುತ ಹೇಳುತ್ತಾನೆ. ಅಕ್ಟೋಬರ್ ೨೩–೨೫ ಈ ಅನಾಹುತ ಆಯಿತು. ೧೮೬೪ರಲ್ಲಿ ಆದ ಅನಾಹುತ ಇನ್ನೂ ದೊಡ್ಡದು. ಆಗ ಇಡೀ ಮಚ್ಛಲಿಪಟ್ಟಣ ಹಾಳಾಯಿತು. ೩೦,೦೦೦ ಜನ ಸತ್ತರು. ಇದೇ ಬಗೆಯ ಅನಾಹುತ ಇತ್ತೀಚೆಗೆ ಎರಡು ವರ್ಷಗಳ ಹಿಂದೆ ನಮ್ಮ ಕಣ್ಣುಮುಂದೆಯೇ ನಡೆದುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

## ಏಳನೆಯ ಪತ್ರ

ತನ್ನ ಪುಂಡಾಟ ನಡೆಸುತ್ತಲೇ ಶಿವಾಜಿಯೂ ಎಲ್ಲರಂತೆ ಇಹಲೋಕ ತ್ಯಜಿಸ ಬೇಕಾಯಿತು. ಆತ ೧೬೮೦ನೆಯ ಜೂನ್ ೧ ರಂದು ಕಾಲವಾದನು. ಮಗ ಸಾಂಬಾಜಿ ಆತನ ಸ್ಥಾನ ವಹಿಸಿಕೊಂಡನು. ಇದಕ್ಕೆ ಮುನ್ನ ಮಗನು ಹಿಂದೂಗಳು ಮಾಡಬೇಕಾದ ಆ ಅನಾಗರೀಕ ಕರ್ಮಗಳನ್ನೆಲ್ಲ ಮಾಡಿದನು. ನೂರಾರು ಜನ ಶಿವಾಜಿಯ ಅನುಯಾಯಿ ಗಳು ಚಿತೆಯಲ್ಲಿ ಬಿದ್ದು ದೇಹತ್ಯಾಗ ಮಾಡಿದರು. ಅವನ ಮಡದಿಯರೂ ಚಿತೆಯನ್ನೇರಿ ದರು. ಆದರೆ ಜಯಸಿಂಹನೊಡನೆ ಚಿತೆಯನ್ನೇರಿದವರ ಸಂಖ್ಯೆ ಅಪಾರ. ಆತನ ಪತ್ನಿ ಗರ್ಭಿಣಿಯಾಗಿದ್ದುದರಿಂದ ಚಿತೆಯನ್ನೇರಲಿಲ್ಲ.

ಹೀಗೆ ಇಬ್ಬರು ರಾಜರು ಇಹಲೋಕ ತ್ಯಜಿಸಿದ್ದು ಔರಂಗಜೇಬನಿಗೆ ಅನುಕೂಲ ವಾಗಿದೆ. ಆದರೆ ಆತನ ಮಕ್ಕಳೇ ಅವನಿಗೆ ವಿರೋಧವಾಗಿದ್ದಾರೆ.

ಕೊನೆಯ ಮಗ ಸುಲ್ತಾನ್ ಅಕ್ಬರನನ್ನು ತನ್ನ ಉತ್ತರಾಧಿಕಾರಿಯಾಗಿ ಮಾಡುವ ಆಲೋಚನೆಯನ್ನು ಔರಂಗಜೇಬ ಇಟ್ಟುಕೊಂಡಿದ್ದಾನೆ.

ಔರಂಗಜೇಬನು ಹಿಂದೂಗಳನ್ನು ಮುಸಲ್ಮಾನ ಮತಕ್ಕೆ ಪರಿವರ್ತಿಸುವ ಕೆಲಸ ನಡೆಸುತ್ತಲೇ ಇದ್ದಾನೆ. ತನ್ನ ಮತದವರಲ್ಲದವರ ಮೇಲೆ ಭಾರಿ ತಲೆಗಂದಾಯ ಹೇರುತ್ತಾನೆ. ಅದನ್ನು ಕೊಡಲಾರದವರು ಮುಸಲ್ಮಾನರಾಗದೆ ಬೇರೆ ಮಾರ್ಗವೇ ಇಲ್ಲ. ಒಂದು ದಿನ ಔರಂಗಜೇಬನು ತನ್ನ ಮುಖ್ಯ ಮುನಿಷಿಗೆ ಹೇಳಿದ, 'ನೀನು ಮುಸಲ್ಮಾನನಾಗದಿದ್ದರೆ ಈ ಕೆಲಸದಲ್ಲಿ ಇರಲು ಸಾಧ್ಯವಿಲ್ಲ' ಎಂದು. ಆ ಹಿಂದೂ ಮುನಿಷಿ ತುಂಬ ಬುದ್ಧಿವಂತ. ಅವನು ಹೇಳಿದ: 'ಸಾಬ್, ದೇವರು ಮಾಡದ್ದನ್ನು ನೀವೇಕೆ ಮಾಡಲು ಹೋಗುತ್ತೀರಿ? ಒಬ್ಬರ ಮುಖದಂತೆ ಇನ್ನೊಬ್ಬರ ಮುಖ ಇಲ್ಲ. ಈ ಸೃಷ್ಟಿಯಲ್ಲಿ ಇರುವ ಅಸಂಖ್ಯಾತ ಪಶುಪಕ್ಷಿಗಳನ್ನು ನೋಡಿ. ಆನೆ, ಕುದುರೆ, ಹುಲಿ, ಒಂಟೆ, ದನ, ಕುರಿ—ಇವನ್ನೆಲ್ಲ ದೇವರು ಬಗೆಬಗೆಯ ಆಕಾರದಲ್ಲಿ ಮಾಡಿದ್ದಾನೆ. ಇದರಲ್ಲಿ ಮನುಷ್ಯನ ರೂಪು ಅತ್ಯುತ್ತಮ. ಎಲ್ಲವೂ ಒಂದೇ ಬಗೆಯಾಗಿರಬೇಕೆಂದು ದೇವರ ಇಚ್ಛೆ ಇದ್ದರೆ ಎಲ್ಲರಿಗೂ ಒಂದೇ ರೂಪು ಕೊಡುತ್ತಿದ್ದ. ದೇವರೇ ಹೀಗೆ ಮಾಡಿ ಬೇರೆ ಬೇರೆ ಮತಗಳ ಮೂಲಕ ತನ್ನನ್ನು ಪಡೆಯಬಹುದೆಂದು ಅನುಮತಿ ಕೊಟ್ಟಿದ್ದಾನೆ. ಅವನ ಅಪ್ಪಣೆಯನ್ನು ಯಾರೂ ಮೀರುವಂತಿಲ್ಲ. ಹಾಗೆ ಮೀರಿದವರು ಉಳಿಯು ವಂತೆಯೂ ಇಲ್ಲ. ಎಲ್ಲರಿಗೂ ಒಂದೇ ಬಗೆಯ ಮನಸ್ಸನ್ನೂ ದೇವರು ಕೊಟ್ಟಿಲ್ಲ. ಹೀಗಿರುವಾಗ ನೀವೇಕೆ ಹೀಗೆ ಮಾಡಿ ಹಾಗೆ ಮಾಡಿ ಎಂದು ಒತ್ತಾಯಪಡಿಸುತ್ತೀರಿ?'

ಬ್ರಾಹ್ಮಣನ ಈ ಮಾತುಗಳನ್ನು ಕೇಳಿದ ಔರಂಗಜೇಬ ಸುಮ್ಮನಾದ. ಆ ಬ್ರಾಹ್ಮಣ ತನ್ನ ಕೆಲಸ ಉಳಿಸಿಕೊಂಡ. ಆದರೆ ಹಿಂದೂಗಳ ಮೂಢನಂಬಿಕೆಗಳನ್ನು ಕಂಡರೆ ಔರಂಗಜೇಬನಿಗೆ ಆಗುವುದಿಲ್ಲ. ಎಲ್ಲಾ ದೇವಸ್ಥಾನಗಳನ್ನು ನೆಲಸಮ ಮಾಡಿಸಿದ. ಅಜ್ಮೀರದಲ್ಲಿ ತನ್ನ ಸೈನ್ಯದ ವಶವಾದ ಗುಡಿಗೋಪುರಗಳನ್ನು ವಿಕಾರಗೊಳಿಸಿದ. ರಾಜ ಜಯಸಿಂಹನ ಚಿತ್ತೂರಿನಲ್ಲಿದ್ದ ಅಮೃತಶಿಲೆಯ ಭವ್ಯಮಂದಿರಗಳನ್ನು ಹಾಳುಗೆಡವಿಸಿದ.

ಈ ರೀತಿಯಲ್ಲಿ ಔರಂಗಜೇಬನು ಜೆಂಟೂಗಳನ್ನು (ಹಿಂದೂಗಳನ್ನು) ಹಿಂಸಿಸು ತ್ತಿರುವ ಕಾರಣ ಈ ವರ್ಷ ಭಾರಿ ಕ್ಷಾಮ ಬರುವುದೆಂದು ಬ್ರಾಹ್ಮಣರು ಹೇಳಿದರು. ಇದನ್ನು ಎಲ್ಲರೂ ನಂಬಿದರೋ ಬಿಟ್ಟರೋ ನಾನು ಕಾಣೆ. ಅಂತೂ ಹಗಲೂ ರಾತ್ರಿ ಎಲ್ಲಾ ಬಗೆಯ ಜನರು ಸೇರಿ ನಗರದ ಬೀದಿಗಳಲ್ಲಿ ಬ್ರಾಹ್ಮಣರ ಹಿಂದೆ ಮೆರವಣಿಗೆ ಹೊರಟರು. ಮುಂದಿದ್ದ ಬ್ರಾಹ್ಮಣರು ತಮ್ಮ ಬರಿತಲೆಯ ಮೇಲೆ ಮಣ್ಣು ಇದ್ದ ಹಲಗೆಯನ್ನು ಹೊತ್ತುಕೊಂಡಿದ್ದರು. ಆ ಮಣ್ಣಿನಲ್ಲಿ ಬತ್ತ ಹಾಕಿ ನೀರು ಚುಮುಕಿಸುತ್ತಾ 'ಬಾವಾಜಿ, ಪಾನಿ ಬರಸ್' (ದೇವರೇ ಮಳೆ ಹುಯ್ಯಿಸು) ಎಂದು ಒಟ್ಟಿಗೆ ಹೇಳುತ್ತಿದ್ದರು.

ಇಷ್ಟು ಹೇಳಿ ಇದನ್ನೆಲ್ಲಾ ಇಲ್ಲಿಗೇ ಮುಗಿಸುತ್ತಿದ್ದೆ. ಆದರೆ ಆಕಾಶದಲ್ಲಿ ಒಂದು ಆಶ್ಚರ್ಯಕರವಾದ ವಸ್ತು ಕಾಣಿಸಿಕೊಂಡದ್ದರಿಂದ ಅದನ್ನು ಹೇಳಿ ಈ ಪತ್ರವನ್ನು ಮುಗಿಸುತ್ತೇನೆ. ನವೆಂಬರ್ ತಿಂಗಳ ೨೦ನೆಯ ತಾರೀಖಿನ ದಿನ ಕಾಣಿಸಿಕೊಂಡ ಅದು ಮಾರನೆಯ ವರ್ಷ ಜನವರಿ ಕೊನೆಯವರೆಗೆ ಇತ್ತು. ಇಂತಹ ಅದ್ಭುತವಾದ ಧೂಮ ಕೇತುವನ್ನು ನಾನು ನೋಡಿಯೇ ಇರಲಿಲ್ಲ. ತುಂಬಾ ವಯಸ್ಸಾದ ಮುದುಕರೂ ಕಂಡಿಲ್ಲವೆಂದು ಹೇಳುತ್ತಾರೆ. ಈ ಧೂಮಕೇತು ಇಂಗ್ಲೆಂಡಿನಲ್ಲಿಯೂ ಕಾಣಿಸಿಕೊಂಡಿತೆ ಹೇಗೆ ಎಂದು ತಾವು ತಿಳಿಸಬೇಕಾಗಿ ಕೋರಿಕೆ.

ಈ ಧೂಮಕೇತು ಆಗ್ನೇಯ ದಿಕ್ಕಿನಲ್ಲಿ ಧನುರ್ರಾಶಿಯ ತಲೆಯ ಬಳಿ ಮಕರದಲ್ಲಿ ಕಾಣಿಸಿಕೊಂಡಿತು (Eleven degrees from the Earth South East, a terrible flaming torch was seen in the skies in Capricorn near the head of Sagittarius). ಅದರ ಉರಿಯುವ ಜ್ವಾಲೆ ನಕ್ಷತ್ರ ಗಳತ್ತ(ಗಗನದತ್ತ) ಧಾವಿಸುತ್ತಿತ್ತು. ಮೊದಮೊದಲು ಚಿಕ್ಕದಾಗಿದ್ದ ಆ ಜ್ವಾಲೆ ದೊಡ್ಡದಾಗುತ್ತಾ ಬಂದಿತು. ಮೊದಲು ಬೆಳಗಿನ ಜಾವ ಮೂರು ಗಂಟೆಗೆ ಕಾಣಿಸಿಕೊಂಡು ಸೂರ್ಯ ಹುಟ್ಟಿದಾಗ ಅದರ ಬೆಳಕಿನಲ್ಲಿ ಐಕ್ಯವಾಗುತ್ತಾ ಬಂದಿತು. ಅದು ಹೀಗೆ ಬೆಳೆಯುತ್ತಾ ಬೆಳೆಯುತ್ತಾ ಕಣ್ಣು ಕೋರೈಸುವ ಬೆಳಕು ಬೀರುತ್ತಾ ಜನವರಿ ೧೬ರ ಮಧ್ಯರಾತ್ರಿ ಕಣ್ಣಿನಿಂದ ಮರೆಯಾಯಿತು.

ಇದು ಕಾಣಿಸಿಕೊಂಡಾಗ ಸ್ವಾಲಿ ಹೊಳೆ ಮತ್ತು ಬಜಾರಿನಲ್ಲಿ ಜನರು ತಾವು ಎರಡು ಚಂದ್ರಗಳನ್ನು ಕಂಡೆವೆಂದು ಹೇಳುತ್ತಿದ್ದರು. ರಾತ್ರಿ ಬೇಟೆಗೆ ಹೋಗಿದ್ದ ನಮ್ಮ ಇಂಗ್ಲಿಷರು ತಾವು ಸೂರ್ಯನಷ್ಟೇ ದೊಡ್ಡದಾದ ನಕ್ಷತ್ರವನ್ನು ಕಂಡೆವೆಂದು ಹೇಳಿದರು. ಇದು ಧೂಮಕೇತುವಾಗಿರಲಿ ಅಥವಾ ಉಲ್ಕವಾಗಿರಲಿ ಏನೋ ಒಂದು ದುಶ್ಶಕುನದ ಸೂಚನೆ. ಇದರಿಂದ ಈ ದೇಶಕ್ಕೇನೂ ಅಪಾಯವಿಲ್ಲ ಎಂದು ಇಲ್ಲಿಯ ಜನ ಹೇಳುತ್ತಾರೆ. ನಮ್ಮ ಯೂರೋಪಿಗೂ ಯಾವ ಅಪಾಯವಾಗದಿರಲಿ ಎಂದು ನನ್ನ ಹಾರೈಕೆ. ಕ್ಲಾಡಿಯನ್ ಹೇಳಿದ್ದಾನೆ:

In Heaven no comet ever shined,
which was not greevous to mankind.

(ಮಾನವನಿಗೆ ಗಂಡಾಂತರವಿಲ್ಲದ ಧೂಮಕೇತು ಎಂದೂ ಆಕಾಶದಲ್ಲಿ ಕಾಣಿಸಿಕೊಂಡಿಲ್ಲ)

ಜನವರಿ ೨೫–೧೬೮೦ ಇತಿ ತಮ್ಮವ.
(ನಮ್ಮ ಹಡಗುಗಳು ಸ್ವಾಲಿ ಹೊಳೆಯಿಂದ ಹೊರಟ ದಿನ) ಜೆ. ಎಫ್.

## ಎಂಟನೆಯ ಪತ್ರ

### ಇಂಗ್ಲೆಂಡಿಗೆ ವಾಪಸು

ಸ್ವಾಮಿ,

ಇಂಡಿಯಾ ಬಗ್ಗೆ ಇಷ್ಟು ಹೇಳಿ ಈಗ ನನ್ನ ಮಾತೃಭೂಮಿಗೆ ಹಿಂದಿರುಗುವ ಯೋಚನೆ ಮಾಡುತ್ತೇನೆ. ಹಡಗು ಕೂಡ ಹೊರಡಲು ಸಿದ್ಧವಾಗಿದೆ. ಇಗೋ ನಾನು ಒಂದು ಹಡಗಿನಲ್ಲಿ ಹೊರಟಿದ್ದೇನೆ.

ಫೆಬ್ರುವರಿ ೧೨ನೆಯ ತಾರೀಖು ಬೆಳಗಿನ ಜಾವ ಎರಡು ಗಂಟೆಯಲ್ಲಿ ಚಂದ್ರ ಗ್ರಹಣ. ಅರ್ಧಗಂಟೆಯಲ್ಲಿ ಚಂದ್ರ ಸಂಪೂರ್ಣವಾಗಿ ಮುಚ್ಚಲ್ಪಟ್ಟು ನಾಲ್ಕು ಗಂಟೆಗೆ ಬಿಡುಗಡೆಯಾಯಿತು.

ಸಮುದ್ರವನ್ನೇ ನಡುಗಿಸಿದ ಗುಡುಗು! ಆಕಾಶವನ್ನೇ ಸೀಳಿದ ಸಿಡಿಲುಗಳು! ಈ ಕಾರಣ ನಮ್ಮ ಯಾನ ನಿಧಾನವಾಗಿ ಸಾಗಿತು. ಒಂದು ವ್ಯಸನಕರವಾದ ಸಂಗತಿ ನಡೆಯಿತು. ಮಾರ್ಚಿ ಒಂದನೆಯ ತಾರೀಖು ಹವೆ ಸುಗಮವಾಗಿತ್ತು. ನಾವು ಖುಷಿಯಾಗಿ ನಮ್ಮ ಯಾನವನ್ನು ಮುಂದುವರಿಸುತ್ತಿರುವಾಗ ಒಂದು ಅಚಾತುರ್ಯ ನಡೆಯಿತು. ನಮ್ಮ ಯುವಕರಲ್ಲಿ ಒಬ್ಬನು ಮೇಲಕ್ಕೆ ಹತ್ತಿ ಪಟದ ಹಗ್ಗ ಬಿಚ್ಚುತ್ತಿರುವಾಗ ಆಕಸ್ಮಾತ್ ಸಮುದ್ರದೊಳಕ್ಕೆ ಬಿದ್ದುಬಿಟ್ಟ. ನಾವು ಹಲಗೆ ಮತ್ತು ಪೀಪಾಯಿಗಳನ್ನು ನೀರಿಗೆ ಎಸೆದೆವು. ಆದರೆ ಅವನ್ನು ಆತ ಗಮನಿಸಲೇ ಇಲ್ಲ. ಬಹುಶಃ ಬೀಳುವಾಗಲೆ ಹಡಗಿನ ಪಕ್ಕೆಗೆ ತಗುಲಿ ಸತ್ತುಹೋಗಿರಬೇಕು. ಬಹು ವ್ಯಸನದಿಂದ ನಮ್ಮ ಯಾನ ಮುಂದುವರಿಸಿದೆವು.

ದೀರ್ಘ ಪ್ರಯಾಣ ಮಾಡಿ ಆಗಸ್ಟ್ ೧೪ರಂದು ನಮ್ಮ ಇಂಗ್ಲಿಷ್ ಕಡಲ್ಗಾಲುವೆ ಪ್ರವೇಶಿಸಿದೆವು. ಎಲ್ಲರಿಗೂ ಆತುರ, ಎಷ್ಟು ಹೊತ್ತಿಗೆ ಭೂಮಿಯ ಮೇಲೆ ಕಾಲಿಟ್ಟೇವೊ ಎಂದು. ತಮಗೆ ಎಲ್ಲೆಲ್ಲಿ ಅನುಕೂಲವೊ ಅಲ್ಲಲ್ಲಿ ಜನರು ಇಳಿದರು. ನಾನು ೧೬೮೦ನೆಯ ಆಗಸ್ಟ್ ೧೦ ರಂದು ಡೋವರ್‌ಗೆ ಐದುಮೈಲಿ ದೂರದಲ್ಲಿ ಕೆಂಟ್‌ನ ಫೋರ್ತಸ್ಟೋನ್ ಎಂಬಲ್ಲಿ ಇಳಿದೆ.

ಅಲ್ಲಿಂದ ತಮಗೆ ಈ ಪತ್ರ ಕಳುಹಿಸುತ್ತಿದ್ದೇನೆ. ನಿಧಾನವಾಗಿ ಲಂಡನ್‌ಗೆ ಬಂದು ತಮ್ಮನ್ನು ಕಾಣುತ್ತೇನೆ. ಈ ನನ್ನ ದೀರ್ಘ ಗೈರುಹಾಜರಿಯಿಂದ ನನ್ನ ತಾಯ್ನಾಡಿನ ನೆಲಕ್ಕೆ ಹೇಗೆ ಹೊಂದಿಕೊಳ್ಳಬಲ್ಲೆ ಎಂದು ನೋಡುತ್ತೇನೆ. ನಮ್ಮ ಸಮುದ್ರಯಾನಕ್ಕೆ ಏಳು ತಿಂಗಳ ದೀರ್ಘ ಕಾಲ ಹಿಡಿದರೂ ನಾವು ಕಾಲವನ್ನು ಖುಷಿಯಾಗಿ ಕಳೆದೆವು. ಕುಡಿಯಲು ಒಳ್ಳೆಯ ಮದ್ಯ, ಕೇಳಲು ಇಂಪಾದ ಸಂಗೀತ, ಜೊತೆಗೆ ಒಳ್ಳೆಯ ಸಹವಾಸ. ಯೋಗ್ಯರಾದ ಕಮಾಂಡರ್ ಅವರು ನಮಗೆ ಆಗಾಗ್ಗೆ ಹೊಸ ಹೊಸ ಟರ್ಕಿಕೋಳಿ, ಬಾತುಕೋಳಿ, ನೀರುಬಾತುಕೋಳಿ, ಹಾಲ್ಕುಡಿವ ಹಂದಿಮರಿಗಳು, ಕುರಿ, ಮೇಕೆ ಇತ್ಯಾದಿಗಳನ್ನು ತರಿಸಿ ರುಚಿಯಾಗಿ ಅಡಿಗೆ ಮಾಡಿಸಿ ಹಾಕಿಸಿದರು. ಇದರ ಮೇಲೆ ಇಂಗ್ಲೆಂಡ್ ಕಂಡ ದಿವಸ ಕೊಬ್ಬಿದ ಕರು ಕೊಯ್ಯಿಸಿದರು—ನೀವು ನನ್ನನ್ನು ಕಂಡಾಗ ಆ ಸ್ವಾಗತ ನೀಡುವ ತೊಂದರೆ ಬೇಡ ಎಂದು.

ಇತಿ ನಿಮ್ಮ

**ಜಾನ್ ಫ್ರೈಯರ್**

# ಜಾನ್ ಓವಿಂಗ್‌ಟನ್

ಜಾನ್ ಓವಿಂಗ್‌ಟನ್ (John Ovington)–ಈತನ ಬಾಳಿನ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಹೀಗಾಗಿ ಆತ ಯಾವಾವ ಪುಸ್ತಕಗಳನ್ನು ಬರೆದನೆಂಬುದೇ ತಿಳಿಯುವುದಿಲ್ಲ. ‘A Voyage to Suratt in the year ೧೬೮೯’ ಎಂಬುದೊಂದೇ ಈಗ ಇರುವ ಆತ ಬರೆದ ಪುಸ್ತಕ. ಇದ್ದುದರಲ್ಲಿ ರಾವಿಲ್‌ಸ್ಸನ್ (Rawilson) ಅವರು ಸಂಪಾದಿಸಿರುವ ಗ್ರಂಥದಿಂದ ಜಾನ್‌ನ ಬಾಳಿನ ಬಗ್ಗೆ ಅಷ್ಟು ಇಷ್ಟು ವಿವರಗಳು ತಿಳಿಯುತ್ತವೆ.

ಜಾನ್ ಓವಿಂಗ್‌ಟನ್ ಯಾರ್ಕ್‌ಷೈರಿನ ಮೆಲ್ಸೊನ್ಬಿ (Melsonby) ಎಂಬ ಊರಿನಲ್ಲಿ ೧೬೫೩ರಲ್ಲಿ ಹುಟ್ಟಿದ. ಗ್ರಾಮರ್ ಸ್ಕೂಲ್ (Grammar School)ನಲ್ಲಿ ವಿದ್ಯಾಭ್ಯಾಸ ಮಾಡಿ ಹದಿನೈದನೆಯ ವಯಸ್ಸಿನಲ್ಲಿ ಡಬ್ಲಿನ್ ಟ್ರಿನಿಟಿ ಕಾಲೇಜ್‌ನಿಂದ ಬಿ.ಎ. ಪದವಿ ಪಡೆದ. ಆಮೇಲೆ ಮೂರು ವರ್ಷಗಳ ನಂತರ ಎಂ.ಎ. ಪದವಿ ಪಡೆದ. ಇದಾದನಂತರ ಆತ ಕೇಂಬ್ರಿಡ್ಜ್ ಸೆಂಟ್‌ಜಾನ್ಸ್ ಕಾಲೇಜು ಸೇರಿ ೧೬೮೦ರಲ್ಲಿ ಮೆಟ್ರಿಕ್ಯುಲೇಷನ್ ಮಾಡಿದ. ಇದರ ಉದ್ದೇಶ ಆರಂಭದಿಂದಲೂ ಹಂತ ಹಂತವಾಗಿ ಓದಿ ಡಿಗ್ರಿ ಪಡೆಯುವುದಾಗಿತ್ತು. ಆದರೆ ಆ ಪದವಿ ಪಡೆದನೋ ಇಲ್ಲವೋ ಗೊತ್ತಿಲ್ಲ. ಯೂನಿವರ್ಸಿಟಿ ದಾಖಲೆಗಳಲ್ಲಿ ಈ ಬಗ್ಗೆ ಏನೂ ಇಲ್ಲ. ಈತನಿಗೆ ಮತಬೋಧನೆ ಮಾಡಲು ಯಾವಾಗ ದೀಕ್ಷೆ ಕೊಡಲಾಯಿತೆಂಬುದೂ ತಿಳಿಯದು.

ಈತನನ್ನು ೧೬೮೯ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಬೆಂಜಮಿನ್ ಎಂಬ ಹಡಗಿನಲ್ಲಿ ಹಂಗಾಮಿ ಮತಬೋಧಕನಾಗಿ ನೇಮಿಸಿಕೊಂಡಿತು. ಅದೇ ವರ್ಷದ ಏಪ್ರಿಲ್ ೧೧ನೆಯ ತಾರೀಖು (ಮೂರನೆಯ ವಿಲಿಯಂನ ಕಿರೀಟಧಾರಣಾ ಮಹೋತ್ಸವ ದಿನ) ಓವಿಂಗ್‌ಟನ್ ಗ್ರೇವೆಸೆಂಡ್ ಎಂಬಲ್ಲಿಂದ ಹಡಗಿನಲ್ಲಿ ಪ್ರಯಾಣ ಹೊರಟ. ಮೇ ೨೯ ಹಡಗು ಬೊಂಬಾಯಿ ತಲುಪಿತು.

ಓವಿಂಗ್‌ಟನ್ ಬಂದ ಹಡಗು ಮಳೆಗಾಲ ಮುಗಿದ ಮೇಲೆ ಆಸೀನ ಮತ್ತು ಮಲಕ್ಕಾ ಕಡೆ ಹೊರಟಿತು. ಓವಿಂಗ್‌ಟನ್ ಸೂರತ್ತಿನಲ್ಲಿಯೇ ಇದ್ದ ಇಂಗ್ಲಿಷ್ ಫ್ಯಾಕ್ಟೊರಿಯ ಪಾದ್ರಿಯಾಗಿ ಉಳಿದ.

ಇದ್ದ ಅಲ್ಪಕಾಲದಲ್ಲಿ ಓವಿಂಗ್‌ಟನ್ ಅನೇಕ ಸಣ್ಣ ಪುಟ್ಟ ವಿಷಯಗಳನ್ನೂ ವಿವರವಾಗಿ ನೋಡಿ ಹೇಳಿರುವುದು ಒಂದು ವಿಶೇಷ. ಬೇರೆಲ್ಲಿಯೂ ಹೋಗದೆ ಕೇವಲ ಬೊಂಬಾಯಿ ಸೂರತ್‌ಗಳನ್ನಷ್ಟೇ ನೋಡಿಕೊಂಡು ಆತ ೧೬೯೩ನೆಯ ಫೆಬ್ರುವರಿಯಲ್ಲಿ ತನ್ನ ಸ್ವದೇಶಕ್ಕೆ ಹಿಂದಿರುಗಿದ.

ಇಂಗ್ಲೆಂಡಿಗೆ ಹಿಂದಿರುಗಿದ ಓವಿಂಗ್‌ಟನ್‌ನನ್ನು ಈಸ್ಟ್ ಇಂಡಿಯಾ ಕಂಪನಿಯು ಖಾಯಂ ಪಾದ್ರಿಯಾಗಿ ನೇಮಿಸಿಕೊಳ್ಳುವುದಾಗಿ ಹೇಳಿತು. ಆದರೆ ಆತ ಒಪ್ಪಲಿಲ್ಲ. ತನ್ನ ಕಾಲವನ್ನು ಈ ಪ್ರವಾಸ ಕಥನ ಬರೆಯಲು. ಉಪಯೋಗಿಸಿಕೊಂಡು ಇದನ್ನು ೧೬೯೬ರಲ್ಲಿ ಬರೆದು ಮುಗಿಸಿದ. ಈ ಪುಸ್ತಕ ಇಂಗ್ಲಿಷ್ ಓದುಗರ ಮೇಲೂ ಕಂಪನಿಯ ಅಧಿಕಾರಿಗಳ ಮೇಲೂ ಒಳ್ಳೆಯ ಪರಿಣಾಮ ಉಂಟು ಮಾಡಿದಂತೆ ಕಾಣುತ್ತದೆ. ಏಕೆಂದರೆ ೧೬೯೮ನೆಯ ಏಪ್ರಿಲ್ ೧೬ರಂದು ಕಂಪನಿಯ ‘ಕೋರ್ಟ್ ಆಫ್ ಮಿನಿಟ್ಸ್’ ನಲ್ಲಿ ಹೀಗೆ ಬರೆಯಲಾಗಿದೆ: ‘ಜಾನ್ ಓವಿಂಗ್‌ಟನ್ ಸೂರತ್ತಿನ ಪ್ರೆಸಿಡೆಂಟರ ಅಪೇಕ್ಷೆ ಮೇರೆಗೆ ಐರ್‌ಲ್ಯಾಂಡ್‌ನಿಂದ ಸೂರತ್ತಿಗೆ ಕಳುಹಿಸಿಕೊಟ್ಟ ಎರಡು ತೋಳ ನಾಯಿ (Wolf-dogs) ಗಳಿಗೂ ಮತ್ತು ಅವರು ಬರೆದು ನಮ್ಮ ಕಂಪನಿಗೆ ವಹಿಸಿರುವ ‘Voyage to Surat’ ಎಂಬ ಪುಸ್ತಕಕ್ಕೂ ೨೫ ಪೌಂಡುಗಳನ್ನು ಕೊಡಬೇಕೆಂದು ಈ ಮೂಲಕ ತೀರ್ಮಾನಿಸಿದೆ’.

೧೬೯೯ರಲ್ಲಿ ಓವಿಂಗ್‌ಟನ್ ಟೀ ಬಗ್ಗೆ ಒಂದು ಕೈಪಿಡಿ ತಯಾರಿಸಿ ಪ್ರಕಟಿಸಿದ. ಆತ ಸೂರತ್‌ನಲ್ಲಿ ಟೀ ಕುಡಿಯುವ ಅಭ್ಯಾಸ ಮಾಡಿಕೊಂಡಿದ್ದ. ಅದನ್ನು ಇಂಗ್ಲೆಂಡ್‌ನಲ್ಲಿಯೂ ಪ್ರಚಾರ ಮಾಡಬೇಕೆಂದು ಅದನ್ನು ಬರೆದ. ಆದರೆ ಆ ಕೈಪಿಡಿಯನ್ನು ಕುರಿತು ಜಾನ್ ವಾಲ್ಡ್ರನ್ ಎಂಬುವನು ಬಹು ಕಟುವಾಗಿ ಟೀಕಿಸಿದ. ‘ವಿದೇಶೀ ಟೀ ಬಗ್ಗೆ ಓವಿಂಗ್‌ಟನ್ ಮೋಹ ಸಲ್ಲದು’ ಎಂದು ಆತ ಹೇಳಿದ.

ಇದನ್ನು ಬರೆದಾಗ ಓವಿಂಗ್‌ಟನ್ ಇಂಗ್ಲೆಂಡ್ ರಾಜನ ಪಾದ್ರಿಯಾಗಿದ್ದ. ೧೭೦೧ರಲ್ಲಿ ಡಬ್ಲಿನ್ ವಿಶ್ವವಿದ್ಯಾನಿಲಯವು ಆತನಿಗೆ ಡಾಕ್ಟರ್ ಆಫ್ ಡಿವಿನಿಟಿ ಎಂಬ ಪ್ರಶಸ್ತಿ ಕೊಟ್ಟು ಗೌರವಿಸಿತು. ಡಾ॥ ಓವಿಂಗ್‌ಟನ್ ಕೆಂಟ್‌ನ ಲೀ ಎಂಬಲ್ಲಿ ಸೆಂಟ್ ಮಾರ್ಗರೇಟ್ ಧರ್ಮಸಂಸ್ಥೆಯ ಅಧ್ಯಕ್ಷನಾದ. ೧೭೩೧ರಲ್ಲಿ ಕಾಲವಾಗುವವರೆಗೆ ಅಲ್ಲಿಯೇ ಇದ್ದ.

೧೬೮೯ನೆಯ ಏಪ್ರಿಲ್ ೧೧ ನೆನಪಿನಲ್ಲಿಡಬೇಕಾದ ದಿನ. ಆ ದಿನ ದೊರೆ ವಿಲಿಯಂ ಮತ್ತು ರಾಣಿ ಮೇರಿ ಇವರ ಕಿರೀಟಧಾರಣ ಮಹೋತ್ಸವ. ಇಲ್ಲಿಯವರೆಗೆ ಜನರು ಅನುಭವಿಸಿದ ಕಷ್ಟಕಾರ್ಪಣ್ಯಗಳು ಆ ದಿನ ತೊಲಗಿದ ಕಾರಣ ಜನರೆಲ್ಲ ಬಹು ಸಡಗರ ಸಂತೋಷಗಳಲ್ಲಿ ತೊಡಗಿದ್ದರು. ಆ ಸಂತೋಷದಲ್ಲಿಯೇ ನಮ್ಮ ಬೆಂಜಮಿನ್ ಹಡಗು ಗ್ರೇವೆಸೆಂಡ್ ಎಂಬಲ್ಲಿಂದ ಸೂರತ್ತಿಗೆ ಹೊರಟಿತು. ನಮ್ಮ ಯಾನ ಸಾಗಿತು. ದಾರಿಯಲ್ಲಿ ಪೋರ್ಚುಗಲ್ ರಾಜನಿಗೆ ಸೇರಿದ ಮದೀರಾ ಎಂಬ ದ್ವೀಪ, ಸೆಂಟ್ ಜಾಗೋ ಎಂಬ ದ್ವೀಪ, ಅನ್ನೊಬನ್ ದ್ವೀಪ, ಆಫ್ರಿಕಾ ಸಮುದ್ರತೀರ, ಮಲೆಂಬಾ, ಸೆಂಟ್ ಹೆಲೆನಾ ದ್ವೀಪ, ಜೋಹಾನ್ನಾ ದ್ವೀಪ—ಇವುಗಳನ್ನು ಹಾದು ದೇವರ ದಯದಿಂದ ಸುಖವಾಗಿ ಸಮುದ್ರಯಾನ ಮಾಡಿ ೧೬೯೦ನೆಯ ಮೇ ೨೫ರಂದು ಬೊಂಬಾಯಿ ದ್ವೀಪ ತಲುಪಿದೆವು. ಬೊಂಬಾಯಿ ದ್ವೀಪ ಇಂಡೀಸ್‌ನಲ್ಲೇ ಬಹು ಅನುಕೂಲವಾದ ಬಂದರು.

ಬೊಂಬಾಯಿ ಎಂಬ ಊರಿಗೆ ಹೆಸರು 'ಬೊಂಬಾಯಿ' ಎಂಬ ಬಂದರಿನಿಂದ ಬಂದಿದೆ. ಮೊದಲಿಗೆ ಇದಕ್ಕೆ 'ಬೂನ್ ಬೇ' (Boon Bay) ಎಂದು ಹೆಸರಿತ್ತು. ಹಾಗೆಂದರೆ ಪೋರ್ಚುಗೀಸ್ ಭಾಷೆಯಲ್ಲಿ ಒಳ್ಳೆಯ ಬಂದರು ಎಂದು ಅರ್ಥ. ಟಾಲಮಿ ಇದನ್ನು 'ಮಿಲಿಜಿಗೆರಿಸ್' (milizigeris) ಎಂದು ಕರೆದಿದ್ದಾನೆ. ಇದು ಮೊದಲಿಗೆ ಪೋರ್ಚುಗೀಸರಿಗೆ ಸೇರಿತ್ತು. ಪೋರ್ಚುಗಲ್‌ನ ಇನ್‌ಫಾಂತಾ ಎಂಬ ರಾಜಕುಮಾರಿಯನ್ನು ಇಂಗ್ಲೆಂಡಿನ ರಾಜಕುಮಾರ ಎರಡನೆಯ ಚಾರಲ್ಸ್ ರಾಜಕುಮಾರನಿಗೆ ಕೊಟ್ಟು ೧೬೬೨ರಲ್ಲಿ ಮದುವೆಯಾದಾಗ ಇದನ್ನು ಇಂಗ್ಲೆಂಡಿನ ಚಕ್ರವರ್ತಿಗೆ ವರ್ಗಾಯಿಸಲಾಯಿತು. ಈಗ ಈಸ್ಟ್ ಇಂಡಿಯಾ ಕಂಪನಿಯ ವಶದಲ್ಲಿದೆ.

ನಾವು ಇಂಡಿಯಾದ ಭೂಮಿಯನ್ನು ಕಾಣುವುದಕ್ಕಿಂತ ಮೊದಲೇ ಅದು ಹತ್ತಿರವಾಗುತ್ತಿದೆ ಎಂಬ ಸೂಚನೆ ನಮಗೆ ಎರಡು ವಿಧಗಳಲ್ಲಿ ತಿಳಿಯಿತು. ಒಂದು, ಸಮುದ್ರದಲ್ಲಿ ನಮ್ಮ ಹಡಗಿನ ಸುತ್ತ ಬಗೆಬಗೆಯ ಹಾವುಗಳು ಸುತ್ತಾಡಿದ್ದು. ತೀರದಿಂದ ಬಹು ದೂರ ಇದ್ದಾಗ ಈ ಹಾವುಗಳು ಕಾಣಿಸಿಕೊಳ್ಳುವುದಿಲ್ಲ. ಎರಡು, ಮಿಡತೆಗಳು ತಂಡೋಪತಂಡವಾಗಿ ಬಂದು ನಮ್ಮ ಹಡಗಿನ ಪಟಸ್ತಂಭದ ಮೇಲೆ ಕುಳಿತುಕೊಂಡುದು. ಆಗ ತೀರವು ೩೦ ಹರಿದಾರಿ (league) ಇತ್ತು. ಮಿಡತೆಗಳು ಒಂದೊಂದು ಎರಡು ಅಂಗುಲ ಉದ್ದವಾಗಿದ್ದುವು. ಅಷ್ಟು ದೂರ ಅವು ಹಾರಬೇಕಾದರೆ ಅವುಗಳ ರೆಕ್ಕೆಗಳು ತುಂಬಾ ಬಲವಾಗಿರಬೇಕು. ಸ್ವಲ್ಪ ಹೊತ್ತು ಕುಳಿತಿದ್ದ ಆ ಹಿಂಡು ಎದ್ದು ಮೇಲಕ್ಕೆ ಹಾರಿಹೋಯಿತು. ನಾನು ಸೂರತ್ತಿನಲ್ಲಿದ್ದಾಗ ಇಂಥದೇ ಮಿಡತೆಗಳ ತಂಡಗಳನ್ನು

ಕಂಡೆ. ಹಲವಾರು ರಾತ್ರಿ ಅವು ಕಾಣಿಸಿಕೊಂಡು ಹುಣ್ಣಿಮೆಯ ಚಂದ್ರನನ್ನು ಕತ್ತಲು ಮಾಡಿದವು. ಊರ ಹೊರಗಡೆ ಬೆಳೆದ ಬೆಳೆಯ ಮೇಲೆ ಕುಳಿತು ಒಂದು ರಾತ್ರಿಯಲ್ಲಿ ಇದ್ದುದನ್ನೆಲ್ಲಾ ತಿಂದು ಮುಗಿಸಿದುವು. ರೈತರು ಹೋಗಿ ಊರ ಗೌರ್‍ನರನನ್ನು ಕಂಡು ತಮಗಾದ ಅನಾಹುತ ಹೇಳಿಕೊಂಡರು. ಅವರೇ ಖುದ್ದು ಬಂದು ನೋಡಿ ಆದ ನಷ್ಟಕ್ಕೆ ಪರಿಹಾರ ಒದಗಿಸಬೇಕೆಂದು ಕೇಳಿಕೊಂಡರು.

ಮಾನ್‌ಸೂನ್ (ಮುಂಗಾರು ಮಳೆ) ಆರಂಭವಾಗುವುದರೊಳಗೆ ನಾವು ಬೊಂಬಾಯಿ ತಲುಪಿದ್ದು ಒಳ್ಳೆಯದೇ ಆಯಿತು. ಇಲ್ಲದಿದ್ದರೆ ಆ ಗಾಳಿ ಮಳೆ ಗುಡುಗು ಮಿಂಚುಗಳಿಗೆ ಸಿಕ್ಕಿ ನಮ್ಮ ಹಡಗುಗಳು ನಾಶವಾಗುತ್ತಿದ್ದುವರಲ್ಲಿ ಸಂದೇಹವಿಲ್ಲ.

ಯುರೋಪಿನಲ್ಲಿ ಬೇಸಗೆಯ ಬಿಸಿಲು ಆನಂದದಾಯಕ. ಆದರೆ ಇಲ್ಲಿ ತ್ರಾಸ ದಾಯಕ. ಮೇ ತಿಂಗಳಿನಲ್ಲಿ ಮಳೆಗಾಳಿ ಪ್ರಾರಂಭವಾಗುವುದಕ್ಕೆ ಮುನ್ನ ಆ ಸೆಖೆಯನ್ನು ಸಹಿಸುವುದಕ್ಕಾಗುವುದಿಲ್ಲ. ನಮ್ಮ ಕೋಣೆಗಳ ನೆಲಕ್ಕೆ ನೀರು ಚುಮುಕಿಸಿ ತಣ್ಣಗೆ ಮಾಡಿಕೊಂಡೆವು. ನವಿಲುಗರಿಗಳಿಂದ ಮಾಡಿದ ನಾಲ್ಕೈದು ಅಡಿ ಉದ್ದದ ಮುರ್‍ಚಾಲ್ (murchal = ಬೀಸಣಿಗೆ) ಹಿಡಿದ ಆಳುಗಳಿಂದ ಸೆಖೆ ಬೀಸಿಸಿಕೊಂಡೆವು.

ಮಳೆಗಾಲ ಕಳೆದ ಮೇಲೆ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳು ಇನ್ನೂ ತ್ರಾಸದಾಯಕ. ಮಳೆಯಿಂದ ನೆನೆದ ಭೂಮಿಯಿಂದ ಧಗೆ ಉಕ್ಕಿಬರುತ್ತದೆ. ಉಸಿರುಕಟ್ಟಿದಂತಾಗುತ್ತದೆ; ಜ್ವರ ಭೇದಿ ಶುರುವಾಗುತ್ತವೆ. ಜೊತೆಗೆ ಆಹಾರದ ಅಭಾವ ಬೇರೆ. ಬೊಂಬಾಯಿಯಲ್ಲಿ ತೆಂಗಿನಕಾಯಿ ಮಾತ್ರ ಬೆಳೆಯುವುದು. ದವಸ ಧಾನ್ಯಗಳೂ ದನಕರುಗಳೂ ಒಳನಾಡಿನಿಂದ ಬರಬೇಕು. ಬೆಲೆ ದುಬಾರಿ. ಕುಡಿಯುವ ನೀರೂ ಚೆನ್ನಾಗಿಲ್ಲ. ಈ ಎಲ್ಲ ಕಾರಣಗಳಿಂದ ಹೊಟ್ಟೆಪಾಡಿಗಾಗಿ ಹಡಗಿನಲ್ಲಿ ಬಂದ ಬಡನಾವಿಕರೂ ಸಿಪಾಯಿಗಳೂ ಇಲ್ಲಿಗೆ ಬಂದು ಸತ್ತುಹೋಗುತ್ತಾರೆ. ನಮ್ಮ ಹಡಗಿನಲ್ಲಿ ಬಂದವರಲ್ಲಿ ೨೪ ಜನ ಹೀಗೆ ಸತ್ತುಹೋದರು. ಇನ್ನೊಂದು ತಿಂಗಳು ಇಲ್ಲಿದ್ದರೆ ಎಲ್ಲರೂ ಸಾಯುತ್ತೇವೆಂದು ಹೆದರಿ ನಾವು ಸೂರತ್ತಿಗೆ ಹೋದೆವು. ಈ ಸಾವುಗಳಿಗೆ ನಮ್ಮು ವರ ನಡತೆಯೂ ಕಾರಣ. ಸಿಕ್ಕಾಬಟ್ಟೆ ತಿನ್ನುವುದು, ಕುಡಿಯುವುದು, ಮಾನಗೆಟ್ಟು ನಡೆಯುವುದು, ಸೂಳೆಯರ ಸಹವಾಸ ಮಾಡುವುದು—ಇವೆಲ್ಲ ಸಾವಿಗೆ ಕಾರಣಗಳು.

ಮಳೆಗಾಲದಲ್ಲಿ ಉತ್ಪತ್ತಿಯಾಗುವ ಹುಳಹುಪ್ಪಟೆಗಳಿಗಂತೂ ಲೆಕ್ಕವಿಲ್ಲ. ಜೇಡರ ಹುಳುಗಳು ಬೆಳೆದು ಒಂದು ಹೆಬ್ಬೆರಳ ಗಾತ್ರಕ್ಕಾಗುತ್ತವೆ. ನೆಲಗಪ್ಪೆಗಳು ಬಾತುಗಳಷ್ಟು ದಪ್ಪವಾಗುತ್ತವೆ. ಇವೆಲ್ಲಾ ಮನುಷ್ಯನ ಆರೋಗ್ಯಕ್ಕೆ ಹಾನಿಯುಂಟು ಮಾಡುತ್ತವೆ. ಮಳೆಗಾಲದಲ್ಲಿ ಮೇಘದಿಂದ ಕಪ್ಪೆಗಳು ಸುರಿಯುತ್ತವೆ ಎಂದು ನಮ್ಮವನೇ ಒಬ್ಬನು ಹೇಳಿದನು. ಆತ ಮನೆಯಿಂದ ಹೊರಗೆ ದೂರ ಮಳೆಯಲ್ಲಿ ಹೋಗುವಾಗ ಅವನ ಟೋಪಿಯ ಮೇಲೆ ಬೆರಳಿನ ಗಾತ್ರದ ಕಪ್ಪೆಗಳು ಬಿದ್ದುವಂತೆ!

ಈ ಕೆಟ್ಟ ಹವೆಯ ಕಾರಣ ಗಾಯಗಳೂ ಹುಣ್ಣುಗಳೂ ಕೂಡಲೇ ಮಾಯುವು ದಿಲ್ಲ. ಮಕ್ಕಳಂತೂ ಈ ಹವೆ ಸಹಿಸುವುದಕ್ಕಾಗದೆ ಸತ್ತೇಹೋಗುತ್ತವೆ. ಹುಟ್ಟಿದ

೨೦ ಮಕ್ಕಳಲ್ಲಿ ಒಂದು ಬದುಕಿದರೆ ಹೆಚ್ಚು. ಇಲ್ಲಿಗೆ ಅನೇಕ ಜನ ಯೂರೋಪಿಯನರು ಬರುತ್ತಾರೆ. ಹೆಂಗಸರೂ ಇಲ್ಲಿಗೆ ಬಂದು ಮದುವೆಯಾಗಬಹುದು. ಹಡಗಿನ ಪ್ರಯಾಣ ಹೆಂಗಸರಿಗೆ ತುಂಬಾ ಕಷ್ಟ. ಅದನ್ನು ಸಹಿಸಿಕೊಂಡು ಇಲ್ಲಿಗೆ ಬಂದರೆ ಇಂಗ್ಲಿಷ್ ವರ್ತಕನನ್ನು ಮದುವೆಯಾಗಿ ಸುಖದಿಂದ ಇರಬಹುದು. ಈ ಕಾರಣವೇ ಅನೇಕ ಹೆಂಗಸರು ಸಮುದ್ರಯಾನ ಕಷ್ಟವಾದರೂ ಇಲ್ಲಿಗೆ ಬರುತ್ತಾರೆ. ಈ ಮದುವೆಗಳಿಂದ ಹುಟ್ಟಿದ ಮಕ್ಕಳೆಲ್ಲ ಬದುಕಿದ್ದರೆ ಇಲ್ಲಿ ಅನೇಕ ಜನ ಯೂರೋಪಿಯನ್ನರು ಇರಬೇಕಾ ಗಿತ್ತು. ಆದರೆ ಹಾಳು ಹವೆಯಿಂದ ಹುಟ್ಟಿದ ಮಕ್ಕಳು ಬದುಕುವುದೇ ಕಷ್ಟ.

ಈ ದ್ವೀಪದಲ್ಲಿ ಇಂಗ್ಲಿಷರ ಮತ್ತು ಪೋರ್ಚುಗೀಸರ ಒಳ್ಳೆಯ ಮನೆಗಳಿವೆ. ಪೋರ್ಚುಗೀಸರೂ ಜೆಂಟೈಲರೂ ತಮ್ಮ ತಮ್ಮ ಮತವನ್ನು ಆಚರಿಸುವುದಕ್ಕೆ ಯಾವ ಅಡ್ಡಿಯೂ ಇಲ್ಲ. ನಾನು ಆಕಸ್ಮಾತ್ ಒಂದು ದೇವಸ್ಥಾನಕ್ಕೆ ಹೋದೆ. ಸಣ್ಣ ಗುಡಿ ಅದು. ಒಂದು ವಿಗ್ರಹಕ್ಕೆ ಅರ್ಚಕ ಪೂಜೆ ಮಾಡುತ್ತಿದ್ದ. ಪೂಜೆ ಮಾಡುವಾಗ ಹೊರಗಡೆ ಒಬ್ಬ ವಾದ್ಯ ನುಡಿಸುತ್ತಿದ್ದ.

ಮೊಗಲರಿಗೂ ಇಂಗ್ಲಿಷರಿಗೂ ನಡೆದ ಯುದ್ಧದಿಂದ ಈ ದ್ವೀಪದ ನಿವಾಸಿಗಳ ಸಂಖ್ಯೆ ಕಡಿಮೆಯಾಗಿದೆ. ಬೆಳೆಗಳ ನಾಶ ಆಗಿದೆ. ಅದರಲ್ಲಿಯೂ ಜೀವನಾಧಾರವಾದ ತೆಂಗು ಹಾಳಾಗಿದೆ. ಈ ಯುದ್ಧಕ್ಕೆ ಏನೇನೋ ಸಣ್ಣಪುಟ್ಟ ಕಾರಣಗಳು. ಮೊದ ಮೊದಲು ಮೊಗಲರಿಂದ ಕಿರುಕುಳ ಆರಂಭವಾಯಿತು. ಆಮೇಲೆ ಅದು ಯುದ್ಧಕ್ಕೆ ಎಡೆಮಾಡಿಕೊಟ್ಟಿತು. ೧೬೮೮ರಲ್ಲಿ ಮೊಗಲರ ಕಡೆಯ ಸಿದ್ದಿ (Siddi) ಬೊಂಬಾಯಿ ಕೋಟೆ ಮೇಲೆ ಧಾಳಿ ಮಾಡಿದ. ಆತನ ಕಡೆ ೨೫,೦೦೦ ಸೈನ್ಯ. ನಮ್ಮ ಕಡೆ ಕೇವಲ ೨,೫೦೦. ಕೋಟೆಯ ಮೇಲೆ ಕಬ್ಬಿಣದ ಗುಂಡುಗಳ ಬದಲು ದಪ್ಪದಪ್ಪ ಕಲ್ಲುಗಳು ಬೀಳಲಾರಂಭಿಸಿದವು. ನಮ್ಮವರು ಏನೂ ಮಾಡಲಾಗಲಿಲ್ಲ. ನಮ್ಮ ಕೋಟೆಯ ನ್ನೇನೊ ಸುಭದ್ರವಾಗಿಯೇ ಸಜ್ಜುಗೊಳಿಸಿದ್ದೆವು. ಆದರೆ ಒಂದೇ ಸಮನೆ ಉಪ ಯೋಗಿಸಲ್ಪಟ್ಟ ನಮ್ಮ ಮದ್ದುಗುಂಡುಗಳು ಮುಗಿದುಹೋದವು. ಹೀಗಾಗಿ ನಮ್ಮ ಸೇನಾಧಿಪತಿ ಸಂಧಿ ಮಾಡಿಕೊಳ್ಳಬೇಕಾಯಿತು. ಸಿದ್ದಿಯು ನಮ್ಮ ಕೋಟೆಯ ಮೇಲೆ ಧಾಳಿಮಾಡುವುದಕ್ಕೆ ಮೊದಲು ಇದ್ದ ನಮ್ಮ ಕಡೆಯ ಸೇನಾಧಿಪತಿ (General) ಯ ಮರಣವೂ ಕಾರಣವಾಗಿತ್ತು. ಈತ ವ್ಯಾಪಾರದಲ್ಲಿ ನಿಪುಣನಾಗಿದ್ದ. ಕಂಪನಿ ಸೇವೆಯಲ್ಲಿ ನಿಷ್ಠಾವಂತ. ದಳ್ಳಾಳಿಗಳು ಇವನ ಮೇಲೆ ಏನೇನೊ ದೂರು ಹೇಳುತ್ತಿದ್ದರು. ತನ್ನ ಹತ್ತಿರದ ಸಂಬಂಧಿಗಳ ಬಗ್ಗೆ ಪಕ್ಷಪಾತ ತೋರಿಸುತ್ತಾನೆ, ಹೆಚ್ಚಿನ ಸರ್ವಿಸ್ ಮಾಡಿದವ ರನ್ನು ಬಿಟ್ಟು ತನ್ನವರಿಗೆ ಬಡ್ತಿ ಕೊಡುತ್ತಾನೆ, ಅಲ್ಲದೆ ತುಂಬಾ ಕಠಿಣ ಸ್ವಭಾವದವನು, ತಮಗೆ ದೊರೆಯುತ್ತಿದ್ದ ಇಂಗ್ಲಿಷ್ ಮದ್ಯ ತಪ್ಪಿಸಿಬಿಟ್ಟ, ಕಂಪನಿ ಧಾರಾಳವಾಗಿ ಒದಗಿಸುತ್ತಿದ್ದ ಮದ್ಯಗಳನ್ನು ತಮಗೆ ತಪ್ಪಿಸಿ ದುಡ್ಡು ಮಾಡಿಕೊಳ್ಳುತ್ತಿದ್ದಾನೆ— ಹೀಗೆಲ್ಲ ದೂರು ಹೇಳಿದರು.

ಈ ಸೇನಾಧಿಪತಿ ಹೇರಳವಾಗಿ ಹಣ ಮಾಡಿದ್ದು ನಿಜ. ಇಂಡಿಯಾದಲ್ಲಿ ೨೫ ವರ್ಷ ಇದ್ದ ವೇಳೆಯಲ್ಲಿ ಒಂದು ಲಕ್ಷ ಪೌಂಡುಗಳಷ್ಟು ಹಣ ಗಳಿಸಿದ. ಆತನ ಹೆಂಡತಿ ತುಂಬಾ ಒಳ್ಳೆಯವಳು. ಗಂಡ ಸತ್ತಮೇಲೆ ಆಕೆ ಮಿ॥ ಜಾರ್ಜ್ ವೆಲ್ಡನ್ (George Weldon) ಎಂಬುವನನ್ನು ಮದುವೆಯಾದಳು. ಈತ ಸತ್ತ ಗಂಡನ ಆಸ್ತಿ ಮತ್ತು ಹಾಸಿಗೆ ಇವೆರಡಕ್ಕೂ ಅರ್ಹನಾಗಿದ್ದ. ಈಗ ದ್ವೀಪದ ಡೆಪ್ಯುಟಿ ಗೌರ್ನರ್ ಆಗಿ ತನ್ನ ಕೆಲಸಕಾರ್ಯ ಗಳನ್ನು ಬಹು ಚೆನ್ನಾಗಿ ನಡೆಸಿಕೊಂಡು ಹೋಗುತ್ತಿದ್ದಾನೆ. ಈತನ ಮತ್ತು ಈತನ ಹೆಂಡತಿ ಮಕ್ಕಳ ಆ ಐಶ್ವರ್ಯ ನೋಡಿದರೆ ಕಂಪನಿಯ ಸೇವಕರು ಬುದ್ಧಿವಂತ ರಾದರೆ ಹಣವನ್ನೂ, ಆಸ್ತಿಪಾಸ್ತಿಗಳನ್ನೂ ಹೇಗೆ ಸಂಪಾದಿಸಬಹುದೆಂಬುದು ಸ್ಪಷ್ಟವಾಗು ತ್ತದೆ.

ಬೊಂಬಾಯಿಂದ ಮೂರು ಹರಿದಾರಿ ದೂರದಲ್ಲಿ 'ಎಲಿಫಾಂಟಾ' ಎಂಬ ಸಣ್ಣ ದ್ವೀಪವಿದೆ. ಇಲ್ಲಿ 'ಎಲಿಫೆಂಟ್' (ಆನೆ) ವಿಗ್ರಹವನ್ನು ಕಲ್ಲಿನಲ್ಲಿ ಕಡೆದು ಇಟ್ಟಿರು ವುದರಿಂದ ಇದಕ್ಕೆ ಆ ಹೆಸರು ಬಂದಿದೆ. ಬಹು ಸೊಗಸಾದ ಆನೆಯ ವಿಗ್ರಹವನ್ನು ಕಡೆದು ಇಟ್ಟಿದ್ದಾರೆ. ಆದರೆ ಈ ದ್ವೀಪಕ್ಕೆ ಕೀರ್ತಿ ಬಂದಿರುವುದು ದ್ವೀಪದ ಮೇಲಿರುವ 'ಪಗೋಡ್' (pagode) ದಿಂದ. ಪಗೋಡ್ ಎಂದರೆ ವಿಧರ್ಮಿಗಳ (ಹಿಂದೂಗಳ) ದೇವಸ್ಥಾನ. ದೇವಸ್ಥಾನ ಎಂದರೆ ವಿಧರ್ಮಿಗಳು ತಮ್ಮ ಸುಳ್ಳು ದೇವರನ್ನು ಪೂಜಿಸುವ ಸ್ಥಳ. ಪಗೋಡ್ ಎಂಬ ಪದ ಪರ್ಷಿಯಾ ಭಾಷೆಯ 'ಪೌತ್' (Pout) ಅಂದರೆ ವಿಗ್ರಹ ಎಂಬ ಪದದಿಂದ ಬಂದಿದೆ. ಆದ್ದರಿಂದ ಪೌತ್ ಘೇಡಾ (Pout Gheda) ಎಂದರೆ ಸುಳ್ಳುದೇವರುಗಳ ದೇವಸ್ಥಾನ; ಆದ್ದರಿಂದ 'ಪಗೋಡ್' ಎಂಬ ಪದ.

ಇಲ್ಲಿರುವ ದೇವಸ್ಥಾನವನ್ನು ಬಂಡೆಯಲ್ಲಿ ಕೊರೆದಿದ್ದಾರೆ. ಬಗೆಬಗೆಯ ವಿಗ್ರಹ ಗಳೂ ಇವೆ. ಅತ್ಯಂತ ಶ್ರಮ ಹಾಗೂ ಶ್ರದ್ಧೆಗಳಿಂದ ಈ ಗುಹೆಗಳನ್ನೂ ವಿಗ್ರಹಗಳನ್ನೂ ಕಡೆದಿದ್ದಾರೆಂದು ಹೇಳಬಹುದು.

೧೬೯೦ನೆಯ ಸೆಪ್ಟೆಂಬರ್ ತಿಂಗಳ ಮಧ್ಯಭಾಗದಲ್ಲಿ ನಾನು ಸೂರತ್ತಿಗೆ ಹೋಗ ಬೇಕೆಂದು ಅಪ್ಪಣೆಯಾಯಿತು. ಇದು ನಮಗೆ ತುಂಬಾ ಖುಷಿಯುಂಟುಮಾಡಿತು. ನಮ್ಮ ದಾರಿಯಲ್ಲಿ 'ಸಂಗಾನಿಯನರು' (Sanganians) ಎಂಬ ಒಂದು ಕಡಲುಗಳ್ಳರ ತಂಡವನ್ನು ಕಂಡೆವು. ಆದರೆ ಅವರು ನಮ್ಮದು ಸೈನ್ಯವಿರುವ ಹಡಗೆಂದು ಗೊತ್ತಾದಾಗ ನಮ್ಮ ತಂಟೆಗೆ ಬರದೆ ಹೊರಟುಹೋದರು. ಸ್ವಲ್ಪ ಕಾಲದಲ್ಲಿ ನಾವು ಸೂರತ್ ತಲುಪಿದೆವು. ಇಲ್ಲಿ ಇಂಗ್ಲಿಷರು, ಫ್ರೆಂಚರು ಮತ್ತು ಡಚ್ಚರು ಈ ಮೂವರಿಗೆ ಸೇರಿದ ಮೂರು 'ಚೌಲ್ಟ್ರಿ'ಗಳು (Choultries) ಇವೆ. ಇವನ್ನು ಮರದಿಂದ ಕಟ್ಟಿ, ಇಳಿದುಕೊಳ್ಳಲು ಕೋಣೆ ಮುಂತಾದ ಸೌಕರ್ಯಗಳನ್ನು ಒದಗಿಸಿದ್ದಾರೆ. ಸೂರತ್ತಿನ 'ಸೂಳಿ' (Souly) ಬಂದರಿನಲ್ಲಿ ಹಡಗಿನಿಂದ ಇಳಿದುಬಂದ ನಾವು ಇಲ್ಲಿ ತಂಗಿದೆವು. ಇಲ್ಲಿದ್ದ ಇಂಗ್ಲಿಷ್ ದಳ್ಳಾಳಿಗಳು ನಮ್ಮನ್ನು ಎದುರುಗೊಂಡು ಸತ್ಕರಿಸಿದರು.

ನಾವು ಮೊದಲು ಕಾಲಿಟ್ಟ ಸೂಳೆ ಬಂದರು ಮೊಗಲ್ ಚಕ್ರವರ್ತಿಗೆ ಸೇರಿರುವ ಕಾರಣ ನಾನು ಈಗ ಆತನ ವಿಷಯ ಹೇಳಲು ಇಚ್ಛಿಸುತ್ತೇನೆ. ಪ್ರಪಂಚವನ್ನು ಸೃಷ್ಟಿಸಿದ ದೇವರು ಮೊಟ್ಟಮೊದಲು ಮನುಷ್ಯನನ್ನು ಏಷ್ಯಾದಲ್ಲಿ ಉತ್ಪತ್ತಿ ಮಾಡಿದನು. ಚಕ್ರಾಧಿಪತ್ಯಗಳೂ ಚಕ್ರವರ್ತಿಗಳೂ ಮೊದಲು ಇಲ್ಲಿಯೇ ಸ್ಥಾಪಿಸಲ್ಪಟ್ಟವು. ಯಹೂದಿ ಮತ್ತು ಕ್ರೈಸ್ತಮತ ಮೊದಲು ಪ್ರಸಾರವಾದದ್ದು ಇಲ್ಲಿಯೇ. ಇವೆಲ್ಲಕ್ಕೂ ಕಿರೀಟ ಪ್ರಾಯವಾದುದೆಂದರೆ ನಮ್ಮ ಧರ್ಮದ (ಕ್ರೈಸ್ತ ಧರ್ಮದ) ಗುರು (ಕ್ರೈಸ್ತನು) ಇಲ್ಲಿಯೇ ಬಾಳಿಬದುಕಿದುದು ಹಾಗೂ ತನ್ನ ಮರಣದಿಂದ ಮಾನವ ಕುಲವನ್ನು ಉದ್ಧರಿಸಿದುದು.

ಏಷ್ಯಾದ ಶ್ರೀಮಂತಿಕೆಯೂ ವಿಸ್ತಾರವೂ ಪ್ರಪಂಚದ ಬೇರೆ ಭಾಗಗಳನ್ನು ಮೀರಿಸುತ್ತವೆ. ಇಲ್ಲಿಯ ಚಕ್ರವರ್ತಿಗಳು ಅಷ್ಟೇ ವೈಭವಕ್ಕೂ ಹೆಸರಾದವರು. ಇಂಡಿಯಾದ ವಜ್ರವೈಡೂರ್ಯಗಳನ್ನೂ ಚಿನ್ನ ಬೆಳ್ಳಿಗಳನ್ನೂ ಸಾಂಬಾರ ವಸ್ತುಗಳನ್ನೂ ರೇಶ್ಮೆ ಹಾಗೂ ಹತ್ತಿಗಳನ್ನೂ ಇಲ್ಲಿ ಹೇರಳವಾಗಿ ದೊರೆಯುವ ಇನ್ನಿತರ ಬೆಲೆಯಾದ ವಸ್ತುಗಳನ್ನೂ ಗಮನಿಸಿದರೆ ಇಲ್ಲಿಯ ಚಕ್ರವರ್ತಿಗಳು ಬೇರೆಲ್ಲರನ್ನೂ ಮೀರಿಸುತ್ತಾರೆಂಬ ಮಾತಿನಲ್ಲಿ ಸತ್ಯಾಂಶವಿಲ್ಲದೇ ಇಲ್ಲ.

ಇಂಡಿಯಾದ ಚಕ್ರವರ್ತಿಗಳನ್ನು 'ಮೊಗಲ್' ಎಂದು ಕರೆಯುತ್ತಾರೆ. ಕುಂಟ ತೇಮರ್‌ಲೇನನಿಂದ ಆರಂಭವಾದ ಮೊಗಲ್ ಸಂತತಿಯಲ್ಲಿ ಈಗ ಆಳುವ ಔರಂಗಜೇಬ ಹತ್ತನೆಯವನು. ವಜ್ರವೈಡೂರ್ಯಗಳಿಂದಲೂ ಮುತ್ತುರತ್ನಗಳಿಂದಲೂ ಅಲಂಕರಿಸಲ್ಪಟ್ಟ ಅತ್ಯಂತ ಹೆಚ್ಚಿನ ಬೆಲೆಯ ಸಿಂಹಾಸನವನ್ನೇರಲು ಈತ ಕೊಲೆ ಮುಂತಾದ ಹೇಯ ಕೃತ್ಯಗಳಿಗೆ ಕೈಹಾಕದೆ ತನ್ನ ಪೂರ್ವಿಕರ ಸುಗುಣಗಳನ್ನು ಅನುಸರಿಸಿದ್ದರೆ ಇವನಿಗೆ ಒಳ್ಳೆಯ ಹೆಸರು ಬರುತ್ತಿತ್ತು. ರೋಮ್ ಚಕ್ರವರ್ತಿಗಳೂ ಚೀನಾ ಚಕ್ರವರ್ತಿಗಳೂ ಸನ್ಮಾರ್ಗದಲ್ಲಿ ನಡೆದು ದೀರ್ಘಕಾಲ ರಾಜ್ಯಭಾರ ಮಾಡಿದರು. ಆದರೆ ಈ ಮೊಗಲ್ ಚಕ್ರವರ್ತಿಯು ತನ್ನ ಸಹೋದರರನ್ನೇ ಕೊಲೆಮಾಡಿ ಸಿಂಹಾಸನಕ್ಕೆ ಕೆಟ್ಟ ಹೆಸರು ತಂದಿದ್ದಾನೆ. ಅಷ್ಟೇ ಅಲ್ಲ, ಹೆತ್ತ ತಂದೆಯನ್ನೇ ವಿಷವಿಕ್ಕಿ ಕೊಂದುಹಾಕಿದ್ದಾನೆ. ತಾನೊಬ್ಬ ಫಕೀರನೆಂದು ಹೇಳಿಕೊಂಡು ಜನರಿಗೆ ಮೋಸಮಾಡುತ್ತಿದ್ದಾನೆ. ಅಪ್ಪನಂತೆ ಮಕ್ಕಳೂ ಸಿಂಹಾಸನಕ್ಕಾಗಿ ಕ್ರೂರವಾದ ಕೃತ್ಯಗಳನ್ನೆಸಗುತ್ತಿದ್ದಾರೆ. ನಾಲ್ಕನೆಯ ಮಗ ಷಾ ಅಕ್ಬರನನ್ನು ಸಿಂಹಾಸನಕ್ಕೇರಿಸುವ ಪ್ರಯತ್ನ ನಡೆದಿದೆ. ಈತ ರಜಪೂತಳ ಹೊಟ್ಟೆಯಲ್ಲಿ ಹುಟ್ಟಿದವನು. ಇದನ್ನು ಅರಿತ ಔರಂಗಜೇಬನು ಉಪಾಯದಿಂದ ಆತನನ್ನು ಯುದ್ಧದಲ್ಲಿ ಸೋಲಿಸಿ ಪರ್ಷಿಯಾಕ್ಕೆ ಓಡಿಹೋಗುವಂತೆ ಮಾಡಿದ. ಈಗ ಈತ ಅಪ್ಪನ ಸಾವಿಗಾಗಿ ಕಾಯುತ್ತಾ ಪರ್ಷಿಯಾದಲ್ಲಿ ಇದ್ದಾನೆ.

ಮೊಗಲ್ ಚಕ್ರವರ್ತಿಯು ಧರಿಸುವ ಕಿರೀಟವೂ, ಕುಳಿತುಕೊಳ್ಳುವ ಸಿಂಹಾಸನವೂ ಬಹು ಬೆಲೆಯಾದವುಗಳು. ಸಿಂಹಾಸನದ ಬೆಲೆ ೩೦೦ ಲಕ್ಷ ರೂಪಾಯಿಗಳೆಂದು ಹೇಳುತ್ತಾರೆ. ಎಲ್ಲರೂ ಚಕ್ರವರ್ತಿಯ ಕೃಪಾಕಟಾಕ್ಷವನ್ನು ಗಳಿಸಲು ಪ್ರಯತ್ನಪಡುತ್ತಾರೆ. ನೆಲದವರೆಗೂ ಬಗ್ಗಿ ಸಲಾಮು ಮಾಡುತ್ತಾರೆ.

ವಿಸ್ತಾರವಾದ ಮೊಗಲ್ ಚಕ್ರಾಧಿಪತ್ಯದಲ್ಲಿರುವ ಅನೇಕ ರಾಜ್ಯಗಳು ಆಗಾಗ್ಗೆ ದಂಗೆ ಏಳುತ್ತವೆ. ಈ ದಂಗೆಗಳನ್ನು ಅಡಗಿಸಲು ಚಕ್ರವರ್ತಿ ಭಾರಿ ಸೈನ್ಯವನ್ನು ಇಟ್ಟುಕೊಳ್ಳಬೇಕಾಗಿದೆ. ಹೀಗಾಗಿ ಪ್ರಜೆಗಳು ತುಂಬಾ ಕಷ್ಟನಷ್ಟಗಳಿಗೆ ಒಳಗಾಗುತ್ತಾರೆ. ಕೊಳ್ಳೆ, ದರೋಡೆ ಸುಲಿಗೆಗಳಿಗೆ ಅವರು ಒಳಗಾಗುತ್ತಾರೆ. ಬಡತನ ಮತ್ತು ಕ್ಷಾಮ ಡಾಮರುಗಳು ಸರ್ವೇಸಾಮಾನ್ಯವಾಗಿರುವ ಈ ದೇಶದ ಜನರ ಗೋಳು ಹೇಳತೀರದು. ಮೊಗಲ್ ಚಕ್ರವರ್ತಿಯು ನೇಮಿಸುವ ಈ ಪ್ರಾಂತಗಳ ನವಾಬರು ಅಂದರೆ ಗೌರ್ನರುಗಳು ಹೇರಳವಾದ ಸೈನ್ಯ ಇಟ್ಟುಕೊಳ್ಳಬೇಕಾಗಿದೆ. ಈ ನವಾಬರುಗಳೂ ತಮ್ಮ ಅಷ್ಟೈಶ್ವರ್ಯದಲ್ಲಿ ರಾಜರುಗಳನ್ನು ಮೀರಿಸುತ್ತಾರೆ. ಬಂಗಾಳದ ನವಾಬನು ಸತ್ತಾಗ ಅವನ ಆಸ್ತಿ ೨೦ ಕೋಟಿ ರೂಪಾಯಿಗಳಷ್ಟಿತ್ತು. ಒಂದು ಕೋಟಿ ಎಂದರೆ ೧೦೦ ಲಕ್ಷ ರೂಗಳು ; ಒಂದು ಲಕ್ಷ ಎಂದರೆ ೧೦೦ ಸಾವಿರ ರೂಗಳು ; ನೂರು ಕೋಟಿಗಳಿಗೆ ಒಂದು 'ಪದನ್' (padan) ; ೧೦೦ ಪದನ್‌ಗಳಿಗೆ ಒಂದು 'ನೀಲ್' (nil).

ಯಾವಾಗಲೂ ಯುದ್ಧದಲ್ಲಿ ತೊಡಗಿರುವ ಔರಂಗಜೇಬನು ತನ್ನ ಸೈನ್ಯದ ಪಾಳ್ಯ ಬಿಟ್ಟುಬರುವುದೇ ಅಪರೂಪ. ಇವನ ಪಾಳ್ಯ ಒಂದು ದೊಡ್ಡ ನಗರದಂತೆ ಇರುತ್ತದೆ.

ವಿಜಾಪುರವನ್ನು ಗೆದ್ದುಕೊಂಡಮೇಲೆ ಅಲ್ಲಿದ್ದ ವಜ್ರದ ಗಣಿಗಳು ಮೊಗಲ್ ಚಕ್ರವರ್ತಿಯ ವಶವಾದುವು. ಗಣಿಗಳಲ್ಲಿ ಅಗೆಯುವುದನ್ನು ನಿಲ್ಲಿಸಲಾಗಿದೆ. ಹಿಂದೆ ಇವು ಗೋಲ್ಕೊಂಡಾ ರಾಜನಿಗೆ ಸೇರಿದ್ದಾಗ ಅವನ್ನು ಅಗೆಯುವವರು ಗಂಟೆಗೆ ಒಂದು 'ಪಗೋಡ್' (pagod) ಹಣ ತೆರಬೇಕಾಗಿತ್ತು. ಒಂದು ಪಗೋಡ್ ಎಂದರೆ ಒಂಬತ್ತು ಷಿಲ್ಲಿಂಗುಗಳು.

ಇಷ್ಟೆಲ್ಲಾ ಐಶ್ವರ್ಯದ ಒಡೆಯನಾಗಿದ್ದರೂ ಮೊಗಲ್ ಚಕ್ರವರ್ತಿಯ ಮನಸ್ಸಿಗೆ ನೆಮ್ಮದಿ ಇಲ್ಲ. ಪ್ರಪಂಚದ ಒಡೆಯನಾಗಬೇಕೆಂದು ಬಯಸಿದ್ದಾನೆ. ಪೋರ್ಚುಗೀಸರನ್ನು ಕಂಡರೆ ಔರಂಗಜೇಬನಿಗೆ ಹಿಡಿಸುವುದಿಲ್ಲ ಇದಕ್ಕೆ ಕಾರಣ ಅವರ ಪೂಜೆ ಪುನಸ್ಕಾರಗಳು. ವಿಗ್ರಹಗಳ ಪೂಜೆ ನಿಷೇಧಿಸಿರುವ ಮಹಮ್ಮದೀಯ ಮತಕ್ಕೆ ತೀರಾ ವಿರುದ್ಧವಾದುದು ಪೋರ್ಚುಗೀಸರ ಪೂಜಾ ವಿಧಾನ.

ಮೊಗಲ್ ಚಕ್ರವರ್ತಿಯ ವಯಸ್ಸು ೮೦ ವರ್ಷ ಮೀರಿದೆ. ಆದರೂ ಈ ವಿಶಾಲವಾದ ಚಕ್ರಾಧಿಪತ್ಯವನ್ನು ಆಳುತ್ತಿದ್ದಾನೆ. ಈತನು ಆದ ಅಡುಗೆಯನ್ನು ಊಟ ಮಾಡುವ ಮೊದಲು ಅದನ್ನು ಆತನ ಮಗಳು ರುಚಿ ನೋಡಿ ಸರಿಯಾಗಿದೆ ಎಂದು ಹೇಳಬೇಕು. ಆಮೇಲೆ ಭಕ್ಷ್ಯದ ಪಾತ್ರೆಗಳಿಗೆ ಮೂರು ನಾಲ್ಕು ಜನ ಅಮೀರರು ತಮ್ಮ ಮುದ್ರೆ ಹಾಕಬೇಕು. ಚಕ್ರವರ್ತಿ ಕುಡಿಯುವುದು ಗಂಗಾ ನದಿಯ ನೀರು. ಇದು ಪವಿತ್ರವಾದುದೆಂದು ಈ ಜನ ಭಾವಿಸುತ್ತಾರೆ. ನೂರಾರು ಮೈಲಿಗಳಿಂದ ಈ ನೀರನ್ನು ಕಲಾಯಿಮಾಡಿದ ತಾಮ್ರದ ಬಿಂದಿಗೆಗಳಲ್ಲಿ ತುಂಬಿಕೊಂಡು ಮನುಷ್ಯರು ಹೊತ್ತು ತರುತ್ತಾರೆ. ಅಥವಾ ಪ್ರಾಣಿಗಳು ಹೊತ್ತುಕೊಂಡು ಬರುತ್ತವೆ. ಚಕ್ರವರ್ತಿಯು ಕಾಯಿಲೆ

ಬಿದ್ದಾಗ ಆತನು ಸೇವಿಸಬೇಕಾದ ಔಷಧಿಯನ್ನು ಮೊದಲು ವೈದ್ಯರೇ ಸೇವಿಸಬೇಕು. ಆಗ ಮಾತ್ರ ಅದನ್ನು ತೆಗೆದುಕೊಳ್ಳುವುದು. ಈತ ಮದ್ಯಪಾನ ಮಾಡುವುದಿಲ್ಲ. ಆದರೆ ಆತನ ಅಮೀರರುಗಳು ಮಾತ್ರ ಎಷ್ಟೇ ಹಣವಾದರೂ ಕೊಟ್ಟು ತರಿಸಿಕೊಂಡು ಗುಟ್ಟಾಗಿ ಕುಡಿಯುತ್ತಾರೆ.

ಯುವಕನಾಗಿದ್ದಾಗ ಚಕ್ರವರ್ತಿಗೆ ಹೆಣ್ಣುಗಳ ಸಹವಾಸ ಬೇಕಾಗಿತ್ತು. ಈಗ ಮುದುಕನಾದ ಮೇಲೆ ತನ್ನ ರಾಣೀವಾಸದ ಕಡೆ ತಲೆಹಾಕುವುದಿಲ್ಲ. ಈತನ ರಾಣೀವಾಸದ ಸ್ತ್ರೀಯರ ಮೇಲೆ ಬಲವಾದ ಕಾವಲು ಇದೆ. ಅವರುಗಳನ್ನು ಕಾಯಲು ಖೋಜಾ ಗಳನ್ನು ನೇಮಿಸಲಾಗಿದೆ. ಇವರೇನಾದರೂ ಹೆಂಗಸರ ಮೇಲೆ ಕಣ್ಣಿಟ್ಟಾರೆಂಬ ಭೀತಿ ಯಿಂದ ಅವರ ಪುರುಷಾಂಗಗಳನ್ನು ಬುಡಮಟ್ಟ ಕತ್ತರಿಸಿಹಾಕಲಾಗುತ್ತದೆ. ಹೀಗಾಗಿ ಅವರು ಮೂತ್ರವಿಸರ್ಜನೆಗೆ ಲಾಳಿಕಡ್ಡಿಗಳನ್ನು ಉಪಯೋಗಿಸುತ್ತಾರೆ. ಇಂಡಿಯಾದ ಶ್ರೀಮಂತರ ಹೆಂಗಸರನ್ನು ಯಾವಾಗಲೂ ಮನೆಯ ಒಳಗೆ ಅನ್ಯರ ಕಣ್ಣಿಗೆ ಬೀಳದಂತೆ ಇಟ್ಟಿರುತ್ತಾರೆ. ಆದರೆ ಅವರು ಹೇಗೋ ಮಾಡಿ ಪುರುಷರ ಸಹವಾಸ ಬೆಳೆಸುತ್ತಾರೆ. ಅವರಿಗೂ ತಮ್ಮ ಗಂಡಂದಿರಂತೆ ವೈವಿಧ್ಯತೆ ಬೇಕಲ್ಲವೆ! ಈ ಬಗೆಯ ಕಟ್ಟುನಿಟ್ಟು ಮಲಬಾರ್ ತೀರದಲ್ಲಿ ಇಲ್ಲ. ಅಲ್ಲಿ ಗಂಡಂದಿರೇ ತಮ್ಮ ಹೆಂಡತಿಯರನ್ನು ಅತಿಥಿಗಳ ಸೇವೆಗೆ ಬಿಡುತ್ತಾರೆ. ಹೀಗಾಗಿ ಆ ಹೆಂಗಸರು 'ಮಲಬಾರ್ ಕ್ವಿಲ್ಲಾ' (Malbar Quilla) ಎಂಬ ಹೆಸರು ಗಳಿಸಿದ್ದಾರೆ.

ಸೂರತ್ ಬಹು ಶ್ರೀಮಂತವಾದ ಊರು. ಏನೆಲ್ಲ ವಸ್ತುಗಳು ಇಲ್ಲಿ ದೊರಕು ತ್ತವೆ. ಈ ಕಾರಣ ಇಲ್ಲಿ ಭಾರಿ ವ್ಯಾಪಾರಸಾಪಾರಗಳು ನಡೆಯುತ್ತವೆ. ಇಲ್ಲಿ ದೊರೆ ಯುವ ಚಿನ್ನ ಬಹು ಅಪ್ಪಟವಾದುದು. ಈ ಚಿನ್ನವನ್ನು ಯುರೋಪಿಗೆ ತಂದರೆ ಪ್ರತಿಶತ ೧೨ ಅಥವಾ ೧೪ ಲಾಭ ಪಡೆಯಬಹುದು. ಬೆಳ್ಳಿಯೂ ಅಷ್ಟೇ ಅಪ್ಪಟ ವಾದುದು. ಚಿನ್ನ ಬೆಳ್ಳಿಯ ನಾಣ್ಯಗಳೂ ಬಹು ಶುದ್ಧವಾಗಿರುತ್ತವೆ. ಇಲ್ಲಿ ಪರದೇಶದ ನಾಣ್ಯಗಳು ಇದ್ದರೂ ಅಷ್ಟು ಹೇರಳವಾಗಿಲ್ಲ. ಪೈಸೆ ಎಂಬುದು ತಾಮ್ರದ ನಾಣ್ಯ. ಅರುವತ್ತು ಪೈಸೆಗಳಿಗೆ ಒಂದು 'ರೂಪಾಯಿ'. ಪೈಸೆ ಬಿಟ್ಟು ಚಲಾವಣೆಯಲ್ಲಿರುವ ಕಡಮೆ ನಾಣ್ಯವೆಂದರೆ ಕಹಿ ಬಾದಾಮಿಗಳು. ೬೦ ಬಾದಾಮಿಗಳಿಗೆ ಒಂದು ಪೈಸೆ.

ರೇಶ್ಮೆ ಮತ್ತು ಹತ್ತಿಬಟ್ಟೆಗಳನ್ನು ಥಾನುಗಟ್ಟಲೆ ಅಥವಾ ಮೊಳದ ಲೆಖ್ಖದಲ್ಲಿ ಮಾರಾಟ ಮಾಡುತ್ತಾರೆ. ಮೊಳ ಎಂದರೆ ೨೨ ಅಂಗುಲಗಳು. ನಾವು ಅಕ್ಕಿ ಮುಂತಾದ ದವಸಧಾನ್ಯಗಳನ್ನು ಅಳೆದು ಮಾರಿದರೆ ಇಲ್ಲಿ ತೂಗಿ ಮಾರುತ್ತಾರೆ. ಒಂದು ಸೇರು ತೂಕಕ್ಕೆ ೧೩ಕ್ಕೆ ಔನ್ಸುಗಳು. ೪೦ ಸೇರಿಗೆ ಒಂದು ಮಣ. ಇಲ್ಲಿಯ ಗರಗಸದ ಹಲ್ಲುಗಳು ನಮ್ಮ ಗರಗಸದ ಹಲ್ಲುಗಳಂತೆ ಇಲ್ಲ. ನಮ್ಮ ಬೀಗಗಳಂತೆ ಇವರ ಬೀಗಗಳಿಲ್ಲ. ಇಲ್ಲಿಯ ನಾಯಿಗಳು ರಾತ್ರಿಯೆಲ್ಲಾ ಊರು ಕಾಯುತ್ತಾ ಹೇರಳವಾಗಿರುವ ಇಲಿ ಹೆಗ್ಗಣ ಗಳನ್ನು ತಿಂದುಹಾಕುತ್ತವೆ. ಸಾಮಾನುಗಳನ್ನು ಸಾಗಿಸಲು ಕುದುರೆಗಳನ್ನು ಕಟ್ಟುವ

ದಿಲ್ಲ. ಆದರ ಬದಲು ಗಾಡಿಗಳ ಮೇಲೂ ಎತ್ತು ಕತ್ತೆ ಒಂಟೆಗಳ ಮೇಲೂ ಸಾಗಿಸು ತ್ತಾರೆ. ಭಾರಿ ಸಾಮಾನುಗಳನ್ನು ಸಾಗಿಸಲು ಒಂಟೆಗಳನ್ನು ಉಪಯೋಗಿಸುತ್ತಾರೆ.

ಸೂರತ್ತಿಗೆ ಬೇಕಾದ ಎಲ್ಲಾ ಸಾಂಬಾರದ ವಸ್ತುಗಳನ್ನು ಡಚ್ಚರು ಒದಗಿಸುತ್ತಾರೆ. ಮೆಣಸನ್ನು ಮಾತ್ರ ಇಂಗ್ಲಿಷರೂ ಡಚ್ಚರೂ ಒದಗಿಸುತ್ತಾರೆ. ಸಾಂಬಾರದ ವಸ್ತುಗಳೆಲ್ಲ ಅಪ್ಪಟವಾಗಿವೆಯೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ, ಲವಂಗ ದಾಲ್ಚಿನ್ನಿ ಮುಂತಾದುವುಗಳಲ್ಲಿರುವ ಎಣ್ಣೆ ಮುಂತಾದುವುಗಳನ್ನು ತೆಗೆದ ನಂತರವೇ ಅವನ್ನು ಮಾರಾಟ ಮಾಡುವುದು.

ಸೂರತ್ತಿನ ನವಾಬ (ಗೌರ್ನರ್) ಯಾವಾಗಲೂ ತನ್ನ ದುರ್ಗದಲ್ಲಿ ಇದ್ದುಬಿಡು ತ್ತಾನೆ. ಹೊರಗೆ ನಗರದ ವಹಿವಾಟುಗಳನ್ನು ನಡೆಸಲು ಬೇರೊಬ್ಬನಿದ್ದಾನೆ. ಜನರ ಹಾಗೂ ವರ್ತಕರ ದೂರುಗಳನ್ನು ಕೇಳಿ ಇತ್ಯರ್ಥ ಮಾಡುವವನು ಇವನೇ. ಈತನು ಸಹ ತಾನೊಬ್ಬನೇ ತೀರ್ಮಾನಮಾಡದೆ ಖಾಜಿ, ವಖನಾವಿಸ್ ಮತ್ತು ಕೊತ್ವಾಲ ಇವರೊಡನೆ ಸಮಾಲೋಚಿಸಿ ತೀರ್ಮಾನ ಮಾಡುತ್ತಾನೆ.

ಇವರಲ್ಲದೆ ಹರಕಾರ (Harcarrah = ಹರಿಕಾರ) ಎಂಬ ಅಧಿಕಾರಿ ಒಬ್ಬ ನುಂಟು. ಈತನ ಕೆಲಸ ನಡೆದ ಅಥವಾ ಕೇಳಿದ ಎಲ್ಲ ಸಂಗತಿಗಳನ್ನು ಚಕ್ರವರ್ತಿಗೆ ವರದಿಮಾಡುವುದು. ಈತ ವಖನಾವಿಸನಿಗೆ ತೀರ ಹತ್ತಿರದವನು. ಊರಿನಲ್ಲಿ ನಡೆಯುವ ಜಗಳ ಗುದ್ದಾಟಗಳನ್ನು ನೋಡಿಕೊಳ್ಳುವವನು ಕೊತ್ವಾಲ. ಈತ ರಾತ್ರಿ ೯ ರಿಂದ ಬೆಳಗ್ಗೆ ೫ ಘಂಟೆವರೆಗೆ ಊರಿನಲ್ಲಿ ಮೂರು ಸಲ ಗಸ್ತು ತಿರುಗುತ್ತಾನೆ. ಅವನ ಹಿಂದೆ ಶಸ್ತ್ರಾಸ್ತ್ರಗಳನ್ನೂ ಬಿಲ್ಲುಬಾಣಗಳನ್ನೂ ಹಿಡಿದ ಸೇವಕರಿರುತ್ತಾರೆ. ಇವರು ಇನ್ನೊಂದು ಬಗೆಯ ಆಯುಧವನ್ನೂ ಹಿಡಿದಿರುತ್ತಾರೆ. ಒಂದು ಮೊಳ ಉದ್ದದ ಸಲಾಕಿಯ ತುದಿಯಲ್ಲಿ ಕಬ್ಬಿಣದ ಗುಂಡು ಇರುತ್ತದೆ. ಇದರಿಂದ ಹೊಡೆದರೆ ತಲೆ ಹೋಳಾಗುತ್ತದೆ, ಮೂಳೆಗಳು ನುಚ್ಚುನುರಿಯಾಗುತ್ತವೆ.

ಈ ಊರಿನಲ್ಲಿ ಎಲ್ಲಾ ರಾಷ್ಟ್ರಗಳ ಎಲ್ಲಾ ಬಗೆಯ ಜನರು ಇದ್ದರೂ ಜಗಳ ಗುದ್ದಾಟಗಳು ಅಪರೂಪ. ಮರಣದಂಡನೆಗೆ ಅರ್ಹವಾದ ಅಪರಾಧಗಳೇ ಇಲ್ಲ. ಬಹು ಸೌಮ್ಯವಾಗಿ ಮಾತಾಡುವ ಜೆಂಟೈಲ್ ಇಂಡಿಯನರು (ಹಿಂದೂಗಳು) ಇನ್ನೊಬ್ಬರು ಏನೇ ಮಾತಾಡಿದರೂ ಸಹಿಸಿಕೊಂಡು ಸುಮ್ಮನಿರುತ್ತಾರೆ. ಅವರು ಇನ್ನೊಬ್ಬರ ತಂಟೆ ತಕರಾರಿಗೆ ಹೋಗುವುದಿಲ್ಲ. ಖೂನಿ, ದರೋಡೆ ಇಂತಹ ಅಪರಾಧಗಳನ್ನು ಮಾಡುವ ಸ್ವಭಾವದವರಲ್ಲ. ಕಳೆದ ೨೦ ವರ್ಷಗಳಲ್ಲಿ ಸೂರತ್‌ನಲ್ಲಿ ಯಾರಿಗೂ ಮರಣದಂಡನೆ ವಿಧಿಸಿಲ್ಲವಂತೆ. ಒಮ್ಮೆ ಕೆಲವು ಕಡಲುಗಳ್ಳರು ಸಿಕ್ಕಿಬಿದ್ದರು. ಆದರೆ ಅವರೆಲ್ಲ ಯೂರೋಪಿ ಯನರು. ಇವರನ್ನು ಮರಣದಂಡನೆಗೆ ಗುರಿಮಾಡಿ ಸೂರತ್ ಮೂಲಕ ಮೊಗಲ್ ಆಸ್ಥಾನಕ್ಕೆ ಕಳುಹಿಸಲಾಯಿತು. ಮರಣದಂಡನೆ ಕೊಡುವುದು ಚಕ್ರವರ್ತಿಗೆ ಸೇರಿದ ಅಧಿಕಾರ. ದೇಶದಲ್ಲಿ ಕಳ್ಳತನ ಅಥವಾ ದರೋಡೆಗಳನ್ನು ತಡೆಯುವ ಜವಾಬ್ದಾರಿ 'ಫೌಜ್‌ದಾರ್' ಎಂಬ ಇನ್ನೊಬ್ಬ ಅಧಿಕಾರಿಯದು.

ಸ್ಥಳೀಯ ನಿವಾಸಿಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ಮೂರರು ಅಥವಾ ಮೊಗಲರು; ಬನಿಯನರು ಅಥವಾ ಜೆಂಟೈಲರು; ಮತ್ತು ಪಾರ್ಸಿಗಳು. ಮೂರರು ಚಕ್ರವರ್ತಿಯ ಮತಕ್ಕೆ ಸೇರಿದವರಾದ್ದರಿಂದ ಅವರೇ ಎಲ್ಲರಿಗಿಂತ ಮೇಲು. ರಾಜ್ಯದ ದೊಡ್ಡ ದೊಡ್ಡ ಹುದ್ದೆಗಳೆಲ್ಲ ಅವರಿಗೇ ಮೀಸಲು. ಜೆಂಟೈಲರನ್ನು (ಹಿಂದೂ ಗಳನ್ನು) ಮೊಗಲನಾಗಲೀ ಮೂರರಾಗಲೀ ಮರ್ಯಾದೆಯಿಂದ ಕಾಣುವುದಿಲ್ಲ. ಕಾರಣ ಅವರ ಮತ ಬೇರೆ. ಮೂರರು ತಮಗೆ ಇಷ್ಟಬಂದಷ್ಟು ಹೆಂಗಸರನ್ನು ಇಟ್ಟುಕೊಂಡು ತಮ್ಮ ಸಂತತಿಯನ್ನು ಹೆಚ್ಚಿಸುತ್ತಿದ್ದಾರೆ. ಮದ್ಯಪಾನ ಮಾಡಬಾರದೆಂದಿದ್ದರೂ ಗುಟ್ಟಾಗಿ ಕುಡಿಯುತ್ತಾರೆ. ಊಟವನ್ನಂತೂ ಬಹು ರುಚಿಯಾಗಿ ಮಾಡಿಕೊಂಡು ಪಟ್ಟಾಗಿ ಹೊಡೆಯುತ್ತಾರೆ. ಲವಂಗ ದಾಲ್ಚಿನ್ನಿ ಮುಂತಾದ ಪೂರ್ವದೇಶದ ಸಾಂಬಾರ ವಸ್ತುಗಳನ್ನು ಉಪಯೋಗಿಸಿ 'ಪಲಾವ್' ಮುಂತಾದ ರುಚಿರುಚಿಯಾಗಿರುವ ಅಡುಗೆ ಮಾಡುತ್ತಾರೆ. ದುತ್ರ (Dutur = ದತ್ತೂರ) ಮತ್ತು ನೀರು ಸೇರಿಸಿ ಮಾಡಿದ ಪಾನೀಯವನ್ನು ಕೆಲವರು ಕುಡಿಯುವುದುಂಟು. ಇದನ್ನು ಕುಡಿದವನು ಕೂಡಲೇ ತಲೆಗೇರಿ ಹುಚ್ಚನಂತೆ ಕುಣಿದಾಡುವುದುಂಟು. ಕುಡಿದಾಗ ಅವನು ಯಾವ ಸ್ಥಿತಿ ಯಲ್ಲಿರುತ್ತಾನೋ ಆ ಸ್ಥಿತಿಯಲ್ಲಿರುತ್ತಾನೆ ಅದರ ಮತ್ತು ಇಳಿಯುವವರೆಗೆ. ಇಂಗ್ಲಿಷರೂ ಇತರ ಯೂರೋಪಿಯನರೂ ಕೆಲವು ವೇಳೆ ಇದನ್ನು ತೆಗೆದು ಕೊಳ್ಳುವುದುಂಟು.

ಅಕ್ಕಿಯಿಂದ 'ಅರಾಕ್' ತಯಾರಿಸುತ್ತಾರೆ. ಮರದಿಂದಲೂ ಮದ್ಯ ತೆಗೆಯು ತ್ತಾರೆ. ಅಂಟುಬೆಲ್ಲ, ನೀರು ಮತ್ತು ಬಬೂಲ್ (babool) ಮರದ ಚಕ್ಕೆಯಿಂದ ತಯಾರುಮಾಡಿದ 'ಅರಾಕ್'ಅನ್ನು ಜಾಗ್ರೆ ಅರಾಕ್ (Jagre arak) ಎಂದು ಕರೆಯು ತ್ತಾರೆ. ಯೂರೋಪಿಯನರೂ ಇದನ್ನು ಕುಡಿಯುತ್ತಾರೆ. ಇದನ್ನು ಡ್ರಾಮ್ ಅಳತೆ ಯಲ್ಲಿ ಅಳೆದು ಕುಡಿಯುತ್ತಾರೆ.

ತೆಂಗಿನಮರ ಮತ್ತು ಈಚಲ ಮರಗಳಿಂದ ಇಳಿಸಿದ ಮದ್ಯವನ್ನು 'ಟಾಡಿ' ಎಂದು ಕರೆಯುತ್ತಾರೆ. ಇದನ್ನು ಯೂರೋಪಿಯನರೂ ಮೂರರೂ ಧಾರಾಳವಾಗಿ ಸೇವಿಸು ತ್ತಾರೆ. ಆಗಲೇ ಉಪಯೋಗಿಸಿದ ಗಡಿಗೆಯನ್ನು ಮರಕ್ಕೆ ಕಟ್ಟಿದರೆ ೨೪ ಗಂಟೆಯೊಳಗೆ ಅದು ಹುಳಿಯಾಗುತ್ತದೆ. ಹೊಸ ಮಡಕೆಗೆ ಇಳಿಸಿದರೆ ಅದು 'ನೆರಿ' (neri = ನೀರಾ) ಆಗುತ್ತದೆ. ಯೂರೋಪಿಯನರು ಮನಸ್ಸು ಬಂದಹಾಗೆ ಕುಡಿದು ಎಲ್ಲೆಂದರಲ್ಲಿ ಬಿದ್ದು ಒದ್ದಾಡುತ್ತಾರೆ. ಅನೇಕ ಜನ ಸತ್ತುಹೋದದ್ದೂ ಉಂಟು.

ಮೊಗಲರು ಎಲ್ಲಾ ಪ್ರಾಣಿಗಳ ಮಾಂಸ ತಿನ್ನುತ್ತಾರೆ. ಆದರೆ ಹಂದಿಯನ್ನು ಮಾತ್ರ ತಿನ್ನುವುದಿಲ್ಲ. ಆದರೆ ಕೆಲವು ಉನ್ನತಸ್ಥಾನಗಳಲ್ಲಿರುವವರು ಗುಟ್ಟಾಗಿ ಹಂದಿಮಾಂಸ ವನ್ನೂ ತಿನ್ನುತ್ತಾರೆ; ಕುಡಿಯುವುದೂ ಉಂಟು. ಮೂರರಲ್ಲಿ ಕಟುಕರು ಮಾತ್ರ ಪ್ರಾಣಿಗಳನ್ನೂ ಕೊಂದು ಮಾಂಸ ಮಾರಾಟ ಮಾಡುತ್ತಾರೆ. ಇಂಡಿಯನರು (ಹಿಂದೂ

ಗಳು) ಈ ಕೆಲಸ ಮಾಡುವುದಿಲ್ಲ. ಏಕೆಂದರೆ ಅವರ ಭಾವನೆಯಲ್ಲಿ ಕಟುಕನು ಕೊಲೆ ಗಡುಕ.

ಮೂರರ ಭಾಷೆ ಇಂಡಿಯಾದ ಮೂಲನಿವಾಸಿಗಳ ಭಾಷೆಗಿಂತ ಭಿನ್ನ. ಆದರೆ ಲಿಪಿ ಮಾತ್ರ ಇಂಡಿಯನರದು ಅಥವಾ ಪರ್ಷಿಯನರದು; ಅಥವಾ ಇತರ ರಾಷ್ಟ್ರಗಳವರದು. ಆಸ್ಥಾನದ ಭಾಷೆ ಪರ್ಷಿಯನ್.

ಬ್ರಾಹ್ಮಣರ ಭಾಷೆ ಸಂಸ್ಕೃತ (Sanskrit). ಇಂಡಿಯಾದ ಜನಸಾಮಾನ್ಯರ ಬರವಣಿಗೆ ಉದ್ದುದ್ದವಾದ ಕಾಗದದ ಸುರುಳಿಗಳಲ್ಲಿರುತ್ತದೆ. ಕೆಲವು ಸುರುಳಿಗಳು ಹತ್ತು ಅಡಿ ಉದ್ದವಾಗಿವೆ, ಒಂದು ಅಡಿ ಅಗಲವಾಗಿವೆ. ಈ ಸುರುಳಿಯ ಹಾಳೆಗಳನ್ನು ಮೇಲ್ಭಾಗದಲ್ಲಿ ಹೊಲಿದಿರುತ್ತಾರೆ. ಲೇಖನಿಯು ಪುರಾತನ ಲೇಖನಿ (Calamus)ಯಂತೆಯೋ ಅಥವಾ ಲಾಳಿಕಡ್ಡಿಯಂತೆಯೋ (reed) ಇದೆ. ಇದು ಬಾತುಕೋಳಿಯ ದಪ್ಪಗರಿಯಷ್ಟು ದೊಡ್ಡದಾಗಿದೆ. ಈ ಲೇಖನಿ ಮತ್ತು ಶಾಯಿ ಎರಡನ್ನೂ ಇಡಲು ಅನುಕೂಲವಾದ ಒಂದು ಅಂಗುಲವಿರುವ ಉದ್ದನೆಯ ಹಾಗೂ ಚಚ್ಚೌಕದ ದೌತಿಮಣೆ (standishes) ಇರುತ್ತದೆ. ಇವರು ಎಡದಿಂದ ಬಲಕ್ಕಾಗಲೀ ಬಲದಿಂದ ಎಡಕ್ಕಾಗಲೀ ಅಥವಾ ಚೀಣೀಯರಂತೆ ಮೇಲಿನಿಂದ ಕೆಳಕ್ಕಾಗಲೀ ಬರೆಯದೆ ಮೇಲಿನ ಎಡಗಡೆ ಮೂಲೆಯಿಂದ ಆರಂಭಿಸಿ ಕೆಳಗಡೆ ಬಲಗಡೆಯ ಮೂಲೆಯವರೆಗೆ ಕೋರೆಯಾಗಿ ಬರೆಯುತ್ತಾರೆ. ಸಾಮಾನ್ಯವಾಗಿ ಬರೆಯುವ ಕಾಗದ ತೆಳುವಾಗಿದ್ದು ಹೊಳಪಾಗಿರುತ್ತದೆ. ಆದರೆ ಚಕ್ರವರ್ತಿಗೋ ದೊಡ್ಡ ದೊಡ್ಡವರಿಗೋ ಬರೆಯುವ ಕಾಗದವೆಲ್ಲ ಗಿಲೀಟಿನಿಂದ ಕೂಡಿರುತ್ತದೆ. ಅಲ್ಲಲ್ಲಿ ಅಲಂಕಾರಕ್ಕಾಗಿ ಹೂಗಳನ್ನು ಚಿತ್ರಿಸಿರುತ್ತಾರೆ. ಚಕ್ರವರ್ತಿಗೂ ದೊಡ್ಡ ದೊಡ್ಡವರಿಗೂ ಬರೆದ ಕಾಗದಗಳನ್ನು ಒಂದು ಅಡಿ ಉದ್ದದ ಬಿದಿರಿನ ಕೊಳವೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಮೊಹರು ಮಾಡುತ್ತಾರೆ. ಈ ಕಾರಣ ಎಷ್ಟು ದೂರ ಸಾಗಿಸಿದರೂ ಎಷ್ಟೇ ಜನ ಮುಟ್ಟಿದರೂ ಒಳಗಿರುವ ಕಾಗದ ಮಳೆ ಧೂಳುಗಳಿಂದ ಕೆಡುವುದಿಲ್ಲ. ಈ ವಿಧಾನ ನಾವು ನಮ್ಮಲ್ಲಿ ಕಾಗದಗಳನ್ನು ಲಕೋಟೆಗಳಲ್ಲಿ ಹಾಕಿ ಕಳುಹಿಸುವ ಮರ್ಯಾದೆಯಂತಿದೆ.

ಇಲ್ಲಿಯವರು ನಮ್ಮಲ್ಲಿರುವಂತೆ ಟಪಾಲನ್ನು ಅತ್ಯಂತ ಜಾಗ್ರತೆಯಾಗಿ ಕಳುಹಿಸುವ ವಿಧಾನ ಅನುಸರಿಸುತ್ತಿಲ್ಲ. ಅದರ ಬದಲು ಎಷ್ಟೇ ದೂರಕ್ಕೆ ಕಳುಹಿಸಬೇಕಾದರೂ ಒಬ್ಬ ದೂತನನ್ನು ಕಳುಹಿಸುತ್ತಾರೆ. ಉದಾಹರಣೆಗೆ ಸೂರತ್ತಿನಿಂದ ಇಂಗ್ಲಿಷರು ಬಂಗಾಳಕ್ಕೋ ಮದ್ರಾಸಿಗೋ ಸುದ್ದಿ ಕಳುಹಿಸಬೇಕಾದಾಗ ಅದಕ್ಕೋಸ್ಕರವೇ ಒಬ್ಬ ಮನುಷ್ಯನನ್ನು ಕಳುಹಿಸಿಕೊಡಬೇಕಾಗುತ್ತದೆ. ಅಲ್ಲದೆ ಇವರು ನಮ್ಮಲ್ಲಿರುವಂತಹ ಮುದ್ರಣದ ಸೌಕರ್ಯವನ್ನು ಅನುಸರಿಸುತ್ತಾ ಇಲ್ಲ. ಹಾಗೆ ಮಾಡಿದರೆ ಬರವಣಿಗೆಗಾಗಿ ಇರುವ ಅಸಂಖ್ಯಾತ ಸಂಸಾರಗಳ ಬಾಯಿಗೆ ಮಣ್ಣು ಹಾಕಿದಂತಾಗುತ್ತದೆ. ಆದರೂ ಇವರು

ಕೊಂಚಮಟ್ಟಿಗೆ ಪುಸ್ತಕಗಳಿಗೆ ರಟ್ಟುಹಾಕುವ ಇಂಗ್ಲಿಷರ ವಿಧಾನವನ್ನು ಅನುಸರಿಸ ಬಹುದೆಂದು ಕಾಣುತ್ತದೆ. ತಮ್ಮ ಭಾಷೆಯನ್ನಾಗಲೀ ಶೈಲಿಯನ್ನಾಗಲೀ ಉತ್ತಮ ಪಡಿಸುವುದನ್ನು ಬಲ್ಲಂತಹ ಪಂಡಿತರು ಇಂಡಿಯನರಲ್ಲಿ ಇಲ್ಲ. ಹೀಗಾಗಿ ಬಹು ಪುರಾತನ ಕಾಲದಿಂದ ಬಂದಂತಹ ಭಾಷೆ ಬದಲಾವಣೆ ಆಗದೆ ಹಾಗೆಯೇ ಉಳಿದು ಬಿಟ್ಟಿದೆ. ಆದರೆ ಯುರೋಪಿನಲ್ಲಿ ಹಾಗಲ್ಲ. ಅಲ್ಲಿ ಪರಭಾಷೆಯ ಪದಗಳನ್ನು ತಮ್ಮ ಭಾಷೆಯಲ್ಲಿ ಸೇರಿಸಿಕೊಂಡು ನುಡಿಯ ಸೊಗಸನ್ನು ಹೆಚ್ಚಿಸಿಕೊಳ್ಳುತ್ತಾರೆ. ಜರ್ಮನ್ ಭಾಷೆಯಲ್ಲಿ ಈ ಕೆಲಸ ಹೆಚ್ಚು ನಡೆಯುತ್ತಿದೆ. ಈ ಕೆಲಸಕ್ಕಾಗಿ ಚಕ್ರವರ್ತಿ ಸ್ವಾನ್–ಸೊಸೈಟಿ (Swan-Society) ಎಂಬ ಸಂಸ್ಥೆಯನ್ನೇ ಸ್ಥಾಪಿಸಿದ್ದಾನೆ. ಇದನ್ನು ನನಗೆ ಡಾ॥ ಕೆಂಫೈರ್ (Dr. Kemphire) ಎಂಬ ಪ್ರವಾಸಿ ಹಾಗೂ ಜರ್ಮನ್ ವೈದ್ಯ ಹೇಳಿದನು. ಆದರೆ ಅವನೇ ಹೇಳಿದ, ಮೂಲ ಜರ್ಮನ್ ಭಾಷೆಯಲ್ಲಿ ಇಲ್ಲದ ಮತ್ತು ಬೇರೆ ಭಾಷೆ ಯಿಂದ ಬಂದ ಪದಗಳನ್ನು ತೆಗೆದುಹಾಕಿ ತಮ್ಮ ಮಾತೃಭಾಷೆಯು ಎಷ್ಟೇ ಸುತ್ತುಸುತ್ತಾ ದರೂ ಅದನ್ನೇ ಉಳಿಸಿಕೊಳ್ಳುವ ಪ್ರಯತ್ನ ಮಾಡಲಾಗುತ್ತಿದೆ ಎಂದು. ಆದರೆ ಇದು ಸರಿಯಲ್ಲ ಎಂದು ನನಗೆ ಅನ್ನಿಸುತ್ತಿದೆ. ಭಾಷೆ ನಮ್ಮ ಮನಸ್ಸಿನ ಭಾವನೆಗಳನ್ನು ಇನ್ನೊಬ್ಬರಿಗೆ ತಿಳಿಸುವ ವಿಧಾನವಾಗಿರುವುದರಿಂದ ಅದು ತನ್ನ ಪದಸಂಪತ್ತನ್ನು ಹೆಚ್ಚಿಸಿ ಕೊಳ್ಳುವುದು ಒಳ್ಳೆಯದು ಎಂದು ನನ್ನ ಅಭಿಪ್ರಾಯ.

ಇಂಡಿಯಾದಲ್ಲಿ 'ಛಾಪ್' (chop) ಅಂದರೆ ಮುದ್ರೆ ಹಾಕಲು ಚಿನ್ನ, ಬೆಳ್ಳಿ ಅಥವಾ ಕೆಂಪು ಪ್ರಶಸ್ತ ಶಿಲೆಯ ಮೇಲೆ ತಮ್ಮ ಹೆಸರನ್ನು ಕೆತ್ತಿಸಿದ ಅಕ್ಷರಗಳ ಅಚ್ಚನ್ನು ಉಪಯೋಗಿಸುತ್ತಾರೆ. ಲಾಂಛನಗಳನ್ನು ಉಪಯೋಗಿಸುವುದಿಲ್ಲ. ಏಕೆಂದರೆ ಯಾರಿಗೂ ಅವನ್ನು ಉಪಯೋಗಿಸುವ ಅಧಿಕಾರವಿಲ್ಲ. ಯಾರಿಗೂ ವಂಶಪಾರಂಪರ್ಯವಾದ ಹಕ್ಕುಬಾಧ್ಯತೆಗಳಿಲ್ಲ. ಎಲ್ಲವೂ ಮೊಗಲ್ ಚಕ್ರವರ್ತಿಗೆ ಸೇರಿದ್ದಾಗಿವೆ. ಒಬ್ಬನನ್ನು ಶ್ರೀಮಂತನನ್ನಾಗಿ ಮಾಡುವುದು ಅಥವಾ ಬೆಳಕು ಹರಿದರೆ ಅವನನ್ನು ಬೀದಿಯ ಭಿಕಾರಿಯಾಗಿ ಮಾಡುವುದು ಅವನಿಗೆ ಸೇರಿದ ಅಧಿಕಾರ. ಯಾರು ಸತ್ತರೂ ಅವನದ್ದೆಲ್ಲ ಚಕ್ರವರ್ತಿಯದು.

ಮೂರರು ಗಾಳಿ ಸವಾರಿಗೊ ಪ್ರಯಾಣಕ್ಕೊ ಹೊರಟರೆ ಪರ್ಷಿಯಾ ಅಥವಾ ಅರೇಬಿಯಾದಿಂದ ತರಿಸಿದ ಕುದುರೆಗಳನ್ನು ಉಪಯೋಗಿಸುತ್ತಾರೆ. ಸಣ್ಣಪುಟ್ಟ ಕುದುರೆಗಳ ಬೆಲೆ ಸಾವಿರಾರು ರೂಪಾಯಿ. ಕುದುರೆಗಳಿಗೆ ಲಾಳಕಟ್ಟುವುದು ಇವರಿಗೆ ಗೊತ್ತಿಲ್ಲ. ಹೇಗೇಗೋ ಲಾಳ ಕಟ್ಟುವ ಕಾರಣ ಸ್ವಲ್ಪದೂರ ಪ್ರಯಾಣ ಮಾಡಿದರೆ ಸಾಕು ಗೊರಸುಗಳು ಸವೆದುಹೋಗುತ್ತವೆ. ಸಾಮಾನ್ಯ ಜನರಿಗೆ ಇಂತಹ ಕುದುರೆಗಳನ್ನು ಹತ್ತುವ ಯೋಗ್ಯತೆ ಇಲ್ಲ. ಅವರು ಸಣ್ಣಪುಟ್ಟ ಎತ್ತುಗಳನ್ನು ಉಪಯೋಗಿಸುತ್ತಾರೆ. ಇವುಗಳ ಮೇಲೆ ಮೆತ್ತನೆಯ ತಡಿಹಾಕಿ ಕುಳಿತು ಮೂಗುದಾರಕ್ಕೆ ಉದ್ದನೆಯ ಹಗ್ಗ ಕಟ್ಟಿ ಮೇಲೆ ಕುಳಿತು ಎಷ್ಟು ದೂರ ಬೇಕಾದರೂ ಕುಲುಕೋಟದಲ್ಲಿ ಪ್ರಯಾಣ

ಮಾಡುತ್ತಾರೆ. ಎರಡು ಚಕ್ರದ ಗಾಡಿಗಳನ್ನು ಎಳೆಯುವುದಕ್ಕೆ ಎತ್ತುಗಳನ್ನು ಉಪಯೋಗಿಸುತ್ತಾರೆ. ಈ ಎತ್ತುಗಳ ಮತ್ತು ಕೋಣಗಳ ಮುಂದಿನ ಚಪ್ಪೆಯ ಮೇಲೆ ಐದಾರು ಅಂಗುಲ ಎತ್ತರದ ಹಿಳಿಲು ಇರುತ್ತದೆ. ಇದು ತಿನ್ನಲು ಬಹು ರುಚಿ. ಪಲಾವ್ ಮಾಡಿದರಂತೂ ಇನ್ನೂ ರುಚಿ. ಎಮ್ಮೆ ಕೋಣಗಳನ್ನು ಸಾಮಾನ್ಯವಾಗಿ ಗಾಡಿಗೆ ಕಟ್ಟುವುದಿಲ್ಲ. ಅವನ್ನು ಕೆರೆಕಟ್ಟೆಗಳಿಂದ ತಿತ್ತಿಗಳಲ್ಲಿ ನೀರು ಹೇರಲು ಉಪಯೋಗಿಸುತ್ತಾರೆ. ಉಳುವ ಎತ್ತುಗಳಿಗೆ ಅಲಂಕಾರ ಮಾಡುವುದಿಲ್ಲ. ಆದರೆ ಅವುಗಳ ಕೊಂಬುಗಳನ್ನು ಹಿತ್ತಾಳೆ ಅಥವಾ ಬೆಳ್ಳಿಯ ಮೂರು ನಾಲ್ಕು ಅಂಗುಲ ಇರುವ ಕೋಡಣಸುಗಳಿಂದ ಅಲಂಕಾರ ಮಾಡುತ್ತಾರೆ. ಅಣಸುಗಳಿಗೆ ಬೆಳ್ಳಿಯಿಂದ ಮಾಡಿದ ಉದ್ದನೆಯ ಸರಪಳಿಗಳನ್ನು ಇಳಿಯಬಿಟ್ಟು ಅವನ್ನು ತಲೆಯ ಮಧ್ಯೆ ಕಟ್ಟುತ್ತಾರೆ. ಗಾಡಿಗಳಲ್ಲಿ ಬೋಳು ಗಾಡಿಗಳೂ ಉಂಟು, ಕಮಾನುಗಾಡಿಗಳೂ ಉಂಟು.

ಅನುಕೂಲಸ್ಥರು ಪಲ್ಲಕ್ಕಿಗಳಲ್ಲಿ ಓಡಾಡುತ್ತಾರೆ. ಇವನ್ನು ಸರದಿಯ ಮೇಲೆ ನಾಲ್ಕಾರು ಜನ ಹೊತ್ತು ದಿನಕ್ಕೆ ೨೦–೩೦ ಮೈಲಿ ದಾರಿ ಸಾಗಬಲ್ಲರು. ಶ್ರೀಮಂತರು ಪಲ್ಲಕ್ಕಿಗಳಲ್ಲೋ ಸವಾರಿಗಾಡಿಗಳಲ್ಲೋ ಹೋಗಿ ತಪತಿ ನದಿಯ ದಡದಲ್ಲಿ ಅಥವಾ ಕೆರೆಕಟ್ಟೆಗಳ ದಡದಲ್ಲಿ ನಿರ್ಮಿಸಿರುವ ವಿಹಾರ ಕುಂಜಗಳಲ್ಲಿ ತಂಗಿ ಆರಾಮವಾಗಿ ಕಾಲ ಕಳೆಯುತ್ತಾರೆ. ಇವರನ್ನು ತಮ್ಮ ಹಾವಭಾವಗಳಿಂದ ಮನವೊಲಿಸಿ ಬೇಕಾದ ಸುಖ ಸಂತೋಷಗಳನ್ನು ನೀಡಿ ಹಣ ಕಸಿಯಲು ಬಹು ರೂಪವತಿಯರಾದ ನರ್ತಕಿಯರು ಸಿದ್ಧರಾಗಿರುತ್ತಾರೆ. ಹೆಸರಾದ ಒಬ್ಬ ವ್ಯಕ್ತಿ ಇಂಥವರ ಬಲೆಗೆ ಬಿದ್ದು ತನ್ನ ಆಸ್ತಿಪಾಸ್ತಿಗಳನ್ನೂ ಪ್ರಾಣವನ್ನೂ ಕಳೆದುಕೊಂಡ. ಈ ನರ್ತಕಿಯರ ಮೋಹದ ಬಲೆಗೆ ಎಂತಹ ಕಟ್ಟುನಿಟ್ಟಾದ ಯೂರೋಪಿಯನರೂ ಬೀಳದೆ ಇರುವುದಿಲ್ಲ.

ಬಗೆಬಗೆಯ ಜಾದೂ ಮಾಡುವ ಜನ ಇದ್ದಾರೆ. ದಾರದ ಉಂಡೆಯನ್ನು ಮೇಲೆಸೆದು ಅದು ಬಿಚ್ಚಿಕೊಳ್ಳುವಂತೆ ಮಾಡಿ ಅದರ ಮೇಲೆ ಸಲೀಸಾಗಿ ಹತ್ತಿ ಅಲ್ಲಿಂದ ಧೊಪ್ಪೆಂದು ಕೆಳಗೆ ಬೀಳುತ್ತಾರೆ. ಬಿದ್ದಾಗ ಅವರ ಅಂಗಾಂಗಗಳೆಲ್ಲ ಬೇರೆಬೇರೆಯಾಗುತ್ತವೆ. ಮತ್ತೆ ಅವನ್ನು ಜೋಡಿಸುತ್ತಾರೆ. ಕೆಲವರು ಒಂದೆರಡು ಗಂಟೆಗಳ ಅವಧಿಯಲ್ಲಿ ಹಣ್ಣು ಬಿಟ್ಟ ಮಾವಿನ ಗಿಡಗಳನ್ನು ಸೃಷ್ಟಿಮಾಡಬಲ್ಲರಂತೆ. ಹಣ್ಣನ್ನು ತೆಗೆದುಕೊಂಡವನೊಬ್ಬ ಅದನ್ನು ಹಿಂದಿರುಗಿಸುವವರೆಗೆ ಅವನಿಗೆ ಹೇಗೇಗೊ ಆಯಿತೆಂದು ತಿಳಿಸಿದನು. ಹಾವಾಡಿಗರು ಎಲ್ಲೆಲ್ಲೂ ಇದ್ದಾರೆ. ನಮ್ಮ ಫ್ಯಾಕ್ಟೊರಿ ಮನೆಗೆ ಪಳಗಿಸಿದ ಹಾವೊಂದನ್ನು ತಂದಿದ್ದೆವು. ಅದು ಇಡೀ ಒಂದು ಕೋಳಿಯನ್ನು ನುಂಗಿ ೩ಳ ಗಂಟೆಗಳೊಳಗೆ ರೆಕ್ಕೆ ಪುಕ್ಕ ಸಮೇತ ಎಲ್ಲವನ್ನೂ ಜೀರ್ಣಿಸಿಕೊಂಡುಬಿಟ್ಟಿತು. ಎಲ್ಲೆಲ್ಲೂ ಹಾವುಗಳೆ. ನನ್ನ ಸೇವಕನೊಬ್ಬ—ಆತನ ಹೆಸರು ಜಮಾಲ್ ಎಂದು—ಮಳೆಬಿದ್ದಾಗ ಹುಲ್ಲಿನ ಮೇಲೆ ತಿರುಗಾಡುತ್ತಿದ್ದಾಗ ಒಂದು ವಿಷಸರ್ಪ ಕಚ್ಚಿಬಿಟ್ಟಿತು. ಸ್ವಲ್ಪ ಹೊತ್ತಿನಲ್ಲೇ ಆತ ಪ್ರಜ್ಞೆತಪ್ಪಿ ಬಿದ್ದುಬಿಟ್ಟ. ಕೂಡಲೇ ಒಬ್ಬ ಇಂಗ್ಲಿಷ್ ವರ್ತಕ ಬಂದು ಸರ್ಪಮಣಿ

ಉಪಯೋಗಿಸಿ ಅವನಿಗೆ ಮತ್ತೆ ಪ್ರಾಣಬರುವಂತೆ ಮಾಡಿದ. ಈ ಸರ್ಪಮಣಿಯನ್ನು ಯಾವುದೋ ಬೇರುಗಳನ್ನು ಸುಟ್ಟು ಬೂದಿಮಾಡಿ ಆ ಬೂದಿಯನ್ನು ದಿಯು ದ್ವೀಪದಲ್ಲಿ ಸಿಕ್ಕುವ ಒಂದು ಬಗೆಯ ಮಣ್ಣಿನೊಡನೆ ಬೆರೆಸಿ ತಯಾರಿಸುತ್ತಾರೆ. ಈ ಮಣಿ ಚಪ್ಪಟೆಯಾಗಿರುತ್ತದೆ. ಮಧ್ಯೆ ಮಾತ್ರ ಸ್ವಲ್ಪ ಉಬ್ಬು ಇರುತ್ತದೆ. ಬೂದು ಬಣ್ಣಕ್ಕಿರುತ್ತದೆ. ಬೆಂಕಿಯಲ್ಲಿ ಸುಡುವುದರಿಂದ ಬೂದು ಬಣ್ಣ ಬರುತ್ತದೆ. ಈ ಮಣಿಯನ್ನು ಹಾವು ಕಚ್ಚಿದ ಸ್ಥಳಕ್ಕೆ ಇಟ್ಟರೆ ಅದು ಹಾಗೆಯೇ ಕಚ್ಚಿಕೊಂಡು ವಿಷ ಹೀರಿಕೊಳ್ಳುತ್ತದೆ. ಆಮೇಲೆ ಅದು ರಕ್ತ ಕುಡಿದು ಹೊಟ್ಟೆ ತುಂಬಿಸಿಕೊಂಡ ಜಿಗಳೆಯಂತೆ ಬಿದ್ದುಹೋಗುತ್ತದೆ. ಮತ್ತೆ ಆ ಮಣಿಯನ್ನು ಉಪಯೋಗಿಸಬಹುದು. ಈ ಸರ್ಪಮಣಿ ನಿಜವಾದುದೇ ಅಥವಾ ಖೋಟಾ ಆದುದೇ ಎಂದು ತಿಳಿದುಕೊಳ್ಳಬೇಕಾದರೆ ಎರಡು ವಿಧಾನಗಳುಂಟು. ಬಾಯಿಯ ಅಂಗಳಿಗೆ ತಗುಲಿಸಿದಾಗ ಭದ್ರವಾಗಿ ಅಂಟಿಕೊಂಡರೆ ಅದು ನಿಜವಾದ ಮಣಿ. ಬಿದ್ದುಹೋದರೆ ಅಲ್ಲ. ಇನ್ನೊಂದು ವಿಧಾನ ಎಂದರೆ ಅದನ್ನು ನೀರಿನಲ್ಲಿ ಹಾಕಿದಾಗ ಸ್ವಲ್ಪಹೊತ್ತಿನಲ್ಲಿ ಗುಳ್ಳೆಗಳು ಬಂದರೆ ಅದು ನಿಜವಾದ ಮಣಿ. ಇಲ್ಲದಿದ್ದರೆ ಖೋಟಾ. ಯುರೋಪಿಯನರು ಇಂತಹ ಸರ್ಪಮಣಿಗಳನ್ನು ಹೃದಯದಾಕಾರದ ಚಿನ್ನದ ಪದಕಕ್ಕೆ ಸೇರಿಸಿ ಹಾರವನ್ನು ಕೊರಳಿಗೆ ನೇತು ಹಾಕಿಕೊಳ್ಳುತ್ತಾರೆ.

ಬೆಂಕಿಯ ಕೆಂಡವನ್ನು ಹಾವು ಕಚ್ಚಿದ ಕಡೆಗೆ ಇಟ್ಟರೂ ಅದು ವಿಷವನ್ನು ನಿವಾರಣೆ ಮಾಡಬಲ್ಲದಂತೆ. ಇಂಡಿಯಾದಲ್ಲಿ ಎಲ್ಲೆಲ್ಲೂ ವಿಷಜಂತುಗಳಿರುವಂತೆ ಅವುಗಳ ವಿಷದಿಂದ ಪಾರಾಗಲೂ ಔಷಧಿಗಳಿವೆ. ವಿಷಪೂರಿತ ನಾರುಬೇರುಗಳಲ್ಲದೆ ಬೆಲ್ಲವನ್ನು (sugar) ೩೦ ವರ್ಷಗಳ ಕಾಲ ಇಟ್ಟರೆ ಅದೂ ವಿಷವಾಗುವುದಂತೆ. ಈ ವಿಷಗಳ ನಿವಾರಣೆಗೆ ಮಾಲ್ದೀವ್ ತೆಂಗಿನಕಾಯಿ (Maldive coconut) ಸಿದ್ಧೌಷಧವಂತೆ. ಆ ಕಾಯಿಯ ಹಾಲನ್ನು ಮೂರು ನಾಲ್ಕು ಸಲ ಕುಡಿಸಿದರೆ ಹೊಟ್ಟೆಯೊಳಗಿರುವ ವಿಷವನ್ನು ವಾಂತಿ ಮಾಡಿಸಿಬಿಡುತ್ತದೆಯೆಂದು ಹೇಳುತ್ತಾರೆ. ಅಲ್ಲದೆ ಇದು ಸಲೀಸಾಗಿ ಹೆರಿಗೆಯಾಗಲೂ ಅನುಕೂಲಮಾಡುತ್ತದೆ. ಜ್ವರ ಮುಂತಾದ ಕಾಯಿಲೆಗಳನ್ನೂ ಇದು ವಾಸಿಮಾಡುತ್ತದೆ. ಮಾಲ್ದೀವ್ ತೆಂಗಿನಕಾಯನ್ನು ತವರ್ಕೆರೆ (tavarcare) ಎಂದು ಕರೆಯುತ್ತಾರೆ. 'ಮಾಲ್ದೀವ್ ಕಾಯಿ' ಎಂದು ಹೆಸರು ಪಡೆದಿದ್ದರೂ ಅದು ಇಂಡಿಯಾದಲ್ಲಿಯೂ ಬೆಳೆಯುತ್ತದೆ. ಈ ಕಾಯನ್ನು ತುರಿದು ಅದನ್ನು ಹಿಂಡಿ ನಾಲ್ಕೈದು ಚಮಚದಷ್ಟು ಹಾಲು ತೆಗೆದು ಅದರಲ್ಲಿ ಘೇಂಡಾಮೃಗದ ಕೊಂಬನ್ನು ತೇಯ್ದು ಕುಡಿಸಿದರೆ ಶರೀರದಲ್ಲಿ ವ್ಯಾಪಿಸಿಕೊಂಡ ವಿಷವನ್ನೆಲ್ಲಾ ಹೊರಗೆ ಹಾಕಿಬಿಡುತ್ತದೆ. ಘೇಂಡಾಮೃಗದ ಕೊಂಬು ವಿಷಾಪಹಾರಿ ಎಂದು ಇಂಡಿಯಾದಲ್ಲೆಲ್ಲ ಪ್ರಸಿದ್ಧಿಯಾಗಿದೆ. ಇದಕ್ಕೆಷ್ಟು ಬೆಲೆ ಎಂದರೆ, ನಮ್ಮ ಹಿಂದಿನ ಇಂಗ್ಲಿಷ್ ಪ್ರೆಸಿಡೆಂಟರು ತಮ್ಮ ಬಳಿ ಇದ್ದ ಕೊಂಬಿನ ಬಟ್ಟಲೊಂದನ್ನು ಅಷ್ಟೇ ತೂಕದ ಬೆಳ್ಳಿಯ ಬಟ್ಟಲೊಂದಕ್ಕೆ ಅದಲುಬದಲು ಮಾಡಿಕೊಂಡರು.

ಇಲ್ಲಿಯ ಬಿಸಿ ಹವೆಯು ಕಾರಣ ಜನರು ಪ್ಮೈಬೆವರುವಂತಹ ಆಟಪಾಟಗಳನ್ನು ಆಡುವುದಿಲ್ಲ. ಅದರ ಬದಲು ಮನೆಯಲ್ಲೋ ಅಥವಾ ಮರಗಳ ನೆರಳಲ್ಲೋ ಕುಳಿತು ಚದುರಂಗದಾಟ ಆಡುತ್ತಾರೆ. ಪಂಥಗಿಂಥ ಒಡ್ಡುವ ಗೋಜಿಗೆ ಹೋಗುವುದಿಲ್ಲ. ಜಪಾನ್‌ನಲ್ಲಿಯೂ ಹೀಗೆಯೇ. ಅಲ್ಲಿ ಹಣ ಇಟ್ಟು ಜೂಜಾಡಿದರೆ ಮರಣದಂಡನೆ ವಿಧಿಸುತ್ತಾರೆ. ಆದರೆ ಸಯಾಂ ದೇಶದಲ್ಲಿ ಪಂಥ ಕಟ್ಟಿ ಆಡುವುದು ಸಾಮಾನ್ಯ. ಹೀಗಾಗಿ ಅಲ್ಲಿ ಆಸ್ತಿಪಾಸ್ತಿಗಳನ್ನಷ್ಟೇ ಅಲ್ಲ ಹೆಂಡತಿ ಮಕ್ಕಳನ್ನೂ ತಮ್ಮನ್ನೂ ಪಣ ಒಡ್ಡಿ ಕಳೆದುಕೊಂಡದ್ದುಂಟು.

ಕಾಡುಗಳಲ್ಲಿ ಬೇಟೆಯಾಡಬಹುದಾದ ಪ್ರಾಣಿಗಳು ತುಂಬಿವೆ. ಹೀಗಾಗಿ ನಮ್ಮ ಇಂಗ್ಲಿಷ್ ಫ್ಯಾಕ್ಟೊರಿಗಳಲ್ಲಿ, ಅದರಲ್ಲಿಯೂ ಕಾರವಾರದ ಫ್ಯಾಕ್ಟೊರಿಯಲ್ಲಿ ಜಿಂಕೆ, ಚಿಗರಿ, ನವಿಲು, ಕಾಡುಕೋಣ, ಕಾಡೆಮ್ಮೆ ಮುಂತಾದ ಪ್ರಾಣಿಗಳಿಂದ ತಯಾರಿಸಿದ ನಿತ್ಯೋಪಯೋಗಿ ಪೀಠೋಪಕರಣಗಳು ತುಂಬಿವೆ. ಹಣದ ಖರ್ಚಿಲ್ಲದೆ ಒಂದಿಷ್ಟು ಮದ್ದು ಮತ್ತು ಕೋವಿ ಕೊಟ್ಟರೆ ಸಾಕು ಪ್ಯೂನ್‌ಗಳು ಅವನ್ನು ಹೊಡೆದು ತಂದುಕೊಡುತ್ತಾರೆ. ಸೂರತ್ತಿನಲ್ಲಿ ಇಂತಹ ಪ್ರಾಣಿಗಳು ಅಷ್ಟಿಲ್ಲ. ಆದರೂ ಮೊಲ, ನವಿಲು, ಜಿಂಕೆ ಮತ್ತು ಚಿಗರಿಗಳನ್ನು ಸುಲಭ ಬೆಲೆಗೆ ಮಾರುತ್ತಾರೆ. ಬಂಗಾಳದಲ್ಲಿರುವಷ್ಟು ಅಗ್ಗವಾಗಿ ಇಲ್ಲಿ ಆಹಾರದ ಸಾಮಗ್ರಿಗಳು ಸಿಕ್ಕುವುದಿಲ್ಲ. ಅಲ್ಲಿ ಒಂದು ರೂಪಾಯಿಗೆ ೪೦ ಕೋಳಿ ಅಥವಾ ೧೫ ಬಾತು ಸಿಕ್ಕುತ್ತವೆ.

ಇಲ್ಲಿ ಬೀದಿನಾಯಿಗಳನ್ನು ಬಿಟ್ಟರೆ ನಮ್ಮ ಯೂರೋಪಿಯನ್ ತಳಿಯ ನಾಯಿಗಳೇ ಇಲ್ಲ. ಸ್ಪ್ಯಾನಿಯಲ್ ನಾಯೊಂದು ತಪತಿ ನದಿಯಲ್ಲಿ ಬಾತುಕೋಳಿಯನ್ನು ಅಟ್ಟಿಸಿಕೊಂಡು ಹೋದರೆ ಸಾಕು, ಇಡೀ ನಗರವೇ ಅದನ್ನು ನೋಡಲು ಬರುತ್ತದೆ. ಆದರೆ ಅವು ಇಲ್ಲಿಯ ಹವೆ ತಡೆಯಲಾರದೆ ಹೆಚ್ಚು ಕಾಲ ಬದುಕುವುದಿಲ್ಲ. ಅಥವಾ ಒಂದೆರಡು ಸಲ ಮರಿ ಹಾಕಿದರೆ ತಳಿ ಕೆಟ್ಟುಹೋಗುತ್ತದೆ. ಐರ್ಲಾಂಡಿನ ತೋಳ–ನಾಯಿಗಳನ್ನು (Wolf dog) ಪರ್ಷಿಯಾದಲ್ಲಿ ತುಂಬಾ ಖಾಯಿಷ್ ಮಾಡುತ್ತಾರೆ. ನಾನು ಇಂಡಿಯಾಕ್ಕೆ ಬರುವಾಗ ಇಂತಹ ಎರಡು ನಾಯಿಗಳನ್ನು ತಂದು ಈಸ್ಟ್ ಇಂಡಿಯಾ ಕಂಪನಿಗೆ ಮಾರಿದೆ. ಅವನ್ನು ಕಂಪೆನಿಯು ಇಂಡೀಸಿನ ಚಕ್ರವರ್ತಿಗೆ ಬಹುಮಾನವಾಗಿ ಕಳುಹಿಸಿಕೊಟ್ಟಿತು.

ಒಂದು ಇಂಗ್ಲಿಷ್ ಮಾಸ್ತಿಫ್ (Mastiff) ನಾಯಿಯ ಬಗ್ಗೆ ಒಬ್ಬ ಅಮೀರನಿಗೂ ಇನ್ನೊಬ್ಬ ಅಮೀರನಿಗೂ ಬಾರಿ ಜಗಳವೇ ಆಯಿತು. ಒಂದೊಂದು ಕಡೆ ಆರುನೂರು ಜನ ಜಗಳಕ್ಕೆ ನಿಂತರು. ಕೊನೆಗೆ ಅವರ ವಿವಾದವನ್ನು ಪರಿಹರಿಸಲು ಇಂಗ್ಲಿಷ್ ಪ್ರೆಸಿಡೆಂಟ್‌ನನ್ನು ಕೇಳಿಕೊಳ್ಳಲಾಯಿತು. ಆತ ವಿಚಾರಣೆ ನಡೆಸಿ ನಿಜವಾದ ಮಾಲೀಕರಿಗೆ ಅದನ್ನು ಕೊಡಿಸಿದ.

ಮೂರರು ತಮ್ಮ ವಿಹಾರಕ್ಕಾಗಿ ಬಗೆಬಗೆಯ ಬೇಟೆ ವಿಧಾನಗಳನ್ನು ಕಂಡುಹಿಡಿದಿದ್ದಾರೆ. ಬೇಟೆನಾಯಿಗಳಿಲ್ಲದ ಕಾರಣ ಜಿಂಕೆ ಮತ್ತು ಚಿಗರಿಗಳನ್ನೂ ಬೇಟೆಯಾಡಲು

ಗಿಡಗಗಳನ್ನೂ ಉಪಯೋಗಿಸುತ್ತಾರೆ. ಪರ್ಷಿಯಾದಲ್ಲಿ ಪಳಗಿಸಿದ ಗಿಡಗಗಳನ್ನು ಇಲ್ಲಿಗೆ ತರಿಸಿ ಸಾಕುತ್ತಾರೆ. ಒಂದು ಕೃತಕ ಜಿಂಕೆಯ ಮೂತಿಗೆ ಮಾಂಸದ ತುಂಡುಗಳನ್ನು ಭದ್ರವಾಗಿ ಕಟ್ಟುತ್ತಾರೆ. ಹಾಗೆ ಮಾಡಿ ಹಸಿದ ಗಿಡಗವನ್ನು ಹಾರಿಸುತ್ತಾರೆ. ಅದು ಜಿಂಕೆಯ ಮೂತಿಯಲ್ಲಿರುವ ಮಾಂಸವನ್ನು ಕಿತ್ತು ತಿನ್ನುತ್ತದೆ. ಹೀಗೆ ರೂಢಿಯಾದ ಗಿಡಗಗಳನ್ನು ಜಿಂಕೆಗಳಿರುವ ಕಡೆ ತೆಗೆದುಕೊಂಡುಹೋಗಿ ಹಾರಿಸುತ್ತಾರೆ. ಅದು ಆಗಲೇ ರೂಢಿಯಾದಂತೆ ಜಿಂಕೆಯ ಮೂತಿಯಮೇಲೆ ಕುಳಿತು ಪಟಪಟನೆ ರೆಕ್ಕೆಗಳನ್ನು ಬಡಿಯುತ್ತಾ ಕುಕ್ಕುತ್ತದೆ. ಗಿಡಗದ ರೆಕ್ಕೆಗಳ ಬಡಿತದಿಂದಾಗಿ ಜಿಂಕೆ ದಿಕ್ಕೆಟ್ಟುಹೋಗಿ ಬಿಡುತ್ತದೆ. ಆಗ ಬೇಟೆಗಾರರೂ ನಾಯಿಗಳೂ ಅದನ್ನು ಮುತ್ತಿ ಹಿಡಿದುಕೊಳ್ಳುತ್ತವೆ. ಅಕಸ್ಮಾತ್ ಗಿಡಗ ಸೋತರೆ ಮತ್ತೊಂದು ಜಿಂಕೆಯ ಮೇಲೆ ಎರಗುತ್ತದೆ. ಪಕ್ಷಿಗಳ ಬೇಟೆ ಆಡಲು ಹೊಸ ವಿಧಾನವೊಂದನ್ನು ಕಂಡುಹಿಡಿದಿದ್ದಾರೆ. ಅದಕ್ಕೋಸ್ಕರವೇ ಸಾಕಿದ ಎತ್ತುಗಳ ಮರೆಯಲ್ಲಿ ಹೋಗಿ ಮೂರನೊಬ್ಬ ಐದಾರು ಬಾತುಗಳನ್ನು ಬಂದೂಕಿನಿಂದ ಕೊಂದದ್ದನ್ನು ನಾನು ನೋಡಿದ್ದೇನೆ. ಕೆಲವು ಜನ ಈ ತರಹ ಬೇಟೆ ಯಿಂದಲೇ ತಮ್ಮ ಜೀವನ ಸಾಗಿಸುತ್ತಾರೆ.

ಕಾಡುಕೋಳಿಗಳನ್ನು ಹಿಡಿಯಲು ಇನ್ನೊಂದು ಉಪಾಯ ಅನುಸರಿಸುತ್ತಾರೆ. ಮರದ ಕೊಂಬೆರೆಂಬೆಗಳನ್ನು ಕೈಯಲ್ಲಿ ಹಿಡಿದು ಮರೆಮಾಡಿಕೊಂಡ ಮನುಷ್ಯನೊಬ್ಬ ಕೋಳಿಗಳಿರುವ ಕಡೆ ನಿಧಾನವಾಗಿ ಸಾಗುತ್ತಾನೆ. ಮನುಷ್ಯ ಬರುತ್ತಿದ್ದಾನೆಂದು ಕೋಳಿ ಗಳಿಗೆ ಗೊತ್ತೇ ಆಗುವುದಿಲ್ಲ. ತೀರ ಹತ್ತಿರ ಹೋದ ಮನುಷ್ಯ ಕೋವಿಯಿಂದ ಕೋಳಿ ಗಳನ್ನು ಹೊಡೆಯುತ್ತಾನೆ. ಕೆಲವು ವೇಳೆ ಕೈಯಿಂದಲೇ ಹಿಡಿದುಕೊಳ್ಳುತ್ತಾನೆ.

ದೂರದಲ್ಲಿ ನೀರಿನ ಮೇಲೆ ಇರುವ ಬಾತು ಕೋಳಿಗಳನ್ನು ಹಿಡಿಯಲು ಇನ್ನೊಂದು ಉಪಾಯ ಹೂಡುತ್ತಾರೆ. ತಲೆಗೆ ಮಣ್ಣಿನ ದೊಡ್ಡ ಹೂಜಿಯೊಂದನ್ನು ಕವುಚಿಹಾಕಿ ಕೊಂಡು ಅದಕ್ಕೆ ಬಾತುಗಳ ರೆಕ್ಕೆಪುಕ್ಕಗಳನ್ನು ಜೋಡಿಸುತ್ತಾರೆ. ಉಸಿರಾಡಲೂ ಕಣ್ಣು ಕಾಣಿಸಲೂ ಆ ಹೂಜಿಯಲ್ಲಿ ತೂತುಗಳಿರುತ್ತವೆ. ನೀರಿನಲ್ಲಿ ಇಳಿದು ಹೂಜಿ ಮಾತ್ರ ಕಾಣುವಂತೆ ಹತ್ತಿರ ಹೋಗಿ ಒಂದೊಂದಾಗಿ ಕಾಲು ಹಿಡಿದು ನೀರೊಳಕ್ಕೆ ಎಳೆದು ತನ್ನ ಸೊಂಟಕ್ಕೆ ಸಿಕ್ಕಿಸಿಕೊಳ್ಳುತ್ತಾನೆ. ಗರಿಗಳನ್ನು ಸಿಕ್ಕಿಸಿದ ಹೂಜಿಯನ್ನು ಆ ಬಾತುಗಳು ಇನ್ನೊಂದು ಬಾತೆಂದೇ ಭಾವಿಸಿಕೊಳ್ಳುತ್ತವೆ. ನೀರಿನ ಕೆಳಗೆ ಎಳೆಯಲ್ಪಟ್ಟ ಬಾತು ಅದರ ಸ್ವಭಾವದಂತೆ ನೀರಿನಲ್ಲಿ ಮುಳುಗಿತು ಎಂದು ಇತರ ಬಾತುಗಳು ಭಾವಿಸುತ್ತವೆ. ಹೀಗೆ ಬಾತುಗಳ ಇಡಿ ಹಿಂಡೇ ನೀರಿನ ಕೆಳಗೆ ಮಾಯವಾಗಿಬಿಡುತ್ತದೆ.

ಮೂರರನ್ನು ಬಿಟ್ಟರೆ ಸೂರತ್ತಿನಲ್ಲಿರುವ ಬಹುತೇಕ ನಿವಾಸಿಗಳು ಬನಿಯರು. ವ್ಯಾಪಾರ ಸಾಪಾರದಲ್ಲಿ ನಿರತರಾದ ಈ ಜನ ಇಂಡಿಯಾದಲ್ಲೆಲ್ಲಾ ಇದ್ದಾರೆ. ಬಹು ಸರಳ ಸ್ವಭಾವದ ಹಾಗೂ ಪುಕ್ಕಲು ಜನ ಇವರು. ಜಗಳ ಗುದ್ದಾಟಗಳ ತಂಟೆಗೆ ಹೋಗು ವುದೇ ಇಲ್ಲ. ಬಹಳ ಎಂದರೆ ಬಾಯಿಜೋರು ಅಷ್ಟೆ. ಇವರ ಬಾಯಿಜಗಳ ಬನಿಯನರ

ಜಗಳ' ಎಂದೇ ಹೆಸರಾಗಿದೆ. ನೊಣ ಸಾಯಿಸಿದರೂ ಮಹಾ ಪಾಪ ಎಂದು ತಿಳಿಯುವ ಜನ ಇವರು. ಇನ್ನು ರಕ್ತಪಾತ ಮುಂತಾದ ಕೃತ್ಯಗಳಿಗೆ ಹೇಗೆತಾನೆ ಕೈಹಾಕಿಯಾರು! ಯೂರೋಪಿಯನರು ಸಿಟ್ಟಾಗಿ ಬೈದರೆ ಅವನ್ನು ಸಹಿಸಿಕೊಂಡು ಎರಡುಮೂರು ದಿವಸ ಸುಮ್ಮನಿದ್ದು ಎಲ್ಲವೂ ತಣ್ಣಗಾಗಿ ಸಿಟ್ಟು ಇಳಿದ ಮೇಲೆ ಬಂದು ಬಹು ವಿನಯದಿಂದ ಮಾತಾಡಿಸುತ್ತಾರೆ. ಇಲ್ಲಿಯ ಬಿಸಿ ಹವೆಯೂ ಬನಿಯನರ ಮೆತ್ತನೆಯ ಸ್ವಭಾವಕ್ಕೆ ಕಾರಣವಾಗಿದೆ. ಬಹು ಮೃದುವಾದ ತಮ್ಮ ಭಾಷೆಯಲ್ಲಿ ಮಾತನಾಡಿ ಎಂಥವರನ್ನೂ ಒಲಿಸಿಕೊಂಡುಬಿಡುತ್ತಾರೆ. ಅವರ ಆಸಕ್ತಿಯೆಲ್ಲಾ ಹಣ ಸಂಪಾದಿಸುವುದರ ಕಡೆ ಇರುತ್ತದೆ. ಲಕ್ಷಾಧಿಪತಿಯಾಗಿದ್ದರೂ ಕಾಸಿನ ಆಸೆಗೆ ಓಡಿಹೋಗುತ್ತಾರೆ. ಲಕ್ಷ ಪೌಂಡುಗಳ ಸಾಹುಕಾರನೊಬ್ಬ ಆರು ಪೆನ್ನಿ ಹಣಕ್ಕಾಗಿ ಇಡೀ ಸೂರತ್ತಿನಲ್ಲೆಲ್ಲಾ ಸುತ್ತಾಡಿದ್ದನ್ನು ನಾನು ನೋಡಿದ್ದೇನೆ.

ಇಂಡಿಯಾದ ವಿಗ್ರಹಾರಾಧಕರಲ್ಲಿ ಬನಿಯನರೇ ಹೆಚ್ಚು. ಇವರ ಶ್ರೀಮಂತಿಕೆಯೂ ಅಪಾರ.

ಒಂದೊಂದು ಜಾತಿಯ ಕಸುಬು ಆಯಾ ಜಾತಿಯಲ್ಲಿಯೇ ವಂಶಪಾರಂಪರ್ಯವಾಗಿ ಮುಂದುವರಿಯುತ್ತದೆ. ಒಂದು ಜಾತಿಯವರು ಇನ್ನೊಂದು ಜಾತಿಯವರಲ್ಲಿ ಕೊಡುವುದೂ ತರುವುದೂ ಇಲ್ಲ. ಉದಾಹರಣೆಗೆ, ವರ್ತಕನು ಅಕ್ಕಸಾಲಿಗನ ಅಥವಾ ಚಮ್ಮಾರನ ಮಗಳನ್ನು ಮದುವೆಯಾಗುವುದು ಸಾಧ್ಯವೇ ಇಲ್ಲ.

ಇಂಡಿಯನರು ಬಹು ಚತುರರು. ಏನನ್ನಾದರೂ ನೋಡಿದರೆ ಚಾಚೂತಪ್ಪದೆ ಅದರಂತೆ ಮಾಡಬಲ್ಲರು. ಬನಿಯನರು ಕೇವಲ ಮನಸ್ಸಿನಲ್ಲಿಯೇ ಕೂಡಿ ಕಳೆದು ಲೆಖ್ಖಹಾಕುವವರಿಗಿಂತ ಮೊದಲೇ ಹೇಳಬಲ್ಲರು. ಹೀಗೆಯೇ ನೇಕಾರರು, ಹಡಗು ಕಟ್ಟುವ ಬಡಗಿಗಳು, ದರ್ಜಿಗಳು ಇತ್ಯಾದಿ. ದರ್ಜಿಗಳು ಬೆಳಗಿನ ಹೊತ್ತು ಹಳೇ ಬಟ್ಟೆಗಳನ್ನು ಹೊಲಿದುಕೊಡುವುದಿಲ್ಲ. ಆದರೆ ಇಲ್ಲಿಯ ಕುಶಲ ಕೆಲಸಗಾರರು ನಮ್ಮ ಗಡಿಯಾರಗಳಂತಹ ಗಡಿಯಾರ ಮಾಡಲಾರರು. ಬಹುಶಃ ಇದಕ್ಕೆ ಇಲ್ಲಿಯ ಧೂಳು ಕಾರಣ ಇರಬಹುದು. ಅದು ಚಕ್ರ ಮುಂತಾದುವುಗಳ ಮೇಲೆ ಕುಳಿತು ಗಡಿಯಾರ ಹೆಚ್ಚು ಕಡಿಮೆ ವೇಳೆ ತೋರಿಸುವುದು ಇರಬೇಕು. ಆದರೆ ಚೀನೀಯರು ನಮ್ಮಂತಹ ಗಡಿಯಾರಗಳನ್ನು ತಯಾರಿಸಬಲ್ಲರು. ಕೆಲವು ಕಲೆಗಳಲ್ಲಿ ಇಂಡಿಯನರು ನಮ್ಮ ಯೂರೋಪಿಯನರನ್ನೂ ಮೀರಿಸಬಲ್ಲರು. ಉದಾಹರಣೆಗೆ, ಬಟ್ಟೆಗಳಿಗೆ ಬಣ್ಣ ಹಾಕುವುದು, ಚಿತ್ರ ಬಿಡಿಸುವುದು ಮತ್ತು ಕಸೂತಿ ಮಾಡುವುದು. ಅರಗನ್ನು ಉಪಯೋಗಿಸಿ ಮೆರಗು ಕೊಡುವುದರಲ್ಲೂ ಇವರು ಎತ್ತಿದಕೈ.

ಬನಿಯನರಲ್ಲಿ (ಹಿಂದೂಗಳಲ್ಲಿ) ೨೪ ಒಳಜಾತಿಗಳಿವೆ. ಇವರು ಪರಸ್ಪರ ಮದುವೆ ಊಟೋಪಚಾರಗಳಲ್ಲಿ ಒಬ್ಬರಿಂದ ಒಬ್ಬರು ದೂರ. ಹಸುವನ್ನು ಬಹು ಪವಿತ್ರವಾದ ಪ್ರಾಣಿಯೆಂದು ಭಾವಿಸುತ್ತಾರೆ. ಪುನರ್ಜನ್ಮದಲ್ಲಿ ನಂಬಿಕೆ ಇಟ್ಟಿದ್ದಾರೆ. ಪಶುಪಕ್ಷಿ ಪ್ರಾಣಿ

ಗಳು ತಮ್ಮ ಮನೆಗೆ ಆಗಾಗ್ಗೆ ಬರುತ್ತಿದ್ದರೆ ಅವು ಸತ್ತ ತಮ್ಮ ಹಿರಿಯರ ಪರವಾಗಿ ಬಂದವೆಂದು ಭಾವಿಸುತ್ತಾರೆ. ಅವುಗಳ ತಂಟೆಗೆ ಹೋಗದೆ ತಿಂಡಿ ತೀರ್ಥ ಕೊಟ್ಟು ಸಾಕುತ್ತಾರೆ. ಮನೆಗೆ ಹಾವು ಬಂದರೂ ಹಾಗೆಯೆ.

ಬನಿಯರು ತಿಂಗಳಿನಲ್ಲಿ ಎರಡು ದಿನ ಉಪವಾಸ ಇತ್ಯಾದಿ ವ್ರತಗಳನ್ನು ಆಚರಿಸುತ್ತಾರೆ. ಮಕ್ಕಳಿಗೂ ಅದನ್ನೇ ಪಾಠಹಾಕುತ್ತಾರೆ. ಕೂಲಿ ಮುಂತಾದ ಮಡಿಮೆಯ ಕೆಲಸಗಳಲ್ಲಿ ತೊಡಗಿರುವ ವಿಗ್ರಹಾರಾಧಕರು (Pagans) ಬೆಳಗ್ಗೆ ಎದ್ದಕೂಡಲೇ ಹಾಡಿಕೊಂಡೇ ತಮ್ಮ ಕೆಲಸ ಆರಂಭಿಸುತ್ತಾರೆ. ಕೆಲಸ ಮುಗಿಸುವಾಗಲೂ ಹಾಡಿಕೊಂಡೇ ಮುಗಿಸುತ್ತಾರೆ. ಹತ್ತಾರು ಜನ ಕೆಲಸಗಾರರು ಒಟ್ಟಾಗಿ ಒಂದೇ ಕೆಲಸ ಮಾಡುತ್ತಿರುವಾಗ ಎಲ್ಲರೂ ಒಟ್ಟಿಗೆ ಹಾಡಿಕೊಂಡೇ ಕೆಲಸ ಮಾಡುತ್ತಾರೆ. ಅಥವಾ ಒಬ್ಬ ಹಾಡಿದರೆ ಉಳಿದವರು ಅದನ್ನು ಹಿಮ್ಮೇಳವಾಗಿ ಹಾಡುತ್ತಾರೆ. ಕೊಂಚ ಹೊತ್ತೂ ನಿಲ್ಲಿಸದೆ ಇಡೀ ದಿನವೆಲ್ಲ ಹೀಗೆ ಹಾಡುತ್ತಲೇ ಇರುತ್ತಾರೆ. ಹೀಗೆಯೇ ನೀರಿನ ಮೇಲೆ ಹಡಗಿನಲ್ಲಿ ಎತ್ತುವ ಮತ್ತು ಇಳಿಸುವ ಕೆಲಸಮಾಡುವಾಗಲೂ ಒಳ್ಳೆಯ ಧಾಟಿಗಳಲ್ಲಿ ಸರದಿಯ ಮೇಲೆ ಹಾಡುತ್ತಾರೆ. ಒಮ್ಮೊಮ್ಮೆ ಇವರು ಹಾಡುವ ಸ್ವಭಾವದಿಂದಾಗಿ ಗುಟ್ಟಿನಲ್ಲಿ ಕೆಲಸಮಾಡಬೇಕಾದಾಗ ಹಾಡಿಬಿಟ್ಟು ತಮ್ಮ ಗುಟ್ಟನ್ನು ರಟ್ಟುಮಾಡುವ ಸಂಭವವುಂಟು. ಇಲ್ಲಿಯ ಬಿಸಿ ಹವೆಯ ಕಾರಣ ಕೆಲಸಮಾಡುವಾಗ ಆಗುವ ಆಯಾಸವನ್ನು ಹೀಗೆ ಹಾಡಿ ಹಾಡಿ ಪರಿಹರಿಸಿಕೊಳ್ಳುತ್ತಾರೆಂದು ನನ್ನ ಭಾವನೆ. ಹೀಗೆ ಹಾಡುವ ಕ್ರಮ ಚೀನಾದೀದ ಬಂದಿರಬಹುದೆಂದು ನನ್ನ ಭಾವನೆ. ಏಕೆಂದರೆ, ಅಲ್ಲಿ ಸಂಗೀತಕ್ಕೆ ತುಂಬಾ ಪ್ರಾಶಸ್ತ್ಯವಿದೆ.

ಇಂಡಿಯನರು (ಹಿಂದೂಗಳು) ದಿನವೂ ತಪ್ಪದೆ ಸ್ನಾನ ಮಾಡುತ್ತಾರೆ. ತಪತಿಯಲ್ಲೋ ಅಥವಾ ಮನೆಯಲ್ಲೋ ಸ್ನಾನ ಮಾಡದೆ ಹೊರಗೆ ಹೋಗುವುದೇ ಇಲ್ಲ. ಸ್ನಾನ ಮಾಡಿ ಪೂಜೆ ಪುನಸ್ಕಾರಗಳನ್ನು ಮಾಡುವವರೆಗೆ ಯಾರೂ ಇವರನ್ನು ಮುಟ್ಟಬಾರದು. ಚಿಕ್ಕಮಕ್ಕಳಿಗೂ ಕೂಡ ದಿನಕ್ಕೆರಡು ಸಲ ಸ್ನಾನ ಮಾಡಿಸುತ್ತಾರೆ. ಮಲ ವಿಸರ್ಜನೆಗೆ ಹೋಗುವಾಗ ಕೈಯಲ್ಲಿ ತಂಬಿಗೆ ಹಿಡಿದು ಹೋಗುತ್ತಾರೆ. ಎಡಗೈಯಲ್ಲಿ ಮಾತ್ರ ತೊಳೆದುಕೊಳ್ಳುತ್ತಾರೆ. ಕ್ರೈಸ್ತ ಮುಂತಾದ ಪರಕೀಯ ಜನ ಮುಟ್ಟಿದ ನೀರನ್ನು ಕುಡಿಯುವುದಿಲ್ಲ. ಅಲ್ಲದೆ ಬೇರೆ ಜಾತಿಯವರು ಮುಟ್ಟಿದ ನೀರನ್ನೂ ಕುಡಿಯುವುದಿಲ್ಲ. ಹೀಗಾಗಿ ಇವರು ಹೊರಗಡೆ ಹೋದಾಗ ಕುಡಿಯಲು ತಮ್ಮ ಹೂಜಿಗಳಲ್ಲಿ ನೀರು ತೆಗೆದುಕೊಂಡು ಹೋಗುತ್ತಾರೆ. ಕುಡಿಯುವಾಗ ಕಚ್ಚಿಕೊಂಡು ಕುಡಿಯದೆ ಎತ್ತಿಕೊಂಡು ಕುಡಿಯುತ್ತಾರೆ. ಗಟಗಟನೆ ಒಂದೇ ಸಮನೆ ಕುಡಿದು ಮುಗಿಸಿಬಿಡುತ್ತಾರೆ. ಮಣ್ಣಿನ ಕೂಜಾಗಳಲ್ಲಿ ಹಾಕಿದ ನೀರು ಒಂದರಗಳಿಗೆಯಲ್ಲಿ ತಣ್ಣಗಾಗಿಬಿಡುತ್ತದೆ.

ಯಾರಾದರು ಪರಂಗಿಯವರನ್ನು ಮನೆಗೆ ಕರೆದರೆ ಅವರಿಗೆ ಬಾಳೆಎಲೆಯ ಮೇಲೆ ಸಿಹಿತಿಂಡಿಗಳನ್ನೋ ಒಮ್ಮೊಮ್ಮೆ ಪಲಾವ್ ಮುಂತಾದ ಭಕ್ಷ್ಯವನ್ನೋ ಬಡಿಸುತ್ತಾರೆ.

ಆಮೇಲೆ ಎಲೆಯನ್ನು ಹೊರಗೆ ಬಿಸಾಡುತ್ತಾರೆ. ನಿಂಬೆಹಣ್ಣಿನ ಶರಬತ್ತು ಬಿಟ್ಟರೆ ಬೇರೆ ಪಾನೀಯಗಳನ್ನು ಸೇವಿಸುವುದಿಲ್ಲ. ಮಾಂಸಾಹಾರ ಇಲ್ಲವೇ ಇಲ್ಲ. ಇಲಿ ಹೆಗ್ಗಣ ಗಳನ್ನು ಕೊಲ್ಲುವುದಿಲ್ಲ. ಇನ್ನೂ ಬೆಳೆಯುತ್ತಿರುವ ಎಳೆಗರು ಕುರಿ ಕೋಳಿ ಮುಂತಾದ ಪ್ರಾಣಿಗಳನ್ನು ಪರಂಗಿಯವರು ಕೊಂದು ತಿನ್ನುವುದನ್ನು ಕಂಡರೆ ಬನಿಯನರಿಗೆ ಭಾರಿ ಸಂಕಟ. ಹಸುವಿನ ಕರುವಂತೂ ಅವರಿಗೆ ತುಂಬಾ ಪ್ರೀತಿಯ ಪ್ರಾಣಿ. ಯಾರಾದರೂ ಪರಂಗಿ ಮನುಷ್ಯ ತಮ್ಮ ಹೊಲಗದ್ದೆಗಳಿಗೆ ನುಗ್ಗಿ ಹಕ್ಕಿಪಕ್ಷಿಗಳನ್ನು ಬಂದೂಕದಿಂದ ಹೊಡೆಯುವುದನ್ನು ಕಂಡಾಗ 'ದಮ್ಮಯ್ಯ ಹೊಡಿಬ್ಯಾಡಿ' ಎಂದು ಕೈಮುಗಿದು ಕೇಳಿ ಕೊಂಡು ಒಂದೆರಡು ರೂಪಾಯಿ ಕೈಯಲ್ಲಿಟ್ಟು ಕಳುಹಿಸುತ್ತಾರೆ.

ಸೂರತ್ತಿಗೆ ಒಂದು ಮೈಲಿ ದೂರದಲ್ಲಿ ಪ್ರಾಣಿಗಳಿಗೇ ಒಂದು ದೊಡ್ಡ ವೈದ್ಯಶಾಲೆ ಇದೆ. ಇದರ ಹತ್ತಿರದಲ್ಲಿ ತಿಗಣೆ, ಚಿಗಟ ಮುಂತಾದ ಕ್ರಿಮಿಕೀಟಗಳಿಗೂ ಒಂದು ವೈದ್ಯಶಾಲೆ ಇದೆ. ಅವುಗಳಿಗೆ ಬೇಕಾದ ರಕ್ತ ಕುಡಿಯಲು ಅನುಕೂಲವಾಗುವಂತೆ ಒಬ್ಬ ಬಡವನನ್ನು ಕೂಲಿಗೆ ನೇಮಿಸಿ ಅವನು ಅದರಲ್ಲಿ ಮಲಗುವಂತೆ ಮಾಡುತ್ತಾರೆ. ರಕ್ತ ಹೀರಿದಾಗ ಅವನಿಗೆ ಸಾಕಾಗಿ ಓಡಿಹೋಗದಿರಲಿ ಎಂದು ಆತನನ್ನು ಬೆಳಗಿನವರೆಗೂ ಕಟ್ಟಿಹಾಕುತ್ತಾರೆ. ವರ್ಷಕ್ಕೊಂದು ಸಲ ಬನಿಯರು ಸಿಹಿತಿಂಡಿಗಳನ್ನು ಮಾಡಿ ಮನೆಯ ಹೊರಗೆ ನೊಣಗಳು ತಿನ್ನಲಿ ಎಂದು ತಟ್ಟೆಗಳಲ್ಲಿ ಇಡುತ್ತಾರೆ. ಹೊರಗೆ ಹೋದಾಗ ಇರುವೆಗಳಿಗೆ ಅಕ್ಕಿ ಹಾಕುತ್ತಾರೆ. ಯೂರೋಪಿಯನರು ಮೀನು ಮುಂತಾದ ಪ್ರಾಣಿ ಗಳನ್ನು ಬೇಯಿಸಿ ಬಕಬಕನೆ ತಿನ್ನುವುದನ್ನು ಕಂಡರೆ ಬನಿಯನರಿಗೆ ಬಹು ಅಸಹ್ಯ.

ಪ್ರಾಣಿಗಳನ್ನು ತಿನ್ನಬಾರದೆಂಬ ಪದ್ಧತಿ ಪೂರ್ವದೇಶಗಳಲ್ಲಿ ಹಿಂದಿನಿಂದ ಬಂದ ಪದ್ಧತಿ. ಮೋಸಸನೂ ಹೀಗೆಯೇ ಬೋಧಿಸಿದನು. ಬನಿಯನರು ಮಾಂಸ ತಿನ್ನದಿದ್ದರೂ ದ್ರಾಕ್ಷಿ ತಿನ್ನುತ್ತಾರೆ. ದ್ರಾಕ್ಷಿ ಸೂರತ್ತಿಗೆ ಅಹಮದಾಬಾದಿನಿಂದಲೂ ಬೇರೆ ಕಡೆಗಳಿಂದಲೂ ಬರುತ್ತದೆ. ಪೈನಾಪಲ್ ಮುಂತಾದ ಹಣ್ಣುಗಳನ್ನು ತಿನ್ನುತ್ತಾರೆ. ಇಲ್ಲಿ ಹೇರಳವಾಗಿ ದೊರೆಯುವ ಹಣ್ಣೆಂದರೆ ಮಾವಿನ ಹಣ್ಣು. ಇದು ಆರೋಗ್ಯಕ್ಕೂ ಒಳ್ಳೆಯದೆಂದು ಹೇಳುತ್ತಾರೆ. ಹಣ್ಣಿನ ಒಳಗೆ ಓಟೆ ಇರುತ್ತದೆ. ಮಾವಿನಹಣ್ಣು ಬಹು ರುಚಿ. ಮಿಡಿ ಮಾವಿನಕಾಯನ್ನು ಉಪ್ಪಿನಕಾಯಿಗೆ ಉಪಯೋಗಿಸುತ್ತಾರೆ. ಉಪ್ಪಿನಕಾಯಿ ಇಂಗ್ಲೆಂಡಿ ನಲ್ಲಿಯೂ ಸಿಕ್ಕುತ್ತದೆ. ಸೌತೇಕಾಯಿ, ಕಲ್ಲಂಗಡಿ, ಕರಬೂಜ ಮುಂತಾದ ಹಣ್ಣುಗಳೂ ಇಲ್ಲಿ ಹೇರಳವಾಗಿ ದೊರೆಯುತ್ತವೆ.

ಆದರೆ ಬನಿಯನರಿಗೆ ಕಾಫಿ ಟೀ ಎಂದರೆ ಬಹಳ ಪ್ರೇಮ. ದಿನವೆಲ್ಲ ಕುಡಿಯುತ್ತಲೇ ಇರುತ್ತಾರೆ. ಕಾಫಿಯನ್ನು ಮಾಡುವ ರೀತಿಯಲ್ಲಿ ಮಾಡಿದರೆ ಅದರ ಮೇಲೆ ಒಂದು ಬಗೆಯ ಹಳದಿ ಎಣ್ಣೆ ತೇಲುತ್ತದೆ. ಆದರಿಂದ ಕಾಫಿ ಬಹು ರುಚಿಯಾಗಿರುತ್ತದೆ. ಈ ರೀತಿ ತಯಾರಿಸುವುದಕ್ಕಾಗಿಯೇ ಮನೆಯಲ್ಲಿ ಒಬ್ಬ ಸೇವಕನನ್ನು ಇಟ್ಟುಕೊಂಡಿರುತ್ತಾರೆ. ಕಾಫಿ ಅರೇಬಿಯಾದಲ್ಲಿ ಮೋಖಾ ಸುತ್ತಮುತ್ತ ಹೇರಳವಾಗಿ ಬೆಳೆಯುತ್ತದೆ.

ಅಲ್ಲಿಂದಲೇ ಕಾಫಿ ಪ್ರಪಂಚದ ಎಲ್ಲ ಕಡೆಗೂ ರವಾನಿಸಲ್ಪಡುತ್ತದೆ. ರಕ್ತಶುದ್ಧಿಗೂ ಜೀರ್ಣ ಶಕ್ತಿಗೂ ದೇಹಕ್ಕೆ ಚೈತನ್ಯ ನೀಡುವುದಕ್ಕೂ ಕಾಫಿ ಒಳ್ಳೆಯದಂತೆ.

ಹಾಗೆಯೇ ಟೀ ಸಹ ಇಂಡಿಯಾ ಮತ್ತು ಯೂರೋಪು ದೇಶಗಳಲ್ಲಿ ಜನರಿಗೆ ಬೇಕಾದ ಪಾನೀಯ. ಡಚ್ಚರಂತೂ ಟೀ ಪಾತ್ರೆಯನ್ನು ಒಲೆಯ ಮೇಲಿಂದ ತೆಗೆಯು ವುದೇ ಇಲ್ಲ. ಬಿಸಿಹವೆಗೆ ಟೀ ಒಳ್ಳೆಯದಲ್ಲವೇನೊ ಅನ್ನಿಸುತ್ತದೆ; ಆದರೆ ಅದು ದೇಹಕ್ಕೆ ಒಗ್ಗುತ್ತದೆ. ಇಂಡಿಯಾದಲ್ಲಿ ಟೀಗೆ ಸಕ್ಕರೆ ಮತ್ತು ನಿಂಬೆಹಣ್ಣಿನ ರಸ ಹಾಕಿ ಕುಡಿಯು ತ್ತಾರೆ. ಟೀಯನ್ನು ಪದೆಪದೆ ಕುಡಿಯುವುದರಿಂದಲೂ ಸದಾ ಮೈಬೆವರುವುದರಿಂದಲೂ ಮೂತ್ರಕಲ್ಲು, ಸಂಧಿವಾತ, ಚಳಿಜ್ವರ, ಶೀತ—ಇವುಗಳನ್ನು ಈ ಭಾಗದಲ್ಲಿ ಕೇಳಿಯೇ ಇಲ್ಲ.

ನಮ್ಮ ಪ್ರೆಸಿಡೆಂಟನಿಗೆ ಟೀ ಹೂ ನೋಡಬೇಕೆಂದು ಬಹು ಆಸೆಯಾಗಿ ಚೀನಾದ ಪರಿಚಯವಿರುವವರನ್ನು ಅದಕ್ಕಾಗಿ ಕೇಳಿದ. ಆದರೆ ಸಿಕ್ಕಲಿಲ್ಲ. ಆದರೆ ಟೀ ಹೂ ಬಿಡುತ್ತದೆಯೇ ಎಂಬುದು ನನಗೆ ಸಂದೇಹ.*

ಕಸ್ತೂರಿ ಮತ್ತು ಪನ್ನಂಬರಗಳು ಮುತ್ತಿಗೆ ಮಾರಕವಂತೆ. ಹಾಗೆಯೇ ಟೀ ಕೂಡ ಇಂಗು ಮುಂತಾದ ಕಟುವಾಸನೆಯ ಪದಾರ್ಥಗಳಿಂದ ತನ್ನ ಪರಿಮಳ ಕಳೆದು ಕೊಳ್ಳುತ್ತದೆ. ಆದ್ದರಿಂದ ಅದನ್ನು ತವರದ ಪಾತ್ರೆಗಳಲ್ಲೋ ಮರದ ಪಿಪಾಯಿಗಳಲ್ಲೋ ಗಾಳಿ ಸೋಕದಂತೆ ಇಡುತ್ತಾರೆ. ಇಂಡಿಯನರು ದೈ (Dye) ಅಂದರೆ ಮೊಸರನ್ನು (ದಹಿ) ಮಧ್ಯಾಹ್ನದ ಹೊತ್ತು ತೆಗೆದುಕೊಳ್ಳುತ್ತಾರೆ. ಅದನ್ನು ಅನ್ನ ಮತ್ತು ಬೆಲ್ಲದೊಡನೆ ಕಲಸಿ ಊಟ ಮಾಡುತ್ತಾರೆ. ಮೊಸರು ದೇಹಕ್ಕೆ ತಂಪು ಕೊಡುತ್ತದೆ. ಬೆಳಗಿನ ಹೊತ್ತು ಮತ್ತು ರಾತ್ರಿ ಮೊಸರು ತೆಗೆದುಕೊಳ್ಳುವುದೇ ಇಲ್ಲ. ರಾತ್ರಿ ತೆಗೆದುಕೊಂಡರೆ ಅವರ ಪ್ರಣಯಕ್ರೀಡೆಗಳಿಗೆ ಅನುಕೂಲವಲ್ಲವಂತೆ.

ಸೂರತ್ತಿನಲ್ಲಿ ಒಲೆಗೆ ಉಪಯೋಗಿಸುವುದು ಕಟ್ಟಿಗೆ. ಇಂಡಿಯನರು ಹಾಗೂ ಯೂರೋಪಿಯನರೆಲ್ಲ ಒಲೆಗೆ ಉಪಯೋಗಿಸುವುದು ಇದನ್ನೆ. ಬಡಜನರು ಸಗಣಿಯ ಬೆರಣಿ ಉಪಯೋಗಿಸುತ್ತಾರೆ. ಇನ್ನು ವಾಸದ ಕೋಣೆಗಳಲ್ಲಿ ಬೆಂಕಿಯ ಅವಶ್ಯಕತೆಯೇ ಇಲ್ಲ. ಇಂಡಿಯಾದಲ್ಲೆಲ್ಲ ಸೂರ್ಯದೇವನೇ ಮೂರುಕಾಸೂ ಖರ್ಚಿಲ್ಲದೆ ಆ ಕೆಲಸಮಾಡು ತ್ತಾನೆ. ಸೌದೆಯನ್ನು ಆಳುಗಳು ಬಜಾರಿನಲ್ಲಿ ಕೊಂಡುಕೊಂಡು ಬರುತ್ತಾರೆ. ಇಷ್ಟು ಸೇರು ತೂಕದ ಸೌದೆಗೆ ಇಷ್ಟು ರೂಪಾಯಿ ಎಂದು ಲೆಖ್ಖ. ತರುವ ಆಳಿಗೆ ಒಂದು ರೂಪಾಯಿಗೆ ಇಷ್ಟು ಕಾಸು ಎಂದು ಕೊಡಬೇಕು. ಬನಿಯನರು ಹೊರಗೆ ಅಂಗಡಿ ಮುಂಗಟ್ಟುಗಳಲ್ಲಿ ಮಾಡಿದ ತಿಂಡಿತೀರ್ಥ ತೆಗೆದುಕೊಳ್ಳುವುದಿಲ್ಲ. ತಮ್ಮ ಮನೆಯಲ್ಲಿ ಮಾಡಿದ್ದನ್ನು ಮಾತ್ರ ತಿನ್ನುತ್ತಾರೆ. ಮನೆಗೆ ಅತಿಥಿಗಳನ್ನು ಕರೆದರೆ ಅವರಿಗಷ್ಟೇ ಅಲ್ಲದೆ ಅವರ ಆಳುಕಾಳು ನಾಯಿ ಮುಂತಾದುವುಗಳಿಗೂ ಅನ್ನ ಹಾಕುತ್ತಾರೆ.

ಹೊರಗಿನಿಂದ ಬಂದವರು ಸತ್ರಗಳಲ್ಲಿಯೋ ಹೊರಗೆ ಬಯಲಿನಲ್ಲಿಯೋ ಇಳಿದು

*ಟೀ ಗಿಡ ಹೂವನ್ನೂ ಬಿಡುತ್ತದೆ ಮತ್ತು ತೆಂಗಿನ ಅಳಿ (ಈಚು) ಗಾತ್ರದ ಕಾಯನ್ನೂ ಬಿಡುತ್ತದೆ.

ಕೊಳ್ಳಬೇಕು. ಅವರಿಗೆ ಬೇಕಾದ ಊಟೋಪಚಾರಗಳನ್ನು ಆಳುಕಾಳುಗಳಿಂದ ಮಾಡಿಸಿ ಕೊಳ್ಳಬೇಕು. ಗೃಹಸ್ಥರು ತಮ್ಮ ಮನೆಗಳಲ್ಲಿ ಬೇರೆಯವರು ಇಳಿದುಕೊಳ್ಳಲು ಅಪೇಕ್ಷಿಸುವುದಿಲ್ಲ.

ಬಿಸಿಲಿನ ಧಗೆಯಿಂದಾಗಿ ಮಧ್ಯಾಹ್ನದ ಊಟ ಸೇರದ ಕಾರಣ ಬನಿಯನರೂ ಮೂರರೂ ಬೆಳಗ್ಗೆ ೮–೯ ಗಂಟೆಗೆ ಮತ್ತು ಸಂಜೆ ೪–೫ ಗಂಟೆಗೆ ಊಟಮಾಡುತ್ತಾರೆ. ಕೆಲವರು ಮಧ್ಯರಾತ್ರಿಯಲ್ಲಿ ಊಟಮಾಡುವುದೂ ಉಂಟು. ತಮ್ಮ ಒಂದು ಸುತ್ತು ಕಾಮಕ್ರೀಡೆಗಳನ್ನು ಮುಗಿಸಿ ತಾಖತ್ ಕೊಡುವ ಊಟಮಾಡಿ ಮತ್ತೊಂದು ಸುತ್ತಿಗೆ ತಯಾರಾಗುತ್ತಾರೆ.

ಮಂಚ ಅಥವಾ ಬಿಛಾನ್‌ಗಳ ಮೇಲೆ ಮಲಗುತ್ತಾರೆ. 'ಬಿಛಾನ್'ಗಳು ಎಂಟು ಹತ್ತು ಜನ ಮಲಗುವಷ್ಟು ದೊಡ್ಡದಾಗಿರುತ್ತವೆ. ಅವುಗಳ ಮೇಲೆ ತಲೆಗೆ ದಿಂಬು ಹಾಕಿಕೊಂಡು ಮಲಗುತ್ತಾರೆ. ಸಾಮಾನ್ಯವಾಗಿ ಹೊದೆಯುವುದೇ ಇಲ್ಲ. ಉಟ್ಟ ಬಟ್ಟೆಗಳಲ್ಲೇ ಮಲಗಿ ಮೇಲೊಂದು ಪಂಚೆಯನ್ನೋ ತೆಳುವಾದ ಬಟ್ಟೆಯನ್ನೋ ಹಾಕಿ ಕೊಳ್ಳುತ್ತಾರೆ.

ಇಂಡಿಯನರ ಉಡುಪೆಂದರೆ ಬಿಳಿಬಟ್ಟೆಯ ಕಸೆಅಂಗಿ, ತಲೆಗೆ ಪಗರಿ (ಪೇಟ). ಇಲ್ಲೆಲ್ಲ ಬಿಳಿಬಟ್ಟೆಯ ಜನರನ್ನು ಕಂಡು ಮೊದಲಿಗೆ ಅಚ್ಚರಿಯಾಯಿತು. ಮೂರರಿಗೂ ಬನಿಯನರಿಗೂ ವ್ಯತ್ಯಾಸ ಗೊತ್ತಾಗಲಿ ಎಂದು ಮೂರರು ತಮ್ಮ ಕಸೆಅಂಗಿಯನ್ನು ಬಲಗಡೆ ಕಟ್ಟಿಕೊಳ್ಳುತ್ತಾರೆ; ಬನಿಯನರು ಎಡಗಡೆಗೆ ಕಟ್ಟಿಕೊಳ್ಳುತ್ತಾರೆ. ಯುರೋಪಿ ಸವನೊಬ್ಬ ಇಡಿಯಾದ ಉಡುಪು ಧರಿಸಿ ಮೂರರನ್ನು ಮೆಚ್ಚಿಸಿಕೊಳ್ಳಬೇಕಾದಾಗ ಅವರ ರೀತಿಯಲ್ಲಿ ಅವರ ಉಡುಪು ಧರಿಸಿ ಸಲಾಂ ಮಾಡುವುದನ್ನು ಕಲಿಯುತ್ತಾರೆ. ಇಲ್ಲಿಯ ಜನ ಕಾಲುಚೀಲ ಉಪಯೋಗಿಸುವುದೇ ಇಲ್ಲ. ಅವರು ತೊಡುವ ಚಲ್ಲಣವೇ ಆ ಕೆಲಸ ಮಾಡುತ್ತದೆ. ಚಲ್ಲಣ ಧರಿಸಿ ಗಿಲೀಟು ಮಾಡಿದ ಪಾದರಕ್ಷೆಗಳನ್ನು ಹಾಕಿ ಕೊಳ್ಳುತ್ತಾರೆ. ಹೀಗಾಗಿ ಇವರಲ್ಲಿ ಕಾಲುಚೀಲಕ್ಕೆ ಯಾವ ಹೆಸರೂ ಇಲ್ಲ. ಎಂತಹ ಸುಡುಬಿಸಲಿನಲ್ಲಿ ಸಹ ಯಾರೂ, ಅವನು ಚಕ್ರವರ್ತಿಯ ಮಗನಾಗಿದ್ದರು ಸಹ, ಛತ್ರಿ ಉಪ ಯೋಗಿಸುವುದಿಲ್ಲ. ಅದರ ಬದಲು ಉಷ್ಟ್ರಪಕ್ಷಿಯ ಗರಿಗಳಿಂದ ಮಾಡಿದ ಬೀಸಣಿಗೆ ಯಿಂದ ಸೇವಕರ ಮೂಲಕ ಸೆಖೆ ನಿವಾರಿಸಿಕೊಳ್ಳುತ್ತಾರೆ. ಛತ್ರಿ ಹಿಡಿಸಿಕೊಳ್ಳುವುದು ಚಕ್ರವರ್ತಿಯ ಅಥವಾ ಮಹಾರಾಜನ ಹಕ್ಕು.

ಬನಿಯನರು ವರ್ಷದಲ್ಲಿ ಹಲವಾರು ಸಲ ಉಪವಾಸ ಇತ್ಯಾದಿ ವ್ರತಗಳನ್ನು ಆಚರಿಸುತ್ತಾರೆ. ಆ ಉಪವಾಸದ ಇಡೀ ದಿನ ಬೇರೇನೂ ತೆಗೆದುಕೊಳ್ಳದೆ ಹಸುವಿನ ಗಂಜಲ ತೆಗೆದುಕೊಳ್ಳುತ್ತಾರೆ. ಅದರಿಂದ ಅವರು ಪರಿಶುದ್ಧರಾಗುತ್ತಾರಂತೆ. ಹೀಗೆ ಈ ಜನರ ಸ್ನಾನ ಪೂಜೆ ಪುನಸ್ಕಾರ, ಮಾಂಸ ಮತ್ತು ಮದ್ಯಗಳ ವಿಸರ್ಜನೆ ಇವೆಲ್ಲ ಕೇವಲ ಮತಾನುಸರಣೆ ಎನ್ನುವುದಕ್ಕಿಂತ ಮನುಷ್ಯನನ್ನು ಕಾಯಿಲೆ ಕಸಾಲೆಗಳಿಂದ ದೂರ ಇಡುವುದಕ್ಕೆ ಅನುಸರಿಸುವ ಆಚರಣೆಗಳು ಎಂದು ನನ್ನ ಭಾವನೆ. ಬನಿಯನರು ಅತ್ತರು

ಮುಂತಾದುವುಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ರಾತ್ರಿ ಹೊತ್ತು ತಮ್ಮ ಮನೆಯಲ್ಲಿ ಮಲ್ಲಿಗೆ ಹೂಮಾಲೆಗಳನ್ನು ಇಟ್ಟು ಮಲಗಿಕೊಳ್ಳುತ್ತಾರೆ.

ಸೂರತ್ತಿನ ಹಾದಿಬೀದಿಗಳಲ್ಲಿ ಮನುಷ್ಯರು ಹಾಗೂ ಪ್ರಾಣಿಗಳು ಮಲಮೂತ್ರ ವಿಸರ್ಜನೆ ಮಾಡಿದರೂ ಸೂರ್ಯನ ಶಾಖದಿಂದಾಗಿ ಅವುಗಳ ವಾಸನೆ ಹೆಚ್ಚಾಗಿ ಮೂಗಿಗೆ ಬಡಿಯುವುದಿಲ್ಲ.

ಈ ಬಗೆಯ ಆಹಾರ, ಆಚಾರವಿಚಾರಗಳಿಂದಾಗಿ ಬನಿಯನರು ದೀರ್ಘಕಾಲ ಬಾಳುವುದಲ್ಲದೆ ಸಾಯುವಾಗ ನಿಶ್ಚಿಂತೆಯಿಂದ ಸಾಯುತ್ತಾರೆ.

ಬನಿಯನರ ಆಸ್ತಿ ಎಂದರೆ ಹಣ ಮತ್ತು ಆಭರಣಗಳು. ಆದರೆ ಇದನ್ನೆಲ್ಲಾ ಗುಟ್ಟಾಗಿ ಇಟ್ಟುಕೊಂಡಿರುತ್ತಾರೆ. ಏಕೆಂದರೆ ಅದೇನಾದರೂ ಮೊಗಲ್ ಚಕ್ರವರ್ತಿ ಕಡೆಯವರ ಕಣ್ಣಿಗೆ ಬಿದ್ದರೆ ಅದೆಲ್ಲ ಅವರ ಪಾಲಾಗಿಬಿಡುತ್ತದೆ. ಬನಿಯನರು ಹೆಚ್ಚಾಗಿ ಖರ್ಚುಮಾಡುವುದು ಅವರ ಬಟ್ಟೆಬರೆ ಮತ್ತು ಆಭರಣಗಳಿಗಾಗಿ. ಒಡವೆಗಳನ್ನು ಕಂಡರಂತೂ ಇವರ ಹೆಂಗಸರಿಗೆ ಪಂಚಪ್ರಾಣ. ಹೆಂಗಸರು ಮುಡಿಯಿಂದ ಅಡಿಯವರೆಗೆ ಅಲಂಕರಿಸಿಕೊಂಡಿರುತ್ತಾರೆ. ನೀರು ಹೊತ್ತು ಬೀದಿಯಲ್ಲಿ ಹೋಗುವ ಹೆಂಗಸರೂ ಒಡವೆಗಳನ್ನು ಹಾಕಿಕೊಂಡಿರುತ್ತಾರೆ. ಕೆಲವು ಹೆಂಗಸರು ತಲೆಯಕೂದಲನ್ನು ಮುಡಿಹಾಕಿ ಗಂಟೆಯಾಕಾರದ ಚಿತ್ತಾರದ ಬೆಳ್ಳಿಯ ಕಿರೀಟದೊಳಗೆ ಸೇರಿಸಿ ತಲೆಗೆ ಕಟ್ಟಿಕೊಳ್ಳುತ್ತಾರೆ. . ಒಟ್ಟಿನಲ್ಲಿ ಮೂಗು ಕಿವಿ ಕೈಕಾಲು ಬೆರಳುಗಳಿಗೆಲ್ಲ ಒಂದಲ್ಲ ಒಂದು ರೀತಿಯ ಒಡವೆಯ ಅಲಂಕಾರಮಾಡಿಕೊಂಡಿರುತ್ತಾರೆ. ಹೊಟ್ಟೆಗಾಗಿ ಎರಡುಮೂರು ರೂಪಾಯಿ ಖರ್ಚುಮಾಡಲು ಸಾಧ್ಯವಿಲ್ಲದ ಬಡವೆಯು ಪ್ಯೂಟೇಲೂ ಆಭರಣಗಳಿರುತ್ತವೆ.

ಇಲ್ಲಿ ಸೊಪ್ಪು ಮುಂತಾದುವು ಅಗ್ಗವಾಗಿ ಸಿಗುತ್ತವೆ. ಇದೇ ಬಡಬಗ್ಗರ ಆಹಾರ.

ಹಜಾಮನಿಗೆ ಕೊಡಬೇಕಾದ ಹಣವೂ ಕಡಿಮೆ. ತಲೆ ಬೋಳಿಸಿ ಮುಖಕ್ಷೌರಮಾಡಿ ಕಿವಿಕೂದಲು ತೆಗೆದು ಉಗುರು ಕತ್ತರಿಸುವುದಕ್ಕೆಲ್ಲಾ ಸೇರಿ ಒಂದು ಅಥವಾ ಎರಡು ಪೈಸೆ.

ಬನಿಯನರು ಬಹು ಚಿಕ್ಕ ವಯಸ್ಸಿನಲ್ಲೇ ಮದುವೆಯಾಗುತ್ತಾರೆ. ಹೀಗೆ ಚಿಕ್ಕ ವಯಸ್ಸಿನಿಂದಲೇ ಆರಂಭವಾದ ಗಂಡಹೆಂಡಿರ ಪ್ರೀತಿಯ ಸಂಸಾರ ಅವರ ಇಡೀ ಜೀವನವೆಲ್ಲ ಸುಖವಾಗಿ ಸಾಗುತ್ತದೆ. ಈ ದೀರ್ಘ ಪ್ರೇಮವೇ ಗಂಡ ಸತ್ತಾಗ ಹೆಂಡತಿ ಅವನ ಚಿತೆಯಲ್ಲಿ ಬೀಳಲು ಕಾರಣ ಇರಬಹುದು.

ಗಂಡಸು ಎರಡನೆಯ ಮದುವೆ ಆಗಬಹುದು. ಆದರೆ ಇದು ಹೆಣ್ಣಿಗೆ ನಿಷೇಧ. ಆರೇಳುವರ್ಷದ ವಯಸ್ಸಿಗೆ ವಿಧವೆಯಾದರೂ ಆಕೆ ಹಾಗೆಯೇ ತನ್ನ ಬಾಳು ಸಾಗಿಸಬೇಕು. ಗಂಡಸು ಒಂದಕ್ಕಿಂತ ಹೆಚ್ಚು ಹೆಂಡಿರನ್ನು ಮದುವೆಯಾಗಬಹುದು. ಇದಕ್ಕೆ ಇಲ್ಲಿಯ ಬಿಸಿಹವೆಯೇ ಕಾರಣ. ಆದರೆ ಇಬ್ಬರು ಹೆಂಡಿರ ಕಾಟ ಇರುಳು ತಿಗಣೆಯ ಕಾಟ ಕಟ್ಟಿಕೊಂಡವನಿಗೇ ಗೊತ್ತು. ಸವತಿಯರಲ್ಲಿ ಹೊಟ್ಟೆಕಿಚ್ಚು ಜಗಳ ಇದ್ದದ್ದೇ. ನಾಯರ್ ಜನರಲ್ಲಿ ಹೆಣ್ಣು ಮದುವೆಯಾಗದೆ ಸತ್ತರೆ ಸ್ವರ್ಗ ಸಿಕ್ಕುವುದಿಲ್ಲ ಎಂಬ ಭಾವನೆ ಇದೆ.

ಕದ್ದು ಮದುವೆಯಾಗುವುದು, ಹೆಣ್ಣನ್ನು ಕದಿಯುವುದು ಇವನ್ನು ಸೂರತ್ತಿನಲ್ಲಿ ಕೇಳಿಯೇ ಇಲ್ಲ. ಮದುವೆಯಾಗುವ ಹೆಣ್ಣು ಗಂಡುಗಳನ್ನು ವಾದ್ಯ ಮುಂತಾದ ವೈಭವಗಳ ಸಮೇತ ಬಹಿರಂಗವಾಗಿ ಮದುವೆ ಮಾಡುತ್ತಾರೆ. ಬ್ರಾಹ್ಮಣ ಪೌರೋಹಿತ್ಯ ವಹಿಸಿ ಲಗ್ನಮಾಡುತ್ತಾನೆ. ಧಾರೆಯ ನಂತರ ಬಂದವರಿಗೆಲ್ಲ ಅತ್ತರುಪನ್ನೀರುಗಳನ್ನು ಚಿಮುಕಿಸಿ ಊಟೋಪಚಾರಗಳಿಂದ ಸತ್ಕರಿಸುತ್ತಾರೆ. ಕೆಲವರು ದಿನಗಟ್ಟಲೆ ಅದ್ದೂರಿಯ ಮದುವೆ ನಡೆಸಿ ದಿವಾಳಿ ಎದ್ದದ್ದೂ ಉಂಟು.

ಮದುವೆಗಳನ್ನು ಎಲ್ಲ ಕಾಲದಲ್ಲೂ ಮಾಡುವುದಿಲ್ಲ. ಅದಕ್ಕೆ ನಿಗದಿಯಾದ ಒಳ್ಳೆಯ ದಿನಗಳಲ್ಲಿ ಮಾತ್ರ ಮಾಡುತ್ತಾರೆ.

ಬ್ರಾಹ್ಮಣರಲ್ಲಿ ಹೆಣ್ಣುಮಕ್ಕಳನ್ನು ಮದುವೆ ಮಾಡುವುದು ತುಂಬ ಕಷ್ಟ. ದುಡ್ಡಿಲ್ಲದವರು ಏನೇನೊ ಉಪಾಯ ಮಾಡಿ ಜನಗಳಿಂದ ಹಣ ಎತ್ತಿ ಮದುವೆ ಮಾಡಿಕೊಡುತ್ತಾರೆ. ಸೂರತ್ತಿನಲ್ಲಿರುವ ಒಂದು ಜಾತಿಯ ಬ್ರಾಹ್ಮಣರು ಮದುವೆಯೇ ಆಗುವುದಿಲ್ಲ. ಆಡಿದರೆ ಮಾಡಿದರೆ ಕುಳಿತರೆ ನಿಂತರೆ ತಾವೆಲ್ಲಿ ಪ್ರಾಣಹತ್ಯೆ ಮಾಡು ತ್ತೇವೊ ಎಂಬ ಭಯ ಇವರಿಗೆ. ಕುಳಿತುಕೊಳ್ಳುವಾಗ ಒಂದು ಚವಲದಿಂದ ಸ್ಥಳವನ್ನು ಗುಡಿಸುತ್ತಾರೆ. ಉಸಿರಾಡಿದರೆ ಗಾಳಿಯಲ್ಲಿರುವ ಕ್ರಿಮಿಗಳನ್ನು ಕೊಂದಂತಾಗವುದೆಂದು ಬಾಯಿಗೆ ಬಟ್ಟೆ ಕಟ್ಟಿಕೊಂಡಿರುತ್ತಾರೆ. ತಣ್ಣೀರು ಕುಡಿದರೆ ಅದರಲ್ಲಿರುವ ಕ್ರಿಮಿಗಳನ್ನು ಕೊಂದಂತೆ ಎಂದು ಅದನ್ನು ಕಾಯಿಸಿ ಕುಡಿಯುತ್ತಾರೆ. ಮುಖಮೋರೆಗಳನ್ನು ಬೋಳಿಸಿಕೊಳ್ಳುವುದಿಲ್ಲ. ಅದರ ಬದಲು ಬೆಳೆದ ಕೂದಲನ್ನು ಒಂದೊಂದಾಗಿ ಕಿತ್ತು ಹಾಕುತ್ತಾರೆ. ಒಟ್ಟಿನಲ್ಲಿ ಇವರು ಇಹದ ಬಗ್ಗೆ ನಿರಾಸಕ್ತಿ ತೋರುತ್ತ ಯಾವಾಗಲೂ ಪರದ ಬಗ್ಗೆಯೇ ಚಿಂತಿಸುತ್ತಿರುತ್ತಾರೆ.[೧]

ಬನಿಯನರಲ್ಲಿ ಹೆರಿಗೆಯಾದ ಹೆಂಗಸು ನಲವತ್ತು ದಿವಸ ಸೂತಕ ಅನುಸರಿಸ ಬೇಕು. ಮೊದಲ ಹತ್ತು ದಿವಸ ದಾದಿಯಲ್ಲದೆ ಬೇರೆಯವರು ಆಕೆಯನ್ನು ಮುಟ್ಟು ವಂತಿಲ್ಲ. ಹತ್ತು ದಿನಗಳನಂತರ ಮಗುವಿಗೆ ನಾಮಕರಣ. ಆ ದಿನ ಬ್ರಾಹ್ಮಣನು ಬರುತ್ತಾನೆ. ಹತ್ತು ಹನ್ನೆರಡು ಮಕ್ಕಳುಗಳು ಒಂದು ಬಿಳಿಯ ಬಟ್ಟೆಯನ್ನು ಸುತ್ತ ಎತ್ತಿಹಿಡಿದು ನಿಂತುಕೊಳ್ಳುತ್ತಾರೆ. ಬ್ರಾಹ್ಮಣನು ಎರಡುಮೂರು ಸೇರು ಅಕ್ಕಿಯನ್ನು ಅದರಲ್ಲಿ ಹಾಕಿ ಅದರ ಮೇಲೆ ಮಗುವನ್ನು ಮಲಗಿಸುತ್ತಾನೆ. ಮಕ್ಕಳುಗಳು ಮಗು ಸಮೇತ ಬಟ್ಟೆಯನ್ನು ಹಿಂದಕ್ಕೂ ಮುಂದಕ್ಕೂ ತೂಗುತ್ತವೆ. ತಂದೆಯ ತಂಗಿ ಎಂದರೆ ಮಗುವಿನ ಸೋದರತ್ತೆ ಹೆಸರುಕಟ್ಟುತ್ತಾಳೆ. ಹೆಸರು ಇಡುವ ಹಕ್ಕು ಅವಳದು. ಅವಳಿಲ್ಲದಿದ್ದರೆ ಮಾತ್ರ ತಂದೆ ತಾಯಿಗಳು ಹೆಸರು ಕಟ್ಟಬಹುದು. ಮೂವತ್ತು ನಲವತ್ತು ದಿವಸಗಳನಂತರ ಮಗುವಿನ ಸಮೇತ ಗುಡಿಗೆ ಹೋಗಿ ಪೂಜೆ

---

೧. ಇವರು ಬ್ರಾಹ್ಮಣರಲ್ಲ. ಜೈನ ಶ್ರಮಣರು ಅಥವಾ ಸನ್ಯಾಸಿಗಳು.

ಮಾಡಿಸಿ ಬ್ರಾಹ್ಮಣನಿಂದ ತೀರ್ಥಹಾಕಿಸಿಕೊಂಡು ಬರುತ್ತಾರೆ. ಅಲ್ಲಿಗೆ ಸೂತಕಗಳೆಲ್ಲ ಕಳೆದಂತೆ.

ನಮ್ಮಲ್ಲಿ ತೊಟ್ಟಿಲುಗಳನ್ನು ನೆಲದಮೇಲೆ ಇಟ್ಟು ಮಗು ಮಲಗಿಸಿ ಅಲ್ಲಾಡಿಸುವಂತೆ ಇಲ್ಲಿ ಮಾಡುವುದಿಲ್ಲ. ಇಲ್ಲಿ ಅವನ್ನು ತೂಗುಹಾಕಿ ಹಿಂದಕ್ಕೂ ಮುಂದಕ್ಕೂ ಆಡಿಸುತ್ತಾರೆ. ಇದು ತುಂಬ ಒಳ್ಳೆಯದು. ಒಂಬತ್ತು ತಿಂಗಳು ತಾಯಿಯ ಹೊಟ್ಟೆಯಲ್ಲಿ ಸುಖ ಅನುಭವಿಸಿದ ಮಗುವು ಭೂಮಿಗೆ ಬಂದಾಗ ಅದಕ್ಕೆ ಯಾವ ಕಷ್ಟವೂ ಆಗಬಾರದೆಂದು ತೊಟ್ಟಿಲಲ್ಲಿ ಹಾಕಿ ತೂಗಿ ಜೋಗುಳ ಹಾಡುವುದು ಎಷ್ಟು ಒಳ್ಳೆಯದು ನೋಡಿ!

ಬನಿಯನರು ಸತ್ತವರನ್ನು ನದಿಯ ಬಳಿ ದಹನ ಮಾಡಿ ಬೂದಿಯನ್ನು ನೀರಿಗೆ ಬಿಡುತ್ತಾರೆ. ಸತ್ತವನ ತಿಥಿಯನ್ನು ಮೊದಲ ಎರಡು ಮೂರು ದಿವಸ ಊಟೋಪಚಾರಗಳಿಂದ ಯಥೇಚ್ಛವಾಗಿ ನಡೆಸುತ್ತಾರೆ. ಆಮೇಲೆ ೧೨ನೆಯ ದಿನ, ೨೦ನೆಯ ದಿನ, ೩೦ನೆಯ ದಿನ, ೪೦ನೆಯ ದಿನಗಳಲ್ಲಿಯೂ ಮಾರನೆಯವರ್ಷದ ಪ್ರತಿ ಮೂರುತಿಂಗಳಲ್ಲಿಯೂ ವರ್ಷದ ಕೊನೆಯವರೆಗೂ ತಿಥಿ ಮಾಡುತ್ತಾಹೋಗುತ್ತಾರೆ. ಇವನ್ನು ನಡೆಸದವನನ್ನು ಜನರು ಬಹು ಜಿಪುಣ ಎಂದು ಜರೆಯುತ್ತಾರೆ.

ಬಹು ಪ್ರೇಮದಿಂದ ಬಾಳಿದ ಸಂಸಾರದಲ್ಲಿ ಹೆಂಡತಿ ಸತ್ತಾಗ ಗಂಡನೂ ಆಕೆಯ ಚಿತೆಯಲ್ಲಿ ಬಿದ್ದು ಸಾಯುತ್ತಿದ್ದನಂತೆ. ಇದು ಬಹು ಹಿಂದೆ ಇಂಡಿಯಾದಲ್ಲಿ ಇದ್ದ ಪದ್ಧತಿ. ಆದರೆ ಈಗ ಹಾಗಿಲ್ಲ. ಈಗ ಹೆಂಡತಿ ಗಂಡನ ಚಿತೆಯಲ್ಲಿ ಬಿದ್ದು ಸಾಯುತ್ತಾಳೆ. ಮುಹಮ್ಮದೀಯರ ಆಳ್ವಿಕೆ ಪ್ರಾರಂಭವಾದ ಮೇಲೆ ಈ ಕ್ರೂರಪದ್ಧತಿ ಬಹುಮಟ್ಟಿಗೆ ನಿಂತುಹೋಗಿದೆಯೆಂದೇ ಹೇಳಬೇಕು.

ಜೆಂಟೈಲರು ಸತ್ತವರನ್ನೆಲ್ಲ ಸಾಮಾನ್ಯವಾಗಿ ದಹನ ಮಾಡಿದರೂ ಕೆಲವು ವೇಳೆ ಹೂಳುವುದೂ ಉಂಟು. ಈ ಕಾರಣ ಅಲ್ಲಲ್ಲಿ ನಾವು ಸಣ್ಣಪುಟ್ಟ ಸಮಾಧಿಗಳನ್ನು ನೋಡಬಹುದು. ಆದರೆ ಯೂರೋಪಿಯನರ ಸಮಾಧಿಗಳಿಗೆ ಹೋಲಿಸಿದರೆ ಇವು ತೀರಾ ಕಳಪೆ.

ಕಳೆದ ಆರು ವರ್ಷಗಳಿಂದ ಸೂರತ್ತಿನಲ್ಲಿ ಒಂದು ಜಾಡ್ಯ ತಾಂಡವಾಡುತ್ತಿದೆ. ಮಳೆಗಾಲದಲ್ಲಿ ಮಾತ್ರ ಇಲ್ಲದ ಈ ಜಾಡ್ಯ ಅದಕ್ಕೆ ಮುಂಚೆ ಮತ್ತು ಆಮೇಲೆ ಆಡಿದ್ದೇ ಆಟ. ಈ ಜಾಡ್ಯದಿಂದೆ ಹಿಂದೂಗಳು ಮತ್ತು ಮುಹಮ್ಮದೀಯರು ಮಾತ್ರ ಸಾಯುತ್ತಾರೆ. ಒಂದೊಂದು ದಿನ ಮುನ್ನೂರು ಹೆಣಗಳನ್ನು ಊರಿನ ಹೊರಕ್ಕೆ ಸಾಗಿಸಿದ್ದುಂಟು. ಆದರೆ ಊರಿನ ಜನಸಂಖ್ಯೆ ಮಾತ್ರ ಕಡಿಮೆಯಾದಂತೆ ಕಾಣುವುದಿಲ್ಲ. ಏಕೆಂದರೆ, ಊರು ಅಷ್ಟೊಂದು ಜನನಿಬಿಡವಾಗಿದೆ. ಹಿಂದೂಗಳನ್ನೂ ಮುಹಮ್ಮದೀಯರನ್ನೂ ಬಲಿತೆಗೆದುಕೊಳ್ಳುವ ಈ ಜಾಡ್ಯ ನಮ್ಮ ಇಂಗ್ಲಿಷರ ತಂಟೆಗೆ ಬಂದಿಲ್ಲದಿರುವುದನ್ನು ನೋಡಿ ನಮಗೆ ಆಶ್ಚರ್ಯ. ನಮ್ಮ ಬಳಿ ಒಳಗೆ ಹೊರಗೆ ಕೆಲಸಮಾಡುವ ಆಳುಗಳು ನಮ್ಮೊಡನೆ

ಇರುವವರೆಗೆ ಅವರಿಗೆ ಏನೂ ಇಲ್ಲ. ನಮ್ಮನ್ನು ಬಿಟ್ಟಕೂಡಲೇ ಅವರಿಗೂ ಅದೇ ಜಾಡ್ಯ. ಇದು ಏಕೆ ಎಂದು ಯೋಚಿಸಿದರೆ, ನಾವು ತಿನ್ನುವ ಒಳ್ಳೆಯ ಆಹಾರ, ಕುಡಿಯುವ ಮದ್ಯ ಕಾರಣವೆಂದು ಹೇಳಬಹುದು. ಆದರೆ ಇಲ್ಲಿಯವರಂತೆ ಬಡಕ ಲಾಗಿರುವ ನಮ್ಮ ಇಂಗ್ಲಿಷಿನವರಿಗೂ ಈ ಜಾಡ್ಯ ಬರದಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಇದಕ್ಕೆಲ್ಲಾ ನಮ್ಮ ಮೇಲೆ ದೇವರ ದಯೆ ಚೆನ್ನಾಗಿದೆ ಎಂದು ಇಂಡಿಯನರು ಹೇಳುತ್ತಾರೆ.

೧೬೮೯ರಲ್ಲಿ ಬಲ್ಸಾರಾದಿಂದ ಬಂದ ಸುದ್ದಿಯ ಪ್ರಕಾರ ಅಲ್ಲಿ ಯಾವುದೋ ಒಂದು ಜಾಡ್ಯದಿಂದ ಹದಿನೆಂಟು ದಿನಗಳಲ್ಲಿ ಎರಡುಲಕ್ಷ ಜನ ಸತ್ತುಹೋದರಂತೆ.

ಇಂಡಿಯಾದ ಜನ ಸಾಯುವುದು ಹೆಚ್ಚಾಗಿ ಜ್ವರದಿಂದ. ಯೂರೋಪಿಯನರು ಹೇಗೋ ಈ ಜ್ವರದಿಂದ ಪಾರಾಗುತ್ತಾರೆ. ಜನರನ್ನು ಆಹುತಿ ತೆಗೆದುಕೊಳ್ಳುವ ಇನ್ನೊಂದು ಪೀಡೆ ಎಂದರೆ ವಾಂತಿಭೇದಿ. ಇದು ಮಿತಿಮೀರಿ ತಿನ್ನುವುದರಿಂದ, ಅದರಲ್ಲೂ ಮೀನು ಮಾಂಸಗಳನ್ನು ಒಟ್ಟಿಗೆ ತಿನ್ನುವುದರಿಂದ ಆಗುತ್ತದೆ. ಯೂರೋಪಿ ಯನರನ್ನು ಕೆಲವು ವೇಳೆ ಪೀಡಿಸುವ ರೋಗವೆಂದರೆ ದೇಹದ ಅಂಗಾಂಗಗಳು ಕೆಲಸ ಮಾಡದೆಹೋಗುವುದು. ಇದಕ್ಕೆ ಕಾರಣ ರಾತ್ರಿಯ ವೇಳೆ ದೇಹವನ್ನು ಚಳಿಯಿಂದ ರಕ್ಷಣೆ ಮಾಡಿಕೊಳ್ಳದಿರುವುದು. ಪರಿಹಾರವೆಂದರೆ 'ಹಮ್‌ಹಮ್'ಗಳಲ್ಲಿ ಬಿಸಿ ನೀರಿನ ಸ್ನಾನ ಮಾಡುವುದು. ಇವು ಇಲ್ಲಿ ಹೇರಳವಾಗಿವೆ.

ಇಂಡಿಯಾದಲ್ಲಿ ನೇಟೀವ್ ಪಂಡಿತರು ಜ್ವರಕ್ಕೆ ಕೊಡುವ ಬಿಳಿಯ ಪುಡಿ ಇಂಗ್ಲೆಂಡಿ ನಲ್ಲಿಯೂ ಉಪಯೋಗದಲ್ಲಿದೆ. ಇಲ್ಲಿಯ ಪಂಡಿತರು ಇದನ್ನು ಅಲ್ಲಿಗೂ ಕಳುಹಿಸಿ ಕೊಡುತ್ತಾರೆ. ಈ ಪಂಡಿತರು ಕೊಡುವ ಔಷಧಿಗಳು ದೇಹಕ್ಕೆ ತಂಪನ್ನು ಉಂಟು ಮಾಡುತ್ತವೆ.

ಕೆಲವು ಬ್ರಾಹ್ಮಣರು ಸಾಮಾನ್ಯವಾಗಿ ದೇವತಾಶಾಸ್ತ್ರದಲ್ಲಷ್ಟೇ ಅಲ್ಲದೆ ಗಣಿತ, ಜ್ಯೋತಿಷ್ಯ ಮತ್ತು ವೈದ್ಯಗಳಲ್ಲಿಯೂ ಪರಿಣತರಾಗಿದ್ದಾರೆ. ನಮ್ಮ ಇಂಗ್ಲಿಷ್ ಮಹಿಳೆ ಯೊಬ್ಬಳು ಬಹಳ ದಿನದಿಂದ ಕಾಯಿಲೆ ಬಿದ್ದಿದ್ದಳು. ಅವಳನ್ನು ನೋಡಲು ಒಬ್ಬ ಬ್ರಾಹ್ಮಣ ಪಂಡಿತನನ್ನು ಕರೆಸಿದೆವು. ಆತ ಆಕೆಯ ಮೂತ್ರದ ಪರೀಕ್ಷೆ ಮಾಡಬೇಕೆಂದು ಹೇಳಿದ. ಒಂದು ಪಿಂಗಾಣಿ ಬಟ್ಟಲಿನಲ್ಲಿ ತಂದುಕೊಟ್ಟ ಮೂತ್ರದ ಮೇಲೆ ಆತ ಯಾವುದೋ ಒಂದು ತೊಟ್ಟು ಎಣ್ಣೆ ಹಾಕಿದ. ಹಾಗೆ ಮಾಡಿ 'ಈ ಎಣ್ಣೆ ತಳಕ್ಕೆ ಇಳಿದರೆ ಸಾವು ತಪ್ಪದು, ಎಣ್ಣೆ ಮೂತ್ರದ ಮೇಲೆ ಹರಡಿದರೆ ಕಾಯಿಲೆ ಇನ್ನೂ ಉಲ್ಬಣಿಸುವುದು. ನಿಧಾನವಾಗಿ ಸ್ವಲ್ಪಸ್ವಲ್ಪವಾಗಿ ಹರಡಿದರೆ ಕಾಯಿಲೆ ಗುಣವಾಗು ವುದು' ಎಂದು ಹೇಳಿದ.

ಹೊಟ್ಟೆಯ ಕಾಯಿಲೆ ಕಸಾಲೆಗಳಿಗೆ ಇಲ್ಲಿ ಸಾಮಾನ್ಯವಾಗಿ ಗಿಡಮೂಲಿಕೆಗಳ ಔಷಧಿ ಮತ್ತು ಗಂಜಿ ಪಥ್ಯ ಹೇಳುತ್ತಾರೆ. ಇವು ಶರೀರಕ್ಕೆ ತಂಪು ಉಂಟುಮಾಡುತ್ತವೆ.

ಇಂಡಿಯಾದಲ್ಲಿ ಹಾಗೂ ಚೀನಾದಲ್ಲಿ ಇರುವ ನಾಡಿಪರೀಕ್ಷೆಯನ್ನು ನಾನೆಷ್ಟೇ ಪ್ರಯತ್ನಪಟ್ಟರೂ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ.

ಜೋತಿಷ್ಯದಲ್ಲಿ ಪರಿಣತರಾದ ಬ್ರಾಹ್ಮಣರು ಸೂರ್ಯಗ್ರಹಣ ಚಂದ್ರಗ್ರಹಣ ಗಳನ್ನು ಕರಾರುವಕ್ಕಾಗಿ ಹೇಳಬಲ್ಲರು. ಇವರು ಮಂತ್ರತಂತ್ರಗಳಲ್ಲೂ ಎತ್ತಿದಕೈ. ಹಿಂದೆ ಸೂರತ್ತಿನಲ್ಲಿದ್ದ ಪ್ರೆಸಿಡೆಂಟ್ ಮಿ॥ ಆಜ್ಜಿಯ ಎಂಬುವರು ಒಮ್ಮೆ ಚಿಂತಾಕ್ರಾಂತ ರಾಗಿ ಕುಳಿತುಬಿಟ್ಟರು. ಇಂಗ್ಲೆಂಡಿನಿಂದ ಹಡಗು ಬಂದರೆ ಮಾತ್ರ ತಮ್ಮ ಚಿಂತೆ ಪರಿಹಾರವಾಗುತ್ತದೆ, ಮತ್ತೆ ಯಾವುದರಿಂದಲೂ ಪರಿಹಾರವಿಲ್ಲ ಎಂದು ಒಬ್ಬ ಬ್ರಾಹ್ಮ ಣನ ಸಂಗಡ ಹೇಳಿದರಂತೆ. ಮೂರು ದಿವಸ ವಾಯಿದೆ ತೆಗೆದುಕೊಂಡುಹೋದ ಆ ಬ್ರಾಹ್ಮಣ ವಾಯಿದೆ ಕಳೆದನಂತರ ಬಂದು ಇಂಥ ದಿವಸ ಹಡಗೊಂದು ಸೂರತ್ತಿಗೆ ಬರುತ್ತದೆ, ಅದರಲ್ಲಿ ಇಂಥ ಮನುಷ್ಯ ಬರುತ್ತಾನೆ ಎಂದು ಹೇಳಿ ಹೋದ. ಅದರಂತೆಯೇ ನಡೆಯಿತು. ಪ್ರೆಸಿಡೆಂಟನಿಗೆ ತುಂಬ ಸಂತೋಷವಾಯಿತು. ಬ್ರಾಹ್ಮಣನಿಗೆ ಮರ್ಯಾದೆ ಮಾಡಿ ಕಳುಹಿಸಿಕೊಟ್ಟ. ಅಗೋಚರ ಶಕ್ತಿಗಳು ಏನೇನು ಕೆಲಸಮಾಡಬಲ್ಲವು ಎಂದು ಹೇಳುವುದು ಕಷ್ಟ.

ಸೂರತ್‌ನಿಂದ ಎರಡು ಮೈಲಿ ದೂರದಲ್ಲಿ ಹರಿಯುವ ಸುಂದರವಾದ ನದಿಯ ತಾಣದಲ್ಲಿ ಪುಲ್‌ಪರ್ರೋಕ್ ( pulparrock ) ಎಂಬ ದೊಡ್ಡ ಉದ್ಯಾನವನ ವಿದೆ. ಇಷ್ಟೊಂದು ಆಹ್ಲಾದಕರವಾದ ಜಾಗ ಸೂರತ್ತಿನಲ್ಲಿ ಬೇರೊಂದಿಲ್ಲ. ಇದು ಫಕೀರರ (ಸಾಧುಸಂತರ) ಆವಾಸವೂ ಆಗಿದೆ. ಈ ಫಕೀರರು ತಾವು ರಾವಣನ ವಂಶಸ್ಥರು ಎಂದು ಹೇಳಿಕೊಳ್ಳುತ್ತಾರೆ. ಮೊದಮೊದಲು ಮೆತ್ತಗಿದ್ದ ಈ ಜನ ಈಗ ಭಾರಿ ಪುಂಡರಂತೆ ವರ್ತಿಸುತ್ತಾರೆ. ಕೇಳಿದ್ದನ್ನು ಸುಮ್ಮನೆ ಕೊಡದಿದ್ದರೆ ಬಲಾತ್ಕಾರ ದಿಂದ ಕಿತ್ತುಕೊಳ್ಳುತ್ತಾರೆ. ಇವರನ್ನು 'ಫಕೀರರು' ಎಂದು ಇಲ್ಲಿ ಕರೆಯುತ್ತಾರೆ. ಆದರೆ ನಾವು ಇವರನ್ನು 'ಬೂದಿಬಡುಕರು' (ashmen) ಎಂದು ಕರೆಯುತ್ತೇವೆ. ಇವರು ಮೈಗೆಲ್ಲ ಬೂದಿ ಬಳಿದುಕೊಂಡು ಜಟಾಧಾರಿಗಳಾಗಿ ಹೇಗೆಂದರೆ ಹಾಗೆ ಇರುತ್ತಾರೆ. ಬಗೆಬಗೆಯ ಭಂಗಿಗಳಲ್ಲಿ ಕುಂತು ನಿಂತು ಮಲಗಿ ಧ್ಯಾನ ಮಾಡುತ್ತಾರೆ.

ಸುಗ್ಗಿಯ ಹಬ್ಬದ ವೇಳೆ ಕಾರವಾರದ ಬಳಿ ಒಂದು ಆಚರಣೆಯನ್ನು ಈಗಲೂ ನಡೆಸುತ್ತಾ ಬರಲಾಗುತ್ತಿದೆ. ಬ್ರಾಹ್ಮಣರು ದೇವರಿಗೆ ಕೋಳಿಯನ್ನು ಬಲಿಕೊಡು ತ್ತಾರೆ. ಹಾಗೆ ಬಲಿಕೊಡುತ್ತಿದ್ದಂತೆ ಹರಕೆ ಹೊತ್ತವರು ತಮ್ಮ ಮೇಲೆ ದೇವರು ಬಂದಂತೆ ಗಡಗಡನೆ ನಡುಗುತ್ತಾ ಇರುತ್ತಾರೆ. ಇವರಲ್ಲಿ ಆರು ಗಂಡಸರು ಮತ್ತು ಆರು ಹೆಂಗಸರನ್ನು ತಮ್ಮ ಹರಕೆ ಸಲ್ಲಿಸಲು ಆರಿಸುತ್ತಾರೆ. ಗಂಡಸರ ಬೆನ್ನಿಗೆ ಎರಡು ಕಬ್ಬಿಣದ ಕೊಕ್ಕೆಗಳನ್ನು ಸಿಕ್ಕಿಸುತ್ತಾರೆ. ನಾಲ್ಕು ಚಕ್ರದ ಬೋಳು ರಥದ ಮೇಲೆ ಇರುವ ಸಿಡಿಯ ಮರಕ್ಕೆ ಈ ಕೊಕ್ಕೆಗಳನ್ನು ಸಿಕ್ಕಿಸಿ ೨೦ ಅಡಿ ಮೇಲಕ್ಕೆ ಎತ್ತುತ್ತಾರೆ. ಹೆಂಗಸರ ತಲೆಯ ಮೇಲೆ ಒಂದು ತಟ್ಟೆ. ಆ ತಟ್ಟೆಯಲ್ಲಿ ಒಂದರಮೇಲೊಂದರಂತೆ ಜೋಡಿಸಿದ ಟೀ ಲೋಟದಷ್ಟು ದೊಡ್ಡದಾದ ಆರು ಬಟ್ಟಲುಗಳು. ಅವುಗಳಲ್ಲಿ ಬೆಂಕಿ

ಉರಿಯುತ್ತಿರುತ್ತದೆ. ಆರತಿ ಹೊತ್ತ ಆರು ಜನ ಹೆಂಗಸರು ಸಿಡಿಯೊಡನೆ ಊರಿನಲ್ಲಿ ಮೆರವಣಿಗೆ ಹೊರಡುತ್ತಾರೆ. ಒಂದು ಮೈಲಿ ದೂರದ ಹಳ್ಳಕೊಳ್ಳದ ಊರಿನ ಬೀದಿಗಳಲ್ಲಿ ಬಹು ಎಚ್ಚರಿಕೆಯಿಂದ ಆರತಿಗಳನ್ನು ಹೊತ್ತು ಸಾಗಬೇಕು. ಏನಾದರೂ ಹೆಚ್ಚುಕಡಿಮೆ ಆದರೆ ಆ ಹೆಂಗಸಿನ ಪ್ರಾಣಕ್ಕೆ ಸಂಚಕಾರ. ಇನ್ನು ಬೆನ್ನಿಗೆ ಕಬ್ಬಿಣದ ಕೊಕ್ಕೆ ಸಿಕ್ಕಿಸಿಕೊಂಡು ಮರದ ತುದಿಯಿಂದ ತೂಗಾಡುತ್ತಿರುವವರಂತೂ ಯಾವ ಯಾತನೆಯನ್ನೂ ಮುಖದಲ್ಲಿ ಸೂಚಿಸದೆ ಖುಷಿಯಾಗಿ ಕೈಯಲ್ಲಿ ಕತ್ತಿ ಹಿಡಿದು ಬೀಸುತ್ತಾ ಹೋಗುತ್ತಾರೆ.

ಸೂರತ್ತಿನಲ್ಲಿರುವ ಇಂಗ್ಲಿಷ್ ಫ್ಯಾಕ್ಟೊರಿಗಾಗಿ ಈಸ್ಟ್ ಇಂಡಿಯಾ ಕಂಪನಿ ವರ್ಷಕ್ಕೆ ಒಂದು ಲಕ್ಷ ಪೌಂಡುಗಳನ್ನು ವೆಚ್ಚಮಾಡುತ್ತಿದೆ.[೧] ಕಂಪನಿಯು ತನ್ನ ರಾಷ್ಟ್ರದ ಘನತೆ ಗೌರವಗಳಿಗೆ ತಕ್ಕಂತೆ ತಮ್ಮ ಜನರು ಬಾಳಬೇಕೆಂಬ ಉದ್ದೇಶದಿಂದ ಇಷ್ಟು ಹಣವನ್ನು ಒದಗಿಸುತ್ತದೆ. ಸೂರತ್, ಫೋರ್ಟ್ ಸೆಂಟ್ ಜಾರ್ಜ್, ಪರ್ಷಿಯಾದ ಗೊಂಬ್ರೂನ್

---

೧. ಸೂರತ್: ಇಂಡಿಯಾದ ಪಶ್ಚಿಮ ಕರಾವಳಿ ತೀರದ ಊರುಗಳಲ್ಲಿ ಸೂರತ್ತು ಹೇಳ ಬಹುದಾದಷ್ಟು ಕಥೆಯನ್ನು ಬೇರೆ ಊರುಗಳು ಹೇಳಲಾರವು. ಏಕೆಂದರೆ, ಬೊಂಬಾಯಿ ಪ್ರಾಮುಖ್ಯತೆ ಪಡೆಯುವ ಮುನ್ನ ಸೂರತ್ ಎಲ್ಲ ವಿಧದಲ್ಲೂ ಪ್ರಖ್ಯಾತವಾಗಿತ್ತು. ೧೬೦೮ರಲ್ಲಿಯೇ ಈಸ್ಟ್ ಇಂಡಿಯ ಕಂಪೆನಿಯ ಮೊದಲ ಹಡಗು ಸೂರತ್ತಿಗೆ ಬಂದಿತು. ವಿಲಿಯಂ ಹಾಕಿನ್ಸ್ ಮತ್ತು ಇತರ ಇಂಗ್ಲಿಷರು ಹಡಗಿನಲ್ಲಿ ಬಂದು ಸಾಹಸವನ್ನೇ ಮಾಡಿದರೆನ್ನಬೇಕು. ಏಕೆಂದರೆ ಸಾವಿರಾರು ಮೈಲಿಗಳ ಗೊತ್ತು ಗುರಿಯಿಲ್ಲದ ಸಮುದ್ರಯಾನ, ಪೋರ್ಚುಗೀಸ್ ಮತ್ತು ಸ್ಪಾನಿಯರ್ಡ್ ಕಡಲುಗಳ್ಳರ ಹಾವಳಿ ಗಳಿದ್ದುವು. ಹೀಗಿದ್ದೂ ಏಕೆ ಬಂದರು? ಇದಕ್ಕೆ ಉತ್ತರ, ಸಾಂಬಾರ ವಸ್ತುಗಳು ಮತ್ತು ಪ್ರವಾಸ ಮಾಡುವ ಕುತೂಹಲ. ಮೊದಲನೆಯ ಜೇಮ್ಸ್ ಆಳುತ್ತಿದ್ದ ಇಂಗ್ಲೆಂಡಿನಲ್ಲಿ ಟೀ, ಕಾಫೀ, ತಂಬಾಕು, ಸಕ್ಕರೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಆಹಾರದ ರುಚಿಗಾಗಿ ಬೇಕಾದ ಸಾಂಬಾರವಸ್ತುಗಳಿಗೆ ಬೇಡಿಕೆ ಇತ್ತು. ಆಗ್ಗೆ ಸೂರತ್ ಸಾಂಬಾರವಸ್ತುಗಳಿಗೆ ಕೇಂದ್ರವಾಗಿತ್ತು. ಅಲ್ಲದೆ ಮೊಗಲ ಚಕ್ರವರ್ತಿಯ ಐಶ್ವರ್ಯಕ್ಕೂ ಈ ಬಂದರು ಕಾರಣವಾಗಿತ್ತು. ಹಾಕಿನ್ಸ್ ಬರುವ ಮುನ್ನ ೧೫೮೩ರಲ್ಲಿ ರಾಲ್ಫ್ ಫಿಚ್, ವಿಲಿಯಂ ಲೀಡ್ಸ್, ಜೇಮ್ಸ್ ಸ್ಟೋರಿ ಎಂಬ ಯುವಕರು ಸ್ವಂತವಾಗಿ ಸೂರತ್ತಿಗೆ ಬಂದುಹೋಗಿದ್ದರು. ಭೂ ಮಾರ್ಗವಾಗಿ ತ್ರಿಪೊಲಿಗೆ ಬಂದು ಅಲ್ಲಿಂದ ಸೂರತ್ತಿಗೆ ಹಡಗಿನಲ್ಲಿ ಬಂದಿದ್ದರು. ಈ ಎರಡು ಯಾತ್ರೆ ಗಳಿಂದ ಏನೂ ಪ್ರಯೋಜನ ಆಗಲಿಲ್ಲ. ಇದರಿಂದ ನಿರಾಶರಾಗದ ಇಂಗ್ಲಿಷರು ೧೬೧೨ರಲ್ಲಿ ಮತ್ತೊಂದು ಹಡಗು ತಂಡ ಕಳುಹಿಸಿದರು. ಕ್ಯಾಪ್ಟನ್ ಬೆಸ್ಟ್ ಎಂಬುವನ ನಾಯಕತ್ವದಲ್ಲಿ ಬಂದ ಹಡಗುಗಳಿಗೂ ಪೋರ್ಚುಗೀಸರ ಹಡಗುಗಳಿಗೂ ಭಾರಿ ಹೋರಾಟವಾಯಿತು. ಕೊನೆಗೆ ಇಂಗ್ಲಿಷರೇ ಗೆದ್ದರು. ಇಂಗ್ಲಿಷರ ಈ ಅದ್ಭುತ ಜಯವನ್ನು ಕೇಳಿದ ಮೊಗಲ್‌ಚಕ್ರವರ್ತಿಯು ಅವರು ಸೂರತ್ತಿನಲ್ಲಿ ವ್ಯಾಪಾರ ಸಾಪಾರ ನಡೆಸಬಹುದೆಂದು ಫರ್ಮಾನ್ ಕೊಟ್ಟ. ಈ ಒಂದು ಅನುಕೂಲದಿಂದಾಗಿ ನೂರು ವರ್ಷಗಳನಂತರ ಇಂಗ್ಲಿಷರು ಮೊಗಲ್ ಸಾಮ್ರಾಜ್ಯಕ್ಕೇ ಮುಳಿಯಾಗುತ್ತಾರೆಂದು ಆಗ ಅರಿವಾಗಲೇ ಇಲ್ಲ. ಫರ್ಮಾನ್ ಪಡೆದ ಕ್ಯಾಪ್ಟನ್ ಬೆಸ್ಟ್ ಸೂರತ್ತಿನಲ್ಲಿ ಇಂಗ್ಲಿಷರ ವಸಾಹತು ಸ್ಥಾಪಿಸಲು ತನ್ನ ಕಡೆಯ ಐದು ಜನರನ್ನು ಬಿಟ್ಟು ಇಂಗ್ಲೆಂಡಿಗೆ ಹಿಂದಿರುಗಿದ. ಮಾರನೆಯ ವರ್ಷದಲ್ಲಿಯೇ ಅಂದರೆ ೧೬೧೩ರಲ್ಲಿ ಕ್ಯಾಪ್ಟನ್ ಡೌನ್‌ಟನ್ ಎಂಬುವನ ನೇತೃತ್ವದಲ್ಲಿ ಕಂಪೆನಿಯು ಇನ್ನೊಂದು ಹಡಗು ತಂಡವನ್ನು ಕಳುಹಿಸಿತು. ಮತ್ತೆ ಪೋರ್ಚುಗೀಸರು ತಮ್ಮ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದರು. ಆಗಲೂ ಅವರು ವಿಫಲರಾದರು. ಇಂಗ್ಲಿಷರು ಧೈರ್ಯವಾಗಿ ವ್ಯಾಪಾರದಲ್ಲಿ ತೊಡಗಿದರು. ಸರ್ ಥಾಮಸ್ ರೊ ಇಂಗ್ಲೆಂಡ್ ದೊರೆಯ ರಾಯಭಾರಿಯಾಗಿ ಇಂಡಿಯಾಕ್ಕೆ ಬಂದು ಮೊಗಲ್ ಚಕ್ರವರ್ತಿ ಜಹಾಂ

ಮತ್ತು ಬಂಗಾಳದ ಇಂಗ್ಲಿಷರ ಫ್ಯಾಕ್ಟರಿಗಳಲ್ಲಿರುವ ಅಧ್ಯಕ್ಷರುಗಳೂ (Presidents) ದಳ್ಳಾಳಿಗಳೂ (Agents) ಅದ್ದೂರಿಯಿಂದ ಕಾರುಬಾರು ನಡೆಸುತ್ತಾ ತಮ್ಮ ಬಾಳುವೆ ನಡೆಸುತ್ತಾರೆ. ಅವರಿಗೆ ಕಾರಕೂನರೂ (Writers) ಇತರ ಸಿಬ್ಬಂದಿಯವರ ನೆರವೂ ಇರುತ್ತದೆ.

ಸೂರತ್ತಿನಲ್ಲಿರುವ ಇಂಗ್ಲಿಷರ ಮನೆ ಮೊಗಲನಿಗೆ ಸೇರಿದ್ದು. ಇಡೀ ನಗರ ದಲ್ಲಿರುವ ತುಂಬಾ ಅನುಕೂಲವಾದ ಮನೆ ಎಂದರೆ ಇದೇ. ಇದು ಪ್ರೆಸಿಡೆಂಟರ ಸ್ಥಾನಮಾನಕ್ಕೆ ತಕ್ಕಂತಹ ವಸತಿಸೌಕರ್ಯವನ್ನು ಒದಗಿಸುವುದರ ಜೊತೆಗೆ ನಲವತ್ತು ಜನ ಇರಬಹುದಾದಷ್ಟು ದೊಡ್ಡದಾಗಿದೆ. ಈ ಮನೆಗೆ ಬಾಡಿಗೆ ವರ್ಷಕ್ಕೆ ೬೦ ಪೌಂಡು ಗಳು. ಇದನ್ನು ಮನೆಯ ದುರಸ್ತು ಮತ್ತು ಸುಣ್ಣಬಣ್ಣಗಳಿಗೆ ಖರ್ಚು ಮಾಡಬಹುದೆಂದು

---

ಗೀರನನ್ನು ಕಂಡು ಇಂಡಿಯಾದ ಎಲ್ಲಾ ಬಂದರುಗಳಲ್ಲಿ ಇಂಗ್ಲಿಷರು ವ್ಯಾಪಾರ ವಹಿವಾಟು ಗಳನ್ನು ನಡೆಸಬಹುದೆಂದೂ, ಇಂಗ್ಲಿಷರು ಎಲ್ಲಿ ಬೇಕಾದರೂ ನೆಲೆಸಬಹುದೆಂದೂ ಅನುಮತಿ ಪಡೆದ. ಅದೇ ವರ್ಷ ಇಂಗ್ಲಿಷರು ಸೂರತ್ತಿನಲ್ಲಿ ತಮ್ಮ ಮೊದಲ ಫ್ಯಾಕ್ಟರಿ (Factory –ಗಡಂಗು) ಸ್ಥಾಪಿಸಿದರು. ಕೇವಲ ನಾಲ್ಕೈದು ಇಂಗ್ಲಿಷರಿದ್ದ ಕಡೆ ಈಗ ೪೦ಕ್ಕೂ ಮೀರಿ ಇಂಗ್ಲಿಷರು ಇರಲಾರಂಭಿಸಿ ದರು. ಇವೆಲ್ಲವುಗಳ ವೆಚ್ಚ ವರ್ಷಕ್ಕೆ ಒಂದು ಲಕ್ಷ ಪೌಂಡುಗಳು. ಸೂರತ್ತಿನಲ್ಲಿ ಇಂಗ್ಲಿಷ್ ಕಂಪೆನಿ ತನ್ನ ಫ್ಯಾಕ್ಟರಿಗಾಗಿ ಪಡೆದ ಮನೆ ಆ ಊರಿನಲ್ಲಿ ಇದ್ದ ಭಾರಿ ಮನೆಗಳಲ್ಲಿ ಒಂದು. ಬೇಕಾದ ಸೌಕರ್ಯಗಳೆಲ್ಲಾ ಇದರಲ್ಲಿದ್ದುವು. ಬೇರೆ ಅನುಕೂಲತೆಗಳ ಜೊತೆಗೆ ಮದ್ಯಗಳ ಕೋಠಿ, ಸರಕುಗಳ ಗಡಂಗುಗಳು, ನೀರಿನ ಕೊಳ, ತುರ್ಕಿ ಸ್ನಾನದ ಕೋಣೆಗಳು ಇತ್ಯಾದಿ ಇದ್ದುವು. ಪ್ರೆಸಿಡೆಂಟ್ ಫ್ಯಾಕ್ಟರಿಯ ಮುಖ್ಯಸ್ಥ. ಅವನ ಕೆಳಗೆ ಕ್ರಮವಾಗಿ ಅಕೌಂಟೆಂಟ್, ಸ್ಟೋರ್ ಕೀಪರ್ ಮತ್ತು ಪರ್ಸರ್ ಮರೀನ್. ಈ ನಾಲ್ಕು ಜನರು ಸೇರಿ ಸಮಾಲೋಚನಾ ಮಂಡಳಿ. ಫ್ಯಾಕ್ಟರಿಯ ಆಡಳಿತ ಈ ಸಮಾ ಲೋಚನಾ ಮಂಡಳಿಗೆ ಸೇರಿತ್ತು. ಇವರ ಕೆಳಗೆ ಸೆಕ್ರೆಟರಿ ಮತ್ತು ಚಾಪ್ಲೆನ್. ಫ್ಯಾಕ್ಟರಿಯಲ್ಲಿ ಕಠಿಣ ದಿನಚರ್ಯೆಯೂ ಒಳ್ಳೆಯ ಅನುಕೂಲಗಳೂ ಇದ್ದುವು. ಒಂದೇ ಕಡೆ ಎಲ್ಲರೂ ಊಟಮಾಡುತ್ತಿದ್ದರು. ಬೆಳಗಿನ ಹೊತ್ತು ಒಂದೇ ಕಡೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಪ್ರೆಸಿಡೆಂಟನ ಅನುಮತಿ ಇಲ್ಲದೆ ಯಾರೂ ಹೊರಗೆ ಹೋಗುವಂತಿರಲಿಲ್ಲ. ರುಚಿರುಚಿಯಾದ ಅಡುಗೆಗಳನ್ನು ಮಾಡಿಸಿ ಪಟ್ಟಾಗಿ ಕುಡಿದು ತಿನ್ನು ತ್ತಿದ್ದರು. ಇದಕ್ಕಾಗಿ ಇಂಗ್ಲಿಷ್, ಪೋರ್ಚುಗೀಸ್ ಮತ್ತು ಇಂಡಿಯಾದ ಅಡುಗೆಯವರನ್ನು ನೇಮಿಸಿ ಕೊಂಡಿದ್ದರು. ಹೊರಗಡೆ ಹೋದಾಗ ಬಾವುಟಗಳನ್ನು ಹಿಡಿಸಿಕೊಂಡು ತುತ್ತೂರಿಗಳನ್ನು ಊದಿ ಸಿಕೊಂಡು ಭಾರಿ ಅದ್ದೂರಿಯಿಂದ ಅಡ್ಡಾಡುತ್ತಿದ್ದರು. ಈ ಸುಖ ಸೌಭಾಗ್ಯಗಳ ಜೊತೆಗೆ ಕಿರುಕುಳಗಳೂ ಇದ್ದುವು. ಸೂರತ್ತಿನಲ್ಲಿದ್ದ ಮೊಗಲ್ ಚಕ್ರವರ್ತಿಯ ನವಾಬರು ಒಂದಲ್ಲ ಒಂದು ತೊಂದರೆ ಕೊಟ್ಟು ಹಣ ಕೀಳುತ್ತಿದ್ದರು. ಕೊನೆಗೆ ಸೂರತ್ತೇ ಇಂಗ್ಲಿಷರ ಅಧೀನಕ್ಕೆ ಒಳಪಟ್ಟಿತು. ಆದರೆ ಸೂರತ್ತಿಗೆ ಒದಗಿದ ಸೌಭಾಗ್ಯ ಹೆಚ್ಚು ದಿನ ಉಳಿಯಲಿಲ್ಲ. ಸೂರತ್ತಿಗೆ ಬದಲು ಬೊಂಬಾಯಿ ಇಂಗ್ಲಿಷರ ಕೇಂದ್ರ ವಾಯಿತು. ೧೬೮೭ರಲ್ಲಿ ಕಂಪೆನಿಯ ಕೇಂದ್ರವನ್ನು ಸೂರತ್ತಿನಿಂದ ಬೊಂಬಾಯಿಗೆ ಬದಲಾಯಿಸಿದರು. ಅಲ್ಲಿಯವರೆಗೆ ಸೂರತ್ತಿನ ವೈಭವವೇ ವೈಭವ! ಅಂಗಡಿ ಮುಂಗಟ್ಟುಗಳಲ್ಲಿ ಚಿನ್ನ, ಬೆಳ್ಳಿ, ರೇಷ್ಮೆ ಮತ್ತು ಇತರ ಬೆಲೆಯಾದ ವಸ್ತುಗಳ ವ್ಯಾಪಾರ, ವೈಭವದ ಉಡುಪು ಧರಿಸಿದ ಮೊಗಲ್ ಶ್ರೀಮಂತ ಸರದಾರರ ಓಡಾಟ, ತಲೆಗೆ ಹಕ್ಕಿ ಗರಿಯ ಶಿರಸ್ತ್ರಾಣ ಹಾಗೂ ಸೊಂಟಕ್ಕೆ ಸಿಕ್ಕಿಸಿದ ಕತ್ತಿಯ ಇಂಗ್ಲಿಷ್ ಫ್ಯಾಕ್ಟರ್‌ಗಳ ಅಡ್ಡಾಟ, ತಪತಿ ನದಿಯ ಮೇಲೆ ವ್ಯಾಪಾರದ ಸರಕುಗಳನ್ನು ತುಂಬಿದ ಭಾರಿ ಭಾರಿ ಹಡಗುಗಳ ನೂಕು ನುಗ್ಗಾಟ—ಇವೆಲ್ಲಾ ಸೂರತ್ತಿನ ಹಿಂದಿನ ವೈಭವಗಳು.

ಮನೆಯ ಮಾಲಿಕ ಔರಂಗಜೇಬನು ಉದಾರವಾಗಿ ಅನುಮತಿ ನೀಡಿ ತುಂಬಾ ಉಪಕಾರ ಮಾಡಿದ್ದಾನೆ. ಹೀಗಾಗಿ ಅವನಿಗೆ ಬಾಡಿಗೆ ಸಂದಾಯವಾಗುತ್ತಲೇ ಇಲ್ಲ. ಈ ಮನೆಯಲ್ಲಿ ಸಾಮಾನು ಸರಂಜಾಮುಗಳನ್ನು ಇಡಲು ನೆಲಮಾಳಿಗೆಗಳೂ ನೀರಿಗಾಗಿ ಒಂದು ಕೊಳವೂ (tank) ಮತ್ತು ಹಮ್‌ಹಮ್ (humhum–ಬಿಸಿನೀರಿನ ಸ್ನಾನದ ಮನೆ)ಗಳೂ ಇವೆ.

ಇಂಡಿಯಾದ ಉತ್ತರ ಭಾಗದ ಪ್ರೆಸಿಡೆಂಟರು ಇಲ್ಲಿ ವಾಸಮಾಡುತ್ತಾ ಆಗಾಗ್ಗೆ ಬೊಂಬಾಯಿ ಸರ್ಕಾರದ ಆಡಳಿತ ನೋಡಿಕೊಳ್ಳಲು ಅಲ್ಲಿಗೆ ಹೋಗಿ ಬರುತ್ತಾರೆ. ಇವರಿಗೆ ವರ್ಷಕ್ಕೆ ೫೦೦ ಪೌಂಡು ಸಂಬಳವಲ್ಲದೆ ಹಡಗುಗಳಿಂದ ಬೇಕಾದ ಹಣ ಪಡೆಯಬಹುದು. ಪೂರ್ವದೇಶದ ವ್ಯಾಪಾರಸಾಪಾರಗಳಲ್ಲಿ ಭಾಗವಹಿಸಬಹುದು. ಹೀಗಾಗಿ ಇವರು ಇಲ್ಲಿ ಕೆಲವು ವರ್ಷಗಳು ಇದ್ದುಬಿಟ್ಟರೆ ಸಾಕು ಹೇರಳವಾಗಿ ಸಂಪಾದಿಸಿಬಿಡುತ್ತಾರೆ. ಇದೇ ರೀತಿ ಕಂಪೆನಿಯ ಇತರ ನೌಕರರು ಸಹ.

ಪ್ರೆಸಿಡೆಂಟ್‌ನ ಅನಂತರ ಸ್ಥಾನಮಾನದಲ್ಲಿ ಅಕೌಂಟೆಂಟ್ (Accountant). ಅವನ ನಂತರ ಸ್ಟೋರ್‌ಕೀಪರ್ (Store Keeper), ಆಮೇಲೆ ಹಡಗಿನ ಪರ್ಸರ್ ( Purser = Cashier)—ಈ ನಾಲ್ಕು ಜನ ಸೇರಿ ಕೌನ್ಸಿಲ್ ( Council = ಮಂಡಳಿ). ಪ್ರೆಸಿಡೆಂಟರಿಗೆ ಎರಡು ವೋಟುಗಳಿವೆ. ಕಂಪೆನಿಯ ಎಲ್ಲ ವಿಷಯಗಳನ್ನು ಈ ಕೌನ್ಸಿಲ್‌ನಲ್ಲಿ ಚರ್ಚಿಸಿ ತೀರ್ಮಾನ ಮಾಡುತ್ತಾರೆ. ಸೆಕ್ರೆಟರಿಯು ಕೌನ್ಸಿಲ್‌ನ ಎಲ್ಲಾ ವ್ಯವಹಾರಗಳನ್ನೂ ನೋಡಿಕೊಳ್ಳುತ್ತಾನೆ. ಫ್ಯಾಕ್ಟೊರಿಯಲ್ಲಿ ಪಾದ್ರಿಯ (The Chaplain) ಸ್ಥಾನ ಮೂರನೆಯದು. ಇವರೆಲ್ಲ, ಮೂರುವರ್ಷಗಳಿಂದ ಐದು ವರ್ಷಗಳವರೆಗೆ ತಮ್ಮ ಸ್ಥಾನಗಳಲ್ಲಿ ಇರುತ್ತಾರೆ. ಇವರ ಊಟ ವಸತಿಗಳ ಖರ್ಚು ವೆಚ್ಚಗಳನ್ನೆಲ್ಲಾ ಕಂಪನಿ ವಹಿಸಿಕೊಳ್ಳುತ್ತದೆ. ವ್ಯಾಪಾರಸಾಪಾರಗಳಿಂದ ನೂರಕ್ಕೆ ನೂರು ಲಾಭ ಸಂಪಾದಿಸುತ್ತಾರೆ.

ಕಂಪನಿಯ ಕೆಲಸಕಾರ್ಯಗಳನ್ನು ನೋಡಿಕೊಳ್ಳಲೂ ಪ್ರೆಸಿಡೆಂಟನ ಪರಿಚಾರಿಕೆಗೂ ೪೦–೫೦ ಪ್ಯೂನ್‌ಗಳಿದ್ದಾರೆ. ಇಷ್ಟೊಂದುಜನ ಪ್ಯೂನ್‌ಗಳಿರುವಾಗ ಸಾಮಾನುಗಳು ಕಳವಾಗುವುದು ಸಾಧ್ಯ. ಇದನ್ನು ತಪ್ಪಿಸಲು ಭೋಜನಶಾಲೆಯ ಬಟ್ಲರ್ ಪ್ಯೂನ್‌ಗಳ ಸುಪರ್ದಿಗೆ ವಹಿಸಿದ ತಟ್ಟೆ ಲೋಟ ಇವುಗಳ ಲೆಖ್ಖ ತೆಗೆದುಕೊಳ್ಳುತ್ತಾನೆ. ಆದರೆ ಈ ಪ್ಯೂನ್‌ಗಳು ತುಂಬಾ ಸತ್ಯವಂತರು. ಇಲ್ಲಿಯವರೆಗೆ ಒಂದು ಸಾಮಾನೂ ಗೈರ್‌ವಿಲೆಯಾಗಿಲ್ಲ. ವಾಸ್ತವವಾಗಿ ಪ್ರೆಸಿಡೆಂಟ್‌ನು ಚಿನ್ನಬೆಳ್ಳಿಯನ್ನೇ ಇವರ ಸುಪರ್ದು ಕೊಟ್ಟಿರುತ್ತಾನೆ. ಆದರೆ ಯಾವುದಕ್ಕೂ ಮೋಸ ಆಗಿಲ್ಲ.

ಪ್ರೆಸಿಡೆಂಟ್‌ರ ಅನುಮತಿಯಿಲ್ಲದೆ ಯಾರೂ ಫ್ಯಾಕ್ಟೊರಿ ಬಿಟ್ಟು ಹೊರಗೆ ಹೋಗುವಂತಿಲ್ಲ. ಗೇಟನ್ನು ಕಾಯುವ ಮೂರನಿಗೆ ಗುರುವಾರ ರಾತ್ರಿ ಅವನ ಮನೆಗೆ ಹೋಗಲು ಅವಕಾಶ ಕೊಡಲಾಗಿದೆ. ಆ ದಿನ ಬೀದಿಯಲ್ಲಿ ಭಿಕ್ಷುಕರು ಅವನಿಗಾಗಿ ಕಾಯುತ್ತಿದ್ದು

'ಸಾಬ್! ಸಾಬ್! ಈ ದಿನ ಗುರುವಾರ ರಾತ್ರಿ. ನಮ್ಮ ಕಡೆ ನೋಡಿ ಸಾಬ್. ನಮ್ಮ ಹೆಂಡತಿ ಮಕ್ಕಳಿಗೂ ಒಂದಿಷ್ಟು ಕೊಡಿ ಮಹಾರಾಜ್' ಎಂದು ಅಂಗಲಾಚುತ್ತಾರೆ.

ಪ್ರತಿದಿನ ಪ್ರೆಸಿಡೆಂಟರೂ ಇತರ ಎಲ್ಲರೂ ಒಟ್ಟಿಗೆ ಊಟಕ್ಕೆ ಕುಳಿತುಕೊಳ್ಳುತ್ತಾರೆ. ಬಗೆಬಗೆಯ ಅಡುಗೆ ಮಾಡಲು ಇಂಗ್ಲಿಷ್, ಪೋರ್ಚುಗಲ್ ಮತ್ತು ಇಂಡಿಯಾದ ಅಡುಗೆಯವರನ್ನು ನೇಮಿಸಿಕೊಳ್ಳಲಾಗಿದೆ. ಸೂರತ್ತು ಮತ್ತು ಸುತ್ತಮುತ್ತ ಸಿಕ್ಕುವ ಅತ್ಯುತ್ತಮ ಮಾಂಸವನ್ನು ಬಹು ರುಚಿಯಾಗಿ ಮಾಡಿ ಬಡಿಸುತ್ತಾರೆ. ಪಲಾವ್ ಅನ್ನ ಮತ್ತು ಬೇಯಿಸಿದ ಕೋಳಿ—ಇದು ಇಂಡಿಯಾದ ಸಾಮಾನ್ಯ ಭಕ್ಷ್ಯ. ದಮ್ಮಾರಗಿ (ಹವೆಯಲ್ಲಿ ಬೇಯಿಸಿದ ಕೋಳಿ) ಇನ್ನೊಂದು ಬಗೆ. ದನದ ಮಾಂಸ ಅಥವಾ ಬೇರೆ ಮಾಂಸದಿಂದ ಮಾಡಿದ ಕಬಾಬ್ ಬೇರೊಂದು ಬಗೆಯ ಭಕ್ಷ್ಯ. ಬಿದಿರುಕಳಲೆ ಮತ್ತು ಮಾವಿನಕಾಯಿ ಉಪ್ಪಿನಕಾಯಿಗಳು ಯಾವಾಗಲೂ ಸಿದ್ಧವಿರುತ್ತವೆ. ಸೂರತ್ತಿನ ಹಿಂದೂಗಳಿಗೆ ಇಂಗು ಬಹಳ ಇಷ್ಟ. ಇಂಗ್ಲಿಷರೂ ಕೆಲವು ವೇಳೆ ಅದರ ರುಚಿ ನೋಡುತ್ತಾರೆ. ಈ ಊರಿನಲ್ಲಿ ಇಂಗನ್ನು ಎಷ್ಟು ಬಳಸುತ್ತಾರೆ ಎಂದರೆ ಅಡುಗೆಯ ವೇಳೆ ಊರಾದ ಊರೆಲ್ಲ ಇಂಗಿನ ವಾಸನೆ ಹೊಡೆಯುತ್ತದೆ.

ಕುಡಿಯಲು ವೈನು, ಅರಾಕ್, ಬೀರ್‌ಗಳನ್ನು ಧಾರಾಳವಾಗಿ ಉಪಯೋಗಿಸುತ್ತಾರೆ. ಬೀರ್ ಬಾಟಲನ್ನು ತೆರೆದಾಗ ಅದರಿಂದ ಉಕ್ಕಿಬಂದ ನೊರೆ ನೋಡಿ ಇಲ್ಲಿಯ ಶ್ರೀಮಂತನೊಬ್ಬನಿಗೆ ಅಚ್ಚರಿಯಾಯಿತು. 'ಏಕೆ ಇಷ್ಟು ಅಚ್ಚರಿ ಪಡುತ್ತೀರಿ?' ಎಂದು ಪ್ರೆಸಿಡೆಂಟರು ಕೇಳಿದರೆ, ಆತ 'ಹೀಗೆ ಉಕ್ಕಿಬರುವ ಪಾನೀಯವನ್ನು ಹೇಗೆ ಬಾಟಲಿನಲ್ಲಿ ಕೂಡಿಟ್ಟಿರಿ ಎಂದು ನನಗೆ ಆಶ್ಚರ್ಯವಾಗುತ್ತಿದೆ' ಎಂದನಂತೆ.

ಊಟದ ತಟ್ಟೆ ಲೋಟ ಎಲ್ಲವೂ ಗಟ್ಟಿ ಬೆಳ್ಳಿಯಿಂದ ಮಾಡಿದವುಗಳು. ಕುಡಿಯುವ ಬಟ್ಟಲುಗಳೂ ಬೆಳ್ಳಿಯವುಗಳು. ಊಟವಾದ ಮೇಲೆ ಪ್ಯೂನ್‌ಗಳು ಬೆಳ್ಳಿಯ ಬೋಗುನಿಗಳನ್ನು ಹಿಡಿದುಕೊಂಡುಬಂದು ಕೈತೊಳೆಯಲು ನೀರು ಕೊಡುತ್ತಾರೆ. ಇಲ್ಲಿಯ ಬಿಸಿ ಹವೆಯ ಕಾರಣ ಧೂಳು ಕೊಳೆ ಆದ ಕೈಗಳನ್ನು ಊಟಕ್ಕೆ ಮುನ್ನ ತೊಳೆದುಕೊಳ್ಳುವುದೊಳ್ಳೆಯದು.

ಭಾನುವಾರದ ವಿಶೇಷ ಊಟವು ಜಿಂಕೆ, ಚಿಗರೆ, ನವಿಲು, ಮೊಲ, ಗೌವುಜಗ ಮುಂತಾದ ಪ್ರಾಣಿ ಪಕ್ಷಿಗಳ ಮಾಂಸ, ಪರ್ಷಿಯಾದಿಂದ ತರಿಸಿದ ಬಗೆ ಬಗೆಯ ಹಣ್ಣು ಹಂಪಲು, ಯುರೋಪು ಮತ್ತು ಪರ್ಷಿಯಾದಿಂದ ಬಂದ ಬೆಲೆಯಾದ ಮದ್ಯ ಇವುಗಳಿಂದ ಕೂಡಿರುತ್ತದೆ.

ಒಮ್ಮೊಮ್ಮೆ ಪ್ರೆಸಿಡೆಂಟರು ಎಲ್ಲರನ್ನು ಹೊರಗಡೆ ವನಭೋಜನಕ್ಕೆ ಕರೆದುಕೊಂಡು ಹೋಗುತ್ತಾರೆ. ಪ್ರೆಸಿಡೆಂಟರೂ ಅವರ ಪತ್ನಿಯೂ ಅಂದವಾಗಿ ಅಲಂಕರಿಸಿದ ಪಲ್ಲಕ್ಕಿಯಲ್ಲಿ ಕುಳಿತು ಹೋಗುತ್ತಾರೆ. ಉಳಿದವರು ಬೆಲೆಯಾದ ಜೀನು ಲಗಾಮು ಇತ್ಯಾದಿಗಳಿಂದ ಚಂದಮಾಡಿದ ಕುದುರೆಗಳ ಮೇಲೆ ಬರುತ್ತಾರೆ. ಅಲಂಕಾರ ಮಾಡಿದ ಎತ್ತಿನ ಗಾಡಿಗಳಲ್ಲಿ ಕುಳಿತು ಹೆಂಗಸರೂ ಮಕ್ಕಳೂ ಬರುತ್ತಾರೆ.

ಯಾರೇ ಆಗಲಿ ಫ್ಯಾಕ್ಟೊರಿಯಿಂದ ಹೊರಗೆ ಹೋಗುವಾಗ ತಮ್ಮ ಆಳುಕಾಳು ಸಿಬ್ಬಂದಿಗಳ ಸಮೇತ ಹೋಗಬೇಕು. ಈ ಕಾರಣ ಇಂಗ್ಲಿಷರ ಬಗ್ಗೆ ಎಲ್ಲರಿಗೂ ಗೌರವ.

ಇಷ್ಟೆಲ್ಲಾ ಸಂಬಳ ಸಾರಿಗೆ ಊಟೋಪಚಾರಗಳಲ್ಲದೆ ಕಂಪನಿಯ ನೌಕರರಿಗೆ ದಿವಾಳಿ ಹಬ್ಬಗಳಲ್ಲಿ ಬನಿಯನರು ನಾನಾ ಬಗೆಯ ಉಡುಗೊರೆಗಳನ್ನು ಕೊಟ್ಟು ಗೌರವಿಸುತ್ತಾರೆ. ಎಷ್ಟೋ ಜನರಿಗೆ ವರ್ಷಕ್ಕೆ ಬೇಕಾದ ಬಟ್ಟೆಯೆಲ್ಲಾ ಹೀಗೆ ಉಡುಗೊರೆ ಯಾಗಿ ಬರುತ್ತದೆ.

ಕಂಪನಿಯ ನೌಕರರ ಕಾಯಿಲೆ ಕಸಾಲೆಗಳನ್ನು ನೋಡಿಕೊಳ್ಳುವುದಕ್ಕೆ ಇಂಡಿಯಾದ ಪಂಡಿತನೊಬ್ಬನನ್ನು ಪ್ರೆಸಿಡೆಂಟರು ನೇಮಿಸಿರುತ್ತಾರೆ. ಈತನಿಗೆ ವರ್ಷಕ್ಕೆ ೪೦ ಪೌಂಡು ಸಂಬಳ. ಜೊತೆಗೆ ಆತ ಬೇರೆ ಸಂಪಾದನೆ ಮಾಡಿಕೊಳ್ಳಬಹುದು. ಔಷಧಿ ಮುಂತಾ ದವುಗಳನ್ನು ಕಂಪನಿಯ ಖರ್ಚಿನಲ್ಲಿ ಒದಗಿಸಲಾಗುವುದು.

ಇಷ್ಟೆಲ್ಲಾ ದೈಹಿಕ ಸುಖಸಂತೋಷಗಳ ಮಧ್ಯೆ ಮನುಷ್ಯನು ತನ್ನ ಆತ್ಮವನ್ನು ಮರೆಯಬಾರದೆಂದು ಒಬ್ಬ ಪಾದ್ರಿಯನ್ನು (Minister). ನೇಮಿಸಿರುತ್ತಾರೆ. ಈತನಿಗೆ ವರ್ಷಕ್ಕೆ ೧೦೦ ಪೌಂಡು ಸಂಬಳ. ಊಟೋಪಚಾರಗಳೆಲ್ಲ ಕಂಪನಿಯ ಖರ್ಚಿನಲ್ಲಿ. ಮದುವೆ ಮುಂಜಿಗಳನ್ನು ಮಾಡಿಸಿದಾಗ ಇವನಿಗೆ ಸಾಕಷ್ಟು ಉಡುಗೊರೆಗಳು ಸಿಕ್ಕುತ್ತವೆ.

ಊರಿನ ಹೊರಗಡೆ ಯುರೋಪಿಯನರ ಸ್ಮಶಾನವಿದೆ. ಇಲ್ಲಿ ಸಮಾಧಿ ಯಾದ ಒಬ್ಬೊಬ್ಬರ ಮೇಲೂ ಕಟ್ಟಿದ ಮಂದಿರಗಳು ಒಂದನ್ನೊಂದು ಮೀರಿಸುತ್ತವೆ.

೧೬೯೧ನೆಯ ಆಗಸ್ಟ್ ೨೭ ರಂದು ನಮ್ಮ ಫ್ಯಾಕ್ಟೊರಿಯ ಮೇಲೆ ಮೂರ್ ಗೌರ್ನರ್ ಬಲವಾದ ಕಾವಲು ಹಾಕಿ ಯಾರನ್ನೂ ಹೊರಗೆ ಬಿಡಲಿಲ್ಲ. ಇದಕ್ಕೆ ಕಾರಣ ಮೂರರ ಹಡಗೊಂದನ್ನು ಹ್ಯಾಟ್‌ಜನ–ಅವರು ನಮ್ಮನ್ನು ಕರೆಯುವ ರೀತಿ–ಸ್ವಾಧೀನ ಪಡಿಸಿಕೊಂಡು ಒಂಬತ್ತು ಲಕ್ಷ ರೂಪಾಯಿ ದೋಚಿಕೊಂಡಿದ್ದಾರೆ ಎಂಬ ವದಂತಿ. ಯುರೋಪಿಯನರಲ್ಲಿ ಯಾರು ಈ ಕೆಲಸ ಮಾಡಿದರು ಎಂದು ತಿಳಿಯದೆ ಎಲ್ಲರನ್ನೂ ನಿರ್ಬಂಧಕ್ಕೆ ಒಳಗುಮಾಡಿಬಿಟ್ಟಿದ್ದ. ಅದೃಷ್ಟವಶಾತ್ ಇಂಗ್ಲಿಷರು ಯಾರೂ ಈ ಕೆಲಸ ಮಾಡಲಿಲ್ಲವೆಂದೂ, ಅದನ್ನು ಮಾಡಿದವರು ಡಚ್ ಕಾವಲುಗಾರರೆಂದೂ ಗೊತ್ತಾಗಿ ಆ ಪ್ರಸಂಗ ಅಲ್ಲಿಗೇ ಮುಗಿಯಿತು.

[ಸೂರತ್ತಿನಿಂದ ಸ್ವದೇಶಕ್ಕೆ ಹೊರಟ ಓವಿಂಗ್‌ಟನ್ ಅರೇಬಿಯಾದ ಮಸ್ಕತ್, ಮೋಖಾ, ಗುಡ್‌ಹೋಪ್ ಭೂಶಿರ ಮುಖಾಂತರ ೧೬೯೨ನೆಯ ಸೆಪ್ಟೆಂಬರ್ ೧೮ರಂದು ಐರ್ಲ್ಯಾಂಡಿನ ಕಿಂಗ್‌ಸೇಲ್ (kingsale) ಎಂಬ ಸ್ಥಳ ತಲುಪುತ್ತಾನೆ. ಇಲ್ಲಿ ಹಡಗಿನ ಕ್ಯಾಪ್ಟನ್, ಆಫೀಸರುಗಳು ಮತ್ತು ಅಲ್ಲಿಯ ನಾವಿಕರೆಲ್ಲ ಕೂಡಿ ತಮ್ಮನ್ನು ಈ ಸಮುದ್ರಯಾನದಿಂದ ಸುಖವಾಗಿ ಕರೆತಂದ ಆ ಪರಮಾತ್ಮನಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ, ತಲಾ ೨೦ ರಿಂದ ೩೦ ಪೌಂಡು ಹಣ ಕೂಡಿಸಿ ನಾಲ್ಕು ಪೌಂಡುಗಳನ್ನು ಪಾದ್ರಿಗೆ ಸಲ್ಲಿಸಿ ಉಳಿದದ್ದನ್ನು ಬಡಬಗ್ಗರಿಗೆ ಹಂಚುತ್ತಾರೆ. ತಮ್ಮ ಈ ದಾನವನ್ನು ಚರ್ಚಿನಲ್ಲಿ ಒಂದು ಕಡೆ ಶಿಲೆಯ ಮೇಲೆ ಕೆತ್ತಿಸುತ್ತಾರೆ—ಮುಂದಿನವರಿಗೆ ಒಂದು ಮಾದರಿಯಾಗಲಿ ಎಂದು.

ಭೂಮಿಯ ಮೇಲೆ ಕಾಲಿಟ್ಟಾಗ ಇಂಗ್ಲಿಷರು ಇವರನ್ನು ಬಹು ಆದರದಿಂದ ಬರಮಾಡಿಕೊಂಡು

ಅಪಾರ ಸತ್ಕಾರಗಳನ್ನು ನಡೆಸುತ್ತಾರೆ. ಇಲ್ಲಿ ಐದು ವಾರಗಳು ಇದ್ದು ಭೂಮಾರ್ಗವಾಗಿ ಹೋಗಲು ವಾಹನ ಸೌಕರ್ಯವಿಲ್ಲದೆ ಹಡಗಿನಲ್ಲಿ ಹೊರಟು ಗ್ರೇವ್‌ಸೆಂಡನ್ನು (Gravesend) ಡಿಸೆಂಬರ್ ೫ ರಂದು ತಲುಪುತ್ತಾರೆ.]

# ಥಾಮಸ್ ಬೊವ್ರೆ

ಹದಿನೇಳನೆಯ ಶತಮಾನದ ಅಂತ್ಯದಲ್ಲಿ ಪೌರ್ವಾತ್ಯ ದೇಶಗಳ ಸ್ಥಿತಿಗಳ ಬಗ್ಗೆ ಹೇಳಿದವರಲ್ಲಿ ಥಾಮಸ್ ಬೊವ್ರೆ (Thomas Bowrey) ಒಬ್ಬನೇ. ಇವನೊಬ್ಬ ಸ್ವತಂತ್ರ ಇಂಗ್ಲಿಷ್ ವ್ಯಾಪಾರಿ. ಆಗ್ಗೆ ಸ್ಥಾಪಿತವಾಗಿದ್ದ ಈಸ್ಟ್ ಇಂಡಿಯಾ ಕಂಪನಿಯನ್ನು ಸೇರದೆ ತಾನೇ ಸ್ವತಂತ್ರ ವ್ಯಾಪಾರದಲ್ಲಿ ತೊಡಗಿ, ಇಂಡಿಯಾ ದೇಶ ಮತ್ತು ಇತರ ಪೂರ್ವ ದೇಶಗಳಲ್ಲಿ ೧೯ ವರ್ಷಗಳು ಅಡ್ಡಾಡಿ ತಾನು ಕಂಡು ಕೇಳಿದ ವಿಷಯಗಳನ್ನು ಸ್ವಾರಸ್ಯವಾಗಿ ಬರೆದಿದ್ದಾನೆ.

ಈತನ ತಂದೆ ತಾತಂದಿರು ಸಹ ನೌಕಾ ವೃತ್ತಿಯಲ್ಲಿ ತೊಡಗಿದ್ದವರಾದ್ದರಿಂದ ಇವನಿಗೂ ಸಮುದ್ರ ಯಾನದ ಬಗ್ಗೆ ತಿಳುವಳಿಕೆಯೂ ಆಸಕ್ತಿಯೂ ಇದ್ದುವು. ಆದರೆ ಈತ ಇಂಡಿಯಾ ದೇಶಕ್ಕೇ ಬಂದುದು ಏಕೆಂದು ಹೇಳುವುದು ಕಷ್ಟವಾಗಿದೆ.

ಕ್ರಿ.ಶ. ೧೬೬೮ರಲ್ಲಿ ಈತ ಇಂಗ್ಲೆಂಡ್‌ನಿಂದ ಇಂಡಿಯಾ ದೇಶದ ಕಡೆಗೆ ಹೊರಟ ರೊಯಲ್ ಮರ್ಚೆಂಟ್, ರೇನ್‌ಬೋ, ಯೂನಿಕಾರ್ನ್ ಮತ್ತು ಮದ್ರಾಸ್ ಮರ್ಚೆಂಟ್ ಎಂಬೀ ನಾಲ್ಕು ಹಡಗು ಗಳೊಂದರಲ್ಲಿ ಬಂದಿರಬೇಕು. ಹಡಗಿನ ಪಡೆಯಲ್ಲಿ ಒಬ್ಬನಾಗಿ ಬಂದನೋ ಅಥವಾ ಪ್ರಯಾಣಿಕನಾಗಿ ಬಂದನೋ ನಿಶ್ಚಿತವಾಗಿ ಗೊತ್ತಿಲ್ಲ. ಆಗ್ಗೆ ಕಂಪೆನಿಯಿಂದ ಪರವಾನಗಿ ಪಡೆದ ಹೊರತು ಯಾರೂ ಕಂಪನಿ ಹಡಗಿನಲ್ಲಿ ಪ್ರಯಾಣ ಮಾಡಲು ಅವಕಾಶ ಕೊಡುತ್ತಿರಲಿಲ್ಲ. ಆ ತರಹ ಪರವಾನಗಿ ಕೊಟ್ಟುದಕ್ಕೆ ಕ್ರಿ.ಶ. ೧೬೬೮ನೆಯ ಇಸವಿಯ ಯಾವ ದಾಖಲೆಯೂ ಇಲ್ಲ. ಆದ್ದರಿಂದ ಥಾಮಸ್ ಬೊವ್ರೆ ಹಡಗಿನ ಯಜಮಾನನ ಕಣ್ಣಿಗೆ ಮಣ್ಣೆರಚಿ ಬಂದಿರಬಹುದೆಂದು ಊಹಿಸಲಾಗಿದೆ.

ಕ್ರಿ.ಶ. ೧೬೬೯ರಲ್ಲಿ ಮದ್ರಾಸಿಗೆ ಬಂದ ಬೊವ್ರೆ ೧೬೭೯ರ ವರೆಗೆ ಏನು ಮಾಡುತ್ತಿದ್ದ, ಎಲ್ಲೆಲ್ಲಿ ತಿರುಗಿದ ಎಂಬುದಕ್ಕೆ ದಾಖಲೆಗಳಿಲ್ಲ. ಕ್ರಿ.ಶ. ೧೬೭೯ರಲ್ಲಿ ಮಸುಲಿಪಟ್ಟಣಕ್ಕೂ ಮತ್ತು ಪೆದ್ದಪಳ್ಳಿಗೂ ಹೋಗಿದ್ದ. ಕ್ರಿ.ಶ. ೧೬೭೪ರಲ್ಲಿ ಬಂಗಾಳ ಕೊಲ್ಲಿಯ ಬಂದರಾದ ಬಾಲಸೂರಿನಲ್ಲಿ ಇದ್ದ ಆನಂತರ ಮದ್ರಾಸಿಗೆ ಹಿಂದಿರುಗಿ ಕ್ರಿ.ಶ. ೧೬೭೭ರಲ್ಲಿ ಮಲಯಾಕ್ಕೆ ಹೋಗಿದ್ದ. ಅಲ್ಲಿ ನಡೆದ ದಂಗೆ ಯನ್ನು ಕಣ್ಣಾರೆ ಕಂಡ. ಕ್ರಿ.ಶ. ೧೬೭೮ರಲ್ಲಿ ಒಮ್ಮೆ ಪರ್ಷಿಯಾ ಪಾರಿಗೂ ಹೋಗಿಬಂದನು. ಕ್ರಿ.ಶ. ೧೬೮೧ರಲ್ಲಿ ಮದ್ರಾಸಿನಲ್ಲಿದ್ದುಕೊಂಡು ಸಿಲೋನಿನ ಭೂಪಟ ತಯಾರಿಸಿದ. ೧೬೮೯ರಲ್ಲಿ ಮದಪೊಲ್ಲಿಂ ನಲ್ಲಿದ್ದು ೧೬೮೪ರಲ್ಲಿ ಬಟೇವಿಯಾಕ್ಕೆ ಹೋಗಿ ಅದೇ ವರ್ಷ ಮದ್ರಾಸಿಗೆ ಹಿಂದಿರುಗಿದ. ಆತ ಬಟೇವಿಯಾದಿಂದ ಬೋರ್ನಿಯೋದ ಮೆಣಸು ತಂದಿದ್ದ. ಮದ್ರಾಸ್‌ನಲ್ಲಿದ್ದ ಇಂಗ್ಲಿಷ್ ಕೌನ್ಸಿಲ್ ಆ ಮೆಣಸನ್ನು ಖಂಡಿಗೆ ೨೦ ಪಗೋಡಾಗಳಂತೆ ಕೊಳ್ಳುವುದಾಗಿ ಹೇಳಿತು. ಆದರೆ ೨೩ ಪಗೋಡಾ ಕೊಡಬೇಕೆಂದು ಹೇಳಿ ಆ ಮೆಣಸನ್ನು ತೆಗೆದುಕೊಂಡು ಬೋರ್ನಿಯೋ ಮರ್ಚೆಂಟ್ ಹಡಗಿನಲ್ಲಿ ಬಂಗಾಳಕ್ಕೆ ಹೊರಟ. ಆದರೆ ದಾರಿತಪ್ಪಿ ಮತ್ತೆ ಮದ್ರಾಸಿಗೆ ಹಿಂದಿರುಗಿದ. ತನ್ನ ಮೆಣಸನ್ನು ಈಗ ಕಡಮೆ ಬೆಲೆಗೆ ಮಾರಲು ತಯಾರಿದ್ದ. ಆದರೆ ಕೌನ್ಸಿಲ್ ೧೭ ಪಗೋಡಾದಂತೆ ಕೇಳಿತು. ಆ ಧಾರಣೆಗೆ ಕೊಟ್ಟನೋ ಇಲ್ಲವೋ ಗೊತ್ತಿಲ್ಲ. ಇದಾದ ನಂತರ ಬೊವ್ರೆ ಮದ್ರಾಸಿನಿಂದ ಮದಪೊಲ್ಲಿಂಗೆ ಹೋಗಿ ಅಲ್ಲಿ ಕಂಪನಿಗೆ ಸೇರಿದ್ದ 'ಕೊನಿಮೀರ್' ಎಂಬ ಒಂದು ಸಣ್ಣ ಹಡಗನ್ನು ೪೦ ಪೌಂಡುಗಳಿಗೆ ಕೊಂಡು ಕೊಂಡ. ಇನ್ನೂ 'ಬೋರ್ನಿಯೋ ಮರ್ಚೆಂಟ್' ಹಡಗು ಬೊವ್ರೆ ಅಧೀನದಲ್ಲಿಯೇ ಇತ್ತು. ಇದರಲ್ಲಿ ಕಡಲೂರು ಮತ್ತು ಪೋರ್ಟೊನೋವೋಗಳಿಗೆ ಹೊರಟ. ಆತ ತನ್ನ ಯಾನದಲ್ಲಿರುವಾಗ ಆತನ ಮೇಲೆ ಕ್ಯಾಪ್ಟನ್ ಹೀತ್ ಎಂಬುವನು ಮದ್ರಾಸಿನ ಕೌನ್ಸಿಲ್ ಮುಂದೆ ಒಂದು ದೂರು ಹೊರಿಸಿದ. ಅದೇನೆಂದರೆ, ಬೊವ್ರೆ ಬೋರ್ನಿಯೋ ಮರ್ಚೆಂಟ್ ಹಡಗಿನಲ್ಲಿ ತನ್ನ ಹಡಗಿನ ಮೂರು ಜನರನ್ನು ಕರೆದುಕೊಂಡು ಹೋಗಿದ್ದಾನೆ ಎಂದು, ಕೌನ್ಸಿಲ್ ಕಡಲೂರಿಗೆ ಪತ್ರ ಬರೆದು ಹಡಗಿನಲ್ಲಿದ್ದ ಮೂವರನ್ನು ವಾಪಸು ಕರೆಸಿತು. ಬೊವ್ರೆ ಮತ್ತೆ ಬೋರ್ನಿಯೋ ಮುಂತಾದ ಕಡೆಗಳಿಗೆ ಹೋಗಿ ಮೆಣಸು ತಂದು ಮಾರಾಟ ಮಾಡಿದ. ಈಗ ಅದನ್ನು ಖಂಡಿಗೆ ೧೯ ಪೌಂಡುಗಳಂತೆ ಮಾರಿದ.

ಇಷ್ಟೆಲ್ಲಾ ಅಡ್ಡಾಡಿ ವ್ಯಾಪಾರಸಾಪಾರಗಳಿಂದ ಕೈತುಂಬ ಹಣ ಮಾಡಿಕೊಂಡು ೧೬೮೪ರಲ್ಲಿ ಬೊವ್ರೆ ತನ್ನ ಸ್ವದೇಶಕ್ಕೆ ಹಿಂದಿರುಗುವ ಆಲೋಚನೆ ಮಾಡಿದ. ಷ್ರೂ ಬೆರ್‍ರಿ ಎಂಬ ಹಡಗಿನಲ್ಲಿ ಪ್ರಯಾಣ ಮಾಡಬೇಕೆಂದು ಮೊದಲು ಮನಸ್ಸು ಮಾಡಿದ್ದ. ಆದರೆ ಏನು ಕಾರಣವೋ ಮನಸ್ಸು ಬದಲಾಯಿಸಿದ. ಇದು ಅವನನ್ನು ತಾಪತ್ರಯಕ್ಕೆ ಸಿಕ್ಕಿಸಿತು.

ಅದೇನೆಂದರೆ, ಬೊವ್ರೆಯು ಅಹಮದ್ ಮರ್‍ರೈಕ್ಕರ್ ಎಂಬುವನಿಗೆ ಬಟ್ಟೆ ಕೊಳ್ಳಲು ೪೦೦ ಪಗೋಡಾ ದುಡ್ಡು ಕೊಟ್ಟಿದ್ದ. ನಾಲ್ಕು ದಿನಗಳಾದ ಮೇಲೆ ಬಟ್ಟೆ ಕೇಳಿದ. ಆದರೆ ಮರ್‍ರೈಕ್ಕರ್ ಏನೇನೋ ನೆಪ ಹೇಳಿದ್ದರಿಂದ ಮಾತಿಗೆ ಮಾತು ಬೆಳೆಯಿತು. ಮರ್‍ರೈಕ್ಕರ್ ಕಡೆಯ ಸೇವಕನೊಬ್ಬ ಬೊವ್ರೆ ಮೇಲೆ ಸುಳ್ಳು ಹೇಳಿದ. ಇದನ್ನು ಸಹಿಸಲಾರದೆ ಬೊವ್ರೆಗೆ ಬಹಳ ಕೋಪ ಬಂದು ಅವನನ್ನು ಚೆನ್ನಾಗಿ ಹೊಡೆದುಬಿಟ್ಟ. ಇಷ್ಟೆಲ್ಲಾ ಅನಾಹುತ ಪೋರ್ಟೋನೋವೋ ಹಡಗಿನಲ್ಲಿ ನಡೆದುಹೋಯಿತು. ಮರ್‍ರೈಕ್ಕರ್ ಹವಾಲ್ದಾರನ ಬಳಿಗೆ ಹೋಗಿ ಬೊವ್ರೆ ಮೇಲ್ಲೆ ದೂರು ಕೊಟ್ಟ. ಅವನಿಗೆ ಲಂಚವನ್ನೂ ಕೊಟ್ಟ. ಸರಿ ಹವಾಲ್ದಾರ ಬೊವ್ರೆಗೆ ಹೇಳಿ ಕಳುಹಿಸಿದ. ಬಂದ ಬೊವ್ರೆಯನ್ನು ಹವಾಲ್ದಾರನು ಬಂಧಿಸಿ ಕಾಲಿಗೆ ಕೋಳ ಹಾಕಿಸಿ ಆಳುಕಾಳುಗಳು ಇರುವ ಎಂಥದೋ ಮನೆಗೆ ನೂಕಿಸಿ ಮೂರುದಿನ ಕೊಳೆಹಾಕಿದ. ಇದನ್ನೆಲ್ಲಾ ಬೊವ್ರೆ ಪೋರ್ಟೋನೋವೋ ಕೌನ್ಸಿಲ್‌ನ ಜಾನ್ ಡೇವೀಸ್ ಎಂಬುವನಿಗೆ ಒಂದು ಪತ್ರ ಬರೆದು ತಿಳಿಸಿ, ಇದು ತನ್ನ ದೇಶದ ಮರ್ಯಾದೆಯ ಪ್ರಶ್ನೆಯಾದ್ದರಿಂದ ಕೌನ್ಸಿಲ್ ಇದರಲ್ಲಿ ಪ್ರವೇಶಿಸಬೇಕೆಂದು ಕೇಳಿದ. ಹವಾಲ್ದಾರನ ಸೇವಕರಿಗೆ ಕೈಬೆಚ್ಚಗೆ ಮಾಡಿ ನಡೆಯುತ್ತಿದ್ದ ಸಂಗತಿಗಳನ್ನೆಲ್ಲಾ ತಿಳಿದು ಪತ್ರದಲ್ಲಿ ಬರೆದ. ಜಾನ್ ಡೇವೀಸ್ ಮುಂತಾದವರು ಮದ್ರಾಸ್ ಕೌನ್ಸಿಲ್‌ಗೆ ಪತ್ರ ಬರೆದು ಬೊವ್ರೆಯನ್ನು ಬಿಡುಗಡೆ ಮಾಡಿಸುವುದು ಅವರ ಕರ್ತವ್ಯವಾಗಿದೆ, ಇಲ್ಲದಿದ್ದರೆ ಇಂಗ್ಲೆಂಡಿಗೇ ಅಪಮಾನ ಮಾಡಿದ ಹಾಗೆ ಎಂದು ತಿಳಿಸಿದರು.. ಮೊದಮೊದಲು ಮದ್ರಾಸ್ ಕೌನ್ಸಿಲ್ ಬೊವ್ರೆಯು ಕಂಪೆನಿಯ ನೌಕರನಲ್ಲ, ಆತ ಒಬ್ಬ ಸ್ವತಂತ್ರ ವ್ಯಾಪಾರಿ, ಆದ್ದರಿಂದ ಆತನ ಬಗ್ಗೆ ಕಂಪನಿ ತಲೆ ಕೆಡಿಸಿ ಕೊಳ್ಳಬಾರದೆಂದು ಹೇಳಿತು. ಆ ಮೇಲೆ ಮತ್ತೆ ಡೇವೀಸ್ ಮುಂತಾದವರಿಂದ ಒತ್ತಾಯ ಬಂದಮೇಲೆ ಬೊವ್ರೆಯನ್ನು ಬಿಡುಗಡೆ ಮಾಡಿಸಿತು. ಹೀಗೆ ೧೬೮೭ರ ಮೇ ೨೦ ರಂದು ಬಿಡುಗಡೆ ಹೊಂದಿದ ಬೊವ್ರೆ ಮದ್ರಾಸಿಗೆ ಬಂದು ಅಲ್ಲಿಯವರನ್ನು ಸರಿಮಾಡಿಕೊಂಡು ತನ್ನ ಪರ ಮಾಡಿಕೊಂಡಂತೆ ಕಾಣು ತ್ತದೆ. ಬೊವ್ರೆ ಮತ್ತೆ ಬೋರ್ನಿಯೋ ಮರ್ಚೆಂಟ್ ಹಡಗಿನಲ್ಲಿ ಅಚೀನಕ್ಕೆ ಹೊರಟ. ಮದ್ರಾಸ್ ಕೌನ್ಸಿಲ್ ಮತ್ತೆ ತನ್ನ ಮನಸ್ಸು ಬದಲಾಯಿಸಿತು. ಅದು ಕಡಲೂರಿಗೆ ಬರೆದ ಪತ್ರದಲ್ಲಿ 'ಬೊವ್ರೆ ಮತ್ತು ಅಹಮದ್ ಮರ್‍ರೈಕ್ಕರ್ ಇವರ ವ್ಯವಹಾರವನ್ನು ನಮ್ಮ ಕೋರ್ಟಿನಿಂದ ತೆಗೆದುಹಾಕಿದ್ದೇವೆ, ಅವರಿಬ್ಬರ ಜಗಳದಲ್ಲಿ ಹುರುಳಿಲ್ಲ. ಮುಟ್ಟುಗೋಲು ಹಾಕಿಕೊಂಡಿರುವ ಸರಕುಗಳನ್ನು ಬಿಡುಗಡೆ ಮಾಡಬಹುದು' ಎಂದು ತಿಳಿಸಿತು.

ಅಚೀನಕ್ಕೆ ಹೋದ ಬೊವ್ರೆ ಬಂಗಾಳಕ್ಕೂ ಹೋಗಿಬಂದ. ಇದು ಅಲ್ಲಿಗೆ ಅವನ ಮೂರನೆಯ ಭೇಟಿ. ಬೋರ್ನಿಯೊ ಮರ್ಚೆಂಟ್ ಹಡಗಿನಲ್ಲಿ ಬೊವ್ರೆ ಮಾಡಿದ ಯಾನ ಇದಕ್ಕೆ ಕೊನೆಯದಾಯಿತು. ಏಕೆಂದರೆ, ಮದ್ರಾಸಿಗೆ ಬಂದಮೇಲೆ ಆ ಹಡಗು ಬಿರುಗಾಳಿಗೆ ಸಿಕ್ಕಿ ತೀರಕ್ಕೆ ಅಪ್ಪಳಿಸಿ ನುಚ್ಚುನೂರಾ ಯಿತು. ಯಾವ ಪ್ರಾಣಾಪಾಯವೂ ಆಗಲಿಲ್ಲ. ಮದ್ರಾಸಿನಲ್ಲಿದ್ದಾಗ ಬೊವ್ರೆ ತಾನು ನೋಡಿಕೊಂಡು ಬಂದ ಹೂಗ್ಲಿಯ ನಕಾಶೆ ಬರೆದ. ಇದೊಂದು ಅಪೂರ್ವವಾದ ಶ್ರದ್ಧಾಪೂರ್ವಕ ಕೆಲಸ, ಆತನದು. ಸಿಲೋನ್, ಫಾರ್ಮೊಸಾ ಮುಂತಾದ ಸ್ಥಳಗಳ ನಕಾಶೆ ಬರೆದಿಟ್ಟ. ಹೂಗ್ಲಿಯ ನಕಾಶೆಯಿಂದ ಆತನ ಶ್ರಮ ಹಾಗೂ ಶ್ರದ್ಧೆ ಎಷ್ಟೆಂಬುದು ವ್ಯಕ್ತವಾಗುತ್ತದೆ.

ಬೋರ್ನಿಯೋ ಮರ್ಚೆಂಟ್ ಹಡಗಿನ ಬದಲು ಫ್ರಾನ್ಸಿಸ್ ಎಂಬ ಹಡಗನ್ನು ಹೊಂದಿ, ಇದರಲ್ಲಿ ಹಿಂದೆ ಅವಮಾನಕ್ಕೆ ಗುರಿಯಾಗಿದ್ದ ಪೋರ್ಟೋನೋವೋಕ್ಕೆ ಹೋಗಿ, ಮದ್ರಾಸಿಗೆ ಹಿಂದಿರುಗಿ ಮತ್ತೆ ಅಚೀನಕ್ಕೆ ಹೋದ. ಅಲ್ಲಿ ಬೊವ್ರೆಯು ತನ್ನ ಸ್ವಂತ ಮನೆಯಲ್ಲಿ ವಾಸಮಾಡುತ್ತಿದ್ದುದನ್ನು ಡಾಂಪಿಯರ್ (Dampier) ಎಂಬುವನು ಕಂಡು, ಆತನ ಆತಿಥ್ಯವನ್ನು ಸ್ವೀಕರಿಸಿದನೆಂದು ಹೇಳಿದ್ದಾನೆ. ಅಚೀನದಿಂದ ಹೊರಟ ಬೊವ್ರೆ ಬಂಗಾಳಕ್ಕೆ ಬಂದು ಅಲ್ಲಿಂದ ಮದ್ರಾಸಿಗೆ ಹಿಂದಿರುಗಿ ಅಲ್ಲಿ ಕೇವಲ ಸ್ವಲ್ಪ ದಿನಗಳು

ಮಾತ್ರ ಇದ್ದು 'ಬಂಗಾಳ್ ಮರ್ಚೆಂಟ್' ಎಂಬ ಹಡಗಿನಲ್ಲಿ ೧೬೮೮ನೆಯ ಅಕ್ಟೋಬರ್ ೨೦ ರಂದು ಇಂಗ್ಲೆಂಡಿಗೆ ಪ್ರಯಾಣ ಮಾಡಿದನು. ಇಷ್ಟು ಹೊತ್ತಿಗೆ ಬೊವ್ರೆ ತನ್ನ ಆಸ್ತಿಪಾಸ್ತಿಯನ್ನೆಲ್ಲಾ ಮಾರಿ ಬರಬೇಕಾದ ಹಣವನ್ನೆಲ್ಲಾ ಶೇಖರಿಸಿಕೊಂಡಿರಬೇಕು. ಇಂಗ್ಲೆಂಡಿನ ಪ್ರಯಾಣಕ್ಕೆ ಬಹಳ ಕಾಲ ಹಿಡಿಯಿತು. ಈ ಕಾಲವನ್ನು ಅವನು ತನ್ನ 'ಇಂಗ್ಲಿಷ್ ಮತ್ತು ಮಲಯ ನಿಘಂಟು' (Dictionary of English and Malaya) ಎಂಬ ಪುಸ್ತಕಕ್ಕೆ ಬೇಕಾದ ವಿಷಯಗಳನ್ನು ಸಂಗ್ರಹಿಸುವುದರಲ್ಲಿ ಕಳೆದನು. ಈ ಪುಸ್ತಕ ೧೭೦೧ರಲ್ಲಿ ಪ್ರಕಟವಾಯಿತು.

ತನ್ನ ತಾಯ್ನಾಡಿಗೆ ಸುಖವಾಗಿ ಹಿಂದಿರುಗಿದ ಬೊವ್ರೆ ೧೬೯೧ರಲ್ಲಿ ಮೇರಿ ಗಾರ್ಡಿನರ್ ಎಂಬುವ ಳನ್ನು ಮದುವೆಯಾದನು. ಮದುವೆಯ ರಿಜಿಸ್ಟರಿನಲ್ಲಿ ಮದುಮಗನ ವಯಸ್ಸು ಮೂವತ್ತೊಂದು ಎಂದು ನಮೂದಿಸಲಾಗಿದೆ. ಆದರೆ ಇದು ಸರಿಯಲ್ಲವೆಂಬ ಅಭಿಪ್ರಾಯವಿದೆ. ಏಕೆಂದರೆ ಕ್ರಿ.ಶ. ೧೬೬೮ರಲ್ಲಿ ಇಂಡಿಯಾ ದೇಶಕ್ಕೆ ಬಂದಾಗ ಬೊವ್ರೆಯ ವಯಸ್ಸು ಹದಿನೆಂಟು ಎಂದು ಇಟ್ಟುಕೊಂಡರೂ ೧೬೯೧ರಲ್ಲಿ ಅವನ ವಯಸ್ಸು ನಲವತ್ತೆಂಟು ವರ್ಷಗಳಾದರೂ ಆಗಿರಬೇಕು. ಮೇರಿ ಗಾರ್ಡಿನಳಿಗೆ ಸುಮಾರು ೨೦ ವರ್ಷ ಆಗಿತ್ತು.

ಮದುವೆಯಾದ ನಂತರ ಬೊವ್ರೆ ಮತ್ತೆ ಸಮುದ್ರಯಾನ ಮಾಡಿದನೇ ಇಲ್ಲವೇ ಎಂಬುದು ಖಚಿತವಾಗಿಲ್ಲ. ಆತ ತನ್ನ ಕಾಲವನ್ನು ಮೇಲೆ ಹೇಳಿದ ನಿಘಂಟನ್ನು ಸಿದ್ಧಪಡಿಸುವುದರಲ್ಲಿ ಕಳೆದಿರ ಬೇಕೆಂದು ಕಾಣುತ್ತದೆ. ಏಕೆಂದರೆ, ಅವನು ಮದುವೆಯಾದ ಹತ್ತುವರ್ಷಗಳ ನಂತರ ಈ ಗ್ರಂಥ ಪ್ರಕಟನೆಯಾಯಿತು. ಬೊವ್ರೆ ಇದ್ದ ಬಾಡಿಗೆ ಮನೆಯ ಮಾಲೀಕನಾಗಿರಬಹುದಾದ ಪೀಟರ್ ಬ್ರಿಗ್ಗಿನ್ಸ್ ದಿನಚರಿಯಲ್ಲಿ ೧೭೦೬ ರಿಂದ ಆತನ ಹೆಸರು ಬರುತ್ತದೆ. ಆತನಿಂದ ಬಾಡಿಗೆ ಪಡೆದ ವಿಷಯವನ್ನು ಬ್ರಿಗಿನ್ಸ್ ತನ್ನ ದಿನಚರಿಯಲ್ಲಿ ಬರೆದಿದ್ದಾನೆ.

ಬೊವ್ರೆಯು ಸಮುದ್ರಯಾನ ಮಾಡುವುದನ್ನು ನಿಲ್ಲಿಸಿದರೂ ಪೂರ್ವ ದೇಶದ ವ್ಯಾಪಾರದಲ್ಲಿ ಆಸಕ್ತಿ ವಹಿಸುತ್ತಿದ್ದನು. ಕ್ರಿ.ಶ. ೧೭೦೮ನೆಯ ಜುಲೈ ೨೮ರಲ್ಲಿ ಸರ್ ಥಾಮಸ್ ಕುಕ್, ಸರ್ ಗಿಲ್ಬರ್ಟ್ ಹೀತ್‌ಕೋಟ್ ಮುಂತಾದವರು ಕ್ಯಾಪ್ಟನ್ ಬೊವ್ರೆಯನ್ನು ಭೇಟಿಮಾಡಿ ಪೂರ್ವದೇಶದ ವ್ಯಾಪಾರದ ಬಗ್ಗೆ ಸಲಹೆ ವರದಿಮಾಡಬೇಕೆಂದು ಕೇಳಿದ್ದು 'ಕೋರ್ಟ್‌ಬುಕ್'ನಲ್ಲಿ ದಾಖಲೆ ಇದೆ. ಈ ಸಲಹೆಗಳ ಪರಿಣಾಮ ಏನಾಯಿತೆಂದು ಗೊತ್ತಿಲ್ಲ. ಕ್ರಿ.ಶ. ೧೭೧೩ನೆಯ ಇಸವಿ ಮಾರ್ಚ್ ೫ನೆಯ ತಾರೀಖು ಪೀಟರ್ ಬ್ರಿಗ್ಗಿನ್ಸನು ತನ್ನ ದಿನಚರಿಯಲ್ಲಿ ಹೀಗೆ ಬರೆದಿದ್ದಾನೆ: 'ಬೆಳಿಗ್ಗೆ ಕ್ಯಾಪ್ಟನ್ ಬೊವ್ರೆಯವರ ಮನೆಗೆ ಹೋಗಿದ್ದೆ. ಸಂಜೆ ಕ್ಯಾಪ್ಟನ್ ಬೊವ್ರೆಯವರ ಬಗ್ಗೆ ಇನ್‌ಷೂರೆನ್ಸ್ ಆಫೀಸಿಗೆ ಹೋಗಿದ್ದೆ.' ಬಹುಶಃ ಬೊವ್ರೆ ತಾನೇ ಸ್ವತಃ ಆ ಕೆಲಸ ಮಾಡಲು ಸಾಧ್ಯವಿಲ್ಲದ್ದರಿಂದ ಬ್ರಿಗ್ಗಿನ್ಸ್ ಆ ಕೆಲಸ ಮಾಡಿರ ಬೇಕು. ಬ್ರಿಗ್ಗಿನ್ಸ್ ಬೊವ್ರೆಯನ್ನು ಕೊನೆಯ ಸಲ ಕಂಡಿದ್ದು ಮಾರ್ಚ್ ೧೧ನೆಯ ತಾರೀಖು. ಅದೇ ದಿವಸ ಬೊವ್ರೆ ತನ್ನ ಉಯಿಲಿಗೆ ರುಜು ಹಾಕಿದನು. ಮೂರು ದಿನಗಳನಂತರ ಯಾವ ಚರ್ಚಿನಲ್ಲಿ ೨೧ಕ್ಕೆ ವರ್ಷಗಳ ಹಿಂದೆ ಮದುವೆಯಾಗಿದ್ದನೋ ಅದೇ ಚರ್ಚಿನಲ್ಲಿ ಬೊವ್ರೆಯ ಸಮಾಧಿಯಾಯಿತು. ಆತನ ವಿಧವೆ ಮೇರಿ ಬೊವ್ರೆ ೧೬ನೆಯ ತಾರೀಖು ಉಯಿಲನ್ನು ರುಜುವಾತು ಪಡಿಸಿದಳು. ೧೮ನೆಯ ಶತಮಾನದಲ್ಲಿ ೨೦ನೆಯ ಶತಮಾನಕ್ಕಿಂತ ಎಷ್ಟೋ ತ್ವರಿತವಾಗಿ ನ್ಯಾಯಾಲಯದ ಕೆಲಸಕಾರ್ಯಗಳು ಮುಗಿಯುತ್ತಿದ್ದುವೆಂದು ಇದರಿಂದ ವ್ಯಕ್ತವಾಗುತ್ತದೆ. ಉಯಿಲಿನಲ್ಲಿ ಬೊವ್ರೆ ತನ್ನ ಚರ ಆಸ್ತಿಯಲ್ಲಿ ಯಾವಾವುದು ಯಾರಾರಿಗೆ ಹೋಗಬೇಕೆಂದು ತಿಳಿಸಿದ್ದ. ಉದಾಹರಣೆಗೆ, 'ನನ್ನ ಕಸಿನ್ ಸ್ಟಡ್ಸ್‌ಗೆ ಈ ೫೦ ಪೌಂಡುಗಳ ಜೊತೆಗೆ ನನ್ನ ಉಡುಪು, ಕತ್ತಿ, ಪುಸ್ತಕ, ನಕಾಶೆ ಇತ್ಯಾದಿಗಳನ್ನೂ ಕೊಟ್ಟಿದ್ದೇನೆ' ಎಂದು ಬರೆದಿದ್ದಾನೆ.

ಗಂಡನು ಸತ್ತ ಎರಡು ವರ್ಷಗಳ ನಂತರ ಹೆಂಡತಿ ಮೇರಿ ಬೊವ್ರೆಯೂ ಕಾಲವಾದಳು. ಅವಳು ಸಾಯುವವರೆಗೆ ಅವಳ ವ್ಯವಹಾರವನ್ನು ಪೀಟರ್ ಬ್ರಿಗ್ಗಿನ್ಸ್ ನೋಡಿಕೊಳ್ಳುತ್ತಿದ್ದ. ಈ ಉಪಕಾರಕ್ಕಾಗಿ ಬೊವ್ರೆ ಬರೆದ ಈ ಪ್ರವಾಸದ ಕರಡು ಪ್ರತಿಯನ್ನು ಆಕೆ ಬ್ರಿಗ್ಗಿನ್ಸ್‌ಗೆ ಕೊಟ್ಟಿರಬಹುದು. ಏಕೆಂದರೆ, ಈ ಪ್ರತಿ ಬ್ರಿಗ್ಗಿನ್ಸ್‌ನ ಸಂತತಿಯವರ ಬಳಿ ಇತ್ತು.

ಮೇರಿ ಕ್ರಿ.ಶ. ೧೭೧೫ರಲ್ಲಿ ತೀರಿಕೊಂಡಳು. ಅವಳ ಗಂಡನ ಸಮಾಧಿಯ ಬಳಿ ಅವಳ ಸಮಾಧಿಯೂ ಆಯಿತು. ಅವಳು ಬರೆದ ಉಯಿಲನ್ನು ಆಕೆಯ ತಾಯಿ ಕೋರ್ಟಿನಲ್ಲಿ ರುಜುವಾತು ಪಡಿಸಿದಳು. ಆಕೆ ತನ್ನ ಉಯಿಲಿನಲ್ಲಿ ೨೦೦ ಪೌಂಡುಗಳನ್ನು ತನಗಾಗಿ ನಿರ್ಮಿಸಬೇಕಾದ ಸ್ಮಾರಕಕ್ಕಾಗಿ ಬಿಟ್ಟಿದ್ದಳು. ಇನ್ನೂ ಹಲವಾರು ರೀತಿಯಲ್ಲಿ ಸುಮಾರು ಸಾವಿರ ಪೌಂಡುಗಳನ್ನು ವಿಲೇಮಾಡಿ ನೂರು ಪೌಂಡುಗಳನ್ನು ಬಡ ನಾವಿಕರ ಮತ್ತು ಅವರ ವಿಧವೆಯರ ಯೋಗಕ್ಷೇಮಕ್ಕಾಗಿ ಕೊಟ್ಟಿದ್ದಳು. 'ತನ್ನ ಪ್ರೀತಿಯ ಗಂಡನು ಯಾವ ವ್ಯಾಪಾರದಿಂದ ಸಂಪಾದನೆ ಮಾಡಿದನೋ ಆ ವ್ಯಾಪಾರದಲ್ಲಿ ತೊಡಗಿದ ನಾವಿಕರ ವಿಧವೆಯರ ಯೋಗಕ್ಷೇಮಕ್ಕಾಗಿ ಈ ೧೦೦ ಪೌಂಡು ವಿನಿಯೋಗವಾಗಲಿ' ಎಂದು ಆಕೆ ತನ್ನ ಉಯಿಲಿನಲ್ಲಿ ಬರೆದಳು. ಈ ಉಯಿಲಿನಂತೆ ಕ್ರಿ.ಶ. ೧೭೪೫ರಲ್ಲಿ ಲಂಡನ್‌ಗೆ ಹೋಗುವ ದಾರಿಯಲ್ಲಿ ಎಂಟು ಗ್ರಾಮಗಳ ಬಳಿ ಎಂಟು ಧರ್ಮಶಾಲೆಗಳನ್ನು ಕಟ್ಟಿಸಲಾಯಿತು. ಪ್ರತಿಯೊಂದು ಧರ್ಮಶಾಲೆಯಲ್ಲಿ ಧರ್ಮದರ್ಶಿಗಳು ಕುಳಿತುಕೊಳ್ಳುವ ಕೋಣೆಯಲ್ಲಿ ಒಂದು ಶಿಲಾಶಾಸನವಿದೆ. ಈ ಶಾಸನದಲ್ಲಿ ಹೀಗೆ ಬರೆದಿದೆ: 'ಈ ಧರ್ಮಶಾಲೆಗಳನ್ನು ಕ್ರಿ.ಶ. ೧೭೪೫ರಲ್ಲಿ ಕ್ಯಾಪ್ಟನ್ ಥಾಮಸ್ ಬೋವ್ರೆಯ ವಿಧವೆ ಮೇರಿ ಬೋವ್ರೆಯು ತನ್ನ ಉಯಿಲಿನಲ್ಲಿ ಅಪೇಕ್ಷಿಸಿದಂತೆ ರಾಟ್‌ಕ್ಲಿಫ್. ಪೊಪ್ಲಾರ್ ಮುಂತಾದ ಊರುಗಳ ಬಡ ನಾವಿಕರಿಗೂ ಅವರ ವಿಧವೆಯರಿಗೂ ಕಟ್ಟಿಸಲಾಗಿದೆ.'

ಕ್ರಿ.ಶ. ೧೮೬೨ರಲ್ಲಿ ಡುನ್‌ಸ್ವಾನ್ ಎಂಬುವರು ಬರೆದ ಚರಿತ್ರೆಯೊಂದರಲ್ಲಿ ಹೀಗೆ ಹೇಳುತ್ತಾರೆ. 'ಈ ಧರ್ಮಶಾಲೆಗಳಲ್ಲಿ ಈಗ ನಾವಿಕರ ವಿಧವೆಯರು ಮಾತ್ರ ಇದ್ದಾರೆ. ಒಬ್ಬೊಬ್ಬ ವಿಧವೆಗೆ ತಿಂಗಳಿಗೆ ಕೇವಲ ಹದಿನಾಲ್ಕು ಪೌಂಡುಗಳೂ 'ಒಂದು ವರ್ಷಕ್ಕೆ ಒಂದು ಟನ್ ಕಲ್ಲಿದ್ದಲೂ ದೊರೆಯುತ್ತವೆ.'

ಕ್ರಿ.ಶ. ೧೮೭೮ರಲ್ಲಿ ಈ ಧರ್ಮಶಾಲೆಗಳನ್ನೂ ಮಾರಿ ಬಂದ ೨,೭೦೦ ಪೌಂಡು ಹಣವನ್ನು ಶೇ. ೩ರ ಬಡ್ಡಿಯಂತೆ ಸಾಲ ಕೊಡಲಾಗಿತ್ತು. ಇದರಿಂದ ವರ್ಷಕ್ಕೆ ೧೬೭ ಪೌಂಡು ೧೮ ಶಿಲಿಂಗ್‌ಗಳ ಷ್ಟು ಬಡ್ಡಿ ಬರುತ್ತಿತ್ತು. ಇದನ್ನು ವರ್ಷಕ್ಕೆ ಸುಮಾರು ೨೩ ಪೌಂಡಿನಂತೆ ಸರಾಸರಿ ೬೯ ವಯಸ್ಸಿನ ಎಂಟು ವಿಧವೆಯರಿಗೆ ಹಂಚುತ್ತಿದ್ದರು. ಮತ್ತು ಕಲ್ಲಿದ್ದಲು ಕೊಳ್ಳಲು ತಲಾ ಎರಡು ಪೌಂಡ್ ಕೊಡಲಾಗುತ್ತಿತ್ತು.

ಬೋವ್ರೆ ೧೯ ವರ್ಷಗಳ ಕಾಲ ಇಂಡಿಯಾ ಮತ್ತು ಇತರ ಪೂರ್ವದೇಶಗಳಲ್ಲಿ ಅಲೆದಾಡಿದರೂ ಅವನ ಪ್ರತಿಯಲ್ಲಿ ಕಂಡುಬರುವುದು ಮೊದಲ ಹತ್ತು ವರ್ಷಗಳ ಕಥೆ ಮಾತ್ರ. ಈ ಕಥೆ ಅರ್ಧದಲ್ಲಿಯೇ ಮುಕ್ತಾಯವಾಗುತ್ತದೆ. ಬಹುಶಃ ಅವನು ತನ್ನ ಕಥೆಯನ್ನು ೧೬೮೦ರಲ್ಲಿ ಪ್ರಾರಂಭಿಸಿ ಸ್ವಲ್ಪ ಬರೆದ ಮೇಲೆ ಅಲ್ಲಿಗೇ ನಿಲ್ಲಿಸಿ ಮತ್ತೊಂದು ದೊಡ್ಡ ಗ್ರಂಥವನ್ನು ಬರೆದಿರಬೇಕೆಂದು ಊಹಿಸಲಾಗಿದೆ. ಆ ಗ್ರಂಥವನ್ನು ಅವನು ತನ್ನ ಉಯಿಲಿನಲ್ಲಿ ಈಸ್ಟ್ ಇಂಡಿಯಾ ಕಂಪನಿಗೆ ದಾನ ಮಾಡಿರುವುದಾಗಿ ಬರೆದಿದ್ದಾನೆ. ಅಥವಾ ಹಾಗೆ ಮಾಡದಿದ್ದರೂ ಆ ಕರಡುಪ್ರತಿಯ ಉತ್ತರಾರ್ಧ ಕಳೆದುಹೋಗಿರಬೇಕು.

ಬೋವ್ರೆಯ ಪುಸ್ತಕವನ್ನು ಓದಿದರೆ ಅವನು ಆ ಕಾಲಕ್ಕೆ ಒಳ್ಳೆಯ ವಿದ್ಯಾವಂತನಾಗಿರಬೇಕೆಂದು ಭಾವಿಸಬೇಕಾಗುತ್ತದೆ. ಅಲ್ಲದೆ ಅವನು ತನ್ನ ಸುತ್ತಮುತ್ತಣ ಜನರ ಮತ್ತು ಅವರ ನಡೆನುಡಿಗಳ ಬಗ್ಗೆ ಆಸಕ್ತಿ ವಹಿಸಿರುವುದು ಕಂಡುಬರುತ್ತದೆ.

ಅವನು ತನ್ನ ಕರಡುಪ್ರತಿಯಲ್ಲಿ 'T.B.' ಎಂದು ತನ್ನ ಹೆಸರಿನ ಮೊದಲ ಅಕ್ಷರಗಳನ್ನು ಮಾತ್ರ ಬರೆದಿದ್ದಾನೆ. 'ಥಾಮಸ್ ಬೋವ್ರೆ' ಎಂದು ಪೂರ್ತಿ ಹೆಸರನ್ನು ಬರೆದಿಲ್ಲ. ಈ ಕಾರಣ T.B. ಎಂದರೆ ಥಾಮಸ್ ಬೋವ್ರೆಯೋ ಅಥವಾ ಮತ್ತೊಬ್ಬನೋ ಎಂಬ ವಿಷಯ ಅನುಮಾನಕ್ಕೆ ಎಡೆಗೊಟ್ಟಿತು. ಆದರೆ ಸರಿಯಾದ ಆಧಾರಗಳ ಮೇಲೆ ಅವನು ಥಾಮಸ್ ಬೋವ್ರೆ ಎಂದೇ ನಿರ್ಧಾರ ಮಾಡಲಾಯಿತು.

ಥಾಮಸ್ ಬೋವ್ರೆ ಪ್ರಸ್ತುತ ಗ್ರಂಥವನ್ನಲ್ಲದೆ ಮೇಲೆ ಹೇಳಿದ ನಿಘಂಟನ್ನೂ ಮತ್ತೆರಡು ಗ್ರಂಥಗಳನ್ನೂ ಹಲವಾರು ಭೂಪಟ ಮತ್ತು ದಿನಚರಿಗಳನ್ನೂ ಬರೆದಿದ್ದಾನೆಂದು ಆತನ ಉಯಿಲಿನಿಂದ ತಿಳಿದುಬರುತ್ತದೆ. ಆದರೆ ಹನ್ನೆರಡು ಭೂಪಟಗಳನ್ನು ಬಿಟ್ಟರೆ ಉಳಿದ ಭೂಪಟಗಳಾಗಲಿ ಗ್ರಂಥಗಳಾಗಲಿ ಸಿಕ್ಕಲಿಲ್ಲ. ಈ ಭೂಪಟಗಳು ಅಷ್ಟೇನೂ ಉಪಯುಕ್ತವಾದವುಗಳಲ್ಲವಾದರೂ ಅವುಗಳಿಂದ ಅವನು ಇಂಡಿಯಾದಲ್ಲಿ ಕಂಡ ಅನೇಕ ಸ್ಥಳಗಳು ಯಾವುವೆಂದು ತಿಳಿದುಕೊಳ್ಳಬಹುದುದಾಗಿದೆ.

ಆದರೆ ಬೊವ್ರೆಯ ನಿಘಂಟು ತುಂಬ ಉಪಯುಕ್ತವಾದುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅದನ್ನು ಅಚ್ಚುಮಾಡಿ ಪ್ರಕಟಿಸಿದವರು ಈಸ್ಟ್ ಇಂಡಿಯಾ ಕಂಪನಿಯವರು. ಅದನ್ನು ಬೊವ್ರೆ ಬರೆದ ಉದ್ದೇಶ ತಾನು ಕಲಿತ ಮಲಯಾ ಭಾಷೆಯು ಇತರ ನಾವಿಕರಿಗೆ ತಿಳಿಯಲಿ ಎಂದು. ಕ್ರಿ.ಶ. ೧೮೧೨ರಲ್ಲಿ ಮಲಯಾ ಭಾಷೆಯ ವ್ಯಾಕರಣವನ್ನು ಬರೆದ ವಿಲಿಯಂ ಮಾರ್ಸ್ಡೆನ್ ಎಂಬುವರು ಆದನ್ನು ಅನಕ್ಷರಸ್ಥನ ಗ್ರಂಥವೆಂದು ಹೇಳಿದರೂ ಅದರಲ್ಲಿ ಸಾಕಷ್ಟು ಗುಣಗಳಿವೆ ಎಂದು ಹೊಗಳಿದ್ದಾರೆ.

ಬೊವ್ರೆಯ ಗ್ರಂಥವನ್ನು "The Countries Round the Bay of Bengal" ಎಂಬ ಹೆಸರಿನಲ್ಲಿ ಹಕ್ಲೂಯುತ್ ಸೊಸೈಟಿಯುವರು ಕ್ರಿ.ಶ. ೧೯೦೫ರಲ್ಲಿ ಪ್ರಕಟಿಸಿದರು. ಇದರ ಸಂಪಾದಕರು ಸರ್ ರಿಚರ್ಡ್ ಕರ್ನಕ್ ಟೆಂಪಲ್ ಎಂಬುವರು. ಇವರು ಬೊವ್ರೆ ಬರೆಯುವಾಗ ಉಪಯೋಗಿಸಿದ ಕಾಗುಣಿತ ಮತ್ತು ಆದ್ಯಕ್ಷರಗಳನ್ನು ಹಾಗೆಯೇ ಇಟ್ಟುಕೊಂಡು ವಿರಾಮಚಿಹ್ನೆಗಳನ್ನು ಮಾತ್ರ ಉಪಯೋಗಿಸಿ ವಿಪುಲವಾದ ಅಡಿಟಿಪ್ಪಣಿಗಳ ಸಮೇತ ಗ್ರಂಥವನ್ನು ಪರಿಷ್ಕರಿಸಿದ್ದಾರೆ. ಉದಾಹರಣೆಗೆ : ಬೊವ್ರೆಯ ಒಂದು ವಾಕ್ಯ : 'Neither of these castsdrinks any manna of Liquor save water or milke, or congye, which is noe more then fresh water boyled with a little rice in it, but they doe allow their wifes to drinke wine or distlled waters. during the time of theire beinge with childe but at noe other times, and then but very sparingly, and of liquor not over stronge."

ಈ ಗ್ರಂಥದ ಒಂದು ವಿಶೇಷವೆಂದರೆ, ಗ್ರಂಥಕರ್ತನು ವಿಪುಲವಾಗಿ ಚಿತ್ರಗಳನ್ನು ಬರೆದಿರುವುದು. ಅವನ್ನು ಹಾಗೆಯೇ ಇದರಲ್ಲಿ ಕೊಡಲಾಗಿದೆ. ಅವು ಒರಟಾಗಿದ್ದರೂ ನಮಗೆ ಆ ಕಾಲದ ವಸ್ತು ವಾಹನಗಳ ಹಾಗೂ ಜನರ ಉಡುಗೆ ತೊಡುಗೆಗಳ ಬಗ್ಗೆ ಪರಿಚಯ ಮಾಡಿಕೊಳ್ಳಲು ಸಹಾಯಕವಾಗಿವೆ.

ಸರ್ ರಿಚರ್ಡ್ ಟೆಂಪಲ್ ಅವರು ೧೯೦೫ರಲ್ಲಿ ಥಾಮಸ್ ಬೊವ್ರೆಯ ಈ ಪ್ರವಾಸ ಕಥನವನ್ನು ಪ್ರಕಟಿಸಿದ ಎಂಟು ವರ್ಷಗಳ ನಂತರ ಎಲ್ಲಿಯೋ ಸೇರಿಹೋಗಿದ್ದ ಬೊವ್ರೆಯ ಕಾಗದ ಪತ್ರಗಳು ಸಿಕ್ಕಿದ ಕಥೆ ಸ್ವಾರಸ್ಯವಾಗಿದೆ. ಅವರು ಹೇಳುವುದೇನೆಂದರೆ : "೧೯೧೩ನೆಯ ಇಸವಿಗೆ ಬೊವ್ರೆ ಕಾಲವಾಗಿ ೨೦೦ ವರ್ಷಗಳೇ ಆಗಿದ್ದುವು. ಬರ್ಮಿಂಗ್ ಹ್ಯಾಮಿನ ಜಾನ್ ಹಂಫ್ರೀಸ್ ಎಂಬುವರು ಹೆಸರಾದ ಪ್ರಾಚೀನಾನ್ವೇಶಕರು (antiquariante). ಕ್ಲೀವ್ ಪ್ರೈಯರ್ ಎಂಬ ಜಹಗೀರಿ ಗ್ರಾಮದಲ್ಲಿ ನೆಲಸಿದ್ದ ಅವರ ಸ್ನೇಹಿತರೊಬ್ಬರು ತಾವು ಗುತ್ತಿಮನೆಯ ಕಿಟಕಿಯಿಲ್ಲದ ಒಂದು ಕತ್ತಲು ಕೋಣೆಯನ್ನು ಹುಡುಕು ತ್ತಿರುವಾಗ ಅಲ್ಲಿ ಒಂದು ಏನೇನೋ ಕಾಗದ ಪತ್ರಗಳಿರುವ ಒಂದು ಹಳೆಯ ಕಾಲದ ಪಿಠಾರಿಯೊಂದು ಸಿಕ್ಕಿರುವುದಾಗಿ ತಿಳಿಸಿದರು. ಕ್ಲೀವ್ ಪ್ರೈಯರ್ ಮನೆ ನನ್ನ ಮನೆತನದ ಮನೆಗೆ ಸುಮಾರು ೨೦ ಮೈಲಿ ದೂರದಲ್ಲಿತ್ತು.

ಮೇಲ್ಕಂಡ ಸುದ್ದಿ ತಿಳಿದ ಹಂಫ್ರೀಸ್ ಅವರು ಕೂಡಲೇ ಗುತ್ತಿಮನೆಗೆ ಹೋಗಿ ಆ ಕಾಗದ ಪತ್ರಗಳನ್ನು ನೋಡಿದರು. ಅವು ೧೭ನೆಯ ಶತಮಾನದ ಕೊನೆಯ ಮತ್ತು ೧೮ನೆಯ ಶತಮಾನದ ಆರಂಭ ಕಾಲಕ್ಕೆ ಸೇರಿದ್ದವು. ಅಲ್ಲದೆ ಆ ಕಾಗದ ಪತ್ರಗಳು ಕ್ಯಾಪ್ಟನ್ ಥಾಮಸ್ ಬೊವ್ರೆ ಎಂಬುವನಿಗೆ ಸಂಬಂಧಪಟ್ಟವುಗಳೆಂದೂ ಗೊತ್ತಾಯಿತು. ಆದರೆ ಆ ಕ್ಯಾಪ್ಟನ್ ಬೊವ್ರೆ ಯಾರೆಂದು ಅವರಿಗೆ ಗೊತ್ತಾಗಲಿಲ್ಲ. ಅಂತೂ ಹಂಫ್ರೀಸ್ ಅವರು ಆ ಕಾಗದ ಪತ್ರಗಳನ್ನೆಲ್ಲಾ ಕ್ರಮವಾಗಿ ಜೋಡಿಸಿದರು. ಅವು ಅಲ್ಲಿಗೆ ಹೇಗೆ ಬಂದವೆಂಬುದು ಅವರಿಗೆ ಬಿಡಿಸಲಾರದ ಒಗಟಾಯಿತು. ನಿಧಾನವಾಗಿ ವಿಚಾರಿಸಲು ಆರಂಭಿಸಿದರು. ನನಗೂ ಹೇಳಿದರು. ಇಬ್ಬರೂ ಕೂಡಿಯೇ ಆ ಒಗಟನ್ನು ಬಿಡಿಸಬೇಕೆಂದು ತೀರ್ಮಾನಿಸಿದೆವು. ಈ ಮಧ್ಯೆ ನಮಗಿಬ್ಬರಿಗೂ ಬೇಕಾದ ಲೆಫ್ಟಿನೆಂಟ್ ಕರ್ನಲ್ ಹೆನ್ರಿ ಹೋವರ್ಡ್ ಎಂಬುವರಲ್ಲಿ ಈ ವಿಷಯ ಪ್ರಸ್ತಾಪಮಾಡಿ ಆ ಕಾಗದ ಪತ್ರಗಳನ್ನು ಹೇಗೆ ಪಡೆಯಬೇಕೆಂದು ಯೋಚನೆ ಮಾಡಿದೆವು.

ಗುತ್ತಿ ಮನೆಯ ಮಾಲೀಕ ಆ ಕಾಗದ ಪತ್ರಗಳನ್ನು ಕೊಡಲು ಒಪ್ಪದೇಹೋದ. ಬೇಕಾದರೆ ಅಲ್ಲೇ ನೋಡಿಕೊಂಡು ಹೋಗಿ ಎಂದುಬಿಟ್ಟ. ಹೀಗೆ ಎಂಟು ವರ್ಷ ಕಳೆದುವು. ಆತ ತೀರಿಹೋದ. ಆಗ ಕರ್ನಲ್ ಹೋವರ್ಡ್ ಅವರು ಅವುಗಳನ್ನೂ ಆ ಪಿಠಾರಿಯನ್ನೂ ಕೊಂಡುಕೊಂಡು ಲಂಡನ್ ನಲ್ಲಿರುವ ಆಲ್ಬರ್ಟ್ ಮ್ಯೂಸ್ಸಿಯಮ್ಮಿಗೆ ವಹಿಸಿದರು. ಪಿಠಾರಿಯ ಉದ್ದ ೩ ಅಡಿ ೩ ಅಂಗುಲ; ಅಗಲ ೨ ಅಡಿ ೧ ಅಂಗುಲ; ಮತ್ತು ಎತ್ತರ ೧ ಅಡಿ ೬ ಅಂಗುಲ ಇದ್ದುವು. ಆ ಕಾಲದ ಚೂಪಾದ ಟೊಪ್ಪಿಗೆ ಇಡಲು ಅನುಕೂಲವಾಗುವಂತೆ ಮುಚ್ಚಳದ ಒಳಭಾಗವನ್ನು ಟೊಳ್ಳಾಗಿ ಮಾಡಲಾಗಿದೆ. ಅದರ ಮೇಲೆ ಹಿತ್ತಾಳೆಯ ತಲೆಯುಳ್ಳ ಮೊಳೆಗಳನ್ನು ಪೆಟ್ಟಿಸಲಾಗಿದೆ. 'E B' ಎಂಬ ಮೊದಲಕ್ಷರ ಗಳೂ ೧೬೪೮ನೆಯ ಇಸವಿಯೂ ಇವೆ. ಮರದಿಂದ ಮಾಡಿದ ಮತ್ತು ಚರ್ಮ ಮತ್ತು ಬಟ್ಟೆಯಿಂದ ಮುಚ್ಚಿದ ಈ ಪೆಟ್ಟಿಗೆಯನ್ನು ಪ್ರಯಾಣಕ್ಕಾಗಿ ಆ ಕಾಲದಲ್ಲಿ ಉಪಯೋಗಿಸಲಾಗುತ್ತಿತ್ತು.

'E B' ಎಂಬ ಮೊದಲಕ್ಷರಗಳುಳ್ಳವರು ಯಾರು ? ಎಡ್ವರ್ಡ್ ಬುಷೆಲ್ ಎಂಬುವ ರೊಬ್ಬರು ಥಾಮಸ್ ಬೊವ್ರೆಗೆ ತಾಯಿಯ ಕಡೆಯ ಹಳೆಯ ಸಂಬಂಧಿ. ಇವರ ತಾತ ಥಾಮಸ್ ಬುಷೆಲ್. ಇವನ ನಾಮಕರಣ ೧೬೦೪ರಲ್ಲಿ ಕ್ಲೀವ್ ಪ್ರೈಯರ್ ಚರ್ಚಿನಲ್ಲಿ ಆಯಿತು. ಥಾಮಸ್ ಬೊವ್ರೆ ೧೭೧೩ರಲ್ಲಿ ಕಾಲವಾದನಷ್ಟೆ. ಎರಡು ವರ್ಷಗಳನಂತರ ಆತನ ಹೆಂಡತಿಯೂ ೧೭೨೦ರಲ್ಲಿ ಆಕೆಯ ತಾಯಿ ಶ್ರೀಮತಿ ಗಾರ್ಡಿನರಳೂ ತೀರಿಕೊಂಡಳು. ಗಾರ್ಡಿನರ್ ಸಾಯುವಾಗ ಥಾಮಸ್ ಬೊವ್ರೆಯ ಹಾಗೂ ತನ್ನ ಆಸ್ತಿಪಾಸ್ತಿಗಳ ವಿಲೇವಾರಿಯ ಕೆಲಸವನ್ನು ಕ್ಲೀವ್ ಪ್ರೈಯರ್ ಗುತ್ತಿ ಮನೆಯಲ್ಲಿದ್ದ ತನ್ನ ಸೋದರಳಿಯ (Nephew) ಥಾಮಸ್ ಬುಷೆಲ್ ಎಂಬುವನಿಗೆ ವಹಿಸಿದಳು. ಆಗ ಬುಷೆಲ್‌ಗೆ ೨೩ ವರ್ಷ ವಯಸ್ಸು.

ಥಾಮಸ್ ಬೊವ್ರೆ ಲಂಡನ್‌ನಲ್ಲಿದ್ದಾಗ 'ಮರೀನ್ ಸ್ಕೇರ್' ಎಂಬ ಮನೆಯಲ್ಲಿ ವಾಸವಾಗಿದ್ದ. ವಿಲ್‌ನಂತೆ ಆಸ್ತಿಪಾಸ್ತಿಗಳ ವಿಲೇವಾರಿ ಮಾಡಲು ಲಂಡನ್‌ಗೆ ಬಂದ ಥಾಮಸ್ ಬುಷೆಲ್ ಕ್ಲೀವ್‌ನಲ್ಲಿದ್ದ ತನ್ನ ಚಿಕ್ಕಪ್ಪನ ಮಗಳು ಶ್ರೀಮತಿ ಗ್ರೇಸ್ ಎಂಬುವಳಿಗೆ ಒಂದು ಕಾಗದ ಬರೆದು 'ಈದಿನ ಆ ಕಪ್ಪಿನಾದ ಪಿಠಾರಿಯನ್ನೂ ಶಿಟ್ಟೆ ಹಾಗೂ ಒಡವೆಗಳನ್ನೂ ಕಳುಹಿಸಿದ್ದೇನೆ. ಅದರ ತೂಕ ೨೦೦ ಹಡ್ರೆಡ್ ವೈಟ್‌ಗಳು ನಾನು ಬೇಗದ ಕೈ ಕಳುಹಿಸುವವರೆಗೂ ನೀನು ಅವನ್ನು ತೆಗೆಯುವಂತಿಲ್ಲ' ಎಂದು ತಿಳಿಸಿದ. ಆತನೇ ಆ ಪೆಟ್ಟಿಗೆ ತೆಗೆದುಕೊಂಡು ಹೋಗದೆ ಇದ್ದುದಕ್ಕೆ ಕಾರಣ ಏನೆಂದರೆ ಆತನಿಗೆ ಸಿಡುಬು ಎದ್ದಿದ್ದುದು. ಹೀಗೆ ಥಾಮಸ್ ಬೊವ್ರೆಯ ಕಾಗದಪತ್ರಗಳು ಆ ಗುತ್ತಿಮನೆಯ ಕತ್ತಲಲ್ಲಿ ಸೇರಿಹೋದುವು. ಕ್ಲೀವ್ ಪ್ರೈಯರ್‌ನಲ್ಲಿ ಇದ್ದ ಮನೆ ಮತ್ತು ಜಹಗೀರಿಗಳು ಥಾಮಸ್ ಬುಷೆಲ್‌ನ ತಾಯಿಯ ತೌರುಮನೆಯ ಕಡೆಯಿಂದ ಆತನ ಕೈಸೇರಿದ್ದುವು. ಕೋಟ್ಯಾಂತರ ರೂಪಾಯಿಗಳ ಜಹಗೀರಿ ಕೈಗೆ ಬಂದನಂತರ ಥಾಮಸ್ ಬುಷೆಲ್ ಬೇರೊಂದು ಜಹಗೀರಿ ಮನೆಗೆ ತನ್ನ ನಿವಾಸ ಬದಲಾಯಿಸಿದನು. ಅಲ್ಲಿ ೧೭೬೭ರಲ್ಲಿ ಕಾಲ ವಾದನು.

ಬುಷೆಲ್ ಮನೆತನದವರು ಕ್ಲೀವ್ ಪ್ರೈಯರ್‌ನಲ್ಲಿದ್ದ ಗುತ್ತಿಮನೆ ಬಿಟ್ಟನಂತರ ಅಲ್ಲಿ ಬೇರೆ ಯವರು ಇರತೊಡಗಿದರು. ಥಾಮಸ್ ಬುಷೆಲ್ ಅಲ್ಲಿಂದ ಹೋದ ಮೇಲೆ ಬೌವ್ರೆ ಪತ್ರಗಳಿದ್ದ ಪಿಠಾರಿಯ ಬಗ್ಗೆ ಯೋಚಿಸಲೇ ಇಲ್ಲ. ಆ ಕಾಗದ ಪತ್ರಗಳ ಕಟ್ಟನ್ನು ಸಹ ಯಾರೂ ಬಿಚ್ಚಲಿಲ್ಲ. ಅದನ್ನು ಬಿಚ್ಚಿ ನೋಡುವ ಭಾಗ್ಯ ಮೇಲೆ ಹೇಳಿದ ಮಿಸ್ಟರ್ ಹಂಫ್ರೀಸ್ ಅವರ ಪಾಲಿಗೆ ಒದಗಿತು. ಅದು ಇದ್ದ ಮನೆ ಭಾರಿ ದೊಡ್ಡದು. ಹಳೆಯ ಕಾಲದ ಆ ದೊಡ್ಡ ಕಟ್ಟಡದ ಚಿತ್ರದಿಂದಲೇ ಅದರ ಭವ್ಯತೆ ಸ್ಪಷ್ಟವಾಗುತ್ತದೆ. ಈಗ ಆ ಮನೆಯ ಮೂಲೆಯಲ್ಲಿ ಯಾರಿಗೂ ಕಾಣದಂತೆ ಕುಳಿತ ಪಿಠಾರಿಯಲ್ಲಿ ಥಾಮಸ್ ಬೊವ್ರೆಯ ಕಾಗದ ಪತ್ರಗಳು ಹೇಗೆ ಬಂದುವು ಎಂಬುದನ್ನು ನೋಡೋಣ. ಬೊವ್ರೆ ೧೬೬೯–೮೮ರವರೆಗೆ ಬಂಗಾಳ ಕೊಲ್ಲಿಯಲ್ಲಿ ಅಡ್ಡಾಡಿ ೧೬೮೯ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿ ೧೬೯೧ರಲ್ಲಿ ಮೇರಿ ಗಾರ್ಡಿನರ್ ಎಂಬುವಳನ್ನು ಮದುವೆಯಾದನಷ್ಟೆ. ಆಕೆಯ ತಾಯಿ ಅಂದರೆ ತನ್ನ ಅತ್ತೆಯ ಮೂಲಕ ಬೌವ್ರೆಗೂ ಥಾಮಸ್ ಬುಷೆಲ್ ಅವರಿಗೂ ಸಂಬಂಧ ಬೆಳೆಯಿತು. ಆಗಲೇ ಹೇಳಿದಂತೆ ಥಾಮಸ್ ಬುಷೆಲ್ ಅತ್ತೆ ಶ್ರೀಮತಿ ಗಾರ್ಡಿನರ್ ಅವಳ ಆಸ್ತಿಪಾಸ್ತಿ ವಿಲೇವಾರಿ ಮಾಡಬೇಕಾಯಿತು.



ಥಾಮಸ್ ಬೊವ್ರೆಯ ಕಾಗದ ಪತ್ರಗಳು ಇದ್ದ ಹಳೆಯ ಕಾಲದ ಗುತ್ತಿಮನೆ

ಲಂಡನ್‌ಗೆ ಬಂದ ಆತ ಬೊವ್ರೆ ಬಿಟ್ಟು ಹೋಗಿದ್ದ ಕಾಗದಪತ್ರಗಳ ಕಟ್ಟುಗಳನ್ನೆಲ್ಲಾ ಕ್ಲೀವ್ ಪ್ರೈಯರ್‌ಗೆ ಕಳುಹಿಸಿಕೊಟ್ಟ. ಬೊವ್ರೆ ಎಲ್ಲವನ್ನೂ ಬರೆದಿಡುತ್ತಿದ್ದ. ಕಂದಾಯದ ರಸೀದಿಯಿಂದ ಹಿಡಿದು ಒಂದು ಕರಡು ಕಾಗದವನ್ನೂ ತಪ್ಪದೆ ಇಟ್ಟಿದ್ದ. ಇವನ್ನೆಲ್ಲಾ ಆತನ ಹೆಂಡತಿಯೂ ಅತ್ತೆಯೂ ಕಳೆಯದೆ ಇಟ್ಟಿದ್ದು, ಆಮೇಲೆ ಅವನ್ನು ಮೇಲೆ ಹೇಳಿದ ಒಠಾರಿಯಲ್ಲಿ ಹಾಕಿದರು. ಅದರಲ್ಲಿ ಗಾರ್ಡಿನರ್ಸ್ ಮತ್ತು ಬುಷೆಲ್ಸ್ ಅವರ ಮನೆಗೆ ಸಂಬಂಧಪಟ್ಟವೂ ಸೇರಿಹೋದುವು. ಹೀಗೆ ೨೦೦ ವರ್ಷಗಳು ಆ ಕಾಗದಗಳೆಲ್ಲಾ ಕತ್ತಲೆ ಮನೆಯಲ್ಲಿ ಕಾಲಹಾಕಿದುವು.

ಆ ಪೆಟ್ಟಿಗೆಯಲ್ಲಿದ್ದ ಕಾಗದಪತ್ರಗಳಲ್ಲಿ ಅತ್ಯಂತ ಹಳೆಯದು ೧೬೬೯ನೆಯ ಇಸವಿಯದು. ಅತ್ಯಂತ ಈಚಿನದು ೧೭೧೩ರದು. ಎಷ್ಟೋ ಕಾಗದಗಳು ಹಾಳಾಗಿದ್ದುವು. ಸಮುದ್ರದ ನೀರಿನಲ್ಲಿ ನೆಂದುಹೋದ ಹಡಗಿನ ಕಾಗದಗಳು, ಕಾಲ ಕಳೆದಂತೆ ಚೂರು ಪಾರಾದ ಕಾಗದಗಳೂ ಇದ್ದುವು. ಆದರೆ ಕೋಣೆಯು ಬೆಚ್ಚಗಿದ್ದುದರಿಂದ ಯಾವ ಕಾಗದ ಪತ್ರಗಳೂ ಹಾಳಾಗಿರಲಿಲ್ಲ. ಕರ್ನಲ್ ಹೋವರ್ಡ್ ಅವರು ಅವನ್ನೆಲ್ಲಾ ಸರಿಯಾಗಿ ಜೋಡಿಸಿ ಓದಲು ಅನುಕೂಲವಾಗುವಂತೆ ಮಾಡಿದರು. ಹಾಗೆ ಮಾಡಿ, ಅವನ್ನು ನನಗೂ ಮಿಸ್ ಎಲ್. ಎಂ. ಅನ್ಸ್ಟೀ ಅವರಿಗೂ ಕೊಟ್ಟು ಇನ್ನೂ ಕ್ರಮವಾಗಿ ಜೋಡಿಸಲು ಹೇಳಿದರು. ಈ ಕೆಲಸ ಅಷ್ಟು ಸುಲಭವಾಗಲಿಲ್ಲ. ನಿಧಾನವಾಗಿ ಒಂದೊಂದೇ ಕಾಗದ ನೋಡಿ ಜೋಡಿಸಲಾರಂಭಿಸಿದೆವು. ಬೊವ್ರೆಗೆ ಸಂಬಂಧಪಟ್ಟ ಕಾಗದಗಳನ್ನು ಬೇರೆ ಮಾಡಿದೆವು. ಅವನ್ನು ನೋಡುವಾಗ ನಮಗೆ ಅನಿಸಿತು, ಬೊವ್ರೆ ಭಾರಿ ಶಕ್ತಿಯುತವಾದ ವ್ಯಕ್ತಿ ಎಂದು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಡ್ಡಾಡುತ್ತಲೇ ಇದ್ದನಲ್ಲದೆ ಎಷ್ಟೋ ಮುಖ್ಯ ವಿಷಯಗಳಲ್ಲಿ ಆತ ಸೇರಿಹೋಗಿದ್ದಂತೆ ಕಂಡಿತು.

ಈ ಕಾಗದ ಪತ್ರಗಳಿಂದ ಬೊವ್ರೆ ೧೬೮೮ ರಿಂದ ೧೭೦೦ರ ವರೆಗೆ ಏನುಮಾಡುತ್ತಿದ್ದ ಎಂಬುದು ಸ್ಪಷ್ಟವಾಗಲಿಲ್ಲ. ೧೭೦೦ರಲ್ಲಿ ಮತ್ತೊಮ್ಮೆ ಇಂಡಿಯಾಕ್ಕೆ ಹೊರಡುವ ಸಿದ್ಧತೆ ಮಾಡಿಕೊಂಡಂತೆ ಕಾಣುತ್ತದೆ. ಆದರೆ ಅದು ಆಗಲಿಲ್ಲ. ೧೬೯೮ರಲ್ಲಿ ಹಾಲೆಂಡ್‌ಗೆ ಹೋಗಿಬಂದನು. ಹಡಗು ನಡೆಸುವವರಿಗೆ ರಹದಾರಿ ಕೊಡುವ ಮತ್ತು ಹಡಗಿಗೆ ಸಂಬಂಧಪಟ್ಟ ಕೆಲಸಗಳನ್ನು ನೋಡಿಕೊಳ್ಳುವ ಸಂಘವಾದ 'ಟ್ರಿನಿಟಿ ಹೌಸ್'ನಲ್ಲಿ ಬೊವ್ರೆಯ ಅಣ್ಣನೊಬ್ಬ ಇದ್ದ ಕಾರಣ ಆತ ಹಡಗುಗಳಿಗೆ ಸಂಬಂಧಪಟ್ಟ ವ್ಯವಹಾರದಲ್ಲಿ ಸಾಯುವವರೆಗೆ ತೊಡಗಿದ್ದಂತೆ ಕಾಣುತ್ತದೆ. ಲಿನನ್ ಮ್ಯಾನುಫ್ಯಾಕ್ಚರಿಂಗ್ ಕಂಪೆನಿ, ಈಸ್ಟ್ ಇಂಡಿಯಾ ಸ್ಟಾಕ್ ಮತ್ತು ಗವರ್ನಮೆಂಟ್ ಲಾಟರಿಗಳಲ್ಲಿ ಆತನ ಭಾಗ ಇತ್ತು. ಇಷ್ಟಲ್ಲದೆ ಹಲವಾರು ಮನೆಗಳ ಮಾಲೀಕನೂ ಆಗಿದ್ದನೆಂದು ಗೊತ್ತಾಗುತ್ತದೆ. ಆ ಮನೆಗಳ ರಿಪೇರಿ, ಬಾಡಿಗೆ ವಸೂಲಿ ಇತ್ಯಾದಿ ಕೆಲಸಗಳಲ್ಲಿ ಯಾವಾಗಲೂ ನಿರತನಾಗಿದ್ದನು.

ಈ ಅಪೂರ್ವ ವ್ಯಕ್ತಿಯ ಕಾಗದಪತ್ರಗಳನ್ನು ಹೀಗೆ ಬೆಳಕಿಗೆ ತರಲು ಹಕ್ಲೂಯತ್ ಸೊಸೈಟಿಯವರು ದಯಮಾಡಿ ಒಪ್ಪಿದರು. ಎರಡು ಭಾಗಗಳಾಗಿ ಅವನ್ನು ಪ್ರಕಟಿಸಿದ್ದೇನೆ. ಒಂದು, ೧೬೯೮ರಲ್ಲಿ ಫ್ಲಾಂಡರ್ಸ್ ಮತ್ತು ಹಾಲೆಂಡ್‌ಗಳಲ್ಲಿ ಆರು ವಾರಗಳ ಪ್ರವಾಸ. ಇನ್ನೊಂದು, ಮೇರಿ ಗ್ಯಾಲಿ ಎಂಬ ಹಡಗಿನ ವೃತ್ತಾಂತ. ಹಡಗನ್ನು ಕಟ್ಟುವುದು, ಅದರ ನಿರ್ಮಾ ವೆಚ್ಚ, ಆಮೇಲೆ ಅದರ ಸಂಪೂರ್ಣ ಯಾನದ ಕಥೆ—ಇವೆಲ್ಲಾ ಇದರಲ್ಲಿ ಬರುತ್ತವೆ. ಇವು ಹಡಗಿನ ಇತಿಹಾಸಕ್ಕೆ ಬಹು ಅಮೂಲ್ಯವಾದ ಅಂಶಗಳು.

ಇಷ್ಟೆಲ್ಲಾ ಕಾಗದಪತ್ರಗಳನ್ನು ಹುಡುಕಿದರೂ ಬೊವ್ರೆಯ ವಯಸ್ಸಿನ ವಿಷಯ ಏನೂ ಗೊತ್ತಾಗಲಿಲ್ಲ. ೧೬೬೯ರಲ್ಲಿ ಇಂಡಿಯಾಕ್ಕೆ ಹೋದಾಗ ಆತನ ವಯಸ್ಸು ೧೯ ವರ್ಷ ಎಂದಷ್ಟೆ ಲೆಕ್ಕಹಾಕಲು ಸಾಧ್ಯವಾಯಿತು. ಸತ್ತಾಗ ಆತನ ವಯಸ್ಸು ೬೩ ವರ್ಷ. ಕೊನೆಗಾಲದವರೆಗೂ ಆತ ಬಹು ಚಟುವಟಿಕೆಯಿಂದ ಇದ್ದ.

ಬೊವ್ರೆ ದಕ್ಷಿಣ ಏಷ್ಯಾ, ಪರ್ಷಿಯನ್ ಖಾರಿ, ಬೋರ್ನಿಯೋ, ಸುಮಾತ್ರಾ—ಈ ಕಡೆಗಳಲ್ಲೆಲ್ಲಾ ಬಂದರಿನಿಂದ ಬಂದರಿಗೆ ಅಡ್ಡಾಡಿದ್ದು ಅಡ್ಡಾಡಿದ್ದೆ. ಅಂದಿನ ಜನ ಜೀವನದ ರೀತಿನೀತಿಗಳು ಆತನಿಗೆ

ಚೆನ್ನಾಗಿ ಗೊತ್ತಿದ್ದುವು. ಬಹು ಕ್ರಮವಾದ ಬಾಳುವೆ ನಡೆಸುತ್ತಿದ್ದ ಆತ ತಾನು ಬರೆದ ಮುಖ್ಯವಾದ ಪತ್ರಗಳ ನಕಲುಗಳನ್ನೂ, ಅವುಗಳಿಗೆ ಬಂದ ಉತ್ತರಗಳನ್ನೂ ಜೋಡಿಸಿ ಇಟ್ಟಿದ್ದ. ನಲವತ್ತು ವರ್ಷಗಳ ಆವನ ಬಾಳುವೆಯ ವಿವರಗಳು ಇದರಿಂದ ತಿಳಿಯುತ್ತವೆ.

'ಬ್ರಿಟಿಷ್ ಇಂಡಿಯಾ ಚಕ್ರಾಧಿಪತ್ಯ' ಸ್ಥಾಪನೆಗೆ ದುಡಿದವರಲ್ಲಿ ಆಫ್ಗನೂ ಒಬ್ಬನೆಂದು ನಿಸ್ಸಂಶಯ ದಿಂದ ಹೇಳಬಹುದು. ಬ್ರಿಟನ್ ದೇಶವುಪ್ರಪಂಚದಲ್ಲಿ ತನ್ನ ಆಧಿಪತ್ಯ ಸ್ಥಾಪಿಸಬಲ್ಲದೆಂದು ಆತ ಸ್ಪಷ್ಟವಾಗಿ ಮನಗಂಡ. ಆತ ತನ್ನ ಅಪಾರ ಅನುಭವ ಹಾಗೂ ಕುಶಲತೆಗಳನ್ನು ಈಸ್ಟ್ ಇಂಡಿಯಾ ಕಂಪೆನಿಗೆ ನೀಡಿ, ಅನೇಕ ಹೊಸ ಹೊಸ ಯೋಜನೆಗಳನ್ನು ಹಾಕಿಕೊಟ್ಟ. ತನ್ನ ಸ್ವಂತ ಹಿತಾ ಸಕ್ತಿಯನ್ನಷ್ಟೇ ನೋಡಿಕೊಳ್ಳದೆ ಬ್ರಿಟಿಷ್ ಬಾವುಟವನ್ನು ಪ್ರಪಂಚದಲ್ಲೆಲ್ಲಾ ಹಾರಿಸುವುದು ಹೇಗೆಂದು ಆಲೋಚಿಸುತ್ತಿದ್ದ. ಹೇಗೆ ನೋಡಿದರೂ ಆತ ಬೇರೆಲ್ಲರಿಗಿಂತ ಮುಂದಾಲೋಚನೆ ಇದ್ದ ವ್ಯಕ್ತಿಯೆಂದು ನಿಸ್ಸಂಕೋಚವಾಗಿ ಹೇಳಬಹುದು.

ಸೃಷ್ಟಿಯ ಆದಿಯಿಂದ ನಮಗೆ ಗೊತ್ತಿರುವ ಈ ಭೂಭಾಗದಲ್ಲಿ ದೇವರು ಕರುಣಿಸಿರುವ ಅನೇಕ ಸುಖಸೌಲಭ್ಯಗಳನ್ನು ಗಮನಿಸಿ ನಾನು ಸ್ವಲ್ಪ ಶ್ರಮವಹಿಸಿ ನೋಡಿದ ಕೆಲವು ಮುಖ್ಯ ದೇಶಗಳಾದ ಇಂಡಿಯಾ, ಪರ್ಷಿಯಾ, ಅರೇಬಿಯಾ೧ ಮತ್ತು ದಕ್ಷಿಣ ಸಮುದ್ರಗಳಲ್ಲಿರುವ ಸುಮಾತ್ರ, ಹಿರಿಯ ಜಾವಾ, ಬೋರ್ನಿಯೋಗಳ ಬಗ್ಗೆಯೂ ಈಗಿನ ಸ್ಥಿತಿ, ಧರ್ಮ, ವಾಣಿಜ್ಯ, ನ್ಯಾಯ ನೀತಿ ಇವುಗಳ ಬಗ್ಗೆಯೂ ಹೇಳಬಯಸು ತ್ತೇನೆ. ಇದು ನನಗಷ್ಟೇ ಅಲ್ಲದೆ ಇತರರಿಗೂ ಸಮಾಧಾನವನ್ನುಂಟುಮಾಡುವುದೆಂದು ನಂಬಿದ್ದೇನೆ. ನಾನು ಕಂಡುದನ್ನು ಬಿಟ್ಟು ಬೇರೊಂದನ್ನು ಹೇಳುವುದಿಲ್ಲ. ನನ್ನ ಚಿಕ್ಕ ಪ್ರವಾಸದ ವೇಳೆ ಕಂಡುಂಡುದನ್ನು ಮಾತ್ರ ಹೇಳುತ್ತೇನೆ.

ಜನಗಳು ಭಾವಿಸಿರುವಂತೆ ಏಷ್ಯಾಖಂಡವು ಸಣ್ಣದಲ್ಲ. ಇದು ಪೂರ್ವ-ಪಶ್ಚಿಮ ೭,೫೦೦ ಮೈಲಿಗಳೂ, ಉತ್ತರ-ದಕ್ಷಿಣ ೪,೬೨೦ ಮೈಲಿಗಳೂ ಇದೆ. ಇದರಲ್ಲಿ ಬಹು ವಿಶಾಲವೂ ಶ್ರೀಮಂತವೂ ಆದ ಅನೇಕ ದ್ವೀಪಗಳಿವೆ. ಇವುಗಳಲ್ಲಿ ಮನುಷ್ಯನಿಗೆ ಬೇಕಾದ ವಸ್ತುಗಳೆಲ್ಲ ದೊರಕುತ್ತವೆ. ಕೆಲವು ಪ್ರದೇಶಗಳಲ್ಲಿ ಜನರ ವಾಸವೇ ಇಲ್ಲ.

ನಾನು ಇಂಡಿಯಾ ದೇಶಕ್ಕೆ ಬಂದು ಮೊದಲು ಇಳಿದ ಸ್ಥಳ ಫೋರ್ಟ್ ಸೇಂಟ್ ಜಾರ್ಜ್.೨ ಇದು ಚೋಳಮಂಡಳ ತೀರದಲ್ಲಿರುವ ಇಂಗ್ಲಿಷರ ಕೋಟೆ. ಈ ತೀರ ನಾಗಪಟ್ಟಣದಿಂದ ಪ್ರಾರಂಭವಾಗುತ್ತದೆ. ಈ ನಾಗಪಟ್ಟಣಂ ಮೊದಲು ಪೋರ್ಚುಗಲ್ ರಾಜನಿಗೆ ಸೇರಿತ್ತು. ಆದರೆ ಕೆಲವು ವರ್ಷಗಳಿಂದೀಚೆಗೆ ಇದನ್ನು ಡಚ್ಚರು ಕಿತ್ತುಕೊಂಡು ತಮ್ಮ ಆಧಿಪತ್ಯ ಸ್ಥಾಪಿಸಿ ದೊಡ್ಡ ಸೈನ್ಯವನ್ನಿಟ್ಟುಕೊಂಡು

---

೧. ಪರ್ಷಿಯಾ, ಅರೇಬಿಯಾ ದೇಶಗಳ ಬಗ್ಗೆ ಗ್ರಂಥಕರ್ತನು ತನ್ನ ಉದ್ದೇಶವನ್ನು ನೆರವೇರಿಸಿ ದಂತೆ ಕಾಣುವುದಿಲ್ಲ. ಬಹುಶಃ ಆ ದೇಶಗಳ ಬಗ್ಗೆ ಬರೆದದ್ದು ಆತ ಬಿಟ್ಟುಹೋದ ಕಾಗದ ಪತ್ರಗಳಲ್ಲಿ ಸೇರಿ ಹಾಳಾಗಿ ಹೋಗಿರಬೇಕು.

೨. ಫೋರ್ಟ್ ಸೆಂಟ್ ಜಾರ್ಜ್: ಇದು ಈಗಿನ ಮದ್ರಾಸು. ಈಗಲೂ ಮದ್ರಾಸಿನ ಸರ್ಕಾರಿ ದಾಖಲೆಗಳಲ್ಲಿ ಫೋರ್ಟ್ ಸೆಂಟ್ ಜಾರ್ಜ್ ಎಂತಲೇ ಇದೆ.

ಅದ್ದೂರಿಯಿಂದ ಇದ್ದಾರೆ. ನಾಗಪಟ್ಟಣದಿಂದ ಪ್ರಾರಂಭವಾದ ಸಮುದ್ರತೀರದಲ್ಲಿ[೧] ವ್ಯಾಪಾರ ವಾಣಿಜ್ಯಗಳಲ್ಲಿ ನಿರತವಾದ ದೊಡ್ಡ ದೊಡ್ಡ ಊರುಗಳಿವೆ. ಇವುಗಳ ವಿಷಯ ಆಮೇಲೆ ಹೇಳುತ್ತೇನೆ. ಈಗ ಫೋರ್ಟ್ ಸೆಂಟ್ ಜಾರ್ಜ್ ವಿಚಾರ ತಿಳಿಸುತ್ತೇನೆ.

ಫೋರ್ಟ್ ಸೆಂಟ್ ಜಾರ್ಜ್ ಕೋಟೆ ಹಾಗೂ ಪಟ್ಟಣ ಸಮುದ್ರಕ್ಕೆ ಅತಿ ಸಮೀಪದಲ್ಲಿಯೇ ಇವೆ. ಅನೇಕ ಇಂಗ್ಲಿಷ್ ಜನರು ಇಲ್ಲಿ ವಾಸವಾಗಿದ್ದಾರೆ. ಇದನ್ನು ಆಳುವವರು ಇವರೇ ಆಗಿದ್ದಾರೆ. ಇದನ್ನು ಭದ್ರವಾದ ಕೋಟೆ ಕೊತ್ತಲಗಳಿಂದಲೂ ತುಪಾಕಿಗಳಿಂದಲೂ ರಕ್ಷಿಸಿದ್ದಾರೆ. ಪೋರ್ಚುಗೀಸರು ನಮ್ಮ ಇಂಗ್ಲಿಷರಿಗೆ ಅಧೀನರಾಗಿ ಈ ಕೋಟೆಯಲ್ಲಿರಲು ಅವಕಾಶವಿದೆ. ಈ ಪೋರ್ಚುಗೀಸರಲ್ಲಿ ಅನೇಕರು ಭಾರಿ ವರ್ತಕರು. ಇಂಗ್ಲಿಷರಿಗೆ ಕೇವಲ ಶೇ. ೪ ರಂತೆ ಸುಂಕ ಕೊಟ್ಟು ವ್ಯಾಪಾರಮಾಡುತ್ತಾರೆ. ಕೆಲವರು ಕಂಪೆನಿಯ ಸೇವೆಯಲ್ಲಿ ಖಾಸಗಿ ಕಾವಲುಗಾರರಾಗಿ ಸೇರಿಕೊಂಡಿದ್ದಾರೆ. ಆದರೆ ಯಾರನ್ನೂ ದೊಡ್ಡ ಹುದ್ದೆಗೆ ಏರಿಸಿಲ್ಲ. ಇವರ ಸಂಬಳ ಕಡಿಮೆ ಇದ್ದರೂ ನೆಮ್ಮದಿಯಿಂದ ಜೀವಿಸುತ್ತಾರೆ. ಏಕೆಂದರೆ ಅನ್ನ ಬಟ್ಟೆಗಳಿಗೆ ಇಲ್ಲಿಯ ಹವೆಯ ಕಾರಣ ಹೆಚ್ಚು ಖರ್ಚು ಮಾಡಬೇಕಾಗಿಲ್ಲ. ಇಲ್ಲಿನ ಹವೆ ಅಷ್ಟು ಚಳಿಯೂ ಅಲ್ಲ ಸೆಖೆಯೂ ಅಲ್ಲ. ಸಮುದ್ರದ ಕಡೆಯಿಂದ ಬೀಸುವ ಗಾಳಿಯ ಅನುಕೂಲತೆ ತುಂಬ ಇದೆ. ಆದರೆ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಗಾಳಿ ಗಂಧಕದ ವಾಸನೆ ಹೊಡೆಯುತ್ತದೆ. ಬಹುತೇಕವಾಗಿ ಭೂಮಿಯ ಕಡೆಯಿಂದ ಬೀಸುವ ಗಾಳಿ ಪಶ್ಚಿಮ ಮತ್ತು ವಾಯುವ್ಯ ದಿಕ್ಕಿನಿಂದ ಬೀಸುತ್ತದೆ. ತುಂಬಾ ಚಳಿಯ ತಿಂಗಳುಗಳೆಂದರೆ ಸೆಪ್ಟಂಬರ್, ಅಕ್ಟೋಬರ್ ಮತ್ತು ನವೆಂಬರು ತಿಂಗಳುಗಳು. ಆದರೆ ಈ ಚಳಿ ಇಂಗ್ಲೆಂಡಿನ ನಡುಬೇಸಗೆಯ ಚಳಿಗಿಂತ ಹೆಚ್ಚಿಲ್ಲ. ಈ ಮೂರು ತಿಂಗಳುಗಳಲ್ಲಿ ಭಾರಿ ಮಳೆಯಾಗುತ್ತದೆ. ಒಟ್ಟಿನಲ್ಲಿ ಇಂಡಿಯಾ ದೇಶ ಹಾಗೂ ದಕ್ಷಿಣ ಸಮುದ್ರಗಳಲ್ಲೆಲ್ಲಾ ತುಂಬಾ ಆರೋಗ್ಯಕರವಾದ ಹಾಗೂ ಹಿತಕರವಾದ ಹವಾಗುಣವುಳ್ಳ ಊರೆಂದರೆ ಇದೇ. ಈಸ್ಟ್ ಇಂಡಿಯಾ ಕಂಪೆನಿಗೆ ನಿಸ್ಸಂದೇಹವಾಗಿಯೂ ಅನುಕೂಲವಾದ ಸ್ಥಳ. ಕಂಪೆನಿಯ ಗವರ್ನರುಗಳೂ ಏಜೆಂಟರುಗಳೂ ಇಲ್ಲಿ ವಾಸಮಾಡುತ್ತಾರೆ. ಇವರು ನಮ್ಮ ರಾಷ್ಟ್ರದ ಗೌರವ ಘನತೆಗಳಿಗೆ ತಕ್ಕಂತೆ ನಡೆದುಕೊಳ್ಳುತ್ತಾ ಇದ್ದಾರೆ. ಪರದೇಶದ ರಾಯಭಾರಿಗಳನ್ನು ಅದ್ದೂರಿಯಾಗಿ ಆದರಿಸುತ್ತಾರೆ. ಮಸ್ಲಿನ್, ಕ್ಯಾಲಿಕೋ ಮುಂತಾದ ಬಟ್ಟೆಗಳನ್ನು ಪ್ರತಿವರ್ಷ ಇಂಗ್ಲೆಂಡಿಗೆ ಹೇರಳವಾಗಿ ರವಾನೆಮಾಡುತ್ತಾರೆ. ಅಲ್ಲದೆ ಇಂಡಿಯಾ, ಪರ್ಷಿಯಾ, ಅರೇಬಿಯಾ, ಚೀನಾ ಮತ್ತು ದಕ್ಷಿಣ ಸಮುದ್ರ, ಅದರಲ್ಲಿಯೂ ಮನಿಲಾ ಮುಂತಾದ ಮುಖ್ಯಸ್ಥಳಗಳಿಗೂ ರವಾನಿಸುತ್ತಾರೆ. ಮನಿಲಾ ಸ್ಪೈನ್ ದೊರೆಗೆ ಸೇರಿದ ಮೊಲಕ್ಕಾ ದ್ವೀಪಗಳಲ್ಲಿ ಒಂದು. ಇಲ್ಲಿ ವ್ಯಾಪಾರ ಮಾಡಲು ಇಂಗ್ಲಿಷನವರಿಗೆ ಅವಕಾಶವಿಲ್ಲ. ಆದ್ದರಿಂದ ಇಂಗ್ಲಿಷಿನವರು

---

೧. ಈ ಸಮುದ್ರ ತೀರ ಕೊರಿಂಗೊ (ಕಳಿಂಗ) ಕೊಲ್ಲಿಯ ದಕ್ಷಿಣ ಭಾಗದಲ್ಲಿರುವ ಗೋದಾವರಿ ವರೆಗೆ ಹಬ್ಬಿ ೪೦೦ ಮೈಲಿ ಉದ್ದವಾಗಿದೆ.

ಇಂಡಿಯಾದಲ್ಲಿ ಹುಟ್ಟಿ ಬೆಳೆದ ಪೋರ್ಚುಗೀಸರ ಹೆಸರಿನಲ್ಲಿ ಮತ್ತು ಅವರ ಆಶ್ರಯದಲ್ಲಿ ಸರಕುಗಳನ್ನು ಇಲ್ಲಿಗೆ ರವಾನಿಸುತ್ತಾರೆ. ಇಂಗ್ಲಿಷರು ಮೊಲಕ್ಕಾ ದ್ವೀಪವಲ್ಲದೆ ಮೆಕ್ಸಿಕೋ, ಪೆರು ಮತ್ತು ಅಮೇರಿಕಾ ದೇಶಗಳೊಡನೆಯೂ ವ್ಯಾಪಾರ ಮಾಡುವಂತಿಲ್ಲ.

ಇಲ್ಲಿಯ ದೇಶೀಯ ನಿವಾಸಿಗಳು ಜೆಂಟೈಲರು ಮತ್ತು ಮಲಬಾರಿಗಳು.[೪] ಇವರಲ್ಲಿ ಬಹುಮಂದಿ ಸೇಂಟ್ ಜಾರ್ಜ್ ಕೋಟೆಯ ಹೊರಗೋಡೆಯೊಳಗೆ ವಾಸ ಮಾಡುತ್ತಾರೆ. ಇವರ ಸಂಖ್ಯೆ ಹೆಂಗಸರು ಮತ್ತು ಮಕ್ಕಳೆಲ್ಲಾ ಸೇರಿ ೪೦,೦೦೦ ಎಂದು ಗೊತ್ತಾಯಿತು. ಇವರು ಇಂಗ್ಲಿಷರ ಬಾವುಟದ ಆಶ್ರಯದಲ್ಲಿದ್ದುಕೊಂಡು ಅವರ ತುಪಾಕಿಗಳು ಹಾರುವಷ್ಟು ದೂರದವರೆಗೆ ಸುಂಕ ಸಾರಿಗೆಗಳನ್ನು ಕೊಟ್ಟು ವ್ಯಾಪಾರ ಸಾಪಾರ ಮಾಡಬಹುದು. ಇವರು ಯಾರಿಗೂ ತೊಂದರೆ ಕೊಡದ ವಿಗ್ರಹಾರಾಧಕರಾದ ಸಾಧು ಪ್ರಾಣಿಗಳು. ನಾನಾ ಆಕಾರದ ಮತ್ತು ಬಗೆಬಗೆಯ ವಸ್ತುಗಳಿಂದ ಅಂದರೆ ಚಿನ್ನ ಬೆಳ್ಳಿ, ಹಿತ್ತಾಳೆ, ತಾಮ್ರ, ಕಬ್ಬಿಣ, ಕಲ್ಲು, ಮಣ್ಣು ಮುಂತಾದ ವಸ್ತುಗಳಿಂದ ಮಾಡಿದ ದೇವರು ದಿಂಡರುಗಳನ್ನು ಪೂಜಿಸುತ್ತಾರೆ. ಆದರೆ ಇವರ ಮುಖ್ಯ ದೇವರು ವಿಕಾರ ರೂಪದ ಮನುಷ್ಯನಂತಿರುತ್ತದೆ. ಇದನ್ನು ದೊಡ್ಡ ದೊಡ್ಡ ದೇವಸ್ಥಾನಗಳಲ್ಲಿ ಇಟ್ಟು ಹಗಲು ರಾತ್ರಿ ಭಯ ಭಕ್ತಿಗಳಿಂದ ಪೂಜೆ ಸಲ್ಲಿಸುತ್ತಾರೆ. ಈ ದೇವಸ್ಥಾನಗಳಲ್ಲಿ ಮೂಲ ವಿಗ್ರಹವಲ್ಲದೆ ಇನ್ನೂ ಸಣ್ಣ ಪುಟ್ಟ ವಿಗ್ರಹಗಳನ್ನು ಮುಖ್ಯ ದೇವಸ್ಥಾನದ ಪ್ರಾಂಗಣದಲ್ಲಿ ಇರುವ ಕಲ್ಲಿನ ಗುಡಿಗಳಲ್ಲಿ ಇಟ್ಟಿರುತ್ತಾರೆ. ಈ ವಿಗ್ರಹಗಳು ಹಸು, ಕರಡಿ, ಘೇಂಡಾಮೃಗ, ಆನೆ ಇತ್ಯಾದಿ ಪ್ರಾಣಿಗಳ ವಕ್ರ ಆಕಾರದಲ್ಲಿರುತ್ತವೆ. ಇವರು ಮೂರು ನಾಲ್ಕು ಅಡಿ ಎತ್ತರದ ಪೀಠದ ಮೇಲಿಟ್ಟ ನುಣುಪಾದ ಹೊಳೆಯುವ ಶಿಲೆಗಳನ್ನೂ (ಲಿಂಗ) ಪೂಜಿಸುತ್ತಾರೆ. ಈ ಶಿಲೆಗಳ ಮೇಲೆ ಎಣ್ಣೆ, ಹೂ ಹಾಕಿ ಬಹು ಭಯ ಭಕ್ತಿಗಳಿಂದ ಆರಾಧಿಸುತ್ತಾರೆ.

ಇವರ ಅನೇಕ ದೇವಸ್ಥಾನಗಳು ಕಲ್ಲಿನಿಂದ ಕಟ್ಟಿದ ಭಾರಿ ಕಟ್ಟಡಗಳು. ಕಲ್ಲಿನಲ್ಲಿ ಚಿತ್ರವಿಚಿತ್ರವಾಗಿ ಕುಸುರಿ ಕೆಲಸ ಮಾಡಿದ್ದಾರೆ. ಬಗೆಬಗೆಯ ಗಾಯನ ನೃತ್ಯಗಳನ್ನು ಮಾಡುವ ಭಂಗಿಯ ವಿಗ್ರಹಗಳನ್ನೂ ಸುತ್ತಲು ಸುಂದರವಾದ ಅಮೃತಶಿಲೆಯ ಮಂಟಪಗಳನ್ನೂ ಕಟ್ಟಿರುತ್ತಾರೆ. ದೇವಸ್ಥಾನಕ್ಕೂ ಸ್ನಾನಕ್ಕಾಗಿ ಉಪಯೋಗಿಸುವ ಕಲ್ಯಾಣಿಗಳಿಗೂ ಹೋಗುವ ಹಾದಿಗಳಿಗೆ ಅಮೃತಶಿಲೆಯನ್ನು ಹಾಸಿದ್ದಾರೆ. ದೇವಸ್ಥಾನಗಳಿಗೆ ಹೋಗುವ ಮುನ್ನ ಕೊಳಗಳಲ್ಲಿ ಅಥವಾ ಕೆರೆಗಳಲ್ಲಿ ಸ್ನಾನ ಮಾಡಿಯೇ ಹೋಗಬೇಕು. ಈ ದೇವಸ್ಥಾನಗಳ ಮಹಾದ್ವಾರಗಳಂತೂ ಬಹು ಭವ್ಯವಾಗಿ ನಿರ್ಮಿತವಾಗಿವೆ. ಎಲ್ಲಿಯೂ

---

೪. ಜೆಂಟೈಲ್ ಅಥವಾ ಜೆಂಟೂ ಎಂದರೆ ಕೆಳದರ್ಜೆಯ ಹಿಂದೂಗಳು. ಮಲಬಾರ್ ಜನಗಳೆಂದರೆ ದಕ್ಷಿಣ ಇಂಡಿಯಾದ ಪೂರ್ವ ಮತ್ತು ಪಶ್ಚಿಮ ತೀರಗಳಲ್ಲಿ ಇದ್ದ ಕೆಳದರ್ಜೆಯ ಜನರು. ಪಶ್ಚಿಮ ಕರಾವಳಿ ತೀರದ ಮಲಬಾರಿಗಳಿಗೂ ಪೂರ್ವ ತೀರದ ಜನರಿಗೂ ವ್ಯತ್ಯಾಸವನ್ನು ಕಾಣದ ವಿದೇಶೀಯರು ಇಬ್ಬರನ್ನೂ ಮಲಬಾರಿಗಳೆಂದೇ ಕರೆದಿರಬೇಕು.

ಇಂತಹ ಅಪೂರ್ವವೂ ಭವ್ಯವೂ ಆದ ಕೆಲಸವನ್ನು ಕಾಣುವಂತಿಲ್ಲ. ಕೆಲವು ದ್ವಾರಗಳ ಇಕ್ಕೆಲದಲ್ಲಿ ಒಂದೇ ಒಂದು ಶಿಲೆಯಿಂದ ಕುದುರೆ ಮತ್ತು ಅದರ ಮೇಲೆ ಸವಾರ ನನ್ನೂ ಕಡೆದಿದ್ದಾರೆ. ಇದಕ್ಕಿಂತಲೂ ಆಶ್ಚರ್ಯವಾದುದೆಂದರೆ ರಥವನ್ನೂ ಅದನ್ನು ಎಳೆಯುವ ಎರಡು ಕುದುರೆಗಳನ್ನೂ ಅವುಗಳ ಸಕಲ ಉಪಕರಣಗಳನ್ನೂ ಒಂದೇ ಶಿಲೆಯಲ್ಲಿ ಕಡೆದಿರುವುದು. ಇವುಗಳನ್ನು ದೇವರ ಉತ್ಸವದಲ್ಲಿ ವಾಹನಗಳಾಗಿ ಉಪಯೋಗಿಸುತ್ತಾರೆ. ದೊಡ್ಡ ದೊಡ್ಡ ಉತ್ಸವಗಳಲ್ಲಿ ದೇವರನ್ನು ಬಹು ಸೊಗಸಾಗಿ ಮಾಡಿ ಬಣ್ಣ ಬೆಡಗುಗಳಿಂದ ಅಲಂಕರಿಸಿದ ರಥದಲ್ಲಿಟ್ಟು ಜನರೇ ಎಳೆಯುತ್ತಾರೆ. ಇಲ್ಲಿ ಸೇಂಟ್ ಜಾರ್ಜ್ ಕೋಟೆ ಉತ್ತರಕ್ಕೆ ೩೧ ಮೈಲಿ ದೂರದಲ್ಲಿರುವ ಟ್ರಿಸ್ಲೆತೂರ್[೫] ಎಂಬ ದೇವಸ್ಥಾನದ ಚಿತ್ರ ಬರೆದಿದ್ದೇನೆ. ಆದರೆ ಇದಕ್ಕಿಂತಲೂ ಹತ್ತಾರು ಪಟ್ಟು ಭಾರಿಯಾದ ದೇವಸ್ಥಾನಗಳಿವೆ.

'ಜಾನ್ ಜರ್ನಾಯೆತ್'[೬] ದೇವರನ್ನು ಬಿಟ್ಟರೆ ಈ ವಿಗ್ರಹಾರಾಧಕರು ಪೂಜಿಸುವ ಸುಳ್ಳು ದೇವರುಗಳಲ್ಲಿ ಗೋವಿಗೆ ಹೆಚ್ಚಿನ ಮಾನ್ಯತೆ ಉಂಟು. ಇದು ಜೀವಿಸುವ ಹಸುವಾಗಿರಬಹುದು. ಇಲ್ಲವೆ ಕೈಯಲ್ಲಿ ಮಾಡಿ ಗುಡಿಯಲ್ಲಿಟ್ಟು ಪೂಜಿಸುವ ಹಸುವಿನ (ಬಸವನ) ವಿಗ್ರಹವಾಗಿರಬಹುದು. ಎಲ್ಲಾ ಬೇಸಾಯಗಾರರೂ ತಮ್ಮ ಮನೆಗಳಲ್ಲಿ ಒಂದೆರಡು ಹಸುಗಳನ್ನು ಸಾಕಿ ಅವುಗಳನ್ನು ದಿನವೂ ಪೂಜಿಸುತ್ತಾರೆ. ಹಬ್ಬಗಳಲ್ಲಿ ಹಸುವನ್ನು ಪಟಪಟೆ ಬಟ್ಟೆಗಳಿಂದಲೂ, ಗಂಟೆ ಗೆಜ್ಜೆಗಳಿಂದಲೂ, ಚಿನ್ನ ಬೆಳ್ಳಿ ಮತ್ತು ಹರಳುಗಳ ಆಭರಣಗಳಿಂದಲೂ ಅಲಂಕರಿಸಿಕೊಂಡು ಭಾರಿ ಜನ ಸೇರಿ ವೈಭವದಿಂದ ಬೀದಿಗಳಲ್ಲಿಯೂ ದೇವಸ್ಥಾನದ ಸುತ್ತಲೂ ಮೆರವಣಿಗೆ ಮಾಡುತ್ತಾರೆ. ಆಗ ಜನಗಳು ಕುಣಿದು ಕುಪ್ಪಳಿಸಿ ಹಾಡಿ ಮೈಮರೆಯುತ್ತಾರೆ. ಮದುವೆಗಳಲ್ಲಿಯೂ ದೊಡ್ಡ ದೊಡ್ಡ ವ್ಯವಹಾರಗಳಲ್ಲಿಯೂ ಹಸುವನ್ನು ಮುಟ್ಟಿ ಪ್ರಮಾಣಮಾಡುತ್ತಾರೆ. ಹಸುವನ್ನು ಮುಟ್ಟಿ ಮಾಡುವ ಪ್ರಮಾಣಕ್ಕಿಂತ ದೊಡ್ಡ ಪ್ರಮಾಣ ಬೇರೆ ಯಾವುದೂ ಇಲ್ಲ. ಇಷ್ಟೇಕೆ, ಜೆಂಟೂ ಎಂಬ ಜಾತಿಗೆ ಸೇರಿದವರು ಹಸು-ಕರು, ಎತ್ತುಗಳನ್ನು ತಮ್ಮ ಜಾತಿಯ ಜನ ಬಿಟ್ಟು ಬೇರೆಯವರಿಗೆ ಮಾರುವಂತೆಯೂ ಇಲ್ಲ. ಅಷ್ಟೇ ಅಲ್ಲ ಅವರು ಅವನ್ನು ಕೊಲ್ಲುವಂತಿಲ್ಲ ತಿನ್ನುವಂತೆಯೂ ಇಲ್ಲ. ಹೀಗೆ ಇರಬೇಕೆಂದು ಅವರ ಬ್ರಾಹ್ಮಣರು ವಿಧಿಸಿದ್ದಾರೆ. ಈ ವಿಧಿಯನ್ನು ಬಡವ ಬಲ್ಲಿದರೆಲ್ಲ ಕಟ್ಟುನಿಟ್ಟಾಗಿ ಆಚರಿಸು ತ್ತಾರೆ. ಇದಲ್ಲದೆ ಒಂದು ಕುಲದವನು ತನ್ನ ಕುಲದವರನ್ನು ಬಿಟ್ಟು ಬೇರೊಂದು ಕುಲದವರೊಡನೆ ಒಂದೇ ಕಡೆ ಊಟಮಾಡುವಂತಿಲ್ಲ, ಇರುವಂತೆಯೂ ಇಲ್ಲ. ಈ ಕಾರಣದಿಂದ ಅನ್ಯ ಜಾತಿಯುವರು ತಮ್ಮ ಪಾತ್ರೆ ಪರಟೆಗಳನ್ನು ಕಂಡೋ ಕಾಣದೆಯೋ

---

೫. ಟ್ರಿಸ್ಲೆತೂರ್: ಇದು ತಿರುವತ್ತಿಯೂರ್‌ನಲ್ಲಿರುವ ತ್ಯಾಗರಾಜ ದೇವಸ್ಥಾನವಿರಬೇಕು.

೬. ಜಾನ್ ಜರ್ನಾಯೆತ್: ವಿದೇಶಿ ಪ್ರವಾಸಿಗಳು ಪುರಿ ಜಗನ್ನಾಥ ದೇವರ ಹೆಸರನ್ನು ಸರಿಯಾಗಿ ಉಚ್ಚರಿಸಲಾರದೆ ಹೀಗೆಲ್ಲಾ ಉಚ್ಚರಿಸಿರುವುದುಂಟು. ಮುಂದೆ ಈ ಹೆಸರು ಬರುವ ಕಡೆಗಳಲ್ಲೆಲ್ಲಾ ಓದಲು ಸುಲಭವಾಗುವಂತೆ ಜಗನ್ನಾಥ ಎಂದೇ ಬರೆದಿದೆ.

ಮುಟ್ಟಿಬಿಟ್ಟರೆ ಅವು ಮಣ್ಣಿನ ಪಾತ್ರೆಗಳಾಗಿರಲಿ ಅಥವಾ ತಾಮ್ರದ ಪಾತ್ರೆಗಳಾಗಿರಲಿ ಅವನ್ನು ಬಿಸಾಡಿ ಬಿಡುತ್ತಾರೆ. ಮತ್ತೆ ಅವನ್ನು ಮನೆಯೊಳಗೆ ಉಪಯೋಗಿಸುವುದಿಲ್ಲ.

ಇವರು ಸಾಮಾನ್ಯವಾಗಿ ಮೃದು ಸ್ವಭಾವದ ಜನ. ಆದರೆ ಬುದ್ಧಿ ಬಹು ಸೂಕ್ಷ್ಮ. ವ್ಯಾಪಾರ ಸಾಪಾರದಲ್ಲಿ, ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನೂ ಜರತಾರಿ ವಸ್ತ್ರಗಳನ್ನೂ ನೇಯುವುದರಲ್ಲಿ, ಕುಶಲ ಕೆಲಸಗಳಲ್ಲಿ ಭಾರಿ ಬುದ್ಧಿವಂತರು. ಮಾದಕ ದ್ರವ್ಯಗಳನ್ನು ಸೇವಿಸುವುದಿಲ್ಲ. ಒಟ್ಟಿನಲ್ಲಿ ಇವರಿಗೆ ಎಲ್ಲವೂ ಇದೆ, ಧೈರ್ಯ ಮಾತ್ರ ಇಲ್ಲ. ಹಲವಾರು ತಲೆಮಾರುಗಳ ಹಿಂದೆ ಇವರು ಚೋಳಮಂಡಲ, ಒರಿಸ್ಸಾ ಮತ್ತು ಬಂಗಾಳ ಈ ರಾಜ್ಯಗಳು ಬಹು ಬಲಾಢ್ಯ ರಾಜ್ಯಗಳಾಗಿದ್ದಾಗ ಇವರ ಧೈರ್ಯ ಪ್ರದರ್ಶನಕ್ಕೆ ಅವಕಾಶವಿತ್ತು. ಆದರೆ ಜನಗಳಿಗೆ ಎಂದೂ ಯುದ್ಧದ ತರಬೇತಿ ಕೊಡಲಿಲ್ಲ. ಶತ್ರುಗಳ ಧಾಳಿಯನ್ನು ಎದುರಿಸಬೇಕಾಗುವುದೆಂದು ಅವರು ಮುಂಗಾಣಲೇ ಇಲ್ಲ. ಕೇವಲ ಬ್ರಾಹ್ಮಣರ ಮಂತ್ರತಂತ್ರಕ್ಕೆ ಮರುಳಾಗಿ ಕುಳಿತುಬಿಟ್ಟರೆಂದು ನನ್ನ ಭಾವನೆ. ಇದು ನಿಜ ಎಂದು ನನಗೆ ಅನಿಸುತ್ತದೆ. ಏಕೆಂದರೆ, ಅಲ್ಪ ಕಾಲದಲ್ಲಿ ಈ ಮಹಾರಾಜ್ಯಗಳನ್ನು ಮೂರರು (ಮಹಮ್ಮದೀಯರು) ಗೆದ್ದುಕೊಂಡರು. ಈಗ ಈ ರಾಜ್ಯಗಳು ಮೊಗಲ ಸಾಮ್ರಾಜ್ಯಕ್ಕೆ ಕಪ್ಪಕಾಣಿಕೆಗಳನ್ನು ಕೊಟ್ಟುಕೊಂಡು ಗುಲಾಮಗಿರಿಯಲ್ಲಿವೆ. ಬಹಳ ಹೆಚ್ಚೆಂದರೆ ಮೊಗಲ್ ಚಕ್ರವರ್ತಿಯ ಪರ ಕಂದಾಯ ಕಾಣಿಕೆಗಳನ್ನು ವಸೂಲ್ಮಾಡುವ 'ಕಲೆಕ್ಟರ್' ಹುದ್ದೆಯೇ ಇವರಿಗೆ ಸಿಕ್ಕುವ ದೊಡ್ಡ ಹುದ್ದೆ. ಇಷ್ಟಾದರೂ ಹಿಂದೂಸ್ಥಾನದಲ್ಲೆಲ್ಲಾ ಈ ಜನರು ತಮ್ಮ ಪೂರ್ವ ಪದ್ಧತಿಯಂತೆ ವಿಗ್ರಹಾರಾಧನೆ ನಡೆಸಿಕೊಂಡು ಹೋಗಲು ಮಹಮ್ಮದೀಯರು ಅವಕಾಶ ಕೊಟ್ಟಿದ್ದಾರೆ. ಆದರೆ ತಮ್ಮ ಮಸೀದಿ ಮತ್ತು ಗೋರಿಗಳ ಬಳಿಗೆ ಬರಗೊಡುವುದಿಲ್ಲ. ವಿಗ್ರಹಾರಾಧನೆಯ ಈ ಸೌಲಭ್ಯಕ್ಕಾಗಿ ಇವರು ಚಿನ್ನ ಬೆಳ್ಳಿ ಹಣವನ್ನೂ ವಜ್ರ ವೈಢೂರ್ಯಗಳನ್ನೂ ಚಕ್ರವರ್ತಿಯ ಭಂಡಾರಕ್ಕೆ ಸಲ್ಲಿಸಬೇಕಾಗಿದೆ.

ವಿಗ್ರಹಾರಾಧಕರ ನೀತಿ ನಿಯಮಗಳು ತುಂಬಾ ಕಟ್ಟುನಿಟ್ಟು. ಅದರಂತೆ ನಡೆಯದೇ ಹೋದರೆ ಮತದಿಂದ ಹೊರಗೆ ಹಾಕುತ್ತಾರೆ. ಮತ (Religion) ವನ್ನು 'ಕ್ಯಾಸ್ಟ್' (Cast = Caste = ಜಾತಿ) ಎಂದು ಕರೆಯುತ್ತಾರೆ. ಜಾತಿಯಿಂದ ಹೊರಗೆ ಹಾಕಲ್ಪಟ್ಟವನಿಗೆ ದೇವಸ್ಥಾನಕ್ಕಾಗಲೀ ವಾಸದಮನೆಗಾಗಲೀ ಪ್ರವೇಶವಿಲ್ಲ. ಯಾರೂ ಅವನೊಡನೆ ಊಟೋಪಚಾರಗಳನ್ನು ಮಾಡುವಂತಿಲ್ಲ. ಹಾಗೆ ಮಾಡಿದರೆ ಅವರೂ ಜಾತಿಯಿಂದ ಬಹಿಷ್ಕೃತರಾಗುತ್ತಾರೆ. ಹಾಗೆ ಜಾತಿಯಿಂದ ಬಹಿಷ್ಕೃತನಾದವನನ್ನು ಮತ್ತೆ ಜಾತಿಗೆ ತೆಗೆದುಕೊಳ್ಳುವವರೆಗೆ ಅವನನ್ನು 'ಹೋಲೋಲ್‌ಕೋರ್' (ಹಲಾಲ್‌ಕೋರ್)ನಂತೆ ಕಾಣುತ್ತಾರೆ.

ಮತ್ತೆ ಜಾತಿಗೆ ತೆಗೆದುಕೊಳ್ಳಬೇಕಾದರೆ ಒಂದೇ ಒಂದು ಮಾರ್ಗವಿದೆ. ಅದೇನೆಂದರೆ, ಅವರು ಸಾವಿರಾರು ಮೈಲಿ ದೂರ ನಡೆದು ಜಗನ್ನಾಥ ದೇವಸ್ಥಾನಕ್ಕೆ ಹೋಗಿ

ಅಲ್ಲಿ ಶುದ್ಧನಾಗಿ ಬರಬೇಕು. ಆ ಊರನ್ನು ತಲುಪಿದ ಮೇಲೆ ತಾನು ಬಂದಿರುವ ವಿಷಯುವನ್ನು ದೇವಸ್ಥಾನದ ಬ್ರಾಹ್ಮಣರಿಗೆ ತಿಳಿಸಬೇಕು. ಜಗನ್ನಾಥದಲ್ಲಿ ಸಾವಿರಾರು ಬ್ರಾಹ್ಮಣರು ನೆಲೆಸಿ ಸುಖವಾಗಿ ಜೀವಿಸುತ್ತಿದ್ದಾರೆ. ಹೋದವನು ಅವರಲ್ಲಿ ಹೇಳಿಕೊಂಡು ತನ್ನ ಶಕ್ತಿಮೀರಿ ದೇವರಿಗೆ ಕಾಣಿಕೆ ಕೊಟ್ಟು ಒಲಿಸಿಕೊಳ್ಳಬೇಕು. ಈ ಬ್ರಾಹ್ಮಣರು ಕುತಂತ್ರ ಕುಯುಕ್ತಿಗಳಲ್ಲಿ ಕಡಿಮೆ ಇಲ್ಲ. ಬಂದವನನ್ನು ತಮ್ಮ ಬುಟ್ಟಿಗೆ ಹಾಕಿಕೊಂಡು ಅವನಿಂದ ಆದಷ್ಟು ಗಿಟ್ಟಿಸಿಕೊಂಡು ಹಿರಿಯ ಅರ್ಚಕನ ಬಳಿಗೆ ಕರೆದುಕೊಂಡು ಹೋಗಿ ಅವನ ಆಶೀರ್ವಾದ ಕೊಡಿಸಿ ಸಹಪಂಕ್ತಿ ಭೋಜನ ಮಾಡಿಸುತ್ತಾರೆ. ಹೆಚ್ಚಿಗೆ ಕಾಣಿಕೆ ಕೊಡದಿದ್ದರೆ ಸಾಮಾನ್ಯರೊಡನೆ ಮಾತ್ರ ಭೋಜನ ಮಾಡಬಹುದು. ಹೀಗೆ ಜನರು ಮತ್ತೆ ತಮ್ಮ ಜಾತಿಯನ್ನು ಪಡೆದು ಶುದ್ಧಿಯಾಗಿ ಸಂತೋಷದಿಂದ ಊರಿಗೆ ಹಿಂದಿರುಗುತ್ತಾರೆ.

ನಾನು ಆಗಲೇ ಹೇಳಿದಂತೆ ಈ ದೇವಸ್ಥಾನದಲ್ಲಿ ಕನಿಷ್ಠಪಕ್ಷ ೧,೦೦೦ ಅಥವಾ ೧೨೦೦ ಬ್ರಾಹ್ಮಣರಿದ್ದಾರೆ. ಈ ಬ್ರಾಹ್ಮಣ ಪುರೋಹಿತರು ನಿಸ್ಸಂದೇಹವಾಗಿ ಮತ್ತು ನಿಸ್ಸಂಕೋಚವಾಗಿ ಹೇಳಬೇಕೆಂದರೆ ಭಾರಿ ಕೆಟ್ಟ ಜನ. ಹಬ್ಬ ಹರಿದಿನಗಳಲ್ಲಿ, ತೇರು ಜಾತ್ರೆಗಳಲ್ಲಿ ದೇವರ ಮುಂದೆ ನರ್ತನ ಮಾಡಲು ನೂರಾರು ದೇವದಾಸಿಯರಿದ್ದಾರೆ. ನರ್ತನದ ವೇಳೆ ಇಡೀ ಏಷ್ಯಾ ಒದಗಿಸಬಹುದಾದ ಬಗೆ ಬಗೆಯ ಸಂಗೀತ ನಡೆಯುತ್ತದೆ. ಓಲಗ, ತಾಳ, ಮದ್ದಳೆ, ಕೊಂಬು-ಕಹಳೆ, ತಂಬೂರಿ ಮುಂತಾದ ಬಗೆ ಬಗೆಯ ತಂತೀವಾದ್ಯಗಳು, ನೂರೆಂಟು ಬಗೆಯ ಗಾಯನ—ಇವನ್ನೆಲ್ಲಾ ಕೇಳಬಹುದು ನೋಡಬಹುದು. ಇವೆಲ್ಲ ಮನಸ್ಸಿಗೆ ಬಹಳ ಹಿತವಾಗಿರುತ್ತವೆ. ಆದರೆ ಇವನ್ನೆಲ್ಲಾ ಬೇರೆ ಉದ್ದೇಶಕ್ಕಾಗಿ ನಡೆಸಿದ್ದರೆ ಚೆನ್ನಾಗಿತ್ತು. ಕೇವಲ ದೇವದಾಸಿಯರ ನರ್ತನಕ್ಕಾಗಿ, ಅವರ ಅಂದ ಚೆಂದದ ಪ್ರದರ್ಶನಕ್ಕಾಗಿ ಇಷ್ಟೆಲ್ಲಾ ಅದ್ದೂರಿಯ ವಾದ್ಯ ಸರಿಯೆ? ಅಪೂರ್ವ ದೇಹ ಸೌಂದರ್ಯದ ಈ ನರ್ತಕಿಯರು ಪರಪುರುಷರೊಡನೆ ಸ್ವಚ್ಛಂದವಾಗಿ ಬೆರೆಯಬಹುದಾಗಿದೆ. ಮದುವೆಯಾಗಿ ಗೃಹಿಣಿಯರಾಗಿ ಬಾಳುವುದೂ ಇವರಿಗೆ ಇಷ್ಟವಿಲ್ಲ. ಏಕೆಂದರೆ ಮದುವೆ ಇವರ ಸುಖಜೀವನಕ್ಕೆ ಅಡ್ಡಿ. ಅಲ್ಲದೆ ಮದುವೆಯಾದರೆ ಗಂಡ ಸತ್ತಾಗ ಆತನ ಚಿತೆಯಲ್ಲಿ ಬಿದ್ದು ಸಾಯಬೇಕು. ಇದೆಲ್ಲಾ ಏಕೆಂದು ದೇವದಾಸಿಯರಾಗಿದ್ದಾರೆ. ಈ ದೇವದಾಸಿಯರ ನರ್ತನದಂತಹ ನರ್ತನವನ್ನು ನಾನು ಯುರೋಪಿಯನರಲ್ಲಾಗಲೀ ಏಷ್ಯಾದ ಇತರ ಜನರಲ್ಲಾಗಲೀ ನೋಡಲಿಲ್ಲ. ಈ ನೃತ್ಯವನ್ನು ಅನೇಕ ಸಲ ನೋಡಿ ಆನಂದಪಟ್ಟಿದ್ದೇನೆ. ಇವರ ಧರ್ಮವಲ್ಲದ ಧರ್ಮವು (irreligious religion) ವಿಗ್ರಹಾರಾಧಕರ ಧರ್ಮವಲ್ಲದೆ ಬೇರೆ ಅಲ್ಲ. ಇದಕ್ಕಾಗಲೀ ಯಹೂದಿ ಅಥವಾ ಮಹಮ್ಮದೀಯ ಮತಕ್ಕಾಗಲೀ ಯಾವ ಸಂಬಂಧವೂ ಇಲ್ಲ. ಅದರ ಬದಲು ಅವಕ್ಕೆ ತದ್ವಿರುದ್ಧವಾಗಿದೆ. ಕ್ರೈಸ್ತ ಮತಕ್ಕಂತೂ ತೀರಾ ದೂರ. ಮಹಮ್ಮದೀಯರಂತೆ ಮುಂಜಿ (ಸುನತಿ = circumcison) ಮಾಡಿಸುವುದಿಲ್ಲ; ಅಥವಾ ದೀಕ್ಷಾಸ್ನಾನ ಮಾಡುವುದಿಲ್ಲ. ಆದರೂ ಇವರು ಈ

ಪ್ರಪಂಚದ ಸಪ್ತಸಾಗರಗಳನ್ನೂ, ಹೆಣ್ಣು ಗಂಡನ್ನೂ, ಸಕಲ ಚರಾಚರವನ್ನೂ ಸೃಷ್ಟಿ ಮಾಡಿದ ದೇವರೊಬ್ಬನು ಸ್ವರ್ಗದಲ್ಲಿದ್ದಾನೆಂದು ನಂಬುತ್ತಾರೆ. ಹೀಗಿರುವಾಗ ದೆವ್ವ ವನ್ನು (Devil) ಏಕೆ ಪೂಜಿಸುತ್ತೀರೆಂದು ಕೇಳಿದರೆ ಈ ಭೂಮಿಯನ್ನು ಆಳುತ್ತಾ ಜನಗಳನ್ನು ಹಿಂಸಿಸು ಎಂದು ದೆವ್ವಕ್ಕೆ ದೇವರು ಅಪ್ಪಣೆಮಾಡಿರುವನೆಂದೂ ಆದ್ದರಿಂದ ತಾವು ವಕ್ರವಕ್ರವಾದ ದೇವರುಗಳನ್ನು (ವಿಗ್ರಹಗಳನ್ನು) ಪೂಜಿಸುತ್ತಾ ದೆವ್ವವನ್ನು ಒಲಿಸಿಕೊಳ್ಳುವುದಾಗಿಯೂ ಹೇಳುತ್ತಾರೆ.

ಜನರು ಕೆರೆ ಕೊಳ್ಳ ಹಾಗೂ ನದಿಗಳಲ್ಲಿ ದಿನಕ್ಕೆ ಎರಡು ಮೂರು ಸಲ ಸ್ನಾನ ಮಾಡುತ್ತಾರೆ. ದೇವಸ್ಥಾನಗಳಲ್ಲಿ ದೀಪ ಹಚ್ಚಿ ಗಟ್ಟಿಯಾಗಿ ಮಂತ್ರ ಹೇಳಿ ದೇವರ ಮುಂದೆ ಅಡ್ಡಬಿದ್ದು ತಮ್ಮ ಭಕ್ತಿಯನ್ನು ಸಲ್ಲಿಸುತ್ತಾರೆ. ಇವರ ದೊಡ್ಡ ದೇವರು ಎಂದರೆ ಜಗನ್ನಾಥ. ಈ ದೇವರ ವಿಗ್ರಹವನ್ನು ಅಪ್ಪಟ ಚಿನ್ನದಿಂದ ಮಾಡಲಾಗಿದೆ. ಮನುಷ್ಯನೆತ್ತರವಿರುವ ಇದನ್ನು ಕತ್ತಲು ಕೋಣೆಯಲ್ಲಿ ಪ್ರತಿಷ್ಠೆ ಮಾಡಿದ್ದಾರೆ. ಎರಡು ಕಣ್ಣುಗಳಿಗೂ ಎರಡು ಬೆಲೆಯಾದ ವಜ್ರಗಳನ್ನು ಹದಿದಿದ್ದಾರೆ. ಅವು ಎರಡು ಮೋಂಬತ್ತಿ ಗಳು ಉರಿದಂತೆ ಪ್ರಜ್ವಲಿಸುತ್ತವೆ. ಇನ್ನೊಂದು ಭದ್ರವಾದ ಕೋಣೆಯಲ್ಲಿ ಹಸುವಿನ ಪ್ರಮಾಣದಷ್ಟಿರುವ ವಿಗ್ರಹವೊಂದನ್ನು (ಬಸವನನ್ನು) ಪ್ರತಿಷ್ಠಾಪಿಸಿದ್ದಾರೆ. ಇದನ್ನು ಬಹು ಭವ್ಯವಾಗಿ ಅಲಂಕರಿಸಿದ್ದಾರೆ. ಇದರ ಎರಡು ಕಣ್ಣುಗಳಿಗೆ ಹದಿದಿರುವ ವಜ್ರಗಳು ಬಹು ಬೆಲೆಯಾದವುಗಳೆಂದು ಹೇಳುತ್ತಾರೆ. ಇವುಗಳನ್ನು ಪಡೆಯಬೇಕೆಂದು ಗೋಲ್ಕೊಂಡ ರಾಜರುಗಳು ಬಹಳ ಪ್ರಯತ್ನಪಟ್ಟರು. ಆದರೆ ಬ್ರಾಹ್ಮಣರ ಮಂತ್ರ ತಂತ್ರಗಳ ಕಾರಣ ತಾವು ದೇವಸ್ಥಾನದ ಹತ್ತಿರ ಹೋಗಲು ಸಾಧ್ಯವಾಗಲಿಲ್ಲವೆಂದು ಮಹಮ್ಮದೀಯರೇ ಹೇಳುವುದನ್ನು ಕೇಳಿದ್ದೇನೆ. ಹೀಗಾಗಿ ವಿಗ್ರಹಕ್ಕಾಗಲೀ ದೇವ ಸ್ಥಾನಕ್ಕಾಗಲೀ ಊರಿಗಾಗಲೀ ಯಾವ ಹಾನಿಯೂ ಆಗಿಲ್ಲ.

ಈ ದೇವರ ಹಬ್ಬ ಹರಿದಿನಗಳಲ್ಲಿ ದೇಶದ ನಾನಾ ಭಾಗಗಳಿಂದ ಬ್ರಾಹ್ಮಣರೂ, ಶ್ರೀಮಂತ ವರ್ತಕರೂ ಮತ್ತಿತರ ಭಕ್ತರೂ ತಂಡೋಪತಂಡವಾಗಿ ಬಂದು ಸೇರುತ್ತಾರೆ. ಒಂದೂವರೆ ಲಕ್ಷಕ್ಕಿಂತ ಕಡಮೆ ಜನ ಯಾವಾಗಲೂ ಸೇರಿದ್ದೆ ಇಲ್ಲ.

ದೇವರ ಉತ್ಸವಕ್ಕೆ ಉಪಯೋಗಿಸುವ ತೇರು ಬಹು ದೊಡ್ಡದು. ಬಹು ಬೆಲೆ ಯಾದ ಗಟ್ಟಿ ಮರದಿಂದ ತೇರನ್ನು ಕಡೆದು ಕಬ್ಬಿಣದಿಂದ ಬಿಗಿದಿದ್ದಾರೆ. ಬಗೆ ಬಗೆಯ ವಿಗ್ರಹಗಳನ್ನು ಮಾಡಿ ಅದಕ್ಕೆ ಜೋಡಿಸಿದ್ದಾರೆ. ಅತ್ಯಂತ ಸೊಗಸಾದ ಕುಸುರಿ ಕೆಲಸ ಮಾಡಿದ್ದಾರೆ. ಈ ತೇರಿಗೆ ಆರು ಅಥವಾ ಎಂಟು ಚಕ್ರಗಳಿದ್ದರೂ ಎಳೆಯಲು ನೂರಕ್ಕೂ ಹೆಚ್ಚು ಗಟ್ಟಿಮುಟ್ಟಾದ ಜನ ಬೇಕು. ಸಾಮಾನ್ಯ ಉತ್ಸವಾದಿಗಳಲ್ಲಿ ಏಳೆಂಟು ಜನ ಎಳೆಯಬಹುದಾದ ಸಣ್ಣ ತೇರುಗಳನ್ನು ಉಪಯೋಗಿಸುತ್ತಾರೆ. ಆದರೆ ದೊಡ್ಡ ಉತ್ಸವದಲ್ಲಿ ದೊಡ್ಡ ತೇರನ್ನು ಉಪಯೋಗಿಸುತ್ತಾರೆ. ದೇವರನ್ನು ತೇರಿನ ಮಧ್ಯ ದಲ್ಲಿಟ್ಟು, ಎಲ್ಲರಿಗೂ ಸುಲಭವಾಗಿ ದರ್ಶನ ಆಗಲೆಂದು ಮುಂಭಾಗವನ್ನು ಮುಚ್ಚದೆ



ಇಬ್ಬರು ಫಕೀರರು (ಸಾಧುಗಳು)

ಬಿಟ್ಟಿರುತ್ತಾರೆ. ಆದರೂ ಅದು ಪೂರ್ತಿಯಾಗಿ ಕಾಣಿಸದೆ ಜನರ ನೂಕುನುಗ್ಗಲು ಹೇಳತೀರದು. ತೇರಿನ ಅಡಿಯಲ್ಲಿ ಸಿಕ್ಕಿ ಸತ್ತರೆ ಸಾಕೆಂದು ಅನೇಕ ಜನ ದೂರದಿಂದ ಬರುತ್ತಾರೆ. ಇಂತಹ ಭಕ್ತಿ ಸಾಹಸಗಳನ್ನು ಜನ ಮುಕ್ತಕಂಠದಿಂದ ಕೊಂಡಾಡುತ್ತಾರೆ. ನಾನು ೧೬೬೫ರಲ್ಲಿ ಇಲ್ಲಿರುವಾಗ ನಡೆದದ್ದನ್ನು ಹೇಳುತ್ತೇನೆ ಕೇಳಿ. ಮೊಗಲ್ ಚಕ್ರ ವರ್ತಿಯ ರಾಜಧಾನಿಯಾದ ಆಗ್ರಾದ ಒಬ್ಬ ಶ್ರೀಮಂತ ನೂರಾರು ಮೈಲಿ ದೂರ ನಡೆದು ಜಗನ್ನಾಥನ ದರ್ಶನಕ್ಕಾಗಿ ಇಲ್ಲಿಗೆ ಹೊರಟ ಆಗರ್ಭ ಶ್ರೀಮಂತನಾದ ಆತ ತನ್ನ ಹರಕೆಯಾಗಿ ಚಿನ್ನ ಬೆಳ್ಳಿಯನ್ನೂ ವಜ್ರವೈಢೂರ್ಯಗಳ ಆಭರಣಗಳನ್ನೂ ತೆಗೆದು ಕೊಂಡು ತನ್ನ ಕುಲದವರ ಸಮೇತ ಬಂದಿದ್ದ. ಅವನ ಪರಿವಾರದಲ್ಲಿ ೩,೦೦೦ ರಜಪೂತ ಸಿಪಾಯಿಗಳೂ ಪಲ್ಲಕ್ಕಿಗಳೂ ಪಟ್ಟದ ಕುದುರೆಗಳೂ ಹಲವಾರು ಭಾರಿ ಡೇರೆಗಳೂ ೬,೦೦೦ ಬೆತ್ತಲೆ ಫಕೀರರೂ (ಸಾಧುಗಳು) ಮತ್ತೆ ೬,೦೦೦ ಬಗೆಬಗೆಯ ಬಣ್ಣದ ಚಿಂದಿಚೂರು ಪಾರು ಬಟ್ಟೆ ಧರಿಸಿದ ಜಫರೂ ೫೦೦ ಜನ ಆಳುಕಾಳುಗಳೂ ಮತ್ತು ಇವರನ್ನು ಅನುಸರಿಸಿ ಸಾವಿರಾರು ಜನರೂ ಇದ್ದರು. ಇನ್ನೂ ಅನೇಕರು ದೇಶ ನೋಡಲು ಮತ್ತು ಕಳೆದುಕೊಂಡ ಜಾತಿಯನ್ನು ಮತ್ತೆ ಪಡೆಯಲು ಬಂದಿದ್ದರು.

ಈ ವರ್ತಕನು ದಾರಿಯಲ್ಲಿ ತಂಗಿದ ಕಡೆಗಳಲ್ಲೆಲ್ಲಾ ಪ್ರತಿದಿನ ಬೆಳಗ್ಗೆ ೫೦೦ ರೂಪಾಯಿಗಳನ್ನು ಬಡಬಗ್ಗರಿಗೆ ತನ್ನ ಕೈಯಿಂದಲೇ ದಾನಮಾಡುತ್ತಿದ್ದ. ಈ ಕಾರಣ ಅವನು ಬೀಡುಬಿಟ್ಟ ಕಡೆಗೆ ನಾನಾ ಕಡೆಗಳಿಂದ ಬಡಬಗ್ಗರು ಬಂದು ದಾನ ಪಡೆದು ಹೋಗುತ್ತಿದ್ದರು. ಅವನು ಒಂದು ರಾತ್ರಿಗಿಂತ ಹೆಚ್ಚಾಗಿ ಒಂದು ಕಡೆ ತಂಗುತ್ತಿರಲಿಲ್ಲ. ಮತ್ತು ಹಗಲು ೨೭ ಮೈಲಿಗಿಂತ ಹೆಚ್ಚು ದೂರ ಪ್ರಯಾಣ ಮಾಡುತ್ತಿರಲಿಲ್ಲ. ತನಗೆ ಬೇಕಾದ ಊಟೋಪಚಾರದ ಲವಾಜಮೆಗಳನ್ನು ಒದಗಿಸಲು ಮುಂಚೆಯೇ ತನ್ನ ಕಡೆಯವರನ್ನು ಕಳುಹಿಸುತ್ತಿದ್ದ. ಆದರೆ ಅದು ಅನೇಕ ವೇಳೆ ಅನಾವಶ್ಯಕವಾಗಿತ್ತು. ಏಕೆಂದರೆ, ಅವನ ಜಾತಿಯವರು ಅವನನ್ನು ಸತ್ಕರಿಸಿ ಕಳುಹಿಸುತ್ತಿದ್ದರು. ತಮ್ಮ ಸತ್ಕಾರವನ್ನು ಅವನು ಸ್ವೀಕರಿಸಿದರೆ ಅದು ತಮ್ಮ ಪುಣ್ಯ ಎಂದು ಅವರು ಭಾವಿಸು ತ್ತಿದ್ದರು. ಹೀಗೆ ವರ್ತಕನು ಪ್ರಯಾಣ ಮಾಡಿ ಜಗನ್ನಾಥ ತಲುಪಿ ತನ್ನ ಹರಕೆ ಸಲ್ಲಿಸಿ ದನು. ನನಗೆ ಖಚಿತವಾಗಿ ತಿಳಿದುಬಂದಂತೆ ಆತ ೧೦ ಲಕ್ಷರೂಪಾಯಿಗಳನ್ನೂ ವಜ್ರ ವೈಢೂರ್ಯಗಳ ಆಭರಣಗಳನ್ನೂ ಕಾಣಿಕೆಯಾಗಿ ಒಪ್ಪಿಸಿದನು. ಅಲ್ಲದೆ ಶಿಥಿಲವಾಗಿದ್ದ ಅನೇಕ ಕಲ್ಲುಕಟ್ಟಡಗಳನ್ನು ದುರಸ್ತಿ ಮಾಡಿಸಿದನು. ಇಷ್ಟೆಲ್ಲಾ ಮಾಡಿ ಆ ವರ್ತಕ ಆಗ್ರಾಕ್ಕೆ ಹಿಂದಿರುಗಿದನು.

ಮೇಲೆ ಫಕೀರರ ವಿಷಯ ಹೇಳಿರುವೆನಷ್ಟೆ. ಇವರು ವಿಚಿತ್ರ ಜನ. ಏನೂ ಮಾಡಿದರೂ ಮಾಫ್. ಖೂನಿ ಗೀನಿ ಮಾಡಿದರೆ ಮಾತ್ರ ಇವರ ತಂಟೆಗೆ ಹೋಗ ಬಹುದು. ಇವರು ಇಡೀ ಏಷ್ಯಾಖಂಡದಲ್ಲೆಲ್ಲಾ ಇದ್ದಾರೆ. ಹೋದೆಡೆಯಲ್ಲೆಲ್ಲ ಇವರಿಗೆ ಅಲ್ಲಿಯ ಜನ ಅಕ್ಕಿ, ತುಪ್ಪ, ತಂಬಾಕು, ಎಣ್ಣೆ ಮುಂತಾದುವುಗಳನ್ನು ಕೊಡ

ಬೇಕು. ಈ ಕಾರಣ ಸಾವಿರಾರು ಫಕೀರರು ಮೊಗಲ್ ಸಾಮ್ರಾಜದಲ್ಲಿಯೂ ಬಿಜಾಪುರ, ಗೊಲ್ಕೊಂಡ ರಾಜ್ಯಗಳಲ್ಲಿಯೂ ಎಲ್ಲಕ್ಕಿಂತ ಹೆಚ್ಚಾಗಿ ಬಂಗಾಳ ರಾಜ್ಯದಲ್ಲಿಯೂ ಅಲೆಯುವುದನ್ನು ನೋಡಬಹುದು. ಇವರು ಬಂಗಾಳ ರಾಜ್ಯದಲ್ಲಿ ಹೆಚ್ಚಾಗಿರುವುದಕ್ಕೆ ಕಾರಣವೇನೆಂದರೆ ಅಲ್ಲಿ ಜೀವನಕ್ಕೆ ಬೇಕಾದುದೆಲ್ಲ ಸುಲಭವಾಗಿ ಸಿಕ್ಕುತ್ತವೆ. ಈ ಫಕೀರರು ಎಲ್ಲವನ್ನೂ ಬಿಟ್ಟವರಂತೆ ಬೆತ್ತಲೆಯಾಗಿ ತಿರುಗುತ್ತಾರೆ. ಮೈಗೆಲ್ಲ ಬೂದಿ ಬಳಿದುಕೊಳ್ಳುತ್ತಾರೆ. ತಲೆಯನ್ನು ಬಾಚಿಕೊಳ್ಳುವುದಿಲ್ಲ. ಮುಖಕ್ಷೌರ ಮಾಡಿಸಿ ಕೊಳ್ಳುವುದಿಲ್ಲ. ರಣಹದ್ದುಗಳಂತೆ ಉಗುರುಗಳನ್ನು ಉದ್ದವಾಗಿ ಬೆಳಸಿಕೊಳ್ಳುತ್ತಾರೆ. ಆದರೆ ಇವರು ಮಾಡುವ ಕೃತ್ಯಗಳನ್ನು ನೋಡಿದರೆ ಇವರನ್ನು ರಣಹದ್ದುಗಳೆಂದೇ ಕರೆಯಬಹುದು. ಬಾಚದ ತಲೆಕೂದಲು ಜಡೆ ಜಡೆಯಾಗಿ ಹೆಣೆದುಕೊಂಡಿರುತ್ತದೆ. ಕೆಲವರು ಕೇವಲ ಚಿರತೆಯ ಚರ್ಮ ಹೊದ್ದರೆ ಮತ್ತೆ ಕೆಲವರು ನಾನಾ ಬಣ್ಣದ ಬಟ್ಟೆಯ ಚೂರುಗಳಿಂದ ಹೊಲಿದ ಅಂಗಿಯನ್ನು ಧರಿಸಿ ನವಿಲುಗರಿಗಳಿಂದಲೂ ಚಿಂದಿ ಬಟ್ಟೆಯ ಗೊಂಡೆಗಳಿಂದಲೂ ದೊಡ್ಡ ದೊಡ್ಡ ಕವಡೆ ಶಂಖಗಳಿಂದಲೂ ಅಲಂಕರಿಸಿ ಕೊಳ್ಳುತ್ತಾರೆ. ಹಲವಾರು ಮಂದಿ ಕತ್ತಿನ ಸುತ್ತ ಅಗಲವಾದ ಕಬ್ಬಿಣದ ತಗಡು ಧರಿಸಿ ಕೊಂಡಿದ್ದುದನ್ನು ನೋಡಿದ್ದೇನೆ. ಆ ತಗಡು ಸುಮಾರು ನಾಲ್ಕೈದು ಅಡಿ ಅಗಲ ಇರುತ್ತದೆ. ಅದರ ಮಧ್ಯೆ ಒಂದು ತೂತು ಮಾಡಿ ಕುತ್ತಿಗೆಗೆ ಸಿಕ್ಕಿಸಿಕೊಂಡ ಮೇಲೆ ಅದನ್ನು ಕಮ್ಮಾರನಿಂದ ಚೆನ್ನಾಗಿ ಬೆಸುಗೆ ಮಾಡಿಸಿಕೊಳ್ಳುತ್ತಾರೆ. ಹೀಗಾಗಿ ಫಕೀರನು ಮಲಗುವುದಕ್ಕಾಗಲೀ ಊಟಮಾಡುವುದಕ್ಕಾಗಲೀ ಆಗುವುದಿಲ್ಲ. ಕುಳಿತೇ ನಿದ್ದೆ ಮಾಡಬೇಕು. ಬೇರೆಯವರು ಯಾರಾದರೂ ಊಟ ಮಾಡಿಸಬೇಕು.[೭] ಇಂತಹ ಫಕೀರರಿಗೆ ಜನರು ಅದರಲ್ಲಿಯೂ ಅವನ ಜಾತಿಯ ಜನರು ಕಾಣಿಕೆ ಕೊಡುತ್ತಾರೆ—ತಾವು ಮಾಡಿಕೊಂಡ ಹರಕೆ ತೀರಲೆಂದು. ಇಂತಹ ಹುಚ್ಚು ಕೆಲಸ ಏಕೆ ಮಾಡುವಿರೆಂದು ನಾನು ಈ ಫಕೀರರನ್ನು ಕೇಳಿದಾಗ ಅವರು ತಾವು ಇಂತಹ ಕಷ್ಟಗಳನ್ನು ಅನುಭವಿಸಿ ಹಣಗಳಿಸಿ ಆ ಹಣದಿಂದ ಗುಡಿ. ಗೋಪುರಗಳನ್ನು ಕಟ್ಟಿಸುತ್ತೇವೆಂದು ಹೇಳಿದರು. ಆದರೆ ಅನೇಕರಿಗೆ ತಮ್ಮ ಹರಕೆಯನ್ನು ಪೂರ್ತಿಮಾಡಲು ಸಾಧ್ಯವಾಗುವುದೇ ಇಲ್ಲ.

ಮತ್ತೆ ಕೆಲವು ಫಕೀರರನ್ನು ನೋಡಿದ್ದೇನೆ. ಚಿಕ್ಕವರಾಗಿರುವಾಗಲೇ ಇವರನ್ನು ಕೋದಂಡಕ್ಕೆ ಹಾಕಿದಂತೆ ನೇತುಹಾಕುತ್ತಾರೆ. ಹಾಗೆ ಮಾಡುವ ಉದ್ದೇಶ ಯಾವಾಗಲೂ ಇವರು ದೇವರಿಗೆ ಕೈಮುಗಿಯುವ ಸ್ಥಿತಿಯಲ್ಲಿರಲಿ ಎಂದು. ಈ ರೀತಿ ವರ್ಷಗಟ್ಟಲೆ ಇರುವುದರಿಂದ ಅನಂತರವೂ ಅವರ ಕೈಗಳನ್ನು ಮಡಿಸಲು ಆಗುವುದಿಲ್ಲ. ಆದಕಾರಣ ಅವರು ಯಾವಾಗಲೂ ಕೈಗಳನ್ನು ಎತ್ತಿಕೊಂಡೇ ಇರಬೇಕಾಗುತ್ತದೆ. ಒಮ್ಮೆ ಬಂಗಾಳದಲ್ಲಿ ಒಬ್ಬ ವಯಸ್ಸಾದ ಫಕೀರನನ್ನು ಕಂಡೆ. ಆತ ಒಂದು ದೊಡ್ಡ ಹುಣಿಸೆ ಮರದಡಿಯಲ್ಲಿ ಕುಳಿತು ಹಗಲೂ ರಾತ್ರಿ ಒಂದೇ ಸಮನೆ ಇಡೀ ಶರೀರವನ್ನು ಹಿಂದಕ್ಕೂ

---

೭ ಬೊವ್ವೆ ಬರೆದಿರುವ ಚಿತ್ರ ನೋಡಿ.

ಮುಂದಕ್ಕೂ ಆಡಿಸುತ್ತಿದ್ದನು. ಈ ಕಾರಣ ಸೊಂಟದ ಮೇಲಿನ ಭಾಗವು ಗಡಿಯಾರದ ಲೋಲಕದಂತೆ ಹಿಂದಕ್ಕೂ ಮುಂದಕ್ಕೂ ಆಡಿದಂತಾಗುತ್ತಿತ್ತು. ಈ ರೀತಿ ನಲವತ್ತು ವರ್ಷಗಳು ಕುಳಿತಿದ್ದನು. ಇಂಥವರಿಗೆ ಈ ದೇಶದಲ್ಲಿ ಬಹು ಮಾನ್ಯತೆ ಇದೆ. ಇವರು ಬಹುತೇಕ ಜೆಂಟೂಗಳು (ಹಿಂದೂಗಳು).

ಇನ್ನು ಮಂತ್ರತಂತ್ರದಲ್ಲಿ ಎತ್ತಿದಕೈಯಾದ ಕಪಟ ಬ್ರಾಹ್ಮಣರ ವಿಚಾರ ಹೇಳ ಬೇಕೆಂದರೆ, ಜೆಂಟೂಗಳ ಮೇಲೆಲ್ಲಾ ಇವರದೇ ಕಾರುಬಾರು. ಇವರು ತಮ್ಮ ಮಂತ್ರತಂತ್ರಗಳಿಂದಲೂ ಕಟ್ಟು ಕಥೆಗಳಿಂದಲೂ ಜನರನ್ನು ಮೋಸಗೊಳಿಸಿ ತಾವು ಮಾತ್ರ ದೇವರ ನಿಜವಾದ ಭಕ್ತರೆಂಬ ಮತ್ತು ಸುಖವಾಗಿ ಬದುಕಲು ತಾವಲ್ಲದೆ ಬೇರೆಯವರು ಅರ್ಹರಲ್ಲವೆಂಬ ಭಾವನೆಯುನ್ನುಂಟುಮಾಡಿದ್ದಾರೆ. ಕಲ್ಲು ದೇವರ ಹೆಸರಿ ನಲ್ಲಿ ನಿತ್ಯವೂ ಹೇರಳವಾದ ಭಕ್ಷ್ಯ ಭೋಜ್ಯಗಳನ್ನು ತಿಂದು ತೇಗುತ್ತಾರೆ. ಕಲ್ಲುಗಳಿಗೆ ಎಡೆ ಇಟ್ಟರೆ ಅವು ತಿನ್ನಬಲ್ಲವೆ? ಮೂಢ ಜನರನ್ನು ವಂಚಿಸಿದರೆ ನಮ್ಮಂಥವರನ್ನು ವಂಚಿಸಲು ಸಾಧ್ಯವೆ ? ದೇವರ ಹೆಸರು ಹೇಳಿ ಈ ಹೊಟ್ಟೆಬಾಕ ಅರ್ಚಕ ಪಿಶಾಚಿಗಳು ಭೂಮಿಯಲ್ಲಿ ಬೆಳೆದ ಅತ್ಯಂತ ಉತ್ಕೃಷ್ಟವಾದುದನ್ನು ತಿನ್ನುವುದಲ್ಲದೆ ಬಹು ಸುಂದರಿಯು ರಾದ ಹತ್ತು ಹನ್ನೊಂದು ವರ್ಷದ ಕನ್ಯೆಯರನ್ನು ಮೋಸದಿಂದ ಕೆಡಿಸುತ್ತಾರೆ. ಕನ್ಯೆಯರ ತಂದೆ ತಾಯಿಗಳನ್ನು ಉಪಾಯದಿಂದ ನಂಬಿಸಿ ಅವರ ಹೆಣ್ಣುಮಕ್ಕಳು ಇಂತಿಂಥ ರಾತ್ರಿ ದೇವರ ಸೇವೆ ಮಾಡಬೇಕೆಂತಲೂ ಆ ರಾತ್ರಿ ಜಗನ್ನಾಥನು ಅವರಿಗೆ ಕಾಣಿಸಿಕೊಂಡು ಅವರನ್ನು ಆಲಿಂಗಿಸಿಕೊಂಡು ಮಂತ್ರೋಪದೇಶ ಮಾಡುವನೆಂದೂ ಇಂದ್ರಿಯಾತೀತವಾದ ಅನೇಕ ವಿಷಯಗಳನ್ನು ತಿಳಿಸುವನೆಂದೂ ಅವುಗಳನ್ನು ಆಸಕ್ತಿ ಯಿಂದ ಲಾಲಿಸಿ ಬ್ರಾಹ್ಮಣರನ್ನು ಬಿಟ್ಟು ಬೇರೆ ಯಾರಿಗೂ ಆ ಅನುಭವವನ್ನು ಹೇಳ ಕೂಡದೆಂದೂ ಬೋಧಿಸಿ ಕನ್ಯೆಯರು ದೇವಸ್ಥಾನಕ್ಕೆ ಬರುವಂತೆ ಮಾಡುತ್ತಾರೆ. ಈ ಮೋಸದಿಂದಾಗಿ ಪ್ರತಿ ರಾತ್ರಿ ಒಬ್ಬಿಬ್ಬರು ಕನ್ಯೆಯರು ಈ ವಿಷಯಲಂಪಟ ಮೂರ್ತಿ ಪೂಜಕ ಪುರೋಹಿತರ ಬಲೆಗೆ ಬಿದ್ದು ತಮ್ಮ ಕನ್ನೆತನವನ್ನು ಕಳೆದುಕೊಳ್ಳುವಂತಾಗಿದೆ. ಒಟ್ಟಿನಲ್ಲಿ ಈ ಪುರೋಹಿತರು ತಮ್ಮೆಲ್ಲ ನೀಚ ಮಾರ್ಗಗಳಿಂದ ಅರಿಯದ ಜನರನ್ನು ಮೋಸಗೊಳಿಸುತ್ತಾರೆ. ಬೇರೆ ವಿಷಯಗಳಲ್ಲಿ ಬುದ್ಧಿವಂತರಾದ ಜನರು ಈ ನೀಚತನ ವನ್ನು ಅರ್ಥಮಾಡಿಕೊಳ್ಳಲಾರದಷ್ಟು ದಡ್ಡರಾಗಿರುವರಲ್ಲ ಎಂದು ನನಗೆ ಆಶ್ಚರ್ಯ ವಾಗುತ್ತದೆ.

ವ್ಯಾಪಾರ ಸಾಪಾರ ಮಾಡುವ ಜನ ಬಹು ಚುರುಕು ಬುದ್ಧಿಯವರು. ಪ್ರಪಂಚ ದಲ್ಲೇ ಲೆಕ್ಕಪತ್ರದಲ್ಲಿ ಪರಿಣತರು. ಎಂತಹ ಕಠಿಣ ವಿಷಯವನ್ನಾದರೂ ಸುಲಭವಾಗಿ ಬಗೆಹರಿಸಬಲ್ಲರು. ಓಲೆಯುಗರಿಯ ಮೇಲೆ ಕಬ್ಬಿಣದ ಮೊನೆಯಿಂದ ಬರೆಯುವುದು ಇವರ ಬಹು ಹಳೆಯ ಪದ್ಧತಿ. ಆದ್ದರಿಂದಲೇ 'ಕಾಗದದ ಹಾಳೆ' (Leaf of paper) ಎಂಬ ಮಾತು ಹುಟ್ಟಿದ್ದು ಎಂದು ನನ್ನ ಭಾವನೆ. ಇವರ ಕಾರ್ಕೂನರನ್ನು

'ಕನೆಕೊಪ್ರೊಳ' (conecopola = ಕನಕಪಿಳ್ಳೆ) ಎಂದು ಕರೆಯುತ್ತಾರೆ. ಇವರ ಭಾಷೆಯನ್ನು ಕಲಿಯುವುದು ತುಂಬಾ ಕಷ್ಟ. ಅಲ್ಲದೆ ಚೀನೀ ಭಾಷೆಯನ್ನು ಬಿಟ್ಟರೆ ಇವರ ಭಾಷೆ ಬೇರೆಲ್ಲ ಭಾಷೆಗಳಿಗಿಂತ ಕಠಿಣವಾದದ್ದು.

ತಾವು ಬಹು ಪುರಾತನ ಜನಾಂಗದವರೆಂದು ಈ ಜೆಂಟೂಗಳು ಹೇಳಿಕೊಳ್ಳುತ್ತಾರೆ. ತಮ್ಮ ಮತವು ಅಷ್ಟೇ ಪುರಾತನವಾದುದೆಂದೂ ಮತ್ತೇನೂ ಅದರಲ್ಲಿ ಬದಲಾವಣೆ ಯಾಗಿಲ್ಲ ಎಂದು ಜಂಭ ಕೊಚ್ಚಿಕೊಳ್ಳುತ್ತಾರೆ. ನಿಜವಾಗಿಯೂ ಇವರು ಪುರಾತನ ಜನಾಂಗವೇ ನಿಜ. ಮೋಸೆಸ್‌ನಿಂದಲ ಬೇರೆಯಾದ ಮೇಲೆ ದೇವರನ್ನು ಪೂಜಿಸುವ ಬದಲು ಕಲ್ಲಿನ ಬಸವನನ್ನು (Molten calf) ಪೂಜಿಸಲು ಆರಂಭಮಾಡಿದವರ ವಂಶಸ್ಥರು ಇವರು ಎಂಬುದರಲ್ಲಿ ಸಂದೇಹವಿಲ್ಲ.

ಇವರ ಭಾಷೆಯೇನೂ ಬದಲಾವಣೆ ಹೊಂದಿದೆ. ಏಕೆಂದರೆ ಇವರ ದೇವಸ್ಥಾನ ಗಳಲ್ಲಿ ಅದರಲ್ಲಿಯೂ ಅರ್ಮಗೊನ್ (ಆರ್ಮುಗಂ) ಎಂಬ ದೇವಸ್ಥಾನದಲ್ಲಿರುವ ಶಿಲಾ ಲಿಪಿಯನ್ನು ತಾವು ಓದಲು ಆಗಲಿಲ್ಲವೆಂದು ಇವರು ಒಪ್ಪಿಕೊಳ್ಳುತ್ತಾರೆ. ಅನೇಕ ದೇವಸ್ಥಾನಗಳಲ್ಲಿ ಹಿಂದಿನ ಲಿಪಿಯಲ್ಲಿ ಬರೆದ ಕಥಾ ಚರಿತ್ರೆಗಳು ಇವೆ. ಇವುಗಳ ಪ್ರಕಾರ ಪ್ರಪಂಚವು ೧,೦೦೦ ವರ್ಷಕ್ಕಿಂತಲೂ ಹಿಂದೆ ಹುಟ್ಟಿತೆಂದು ಗೊತ್ತಾಗುತ್ತದೆ. ಇದರ ಪ್ರಕಾರ ಒಂದು ವರ್ಷ ಎಂದರೆ ಹದಿಮೂರು ಚಂದ್ರಗಳು (Moons). ಒಟ್ಟಿನಲ್ಲಿ ಇವರು ಬಹು ಕುಶಾಗ್ರ ಬುದ್ಧಿಯ ಜನ. ಪ್ರಾಪಂಚಿಕ ಸುಖದಲ್ಲಿ ಆಸಕ್ತರು. ಅನೇಕರು ಇಡೀ ಪ್ರಪಂಚದಲ್ಲೇ ಬಾರಿ ಶ್ರೀಮಂತರೆನ್ನಬಹುದು. ಆದರೆ ತೀರಾ ಬಡವರಂತೆ ಬಾಳುತ್ತಾರೆ. ದೇವರು ಕೊಟ್ಟ ಐಶ್ವರ್ಯವನ್ನು ಸುಖಜೀವನಕ್ಕೆ ಉಪಯೋಗಿಸುವುದಿಲ್ಲ. ಬಟ್ಟೆ ಬರೆ ಅನ್ನ ಆಹಾರಾದಿಗಳಲ್ಲಿ ಬಹು ಕಟ್ಟುನಿಟ್ಟು. ಇವರ ಮನೆಗಳು ಯುರೋಪಿನಲ್ಲಿರುವ ದನದ ಕೊಟ್ಟಿಗೆಗಳಂತಿರುತ್ತವೆ. ಹುಲ್ಲು ಹೊದಿಸಿದ ಜೋಪಡಿಗಳು. ಎರಡು ಮೂರು ಕತ್ತಲೆಯ ಕೋಣೆಗಳು. ಲಕ್ಷಾಧೀಶರು ಸಹ ಸಗಣಿಯಿಂದ ಸಾರಿಸಿದ ಕಿರು ಮನೆಗಳಲ್ಲಿ ಅವರು ಪೂಜಿಸುವ ದನಕರುಗಳಂತೆ ವಾಸಮಾಡುವುದನ್ನು ನೋಡಬಹುದು.

ಈ ವಿಗ್ರಹಾರಾಧಕರಲ್ಲಿ ಸ್ವಲ್ಪ ಮೇಲ್ತರಗತಿಯ ಇನ್ನೊಂದು ಜಾತಿಯ ಜನರಿದ್ದಾರೆ. ಇವರನ್ನು 'ಬಂಜಾನ'ರೆಂದೂ ಕರೆಯುತ್ತಾರೆ. ಇವರೂ ಕಟ್ಟಾ ವಿಗ್ರಹಾರಾಧಕರೆ. ಯಹೂದಿಗಳು ಯೂರೋಪು ಆಫ್ರಿಕಾದೇಶಗಳಲ್ಲಿ ಹರಡಿಕೊಂಡಿರುವಂತೆ ಇವರು ಏಷ್ಯಾ ದೇಶದಲ್ಲೆಲ್ಲಾ ಹರಡಿಕೊಂಡಿದ್ದಾರೆ. ಪ್ರಾಣಹಿಂಸೆಯಾಗಲೀ ಮಾಂಸ ಭಕ್ಷಣೆಯಾಗಲೀ ಇಲ್ಲ. ಆದರೆ ಜೆಂಟೂಗಳು ದನದ ಮಾಂಸ ಒಂದನ್ನು ಬಿಟ್ಟು ಬೇರೆ

---

೮. ಮೋಸೆಸ್ (Moses): ಯಹೂದಿಗಳ ಪ್ರವಾದಿ. ಹತ್ತು ವಿಧಿಗಳನ್ನು (Ten Commandments) ಹೇಳಿ ಬರೆಯಿಸಿದ ದೇವದೂತ.

೯. ಬಂಜಾನರು (Banaja): ವಣಜರು ಅಂದರೆ ವರ್ತಕರು.

ಪ್ರಾಣಿಗಳ ಮಾಂಸ ತಿನ್ನುತ್ತಾರೆ. ಬನಿಯರೆಷ್ಟು ಅಹಿಂಸಾವಾದಿಗಳೆಂದರೆ ಇವರು ಇಲಿ, ಹೆಗ್ಗಣ, ಹಾವು, ಹಲ್ಲಿ, ಹೇನುಕೂರೆಗಳನ್ನೂ ಕೊಲ್ಲಲು ಅವಕಾಶಕೊಡುವುದಿಲ್ಲ. ಅವನ್ನು ಕೊಲ್ಲುವ ಕ್ರೈಸ್ತರು ಹಾಗೂ ಮಹಮ್ಮದೀಯರಿಂದ ಅವನ್ನು ದುಡ್ಡು ಕೊಟ್ಟು ಕೊಂಡು ಪ್ರಾಣ ಉಳಿಸುತ್ತಾರೆ. ಆತ್ಮ ಅಮರವೆಂದೂ ಈ ಜೀವನದಲ್ಲಿ ಮಾಡಿದ ಒಳ್ಳೆಯ ಕರ್ಮಕ್ಕೆತಕ್ಕಂತೆ ಮುಂದಿನ ಜನ್ಮದಲ್ಲಿ ಸಾಧುಪ್ರಾಣಿಗಳಾದ ಕೋಳಿ ಕೊಕ್ಕರೆಯಾಗಿಯೋ ಪಾರಿವಾಳ ಮುಂತಾದ ಪ್ರಾಣಿಯೋ ಆಗಿ ಜನ್ಮ ತಾಳುತ್ತಾರೆಂದು ನಂಬುತ್ತಾರೆ. ಇವರಲ್ಲಿ ಅನೇಕರು ತುಂಬಾ ಶ್ರೀಮಂತರು. ತಮ್ಮ ಜಾತಿಯ ಜನರಿಗೆ ವ್ಯಾಪಾರದಲ್ಲಿ ನೆರವಾಗುತ್ತಾರೆ. ಈ ದೃಷ್ಟಿಯಲ್ಲಿ ಇವರು ಯಹೂದಿಗಳಂತೆ ಎಂದು ಹೇಳಬಹುದು. ಕೇವಲ ಅನ್ನ, ಹಾಲು ತುಪ್ಪಗಳನ್ನು ತಿಂದೇ ಇವರು ಜೀವಿಸುವುದು. ಮೊಟ್ಟೆಯನ್ನಾಗಲೀ ಗಿಣ್ಣನ್ನಾಗಲೀ ತಿನ್ನುವುದಿಲ್ಲ.

ಜೆಂಟೂಗಳಾಗಲೀ ವಣಜರಾಗಲೀ ಯಾವ ತರಹ ಮದ್ಯ ಕುಡಿಯುವುದಿಲ್ಲ. ನೀರೋ ಗಂಜಿಯೋ ಇವರ ಪಾನೀಯ. ಕುಡಿಯುವ ನೀರಿಗೆ ಸ್ವಲ್ಪ ಅಕ್ಕಿ (ನುಚ್ಚನ್ನು) ಹಾಕಿ ಗಂಜಿ ತಯಾರಿಸುತ್ತಾರೆ. ಇವರ ಹೆಂಗಸರು ಬಾಣಂತಿಯರಾಗಿರುವಾಗ ಅವರಿಗೆ ಕುಡಿಯಲು ಸ್ವಲ್ಪ ಮದ್ಯ ಕೊಡುತ್ತಾರೆ. ಒಬ್ಬನಿಗೆ ಒಬ್ಬಳೇ ಹೆಂಡತಿ. ಇದೇನೊ ಮೆಚ್ಚತಕ್ಕ ವಿಷಯವೆ. ಆದರೆ ಮದುವೆಯಾಗದೆ ತಮ್ಮ ಯೋಗ್ಯತಾನುಸಾರ ಇಷ್ಟ ಬಂದಷ್ಟು ಹೆಂಗಸರನ್ನು ಇಟ್ಟುಕೊಳ್ಳಬಹುದು.

ವಧೂವರರ ತಂದೆ ತಾಯಿಗಳೇ ಮದುವೆ ನಿಶ್ಚಯಿಸುತ್ತಾರೆ. ಏಕೆಂದರೆ ಚಿಕ್ಕವನಾದ ವರನಿಗೆ ಮದುವೆಯೆಂದರೆ ಏನೆಂದು ತಿಳಿಯದು. ಬ್ರಾಹ್ಮಣರು ವಧೂವರರ ಕೈಗಳಿಂದ ಹಸುವಿನ ಬಾಲ ಮುಟ್ಟಿಸಿ ಏನೇನೋ ಮಂತ್ರ ಹೇಳಿ ಮದುವೆ ಮಾಡಿಸುತ್ತಾರೆ. ನೆಂಟರಿಷ್ಟರು ಭಾರಿ ಜನ ಸೇರುತ್ತಾರೆ. ಧಾರೆ ಆದ ಮೇಲೆ ನೆಂಟರಿಷ್ಟರು ಚಕ್ಕಾಲು ಬೊಕ್ಕಲು ಹಾಕಿ ಜಂಖಾನಗಳ ಮೇಲೊ ಅಥವಾ ಚಾಪೆಗಳ ಮೇಲೊ ಅಥವಾ ಕುಕ್ಕರುಗಾಲಲ್ಲೊ ಊಟಕ್ಕೆಕುಳಿತುಕೊಳ್ಳುತ್ತಾರೆ. ಅವರಿಗೆಲ್ಲಾ ಎಲೆ ಅಡಕೆಯನ್ನು ತಿದ್ದುತ್ತಾರೆ. ರಾತ್ರಿಯಾದ ಮೇಲೆ ವಧೂವರರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಊರಿನ ಬೀದಿಗಳಲ್ಲಿ ವಾದ್ಯಸಮೇತ ಪತ್ತು, ಪಂಜು ಮತ್ತು ಇಲಾಲ್‌ಗಳ ಬೆಳಕಿನಲ್ಲಿ ತಮಟೆ, ದೋಣು ಹರೆ ಮುಂತಾದ ನಾಡುವಾದ್ಯ ಹಾಗೂ ನರ್ತಕಿಯರ ನೃತ್ಯದೊಡನೆ ಮೆರವಣಿಗೆ ಮಾಡುತ್ತಾರೆ. ಬೀದಿಯ ತುಂಬ ಜನರು ಸೇರುತ್ತಾರೆ. ಇದು ಸಾಮಾನ್ಯ ಜನರ ಮದುವೆಯಲ್ಲಿ. ಅನುಕೂಲಸ್ಥರು ಹಲವಾರು ದಿನ ಈ ತರಹ ಮೆರವಣಿಗೆ ಮಾಡುತ್ತಾರೆ. ದಿನಕ್ಕೊಂದು ಬಗೆಯ ವಿನೋದ, ದೊಂಬರಾಟ ಇತ್ಯಾದಿ ಅದ್ದೂರಿಯಾಗಿ ನಡೆಯುತ್ತವೆ. ಹೆಣ್ಣಿಗೆ ೨೦–೨೫ ಪಗೋಡಾ ತೆರ ಕೊಡದೆ ಯಾರೂ ಮದುವೆಯಾಗುವಂತಿಲ್ಲ. ಅನುಕೂಲಸ್ಥರು ಇದರ ಹತ್ತುಪಟ್ಟು ಹೆಚ್ಚು ಕೊಡಬಹುದು. ವರ್ತಕರ ಒಂದು ಜಾತಿಯವರು ಇನ್ನೊಂದು ಜಾತಿಯವರನ್ನು ಮದುವೆಯಾಗು

ವಂತಿಲ್ಲ. ವರ್ತಕನು ವರ್ತಕನ ಮಗಳನ್ನೇ ನೇಯ್ಗೆಯುವನು ನೇಯ್ಗೆಯುವನ ಮಗಳನ್ನೇ ದರ್ಜಿ ದರ್ಜಿಯುವನ ಮಗಳನ್ನೇ ಅಕ್ಕಸಾಲೆ ಅಕ್ಕಸಾಲಿಗನ ಮಗಳನ್ನೇ ಮದುವೆಯಾಗ ಬೇಕು. ಪ್ರತಿಯೊಬ್ಬ ಕಸುಬುದಾರನು ತನ್ನ ಮಕ್ಕಳಿಗೆ ತನ್ನ ಕಸುಬನ್ನೇ ಕಲಿಸಬೇಕು. ಬೇರೆ ಕಸಬು ಕಲಿಸುವಂತಿಲ್ಲ.

ಶ್ರೀಮಂತರಾದ ವರ್ತಕರು ತಮ್ಮ ಹೆಣ್ಣುಮಕ್ಕಳಿಗೆ ಎಂಟು ವರ್ಷವಾಗುವುದ ರೊಳಗೆ ಮದುವೆ ಮಾಡಿಬಿಡುತ್ತಾರೆ. ಬಡವರೂ ಸಾಮಾನ್ಯವಾಗಿ ಹಾಗೆಯೇ ಮಾಡುತ್ತಾರೆ. ಆದರೆ ಹುಡುಗನು ತನ್ನ ಜೀವನಕ್ಕೆ ಏನಾದರೊಂದು ಕಸಬನ್ನು ಮಾಡಲು ಶಕ್ತನಿರುವನೇ ಎಂದು ನೋಡುತ್ತಾರೆ. ಹುಡುಗರಿಗೆ ೧೫–೧೬ ವರ್ಷದಲ್ಲಿ ಹುಡುಗಿಗೆ ಎಂಟು ವರ್ಷ ಆಗಿರುವಾಗ ಮದುವೆ ಮಾಡಿಬಿಡುತ್ತಾರೆ. ಆದರೆ ಗಂಡ ಹೆಂಡಿರು ಒಟ್ಟಿಗೆ ಕೂಡುವುದು ಹುಡುಗಿಗೆ ಹನ್ನೊಂದು ವರ್ಷ ಆದಾಗ.

ಏಷ್ಯಾ ದೇಶದಲ್ಲಿ, ಅದರಲ್ಲಿಯೂ ದಕ್ಷಿಣ ಪ್ರದೇಶಗಳಲ್ಲಿ, ಹೆಣ್ಣುಮಕ್ಕಳು ಹನ್ನೊಂದು ವರ್ಷಕ್ಕೇ ಗರ್ಭಿಣಿಯರಾಗುತ್ತಾರೆ. ನಮ್ಮಲ್ಲಿ ಈ ವಯಸ್ಸಿಗೆ ಹಡೆಯುವು ದೆಂದರೆ ಆಶ್ಚರ್ಯ. ಆದರೆ ಇವರಲ್ಲಿ ಅದು ಸಾಮಾನ್ಯವಾದ ವಿಷಯ. ಈ ಕಾರಣ ಮೂವತ್ತು ವರ್ಷಕ್ಕೇ ಇವರು ಐವತ್ತು ವರ್ಷದ ಹೆಂಗಸಿನಂತೆ ಕಾಣುತ್ತಾರೆ. ೨೫–೨೬ ವರ್ಷವಾದ ಮೇಲೆ ಇವರಿಗೆ ಮಕ್ಕಳೇ ಆಗುವುದಿಲ್ಲ.

ಇವರ ಉಡುಪು ಇಲ್ಲಿಯ ಹವಾಕ್ಕೆ ತಕ್ಕಂತೆ ಹಗುರ. ಆದರೆ ಅಂದಚಂದವಾಗಿಲ್ಲ. ಈ ಜನ ದಿಟ್ಟನಡಗೆಯವರು. ಪ್ರೀತಿ ಸ್ವಭಾವವುಳ್ಳವರು. ಬಣ್ಣ ಕಂದು, ಕೂದಲು ಕಪ್ಪು. ಮಕ್ಕಳು ಆರೇಳು ವರ್ಷದವರೆಗೆ ಬಟ್ಟೆ ಬರೆಯಿಲ್ಲದೆಯೇ ಓಡಾಡು ತ್ತವೆ. ಜನ ಆಗಾಗ್ಗೆ ಸ್ನಾನ ಮಾಡುತ್ತಾರೆ. ಮೈಕೈಗೂ ತಲೆಗೂ ಎಣ್ಣೆ ಹಚ್ಚಿಕೊಂಡು ಮೀಯುವುದೂ ಉಂಟು. ಹಣೆಗೆ ಎರಡು ಕಣ್ಣುಹುಬ್ಬುಗಳ ಮಧ್ಯೆ ಬ್ರಾಹ್ಮಣರಿಂದ ಬಿಳಿಯ ಅಥವಾ ಕೆಂಪುನಾಮಗಳನ್ನೊ ಗಂಧವನ್ನೊ ಹಚ್ಚಿಸಿಕೊಳ್ಳುತ್ತಾರೆ. ನಾಮ ಹಚ್ಚಿಸಿಕೊಂಡರೆ ಆ ದಿವಸವೆಲ್ಲಾ ಒಳ್ಳೆಯದಾಗುವುದೆಂದು ನಂಬುತ್ತಾರೆ. ಈ ರೀತಿ ಮೋಸಗಳಿಗೆ ಒಳಗಾಗಿ ಹೇರಳವಾಗಿ ಹಣ ಕಳೆದುಕೊಳ್ಳುತ್ತಾರೆ.

ಮಹಾಪಂಡಿತನಾದ ಒಬ್ಬ ಬ್ರಾಹ್ಮಣರೊಡನೆ ನಾನು ಅನೇಕ ಸಲ ಮಾತನಾಡಿ ದ್ದೇನೆ. ಅದಕ್ಕೆ ಅನುಕೂಲವಾಗುವಂತೆ ಅವರ ಭಾಷೆಯನ್ನೂ ಕೈ ಬಾಯಿ ಆಡಿಸು ವುದನ್ನೂ ಕಲಿತುಕೊಂಡೆ. ಒಮ್ಮೆ ನಾನು ಬಂಗಾಳದಲ್ಲಿರುವ ಬಾಲಸೂರ್ ಎಂಬ ಪಟ್ಟಣದಲ್ಲಿದ್ದ ಇಂಗ್ಲಿಷ್‌ರ ಕಡೆಯ ಜೆಂಟೂ ದಲ್ಲಾಳಿಯ ಮನೆಯ ಬಳಿ ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಕೆಲವು ಬ್ರಾಹ್ಮಣರೊಡನೆ ಕುಳಿತು ಮಾತನಾಡು ತ್ತಿದ್ದೆ. ಆಗ ಆಕಾಶದಲ್ಲಿ ಬೆಳಗುತ್ತಿದ್ದ ಚಂದ್ರನಿಗೆ ಗ್ರಹಣ ಹಿಡಿಯಿತು. ಅದನ್ನು ಕಂಡ ಕೂಡಲೇ ಅವರೆಲ್ಲ ಆತುರದಿಂದ ಎದ್ದು ಬಾಯಲ್ಲಿ ಏನೋ ಹೇಳುತ್ತಾ ಆಕಾಶದ ಕಡೆಗೆ ಕೈಮುಗಿಯುತ್ತಾ ಹತ್ತಿರವಿದ್ದ ಕೆರೆಗೆ ಹೋದರು. ಅಲ್ಲಿ ಬ್ರಾಹ್ಮಣರೂ ಬೇರೆ ಜನರೂ

ನೆರೆದರು. ಕೆರೆಯ ನೀರನ್ನು ಮೈಮೇಲೆ ಪ್ರೋಕ್ಷಣೆ ಮಾಡಿಕೊಂಡರು. ಬಾಯಲ್ಲಿ ಏನೋ ಹೇಳಿಕೊಂಡರು. ಕೆಲವರು ಕೆರೆಯ ದಡದ ಬಳಿ ದೀರ್ಘದಂಡ ನಮಸ್ಕಾರ ಮಾಡಿದರು. ಹೆಂಗಸರು ದೀಪ ಹಚ್ಚಿಕೊಂಡು ಬಂದು ಹೂಹಾಕಿ ಪೂಜೆ ಮಾಡಿದರು. ಏನು ಮಾಡುತ್ತಾರೆ ನೋಡೋಣ ಎಂದು ನಾನು ಎರಡು ಗಂಟೆ ಹಾಗೆಯೇ ನಿಂತು ಕೊಂಡಿದ್ದೆ. ಬ್ರಾಹ್ಮಣರು ಮೆಲುದನಿಯಲ್ಲಿ ಮಂತ್ರ ಹೇಳುತ್ತಲೇ ಇದ್ದರು. ಎಷ್ಟು ಆತುರವಾಗಿ ಹೇಳುತ್ತಿದ್ದರೆಂದರೆ ನನಗೆ ಅವರು ಹೇಳಿದ ಒಂದು ಪದವೂ ಅರ್ಥವಾಗಲಿಲ್ಲ. ಗ್ರಹಣ ಬಿಟ್ಟಮೇಲೆ ನನಗೆ ಬೇಕಾದ ಕೆಲವರನ್ನು ಕುರಿತು ಏನು ಇದೆಲ್ಲಾ ಹಗರಣ ಎಂದು ಕೇಳಿದೆ. ಅದಕ್ಕೆ ಉತ್ತರವಾಗಿ ಅವರು ಚಂದ್ರನನ್ನು ಸರ್ಪವು ನುಂಗಿ ಚಿತ್ರ ಹಿಂಸೆಗೆ ಗುರಿಮಾಡಿತು. ಆ ಸರ್ಪದಿಂದ ಚಂದ್ರನನ್ನು ಪಾರುಮಾಡುವಂತೆ ದೇವರನ್ನು ಪ್ರಾರ್ಥಿಸಿದೆವು ಎಂದು ಹೇಳಿದರು. ಆಗ ನಾನು ನೀವು ಇಷ್ಟು ಪರಿಣಿತರಾಗಿದ್ದೀರಲ್ಲ ನಿಮಗೆ ಜ್ಯೋತಿಷ್ಯಶಾಸ್ತ್ರ ಚೆನ್ನಾಗಿ ಬರುವುದೆ, ಹಾಗಿದ್ದರೆ ಮುಂದೆ ಯಾವಾಗ ಸೂರ್ಯಗ್ರಹಣ ಚಂದ್ರಗ್ರಹಣಗಳಾಗುವುವೆಂದು ಹೇಳಬಲ್ಲಿರಾ ಎಂದು ಕೇಳಿದೆ. ಇದಕ್ಕೆ ಅವರು ಅದು ಸಾಧ್ಯವಿಲ್ಲ, ದೇವರು ಮಾತ್ರ ಹೇಳಬಲ್ಲ ಎಂದು ಹೇಳಿದರು.[೧೦] ಇದರಿಂದ ಅವರೆಷ್ಟು ದಡ್ಡರು ಎಂದು ಗೊತ್ತಾಯಿತು. ಹೋಗಲಿ ನಿಮ್ಮ ದೇವರಾದ (ಜಗನ್ನಾಥ ನಿಗೆ) ಗೊತ್ತಿದೆಯೇ ಎಂದು ಕೇಳಿದೆ. ಓಹೋ, ಅವನಿಗೆ ಗೊತ್ತಿಲ್ಲದಿರುವುದು ಯಾವುದೂ ಇಲ್ಲ ಎಂದು ಉತ್ತರ ಕೊಟ್ಟರು.

ವಣಿಜರ ಮತ್ತು ಜೆಂಟೂ ಹೆಂಗಸರು ಗಂಡಸರೆಲ್ಲ ಹಕ್ಕಿಗಳ ಉಗುರುಗಳಂತೆ ಉದ್ದವಾದ ಕೈಯುಗುರು ಮತ್ತು ಕಾಲುಗುರುಗಳನ್ನು ಬೆಳೆಸುತ್ತಾರೆ. ಇದು ತುಂಬಾ ಲಕ್ಷಣವೆಂದು ಇವರ ಭಾವನೆ. ಹೆಂಗಸರು ಮೂಗಿಗೆ ಚಿನ್ನದ ಅಥವಾ ಬೆಳ್ಳಿಯ ಮೂಗುತಿ ಹಾಕಿಕೊಂಡಿರುತ್ತಾರೆ. ಗಂಡಸರೂ ಹೆಂಗಸರೂ ಕಿವಿಗಳಿಗೆ ದೊಡ್ಡ ಉಂಗುರ ದಂತಹ ಎರಡು ಮೂರು ಆಭರಣಗಳನ್ನು ಧರಿಸಿರುತ್ತಾರೆ. ಹೆಂಗಸರು ಕಿವಿ ಚುಚ್ಚಿಸಿ ಅಗಲವಾಗಿ ಮಾಡಿಕೊಂಡು ಓಲೆಗರಿಯ ಸುರುಳಿಮಾಡಿ ತೂತಿಗೆ ಇಟ್ಟು ಕೊಳ್ಳುತ್ತಾರೆ. ಮಕ್ಕಳು ಬೆಳೆದಂತೆ ವಯಸ್ಸಾದಂತೆ ತೂತು ದೊಡ್ಡದಾಗುತ್ತಾ ಹೋಗುತ್ತದೆ. ಅನೇಕರ ಕಿವಿಗಳಲ್ಲಿ ಎರಡು ಮೂರು ಅಂಗುಲದಷ್ಟು ದೊಡ್ಡ ತೂತು ಗಳಿರುತ್ತವೆ. ತೂತು ಎಷ್ಟು ದೊಡ್ಡದಾದರೆ ಅಷ್ಟೂ ಲಕ್ಷಣವೆಂದು ಇವರ ಭಾವನೆ. ಮಲಬಾರಿಗಳಲ್ಲಿಯೂ ಇದೇ ಪದ್ಧತಿ ಇದೆ. ಆದರೆ ಅವರ ವಿಗ್ರಹಾರಾಧನೆಯ ರೀತಿಯೇ ಬೇರೆ. ಅವರ ಬಣ್ಣ ಬಹು ಕಪ್ಪು. ಇಥಿಯೋಪಿಯಾ ದೇಶದವರ (ನಿಗ್ರೋಗಳ) ಬಣ್ಣಕ್ಕೂ ಅವರ ಬಣ್ಣಕ್ಕೂ ಹೆಚ್ಚು ವ್ಯತ್ಯಾಸವಿಲ್ಲ. ಆದರೆ ಸುಂದರ ಮುಖ. ತಲೆಗೂದಲು ಉದ್ದ. ಒಳ್ಳೆಯ ಸ್ವಭಾವ. ಬೇರೆಯವರಿಗೆ ಹೋಲಿಸಿದರೆ

---

೧೦ ಇದು ಸರಿಯಲ್ಲ. ಜ್ಯೋತಿಶಾಸ್ತ್ರದ ಪ್ರಕಾರ ಯಾವಾಗ ಸೂರ್ಯಗ್ರಹಣ ಚಂದ್ರ ಗ್ರಹಣಗಳು ಆಗುತ್ತವೆ ಎಂದು ಖಚಿತವಾಗಿ ಹೇಳಬಹುದು.

ಅವರು ಬಡವರು. ಬೇರೆಯುವರಂತೆ ಹೆಚ್ಚು ಆಭರಣಗಳನ್ನು ಹಾಕಿಕೊಳ್ಳುವ ಸಾಮರ್ಥ್ಯವಿಲ್ಲ. ಆದರೂ ತೋರಿಕೆಗಾಗಿ ಕೆಲವು ಒಡವೆಗಳನ್ನು ಧರಿಸುತ್ತಾರೆ. ಶ್ರೀಮಂತರು ಬೆಳ್ಳಿಯ ತೋಳುಬಂದಿಗಳನ್ನೂ ಸಾಮಾನ್ಯರು ಹಿತ್ತಾಳೆ ಅಥವಾ ತಾಮ್ರದ ಬಂದಿಗಳನ್ನೂ ಹಾಕಿಕೊಳ್ಳುತ್ತಾರೆ. ಕೆಲವರು ಹಸಿರು ಗಾಜಿನ ತೋಳುಬಂದಿಗಳನ್ನೂ ಧರಿಸುತ್ತಾರೆ. ಮತ್ತು ಕಾಲಿನ ಹೆಬ್ಬೆರಳುಗಳಿಗೆ ಹಿತ್ತಾಳೆಯ ದಪ್ಪದಪ್ಪ ಉಂಗುರಗಳನ್ನು ಸಿಕ್ಕಿಸಿಕೊಳ್ಳುತ್ತಾರೆ.

ವಣಿಜರು ಅಂದರೆ ಜೆಂಟೂ ಜಾತಿಯುವರು ಕಾಯಿಲೆಯಿಂದಲೋ ಅಥವಾ ಆಕಸ್ಮಿಕವಾಗಿಯೋ ಸತ್ತರೆ ಅವರನ್ನು ಹೂಳುವ ಬದಲು ಸುಡುತ್ತಾರೆ. ಆ ಸಂದರ್ಭದಲ್ಲಿ ನಡೆಯುವ ದುರಂತದ ಬಗ್ಗೆ ನಾನು ಏನೆಂದು ಹೇಳಲಿ! ಗಂಡನು ಸತ್ತರೆ ಅವನನ್ನು ಸುಡುವುದಕ್ಕೆ ಚಿತೆ ಸಿದ್ಧವಾಗುತ್ತದೆ. ಆಗ ಅವನ ಹೆಂಡತಿಯೂ ಇಟ್ಟುಕೊಂಡವರೂ ಚಿತೆಯಲ್ಲಿ ಬೀಳಲು ಸಿದ್ಧರಾಗುತ್ತಾರೆ. ಸರ್ವಾಲಂಕಾರ ಭೂಷಿತೆಯರಾಗಿ ಆ ಪೈಶಾಚಿಕ ಬ್ರಾಹ್ಮಣರೊಡಗೂಡಿ ರುದ್ರಭೂಮಿಗೆ ಹೋಗುತ್ತಾರೆ. ಆಗ ಬ್ರಾಹ್ಮಣರು ಗಂಡನೊಡನೆ ಸಹಗಮನ ಮಾಡಲು ಹೊರಟ ಆ ಹೆಂಗಸರ ಪಾತಿವ್ರತ್ಯದ ಮಹಿಮೆಯನ್ನು ಹೊಗಳಿ ನೀವು ಸ್ವರ್ಗದಲ್ಲಿ ಸುಖವಾಗಿರುವರೆಂದು ಅವರನ್ನು ಪ್ರೋತ್ಸಾಹಿಸುತ್ತಾ ಹೋಗುತ್ತಾರೆ. ನೆಂಟರಿಷ್ಟರೂ ಆಕೆಯ ಪಾತಿವ್ರತ್ಯವನ್ನು ಹೊಗಳುತ್ತಾರೆ. ಸಹಗಮನ ಪದ್ಧತಿಯನ್ನು ನಾನು ಕೇಳಿದರೂ ಕಂಡಿರಲಿಲ್ಲ. ಆದರೆ ಓಮ್ಮೆ ನಾನು ೧೬೭೭ರಲ್ಲಿ ಸೇಂಟ್ ಜಾರ್ಜ್ ಕೋಟೆಯಿಂದ ಮಚಲೀಪಟ್ಟಣಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ 'ಕರೂರು' ಎಂಬ ಊರಿನಲ್ಲಿ ತಂಗಬೇಕಾಯಿತು. ಊಟಮಾಡಿ ವಿಶ್ರಾಂತಿ ಪಡೆದು ಸಾಮಾನುಗಳನ್ನು ಕಟ್ಟಿ ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ನನ್ನ 'ದುಭಾಷಿ'—ಅವನ ಹೆಸರು ನರಸ ಎಂದು—ಸುಂದರಿಯಾದ ಹೆಣ್ಣೊಬ್ಬಳು ಗಂಡನೊಡನೆ ಸಹಗಮನ ಮಾಡುವುದನ್ನು ನೋಡಲು ಇಷ್ಟವಿದೆಯೆ ಎಂದು ಕೇಳಿದ. ಈ ಆಶ್ಚರ್ಯಕರವಾದ ಪ್ರಸಂಗವನ್ನು ನೋಡುವ ಕುತೂಹಲದಿಂದ ಪ್ರಯಾಣ ನಿಲ್ಲಿಸಿದೆ. ಮಧ್ಯಾಹ್ನ ಮೂರು ಗಂಟೆ ಹೊತ್ತಿಗೆ ಹೆಂಗಸರು ಗಂಡಸರು ಮಕ್ಕಳು ಊರಿನಿಂದ ಗುಂಪಾಗಿ ಹೊರಟರು. ಈ ಅಮಾನುಷ ಕೃತ್ಯದ ಪೂರ್ಣ ಪರಿಚಯ ಪಡೆಯುವ ಉದ್ದೇಶದಿಂದ ನಾನು ಕುದುರೆಯ ಮೇಲೆ ಅವರ ಹಿಂದೆಯೇ ಹೋದೆ. ಊರಿನಿಂದ ಅರ್ಧ ಮೈಲಿ ದೂರದಲ್ಲಿದ್ದ ಹಸಿರು ಬಯಲಿನಲ್ಲಿ ದೊಡ್ಡ ಚಿತೆಯನ್ನು ಸಿದ್ಧಪಡಿಸಿದ್ದರು. ಅದರ ಸುತ್ತ ಜನ ಮುತ್ತಿಕೊಂಡಿದ್ದರು. ನಾನು ಕುದುರೆಯ ಮೇಲೆ ಕುಳಿತು ಹತ್ತಿರ ಹೋಗಿ ಏನು ನಡೆಯುತ್ತಿದೆ ಎಂದು ನೋಡಿದೆ. ಸುಮಾರಾಗಿ ಉರಿಯುವ ಬೆಂಕಿಯ ಮೇಲೆ ಗಂಡಸಿನ ಹೆಣ ಇದ್ದುದನ್ನು ನೋಡಿದೆ. ಚಿತೆಯ ಸುತ್ತ ಸೌದೆ ಮುಂತಾದವುಗಳನ್ನು ಗುಡ್ಡೆಹಾಕಿ ಮಧ್ಯೆ ತಗ್ಗುಮಾಡಿದ್ದರು. ಇದಕ್ಕೆ ಬೆಂಕಿ ಹಚ್ಚಿದಾಗ ಸುತ್ತ ಇದ್ದವರೆಲ್ಲಾ ಎರಡು ಮೂರು ಗಜ ಹಿಂದೆ ಸರಿದರು. ಸಹಗಮನ ಮಾಡುವ ಹೆಂಗಸಿದ್ದ ಕಡೆ ನನ್ನ ಕುದುರೆ ನಡೆಸಿದೆ. ಆಕೆ ಬಹು ಸಂತೋಷವಾಗಿದ್ದಂತೆ ಕಂಡಿತು. ತೀರ ಹತ್ತಿರದಲ್ಲಿದ್ದ



ಸಹಗಮನ ಮಾಡುತ್ತಿರುವ ಸತಿ



ಸತಿಯಾಗಲು ಸಿದ್ಧಳಾದ ಮಹಿಳೆ

ನಾನು ಆಕೆಯನ್ನು ಕುರಿತು ಬ್ರಾಹ್ಮಣರ ಮಾತಿಗೇಕೆ ಮರುಳಾಗಿಬಿಟ್ಟೆ ಎಂದು ಕೇಳಿದೆ. ಇದನ್ನು ಕೇಳಿಸಿಕೊಂಡ ಬ್ರಾಹ್ಮಣರು ನನ್ನ ಮೇಲೆ ಸಿಟ್ಟಾದಂತೆ ಕಂಡಿತು. ಅವರು ಮಾತಾಡುವ ಮುನ್ನವೇ ಆಕೆ ಇದು ತನ್ನ ಬಾಳಿನಲ್ಲೇ ಅತ್ಯಂತ ಶುಭ ಘಳಿಗೆ ಎಂದು ಹೇಳಿಬಿಟ್ಟಳು. ಮತ್ತೇನನ್ನೊ ಆತುರಾತುರವಾಗಿ ಹೇಳಿದಳು. ಆಕೆ ಬಾರಿ ಉತ್ಸಾಹ ದಲ್ಲಿರುವಂತೆ ಕಂಡಿತು. ಬಹುಶಃ ಆಕೆಗೆ ಅಮಲು ಬರುವಂತೆ ಬ್ರಾಹ್ಮಣರು ಏನನ್ನೋ ತಿನ್ನಿಸಿರಬೇಕು. ಅಂತೂ ಆ ಬಡಪಾಯಿ ಹೆಂಗಸು ಬಹು ಹರುಷದಿಂದ ಕೈ ಎತ್ತಿ ಎಲ್ಲರಿಗೂ, ಮುಖ್ಯವಾಗಿ ಬ್ರಾಹ್ಮಣರಿಗೆ, ನಮಸ್ಕಾರ ಮಾಡಿದಳು. ನನ್ನ ಕಡೆಗೆ ಬಹು ಅಕ್ಕರೆಯಿಂದ ನೋಡಿ ಸೊಗಸಾಗಿ ಸಿಂಗರಿಸಿಕೊಂಡಿದ್ದ ಮುಡಿಯಿಂದ ಹಳದಿ ಮತ್ತು ಬಿಳಿಯ ಹೂಗಳನ್ನು ತೆಗೆದು ನನಗೆ ಕೊಟ್ಟಳು. ಹೀಗೆ ಮಾಡಿ ಆಕೆ ಅರಗಳಿಗೆಯಲ್ಲಿ ಬೆಂಕಿಗೆ ಹಾರಿಬಿಟ್ಟಳು. ಆಗ ನಾನಾ ವಾದ್ಯಗಳು ಭೋರ್ಗರೆದುವು; ಉಘೇ ಎಂದು ಜನ ಕೂಗಿದರು. ಆ ಕೂಗಿನ ಅಬ್ಬರದಲ್ಲಿ ಬೆಂಕಿಯಲ್ಲಿ ಬಿದ್ದ ಆ ಬಡಪ್ರಾಣಿಯ ಸಂಕಟದ ಕೂಗು ಕೇಳೀತೆ! ಸುತ್ತ ಮುತ್ತ ನಿಂತವರು ಆಕೆಯ ಮೇಲೆ ಒಣಗಿಸಿದ ಸೌದೆ, ಪುಳ್ಳೆ, ತುಪ್ಪ, ಎಣ್ಣೆ, ತೆಂಗಿನಗರಿ ಮುಂತಾದ ಧಗಧಗನೆ ಉರಿಯುವ ವಸ್ತುಗಳನ್ನು ಹಾಕಿದರು.

ಶ್ರೀಮಂತರಾದ ನಾಯಕರುಗಳು—ಹಿಂದೂ ಆಳರಸರನ್ನು ನಾಯಕರೆಂದು ಕರೆಯುತ್ತಾರೆ—ಸತ್ತಾಗ ಅವರೊಡನೆ ಅವರ ಉಪಪತ್ನಿಯರೂ ಚಿತೆಯನ್ನೇರುತ್ತಾರೆ. ಉದಾಹರಣೆಗೆ : ಮೈಲಾಪುರದ ಬಳಿಯಿದ್ದ ನಾಯಕನೊಬ್ಬ ನಾನು ಈಸ್ಟ್ ಇಂಡಿಯಾಕ್ಕೆ ಬಂದ ವರ್ಷ ಸತ್ತುಹೋದನು. ಆಗ ಅವನೊಡನೆ ಅವನ ಇಪ್ಪತ್ತೇಳು ಜನ ಉಪ ಪತ್ನಿಯರೂ ಸಹಗಮನ ಮಾಡಿದರು. ಅಯ್ಯೋ ಎಂತಹ ಕರಾಳಕೃತ್ಯ! ಇಂತಹ ಹೊಲಸು ಪದ್ಧತಿಯನ್ನು ಪಿಶಾಚಿಗಳಲ್ಲದೆ ಬೇರೆ ಯಾರುತಾನೆ ಆಚರಿಸಲು ಸಾಧ್ಯ! ಇಂತಹ ಕ್ರೂರ ಪದ್ಧತಿಯು ಹಿಂದೂನಾಯಕರುಗಳೂ ರಾಜರುಗಳೂ ಇರುವ ಕಡೆ ಗಳಲ್ಲೆಲ್ಲಾ ಇದೆ. ಆದರೆ ಮಹಮ್ಮದೀಯ ನವಾಬರುಗಳು ಇರುವ ಕಡೆ ಈ ಪದ್ಧತಿ ಅರ್ಧಕ್ಕರ್ಧ ಕಡಿಮೆಯಾಗಿದೆ. ಅವರು ಹೆಂಗಸರನ್ನು ಅದರಲ್ಲಿಯೂ ಅಂದ ಚೆಂದ ವಾಗಿರುವವರನ್ನು ಸಹಗಮನ ಮಾಡಬೇಡಿ, ನೆಂಟರಿಷ್ಟರನ್ನೂ ಬ್ರಾಹ್ಮಣರನ್ನೂ ಬಿಟ್ಟು ನಮ್ಮ ಕಡೆಗೆ ಬನ್ನಿ, ನಿಮ್ಮನ್ನು ನಾವು ಸುಖವಾಗಿ ನೋಡಿಕೊಳ್ಳುತ್ತೇವೆ ಎಂದು ಪುಸಲಾಯಿಸುತ್ತಾರೆ. ಆದರೆ ಯಾರನ್ನೂ ಬಲಾತ್ಕಾರಮಾಡುವಂತಿಲ್ಲ. ಏಕೆಂದರೆ, ಈ ಪದ್ಧತಿಯನ್ನು ಅನುಸರಿಸಲು ಮೊಗಲ್ ಚಕ್ರವರ್ತಿಗೂ ಅವನ ಅಮೀರರಿಗೂ ಕೈತುಂಬ ಕೊಟ್ಟು ಅನುಮತಿ ಪಡೆದುಕೊಂಡಿರುತ್ತಾರೆ. ಎಷ್ಟೋ ಹೆಂಗಸರಿಗೆ ಗಂಡನ ಚಿತೆಯಲ್ಲಿ ಬೀಳಲು ಇಷ್ಟವಿರುವುದಿಲ್ಲ. ಹೆತ್ತಮಕ್ಕಳನ್ನು ತೊರೆದು ಬೆಂಕಿಯಲ್ಲಿ ಬೀಳುವುದೆಂದರ ಯಾರಿಗೆ ತಾನೇ ಒಪ್ಪೀತು! ಆದರೆ ಆ ಪೈಶಾಚಿಕ ಬ್ರಾಹ್ಮಣರಿಗೆ ಇದು ಯಾವುದು ಗಮನವಿರುವುದಿಲ್ಲ. ಹೆಂಗಸರು ಒಪ್ಪದಿದ್ದರೂ ಬಲವಂತದಿಂದ ಬೆಂಕಿಯಲ್ಲಿ ಹಾಕಿ ಸುಟ್ಟುಬಿಡುತ್ತಾರೆ. ಒಮ್ಮೆ ಒಬ್ಬಳನ್ನು ಅವಳ ಇಷ್ಟಕ್ಕೆ ವಿರುದ್ಧವಾಗಿ ಬೆಂಕಿಯಲ್ಲಿ ಹಾಕಿದರು. ಅರಬರೆ ಉರಿಯಲ್ಲಿ ಬೆಂದ ಆಕೆ ತಪ್ಪಿಸಿಕೊಳ್ಳಲು ಯತ್ನಿಸಿದಳು. ಆದರೆ

ಆ ಪಾಪಿಗಳು ಬಿಡಬೇಕಲ್ಲ! ಉದ್ದವಾದ ಗಳುವಿನಿಂದ ಅವಳನ್ನು ಅದುಮಿ ಹಿಡಿದು ಆಕೆ ಬೆಂಕಿಯಲ್ಲಿ ಬೂದಿಯಾಗುವಂತೆ ಮಾಡಿದ್ದನ್ನು ನಾನೇ ಕಂಡೆ.

ಒಮ್ಮೆ ಹತ್ತು ವರ್ಷದ ಹುಡುಗಿಯೊಬ್ಬಳು ಇನ್ನೇನು ಬೆಂಕಿಗೆ ಬೀಳಬೇಕು. ಆಗ ಆಕೆಯನ್ನು ಇಂಗ್ಲಿಷ್ ನಾವಿಕರು ಆ ಪಿಶಾಚಿಗಳ ಕೈಯಿಂದ ಬಿಡಿಸಿ ಇಂಗ್ಲಿಷ್‌ನವರ ಮನೆಗೆ ಕರೆತಂದರು. ಮನೆಗೆ ಕರೆತಂದ ಮೇಲೆ ಆಕೆಗೆ ಜ್ಞಾನ ಬಂದು ತಾನು ಹೇಗೆ ಅಲ್ಲಿಗೆ ಬಂದೆ ಎಂದು ಆಶ್ಚರ್ಯಪಟ್ಟಳು. ಕಥೆಯನ್ನೆಲ್ಲಾ ಕೇಳಿದ ಮೇಲೆ ತಾನು ತನ್ನ ನೆಂಟರಿಷ್ಟರ ಮತ್ತು ಬ್ರಾಹ್ಮಣರ ಬೋಧನೆಗೆ ಒಳಗಾಗಿ ಸಹಗಮನ ಮಾಡಲು ತೀರ್ಮಾನಿಸಿದ್ದಾಗಿ ಹೇಳಿದಳು. ಕೆಲವು ದಿವಸಗಳನಂತರ ಆಕೆ ಕ್ರೈಸ್ತಮತಕ್ಕೆ ಸೇರಿ ಕೊಂಡಳು. ಆಕೆ ಆಮೇಲೆ ಮಸುಲಿಪಟ್ಟಣದ ಸಪ್ಮ್ಮ ಕಾರ್ಖಾನೆಯ ಇಂಗ್ಲಿಷಿನವರೊಡನೆ ಸುಖವಾಗಿ ಇರಲಾರಂಭಿಸಿದಳು.

ನಾನು ಹಿಂದೆ ಹೇಳಿದಂತೆ ಇಲ್ಲಿ ವಾಸಮಾಡುವ ಮಲಬಾರಿಗಳ (ಅಂದರೆ ಜೆಂಟೂಗಳ) ವಿಗ್ರಹಾರಾಧನೆ, ಭಾಷೆ, ಮುಂತಾದವುಗಳಲ್ಲಿ ತುಂಬಾ ವ್ಯತ್ಯಾಸವಿದೆ. ಇವರು ಬಹು ದಡ್ಡರೆಂದು ಹೇಳಬಹುದು. ಅಲ್ಲದೆ ಇವರಲ್ಲಿ ಒಳಜಾತಿಗಳೂ ಇವೆ. ಇವರು ತಮ್ಮದೇ ಆದ ವಿಗ್ರಹಗಳನ್ನು ಪೂಜಿಸುತ್ತಾರೆ. ಆದರೆ ಮಲಬಾರ್ ತೀರದಲ್ಲಿ— ಇದನ್ನು ಇಂಡಿಯಾದ ತೀರವೆಂದೂ ಕರೆಯುತ್ತಾರೆ—ವಾಸಮಾಡುವ ಮಲಬಾರಿಗಳು ಬಹು ಬುದ್ಧಿವಂತರಾದ ಜನ. ತಾವು ಗೆದ್ದುಕೊಂಡವರನ್ನು ತುಂಬಾ ಕ್ರೂರವಾಗಿ ಕಾಣುತ್ತಾರೆ. ಅದು ಬಿಟ್ಟರೆ ಇವರು ಶ್ರಮಜೀವಿಗಳು ಹಾಗೂ ಒಳ್ಳೆಯ ನಡತೆಯವರು. ವಣಿಜರ ಮನೆಗಾಗಲೀ ಜೆಂಟೂಗಳ ಮನೆಗಾಗಲೀ ಗುಡಿಗಳಿಗಾಗಲೀ ಇವರಿಗೆ ಪ್ರವೇಶ ವಿಲ್ಲ. ಇವರೆಲ್ಲರಿಗಿಂತ ಬೇರೆಯವರಾದ ಒಂದು ಬಗೆಯ ಜನರಿದ್ದಾರೆ. ಅವರನ್ನು 'ಪರಜ' (Paraja = ಪರಯು) ಎಂದು ಕರೆಯುತ್ತಾರೆ. ಇವರಿಗೆ ಮತಗಿತ ಯಾವುದೂ ಇಲ್ಲ. ಏನನ್ನೂ ಪೂಜಿಸುವುದಿಲ್ಲ. ಪ್ರಾಣಿಗಳಂತೆ ಹೇಗೋ ಕಾಲಹಾಕಿ ಕಂತೆಬಿಸಾಡುತ್ತಾರೆ. ಇಂಥದೇ ತಿನ್ನಬೇಕು. ತಿನ್ನಬಾರದು ಎಂಬುದಿಲ್ಲ. ಆದರೆ ಕೆಲವು ವಿಷಯಗಳಲ್ಲಿ ತುಂಬ ಕಟ್ಟುನಿಟ್ಟು. ಒಬ್ಬನಿಗೆ ಒಬ್ಬಳೇ ಹೆಂಡತಿ. ಹೆಂಡತಿ ಮಕ್ಕಳಿಗಾಗಿ ದುಡಿಯುತ್ತಾರೆ. ಬೇರೆಯವರಿಂದ ದೂರವಾಗಿ ಸಣ್ಣ ಗುಡಿಸಲುಗಳಲ್ಲಿ ವಾಸಮಾಡುತ್ತಾರೆ. ಈಚೆಗೆ ಇವರಲ್ಲಿ ಅನೇಕ ಜನರನ್ನು ಪೋರ್ಚುಗಲ್ ಪಾದ್ರಿಗಳೂ ಜೆಸೂಯಿಟರೂ ಕ್ರೈಸ್ತಮತಕ್ಕೆ ಸೇರಿಸಿಕೊಳ್ಳುತ್ತಿದ್ದಾರೆ.

'ಮೊಖುವಾ' (Moquae) ಎಂಬ ಇನ್ನೊಂದು ಜಾತಿಯ ಜನ ಇದ್ದಾರೆ. ಇವರು ಗಾರೆ ಕೆಲಸ, ಬಡಗಿ ಕೆಲಸ, ಮೀನುಗಾರಿಕೆ ಇಂಥ ಕೂಲಿ ಕೆಲಸಗಳನ್ನು ಮಾಡಿ ಕೊಂಡು ಜೀವಿಸುತ್ತಾರೆ. ಹಡಗುಗಳಿಗೆ ಸಾಮಾನು ತುಂಬುವುದು, ಅವುಗಳಿಂದ ಇಳಿಸುವುದು ಈ ಕೆಲಸವನ್ನೂ ಮಾಡುತ್ತಾರೆ. ಇಲ್ಲಿಯ ಹಡಗುಗಳಿಗೆ ಮರವನ್ನು ಉಪಯೋಗಿಸದೆ ತೆಂಗಿನನಾರಿನ ಹಗ್ಗದಿಂದ ಹಲಗೆಗಳನ್ನು ಹೊಲಿದು ಹಗುರವಾಗಿ

ಮಾಡಿರುತ್ತಾರೆ. ಇಂತಹ ಹಡಗಿನ (ದೋಣಿಯ) ಚಿತ್ರ ಬರೆದಿದ್ದೇನೆ ನೋಡಿ. ಇಲ್ಲಿಯ ಸಮುದ್ರದ ಏರಿಳಿತಕ್ಕೆ ಅನುಕೂಲವಾಗುವಂತಹ 'ಮಸ್ಸೂಲಾ' ಎಂಬ ಇನ್ನೊಂದು ಬಗೆಯ ದೋಣಿಗಳೂ ಇವೆ. ಸಣ್ಣ ಪುಟ್ಟ ಸಾಮಾನುಗಳನ್ನು ಸಾಗಿಸುವುದಕ್ಕಷ್ಟೇ ಇವನ್ನು ಉಪಯೋಗಿಸುತ್ತಾರೆ. ಭಾರಿ ಭಾರಿಯಾದ ಹೇರನ್ನು ಸಾಗಿಸಲು 'ಕಟ್ಟಮರನ್' ಎಂಬ ತೆಪ್ಪಗಳನ್ನು ಉಪಯೋಗಿಸುತ್ತಾರೆ. ನಾಲ್ಕಾರು ಮರದ ದಿಮ್ಮಿಗಳನ್ನು ಕಟ್ಟಿ ಮಾಡಿದ್ದೇ ಅದು. ಮೂರು ನಾಲ್ಕು ಟನ್ ಭಾರದ ಸಾಮಾನುಗಳನ್ನು ಅದರ ಮೇಲೆ ಸಾಗಿಸುತ್ತಾರೆ. ಇನ್ನು ಮೀನು ಹಿಡಿಯಲು ಬಹು ಸಣ್ಣ ದೋಣಿಗಳನ್ನು ಉಪಯೋಗಿಸುತ್ತಾರೆ. ಮೂರು ನಾಲ್ಕು ಜನರಷ್ಟೇ ಕುಳಿತುಕೊಳ್ಳುವಂತಹ ಈ ದೋಣಿಗಳಲ್ಲಿ ಕುಳಿತು ಮೀನು ಹಿಡಿಯಲು ಹೋಗುತ್ತಾರೆ. ಒಮ್ಮೊಮ್ಮೆ ಒಬ್ಬನೇ ಕುಳಿತು ಧೈರ್ಯದಿಂದ ಸಮುದ್ರದ ಮೇಲೆ ಹೊರಟು ಅರಗಳಿಗೆಯಲ್ಲಿ ಕಣ್ಮರೆಯಾಗಿಬಿಡುತ್ತಾನೆ. ಇವರು ಸ್ಪ್ಯಾನಿಯೆಲ್ ನಾಯಿಯಂತೆ ಈಜಬಲ್ಲರು. ಪಶ್ಚಿಮದಿಂದ ಬಿರುಗಾಳಿ ಬೀಸುತ್ತಿದ್ದರೂ ಇವರು ಸಮುದ್ರದ ಮೇಲೆ ಒಂದು ಹರಿದಾರಿಗಿಂತಲೂ ಹೆಚ್ಚು ದೂರದಲ್ಲಿ ಕಟ್ಟಮರನ್ ಮೇಲೆ ಧೈರ್ಯದಿಂದ ಕುಳಿತಿದ್ದುದನ್ನು ನಾನು ನೋಡಿದ್ದೇನೆ. ಒಂದು ಹಗ್ಗಕ್ಕೆ ಕಲ್ಲು ಕಟ್ಟಿ ನೀರಿನಲ್ಲಿ ಇಳಿಯಬಿಟ್ಟು ನಿಶ್ಚಿಂತೆಯಾಗಿ ಕುಳಿತುಬಿಡುತ್ತಾರೆ. ಸಮುದ್ರದ ಅಲೆ ಅಥವಾ ಬಿರುಗಾಳಿಯ ಲೆಕ್ಕವಿಲ್ಲದೆ ಈಜಾಡಬಲ್ಲರು. ಸೆಂಟ್ ಜಾರ್ಜ್ ಕೋಟೆಗೆ ಹತ್ತಿರವಿರುವ ಎನ್ನೋರಿನ ಒಬ್ಬ ಮಲಬಾರಿ ನಾಲ್ಕು ಹಗಲು ನಾಲ್ಕು ರಾತ್ರಿ ಸಮುದ್ರದ ಮೇಲಿದ್ದು ದಿಕ್ಕೆಡದೆ ಸಾಹಸದಿಂದ ತೀರವನ್ನು ತಲುಪಿದ್ದನ್ನು ನಾನೇ ನೋಡಿದ್ದೇನೆ.

ಫೋರ್ಟ್ ಸೆಂಟ್ ಜಾರ್ಜ್‌ನಿಂದ ಆರುಮೈಲಿ ದೂರದಲ್ಲಿ ಸೆಂಟ್ ಥಾಮಸ್ ಮೌಂಟ್ ಎಂಬ ಬೆಟ್ಟ ಇದೆ. ಇದು ಕ್ರೈಸ್ತರಿಗೆ ತುಂಬ ಪವಿತ್ರವಾದ ಸ್ಥಳ. ಬೆಟ್ಟದ ಮೇಲೆ ವರ್ಷವೆಲ್ಲಾ ಹಸುರಾಗಿರುವ ಒಂದು ಮರ (Arbor Triste) ಇದೆ. ಇದರ ಹೂಗಳು ರಾತ್ರಿ ಹೊತ್ತು ಮಾತ್ರ ಅರಳುತ್ತದೆ. ಹಗಲಾದ ಕೂಡಲೇ ಉದುರಿ ಹೋಗುತ್ತವೆ; ಎಲೆಗಳು ಮುದುಡಿಕೊಳ್ಳುತ್ತವೆ.

ಮಾವಿನ ಹಣ್ಣು ಬಹು ರುಚಿ. ತಾಳೆಮರದಿಂದ ಮದ್ಯ ತೆಗೆಯುತ್ತಾರೆ. ಈಗ ಇದನ್ನು 'ಟಾಡಿ' (Toddy = ಹೆಂಡ) ಎಂದು ಕೀಳಾಗಿ ಕರೆಯುತ್ತಾರೆ. ಈಚಲುಮರದಿಂದಲೂ ಹೆಂಡ ಇಳಿಸುತ್ತಾರೆ. ಆದರೆ ತಾಳೆಮರದ ಹೆಂಡದಷ್ಟು ಒಳ್ಳೆಯದಲ್ಲ. ಆದರೆ ಹೆಚ್ಚು ರುಚಿ. ಕುಡಿಯಲು ಆಸೆಯಾಗುತ್ತದೆ. ಈಚಲಮರದಲ್ಲಿ ಖರ್ಜೂರದಂತಹ ಹಣ್ಣುಬಿಡುತ್ತದೆ. ಆದರೆ ಹಣ್ಣು ಅಷ್ಟು ರುಚಿಯಿಲ್ಲ.

ಸೆಂಟ್ ಜಾರ್ಜ್ ಕೋಟೆಯಿಂದ ಉತ್ತರಕ್ಕೆ ಇಪ್ಪತ್ತೆರಡು ಮೈಲಿ ದೂರದಲ್ಲಿ ಡಚ್ಚರಿಗೆ ಸೇರಿದ ಪುಲಿಕಾಟ್ ಎಂಬ ಕೋಟೆ ಇದೆ. ಇದು ಒಂದು ಒಳ್ಳೆಯ ನದಿಯ ದಂಡೆಯ ಮೇಲಿರುವುದರಿಂದ ಹಡಗಿಗೆ ಸರಕುಗಳನ್ನು ಇಳಿಸಲೂ ತುಂಬಲೂ ಅನುಕೂಲವಾಗಿದೆ.

ಸೇಂಟ್ ಜಾರ್ಜ್‌ನ್ನು ಬಿಟ್ಟರೆ ಎರಡನೆಯ ಇಂಗ್ಲಿಷ್ ಗಡಂಗು ಎಂದರೆ 'ಪೆಟ್ಟಿ ಪೋಲಿ'ಯಲ್ಲಿರುವ ಗಡಂಗು. ಇದು ಬಹು ಆಹ್ಲಾದಕರವೂ ಆರೋಗ್ಯದಾಯಕವೂ ಆದ ಊರು. ಇಲ್ಲಿ ಬಹು ಜನ ಜೆಂಟೂಗಳು ವಾಸಮಾಡುತ್ತಾರೆ. ಇವರಲ್ಲಿ ಅನೇಕರು ಶ್ರೀಮಂತರು. ಇಲ್ಲಿ ಇಂಗ್ಲಿಷರ ಗಡಂಗು ಅಲ್ಲದೆ ಡಚ್ಚರ ಗಡಂಗೂ ಇದೆ. ಆದರೆ ದಲ್ಲಾಳಿಗಳು ಹೆಚ್ಚಾಗಿ ಇಲ್ಲ. ಇಲ್ಲಿ 'ಸಾಲಂಪೋರು', 'ಮೆರ್ರಿಲುಂಗಿ', ಬಣ್ಣ ಬಣ್ಣದ ಕ್ಯಾಲಿಕೊ ಬಟ್ಟೆಗಳು, ಪೆಟ್ಲುಪ್ಪು, ಕಬ್ಬಿಣ ಮತ್ತು ಉಕ್ಕುಗಳನ್ನು ವಿದೇಶಿ ವರ್ತಕರಿಗೆ ಮಾರುತ್ತಾರೆ. ಕಬ್ಬಿಣ ಮತ್ತು ಉಕ್ಕು ಒಳನಾಡಿನಲ್ಲಿರುವ ಮೊಂಟಪೋಲಿ (ಮೋಟಪಳ್ಳಿ)ಯಿಂದ ಇಲ್ಲಿಗೆ ಬರುತ್ತವೆ.

ಪೆಟ್ಟಿಪಳ್ಳಿಯ ಕಣಿವೆ ಪ್ರದೇಶಗಳಲ್ಲಿ ಬಿಳಿ ಉಪ್ಪನ್ನು ಬಹು ಸುಲಭವಾದ ರೀತಿಯಲ್ಲಿ ತಯಾರಿಸುತ್ತಾರೆ. ಉಪ್ಪು ನೀರು ಇರುವ ಕಡೆ ಒಂದು ಪಾತಿ ಮಾಡಿ, ಒಂದು ಅಡಿ ನೀರು ನಿಲ್ಲಿಸಿದರೆ ಅದು ಒಣಗಿ ಉಪ್ಪಾಗುತ್ತದೆ. ಅನಂತರ ಅದನ್ನು ದೊಡ್ಡ ದೊಡ್ಡ ಗುಪ್ಪೆಗಳನ್ನಾಗಿ ಮಾಡಿ ರಾಜ್ಯಗಳಲ್ಲೆಲ್ಲಾ ಮಾರುತ್ತಾರೆ. ರಾಜನನ್ನು ಬಿಟ್ಟರೆ ಬೇರೆಯವರಿಗೆ ಇದನ್ನು ಮಾರುವ ಹಕ್ಕಿಲ್ಲ. ಹಾಗೆಯೇ ಅರಗನ್ನು ಸಹ. ಉಪ್ಪಿನಿಂದ ರಾಜನ ಭಂಡಾರಕ್ಕೆ ವರ್ಷಕ್ಕೆ ಇಪ್ಪತ್ತುಲಕ್ಷ ಹಳೇ ಪಗೋಡಾಗಳಷ್ಟು ಆದಾಯ ಬರುತ್ತದೆ ಎಂದು ಖಚಿತವಾಗಿ ತಿಳಿದುಬಂದಿತು.

ನಾನು ಕ್ರಿ.ಶ. ೧೬೭೯ರಲ್ಲಿ ಸೇಂಟ್ ಜಾರ್ಜ್‌ನಿಂದ ಮಸುಲೀಪಟ್ಟಣಕ್ಕೆ ಹೋಗುವಾಗ ಪೆಟ್ಟಿಪಳ್ಳಿಗೆ ಬಂದು ಇಲ್ಲಿಯ ಇಂಗ್ಲಿಷ್ ಕಂಪೆನಿಯ ಮುಖ್ಯಾಧಿಕಾರಿಯಾದ ಅಂಬ್ರೋಸ್ ಸಾಲಿಸ್‌ಬರಿಯವರು ಹೊಸದಾಗಿ ಕಟ್ಟಿಸಿರುವ ಮನೆಯಲ್ಲಿ ಇಳಿದುಕೊಂಡೆ. ಅವರು ನನ್ನನ್ನೂ ನಮ್ಮ ಕಡೆಯವರನ್ನೂ ತುಂಬಾ ಮರ್ಯಾದೆಯಿಂದ ಕಂಡರು. ರಾತ್ರಿ ಹೊರಡುವುದಕ್ಕೇ ಬಿಡಲಿಲ್ಲ. ಆದ್ದರಿಂದ ರಾತ್ರಿಯೆಲ್ಲ ಅವರ ಮನೆಯಲ್ಲಿದ್ದು ಬೆಳಿಗ್ಗೆ ಹೊರಟೆ. ಆಗಲೂ ಬಿಡದೆ ಊರು ನೋಡಿಕೊಂಡು ಹೋಗು ಎಂದರು. ನಾನು ಹಾಗೆಯೇ ಮಾಡಿ ಊಟವಾದ ಮೇಲೆ ಹೊರಟೆ. ಇಲ್ಲಿ ಬಗೆ ಬಗೆಯ ಆಹಾರವಸ್ತುಗಳು ಹೇರಳವಾಗಿಯೂ ಅಗ್ಗವಾಗಿಯೂ ಸಿಕ್ಕುತ್ತವೆ. ಹಸು, ಎಮ್ಮೆ, ಹಂದಿ, ಬಗೆಬಗೆಯ ಕೋಳಿ, ಕಾಡುಕೋಳಿ, ಬಹು ರುಚಿಯಾದ ಸಮುದ್ರದ ಮೀನು ಮತ್ತು ನದಿಯ ಮೀನು, ಎಲ್ಲಕ್ಕಿಂತ ಹೆಚ್ಚಾಗಿ ಜಿಂಕೆ, ಮೊಲ, ಸಾರಗ ಮತ್ತು ಹಂದಿಮಾಂಸ ಸಿಕ್ಕುತ್ತವೆ. ಇವನ್ನೆಲ್ಲಾ ಮಹಮ್ಮದೀಯರಿಗೂ ಕ್ರೈಸ್ತರಿಗೂ ಅಂದರೆ ಇಂಗ್ಲಿಷರು ಹಾಗೂ ಡಚ್ಚರುಗಳಿಗೆ, ತಂದು ಮಾರುತ್ತಾರೆ. ಅಕ್ಕಿ, ತುಪ್ಪ, ಎಣ್ಣೆ, ಹಣ್ಣು ಮುಂತಾದವುಗಳನ್ನೂ ಜೆಂಟೂಗಳು ಅಗ್ಗವಾಗಿ ಮಾರುತ್ತಾರೆ.

ನಾನು ಈ ಊರಿನಲ್ಲಿ ತಂಗಿದ್ದ ವೇಳೆ ಯೂರೋಪಿನಿಂದ ಒಬ್ಬ ಹೊಸ ಮನುಷ್ಯ ಬಂದಿದ್ದಾನೆಂಬ ಸುದ್ದಿ ಕೇಳಿದ ಹಾವಾಡಿಗರು ಹಾವುಗಳನ್ನು ಆಡಿಸಿ ತೋರಿಸುತ್ತೇವೆಂದು ಹೇಳಿದರು. ಆಗಲಿ ಎಂದೆ. ಹಾವು ಆಡಿಸಿ ನಾಲ್ಕು ಕಾಸು ಸಂಪಾದಿಸಿ ಜೀವನ ಸಾಗಿಸು

ವುದೇ ಕೆಲವರ ಕಸುಬು. ಇವರು ತಾವು ತಂದ ನಾಲ್ಕೈದು ಬುಟ್ಟಿಗಳನ್ನು ತೆಗೆದರು. ದೊಡ್ಡ ದೊಡ್ಡ ಹಾವುಗಳು ಹೊರಗೆ ಬಂದುವು. ಅವುಗಳನ್ನು ಆಡಿಸಲು ಮೂರು ನಾಲ್ಕು ಜನ ತಂತಿವಾದ್ಯಗಳನ್ನು ಬಾರಿಸಲಾರಂಭಿಸಿದರು. ಒಬ್ಬನು ತನ್ನ ತಂತಿವಾದ್ಯವನ್ನು ಹಾವುಗಳ ಮುಂದೆ ಬಾರಿಸಿದಾಗ ಅವು ಅವನನ್ನು ಕಚ್ಚುವಂತೆ ಹೋದುವು. ಆದರೆ ಅವನು ಬಾಯಲ್ಲಿ ಏನೋ ಹೇಳುತ್ತ ನೆಲದ ಮೇಲೆ ಕುಳಿತುಕೊಂಡು ವಾದ್ಯ (ಪುಂಗಿ) ಬಾರಿಸಲಾರಂಭಿಸಿದ. ಆ ನಾದಕ್ಕೆ ಆ ವಿಷಸರ್ಪಗಳು ತಲೆದೂಗಲಾರಂಭಿಸಿದುವು. ನಮಗೆ ಖುಷಿಯಾಯಿತು ಎಂದು ಗೊತ್ತಾದ ಮೇಲೆ ಆ ಹಾವುಗಳನ್ನು ಮತ್ತೆ ಬುಟ್ಟಿಯಲ್ಲಿ ಹಾಕಿದರು. ಈ ವಿಷದ ಹಾವುಗಳಿಂದ ರಾಜ ಮಹಾರಾಜರುಗಳು ತಮ್ಮ ಖೈದಿಗಳನ್ನು ಕಚ್ಚಿಸಿ ಪ್ರಾಣ ತೆಗೆಯುತ್ತಾರಂತೆ.

ಮಹಮ್ಮದೀಯರ ಭಾಷೆಯಲ್ಲಿ ಮಸುಲಿಪಟ್ಟಣ (ಮಚ್ಛಲಿ) ಎಂದರೆ 'ಮೀನಿನ ಪಟ್ಟಣ'ಎಂದರ್ಥ. ಮಚಲಿ ಎಂದರೆ ಮೀನು. ಇಲ್ಲಿ ಹೇರಳವಾಗಿ ಮೀನು ಸಿಕ್ಕುತ್ತಿದ್ದುದರಿಂದ ಈ ಹೆಸರು ಬಂದಿದೆ. ಈಗ ಅಷ್ಟು ಸಿಕ್ಕುತ್ತಿಲ್ಲ. ಆದರೂ ಈ ಊರು ಚೋಳ ಮಂಡಲ ತೀರದಲ್ಲೇ ಭಾರಿ ವ್ಯಾಪಾರ ನಡೆಸುವ ಊರಾಗಿದೆ. ಜನಭರಿತವಾದ ಈ ಊರಿನಲ್ಲಿ ಅನೇಕ ಅನೇಕ ಕ್ರೈಸ್ತರೂ ನೆಲಸಿದ್ದಾರೆ. ಊರಿನ ಮಧ್ಯೆ ಇಂಗ್ಲಿಷರ ಮತ್ತು ಡಚ್ಚರ ಗಡಂಗುಗಳಿವೆ. ಇವರು ಗೋಲ್ಕೊಂಡ ರಾಜನಿಂದ ಪರವಾನಗಿ ಪಡೆದು ತಮ್ಮ ತಮ್ಮ ಗಡಂಗುಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಇಂಗ್ಲಿಷರೂ ಡಚ್ಚರೂ ಬೇರೆಯವರು ಕೊಡುವ ಸುಂಕದಲ್ಲಿ ಅರ್ಧ ಮಾತ್ರ ಕೊಡುತ್ತಾರೆ.

ಇಲ್ಲಿ ಕಟ್ಟಿರುವ ಸೇತುವೆಯಿಂದಲೂ ಈ ಊರು ಹೆಸರಾಗಿದೆ. ಇಲ್ಲಿ ಹರಿಯುವ ನದಿಯನ್ನು ದಾಟಲು ಮೊದಲು ತುಂಬಾ ಕಷ್ಟವಾಗಿತ್ತು. ಆದರೆ ಗೋಲ್ಕೊಂಡಾ ರಾಜನೊಬ್ಬ ಈ ಸೇತುವೆ ಕಟ್ಟಿಸಿದ ಮೇಲೆ ತೊಂದರೆ ತಪ್ಪಿತು. ಈ ಸೇತುವೆಗೆ "ಗುಡ್ಡೋರ ಸೇತುವೆ" ಎಂದು ಹೆಸರು. ಏಕೆಂದರೆ ಇದು ಮಚಲಿ ಪಟ್ಟಣದ ಹೆಬ್ಬಾಗಿಲಿನಿಂದ ಗುಡ್ಡೊರಾದವರೆಗೆ (ಗುಂಡೋರ್ ವರೆಗೆ) ಒಂದು ಮೈಲಿ ಉದ್ದವೂ ಸಾಕಷ್ಟು ಅಗಲವೂ ಇದೆ. ಈ ಎರಡು ಪಟ್ಟಣಗಳಲ್ಲಿ ಇಟ್ಟಿಗೆ ಮತ್ತು ಕಲ್ಲಿನಿಂದ ಕಟ್ಟಿದ ಭವ್ಯವಾದ ಗೃಹಗಳಿವೆ. ಆದರೆ ಬೀದಿಗಳು ತುಂಬ ಇಕ್ಕಟ್ಟು. ಸ್ವಲ್ಪ ದೂರದಿಂದ ನೋಡುವುದಕ್ಕೆ ಮನೆಗಳು ದೊಡ್ಡದಾಗಿ ಕಾಣುತ್ತವೆ. ಆದರೆ ಅವು ನಾಲ್ಕಾರು ಅಂತಸ್ತುಗಳ ಮನೆಗಳಾದ್ದರಿಂದಲೂ, ಬೀದಿಗಳು ಬಹು ಕಿರಿದಾಗಿರುವುದರಿಂದಲೂ ವರ್ಷದಲ್ಲಿ ಕೆಲವು ಕಾಲ ಆಗುವ ಶೆಖೆಯನ್ನು ತಡೆಯುವುದಕ್ಕಾಗುವುದಿಲ್ಲ. ಗಾಳಿ ಬರಲು ಕಿಟಕಿಗಳೇ ಇಲ್ಲ. ಸಣ್ಣ ಸಣ್ಣ ಕೋಣೆಗಳಿದ್ದರೆ ಒಂದೊ ಎರಡೊ ಮನೆಯೊಳಗಿರುವ ಮಹಮ್ಮದೀಯ ಹೆಂಗಸರು ಬೀದಿಯಲ್ಲಿ ಹೋಗುವವರನ್ನು ನೋಡಬಾರದೆಂದು ಹೀಗೆ ಮಾಡಿದ್ದಾರೆ. ಹೆಂಗಸರು ಮನೆ ಬಿಟ್ಟು ಹೊರಗೆ ಬರುವಂತಿಲ್ಲ. ಹೀಗಾಗಿ ಹತ್ತು ಹನ್ನೊಂದು ವರ್ಷ ವಯಸ್ಸಾದ ಮೇಲೆ ಹೆಣ್ಣುಮಕ್ಕಳು

ಗಂಡನನ್ನು ಬಿಟ್ಟು ಬೇರೆಯುವರ ಮುಖ ನೋಡುವಂತಿಲ್ಲ. ಆಕಸ್ಮಾತ್ ನೋಡಿದರೆ ತುಂಬ ಸಂತೋಷಪಡುತ್ತಾರೆ. ಅನುಕೂಲಸ್ಥರು ತಮ್ಮ ಹೆಂಡತಿಯರನ್ನೂ ಇಟ್ಟು ಕೊಂಡವರನ್ನೂ ನೋಡಿಕೊಳ್ಳಲು ಖೋಜಾಗಳನ್ನೋ ಹಲವಾರು ಹೆಂಗಸರನ್ನೋ ಅಥವಾ ಚಿಕ್ಕ ಹುಡುಗರು ಹುಡುಗಿಯರನ್ನೋ ನೇಮಿಸಿಕೊಳ್ಳುತ್ತಾರೆ. ಹೆಂಡತಿಯರಿಗೆ ಮನೆಯಲ್ಲಿ ಏನೂ ಕೆಲಸ ಇರುವುದಿಲ್ಲ. ಗಂಡನನ್ನು ನೋಡಿಕೊಳ್ಳುವುದು ಅಥವಾ ಮಕ್ಕಳನ್ನು ಆರೈಕೆ ಮಾಡುವುದು ಅಷ್ಟೇ ಕೆಲಸ.

ಮಚಲೀ ಪಟ್ಟಣದಲ್ಲಿ ಫ್ರೆಂಚರಿಗೆ ಸೇರಿದ ಒಂದು ಗಡಂಗು ಇತ್ತು. ಆದರೆ ಸೇಂಟ್ ಜಾರ್ಜ್‌ನಲ್ಲಿ ಫ್ರೆಂಚರಿಗೂ ಮೂರರಿಗೂ (ಮುಹಮ್ಮದೀಯರಿಗೂ) ಆದ ಜಗಳದ ಕಾರಣ ಫ್ರೆಂಚರನ್ನು ಮೂರರು ಅಲ್ಲಿಂದ ಓಡಿಸಿದ್ದಲ್ಲದೆ ನರಸಾಪುರಕ್ಕೆ ನುಗ್ಗಿ ಅಲ್ಲಿದ್ದ ಫ್ರೆಂಚರ ತಲೆಗಳನ್ನು ಗಡಂಗಿನ ಹೊಸ್ತಿಲ ಮೇಲೆ ಕಡಿದುಹಾಕಿದರು. ಎಷ್ಟೇ ಕೇಳಿಕೊಂಡರೂ ಮೂರರು ಬಿಡಲಿಲ್ಲ. ಈ ರಕ್ತಪಾತವನ್ನು ನಾನೇ ನನ್ನ ಕಣ್ಣಿಂದ ನೋಡಿದೆ. ಆಮೇಲೆ ಹೆಣಗಳನ್ನು ತೆಗೆದುಕೊಂಡು ಹೋಗಿ ಹೂಳುವುದಕ್ಕೆ ನಾನೇ ಏರ್ಪಾಟು ಮಾಡಿದೆ. ಈ ಕೃತ್ಯದಲ್ಲಿ ಡಚ್ಚರು ಮೂರರ ಕಡೆ ಸೇರಿಕೊಂಡಿದ್ದರು. ಮಚಲೀ ಪಟ್ಟಣದಲ್ಲಿದ್ದ ಫ್ರೆಂಚರ ಮುಖ್ಯಸ್ಥನನ್ನು ಕಡಿದುಹಾಕಿದರು. ಉಳಿದವರು ಸಮುದ್ರ ಮೇಲೆ ತಪ್ಪಿಸಿಕೊಂಡರು.

ಮಚಲಿ ಪಟ್ಟಣದಲ್ಲಿ ಒಳ್ಳೊಳ್ಳೆಯ ಸರಕುಗಳು ದೊರಕುತ್ತವೆ. ಅಂದ ಚಂದದ ಬಣ್ಣ ಅಥವಾ ಬಣ್ಣವಿಲ್ಲದ ಕ್ಯಾಲಿಕೋ ಬಟ್ಟೆಗಳು, ಅದರಲ್ಲಿಯೂ ಹಾಸಿಗೆಯ ಹಾಸು ಗಳು, ಚಿತ್ರವಿಚಿತ್ರ ಹೂವುಗಳುಳ್ಳ ಚೀಟಿ ಬಟ್ಟೆಗಳು, ಎಬೊನಿ ಮರದಿಂದ ಮಾಡಿದ ಕುರ್ಚಿ ಮೇಜುಗಳು, ಎಳೆಯುವ ಖಾನಿಗಳುಳ್ಳ ಪೆಟಾರಿಗಳು, ಚಿಪ್ಪು ಅಥವಾ ದಂತ ವನ್ನು ಹದ್ದಿರುವ ಸುಂದರವಾದ ಬರವಣಿಗೆಯ ಮೇಜುಗಳು—ಇವೆಲ್ಲಾ ಇಲ್ಲಿ ಸಿಕ್ಕುವ ಸಾಮಾನುಗಳು. ಇವು ಇಂಡಿಯಾ ದೇಶದ ಇತರ ಭಾಗಗಳಿಗೂ, ಪರ್ಷಿಯಾ, ಅರೇಬಿಯಾ, ಚೀನಾ, ದಕ್ಷಿಣ ಸಮುದ್ರದ ದೇಶಗಳಿಗೂ ರವಾನಿಸಲ್ಪಡುತ್ತವೆ. ಅನೇಕ ಮೂರ್ ವರ್ತಕರೂ ಪರ್ಷಿಯಾದ ವರ್ತಕರೂ ಮತ್ತು ಜೆಂಟೂ ವರ್ತಕರೂ ಇಲ್ಲಿ ನೆಲೆಸಿ ಭಾರಿ ಹಡಗಿನ ವ್ಯಾಪಾರ ನಡೆಸುತ್ತಾರೆ.

ಗೋಲ್ಕೊಂಡಾ ರಾಜನು ಹಲವಾರು ಹಡಗುಗಳ ಒಡೆಯ. ಈ ಹಡಗುಗಳನ್ನು ಪ್ರತಿವರ್ಷ ಅರಕಾನ್, ತೆನ್ನಾಸರಿ, ಸಿಲೋನ್ ದೇಶಗಳಿಗೆ ಕಳುಹಿಸಿ ಆನೆಗಳನ್ನು ಕೊಂಡು ತರುತ್ತಾರೆ. ಆನೆಗಳನ್ನು ಹಡಗಿನಲ್ಲಿ ಸಾಗಿಸುವ ವೇಳೆ ಒಂದೊಂದು ಆನೆಗೆ ಕನಿಷ್ಠಪಕ್ಷ ಎಪ್ಪತ್ತು ಬಾಳೆಗಿಡಗಳನ್ನು ಮೇವಿಗಾಗಿ ಇಟ್ಟಿರುತ್ತಾರೆ. ಒಮ್ಮೊಮ್ಮೆ ನೂರು ಬಾಳೆ ಗಿಡಗಳಾದರೂ ಬೇಕಾಗುತ್ತದೆ. ಆನೆಗಳಿಗೆ ಸಮುದ್ರದ ನೀರು ಕುಡಿಸದೆ ರಸವತ್ತಾದ ಈ ಬಾಳೆಗಿಡಗಳನ್ನು ತಿನ್ನಿಸಿ ಅವುಗಳ ದಾಹ ಇಂಗುವಂತೆ ಮಾಡುತ್ತಾರೆ. ಕೆಲವು ವೇಳೆ ಆನೆಗಳು ತಿಂಗಳುಗಟ್ಟಲೆ ಹಡಗಿನಲ್ಲಿ ಇರಬೇಕಾಗುತ್ತದೆ. ಆದರೂ ಅವು ಸುಖವಾಗಿ



ಪಟ್ಟದ ಆನೆ

ಬಂದದ್ದುಂಟು. ಒಮ್ಮೊಮ್ಮೆ ಅವು ಹತೋಟಿ ತಪ್ಪುವುದುಂಟು. ಒಂದು ಸಲ ಬಂಗಾಳದ ಒಬ್ಬ ಭಾರಿ ವರ್ತಕನಿಗೆ ಸೇರಿದ ಹಡಗಿನಲ್ಲಿದ್ದ ಆನೆ ಹತೋಟಿ ಮೀರಿ ತನ್ನ ಕೋರೆದಾಡೆಗಳಿಂದ ಹಡಗನ್ನೇ ಅಪ್ಪಳಿಸಿತು. ಹಡಗಿನಲ್ಲಿದ್ದವರು ಓಡಿಹೋಗಿ ಬೇರೊಂದು ಹಡಗನ್ನು ಸೇರಿಕೊಳ್ಳಬೇಕಾಯಿತು. ಈ ಆನೆ ಒಬ್ಬ ಪೋರ್ಚುಗೀಸನಿಗೆ ಸೇರಿತ್ತು. ಪ್ರಾಣಿಗಳಲ್ಲೆಲ್ಲಾ ಅತ್ಯಂತ ಸೂಕ್ಷ್ಮವಾದ ಪ್ರಾಣಿಯೆಂದರೆ ಆನೆ.

ಮಚಲಿಪಟ್ಟಣದ ನಿವಾಸಿಗಳಲ್ಲಿ ಬಹು ಮಂದಿ ಮೂರರು ಅಂದರೆ ಮುಸಲ್ಮಾನರು ಹಾಗು ಪರ್ಷಿಯನರು. ಇವರು ಪುಕ್ಕಲರಾದ ಜೆಂಟೂಗಳ ಮೇಲೂ ಮಲಬಾರಿಗಳ ಮೇಲೂ ಸವಾರಿಮಾಡುತ್ತ ಬಿಂಕದಿಂದ ಮೆರೆಯುತ್ತಾರೆ.

ಪೂರ್ವ ಇಂಡಿಯಾ ಮದ್ಯವೆಂದು ಹೆಸರು ಪಡೆದ ಸಾರಾಯಿಯನ್ನು ಜೆಂಟುಗಳೂ ಇಲ್ಲಿ ಹೇರಳವಾಗಿ ತಯಾರಿಸಿ ಮಾರಾಟಮಾಡುತ್ತಾರೆ. ಆದರೆ ಮಹಮ್ಮದೀಯರು ಅದನ್ನಾಗಲೀ ಬೇರೆ ಮದ್ಯವನ್ನಾಗಲೀ ಬಹಿರಂಗವಾಗಿ ಮುಟ್ಟುವುದಿಲ್ಲ. ಆದರೆ ಗುಟ್ಟಿನಲ್ಲಿ ಮತ್ತು ಬರುವ ಪಾನೀಯಗಳನ್ನು ಕುಡಿಯುತ್ತಾರೆ. ಅಲ್ಲದೆ ಭಂಗಿ ಮತ್ತು ಗಾಂಜಾಗಳನ್ನು ಸೇದುತ್ತಾರೆ. ಸಾರಾಯಿಯನ್ನು ಅಕ್ಕಿಯಿಂದಲೂ ಬೆಲ್ಲದಿಂದಲೂ ತಯಾರಿಸುತ್ತಾರೆ. 'ನೀಪ್' (neep) ಹೆಂಡದಿಂದಲೂ ತಯಾರಿಸುತ್ತಾರೆ. ಇದನ್ನು ಗೋವಾದಲ್ಲಿ ನೀಫಾ ಎಂದು ಕರೆಯುತ್ತಾರೆ. ಆದರೆ ಇದು ಬಹು ತೀಕ್ಷ್ಣವಾದ ಮದ್ಯ.

ಜನರ ಅಚ್ಚು ಮೆಚ್ಚಿನ ಭಂಗಿಸೊಪ್ಪು ಇಲ್ಲಿಯೂ ತೀರದಲ್ಲಿಯೂ ಬಂಗಾಳದಲ್ಲಿಯೂ ಬೆಳೆಯುತ್ತದೆ. ಗಾಂಜಾ ಸುಮಾತ್ರಾ ದ್ವೀಪದಿಂದ ಬರುತ್ತದೆ. ಇದನ್ನು ಅನೇಕ ವೇಳೆ ಬಹು ದುಬಾರಿ ಬೆಲೆಗೆ ಮಾರುತ್ತಾರೆ. ಅದರ ಬೀಜ ಸೆಣಬಿನ ಬೀಜದಂತೆ. ಗಿಡವೂ ಸೆಣಬಿನಂತೆಯೇ. ಭಂಗಿಯ ಗಿಡದ ಎಲೆ ಗಾಂಜಾ ಎಲೆಗಿಂತ ದೊಡ್ಡದು. ಗಾಂಜಾ ಹೆಚ್ಚು ಆಹ್ಲಾದಕರವಾದುದರಿಂದ, ಅದರಲ್ಲಿಯೂ ಬೇಟೆಯಾಡುವವರಿಗೆ ತುಂಬ ಹಿಡಿಸುವುದರಿಂದ ಇದರ ಬೆಲೆ ಭಂಗಿಯ ಬೆಲೆಯ ಐದರಷ್ಟು. ಗಾಂಜಾವನ್ನು ನಾನಾ ಬಗೆಯಲ್ಲಿ ಉಪಯೋಗಿಸುತ್ತಾರೆ. ಯಾವ ವಿಧದಲ್ಲಿ ಉಪಯೋಗಿಸಿದರೂ ಅದರ ಗಮ್ಮತ್ತು ತೋರಿಸದೇ ಬಿಡುವುದಿಲ್ಲ. ಕೆಲವು ವೇಳೆ ಅದನ್ನು ತಂಬಾಕಿನೊಡನೆ ಸೇರಿಸಿ ಸೇದುತ್ತಾರೆ. ಹೀಗೆ ಮಾಡಿದರೆ ಕೂಡಲೇ ಮತ್ತುಬರುತ್ತದೆ. ಕೆಲವರು ಅದನ್ನು ಅಗಿಯುವುದೂ ಉಂಟು. ಆದರೆ ಅದನ್ನು ಸೇವಿಸುವ ಸರಿಯಾದ ಮಾರ್ಗ ಯಾವುದೆಂದರೆ: ಒಂದು ಹಿಡಿ ಎಲೆಯನ್ನು ಬೀಜದ ಸಮೇತ ಒಳ್ಳೆಯ ನೀರಿನಲ್ಲಿ ಕುಟ್ಟಿ ಅಥವಾ ಅರೆದು ಕಾಲು ಘಂಟೆ ನೆನೆಯಲು ಬಿಡಬೇಕು. ಅನಂತರ ತೆಳುವಾದ ಬಟ್ಟೆಯಲ್ಲಿ ಶೋಧಿಸಿ ಅದರ ನೀರನ್ನು ಕುಡಿಯಬೇಕು. ಅರ್ಧ ಘಂಟೆಯೊಳಗೆ ಅದು ಏನೆಲ್ಲಾ ಗಮ್ಮತ್ತು ತೋರಿಸುತ್ತದೆ ಎಂದರೆ, ನಾಲ್ಕೈದು ಗಂಟೆಗಳ ತನಕ ಸ್ವರ್ಗದಿಂದ ಇಳಿಯುವುದೇ ಇಲ್ಲ. ಇದರಲ್ಲಿ ಇನ್ನೊಂದು ವಿಶೇಷವೇನೆಂದರೆ, ಇದನ್ನು ಕುಡಿಯು

ವಾಗ ಯಾವ ಆಲೋಚನೆ ಇರುವುದೋ ಕುಡಿದ ಮೇಲೆ ಅದೇ ಅನುಭವವಾಗುತ್ತದೆ. ಅಂದರೆ ಒಬ್ಬನು ಖುಷಿಯಾಗಿರುವಾಗ ಕುಡಿದರೆ ನಾಲ್ಕೈದು ಗಂಟೆಗಳ ತನಕ ಕಂಡು ದೆಲ್ಲರ ಕಡೆ ಗಹಿಗಹಿಸಿ ನಗುತ್ತಾ ಇರುತ್ತಾನೆ. ಇದನ್ನು ನಾನು ಬಂಗಾಳದಲ್ಲಿ ಅನು ಭವಿಸಿದೆ. ಒಂದನ್ನು ಹೇಳುತ್ತೇನೆ ಕೇಳಿ: ನಾವು ಎಂಟು ಹತ್ತು ಇಂಗ್ಲಿಷ್ ಜನ ಸೇರಿ ಅಂಗಡಿಯಲ್ಲಿ ಆರು ಪೆನ್ನಿಗೆ ಭಂಗಿ ಕೊಂಡುಕೊಂಡುಬಂದು ಫಕೀರನೊಬ್ಬನಿಗೆ ಕೊಟ್ಟು ಅದನ್ನು ಸಿದ್ಧಪಡಿಸುವಂತೆ ಹೇಳಿದೆವು. ಅದು ಸಿದ್ಧವಾದ ಮೇಲೆ ಫಕೀರನಿಗೂ ಕುಡಿಸಿ ಅವನನ್ನು ಹೊರಗೆ ಕಳುಹಿಸಿದೆವು. ಯಾರೂ ಬೀದಿಗೆ ಓಡಿಹೋಗದಂತೆ ಮತ್ತು ಹೊರಗಿನವರು ನಮ್ಮ ಮಜಾ ನೋಡದಂತೆ ಬಾಗಿಲು ಕಿಟಕಿಗಳನ್ನೆಲ್ಲಾ ಭದ್ರಮಾಡಿದೆವು. ಫಕೀರ ನಮ್ಮ ಮನೆಯ ಹೊರಬಾಗಿಲಿನಲ್ಲಿ ಕುಳಿತು ತಾನು ಆಗ್ರಾ ಅರಮನೆಯ ಬಾಗಿಲಿನಲ್ಲಿರುವವನಂತೆ ಭಾವಿಸಿಕೊಂಡು ಹಾಡುತ್ತಾ, ಹಾಡುತ್ತಾ ನಮ್ಮನ್ನೆಲ್ಲಾ ರಾಜ ಮಹಾರಾಜರುಗಳೆಂದು ಕರೆಯಲಾರಂಭಿಸಿದ. ಆ ರಾಮರಸ ನಮ್ಮ ಮೇಲೂ ತನ್ನ ಕೆಲಸ ಮಾಡಲಾರಂಭಿಸಿತು. ಆದರೆ ಸ್ವಲ್ಪ ಕಡಮೆ ತೆಗೆದು ಕೊಂಡ ಇಬ್ಬರು ಮಾತ್ರ ಹತೋಟಿಯಲ್ಲಿದ್ದರು. ಒಬ್ಬನು ನೆಲದ ಮೇಲೆ ಕುಳಿತು ಹಗಲೆಲ್ಲಾ ಗೊಳೋ ಎಂದು ಅಳಲಾರಂಭಿಸಿದ. ಮತ್ತೊಬ್ಬ ಹೆದರಿ ತನ್ನ ತಲೆಯನ್ನು ಹೂಜಿಯೊಳಗಿಟ್ಟುಕೊಂಡು ನಾಲ್ಕೈದು ಘಂಟೆಗಳ ಕಾಲ ಹಾಗೆಯೇ ಕುಳಿತ. ನಾಲ್ಕೈದು ಜನ ಜಮಖಾನದ ಮೇಲೆ ಕುಳಿತು ತಾವೆಲ್ಲ ಚಕ್ರವರ್ತಿಗಳಿಗಿಂತ ಕಡಿಮೆಯಿಲ್ಲವೆಂದು ಭಾವಿಸಿಕೊಂಡು ಒಬ್ಬರನ್ನೊಬ್ಬರು ಹೊಗಳಲಾರಂಭಿಸಿದರು. ಒಬ್ಬ ಜಗಳಗಂಟಿಗ. ಅವನು ಕಂಬದೊಡನೆ ಗುದ್ದಾಡಲು ಆರಂಭಿಸಿದ. ಬೆರಳಿನ ಗಿಣ್ಣುಗಳ ಚರ್ಮ ಕಿತ್ತು ಹೋಗುವವರೆಗೂ ಗುದ್ದಾಡಿದ. ನಾನು ಮತ್ತು ಮತ್ತೊಬ್ಬ ಮೂರು ಘಂಟೆಗಳ ತನಕ ಒಂದೇ ಸಮನೆ ಬೆವರುತ್ತ ಕುಳಿತೆವು.

ಭಂಗಿಗೆ ಯಾವ ರುಚಿಯೂ ಇಲ್ಲ. ನನ್ನ ಅಭಿಪ್ರಾಯದಲ್ಲಿ ನೀರು ಎಷ್ಟೋ ರುಚಿ. ಆದರೆ ಅದನ್ನು ಒಂದೆರಡು ತಿಂಗಳು ಉಪಯೋಗಿಸಿದರೆ ಸಾಕು, ಅದನ್ನು ಬಿಡು ವುದಕ್ಕೇ ಆಗುವುದಿಲ್ಲ.

ಮಚಲೀಪಟ್ಟಣದ ಗೌರ್ನರ್ ಮೂರ (ಮಹಮ್ಮದೀಯ). ಗೋಲ್ಕೊಂಡ ರಾಜನು ಇವನನ್ನು ನೇಮಿಸಿದ್ದಾನೆ. ಈತ ಪೋರ್ಟೊನೊವೋ (ಬಂದರು) ದಕ್ಷಿಣಕ್ಕಿರುವ ತೀರವನ್ನು ಬಿಟ್ಟು ಉಳಿದ ತೀರಕ್ಕೆಲ್ಲ ಒಡೆಯ. ಪೋರ್ಟೋನೋವೋ ದಕ್ಷಿಣಕ್ಕಿರುವ ಭಾಗ ವಿಜಯಪುರದ (ಬಿಜಾಪುರದ) ರಾಜನಿಗೆ ಸೇರಿದ್ದು. ಮಚಿಲೀಪಟ್ಟಣದ ಗೌರ್ನರನ ಸ್ಥಾನ ಬಹು ಹಿರಿದಾದದ್ದು. ವೈಸ್‌ರಾಯ್ ಅಷ್ಟೇ ಇವನಿಗೂ ಗೌರವ. ಇವನ ಆದಾಯವೂ ಅಪಾರ. ಇಲ್ಲಿಯ ಪದ್ಧತಿಯ ಪ್ರಕಾರ ಇವನಿಗೆ ವೈಭವದ ಪರಿವಾರವಿದೆ. ಪಲ್ಲಕ್ಕಿ, ಕುದುರೆ, ಛತ್ರಿ, ತಾಳಮೇಳ, ಭಲ್ಲೆ, ಇನ್ನೂರು ಮುನ್ನೂರು 'ಪುನೆ' (pune = peon)ಗಳು. ರಜಪೂತರೂ ಇದ್ದಾರೆ. ಇಷ್ಟೆಲ್ಲಾ ಪುನೇಗಳು ಸಣ್ಣ ಪುಟ್ಟ

ಕೆಲಸಗಳನ್ನೆಲ್ಲಾ ಮಾಡುತ್ತಾರೆ. ಸಂಬಳ ಪ್ರತಿ ಹುಣ್ಣಿಮೆಗೆ ೨ ರೂಪಾಯಿ. ರಾಜಪೂತರು ಬಹು ಶೂರವಂತರೆಂದು ಹೇಳುತ್ತಾರೆ. ಆದರೆ ಅದೆಲ್ಲಾ ಇಲ್ಲಿಯ ಕೈಲಾಗದ ಜನಗಳ ಮೇಲೆ ಮಾತ್ರ. ಏಕೆಂದರೆ ಒಮ್ಮೆ ಕೇವಲ ಹನ್ನೆರಡು ಜನ ಫ್ರೆಂಚರ ಎದುರಿಗೆ ಇನ್ನೂರು ರಾಜಪೂತರು ನಿಲ್ಲಲಾರದೆ ಪಲಾಯನ ಮಾಡಿದರು. ಇದಕ್ಕಿಂತಲೂ ಹೆಚ್ಚಿನ ದೆಂದರೆ ಸರ್ ಎಡ್ವರ್ಡ್ ವಿಂಟರ್‌ರವರು ಮುನ್ನೂರು ಜನ ಸವಾರರನ್ನು 'ಗುಡ್ಮೋರ' ಸೇತುವೆಯ ಮೇಲೆ ಬಿದ್ದೇಬೀಳ ಅಟ್ಟಿಸಿಕೊಂಡು ಹೋದದ್ದು.

ಇಲ್ಲಿನ ಬಿಸಿಲಿನ ತಾಪವನ್ನೂ ಮಳೆಯನ್ನೂ ತಡೆಯಲು ಛತ್ರಿಗಳು (Roundels) ಅನಿವಾರ್ಯ. ಅನುಕೂಲಸ್ಥರು ಎರಡು ಮೂರು ಜನರನ್ನು ಛತ್ರಿ ಹಿಡಿಯಲು ಇಟ್ಟುಕೊಂಡಿರುತ್ತಾರೆ. ಇವರ ಕೆಲಸ ಯಜಮಾನನಿಗೆ ಛತ್ರಿ ಹಿಡಿಯುವುದು ಅಷ್ಟೆ. ಛತ್ರಿಗಳು ತುಂಬಾ ಹಗುರ. ಆದರೆ ಗಟ್ಟಿಯಾಗಿವೆ. ಏಕೆಂದರೆ ಇವನ್ನು ಘೇಂಡಾಮೃಗದ ಚರ್ಮದಿಂದ ಮಾಡಿರುತ್ತಾರೆ. ಚರ್ಮಕ್ಕೆ ಬೇಕಾದ ಬಣ್ಣಹಾಕಿ ತಮಗೆ ಇಷ್ಟವಾದ ಹೂವುಗಳನ್ನು ಚಿತ್ರಿಸಿರುತ್ತಾರೆ. ಮರದಿಂದ ಮಾಡಿದ ನುಣುಪಾದ ಹಿಡಿ ಇರುತ್ತದೆ. ಕೆಲಸಕ್ಕೆ 'ಸೊಂಬರಿರೊ' ಅಥವಾ 'ಕಟಿಸೋಲ್'ಗಳೆಂಬ ಕೊಡೆಗಳನ್ನು ಉಪಯೋಗಿಸುತ್ತಾರೆ. ಇವು ಮೂರು ನಾಲ್ಕು ಅಡಿ ಎತ್ತರ ಇರುತ್ತವೆ. ಸಾಮಾನ್ಯ ಜನರೂ ಇವನ್ನು ಉಪಯೋಗಿಸಬಹುದು. ಆದರೆ ಛತ್ರಿಗಳನ್ನು ಮೇಲುವರ್ಗದವರು ಮಾತ್ರ ಹಿಡಿಸಿಕೊಳ್ಳಬೇಕು. ಅಲ್ಲದೆ ಒಂದಕ್ಕಿಂತ ಹೆಚ್ಚು ಛತ್ರಿಗಳನ್ನು ಹಿಡಿಸಿಕೊಳ್ಳು ವಂತಿಲ್ಲ. ಹಾಗೆ ಹಿಡಿಸಿಕೊಳ್ಳುವ ಮರ್ಯಾದೆ ಗೌರ್ನರ್ ಅಥವಾ ಅಂಥದೆ ಹಿರಿಯ ವ್ಯಕ್ತಿಗೆ ಮಾತ್ರ ಉಂಟು. ಇದೇ ಪದ್ಧತಿಯನ್ನು ಇಂಗ್ಲಿಷರೂ ಅನುಸರಿಸುತ್ತಾರೆ. ಏಕೆಂದರೆ ಅವರೂ ಜನಸಾಮಾನ್ಯರ ಗೌರವಾದರಗಳಿಗೆ ಪಾತ್ರರಾಗಬೇಕಷ್ಟೆ.

ನಾನು ಬರೆದಿರುವ ಪಲ್ಲಕ್ಕಿ ಚಿತ್ರ ನೋಡಿ. ಇದನ್ನು ಹೊರುವವರಿಗೆ 'ಗೌಳ' (ಗೌಳಿಗ) ರೆಂದು ಹೆಸರು. ಇವರದೇ ಒಂದು ಜಾತಿ. ಕಲ್ಲು ಮಣ್ಣುಗಳನ್ನು ಪೂಜಿಸುವ ಇವರಿಗೂ ಬೇರೆ ಜಾತಿಗಳವರಿಗೂ ತುಂಬ ವ್ಯತ್ಯಾಸಗಳಿವೆ. ಪಲ್ಲಕ್ಕಿ ಹೊರಲು ಸಾಮಾನ್ಯವಾಗಿ ೪ ಜನ ಇರುತ್ತಾರೆ. ಆದರೆ ಪ್ರಯಾಣದ ವೇಳೆ ಸರದಿಯ ಮೇಲೆ ಹೊರಲು ೮ ಜನ ಇರುತ್ತಾರೆ.

ಮೂರರು ಇಂಗ್ಲಿಷರಿಗೂ ಡಚ್ಚರಿಗೂ ಅನೇಕ ಕಿರುಕುಳಗಳನ್ನು ಕೊಡುತ್ತಾರೆ. ನಮ್ಮವರು ಇವನ್ನೆಲ್ಲಾ ತುಟಿಪಿಟಕ್ಕೆನ್ನದೆ ಸಹಿಸಿಕೊಂಡಿದ್ದಾರೆ. ಇದು ಸರಿಯಲ್ಲ. ಗೋಲ್ಕೊಂಡಾ ರಾಜನಿಗೆ ತಮ್ಮ ಕಷ್ಟ ಹೇಳಿಕೊಳ್ಳಬೇಕು. ೧೬೭೯–೭೭ರಲ್ಲಿ ಗೋಲ್ಕೊಂಡಾ ರಾಜ ತನ್ನ ಭಾರಿ ಪರಿವಾರದೊಡನೆ ಮಚಲೀಪಟ್ಟಣಕ್ಕೆ ಬಂದಾಗ ನಮ್ಮ ಎರಡು ಹಡಗುಗಳಿಗೆ ಹೋಗಿ ಅವುಗಳಲ್ಲಿ ಹಲವಾರು ದಿನಗಳು ತಂಗಿದ್ದನು. ಆಮೇಲೆ ಡಚ್ಚರ ಒಂದು ಹಡಗಿಗೂ ಹೋಗಿದ್ದನು. ರಾಜನಿಗೆ ತುಂಬಾ ಸಂತೋಷ

ವಾಯಿತು. ಇಂಗ್ಲಿಷರಿಗೆ ಹೊಸ ಫರ್ಮಾನ್ ಕೊಟ್ಟನು.[೧೧]

ಯಾವ ಮತದವರಾದರೂ ಸರಿ ತಮ್ಮ ತಮ್ಮ ಮತವನ್ನು ಆಚಸರಿಸಿಕೊಂಡು ಹೋಗಬಹುದು. ಆದರೆ ರಾಜನಿಗೆ ಸಲ್ಲಬೇಕಾದ ಕಂದಾಯ ಕವಳಿಗಳನ್ನು ಕೊಡಲೇ ಬೇಕು. ಮೂರನು ಎಂತಹ ನೀಚನಾದರೂ ಅವನಿಗೆ ಮರ್ಯಾದೆ ತೋರಿಸಬೇಕು. ಅಂಥವನು ನ್ಯಾಯಾಸ್ಥಾನದಲ್ಲಿ ಹೇಳಿದ್ದೇ ವೇದವಾಕ್ಯ. ಆದರೆ ಇವರು ಜೆಂಟೂಗಳ ಮೇಲೆ ಸವಾರಿಮಾಡುವುದು ತಪ್ಪಿಲ್ಲ. ಬಾರ್ಬರೀ ದೇಶಗಳಲ್ಲಿರುವ ಯೆಹೂದಿಗಳನ್ನು ತುಳಿದಿಟ್ಟಿರುವಂತೆ ಇಲ್ಲಿ ಮೂರರು ಹಿಂದೂಗಳನ್ನೂ ತುಳಿದಿಟ್ಟಿದ್ದಾರೆ.

---

೧೧ ಮಚಲೀಪಟ್ಟಣದ ಇಂಗ್ಲಿಷರ ಏಜೆಂಟನೂ ಮತ್ತು ಅವನ ಸಲಹಾ ಮಂಡಲಿಯವರೂ ರಾಜನ ಬಿಡಾರಕ್ಕಾಗಿ ತಮ್ಮ ಗಡಂಗ್ ಮನೆಯನ್ನು ಬಿಟ್ಟುಕೊಟ್ಟರೆಂದು ಮದ್ರಾಸಿಗೆ ಬರೆದ ಪತ್ರವೊಂದರಿಂದ ತಿಳಿಯುತ್ತದೆ. ಅಲ್ಲದೆ ರಾಜನಿಗೂ ಅವನ ಪರಿವಾರದವರಿಗೂ ೬೧೪೯ ಪಗೋಡ ಗಳಷ್ಟು ಹಣವನ್ನು ಬಹುಮಾನವಾಗಿ ಕೊಟ್ಟಿದ್ದಕ್ಕೆ ವಿವರಗಳೂ ಇವೆ:

| | ಪಗೋಡಾ | ಫಣ (ಹಣ) |
|---|---|---|
| ರಾಜನಿಗೆ | ೨೫೫೩ | ೨೦ |
| ರಾಜನಿಗೆ ಎರಡನೆಯವನಾದ ಮುದ್ದಣನಿಗೆ | ೧೧೧೦ | ೦೪ |
| ಫಿರ್ಕಾ ಮುಖ್ಯಸ್ಥನಿಗೆ | ೧೨೫೧ | ೦೮ |
| ಮಚಲೀ ಪಟ್ಟಣದ ಗೌರ್ನರ್‌ನಿಗೆ | ೬೦೦ | ೨೪ |
| ೧೭ ಗಜ ಕೆಂಪು ಬಟ್ಟೆಗೆ | ೪೩ | ೧೭ |
| ೧೪ತ್ರಿ ಗಜ ದೊಡ್ಡ ಪನ್ನದ ಬಟ್ಟೆಗೆ | ೧೬೮ | ೧೭ |
| ೨ತ್ರಿಸೇರು ಸೀಸ | ೫ | ೧ |
| ಡಂಗರಿ ಬಟ್ಟೆ | ೧ | ೫ |
| ಲಾಂಗ್ ಕ್ಲಾತ್ | ೧೮ | ೦ |
| ಟ್ವೈನ್ ದಾರ ತ್ರಿಮಣ | | ೬ |
| ಹುರಿ ೨ ಮಣ | | ೧೦ |
| ಎಂಟು ಗಡಿಗೆ ಕನರಿ (ಹೆಂಡ) ಮತ್ತು ಬ್ರಾಂದಿ | ೮ | ೦೦ |
| ಪ್ಯೂನ್‌ಗಳು, ಬಾಯ್‌ಗಳು, ಕೂಲಿಗಳು ಮತ್ತು ಅವರ ಉಪಚಾರಕ್ಕಾಗಿ ವಿಶೇಷ ಖರ್ಚು | ೬೨೫ | ೨೫ |
| ಸನ್ಸಮಟ್ಟಿಗೆ (Sansamutt) | ೨೫ | ೦೦ |
| ಷಾಬಂದರನಿಗೆ | ೨೦ | ೦೦ |
| ಬಂಕಸಾಲೆ ಜನಕ್ಕೆ | ೬ | ೦೦ |
| ಗೌರ್ನರನ ಬ್ರಾಸ್ಮಿಣಾ (ಬ್ರಾಹ್ಮಣ) ಮತ್ತು ಸೇವಕರಿಗೆ | ೪೦ | ೦೦ |
| ಗೇಟಿನ ಜನರಿಗೆ | ೨ | ೦೦ |
| ಕೊತ್ವಾಲನ ಕಡೆಯವರಿಗೆ | ೨ | ೦೦ |
| ಜುಮ್ಲಾ | ೬೧೪೯ | ೦೪ |

ಮುಹಮ್ಮದನ ಮತದ ವಿಷಯವು ಕ್ರೈಸ್ತ ಮತದ ದೇಶಗಳ ಪಕ್ಕದಲ್ಲಿರುವ ತುರ್ಕಿ ದೇಶದ ಬಹು ಜನರಿಗೆ ಆಗಲೇ ಗೊತ್ತಿದೆ. ಮುಹಮ್ಮದೀಯರಲ್ಲಿ ಉತ್ತಮರಾದವರ ವಿಚಾರ ಒಂದಿಷ್ಟು ಹೇಳುತ್ತೇನೆ. ಇವರು ನ್ಯಾಯಪಕ್ಷಪಾತಿಗಳು. ತಮ್ಮ ಕೈಲಾದಷ್ಟು ನ್ಯಾಯ ದೊರಕಿಸಿಕೊಡುತ್ತಾರೆ. ಹಾದರತನಕ್ಕೆ ಮರಣದಂಡನೆ ಶಿಕ್ಷೆ ವಿಧಿಸುತ್ತಾರೆ. ಮದ್ಯಪಾನವೆಂದರೆ ಹೇಸುತ್ತಾರೆ. ಪರದೂಷಣೆಯನ್ನು ಒಪ್ಪುವುದಿಲ್ಲ. ಹಂದಿಯ ಮಾಂಸ ತಿನ್ನುವುದಿಲ್ಲ. ತೆಳುವಾದ ಬಟ್ಟೆಯಿಂದ ಮಾಡಿದ ನಿಲುವಂಗಿಗಳನ್ನು ಧರಿಸುತ್ತಾರೆ. ಯಾವ ಸಂದರ್ಭದಲ್ಲಿಯೇ ಆಗಲಿ ಬರಿಬಲೆಯಲ್ಲಿರುವುದಿಲ್ಲ. ಹಾದರತನವನ್ನು ಬಿಡುವುದಕ್ಕೋಸ್ಕರ ಹಲವಾರು ಹೆಂಡತಿಯರನ್ನು ಮದುವೆಯಾಗುತ್ತಾರೆ, ಮತ್ತು ಅನೇಕರನ್ನು ಇಟ್ಟುಕೊಂಡಿರುತ್ತಾರೆ. ಇವರು ಮತವಲ್ಲದ ಮತವನ್ನು ಆಚರಿಸಿದರೂ ದೇವರಿಗೂ ತಮ್ಮ ಪ್ರವಾದಿಗೂ ತುಂಬಾ ಗೌರವ ತೋರಿಸುತ್ತಾರೆ. ಪ್ರಾರ್ಥನೆಗಾಗಿ ದಿನಕ್ಕೆ ನಾಲ್ಕು ಸಲ ಮಸೀದಿಯಲ್ಲಿ ಸೇರುತ್ತಾರೆ. ಶುಕ್ರವಾರ ಐದು ಸಲ ಸೇರುತ್ತಾರೆ. ವಿಗ್ರಹಾರಾಧನೆಯನ್ನು ನಿಷೇಧಿಸಿರುವುದರಿಂದ ತಮ್ಮ ಮಸೀದಿಗಳಲ್ಲಿ ಚಿತ್ರಗಳನ್ನು ಬರೆಯಲೂ ವಿಗ್ರಹಗಳನ್ನು ಕೆತ್ತಲೂ ಬಿಡುವುದಿಲ್ಲ. ದೇವರೊಬ್ಬನೆಂದು ನಂಬುತ್ತಾರೆ. ತ್ರಿಮೂರ್ತಿತ್ವವನ್ನು ಒಪ್ಪುವುದಿಲ್ಲ. ಯಹೂದಿಗಳ ಮೋಸೆಸ್, ಕ್ರೈಸ್ತರ ಕ್ರೈಸ್ತ ಮತ್ತು ತಮ್ಮ ಮುಹಮ್ಮದ್ ಈ ಮೂವರನ್ನೂ ಗೌರವಿಸುತ್ತಾರೆ. ಬಡಬಗ್ಗರ ಬಗ್ಗೆ ಬಹು ಉದಾರವಾಗಿರುತ್ತಾರೆ. ಸತ್ತವರನ್ನು ಯೋಗ್ಯರೀತಿಯಲ್ಲಿ ಹೂಳುತ್ತಾರೆ. ಕೊರಾನಿನಲ್ಲಿ ಅವರ ಮತದ ವಿಷಯ ಹೇಳಿದೆ. ಅದು ಕಲಬೆರಕೆಯಾದ ಅರಬ್ಬೀ ಭಾಷೆಯಲ್ಲಿದೆ. ಆ ಭಾಷೆ ಮತ್ತು ಪರ್ಷಿಯಾ ಭಾಷೆ ಬಿಟ್ಟು ಅದನ್ನು ಬೇರೆ ಭಾಷೆಗಳಲ್ಲಿ ಬರೆಯುವಂತಿಲ್ಲ, ಓದುವಂತಿಲ್ಲ. ಪರ್ಷಿಯಾ ಭಾಷೆ ಈಗ ಏಷ್ಯಾ ಖಂಡದ ಚಕ್ರವರ್ತಿಗಳ ಆಸ್ಥಾನಭಾಷೆಯಾಗಿದೆ. ಕೊರಾನೆಂದರೆ ತುಂಬಾ ಭಕ್ತಿ. ಕೈಕಾಲು ತೊಳೆದುಕೊಳ್ಳದೆ ಅದನ್ನು ಮುಟ್ಟುವುದಿಲ್ಲ. ಪ್ರಾರ್ಥನೆಗೆ ಮುಂಚೆ ಚಾಪೆಯನ್ನೋ ಬಟ್ಟೆಯನ್ನೋ ನೆಲದ ಮೇಲೆ ಹಾಸಿ ಅದರ ಮೇಲೆ ಕುಳಿತು ಪ್ರಾರ್ಥನೆ ಸಲ್ಲಿಸುತ್ತಾರೆ. ಹಾಗೆ ಮಾಡುವಾಗ ಸೂರ್ಯನ ಕಡೆ ಮುಖಮಾಡುತ್ತಾರೆ. ವರ್ಷದ ಒಂದು ತಿಂಗಳಿನಲ್ಲಿ 'ರಂಜಾನ್' ಎಂಬ ಉಪವಾಸದ ಹಬ್ಬ ಆಚರಿಸುತ್ತಾರೆ. ಹಗಲು ಉಪವಾಸಮಾಡಿದರೂ ರಾತ್ರಿಯೆಲ್ಲ ಪಟ್ಟಾಗಿ ಊಟಮಾಡುತ್ತಾರೆ. ವ್ಯಾಯಾಮಕ್ಕಾಗಿ ನಮ್ಮಂತೆ ಹೊರಗೆ ತಿರುಗಾಡುವ ಪದ್ಧತಿ ಇಟ್ಟುಕೊಂಡಿಲ್ಲ. ಕುಳಿತುಕೊಳ್ಳಲು ಕುರ್ಚಿಗಿರ್ಚಿಗಳಿಲ್ಲ. ನೆಲದ ಮೇಲೆ, ಚಾಪೆ ಅಥವಾ ಜಮಖಾನ ಹಾಸಿಕೊಂಡು ಚಕ್ಕಲು ಬೊಕ್ಕಲು ಹಾಕಿ ಕುಳಿತುಕೊಳ್ಳುತ್ತಾರೆ. ಆಗಾಗ್ಗೆ ತಂಬಾಕಿನ 'ಹುಕ್ಕಾ'ಗಳನ್ನು ಸೇದುತ್ತಾರೆ. ಕಾಫಿಯನ್ನು ಹೆಚ್ಚಾಗಿ ಕುಡಿಯುತ್ತಾರೆ. ಪಾನ್ (Panne) ಎಂದು ಕರೆಯಲ್ಪಡುವ ಎಲೆ ಅಡಿಕೆ ಹಾಕಿಕೊಳ್ಳುತ್ತಾರೆ.

ದೇಶದ ಬಡಜನರು ಅಂದರೆ ಜೆಂಟೂಗಳು ಮತ್ತು ಮಲಬಾರಿಗಳು ತೀರಾ ಸಾಮಾನ್ಯವಾದ ಹೊಗೆಬತ್ತಿ ಸೇದುತ್ತಾರೆ. ತಂಬಾಕಿನ ಎಲೆಗಳನ್ನು ಸುರುಳಿ ಸುತ್ತಿ

ಬುಡದವರೆಗೂ ಸೇದಿ ಮೋಟನ್ನು ಬಿಸಾಡುತ್ತಾರೆ. ಈ ರೀತಿ ಸೇದುವುದೇ ಮೊದಲಿನ ರೀತಿ ಎಂದು ಕಾಣುತ್ತದೆ. ಈ ಹೊಗೆಬತ್ತಿಯನ್ನು 'ಬಂಕೊ' (Bunko) ಎಂದು ಕರೆಯುತ್ತಾರೆ. ಪೋರ್ಚುಗೀಸರು ಇದನ್ನು 'ಚೆರೂಟ್' ಎಂದು ಹೇಳುತ್ತಾರೆ. ಜೆಂಟೂಗಳ ಮತ್ತು ಮಲಬಾರಿಗಳ ಊಟವೆಂದರೆ ಅಕ್ಕಿಯ ಗಂಜಿ. ಎಲ್ಲೋ ಅಪರೂಪ ವಾಗಿ ಒಂದೆರಡು ಒಣಮೀನುಗಳನ್ನು ನಂಜಿಕೊಳ್ಳುತ್ತಾರೆ. ಇವರ ಉಡುಪು ಮಾನ ಮುಚ್ಚಿಕೊಳ್ಳುವುದಕ್ಕೆ ಎಷ್ಟು ಬೇಕೋ ಅಷ್ಟೆ. ಇಷ್ಟು ಕಡಮೆ ಬಟ್ಟೆ ಹಾಕಿಕೊಂಡರೂ ಎಲ್ಲಾ ಇದ್ದವರಿಗಿಂತ ಹೆಚ್ಚಾಗಿ ತೃಪ್ತರಾಗಿರುವಂತೆ ಕಾಣುತ್ತಾರೆ. ಮನೆ ತುಂಬಾ ಮಕ್ಕಳು. ಒಟ್ಟಿನಲ್ಲಿ ಶ್ರೀಮಂತರು ಎಷ್ಟು ಸಂತೋಷವಾಗಿರುತ್ತಾರೋ ಅಷ್ಟೇ ಸಂತೋಷ ವಾಗಿರುತ್ತಾರೆ. ಈ ಬಡ ಜನ ಪ್ರಪಂಚದಲ್ಲಿ ದೊರೆಯಬೇಕಾದುದೆಲ್ಲ ದೊರೆತವರಂತೆ ಸಂತೋಷಪಟ್ಟು ಯೋಚನೆ ಇಲ್ಲದೆ ಹಾಡಿ ಕುಣಿದು ಕುಪ್ಪಳಿಸುತ್ತಾರೆ.

ಮಚಲೀಪಟ್ಟಣದ ಕೆಳಗೆ (ಅಂದರೆ ದಕ್ಷಿಣಕ್ಕೆ) ೪೦–೪೫ ಮೈಲಿ ದೂರದಲ್ಲಿ ನರಸಾಪುರ ಎಂಬ ಬಂದರಿದೆ. ಇಲ್ಲಿಯೂ ಒಬ್ಬ ಮಹಮ್ಮದೀಯ ಗವರ್ನರ್ ಇದ್ದಾನೆ. ಇವನೂ ಅದ್ದೂರಿಯಾಗಿಯೇ ಇರುತ್ತಾನೆ. ಆದರೆ ಮಚಲೀ ಪಟ್ಟಣದ ಗವರ್ನರನಷ್ಟಿಲ್ಲ. ಇಲ್ಲಿ ಸಿಕ್ಕುವ ಮರದಿಂದಲೇ ಹೆಚ್ಚು ಆದಾಯ. ಈ ಮರ ಹಡಗು ಗಳನ್ನು ಕಟ್ಟಲೂ ದುರಸ್ತುಮಾಡಲೂ ಚೆನ್ನಾಗಿದೆ.

ಮದಪೊಲ್ಲಂ (Madapollum) ಎಂಬಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಗಡಂಗು ಇದೆ. ಇದು ತುಂಬಾ ಆರೋಗ್ಯವಾದ ಸ್ಥಳ. ಆದ್ದರಿಂದ ಇಂಗ್ಲಿಷ್ ಮುಖ್ಯಾಧಿ ಕಾರಿಗಳು ಬೇಸಗೆಯ ಕಾಲವಾದ ಏಪ್ರಿಲ್, ಮೇ, ಜೂನ್ ತಿಂಗಳುಗಳಲ್ಲಿ ಇಲ್ಲಿಗೆ ಬಂದು ಇದ್ದುಹೋಗುತ್ತಾರೆ. ಇದು ಹಡಗು ಕಟ್ಟಲು ಅನುಕೂಲವಾದ ಸ್ಥಳವಾದ್ದ ರಿಂದ ಇಂಗ್ಲಿಷ್ ಮತ್ತು ಇತರ ವರ್ತಕರೂ ಇಲ್ಲಿ ಹಡಗುಗಳನ್ನೂ ಜಹಜುಗಳನ್ನೂ ಕಟ್ಟುತ್ತಾರೆ. ಅತ್ಯುತ್ತಮವಾದ ಮರವೂ ಕಬ್ಬಿಣವೂ ಇಲ್ಲಿ ನ್ಯಾಯವಾದ ಬೆಲೆಗೆ ದೊರೆಯುತ್ತವೆ. ಇಲ್ಲಿಯ ಜನ ಕಬ್ಬಿಣದ ಯಾವ ಸಾಮಾನು ಬೇಕಾದರೂ ತುಂಬಾ ಕುಶಲತೆಯಿಂದ ಮಾಡುತ್ತಾರೆ. ಮೊಳೆ, ಬೋಲ್ಟು, ಲಂಗರು ಮುಂತಾದುವನ್ನು ತಯಾರಿಸುತ್ತಾರೆ.

ಇಲ್ಲಿಯ ಜನ ಹಡಗುಗಳನ್ನೂ ದೋಣಿಗಳನ್ನೂ ಕಟ್ಟುವುದರಲ್ಲಿ ಎತ್ತಿದ ಕೈ. ಇವರು ಮೊದಲು ಇಂಗ್ಲಿಷಿನವರಿಂದ ಕಲಿತರೂ ಈಗ ಅವರನ್ನೇ ಮೀರಿಸುತ್ತಾರೆ. ಇಂಗ್ಲಿಷರಂತೆ ಹಡಗುಗಳನ್ನು ಕಟ್ಟಬಲ್ಲರಲ್ಲದೆ ಬೇರೆ ಬಗೆಯ ಹಡಗುಗಳನ್ನು ಕಟ್ಟ ಬಲ್ಲರು. ಅದಕ್ಕೆ ಕಾರಣವನ್ನೂ ಕೊಡಬಲ್ಲರು. ಕಟ್ಟಿದ ಹಡಗುಗಳನ್ನು ಬಹಳ ಚಾಕ ಚಕ್ಯತೆಯಿಂದ ನೀರಿಗೆ ಬಿಡುತ್ತಾರೆ. ಆದರೆ ಇವರ ಮೋಸದ ವರ್ತನೆಯನ್ನು ನಾನು ಹೇಳದೆ ಇರಲಾರೆ. ಯಾರಿಂದ ಇವರು ಕಲಿತರೋ ಅಂತಹ ಬಡಗಿಗಳಿಗೇ ವಿಷ ಹಾಕಿದ ಸಂದರ್ಭಗಳುಂಟು. ಇಂಗ್ಲೆಂಡಿನಿಂದ ಕರೆಸಿದ್ದ ಇಬ್ಬರು ಮೂವರು ಒಳ್ಳೆಯ

ಬಡಗಿಗಳನ್ನು ಹಾಗೆ ಮಾಡಿ ಸಾಯಿಸಿಬಿಟ್ಟರು. ಆಗಲೇ ಹೇಳಿದಂತೆ ಇವರು ಎಷ್ಟೇ ಭಾರಿಯಾದ ಹಡಗನ್ನಾದರೂ ದಡಕ್ಕೆ ಎಳೆಯಬಲ್ಲರು, ಮತ್ತು ಕಟ್ಟಿದ ಮೇಲೆ ನೀರಿಗೆ ಬಿಡಬಲ್ಲರು. ಇವರು ಹಡಗುಗಳಿಗೆ ಉಪಯೋಗಿಸುವ ಅತ್ಯುತ್ತಮವಾದ ಹಗ್ಗಗಳು ಮಾಲ್ದೀವ್ ದ್ವೀಪಗಳಿಂದ ಬರುತ್ತವೆ. ಇವು ಸೆಣಬಿನ ಹಗ್ಗಗಳಿಗಿಂತ ಹೆಚ್ಚು ಬಾಳಿಕೆ ಬರುತ್ತವೆ. ಈ ಹಗ್ಗಗಳು ಮಳೆನೀರಿನಲ್ಲಿ ಅಥವಾ ನದಿಯ ನೀರಿನಲ್ಲಿ ನೆನೆದಾಗ ಅದನ್ನು ಒಣಗಿಸಿ ಅನಂತರ ಉಪ್ಪುನೀರಿನಲ್ಲಿ ಅದ್ದಬೇಕು. ಸಿಹಿನೀರಿನಲ್ಲಿ ನಾರಿನ ಹಗ್ಗ ಕೊಳೆತು ಹೋಗುತ್ತದೆ. ಉಪ್ಪುನೀರಿನಲ್ಲಿ ಗಟ್ಟಿಯಾಗುತ್ತದೆ. ಇದಕ್ಕೆ ಕಾರಣ ಬಹುಶಃ ಮಾಲ್ದೀವ್ ದ್ವೀಪದಲ್ಲಿ ತೆಂಗಿನಮರಗಳು ಉಪ್ಪುನೀರಿನಲ್ಲಿ ಬೆಳೆಯುವುದೇ ಇರ ಬಹುದು. ಈ ತೆಂಗಿನ ಹಗ್ಗಗಳಲ್ಲದೆ ಬಹು ಗಟ್ಟಿಯಾದ ಬೇರೆ ನಾರಿನ ಹಗ್ಗ ಹುರಿ ಗಳನ್ನೂ ಮಾಡಬಲ್ಲರು.

ನಮ್ಮ ಗಡಂಗಿನಿಂದ ನಾಲ್ಕು ಮೈಲಿ ದೂರದಲ್ಲಿ ಅಂದರೆ ಪೊಲ್ಲಿಕಲ್ ಎಂಬಲ್ಲಿ ಡಚ್ಚರ ಗಡಂಗು ಇದೆ. ಅಲ್ಲಿ ಅವರು ತಮ್ಮ ದೇಶದಿಂದಲೇ ಹಗ್ಗ ಹೊಸೆಯುವ ವರನ್ನೂ ಕಮ್ಮಾರರನ್ನೂ ಕರೆದುಕೊಂಡು ಬಂದು ತಮ್ಮ ಕೆಲಸಗಳನ್ನು ಮಾಡಿಸಿ ಕೊಳ್ಳುತ್ತಾರೆ.

ಈ ದೇಶದ ಯಾವ ಸರಕನ್ನು ಬೇಕಾದರೂ ಸುಂಕ ಕೊಟ್ಟು ಎಲ್ಲೆಂದರೆ ಅಲ್ಲಿ ಮಾರಾಟಮಾಡಬಹುದು. ಆದರೆ ತಂಬಾಕನ್ನು ಮಾತ್ರ ಮಾರಾಟಮಾಡಕೂಡದು. ಅದನ್ನು ರಾಜನಿಂದ ಗುತ್ತಿಗೆ ಪಡೆದವರು ಮಾತ್ರ ಮಾರಬೇಕು. ಅವರಿಂದ ಕೊಂಡ ತಂಬಾಕನ್ನು ಮಾತ್ರ ಬಜಾರಿನಲ್ಲಿ ಮಾರಬೇಕು. ಯಾರಾದರೂ ಕಳ್ಳತನದಿಂದ ತಂಬಾಕನ್ನು ಇಟ್ಟುಕೊಂಡಿದ್ದರೆ ಅವರನ್ನು ಶೋಧಿಸಿ ಶಿಕ್ಷೆಗೆ ಗುರಿಪಡಿಸುತ್ತಾರೆ. ಇಲ್ಲಿಯ ಜನ ತುಂಬಾ ತಂಬಾಕು ಸೇದುತ್ತಾರೆ. ಮೂರು ನಾಲ್ಕು ವರ್ಷದ ಮಕ್ಕಳೂ ಸೇದು ತ್ತಾರೆ. ಅನ್ನ ಪಾನೀಯಗಳೆಷ್ಟು ಆವಶ್ಯಕವೊ ಅಷ್ಟೇ ಆವಶ್ಯಕ ತಂಬಾಕು ಕೂಡ.

ಚೋಳಮಂಡಲ ತೀರವನ್ನು ಬಿಡುವ ಮುನ್ನ ದೇಶದ ರಾಜಧಾನಿಯಾದ ಗೋಲ್ಕೊಂಡಾದ ಬಗ್ಗೆ ಒಂದಿಷ್ಟು ಹೇಳುತ್ತೇನೆ. ಗೋಲ್ಕೊಂಡಾ ರಾಜ್ಯ ಈಶಾನ್ಯ ದಿಕ್ಕಿಗೆ ಹಲವು ನೂರು ಮೈಲಿಗಳವರೆಗೂ ಹಬ್ಬಿದೆ. ಅಂದಚಂದದ ನಗರವಾದ ಗೋಲ್ಕೊಂಡಾ ಒಳನಾಡಿನಲ್ಲಿದೆ. ಇದೇ ರಾಜ್ಯದ ರಾಜಧಾನಿ. ಇಲ್ಲಿ ರಾಜನೂ ರಾಣಿಯೂ ಅನೇಕ ಶೆಟ್ಟಿ ಸರದಾರರೂ ವಾಸಮಾಡುತ್ತಾರೆ. ಇದು ಅಷ್ಟೇನೂ ಪುರಾತನವಾದ ನಗರವಲ್ಲ. ಕೇವಲ ನೂರು ವರ್ಷಗಳಿಂದೀಚೆಗೆ ಸ್ಥಾಪಿತವಾಯಿತು. ಮೊಗಲರ ಮೇಲೆ ದಂಗೆಯೆದ್ದ ಈಗಿನ ರಾಜನ ಪೂರ್ವಿಕರು ಇದನ್ನು ಸ್ಥಾಪಿಸಿದರು. ಮೊದಲು ಬಿಸ್ನಾಗರ್ (ವಿಜಯನಗರ) ಎಂಬ ರಾಜ್ಯಕ್ಕೆ ಈ ನಗರ ಸೇರಿತ್ತು. ಆಮೇಲೆ ಮುಹಮ್ಮದೀಯರು ತಮ್ಮ ಪೂರ್ವಪದ್ಧತಿಯಂತೆ ಹಳೆಯ ನಗರವನ್ನು ಕೆಡವಿ ಈ ಹೊಸ ನಗರವನ್ನು ಕಟ್ಟಿ ಅದನ್ನು ಗೋಲ್ಕೊಂಡಾ ಎಂದು ಕರೆದರು. ರಾಜಧಾನಿಗಳಲ್ಲದೆ

ಇಡೀ ರಾಜ್ಯಕ್ಕೆ ಗೋಲ್ಕೊಂಡಾ ಎಂಬ ಹೆಸರು ಬಂದಿದೆ. ಮೊಗಲ್ ಚಕ್ರವರ್ತಿಯಿಂದ ಕಿತ್ತುಕೊಂಡದ್ದು, 'ಹಿಂದೂ'(Hindu)ಗಳಿಂದ ದೋಚಿಕೊಂಡದ್ದು, ಅವರಿವರಿಂದ ಯುದ್ಧದಲ್ಲಿ ಗೆದ್ದುಕೊಂಡದ್ದು, ಸಮೃದ್ಧಿಯಾಗಿ ಬೆಳೆಯುವ ಫಲವತ್ತಾದ ಭೂಮಿ ಸಿಕ್ಕಿದ್ದು—ಇವೆಲ್ಲಾ ಈ ರಾಜ್ಯವನ್ನು ಬಹು ಶ್ರೀಮಂತವಾಗಿ ಮಾಡಿವೆ. ೨೦೦೦ ಮೈಲಿ ಸುತ್ತಳತೆಯುಳ್ಳ ಈ ರಾಜ್ಯ ಜನಭರಿತವಾಗಿದೆ. ಬೇಕಾದ್ದೆಲ್ಲಾ ದೊರೆಯುತ್ತದೆ. ಕಬ್ಬಿಣ ಬಿಟ್ಟರೆ ಬೇರೆ ಅದಿರುಗಳು ಇಲ್ಲವಾದರೂ ಇಲ್ಲಿ ಸಿಕ್ಕುವ ವಜ್ರಗಳು ಪ್ರಪಂಚದ ಚಿನ್ನ ಬೆಳ್ಳಿಗಳನ್ನೆಲ್ಲಾ ಕೊಂಡುಕೊಳ್ಳಬಲ್ಲವು.

ಗೋಲ್ಕೊಂಡಾದ ಕೋಟೆ ಬಹು ಭದ್ರವಾಗಿದೆ. ಕನಿಷ್ಠಪಕ್ಷ ಐದು ಮೈಲಿ ಸುತ್ತಳತೆಯುಳ್ಳ ಅದು ಭಾರಿ ಎತ್ತರವಾಗಿದ್ದು ಫಿರಂಗಿಗಳಿಂದಲೂ ಕೊತ್ತಲಗಳಿಂದಲೂ ರಕ್ಷಿಸಲ್ಪಟ್ಟಿದೆ. ಸುತ್ತಮುತ್ತ ಫಲವತ್ತಾದ ಭೂಮಿ ಇದೆ. ಬೇಕಾದ್ದು ಬೆಳೆಯುತ್ತದೆ. ತಂಪಾದ ಹವಾ. ಈ ರಾಜ್ಯದಲ್ಲಿ ಹರಿವ ಕೃಷ್ಣಾನದಿಯು ನಾಡನ್ನು ಸಮೃದ್ಧವಾಗಿಟ್ಟಿದೆ. ಇಷ್ಟೆಲ್ಲಾ ಕಾರಣಗಳಿಂದ ವರ್ತಕರೂ, ದೇಶವಿದೇಶೀಯರೂ, ಯೂರೋಪಿಯನರೂ ಅದರಲ್ಲಿಯೂ ನಮ್ಮ ಇಂಗ್ಲಿಷ್ ಜನರೂ ಇಲ್ಲಿ ನೆಲಸಿದ್ದಾರೆ. ನಮ್ಮ ಜನರು ರಾಜನ ಸೇವೆಯಲ್ಲಿ ಸೇರಿಕೊಂಡಿದ್ದಾರೆ. ಗೋಲಂದಾಜರಾಗಿ, ಅವರ ಸಹಾಯಕರಾಗಿ, ಶಸ್ತ್ರ ಧಾರಕರಾಗಿ, ರಾವುತರಾಗಿ ಕೆಲಸಕ್ಕೆ ಸೇರಿ ಕೈತುಂಬ ಸಂಬಳ ಪಡೆಯುತ್ತಾರೆ. ಈ ಕಾರಣದಿಂದ ಅನೇಕ ಜನ ಇಂಗ್ಲಿಷ್ ಸಿಪಾಯಿಗಳು ಸೆಂಟ್ ಜಾರ್ಜ್ ಕೋಟೆಯನ್ನು ಬಿಟ್ಟು ಇಲ್ಲಿಗೆ ಓಡಿಬಂದಿದ್ದಾರೆ. ಈಚೀಚೆಗೆ ಹೀಗೆ ಬಂದವರು ತಮ್ಮ ಕ್ರೈಸ್ತಮತ ವಿರೋಧವಾದ ದುರ್ನಡತೆಗಳಿಂದ ಗೌರವ ಕಳೆದುಕೊಂಡಿದ್ದಾರೆ.

ಈ ರಾಜ್ಯದಲ್ಲಿ ಅನೇಕ ವ್ಯಾಪಾರದ ಸರಕುಗಳು ದೊರೆಯುತ್ತವೆ. ಕ್ಯಾಲಿಕೋ ಬಟ್ಟೆ, ಪೆಟ್ಲುಪ್ಪು, ಬಣ್ಣ ಬಣ್ಣದ ಚೀಟಿಬಟ್ಟೆಗಳು, ನಾನಾ ತರಹೆ ಜಮಖಾನಗಳು, ಕಚ್ಚಾ ಹಾಗೂ ನೇಯ್ದ ರೇಷ್ಮೆ ಬಟ್ಟೆಗಳಲ್ಲದೆ ಪ್ರಪಂಚದಲ್ಲೆಲ್ಲಿಯೂ ಸಿಗದ ಬೆಲೆಯಾದ ವಜ್ರಗಳೂ ಇಲ್ಲಿ ಸಿಕ್ಕುತ್ತವೆ. ಗೋಲ್ಕೊಂಡಾಕ್ಕೆ ಸುಮಾರು ೧೦೦ ಮೈಲಿ ದೂರದಲ್ಲಿ ವಜ್ರಗಳು ಸಿಕ್ಕುವ ಭೂಮಿ ಬೇಕಾದಷ್ಟಿದೆ. ಸಾಹಸದ ವರ್ತಕನು ಅಲ್ಲಿಗೆ ಹೋಗಿ ಅರ್ಧ ಅಥವಾ ಒಂದು ಎಕರೆ ಭೂಮಿ ಕೊಂಡು ತನಗಿಷ್ಟಬಂದಷ್ಟು ಆಳವಾಗಿ ಅಗೆದು ವಜ್ರಗಳನ್ನು ತೆಗೆಯಬಹುದು. ಆದರೆ ೭೦ ಅಥವಾ ೮೦ 'ಕೊಂದರಿನ್' (Condarine) ತೂಕಕ್ಕಿಂತ ಹೆಚ್ಚು ತೂಕದ ವಜ್ರಗಳು ಸಿಕ್ಕಿದರೆ ಅವು ರಾಜನಿಗೆ ಸೇರುತ್ತವೆ. ಅವನ ಕಡೆಯ ಜನ ಇಲ್ಲಿ ಇದ್ದು ಅಂತಹ ವಜ್ರಗಳು ಸಿಕ್ಕಿದರೆ ಅವಕ್ಕೆ ಅಷ್ಟೋ ಇಷ್ಟೋ ಬೆಲೆ ಕೊಟ್ಟು ತೆಗೆದುಕೊಂಡು ರಾಜನಿಗೆ ಒಪ್ಪಿಸುತ್ತಾರೆ. ಒಂದು ಚಿಕ್ಕ ಪ್ರದೇಶದ ಭೂಮಿಗೆ ೮,೦೦೦ ದಿಂದ ೨೦,೦೦೦ ಪಗೋಡಾಗಳಷ್ಟು ನೆಲಗಂದಾಯ ಕೊಡಬೇಕು. ಇದರಿಂದ ಬಹು ಲಾಭವೂ ಉಂಟು, ನಷ್ಟವೂ ಉಂಟು.

ಗೋಲ್ಕೊಂಡಾದಲ್ಲಿರುವ ಹೆಸರುವಾಸಿಯಾದ ಕಟ್ಟಡಗಳೆಂದರೆ ಕಾಲವಾದ ರಾಜ ರಾಣಿಯರ ಗೋರಿಗಳು ಮತ್ತು ಮಸೀದಿಗಳು. ಹಿಂದಿನ ರಾಜಮಾತೆಯ ಗೋರಿ

ಬಹು ಭವ್ಯವಾಗಿದೆ. ಈಕೆಯನ್ನು ಹೂಳಿದ ಮೇಲೆ ಗೋರಿಯನ್ನು ಅಗೆದು ಮೂಳೆಗಳನ್ನು ಮಕ್ಕಾಕ್ಕೆ ಕಳುಹಿಸಿ ಅಲ್ಲಿ ಹೂಳಿಸಲಾಗಿದೆ. ಈ ಕಾರಣ ಇಲ್ಲಿರುವ ಗೋರಿಗೆ ತುಂಬಾ ಪಾವಿತ್ರ್ಯತೆ ಬಂದಿದೆ. ಗೋರಿಯ ಮೇಲಿರುವ ಕಟ್ಟಡಕ್ಕೆ ಮೂರು ಗುಮ್ಮಟಗಳಿವೆ. ಅವುಗಳ ತುಟ್ಟ ತುದಿಯಲ್ಲಿ ಮೂರು ಅರ್ಧಚಂದ್ರಗಳನ್ನು ಇಡಿಸಲಾಗಿದೆ. ಎಂತಹ ಕ್ರೂರಕೃತ್ಯ ಮಾಡಿದವನಾದರೂ ಇಲ್ಲಿಗೆ ತಪ್ಪಿಸಿಕೊಂಡು ಬಂದರೆ ಅವನ ತಂಟೆಗೆ ಯಾರೂ ಬರುವುದಿಲ್ಲ. ಅವನು ಸುಖವಾಗಿ ಇಲ್ಲಿ ಇದ್ದುಬಿಡಬಹುದು.

ಈಗ ಈ ರಾಜ್ಯದಲ್ಲಿ ಚಲಾವಣೆಯಲ್ಲಿರುವ ನಾಣ್ಯಗಳ ವಿಷಯ ಹೇಳುತ್ತೇನೆ:

**ಫೋರ್ಟ್‌ಸೇಂಟ್ ಜಾರ್ಜ್‌ನಲ್ಲಿ**

| | ಪೌಂಡು | ಷಿಲ್ಲಿಂಗ್ | ಪೆನ್ನಿ |
|---|---|---|---|
| ಇಲ್ಲಿ ಟಂಕಿಸಲ್ಪಟ್ಟ ಹೊಸ ಪಗೋಡ್‌ಗಳಿಗೆ ಇಡೀ ರಾಜ್ಯದಲ್ಲಿ ಸಿಕ್ಕುವ ದರ | ೦೦ | ೦೮ | ೦೦ |
| ಚಿನ್ನದ ಫನಂ (Fanam = ಹಣ)ಕ್ಕೆ | ೦೦ | ೦೦ | ೦೩ |
| ತಾಮ್ರದ ಕಾಷ್ (Cash = ಕಾಸು) ೮೦ಕ್ಕೆ ಒಂದು ಫನಂ | ೦೦ | ೦೦ | ೦೩ |
| ೮ ರಿಯಲ್‌ಗಳಿಗೆ (ಡಾಲರ್) | ೦೦ | ೦೫ | ೦೦ |
| ರೂಪಾಯಿ | ೦೦ | ೦೨ | ೦೩¾ |
| ಪರ್ಷಿಯಾದ ಅಬಾಸ್ಸಿನ್ (ಒಂದು ಪಗೋಡಾಕ್ಕೆ ಅಚೀನದ ಮೇಸ್ Mase = Mace ೫ ಹಣ) | ೦೦ | ೦೮ | ೦೦ |
| ೫ ಹಣ ೨೦ ಕಾಸುಗಳು | ೦೦ | ೦೧ | ೦೩¾ |

**ಪುಲ್ಲಿಕಾಟ್‌ನಲ್ಲಿ**

| | | | |
|---|---|---|---|
| ಪಗೋಡ್ | ೦೦ | ೦೮ | ೦೬ |
| ೨೪ ಫನಂಗಳ ಒಂದು ಪಗೋಡ್ | ೧೦ | ೦೮ | ೦೬ |
| ೨೪ ತಾಮ್ರದ ಕಾಸುಗಳಿಗೆ ಒಂದು ಫನಂ | ೦೦ | ೦೦ | ೦೪¾ |

**ಗೋಲ್ಕೊಂಡಾ**

| | | | |
|---|---|---|---|
| ಹಳೆಯ ಪಗೋಡ್‌ಗೆ | ೦೦ | ೧೨ | ೦೦ |
| ಫನಂಗೆ | ೦೦ | ೦೧ | ೦೦ |

**ಫೋರ್ಟೋನೋವೊ ಮತ್ತು ಟ್ರಾಂಕೋಬಾರ್**

| | | | |
|---|---|---|---|
| ಅಲ್ಲಿಯ ಪಗೋಡ್ | ೦೦ | ೦೬ | ೦೦ |
| ಅಲ್ಲಿಯ ಫನಂ | ೦೦ | ೦೦ | ೦೪ |

## ಮಚ್ಚಿಲಿಪಟ್ಟಣ

ಮೇಲೆ ಹೇಳಿದ ನಾಣ್ಯಗಳು ಇಲ್ಲಿಯೂ
ಅದೇ ದರದಲ್ಲಿ ಚಲಾವಣೆಯಲ್ಲಿವೆ.

| | | | |
|---|---|---|---|
| ಸಯಾಂ ತಿಕಲ್ (Tickal)ಕ್ಕೆ ರೂ ಬೆಲೆ | ೦೦ | ೦೩ | ೦೭ |
| ತಾಮ್ರದ ಕಾಸ್ | ೦೦ | ೦೦ | ೦೧ |

## ನರಸಾಪುರ ಮತ್ತು ಪೆಟ್ಟಪೋಳಿ

ಮೇಲೆ ಹೇಳಿದ ನಾಣ್ಯಗಳೆಲ್ಲಾ ಇಲ್ಲಿಯೂ ಅದೇ ದರದಲ್ಲಿ ಚಲಾವಣೆಯಲ್ಲಿವೆ. ಆದರೆ ನರಸಾಪುರದಲ್ಲಿ ಮತ್ತು ೨೦–೩೦ ಮೈಲಿ ಒಳಗಿರುವ ಹಳ್ಳಿಗಳಲ್ಲಿ ಪಿಕೆನ್ (Pican) ಎಂಬ ಸೀಸದ ಗುಂಡಿನಂತಹ ಕಿರುನಾಣ್ಯಗಳು ಚಲಾವಣೆಯಲ್ಲಿವೆ. ನೂರಾರು ನಾಣ್ಯಗಳಿಗೆ ಒಂದು ರೂಪಾಯಿ.

ಈ ಸಮುದ್ರತೀರದಲ್ಲಿ ಸಾಮಾನ್ಯವಾಗಿ ಉಪಯೋಗಿಸಲ್ಪಡುವ ತೂಕಗಳು ಯಾವುವೆಂದರೆ: ಖಂಡಿ, ಮಣ ಮತ್ತು ವೀಸೆ. ಖಂಡಿ ಎಂದರೆ ೩೦೦ ಪೌಂಡ್ ಅಥವಾ ೨೦ ಮಣಗಳು. ಒಂದು ಮಣಕ್ಕೆ ೮ ವೀಸೆಗಳು. ಒಂದು ವೀಸೆಗೆ[೧೨] ಮೂರು ಪೌಂಡು. ದವಸಗಳನ್ನು ಅಳೆದು ಮಾರುತ್ತಾರೆ. ಹಾಗೆಯೇ ಎಣ್ಣೆ, ತುಪ್ಪ ಹಾಗೂ ಅನೇಕ ದ್ರವಪದಾರ್ಥಗಳನ್ನು ಸಹ. ಒಂದು 'ಪರಾ'ಕ್ಕೆ (Para) ಮರ್ಕಲ್ಲುಗಳು.[೧೩]

ಈ ದೇಶದ ಬಗ್ಗೆ ಒಂದು ವಿಚಾರವನ್ನು ಮಾತ್ರ ಎಲ್ಲ ಪ್ರವಾಸಿಗಳು ಮೆಚ್ಚ ಬೇಕು. ಅದೇನೆಂದರೆ, ಇವರಿಗೆ ಇಲ್ಲಿ ಸಿಗುವ ಸಂರಕ್ಷಣೆ. ಇಡೀ ದೇಶದಲ್ಲಿ ಎಲ್ಲಿ ಹೋದರೂ ಯಾವ ಅಡ್ಡಿ ಆತಂಕಗಳು ಇಲ್ಲ. ರಸ್ತೆಗಳು ಶುಚಿಯಾಗಿಯೂ ಚೆನ್ನಾಗಿಯೂ ಇವೆ. ನಾಲ್ಕೈದು ಮೈಲಿಗೊಂದರಂತೆ ಒಂದೆರಡು ಸಣ್ಣ ಛತ್ರಗಳಿವೆ. ಇಲ್ಲಿ ಬಾಯಾರಿದ ಪ್ರಯಾಣಿಕರು ಹಾಲು (ಬಹುಶಃ ಮಜ್ಜಿಗೆ) ಅಥವಾ ಅಕ್ಕಿಯ ಗಂಜಿ ಕುಡಿದು ದಣಿವಾರಿಸಿಕೊಳ್ಳಬಹುದು. ರಾಜನೇ ಈ ಅರವಟ್ಟಿಗೆಗಳನ್ನು ಇಡಿಸಿದ್ದಾನೆ. ಇದಕ್ಕೆ ಏನೂ ಕೊಡಬೇಕಾಗಿಲ್ಲ. ಕೊಡಿ ಎಂದು ಯಾರೂ ಕೇಳುವುದಿಲ್ಲ. ನೀವೇ ಆಗಿ ಕೊಟ್ಟರೆ ಕೃತಜ್ಞತೆಯಿಂದ ಸ್ವೀಕರಿಸುತ್ತಾರೆ. ಅಲ್ಲದೆ ಹನ್ನೆರಡು ಮೈಲಿಗಳಿ

---

೧೨ ವೀಸೆ—ಇದು ದಕ್ಷಿಣ ಇಂಡಿಯಾ ಹಾಗೂ ಇಂಡೋಚೀನಾದಲ್ಲಿದ್ದಂತಹ ಸರ್ವೇ ಸಾಮಾನ್ಯವಾದ ತೂಕ.

೧೩ ಪರಾಕ್ಕೆ ಎಷ್ಟು ಮರ್ಕಲ್ಲುಗಳೆಂಬುದು ಮೂಲ ಪುಸ್ತಕದಲ್ಲಿ ಬಿಟ್ಟುಹೋಗಿದೆ. ೧೭೮೦ರ ಒಂದು ದಾಖಲೆಯ ಪ್ರಕಾರ ಸಣ್ಣ ಅಳತೆಗಳಿಗೆ ಒಂದು ಮರ್ಕಲ್ ಎಂತಲೂ ಎಂಟು ಮರ್ಕಲ್‌ಗಳಿಗೆ ಒಂದು ಪರ್ರಾ (Parra), ಎಂಟು (೮) ಪರ್ರಾಗಳಿಗೆ ಒಂದು ಗರ್ಸೆ (Grace) ಎಂತಲೂ ತಿಳಿದು ಬರುತ್ತದೆ. ಇತ್ತೀಚಿನವರೆಗೆ ಮದ್ರಾಸ್ ಕಡೆ ೫ ಮರ್ಕಲ್‌ಗಳಿಗೆ ಒಂದು ಪರ್ರಾದಂತೆ ದವಸಧಾನ್ಯಗಳನ್ನು ಅಳೆಯಲಾಗುತ್ತಿತ್ತು.



ದುಷ್ಟ ರಾಕ್ಷಸನ ಸಂಹಾರ

ಗೊಂದರಂತೆ ಒಂದೆರಡು ಛತ್ರಗಳನ್ನು ರಾಜನು ಕಟ್ಟಿಸಿ ಅವುಗಳಲ್ಲಿ ತಂಗುವುದಕ್ಕೆ ಅವಕಾಶ ಮಾಡಿದ್ದಾನೆ. ಮೊದಲು ಬಂದವನಿಗೆ ಮೊದಲು ಅವಕಾಶ (First come first served) ಎಂಬ ನಿಯಮವನ್ನು ಬಹು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ದೊಡ್ಡವರು ಚಿಕ್ಕವರು ಎಂಬ ಭೇದವಿಲ್ಲ. ಈ ರೀತಿಯ ವಸತಿ ಸೌಕರ್ಯವನ್ನೇರ್ಪಡಿಸದಿದ್ದರೆ ಪ್ರಯಾಣಿಕರಿಗೆ ತುಂಬಾ ತೊಂದರೆಯಾಗುತ್ತಿತ್ತು. ಏಕೆಂದರೆ ದಾರಿಯ ಪಕ್ಕದಲ್ಲಿರುವ ಜನರು ಬೇರೆ ಜಾತಿಯವರನ್ನು ತಮ್ಮ ಮನೆಗೆ ಸೇರಿಸುವುದಿಲ್ಲ. ಪ್ರಯಾಣಿಕರ ಒಡವೆ ವಸ್ತುಗಳನ್ನು ಯಾರೂ ಕಳವುಮಾಡದಂತೆ ವ್ಯವಸ್ಥೆ ಮಾಡಲಾಗಿದೆ. ಅವರಿಗೆ ಕಳ್ಳಕಾಕರರ ಭಯವಿದ್ದರೆ ಅವರು ದೊಡ್ಡ ದೊಡ್ಡ ನಗರಗಳಲ್ಲಿರುವ ನಗರಾಧಿಪತಿಯ ಬಳಿಗೆ ಹೋಗಿ ತಮಗೆ ರಕ್ಷಣೆ ಬೇಕೆಂದು ತಿಳಿಸಿದರೆ ಸಾಕು ಅವನು ರಕ್ಷಣೆಯ ಛಾಪ್ (Chopp) = ಮುದ್ರೆ ಒತ್ತಿ ಕಳುಹಿಸುತ್ತಾನೆ. ಈ ಛಾಪನ್ನು ಮುಂಗೈಮೇಲೆ ಕಪ್ಪು ಬಣ್ಣದಿಂದ ಒತ್ತುತ್ತಾರೆ. ಇದು ಅಷ್ಟು ಸುಲಭವಾಗಿ ಅಳಿಸಿ ಹೋಗುವುದಿಲ್ಲ. ಈ ಮುದ್ರೆ ಇದ್ದರೆ ಯಾವ ಆತಂಕವೂ ಇಲ್ಲದೆ ಮುಂದಿನ ಊರಿಗೆ ಹೋಗಬಹುದು. ಅಕಸ್ಮಾತ್ ಯಾರಾದರೂ ಕೊಳ್ಳೆ ಹೊಡೆದರೆ–ಇದು ಸಾಮಾನ್ಯವಾಗಿ ನಡೆಯುವುದಿಲ್ಲ–ಮುದ್ರೆಯನ್ನು ಮುಂದಿನ ಊರಿನ ಅಧಿಪತಿಗೆ ತೋರಿಸಿ ಅವನಿಂದ ತಮಗಾದ ನಷ್ಟವನ್ನು ಪಡೆಯಬಹುದು.

ಇಲ್ಲಿ ವರ್ಷ ವರ್ಷ ಫೆಬ್ರುವರಿ ತಿಂಗಳ ಕೊನೆಯಲ್ಲಿ 'ಜನ್ನಾ ಬೈನ್ನಾ' ಎಂಬ ರಾಕ್ಷಸನನ್ನು ಸುಡುವ ಹಬ್ಬ ಆಚರಿಸುತ್ತಾರೆ. ರಾಕ್ಷಸನಂತೆ ಒಂದು ದೊಡ್ಡ ವಿಗ್ರಹ ಮಾಡಿಸಿ ನಾಲ್ಕು ಚಕ್ರದ ಗಾಡಿಯ ಮೇಲಿಟ್ಟು ಮೆರವಣಿಗೆ ಮಾಡಿ ಮಧ್ಯರಾತ್ರಿಯ ವೇಳೆ ಸುಡುತ್ತಾರೆ. ಈ ರಾಕ್ಷಸ ಭಾರಿ ಕಂಟಕನಾಗಿದ್ದನೆಂತಲೂ ಅವನನ್ನು ಒಬ್ಬ ಮುಹಮ್ಮದೀಯನು ಕೊಂದುಹಾಕಿದನೆಂದೂ ಹೇಳುತ್ತಾರೆ.[೧೪]

ಜಿಂಜಲೀ ಎಂದು ಕರೆಯಲ್ಪಡುವ ಸಮುದ್ರತೀರ ಇಂಡಿಯಾ ದೇಶದ ಸಮುದ್ರ ತೀರಗಳಲ್ಲೆಲ್ಲಾ ಬಹು ಆನಂದದಾಯಕವಾದ ತೀರ. ಜನಭರಿತವಾಗಿಯೂ ಫಲವತ್ತಾಗಿಯೂ ಇರುವ ಪ್ರದೇಶವು. ಇದು ಗೋದಾವರೀ ನದೀ ಮುಖಜದಿಂದ ಪ್ರಾರಂಭವಾಗಿ ಕೋರಂಗೋ (ಕೋರಂಗಿ = ಕಳಿಂಗ ?) ಕೊಲ್ಲಿಯ ದಕ್ಷಿಣದವರೆಗೂ ಹಬ್ಬಿದೆ. ಒಳನಾಡು ಗುಡ್ಡಗಾಡುಗಳಿಂದ ಕೂಡಿದ್ದರೂ ಸಮುದ್ರತೀರದಿಂದ ೨೦ ಮೈಲಿ ದೂರವಿರುವ ಪ್ರದೇಶವು ತುಂಬಾ ಫಲವತ್ತಾಗಿದೆ. ಆದ್ದರಿಂದ ದವಸಧಾನ್ಯಗಳೂ ದನಕುರಿಗಳೂ ಹೇರಳವಾಗಿವೆ. ವರ್ಷಕ್ಕೆ ಮೂರು ಬೆಳೆ ತೆಗೆಯುತ್ತಾರೆ. ಬೆಣ್ಣೆ ಮತ್ತು ಅರಗು, ಕ್ಯಾಲಿಕೋ ಬಟ್ಟೆಗಳು ಇಲ್ಲಿ ದೊರೆಯುತ್ತವೆ. ಇವನ್ನು ತೆಗೆದುಕೊಂಡು ಹೋಗಲು ಅನೇಕ ಹಡಗುಗಳೂ ಜಹಜುಗಳೂ ವರ್ಷದ ಎಲ್ಲಾ ಕಾಲ

---

೧೪ ಇದನ್ನು ಮಹಿಷಾಸುರನ ಸಂಹಾರವೆಂದು ಹೇಳುತ್ತಾರೆ. ಕೆಲವರು ಹೇಳುವಂತೆ ಇದು ಮೊಹರಂ ಹಬ್ಬ ಅಲ್ಲ. ಮಹಮ್ಮದೀಯನೊಬ್ಬ ರಾಕ್ಷಸನನ್ನು ಕೊಂದನೆಂಬುದೂ ಸರಿಯಲ್ಲ.

ದಲ್ಲಿಯೂ ಬರುತ್ತವೆ. ಏಕೆಂದರೆ ಈ ಸಮುದ್ರತೀರದಲ್ಲಿರುವ ಕೋರಂಗೋ, ವಿಶಾಖ ಪಟ್ಟಣ, ಬಿಮಿಲಿಪಟ್ಟಣ, ವಟ್ಪಾರ, ಪೊಂಡಿ ಮತ್ತು ಮನಿಕಪಟ್ನ—ಇವು ತುಂಬಾ ಅನುಕೂಲಕರವಾದ ಬಂದರುಗಳು. ಒಳ್ಳೆಯ ಬಂದರುಗಳಲ್ಲದ ಇತರ ಸ್ಥಳಗಳೂ ಈ ತೀರದಲ್ಲಿವೆ. ಇವುಗಳಲ್ಲಿ ಚಿಕಾಕೋಲ್ (ಶ್ರೀಕಾಕುಳಂ) ಎಂಬುದು ಪ್ರಮುಖ ವಾದುದು. ಇದು ದೊಡ್ಡ ದೊಡ್ಡ ಕಟ್ಟಡಗಳಿಗೂ ಬಹು ಶ್ರೀಮಂತ ವರ್ತಕರಿಗೂ ಬಹು ಹೆಚ್ಚಿನ ಜನಸಂಖ್ಯೆಗೂ ಹೆಸರುವಾಸಿಯಾಗಿದೆ. ಅಲ್ಲದೆ, ಇಲ್ಲಿ ಗೋಲ್ಕೊಂಡಾ ರಾಜನ ಪ್ರತಿನಿಧಿ ಇದ್ದಾನೆ. ಇವನು ಈ ತೀರದಲ್ಲಿ ರಾಜನಷ್ಟೇ ಅಧಿಕಾರ ಚಲಾಯಿಸುತ್ತಾ ಅದ್ದೂರಿಯಿಂದ ಇದ್ದಾನೆ. ಇವನೆಷ್ಟು ಬಲಾಢ್ಯನೆಂದರೆ, ಒಂದು ದಿವಸದಲ್ಲಿ ಬೇಕೆಂದರೆ ಒಂದು ಲಕ್ಷ ಸೈನ್ಯ ಕಟ್ಟಬಲ್ಲ.

ಇಲ್ಲಿ ವ್ಯಾಪಾರ ಸಾಪಾರ ಮಾಡುವವರು ಬಹುತೇಕವಾಗಿ ಜೆಂಟೂಗಳು (ಹಿಂದೂಗಳು). ಇವರು ಮಹಮ್ಮದೀಯ ರಾಜರುಗಳು ಹೇರುವ ಹೇರಳವಾದ ತೆರಿಗೆ, ಸುಂಕ ಸಾರಿಗೆಗಳನ್ನು ತುಟಿಪಿಟಕ್ಕೆನ್ನದೆ ಕೊಟ್ಟುಕೊಂಡು ಅಡಿಯಾಳ್ತನದಿಂದ ಕಾಲಹಾಕುತ್ತಾರೆ. ಮಹಮ್ಮದೀಯರು ಏನು ಮಾಡಿದರೂ ಕೇಳುವಂತಿಲ್ಲ. ನ್ಯಾಯಾ ಸ್ಥಾನಕ್ಕೆ ಹೋದರೆ ನ್ಯಾಯಾಧೀಶ "ಕ್ಯಾ ಮುಸಲ್ಮಾನ್ ಝೂಟ್ ಬೋಲ್ತಾ?" (ಏನು, ಮುಸಲ್ಮಾನ ಸುಳ್ಳು ಹೇಳುತ್ತಾನೆಯೆ ?) ಎಂದು ಹೇಳಿ ಅಹವಾಲನ್ನೇ ಹಿಡಿಯುವುದಿಲ್ಲ. ಹಿಂದೂಗಳ ವಿಗ್ರಹಾರಾಧನೆಗೆ ಇಲ್ಲಿ ಯಾವ ಅಡ್ಡಿ ಇಲ್ಲ. ಆದರೆ ಅದಕ್ಕೆ ಪ್ರತಿಫಲವಾಗಿ ಹೇರಳವಾದ ಸುಂಕ ಸಾರಿಗೆಗಳನ್ನು ಕೊಡಬೇಕು. ಪ್ರಸಿದ್ಧವಾದ ಜಗನ್ನಾಥ ಇರುವುದು ಇಲ್ಲಿಯೇ.

ಈ ತೀರದಲ್ಲಿ ಇಂಡಿಯಾದಲ್ಲಿಯೇ ಅತ್ಯಂತ ಶ್ರೀಮಂತ ವರ್ತಕರಿದ್ದಾರೆ. ಆದರೆ ಅವರು ತಮ್ಮ ಶ್ರೀಮಂತಿಕೆಯನ್ನು ತೋರಿಸಿಕೊಳ್ಳುವುದಿಲ್ಲ. ಹಾಗೆ ತೋರಿಸಿಕೊಂಡರೆ ಮಹಮ್ಮದೀಯರ ಕಾಟಕ್ಕೆ ಒಳಗಾಗುವುದಲ್ಲದೆ ಆಸ್ತಿಪಾಸ್ತಿಯೆಲ್ಲ ರಾಜನಿಗೆ ಸೇರಿ ಹೋಗುತ್ತದೆ. ಇಲ್ಲಿಯ ಜನ ಬಹು ಮೃದು ಸ್ವಭಾವದವರು. ಯಜಮಾನನಂತೆ ವರ್ತಿಸುವ ಬದಲು ಸೇವಕನಂತೆ ವರ್ತಿಸುತ್ತಾರೆ. ಇವರ ಮನೆಗಳೆಲ್ಲ ಬಹು ಕಿರಿದಾಗಿವೆ. ಅವಕ್ಕೆ ಹುಲ್ಲು ಹೊದಿಸಿರುತ್ತಾರೆ. ತಮ್ಮ ಹಣ ಹಾಗೂ ಒಡವೆ ವಸ್ತುಗಳನ್ನು ಮುಂದಿನ ಪೀಳಿಗೆಗಾಗಿ ಭೂಮಿಯಲ್ಲಿ ಹೂತಿಡುತ್ತಾರೆ. ಇಲ್ಲದಿದ್ದರೆ ಬೇರೆಯವರು ಕಂಡರೆ ಕಿತ್ತುಕೊಂಡುಬಿಡುತ್ತಾರೆ.

ಪರದೇಶಿಯರು, ಅದರಲ್ಲಿಯೂ ಇಂಗ್ಲಿಷಿನವರು ಮತ್ತು ಡಚ್ಚರು, ಇಲ್ಲಿ ಆರಾಮವಾಗಿದ್ದಾರೆ. ಬೇಕಾದ್ದೆಲ್ಲಾ ಇಲ್ಲಿ ಸಿಕ್ಕುತ್ತದೆ. ದನ, ಕುರಿ, ಕೋಳಿ, ಕೊಕ್ಕರೆ, ಮೀನು ಮುಂತಾದುವುಗಳು ಅಗ್ಗವಾಗಿ ಸಿಕ್ಕುತ್ತವೆ. ಇಲ್ಲಿ ಇರುವಂತಹ ಕೊಬ್ಬಿದ ದನಗಳನ್ನು ನಾನು ಇಂಡಿಯಾದ ಬೇರೆಲ್ಲಿಯೂ ನೋಡಲಿಲ್ಲ. ಮೇಯಲು ಒಳ್ಳೆಯ ಹುಲ್ಲುಗಾವಲಿದೆ. ಭೂಮಿಯು ಫಲವತ್ತಾಗಿದ್ದು ಮರಗಿಡಗಳು ಯಾವಾಗಲೂ

ಹಸುರಾಗಿರುತ್ತವೆ. ಇಲ್ಲಿ ಸಿಕ್ಕುವಂತಹ ಬೆಣ್ಣೆ, ತುಪ್ಪ, ಅಕ್ಕಿ ಮತ್ತು ಎಣ್ಣೆ ಇಂಡಿಯಾ ದೇಶದಲ್ಲಿ ಬೇರೆಲ್ಲಿಯೂ ಸಿಕ್ಕುವುದಿಲ್ಲ. ಇಲ್ಲಿ ಹೆಚ್ಚಾಗಿ ಸಾಸುವೆ ಎಣ್ಣೆಯನ್ನು ಉಪಯೋಗಿಸುತ್ತಾರೆ. ಈ ಎಣ್ಣೆ ಇಂಡಿಯಾದಲ್ಲೆಲ್ಲಾ ಸಿಕ್ಕುತ್ತದೆ. ಒಟ್ಟಿನಲ್ಲಿ ಈ ತೀರ ಅತ್ಯಂತ ಸುಖಕರವಾದ ಪ್ರದೇಶ.

ಒರಿಸ್ಸಾ ರಾಜ್ಯ ಅಷ್ಟು ದೊಡ್ಡದೇನಲ್ಲ. ಇದು ಮೊಗಲ್ ಸಾಮ್ರಾಜ್ಯಕ್ಕೆ ಸೇರಿದ್ದರೂ ಅನೇಕ ರಾಜರು ಗುಡ್ಡಗಾಡುಗಳಲ್ಲಿ ಸ್ವತಂತ್ರವಾಗಿ ಇದ್ದಾರೆ. ಹರ್ಸ್ಪಾಪುರ ಎಂಬುದೇ ಇದ್ದುದರಲ್ಲಿ ದೊಡ್ಡ ಬಂದರು. ಇಲ್ಲಿ ಸಾಕಷ್ಟು ಕ್ಯಾಲಿಕೋ ಬಟ್ಟೆಯನ್ನು ತಯಾರು ಮಾಡಿ ಇಂಗ್ಲಿಷರಿಗೂ ಡಚ್ಚರಿಗೂ ಮಾರಾಟಮಾಡುತ್ತಾರೆ. ಆದರೆ ಈ ಮಾರಾಟ ನಡೆಯುವುದು ಒಳನಾಡಿನ ಬಂಗಾಳಕೊಲ್ಲಿಯಲ್ಲಿರುವ ಬಾಲಸೂರ್‌ನಲ್ಲಿ. ಆದರೆ ಅಲ್ಲಿನ ನಿವಾಸಿಗಳನ್ನು 'ಒರಿಯಾ'ಗಳೆಂದು ಕರೆಯುತ್ತಾರೆ. ಅವರು ವಿಗ್ರಹಾರಾಧಕರು. ಬಡತನದಲ್ಲಿ ಕಾಲ ಹಾಕುತ್ತಾರೆ. ಹೇಳಿಕೊಳ್ಳುವಂತಹ ಪಟ್ಟಣಗಳೂ ಇಲ್ಲ. ಈ ರಾಜ್ಯದಲ್ಲಿ ಪ್ರಯಾಣಿಕರಿಗೆ ತುಂಬಾ ಕಿರುಕುಳ. ಏಕೆಂದರೆ ಇದು ಒಬ್ಬರ ಆಡಳಿತಕ್ಕೆ ಒಳಪಟ್ಟಿಲ್ಲ.

ಬಂಗಾಳ, ಹಿಂದೂಸ್ಥಾನದ ಅತ್ಯಂತ ಬಲಿಷ್ಠ ಹಾಗೂ ವಿಶಾಲವಾದ ರಾಜ್ಯಗಳಲ್ಲಿ ಒಂದು. ಅನುಕೂಲವಾದ ಅನೇಕ ನದಿಗಳನ್ನು ದೇವರು ಕರುಣಿಸಿದ್ದಾನೆ. ಈ ನದಿಗಳು ಬಂಗಾಳಕೊಲ್ಲಿಯಲ್ಲಿ ಸಮುದ್ರವನ್ನು ಸೇರುತ್ತವೆ. ಈ ಕೊಲ್ಲಿಯು ಇಡೀ ಮುನ್ನೂರು ಮೈಲಿಯ ಸಮುದ್ರತೀರ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿದೆ. ಈ ಕಾರಣದಿಂದಲೂ ಇನ್ನೂ ಅನೇಕ ಕಾರಣಗಳಿಂದಲೂ ಇದು ಬಹು ಹೆಸರುವಾಸಿಯೂ ಸಮೃದ್ಧಿಯೂ ಆದ ರಾಜ್ಯವಾಗಿದೆ.

ಬಹು ದೊಡ್ಡದಾದ ಗಂಗಾನದಿಯೂ ಅದರ ಅನೇಕ ಶಾಖೋಪಶಾಖೆಗಳೂ ಈ ಪ್ರದೇಶವನ್ನು ಬಹು ಫಲವತ್ತಾಗಿ ಮಾಡಿವೆ. ಎಲ್ಲವೂ ಸಮೃದ್ಧವಾಗಿದೆ. ಸಕ್ಕರೆ, ಬೆಲ್ಲ, ಹತ್ತಿ, ಅರಗು, ಜೇನುತುಪ್ಪ, ಜೇನುಮೇಣ, ಬೆಣ್ಣೆ, ತುಪ್ಪ, ಎಣ್ಣೆ, ಅಕ್ಕಿ, ಉದ್ದು ಮುಂತಾದ ನಿತ್ಯೋಪಯೋಗಿ ವಸ್ತುಗಳು ದೊರೆಯುತ್ತವೆ. ಅನೇಕ ಹಡಗುಗಳು ಇಲ್ಲಿಗೆ ಬಂದು ಇಲ್ಲಿಂದ ಇಂಡಿಯಾದ ಬೇರೆ ಭಾಗಗಳಿಗೂ ಪರ್ಷಿಯಾ, ಅರೇಬಿಯಾ ಚೀಣಾ ಮತ್ತು ದಕ್ಷಿಣ ಸಮುದ್ರಗಳಿಗೂ ಸಾಮಾನುಗಳನ್ನು ಹೇರಿಕೊಂಡು ಹೋಗುತ್ತವೆ. ಅಲ್ಲದೆ, ಈ ರಾಜ್ಯದಲ್ಲಿ ಕ್ಯಾಲಿಕೋ ಬಟ್ಟೆಗಳು, ರುಮಾಲುಗಳು, ಕಚ್ಚಾ ಹಾಗೂ ನೇಯ್ದ ರೇಷ್ಮೆ, ಇಂಡಿಯಾದಲ್ಲೇ ಉತ್ತಮವಾದ ಅಫೀಮು, ಉಂಡೆ (ಚೀಲದ) ಕಸ್ತೂರಿ, ಅದರಿಂದ ತೆಗೆದ ಪುಡಿ ಕಸ್ತೂರಿ, ಬಾಲ ಮೆಣಸು, ಬಗೆಬಗೆಯ ಗ್ರಂಧಿಗೆ ಸಾಮಾನುಗಳು ಸಿಕ್ಕುತ್ತವೆ. ಈ ಕಾರಣಗಳಿಂದ ಬಹು ಹೆಸರಾದ ಯೂರೋಪಿನ ಪ್ರವಾಸಿಗಳು ಇಲ್ಲಿಗೆ ಬಂದು ಹೋಗುತ್ತಾರೆ. ಅನೇಕ ಕ್ರೈಸ್ತರು ಇಲ್ಲಿ ನೆಲೆಸಿಯೇಬಿಟ್ಟಿದ್ದಾರೆ.

ಮೊಗಲ್ ಚಕ್ರವರ್ತಿಯ ಆಳ್ವಿಕೆಗೆ ಒಳಪಟ್ಟ ಈ ರಾಜ್ಯವನ್ನು ಅವನ ಪ್ರತಿನಿಧಿಯಾಗಿ 'ಮೀರ್ ಜುಮ್ಲಾ' ಎಂಬುವನು ಆಳುತ್ತಿದ್ದಾನೆ. 'ನವಾಬ್' ಎಂಬ ದೊಡ್ಡ ಹೆಸರಿನಲ್ಲಿ ನಿರಂಕುಶನಾಗಿ ರಾಜ್ಯಭಾರ ನಡೆಸುತ್ತಿದ್ದಾನೆ. ಬಂಗಾಳ, ಒರಿಸ್ಸಾ ಮತ್ತು ಪಾಟ್ನಾ ಇವು ಅವನಿಗೆ ಸೇರಿವೆ. ಅವನು ಬಂಗಾಳದ ಮೊದಲಿನ ರಾಜಧಾನಿಯಾದ ಡಾಕಾ ಬಿಟ್ಟು ಹೆಚ್ಚು ಸುಂದರವೂ ಸುಭದ್ರವೂ ಆದ ರಾಜಮಹಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಾನೆ. ಒರಿಸ್ಸಾ ರಾಜ್ಯವನ್ನು ಅನಾಯಾಸವಾಗಿ ತನ್ನ ವಶಪಡಿಸಿಕೊಂಡು ಅಸ್ಸಾಂ ರಾಜ್ಯದ ಮೇಲೆ ದಂಡೆತ್ತಿ ಹೋದಾಗ ಅಲ್ಲಿಯ ರಾಜ ದಿಕ್ಕೆಟ್ಟು ಓಡಿಹೋದ. ಆ ರಾಜ್ಯವೂ ತನ್ನ ವಶವಾದ ಮೇಲೆ ಮೀರ್ ಜುಮ್ಲಾ ದಕ್ಷಿಣ ಟಾರ್ಟರಿ ದೇಶದಮೇಲೆ ಕಣ್ಣುಹಾಕಿದ. ಆದರೆ ಮೃತ್ಯು ಯಾರನ್ನು ತಾನೆ ಬಿಟ್ಟೀತು! ಎಲ್ಲರನ್ನೂ ದುಃಖಕ್ಕೆ ಈಡುಮಾಡಿ ಆತ ಇಹಲೋಕ ತ್ಯಜಿಸಿದ. ಆತನ ಮರಣ ಇಲ್ಲಿ ನೆಲೆಸಿರುವ ಯೂರೋಪಿಯನರಿಗೆಲ್ಲ ತುಂಬಾ ವ್ಯಸನವನ್ನುಂಟುಮಾಡಿತು. ಬುದ್ಧಿವಂತರನ್ನೂ ಪ್ರತಿಷ್ಠಿತ ವ್ಯಕ್ತಿಗಳನ್ನೂ ಅವನು ಬಹುವಾಗಿ ಪ್ರೀತಿಸುತ್ತಿದ್ದ. ಅವನದು ಬಹು ಉದಾರವಾದ ಮನಸ್ಸು. ಇಂಗ್ಲಿಷ್ ರಾಷ್ಟ್ರದ ಬಗ್ಗೆ ಅವನ ಪ್ರೇಮ ಅಪಾರವಾಗಿತ್ತು. ಒಟ್ಟಿನಲ್ಲಿ ಅವನಲ್ಲಿ ರಾಜರ ಗುಣಗಳೆಲ್ಲವೂ ಪ್ರತಿಬಿಂಬಿಸುತ್ತಿದ್ದುವು.

ಇವನ ಸಾವಿನ ಸುದ್ದಿಯನ್ನು ಕೇಳಿ ಔರಂಗಜೇಬನು ವ್ಯಸನವನ್ನು ನಟಿಸಿದ, ಅಷ್ಟೆ. ಏಕೆಂದರೆ ಅವನಿಗೆ ಮೀರ್ ಜುಮ್ಲಾನ ಕೀರ್ತಿಯನ್ನು ಕೇಳಿ ಅಸೂಯೆಯಾಗಿಬಿಟ್ಟಿತ್ತು. ಅವನಿಗೆ ಅಷ್ಟೊಂದು ಅಧಿಕಾರ ಕೊಟ್ಟದ್ದೇ ತಪ್ಪೆಂದು ಭಾವಿಸಿದ್ದ. ಅವನ ಹೆಸರು ಕೇಳಿದರೆ ಆಗುತ್ತಿರಲಿಲ್ಲ. ತನ್ನ ಸಿಂಹಾಸನಕ್ಕೇ ಸಂಚಕಾರ ತಂದಾನೆಂಬ ಭೀತಿ ಇತ್ತು. ಔರಂಗಜೇಬನು ಮೀರ್ ಜುಮ್ಲಾನ ಸಾವಿನ ಸುದ್ದಿಯನ್ನು ಕೇಳಿ 'ಈಗ ನಾನು ಇಂಡಿಯಾ ದೇಶದ ಏಕೈಕ ಚಕ್ರವರ್ತಿ' ಎಂದನಂತೆ!

ಮೀರ್ ಜುಮ್ಲಾನ ಮಗನು ಅಪ್ಪನ ರಾಜ್ಯಕ್ಕೆ ಉತ್ತರಾಧಿಕಾರಿಯಾಗಲಿಲ್ಲ. ಆದರೂ ಚಕ್ರವರ್ತಿ ಅವನನ್ನು ಮುಖ್ಯ ಅಮೀರನನ್ನಾಗಿ ತನ್ನ ಆಸ್ಥಾನದಲ್ಲಿಯೇ ಇಟ್ಟುಕೊಂಡನಲ್ಲದೆ ಅಪ್ಪನ ಸ್ವಂತ ಆಸ್ತಿಯನ್ನೆಲ್ಲಾ ಕೊಟ್ಟು ಮರ್ಯಾದೆಯಿಂದ ನೋಡಿಕೊಂಡನು. ಮೀರ್ ಜುಮ್ಲಾನಂತರ ಔರಂಗಜೇಬನ ಮಾವ ಷೈಸ್ತಾಖಾನನು ನಿಧಾನವಾಗಿ ಚಕ್ರವರ್ತಿಯ ಮನಸ್ಸನ್ನು ಒಲಿಸಿಕೊಂಡು ಮೂರು ರಾಜ್ಯಗಳನ್ನೊಳಗೊಂಡ ಬಂಗಾಳದ ನವಾಬನಾದನು. ಇವನು ತನಗೆ ಅಧೀನನಾಗಿ ನಡೆದುಕೊಳ್ಳುವನೆಂದು ಔರಂಗಜೇಬನು ಭಾವಿಸಿದ್ದನು. ಆದರೆ ಯಾವಾಗ ತನ್ನ ರಾಜ್ಯದ ಆದಾಯ ಚಕ್ರವರ್ತಿಯ ಆದಾಯದಷ್ಟೇ ಆಯಿತೋ ಆಗ ಷೈಸ್ತಾಖಾನನ ತಲೆ ತಿರುಗಿತು. ಚಕ್ರವರ್ತಿಗೆ ಕೊಡುವ ಕಪ್ಪಕಾಣಿಕೆಗಳನ್ನು ಕೊಡುವುದಿಲ್ಲ ಎಂದನು. ನನಗೆ ಖಚಿತವಾಗಿ ತಿಳಿದು ಬಂದಿರುವಂತೆ ಷೈಸ್ತಾಖಾನನ ಆದಾಯ ಒಂದು ದಿನಕ್ಕೆ ಒಂದು ಲಕ್ಷ ರೂಪಾಯಿ (ಅಂದರೆ ೧೨,೫೦೦ ಪೌಂಡುಗಳು). ನಾನು ಇಂಡಿಯಾ ದೇಶಕ್ಕೆ ಬಂದ ಮೊದಲ ವರ್ಷ

ಇವನು ಔರಂಗಜೇಬನಿಗೆ ೮೦ ಲಕ್ಷ ರೂಪಾಯಿಗಳನ್ನು ಕಳುಹಿಸಿಕೊಟ್ಟ. ಆದರೆ ಮಾರನೆಯ ವರ್ಷ ಕಳುಹಿಸಲೇ ಇಲ್ಲ. ಇದಕ್ಕೆ ಬದಲು ಅವನು ಹಣ ಢಾಕ್ಕಾದಲ್ಲಿದ್ದರೂ ದೆಹಲಿ ಅಥವಾ ಆಗ್ರಾದಲ್ಲಿರುವಷ್ಟೇ ಸುರಕ್ಷಿತವಾಗಿದೆ ಎಂಬ ಉತ್ತರ ಕಳುಹಿಸಿದ.

ಇದನ್ನು ನೋಡಿದ ಔರಂಗಜೇಬ ಷೈಸ್ತಾಖಾನನ ಗರ್ವವನ್ನು ಮುರಿಯಲು ಪ್ರಾಪ್ತವಯಸ್ಕನಾದ ತನ್ನ ಮಗನನ್ನು ಪಾಟ್ನಾಕ್ಕೆ ಕಳುಹಿಸಿ ಆತ ಬಂಗಾಳ ಮುಂತಾದ ರಾಜ್ಯಗಳ ರಾಜನೆಂದು ಘೋಷಿಸಿದನು. ಈ ರಾಜಕುಮಾರನು ತನ್ನ ವಿನಯವರ್ತನೆಗಳಿಂದ ಮೂರು ರಾಜ್ಯಗಳ ಹಿರಿಯರ ಮನಸ್ಸನ್ನು ಒಲಿಸಿಕೊಂಡನು. ಎಲ್ಲರೂ ಕೂಡಿ ಮಾತಾಡಿ ಷೈಸ್ತಾಖಾನನಿಗೆ ಹೇಳಿಕಳುಹಿಸಿದರು—ಆತನು ಆಗ್ರಾಕ್ಕೆ ಪ್ರಯಾಣಮಾಡಲು ಸಿದ್ಧನಾಗಬೇಕು ಎಂದು. ತನಗೊದಗಿದ ಅಪಾಯವನ್ನು ಅರಿತ ಷೈಸ್ತಾಖಾನನು ಚಕ್ರವರ್ತಿಯ ಮನ ಒಲಿಸಿಕೊಳ್ಳದೆ ಬೇರೆ ದಾರಿ ಇಲ್ಲವೆಂದುಕೊಂಡು ತನ್ನ ಅಪಾರ ಭಂಡಾರದ ಸಮೇತ ಆಗ್ರಾಕ್ಕೆ ಧಾವಿಸಿದನು. ಇವನ ಭಂಡಾರ ಬೆಳೆದು ಬೆಟ್ಟವಾಗಿತ್ತು. ೬೦ ದೋಣಿಗಳಲ್ಲಿ ಬೆಳ್ಳಿಯನ್ನೂ ೧೦ ದೋಣಿಗಳಲ್ಲಿ ಚಿನ್ನದ ಮೊಹರುಗಳನ್ನು ಹೇರಿಸಿದನು. ಅಲ್ಲದೆ ದೋಣಿಗಳಲ್ಲಿ ಅವನ ಪರಿವಾರದವರು, ಡೇರೆಗಳು, ಪಲ್ಲಕ್ಕಿಗಳು ಸಿಪಾಯಿಗಳು ಹೊರಟರು. ಅತ್ತ ಷೈಸ್ತಾಖಾನನು ಆಗ್ರಾಕ್ಕೆ ಹೋದನೋ ಇಲ್ಲವೋ ಇತ್ತ ರಾಜನನ್ನು ಢಾಕಾದ ಅರಮನೆಯಲ್ಲಿ ಪ್ರತಿಷ್ಠಾಪಿಸಿ ಆನಂದೋತ್ಸಾಹಗಳಿಂದ ಮೆರೆಸಲಾಯಿತು.[೧೫]

ಢಾಕಾ ನಗರ ಬಹು ದೊಡ್ಡದು. ಆದರೆ ಅದು ಇರುವ ಸ್ಥಳ ಜೌಗು ಮತ್ತು ಉಪ್ಪುನೀರಿನಿಂದ ಕೂಡಿದೆ. ಇವೆರಡು ಅನಾನುಕೂಲತೆಗಳನ್ನು ಬಿಟ್ಟರೆ ಅಲ್ಲಿ ಇತರ ಅನುಕೂಲಗಳೆಲ್ಲಾ ಇವೆ. ಗಂಗಾನದಿಯ ಉಪನದಿ ಈ ನಗರದ ಬಳಿಯೇ ಹರಿಯುತ್ತದೆ. ಇಲ್ಲಿರುವ ಕಟ್ಟಡಗಳು ಭವ್ಯವಾಗಿವೆ. ಇಲ್ಲಿ ಬಲಯುತವಾದ ಸೈನ್ಯವೊಂದು ಯಾವಾಗಲೂ ಸಿದ್ಧವಿದೆ. ಅಲ್ಲದೆ ಯುದ್ಧಕ್ಕಾಗಿ ಭಾರಿ ಭಾರಿ ಆನೆಗಳನ್ನು ಅರಮನೆಗೆ ಸಮೀಪದಲ್ಲಿಯೇ ಸಾಕಿದ್ದಾರೆ. ಆದರೆ ರಾಜನು ಬೇಕೆಂದಾಗ ಯುದ್ಧಕ್ಕೆ ಒದಗಿಸಲು ಐನೂರು ಕುದುರೆಗಳನ್ನು ಸಾಕಿದರೆ ಮಾತ್ರ ಆನೆಯ ಮೇಲೆ ಸವಾರಿಮಾಡುವ ಅವಕಾಶ ಕೊಡಲಾಗುವುದು. ಇಲ್ಲಿ ಇಂಗ್ಲಿಷರ ಹಾಗೂ ಡಚ್ಚರ ಗಡಂಗುಗಳು ಇವೆ. ಆದರೆ ಅಷ್ಟೇನೂ ಹೆಚ್ಚು ಬಂಡವಾಳ ಹಾಕಿಲ್ಲ.

---

೧೫ ಷೈಯಿಸ್ತಾಖಾನನನ್ನು ದಿಲ್ಲಿಗೆ ಕರೆಸಿಕೊಂಡ ಬಗ್ಗೆ ಆಗಿನ ಇಂಗ್ಲಿಷರದಳ್ಳಾಳಿಗಳು ತಮ್ಮ ಮೇಲಿನವರಿಗೆ ಮಾಡಿದ ವರದಿಗಳು ವಿವಿಧ ಬಗೆಬಗೆಯಾಗಿವೆ. ಖಾನನೇ ಬಂಗಾಳ ಬಿಡಲು ಅಪೇಕ್ಷೆ ಪಟ್ಟನೆಂದು ಒಂದು ವರದಿ ಇದ್ದರೆ, ದಿಲ್ಲಿಗೆ ಹೋಗಿ ಖಾನನು ಚಕ್ರವರ್ತಿಗೆ ೩೦ ಲಕ್ಷ ರೂಪಾಯಿಗಳನ್ನು ಒಪ್ಪಿಸಿದನೆಂದು ಇನ್ನೊಂದು ವರದಿ ತಿಳಿಸುತ್ತದೆ.

ಷೈಸ್ತಾಖಾನನನ್ನು ಆಮೇಲೆ ಆಗ್ರಾದ ನವಾಬನನ್ನಾಗಿ ನೇಮಿಸಲಾಯಿತು. ಆತ ತನ್ನ ೯೩ನೆಯ ವಯಸ್ಸಿನಲ್ಲಿ ೧೬೯೪ರಲ್ಲಿ ಆಗ್ರಾದಲ್ಲಿ ಕಾಲವಾದನು.

ಢಾಕಾ ಬಿಟ್ಟರೆ ಇನ್ನೊಂದು ಉತ್ತಮವಾದ ನಗರವೆಂದರೆ ಕಟಕ್. ಇದು ಢಾಕ್ಕಾಕಿಂತಲೂ ಹೆಚ್ಚು ಅನುಕೂಲವೂ ಯೋಗ್ಯವೂ ಆದ ಊರು. ಆದರೆ ಅಷ್ಟು ದೊಡ್ಡದಾಗಿಲ್ಲ. ಅಂದ ಚಂದದಲ್ಲಿ ಢಾಕಾ ಮೀರಿಸುತ್ತದೆ. ಇದು ಬಾಲಸೂರ್‌ನಿಂದ ಐದು ದಿನದ ಪ್ರಯಾಣದಷ್ಟು ದೂರದಲ್ಲಿ ಒಳನಾಡಿನಲ್ಲಿದೆ. ಉತ್ಕೃಷ್ಟವಾದ ನೀರು ದೊರೆಯುತ್ತದೆ. ಸೊಗಸಾದ ಮಾವು. ಹುಣಸೆ, ಈಚಲು ಮತ್ತು ತಾಳೆಮರಗಳ ತೋಪುಗಳೂ ತೆಂಗಿನಮರಗಳೂ ಇವೆ. ಇಲ್ಲಿರುವ ರಾಜ್ಯಪಾಲ (ಗವರ್ನರ್) ರಾಜನಂತೆಯೇ ಮೆರೆಯುತ್ತಾನೆ. ಇವನನ್ನು 'ನವಾಬ'ನೆಂದು ಕರೆಯುತ್ತಾರೆ.

ಕ್ರಿ. ಶ. ೧೬೬೦ರಲ್ಲಿ ನಾನು ಬಾಲಸೂರ್ ಪಟ್ಟಣದಲ್ಲಿದ್ದಾಗ ಬಂಗಾಳದ ರಾಜನು ಇಲ್ಲಿಗೆ ಹೊಸ ನವಾಬನನ್ನು ನೇಮಕ ಮಾಡಿ ಕಳುಹಿಸಿಕೊಟ್ಟನು. ಹಳಬನಿರುವಾಗ ಹೊಸಬನನ್ನು ಕಳುಹಿಸಿದರೆ ಕಲಹಕ್ಕೆ ಕಾರಣವಾದೀತೆಂದು ಹಳಬನನ್ನು ಢಾಕಾಕ್ಕೆ ಕರೆಸಿಕೊಂಡಮೇಲೆಯೇ ಹೊಸಬನನ್ನು ಕಳುಹಿಸಿದನು. ಇವನು ತನ್ನ ಪ್ರಯಾಣದ ಕಾಲದಲ್ಲಿ ಜನಗಳಿಂದ ಹಣವನ್ನು ಏನೇನೋ ನೆಪ ಹೇಳಿ ವಸೂಲಿಮಾಡಿದನು. ತಾನು ಅರಮನೆಯಲ್ಲಿರಬೇಕಾದರೆ ಅಪಾರ ಹಣ ಬೇಕಾಗುವುದೆಂಬ ನೆಪ ಹೇಳಿ ಶ್ರೀಮಂತರನ್ನೆಲ್ಲ ಸುಲಿಗೆಮಾಡಿ ಅವರನ್ನು ಭಿಕಾರಿಗಳನ್ನಾಗಿ ಮಾಡಿದನು. ಒಬ್ಬೊಬ್ಬರಿಂದ ಹತ್ತರಿಂದ ಐವತ್ತು ಸಾವಿರ ರೂಪಾಯಿಗಳವರೆಗೂ ಕಸಿದುಕೊಂಡನು. ಒಂದು ದಿನ ನಾನು ಇವನ ಬಿಡಾರಕ್ಕೆ ಸಮೀಪದಲ್ಲಿ ಹೂಡಿದ್ದ ಬಿಡಾರದಲ್ಲಿ ಅವನ ಡಚ್ ಡಾಕ್ಟರೊಬ್ಬನೊಂದಿಗೆ ಮಾತಾಡುತ್ತ ಕುಳಿತಿದ್ದೆ. ಆಗ ಖೇಮ್‌ಚಂದ್ ಎಂಬ ದೊಡ್ಡ ವರ್ತಕನು ತನ್ನ ದೊಡ್ಡ ಪರಿವಾರ ಸಮೇತ ನದಿ ದಾಟಲು ಇಲ್ಲಿಗೆ ಬಂದನು. ಇವನು ಈಸ್ಟ್ ಇಂಡಿಯಾ ಕಂಪೆನಿಯ ದೊಡ್ಡ ದಳ್ಳಾಳಿ. ತೋಳದಂತೆ ಕಾಯುತ್ತಿದ್ದ ನವಾಬನು ಅವನಿಗೆ ಹೇಳಿಕಳುಹಿಸಿದನು. ಇದನ್ನು ಕೇಳಿ ವರ್ತಕನು ತನ್ನ ಜರತಾರಿ ರುಮಾಲನ್ನೂ ಚಿನ್ನದ ಉಂಗುರ ಮುಂತಾದ ಒಡವೆಗಳನ್ನೂ ತೆಗೆದುಹಾಕಿ ಸಾಮಾನ್ಯ ಉಡುಪಿನಲ್ಲಿ ನವಾಬನ ಬಳಿಗೆ ಬಡವನಂತೆ ಹೋಗಿ ಅವನಿಗೆ ಅಡ್ಡಬಿದ್ದು ನಮಸ್ಕಾರ ಮಾಡಿದನು. ಈ ಸಲಾಮಿನಿಂದ ಮೋಸಹೋಗದ ನವಾಬನು ಒಂದು ಲಕ್ಷ ರೂಪಾಯಿ ಕೊಡಬೇಕೆಂದು ಅಪ್ಪಣೆ ಮಾಡಿದನು. ಆದರೆ ಆ ವರ್ತಕ ತನ್ನಲ್ಲಿ ದುಡ್ಡೇ ಇಲ್ಲವೆಂತಲೂ ತನ್ನ ಮಗಳ ಮದುವೆಗಾಗಿ ಹಿಂದೊಮ್ಮೆ ಹಳ್ಳಿಗೆ ಹೋಗುತ್ತಿದ್ದಾಗ ತನ್ನಲ್ಲಿದ್ದ ೧೫ ಲಕ್ಷ ರೂಪಾಯಿಗಳನ್ನು ಕಳ್ಳರು ಕಿತ್ತುಕೊಂಡರೆಂದೂ ಹೇಳಿದನು. ಆದರೆ ನವಾಬನು ಆತನ ಮಾತನ್ನೇ ಉಪಯೋಗಿಸಿಕೊಂಡು 'ಒಬ್ಬ ಮಗಳ ಮದುವೆಗೆ ೧೫ ಲಕ್ಷ ಖರ್ಚುಮಾಡುವಷ್ಟು ಶ್ರೀಮಂತನಾದರೆ ಉಳಿದ ಮಕ್ಕಳ ಮದುವೆಗೆ ಮಾಡಲು ಇನ್ನೆಷ್ಟು ಹಣ ಬೇಕು! ನಿನ್ನಲ್ಲಿ ಹಣದ ರಾಶಿಯೇ ಇರಬೇಕು. ನಾನೂ ಈ ರಾಜ್ಯಕ್ಕೆ ಲಗ್ನ ಆಗಿದ್ದೇನೆ. ಈ ರಾಜ್ಯದ ಅಧಿಪತಿ ನಾನು' ಎಂದು ಹೇಳಿದಾಗ ದಳ್ಳಾಳಿ ಕುಯ್ಯೋ ಮರ್ರೋ ಎನ್ನುತ್ತಾ ನವಾಬನ ಕಡೆಯವರ ಕೈಬೆಚ್ಚಗೆ ಮಾಡಿ ೫೦ ಸಾವಿರ ರೂಪಾಯಿ ಕೊಟ್ಟು ಬಚಾವಾ

ವಾದನು. ಒಡೆಯನಾದ ಷೈಸ್ತಾಖಾನನು ಅನುಸರಿಸುತ್ತಿದ್ದ ಮಾರ್ಗವನ್ನೇ ಈ ನವಾಬನೂ ಅನುಸರಿಸಿದನು.

ಮಾರನೆಯ ದಿನ ಇನ್ನೊಂದು ವಿಶೇಷವಾದ ಸಂಗತಿ ಜರುಗಿತು. ಹಿಂದಿನ ನವಾಬನು ತನ್ನ ಹೆಂಡತಿಯನ್ನು ಕಟಕ್‌ನಲ್ಲಿಯೇ ಬಿಟ್ಟು ನಿಧಾನವಾಗಿ ಬರಬಹುದೆಂದು ಹೇಳಿದ್ದ. ಆಕೆಯೂ ಹಿಂದಿಡಿದು ಢಾಕಾಗೆ ಹೊರಟು ದಾರಿಯಲ್ಲಿ ಹೊಸ ನವಾಬನು ಬೀಡುಬಿಟ್ಟಿದ್ದ ಸ್ಥಳಕ್ಕೆ ಒಂದು ಮೈಲಿ ದೂರದಲ್ಲಿ ತಂಗಿದ್ದಳು. ಅವಳ ಪರಿವಾರದಲ್ಲಿ ೧೦೦೦ ಗಂಡಸರ ಖೋಜಾಗಳ ದೊಡ್ಡ ಪರಿವಾರವೇ ಇತ್ತು. ಇದನ್ನು ತಿಳಿದ ನವಾಬನು ಆಕೆಯಿಂದಲೂ ಒಂದೆರಡು ಲಕ್ಷ ರೂಪಾಯಿಗಳನ್ನು ಕಸಿಯುವ ಅವಕಾಶ ಸಿಕ್ಕಿತೆಂದು ಹಿಗ್ಗಿ ಎರಡು ಲಕ್ಷ ರೂಪಾಯಿ ಕೊಡಬೇಕೆಂದು ಹೇಳಿಕಳಿಸಿದನು. ಕೆಚ್ಚೆದೆಯ ಆ ಹೆಂಗಸು ತಾನು ಯಾವುದೂ ಕೊಡಬೇಕಾಗಿಲ್ಲ ಎಂದು ಹೇಳಿಕಳುಹಿಸಿದಳು. ಹಾಗಿದ್ದರೆ ತನ್ನ ರಾಜ್ಯದ ಗಡಿಯನ್ನು ತನ್ನ ಅಪ್ಪಣೆಯಿಲ್ಲದೆ ಯಾರೂ ದಾಟಬಾರದೆಂದು ನವಾಬನು ಆಜ್ಞೆ ಮಾಡಿದನು. ಇದನ್ನು ಕೇಳಿ ಕುಗ್ಗದ ಆ ವೀರವನಿತೆ ತನ್ನ ಕಡೆಯವರನ್ನೆಲ್ಲಾ ಹೋರಾಟಕ್ಕೆ ಸಿದ್ಧಪಡಿಸಿ, ತನ್ನ ಗಂಡನ ಆನೆಯೊಂದನ್ನು ಏರಿ, ಧೈರ್ಯವಿದ್ದರೆ ಯುದ್ಧಮಾಡಿ ಹಣವನ್ನಾಗಲೀ ಅಥವಾ ತನ್ನ ಪ್ರಾಣವನ್ನಾಗಲೀ ತೆಗೆದುಕೊಳ್ಳಬಹುದೆಂದು ತಿಳಿಸಿ ಎದುರು ನಿಂತಳು. ಇದನ್ನು ಕೇಳಿ ನಾಚಿಕೆಪಟ್ಟ ಪುಕ್ಕಲು ನವಾಬನು ಅಲ್ಲಿಂದ ಕಂಬಿಕಿತ್ತು ನದಿಯ ಆಚೆಗೆ ತನ್ನ ಬಿಡಾರ ಬದಲಾಯಿಸಿದನು.

ಈಗ ಬಾಲಸೂರಿನಿಂದ ಅರ್ಧ ಮೈಲಿ ದೂರದಲ್ಲಿ ಬೀಡುಬಿಟ್ಟ ನವಾಬನು ಇಂಗ್ಲಿಷರೂ ಡಚ್ಚರೂ ಕೈತುಂಬ ದುಡ್ಡು ತೆಗೆದುಕೊಂಡು ಬರುವರೇ ಎಂದು ಕಾದು ಕುಳಿತನು. ಅವನ ನಿರೀಕ್ಷೆ ತಪ್ಪಾಗಲಿಲ್ಲ. ಇಂಗ್ಲಿಷರ ಮತ್ತು ಡಚ್ಚರ ಏಜೆಂಟರುಗಳು ಒಬ್ಬರಿಗಿಂತ ಒಬ್ಬರು ಹೆಚ್ಚು ಪೋಟಾ ಪೋಟಿಯಿಂದ ನವಾಬನಿಗೆ ಹಣವನ್ನೂ ಬಹುಮಾನಗಳನ್ನೂ ಕೊಟ್ಟು ಅವನನ್ನು ಒಲಿಸಿಕೊಂಡು ತಮಗೆ ಬೇಕಾದ ಪರವಾನಗಿಗಳನ್ನು ಪಡೆದುಕೊಂಡರು. ಹೀಗೆಲ್ಲಾ ಹಣ ಸಂಪಾದಿಸಿದ ನಂತರ ನವಾಬನು ಒಂದು ದಿನ ದೊಡ್ಡ ಆನೆಯೊಂದರ ಮೇಲೆ ಕುಳಿತು ಬಹುವೇಗದಿಂದ ಬಾಲಸೂರು ನಗರದಲ್ಲಿ ಮೆರವಣಿಗೆ ಹೊರಟು ಕಟಕ್ ಕಡೆ ಪ್ರಯಾಣ ಹೊರಟನು.

ಈ ರಾಜ್ಯದ ಜನಗಳು ವಿಚಿತ್ರವಾದ ಹಿಂಸೆಗಳಿಗೆ ಒಳಗಾಗುತ್ತಾರೆ. ಅದರಲ್ಲಿಯೂ ಆ ಮುದುಕ ಷೈಸ್ತಾಖಾನನು ಶ್ರೀಮಂತರಿಂದಲೂ ಬಡವರಿಂದಲೂ ಹಣ ಕೀಳುವುದರ ಜೊತೆಗೆ ಹುಗ್ಲಿ, ಜೆಸ್ಸೂರ್, ಪಿಪ್ಲಿ, ಬಾಲಸೂರ್‌ಗಳಲ್ಲಿರುವ ವರ್ತಕರು ಪ್ರತಿವರ್ಷ ತನಗೆ ಬೇಕಾದ ಹಡಗುಗಳನ್ನು ಪುಕ್ಕಟೆ ಕಟ್ಟಿಕೊಡುವಂತೆಯೂ ಮಾಡುತ್ತಿದ್ದ. ಕಟ್ಟಿದ ಹಡಗುಗಳನ್ನು ಗಂಗಾನದಿಯ ಮೇಲೆ ಢಾಕಾದ ಅರಮನೆಯವರೆಗೆ ತಂದು ಗುಂಡು ಹಾರಿಸಿ ಸಲಾಂಮಾಡಿ ಗೌರವ ನೀಡಿ ಹೋಗಬೇಕಾಗಿತ್ತು. ಆದರೆ ಆಮೇಲೆ ಆ ಹಡಗುಗಳ

ಉಪಯೋಗವೇ ಇಲ್ಲ. ಅವು ನಿಂತ ಕಡೆ ನಿಂತು ಕೊಳೆತುಹೋಗುತ್ತಿದ್ದುವು. ಇಷ್ಟೆಲ್ಲಾ ಖರ್ಚು ವೆಚ್ಚಗಳನ್ನು ಹಿಂದೂ ವರ್ತಕರ ಮೇಲೆ ಹೇರಲಾಗುತ್ತಿತ್ತು.

ಇಂಗ್ಲಿಷರಿಗೂ ಡಚ್ಚರಿಗೂ ಷೈಸ್ತಾಖಾನನು ತುಂಬಾ ತೊಂದರೆ ಕೊಡುತ್ತಿದ್ದನು. ಅವರು ತರುತ್ತಿದ್ದ ಪೆಟ್ಲುಪ್ಪು ಮುಂತಾದ ಸರಕುಗಳ ಸಾಗಾಣಿಕೆಗೆ ಅಡ್ಡಿಮಾಡಿ ಹಣ ಕಸಿಯುತ್ತಿದ್ದ. ಆದರೆ ಹೊಸ ರಾಜನು೧೬ ಹಾಗೆ ಮಾಡದೆ ಹಿಂದೆ ನೀಡಿದ ಫರ್ಮಾನು ಗಳನ್ನು ಮನ್ನಿಸಿ ಗೌರವದಿಂದ ನಡೆದುಕೊಳ್ಳುತ್ತಿದ್ದಾನೆ. ಷೈಸ್ತಾಖಾನನ ಕಾಲದಲ್ಲಿ ತೊಂದರೆ ಕೊಟ್ಟ ಎಲ್ಲ ರಾಜ್ಯಪಾಲರನ್ನೂ ತೆಗೆದುಹಾಕಿ ಅವರನ್ನು ಶಿಕ್ಷಿಸಿ ಇಂಗ್ಲಿಷರಿಗೂ ಡಚ್ಚರಿಗೂ ಹೊಸ ಹೊಸ ಫರ್ಮಾನುಗಳನ್ನು ಕೊಟ್ಟಿದ್ದಾನೆ. ಇಂಗ್ಲಿಷರೇ ಹೆಚ್ಚು ಸೌಲಭ್ಯಗಳನ್ನು ಪಡೆದರೆಂದು ಹೇಳಬೇಕು. ಇದಕ್ಕೆ ಕಾರಣರು ಇಂಗ್ಲಿಷರ ಮುಖ್ಯಾಧಿ ಕಾರಿಯಾದ ಮಾಥ್ಯೂ ವಿನ್ಸೆಂಟ್ ಎಂಬುವರು.

ಆಗಲೇ ಹೇಳಿದಂತೆ ಬಂಗಾಳವು ನದಿಗಳಿಂದ ತುಂಬಿದೆ. ಇವುಗಳಲ್ಲಿ ಮುಖ್ಯ ವಾದುದು ಗಂಗಾನದಿ. ಇದು ಸ್ವರ್ಗದಿಂದಲೇ ಹುಟ್ಟಿ. ಬಂದಿದೆಯೆಂದು ಹೇಳುತ್ತಾರೆ. ಇದರ ಉಪನದಿಗಳಲ್ಲಿ ಒಂದು ಹುಗ್ಲಿನದಿ೧೭ ಈ ನದಿ ಹಡಗುಗಳ ಸಂಚಾರಕ್ಕೆ ತುಂಬ ಅನುಕೂಲವಾಗಿದೆ. ಒಳಭಾಗಕ್ಕೆ ಬಹು ದೂರ ಹಡಗುಗಳು ಹೋಗಬಹುದು. ಇದರಿಂದ ಇಂಗ್ಲಿಷರಿಗೂ ಡಚ್ಚರಿಗೂ ವ್ಯಾಪಾರಕ್ಕೆ ಬಹು ಅನುಕೂಲವಾಗಿದೆ. ಹುಗ್ಲಿ ಎಂಬ ಪಟ್ಟಣದಿಂದ ನದಿಗೂ ಹುಗ್ಲಿ ಎಂಬ ಹೆಸರು ಬಂದಿದೆ. ಹುಗ್ಲಿ ಪಟ್ಟಣವು ಸುಂದರವಾದ ಕಟ್ಟಡಗಳಿಂದ ಕೂಡಿದ ಜನವಸತಿಯ ಊರು. ಬಂಗಾಳ, ಒರಿಸ್ಸಾ ಮತ್ತು ಪಾಟ್ನಾಗಳಿಂದ ವಿಧವಿಧ ಸರಕುಗಳು ಇಲ್ಲಿಗೆ ಬರುತ್ತವೆ. ಇಲ್ಲಿಗೆ ಬಂದು ಇಲ್ಲಿರುವ 'ಬಜಾರ್' ಎಂಬ ಹೆಸರಿನ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತವೆ. ಇಲ್ಲಿ ಅತ್ಯುತ್ತಮವಾದ ಚೌಲ್ಟ್ರಿ (Choultry) ಇದೆ. ಪ್ರವಾಸಿಗಳಿಗೆ ಇದು ತುಂಬಾ ಅನುಕೂಲವಾಗಿದೆ. ಅಲ್ಲದೆ, ಇಂಗ್ಲಿಷರ ಮತ್ತು ಡಚ್ಚರ ಗಡಂಗುಗಳೂ ಇವೆ. ಮುಂಗಾರು ಮಳೆಗಿಂತ ಮೊದಲು ಪಾಟ್ನಾ ಮತ್ತು ಇನ್ನೂ ಆ ಕಡೆ ಬೀಳುವ ಭಾರಿ ಮಳೆಯಿಂದ ಹುಗ್ಲಿ 'ಹೊಳೆ' (hole) ತುಂಬಿಹರಿಯುತ್ತದೆ. ಒಮ್ಮೆ ಡಚ್ಚರ ಗಡಂಗನ್ನೇ ಕೊಚ್ಚಿಕೊಂಡು ಹೋಯಿತು. ಈಗ ಅವರು ಎತ್ತರದಲ್ಲಿ ಬೇರೊಂದು ಹೊಸ ಗಡಂಗು ಕಟ್ಟಿಕೊಂಡಿದ್ದಾರೆ. ನಾನೊಮ್ಮೆ ೧೬೭೬ನೆಯ ಸೆಪ್ಟಂಬರ್ ತಿಂಗಳಿನಲ್ಲಿ ನಾನೇ ಯಜಮಾನನಾಗಿದ್ದ ನಾವೆಯಲ್ಲಿ ಹುಗ್ಲಿ ನದಿಯ ಮೇಲೆ ಬರುತ್ತಿರುವಾಗ ಇಂತಹ ಪ್ರವಾಹಕ್ಕೆ ಸಿಕ್ಕಿ ೧೪ ದಿವಸಗಳ ಕಾಲ ತತ್ತರಿಸಬೇಕಾಯಿತು. ದೇವರ ದಯೆದಿಂದ ಬೇರೆ ದಿಕ್ಕಿನಿಂದ ಬೀಸಿದ ಗಾಳಿಯಿಂದ ಬದುಕಿಕೊಂಡೆ.

---

೧೬ ಇವನು ಔರಂಗಜೇಬನ ಮೂರನೆಯ ಮಗ. ಮಹಮ್ಮದ್ ಆಜಂ. ಇವನಿಗಿಂತ ಮೊದಲು ಸ್ವಲ್ಪಕಾಲ ಫಿದಯ್‌ಖಾನ್ ಎಂಬುವನು ರಾಜ್ಯವಾಳುತ್ತಿದ್ದ.

೧೭ ಇದು ಉಪನದಿಯಲ್ಲ. ಗಂಗಾ ನದಿಯ ಒಂದು ಭಾಗ.

ನವಾಬನಿಗೂ ಮತ್ತು ಕೆಲವು ವರ್ತಕರಿಗೂ ಸೇರಿದ ಇಪ್ಪತ್ತು ಹಡಗುಗಳು ಇಲ್ಲಿಯೂ ಬಾಲಸೂರ್ ಮತ್ತು ಪಿಪ್ಲಿಗಳಲ್ಲಿಯೂ ಇವೆ. ಇವುಗಳಲ್ಲಿ ಕೆಲವು ಪ್ರತಿವರ್ಷ ಆನೆಗಳನ್ನು ತರುವುದಕ್ಕೆ ಸಿಲೋನಿಗೂ ತೆನ್ನಾಸರಿಗೂ ಹೋಗುತ್ತವೆ. ಮತ್ತೆ ಕೆಲವು ಮಾಲ್ಡೀವ್ ಎಂದು ಕರೆಯಲ್ಪಡುವ ೧೨,೦೦೦ ದ್ವೀಪಗಳಿಂದ ಕವಡೆ, ಕಾಯರ್ (ತೆಂಗಿನ ನಾರು) ತರುವುದಕ್ಕೆ ಹೋಗುತ್ತವೆ. ಇವುಗಳಿಂದ ಕೈತುಂಬಾ ಲಾಭ ಇದೆ. ಸಿಲೋನಿನ ಆನೆಗಳಿಗೆ ಇಲ್ಲಿ ಹೆಚ್ಚು ಬೆಲೆ. ಅವು ತೆನಾಸರಿ, ಪೇಡಾ ಮತ್ತು ಸಯಾಂ ಆನೆಗಳಿಗಿಂತ ಹೆಚ್ಚು ಚುರುಕು. ಇವನ್ನು ಸಿಲೋನಿನ ಕಾಡುಗಳಲ್ಲಿ ಡಚ್ಚರು ಹಿಡಿದು ಪಳಗಿಸಿರುತ್ತಾರೆ. ಅವರಿಂದ ಇವನ್ನು ಕೊಂಡುಕೊಂಡು ಬರುತ್ತಾರೆ. ಆನೆಗಳಿಗೆ ಬದಲು ಅಕ್ಕಿ, ತುಪ್ಪ, ಗೋಧಿ, ಅಫೀಮು, ರೇಷ್ಮೆ, ಕ್ಯಾಲಿಕೊ ಬಟ್ಟೆಗಳನ್ನು ಕೊಡು ತ್ತಾರೆ. ಆನೆಗಳನ್ನು ಒದಗಿಸುವ ಕೆಲಸವನ್ನು ಈಗಿನ ರಾಜಕುಮಾರನೂ ಇವನ ಹಿಂದೆ ಇದ್ದ ನವಾಬನೂ ಆಯಾ ರಾಜ್ಯದ ಗವರ್ನರುಗಳಿಗೆ ವಹಿಸಿ ತಾವು ತೆಪ್ಪಗೆ ಕುಳಿತು ಕೊಳ್ಳುತ್ತಾರೆ. ಗವರ್ನರುಗಳೇ ಆನೆಗಳನ್ನು ತರಿಸುವ ಜವಾಬ್ದಾರಿ ಹೊರುತ್ತಾರೆ.

ಬಂಗಾಳ ರಾಜ್ಯಕ್ಕೂ ಡೇನರಿಗೂ (Danes) ಬಹಳ ಕಾಲ ಯುದ್ಧ ನಡೆಯಿತು. ಆದರೆ ಡೇನರು ಅಷ್ಟೇನೂ ಚುರುಕಾದ ಜನರಲ್ಲವಾದ್ದರಿಂದ ಬಂಗಾಳದಲ್ಲಿ ಮಹಮ್ಮದೀ ಯರ ಪ್ರಾಬಲ್ಯ ಹೆಚ್ಚಾಗಿ ವ್ಯಾಪಾರವೆಲ್ಲ ಅವರ ಕೈಸೇರಿತು. ೩೨ ವರ್ಷಗಳ ಈ ಹೋರಾಟದಲ್ಲಿ ೧೬೭೪ರವರೆಗೆ ಮೂರರ ಕಡೆ ಕೇವಲ ೩೦ ಹಡಗುಗಳು ನಾಶವಾದುವು ಅಷ್ಟೆ. ಆ ವರ್ಷ ಡೆನ್ಮಾರ್ಕ್ ರಾಜನಿಗೂ ಹೂಗ್ಲಿಯ ಮಲ್ಲಿಕ್ ಖಾಸಿಮನಿಗೂ ಸಂಧಿ ಯಾಯಿತು. ಅದರ ಪ್ರಕಾರ ಡೇನರು ಹೂಗ್ಲಿಯಲ್ಲಿ ತಮ್ಮದೊಂದು ಗಡಂಗು ಕಟ್ಟಲು ಅವಕಾಶ ಸಿಕ್ಕಿತು.

ಬಂಗಾಳ ರಾಜ್ಯದಲ್ಲಿ ಅನೇಕ ಪೋರ್ಚುಗೀಸರು ನೆಲಸಿದ್ದಾರೆ. ಹೂಗ್ಲಿಯಲ್ಲಿ ಮತ್ತು ನದಿಯ ಕೋವುಗಳಲ್ಲಿ ಹೆಚ್ಚು ಜನರಿದ್ದಾರೆ. ಇವರಲ್ಲಿ ಬಹು ಮಂದಿ ಬಡವ ರಾದರೂ ಕಷ್ಟಪಟ್ಟು ದುಡಿದು ಗೌರವದಿಂದ ಜೀವನ ಸಾಗಿಸುತ್ತಾರೆ. ರೇಷ್ಮೆ ಹಾಗೂ ಹತ್ತಿಯ ಕಾಲುಚೀಲಗಳನ್ನು ಹೆಣೆಯುತ್ತಾರೆ. ಇಂಗ್ಲಿಷ್ ಮತ್ತು ಡಚ್ ಕಾರ್ಖಾನೆ ಗಳಿಗೆ ರೊಟ್ಟಿ ಸುಟ್ಟುಕೊಡುತ್ತಾರೆ. ಮಾವು, ಕಿತ್ತಳೆ, ನಿಂಬೆ, ಶುಂಠಿ, ಅಳಲೇಕಾಯಿ ಮುಂತಾದುವುಗಳಿಂದ ಉಪ್ಪಿನಕಾಯನ್ನು ರುಚಿಯಾಗಿಯೂ ಅಗ್ಗವಾಗಿಯೂ ತಯಾರಿಸುತ್ತಾರೆ. ಒಟ್ಟಿನಲ್ಲಿ ಇವರು ಕಷ್ಟಪಟ್ಟು ದುಡಿದು ಸುಖವಾಗಿ ಜೀವಿಸುತ್ತಾರೆ. ಅಲ್ಲದೆ ಇಲ್ಲಿ ಸಾಮಾನುಗಳೂ ಅಗ್ಗ. ಒಂದು ದನಕ್ಕೆ ನಾಲ್ಕು ಷಿಲಿಂಗ್ ಆರೂವರೆ ಪೆನ್ನಿ. ಅಂದರೆ ಎರಡು ರೂಪಾಯಿ. ಒಂದು ಹಂದಿಗೆ ಮುಕ್ಕಾಲು ರೂಪಾಯಿ. ಒಂದು ರೂಪಾಯಿಗೆ ೪೦–೫೦ ಕೋಳಿ ಸಿಕ್ಕುತ್ತವೆ. ಹಾಗೆಯೇ ಬಟ್ಟೆ ಬರೆಗಳೂ ಮರದ ಸಾಮಾನುಗಳೂ ಅಗ್ಗ. ಈ ಕಾರಣಗಳಿಂದ ಈ ರಾಜ್ಯ ತುಂಬ ಜನಭರಿತವಾಗಿದೆ. ಅದರಲ್ಲಿಯೂ ಪರದೇಶೀಯರು ಇಲ್ಲಿ ಹೆಚ್ಚು ನೆಲಸಿದ್ದಾರೆ. ಇದರಿಂದಲೇ ಬೆಸ್ನೀ

ಹೇಳಿದ 'ಬಂಗಾಳಕ್ಕೆ ಬರಲು ಬಹು ಬಾಗಿಲುಗಳು, ಹೋಗಲು ಒಂದೇ ಬಾಗಿಲು' ಎಂಬ ಮಾತು ಈ ರಾಜ್ಯಕ್ಕೆ ಸರಿಯಾಗಿ ಒಪ್ಪುತ್ತದೆ. ಏಕೆಂದರೆ ಅನೇಕ ದೇಶಗಳಿಗೆ ಸೇರಿದ ಸಾವಿರಾರು ಜನರು ಬಂದು ಸಾಯುವವರೆಗೂ ಇಲ್ಲಿಯೇ ಇದ್ದುಬಿಡುತ್ತಾರೆ. ನನ್ನ ಅಂದಾಜಿನಂತೆ ಬಂಗಾಳದಲ್ಲಿ ಸುಮಾರು ೨೦,೦೦೦ 'ಫರಂಗಿ' (Frangee) ಜನರಿದ್ದಾರೆ. ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಹೂಗ್ಲಿ ನದಿಯ ಬಳಿ ಇದ್ದಾರೆ.

ಮೂರರು ಹಗಲು ರಾತ್ರಿಗಳನ್ನು ಗುರುತಿಸುವುದಕ್ಕೆ ಉಪಯೋಗಿಸುವ ಸಾಧನ ಯೂರೋಪಿನವರದಕ್ಕಿಂತ ತೀರ ಭಿನ್ನವಾಗಿದೆ. ಅವರು ಗಡಿಯಾರವನ್ನಾಗಲೀ* ಗೋಡೆ ಗಡಿಯಾರವನ್ನಾಗಲೀ ಕೈಗಡಿಯಾರವನ್ನಾಗಲೀ ಅಥವಾ ಗಾಜುಗಳನ್ನಾಗಲೀ ಉಪಯೋಗಿಸುವುದಿಲ್ಲ. ಇವುಗಳನ್ನು ಮಾಡುವಷ್ಟು ಬುದ್ಧಿವಂತರೂ ಅಲ್ಲವೆಂದು ಕಾಣುತ್ತದೆ.

ಆದರೆ ಅಮೂಲ್ಯವಾದ ಕಾಲವನ್ನು ಅಳೆಯುವ ಬೇರೊಂದು ವಿಧಾನವನ್ನು ಕಂಡು ಹಿಡಿದಿದ್ದಾರೆ. ಒಂದು ಬೋಗುನಿಯಲ್ಲಿ ಅಥವಾ ಚಟ್ಟಿಯಲ್ಲಿ ಶುದ್ಧವಾದ ನೀರನ್ನು ತುಂಬಿ ಒಂದು ಸಣ್ಣ ತಾಮ್ರದ ಪಾತ್ರೆಯನ್ನು ಅದರ ಮೇಲೆ ತೇಲಿಬಿಡುತ್ತಾರೆ. ಆ ಪಾತ್ರೆ ಬಹು ತೆಳುವಾಗಿರುತ್ತದೆ. ಅದರ ಕೆಳಗೆ ಒಂದು ಸಣ್ಣ ರಂಧ್ರ ಕೊರೆದಿರುತ್ತಾರೆ. ತೇಲಿಬಿಟ್ಟ ಆ ಬರಿದಾದ ತಾಮ್ರದ ಪಾತ್ರೆಯಲ್ಲಿ ನಿಧಾನವಾಗಿ ನೀರು ತುಂಬಿಕೊಳ್ಳುತ್ತದೆ. ನೀರು ತುಂಬಿದ ಕೂಡಲೇ ಅದು ಮುಳುಗುತ್ತದೆ. ಕಾವಲುಗಾರನು ಕೂಡಲೇ ಅದನ್ನು ಹೊರದೆಗೆದು ಖಾಲಿಮಾಡಿ ಮತ್ತೆ ತೇಲಿಬಿಡುತ್ತಾನೆ. ಹಾಗೆ ಮಾಡಿದಾಗ ಒಂದು ಗಂಟೆ ಹೊಡೆಯುತ್ತಾನೆ. ಹೀಗೆ ೨, ೩, ೪, ೫, ೬ ಮತ್ತು ೭ ಗಂಟೆ ಹೊಡೆಯುತ್ತಾನೆ. ಏಳು ಗಂಟೆ ಹೊಡೆದಮೇಲೆ ಒಂದು 'ಪೊರ್' (Pore = ಪಹರ್ = ಪಹರೆ) ಬಾರಿಸುತ್ತಾನೆ. ಪಾತ್ರೆ ಮುಳುಗಿದಾಗ ಒಂದು ಗಂಟೆ, ಬಾರಿಸಿ ಅನಂತರ ೨, ೩ ಹೀಗೆ ಬಾರಿಸಿ ಏಳು ಸಲ ಹೊಡೆದಮೇಲೆ ಎರಡು ಪೊರ್ ಬಾರಿಸುತ್ತಾನೆ. ಎರಡು ಪಹರೆಗೆ ಮಧ್ಯಾಹ್ನ ಅಥವಾ ಮಧ್ಯರಾತ್ರಿ. ಒಂದು ಪೊರ್ ಬಾರಿಸಿದರೆ ಬೆಳಗ್ಗೆ ಒಂಬತ್ತು ಘಂಟೆ. ಆದ್ದರಿಂದ ಎರಡು ಬಾರಿಸಿದರೆ ಮಧ್ಯಾಹ್ನ ೧೨ ಘಂಟೆ, ಮೂರು ಬಾರಿಸಿದರೆ ಮಧ್ಯಾಹ್ನ ಮೂರು ಘಂಟೆ, ನಾಲ್ಕು ಬಾರಿಸಿದರೆ ಸೂರ್ಯಾಸ್ತ. ಹೀಗೆ ಮಧ್ಯರಾತ್ರಿಯವರೆಗೆ. ಬಾರಿಸಲು ಗಂಟೆ ಉಪಯೋಗಿಸುವುದಿಲ್ಲ. ಅದು ಮಹಮ್ಮದೀಯರಿಗೆ ಗೊತ್ತೇ ಇಲ್ಲ. ಅದರ ಬದಲು ಪೆಗು ದೇಶದಲ್ಲಿ ಮಾಡಿದ ಒಂದೂವರೆ ಎರಡು ಅಡಿ ಸುತ್ತಳತೆಯ ಕಂಚಿನ ಜಾಗಟೆಮೇಲೆ ಮರದ ಕೊರಡಿನಿಂದ ಬಡಿಯುತ್ತಾರೆ. ಜಾಗಟೆಯ ಅಂಚಿನಲ್ಲಿ ಒಂದು ತೂತು ಮಾಡಿ ಅದನ್ನು ದಾರದಿಂದ ನೇತುಹಾಕಿರುತ್ತಾರೆ. ಹೀಗೆ ನೇತುಹಾಕಿದ ಜಾಗಟೆಯನ್ನು ಬಡಿದಾಗ ಇಂಪಾದ ಶಬ್ದ ಬರುತ್ತದೆ. ಈ ಜಾಗಟೆಗೆ 'ಗಾಂಗ್'

* ಇದಕ್ಕೆ ನೆರಳಗಡಿಯಾರ (Sun dail) ಎಂದು ಕರೆಯುತ್ತಿದ್ದರು.

(gonge) ಎಂದು ಹೇಳುತ್ತಾರೆ. ಬಹು ಜನ ಮಹಮ್ಮದೀಯರ ಮನೆಯ ದ್ವಾರ ಮಂಟಪದಲ್ಲಿ ಈ ಗಾಂಗ್‌ಗಳನ್ನು ನೋಡಬಹುದು. ಇಬ್ಬರು ಸೇವಕರು ಯಾವಾಗಲೂ ಇದರ ಉಸ್ತುವಾರಿ ನೋಡಿಕೊಳ್ಳುತ್ತಾರೆ. ಇಬ್ಬರಲ್ಲಿ ಒಬ್ಬನು ಮಲಗಿರುತ್ತಾನೆ; ಮತ್ತೊಬ್ಬನು ಗಂಟೆ ಬಾರಿಸುತ್ತಿರುತ್ತಾನೆ. ಇಂಗ್ಲಿಷರು ಮತ್ತು ಡಚ್ಚರು ಸಹ ಈ ಬಗೆಯ ಗಾಂಗ್‌ಗಳನ್ನು ತಮ್ಮ ಒಳನಾಡಿನ ಕಾರ್ಖಾನೆಗಳ ಬಾಗಿಲುಗಳಲ್ಲಿ ನೇತುಹಾಕಿರುವುದನ್ನು ನೋಡಬಹುದು. 'ರೋಮ್‌ನಲ್ಲಿರುವಾಗ ರೋಮ್‌ನವರಂತೆ ಇರು' ಎಂಬ ಗಾದೆಗನುಸಾರವಾಗಿ ವರ್ತಿಸುತ್ತಾರೆ.

ಬಂಗಾಳಿಗಳು ಅಂದರೆ ವಿಗ್ರಹಾರಾಧನೆ ಮಾಡುವ ಈ ನಾಡಿನ ಜನ ತಮ್ಮ ದೇವರು ದಿಂಡರುಗಳನ್ನು ಪೂಜಿಸುವ ಬಗೆ ವಿಚಿತ್ರವಾಗಿರುತ್ತದೆ. ಈ ಜನ ಫೆಬ್ರುವರಿ ತಿಂಗಳಲ್ಲಿ ನಡೆಸುವ ಒಂದು ಆಚರಣೆ ಕೇಳಿ. ಎತ್ತರವಾದ ಮರವನ್ನು ಭೂಮಿಗೆ ನೆಟ್ಟು, ಅದರ ತುದಿಯಲ್ಲಿ ಒಂದು ಬೊಂಬನ್ನು ಸಿಕ್ಕಿಸಿ ಅದು ಒಂದು ಗೂಟದ ಸುತ್ತ ಸುಲಭವಾಗಿ ತಿರುಗುವಂತೆ ಮಾಡಿರುತ್ತಾರೆ. ಬೊಂಬಿನ ಎರಡು ತುದಿಗಳಿಗೆ ಮೂರು ಉದ್ದದ ಹಗ್ಗ ಕಟ್ಟಿರುತ್ತಾರೆ. ಒಂದು ಕಡೆಯ ಹಗ್ಗ ಹಿಡಿದು ಜನಗಳು ಸುತ್ತ ತಿರುಗಬಹುದು. ಮತ್ತೊಂದು ಕಡೆಗೆ ಉಕ್ಕಿನ ಕೊಕ್ಕೆಗಳನ್ನು ಸಿಕ್ಕಿಸಿರುತ್ತಾರೆ. ಕುತಂತ್ರದ ಬ್ರಾಹ್ಮಣರಿಂದ ಮರುಳುಗೊಳಿಸಲ್ಪಟ್ಟ ಹಲವಾರು ಜನರು ತಾವೇ ಆಗಿ ಉಕ್ಕಿನ ಕೊಕ್ಕೆಗಳಿಗೆ ಸಿಕ್ಕಿಸಿಕೊಳ್ಳಲು ಮುಂದೆಬರುತ್ತಾರೆ. ಒಂದು ಕಡೆ ಹಗ್ಗ ಹಿಡಿದು ಜನ ಸುತ್ತಿದರೆ ಇನ್ನೊಂದು ಕಡೆ ಕೊಕ್ಕೆಗೆ ಸಿಕ್ಕಿಸಲ್ಪಟ್ಟವನು ನಗುತ್ತ ನೆರೆದ ಜನಸಮೂಹದ ಮೇಲೆ ಹೂಮಳೆಗರೆಯುತ್ತಾ ಸುತ್ತುತ್ತಿರುತ್ತಾನೆ. ಇಡೀ ಶರೀರ ಕೊಕ್ಕೆಯಿಂದ ನೇತಾಡುತ್ತಿರುತ್ತದೆ. ಕೊಕ್ಕೆಯನ್ನು ಕೆಲವರು ಭುಜಕ್ಕೂ ಕೆಲವರು ಬೆನ್ನಿನ ಬುಡಕ್ಕೂ ಕೆಲವರು ಕುಂಡಿಗೂ ಸಿಕ್ಕಿಸಿಕೊಳ್ಳುತ್ತಾರೆ.[೧]

ಈ ಬಗೆಯ ಕರಾಳ ಹರಕೆ ಹೊತ್ತವರನ್ನು ಜನಗಳು ಬಹು ಭಕ್ತಿಯಿಂದ ಕಾಣುತ್ತಾರೆ. ಈ ಕ್ರೂರ ಪದ್ಧತಿಗಳಿಗೆ ಕಾರಣರಾದವರು ಆ ಹೊಲಸು ಬ್ರಾಹ್ಮಣರು. ಅವರ ಕೈಗೆ ಸಿಕ್ಕಿ ಸಂಕಟಪಡುವವರು ಏನೂ ಅರಿಯದ ಜೆಂಟೂಗಳು ಮತ್ತು ಒರಿಯರು. ವಿಗ್ರಹಾರಾಧಕರಲ್ಲಿ ಬಹು ದಡ್ಡರೆಂದರೆ 'ಒರಿಯರು' (Orixas). ಇವರು ಎಲ್ಲರಿಗಿಂತ ಕೀಳೆಂಬ ಭಾವನೆಯಿಂದ ಜೆಂಟೂಗಳೂ ಬನಿಯರೂ ಇವರ ಬಳಿ ಸುಳಿಯುವುದಿಲ್ಲ. ಇವರು ಬಹುತೇಕ ನದಿಗಳ ಬಳಿಯೋ ಸಮುದ್ರದ ಬಳಿಯೋ ಸಣ್ಣ ಸಣ್ಣ ಗುಡಿಸಲುಗಳಲ್ಲಿ ವಾಸಮಾಡಿಕೊಂಡು ಮೀನು ಹಿಡಿದೋ ಅಥವಾ ಉಪ್ಪು ಮಾಡುತ್ತಲೋ ಬಾಳು ಸಾಗಿಸುತ್ತಾರೆ. ಇವರೆಷ್ಟು ಕಡುಬಡವರೆಂದರೆ ನಾನು ಎಷ್ಟೋ ಸಲ ಇವರ ಕೇರಿಗೆ ಹೋಗಿ ಹಾಲನ್ನೋ ಮೀನನ್ನೋ ಕೊಂಡುಕೊಂಡು ಚಿಲ್ಲರೆ ಕೇಳಿದರೆ

---

೧. ಈ ಆಸಿಡಿ ಡುವ ಪದ್ಧತಿ ಈಗಲೂ ಕರ್ನಾಟಕದಲ್ಲಿ ಅಲ್ಲಲ್ಲಿ ಅನುಷ್ಠಾನದಲ್ಲಿದೆ.

ಒಂದು ರೂಪಾಯಿಗೆ ಆಗುವಷ್ಟು ಕವಡೆಗಳನ್ನು ಕೂಡಿಸಲು ಸಾಧ್ಯವಾಗುತ್ತಿರಲಿಲ್ಲ. ಪಾಪ, ಇವರೆಷ್ಟು ದಡ್ಡರು ಎಂದರೆ ಇವರಿಗೆ ಬೆಳ್ಳಿಗೂ ತೂತ್‌ನಗ್ಗಾಕ್ಕೂ೧ ವ್ಯತ್ಯಾಸ ಗೊತ್ತಿಲ್ಲ.

ಒರಿಯರಿಗೆ ಕವಡೆಗಳೇ ನಾಣ್ಯ. ಈ ಕವಡೆಗಳು ಮಾಲ್ದೀವ್ ದ್ವೀಪಗಳಿಂದ ಬರುತ್ತವೆ. ಒಂದು ರೂಪಾಯಿಗೆ ಕನಿಷ್ಠ ಪಕ್ಷ ೩,೨೦೦ ಕವಡೆಗಳು.

ಒರಿಯರು ಕಾಯಿಲೆ ಬಿದ್ದರೆ ಆಚರಿಸುವ ಕಸಾಲೆ ಪದ್ಧತಿ ವಿಚಿತ್ರವಾಗಿದೆ. ಕಾಯಿಲೆ ಬಿದ್ದ ರೋಗಿ ಎರಡು ದಿನಗಳು ಹೊಟ್ಟೆಗೆ ಏನೂ ತೆಗೆದುಕೊಳ್ಳಲು ಸಾಧ್ಯವಿಲ್ಲ ವೆಂದು ಕಂಡುಬಂದಾಗ ಆತ ತಂದೆಯಾಗಿರಲಿ ತಾಯಿಯಾಗಿರಲಿ ಅಥವಾ ಮಕ್ಕಳೇ ಆಗಿರಲಿ ರೋಗಿ ಸತ್ತಂತೆ ಎಂದು ಭಾವಿಸಿ ನದಿಯ ಬಳಿಗೆ ಸಾಗಿಸುತ್ತಾರೆ. ನೀರಿನ ಸಮೀಪದಲ್ಲಿ ಮಲಗಿಸಿ ತಲೆಯನ್ನು ಸ್ವಲ್ಪ ಮೇಲಕ್ಕೆ ಎತ್ತಿಹಿಡಿದು ನದಿಯ ನೀರನ್ನು ಬಾಯಿಗೆ ಹೊಯ್ಯುತ್ತಾ ಹೋಗುತ್ತಾರೆ. ಹೀಗೆ ಹೊಯ್ದು ಹೊಯ್ದು ರೋಗಿಯ ಹೊಟ್ಟೆಯನ್ನು ಊದಿಸುತ್ತಾರೆ. ಬಂಧು ಬಳಗದವರೆಲ್ಲ ಸುತ್ತ ಸೇರಿ ಗೋಳೋ ಎಂದು ಅಳುತ್ತಿರುತ್ತಾರೆ. ಹೀಗೆ ಮಾಡಿ ರೋಗಿಯನ್ನು ಎತ್ತರವಾದ ಸ್ಥಳಕ್ಕೆ ತಂದಿಡುತ್ತಾರೆ. ಕೂಡಲೇ ಸಾಯದಿದ್ದರೆ ಮಾರನೆಯ ದಿನವೂ ಹಾಗೆಯೇ ಮಾಡುತ್ತಾರೆ. ರೋಗಿ ಸಾಯುವವರೆಗೆ ಅಥವಾ ಬದುಕುವ ಸೂಚನೆ ಕಾಣುವವರೆಗೆ ಹೀಗೆ ಮಾಡಿ, ಸತ್ತರೆ ಹೆಣವನ್ನು ನದಿಯಲ್ಲಿ ಬಿಸಾಡುತ್ತಾರೆ. ಬದುಕಿದರೆ—ಬದುಕುವುದು ಅಪರೂಪ—ಮನೆಗೆ ಕರೆತರುತ್ತಾರೆ—ಕಾಯಿಲೆಯ ವೇಳೆಯಲ್ಲಿ ಬ್ರಾಹ್ಮಣರು ರೋಗಿಯ ಬಳಿ ಕುಳಿತು ಒಂದೇ ಸಮನೆ ಮಂತ್ರ ಹೇಳುತ್ತಾ ಸತ್ತವನ ಮನಸ್ಸು ದೇವರ ಧ್ಯಾನದಲ್ಲಿ ಮಗ್ನವಾಗಿರುವಂತೆ ಮಾಡುತ್ತಿರುತ್ತಾರೆ. ಒರಿಯರು ಸತ್ತವರನ್ನು ಹೂಳುವುದಿಲ್ಲ, ನದಿಗೆ ಬಿಸಾಡುತ್ತಾರೆ. ಮೊಸಳೆಗಳಿಗೆ ಆಹಾರವಾಗಲಿ ಎಂದು. ಈ ಪದ್ಧತಿಯನ್ನು ಒರಿಯರೆಲ್ಲಾ ಆಚರಿಸುತ್ತಾರೆ.

ಗಂಗಾನದಿಯನ್ನೂ ಅದರ ಉಪನದಿಗಳನ್ನೂ ಈ ದಡ್ಡರಾದ ವಿಗ್ರಹಾರಾಧಕರು ತುಂಬಾ ಪವಿತ್ರವೆಂದು ಭಾವಿಸುತ್ತಾರೆ. ಅವುಗಳಲ್ಲಿ ಸ್ನಾನಮಾಡಿ ದಾನಧರ್ಮಗಳನ್ನು ನೀಡುತ್ತಾರೆ—ವರ್ಷದ ಒಂದು ದಿನ ಒಂದು ದೊಡ್ಡ ಹಬ್ಬ ಆಗುತ್ತದೆ. ಆಗ ಹೆಂಗಸರು ಮಕ್ಕಳಾದಿಯಾಗಿ ಸಾವಿರಾರು ಜನರು ನದಿಯಲ್ಲಿ ಸ್ನಾನ ಮಾಡುತ್ತಾರೆ. ಈ ನೂಕು ನುಗ್ಗಲಿನಲ್ಲಿ ಅನೇಕ ಜನ ನೀರಿನಲ್ಲಿ ಮುಳುಗಿ ಸತ್ತೇಹೋಗುತ್ತಾರೆ. ಸತ್ತವರಿಗೆ ಯಾರೂ ಪರಿತಾಪ ಪಡುವುದಿಲ್ಲ. ಅದರ ಬದಲು ಒಳ್ಳೆಯದೇ ಆಯಿತೆಂದು ಕ್ರೂರಿಗಳಾದ ಬ್ರಾಹ್ಮಣರು ಬೋಧನೆ ಮಾಡುತ್ತಾರೆ. ಈ ಬ್ರಾಹ್ಮಣರು ಎಷ್ಟು ಕ್ರೂರಿಗಳೆಂದರೆ ಗಂಡನ ಚಿತೆಯಲ್ಲಿ ಬೀಳಲು ಹಿಂಜರಿಯುವ ಹೆಂಡತಿಯನ್ನು ಬಲಾತ್ಕಾರದಿಂದ

---

೧. ತೂತ್‌ನಗ್ಗಾ (Toothnagga) ತೂತ್‌ನಾಗ್; ಸತುವು, ಚೀನಾದ 'ಬಿಳಿತಾಮ್ರ'.

ಉರಿಯುವ ಬೆಂಕಿಗೆ ಹಾಕಿ ಗಳುವಿನಿಂದ ಅದುಮಿಹಿಡಿದು ಸುಟ್ಟುಹೋಗುವಂತೆ ಮಾಡುತ್ತಾರೆ. ಒಮ್ಮೆ ಹೀಗೆ ಬಲಾತ್ಕಾರದಿಂದ ಬೆಂಕಿಗೆ ಹಾಕಲು ಪ್ರಯತ್ನಿಸುತ್ತಿದ್ದಾಗ ಒಬ್ಬ ಹೆಂಗಸು ಬ್ರಾಹ್ಮಣನನ್ನೇ ಎಳೆದುಕೊಂಡು ಜತೆಯಲ್ಲಿ ಬಿದ್ದು ಭಸ್ಮವಾದುದನ್ನು ನಾನೇ ಕಂಡೆ.

ಈ ನಾಡಿನ ಬ್ರಾಹ್ಮಣರು ಮಂತ್ರ ತಂತ್ರದಲ್ಲಿ ಎತ್ತಿದಕೈ. ಇವರನ್ನು ಕಂಡರೆ ಮಹಮ್ಮದೀಯರೂ ವಿಗ್ರಹಾರಾಧಕರಷ್ಟೇ ಭಯಪಡುತ್ತಾರೆ. ಎಷ್ಟೋ ಜನ ಮಹಮ್ಮದೀಯರೂ ಪರ್ಷಿಯನರೂ ಇವರ ಮನೆಗಳ ಮೇಲೋ ದೇವಸ್ಥಾನಗಳ ಮೇಲೋ ಧಾಳಿಮಾಡಲು ಹೋಗಿ ಅವರ ಮಾಟ ಮಂತ್ರಗಳಿಂದ ದಿಕ್ಕೆಟ್ಟು ಬೆಪ್ಪರಂತೆ ನಿಂತುಬಿಟ್ಟದ್ದು ಉಂಟು. ಅನೇಕರು ಅಲ್ಲಿಯೇ ಸತ್ತುಹೋದದ್ದೂ ಉಂಟು. ಹಿಂದಿರುಗಿ ಬಂದವರು ಒಂದು ವರ್ಷ ಬದುಕಿದರೆ ಹೆಚ್ಚು.

ಈ ಬ್ರಾಹ್ಮಣರು ತಾವು ಬಹು ದೊಡ್ಡ ವೇದಾಂತಿಗಳೆಂದು ಹೇಳಿಕೊಳ್ಳುತ್ತಾರೆ. ನಿಜವಾಗಿಯೂ ಇವರು 'ಪೈತಾಗೋರಿಯನ್' ತತ್ವಶಾಸ್ತ್ರವನ್ನು ಅಭ್ಯಾಸ ಮಾಡಿದ್ದಾರೆನ್ನಬಹುದು. ಇವರು ವಿಷಪ್ರಯೋಗದಲ್ಲಿಯೂ ಗಟ್ಟಿಗರು. ಒಟ್ಟಿನಲ್ಲಿ ಜನ ಸಾಮಾನ್ಯರು ಇವರನ್ನು ಮನುಷ್ಯರೆಂದು ಭಾವಿಸದೆ ದೇವರೆಂದೇ ಭಾವಿಸುತ್ತಾರೆ. ಬಹು ಬುದ್ಧಿವಂತರಾದ ಯೂರೋಪಿಯನ್ನರೂ ಇವರೊಡನೆ ವಾದವಿವಾದಗಳನ್ನು ನಡೆಸಿದ ನಂತರ ಅವರು ದೊಡ್ಡ ಜೋತಿಷ್ಯರೆಂದೂ ತತ್ವಜ್ಞಾನಿಗಳೆಂದೂ ಒಪ್ಪಿ ಕೊಂಡಿದ್ದಾರೆ. ಇವರನ್ನು ಬೆತ್ತಲೆಯ ಕುತರ್ಕಿಗಳು (Giymnosophists) ಎಂದು ಕರೆದಿರುವುದು ಸರಿಯಾಗಿದೆ.

ನಾನು ಇವರನ್ನಾಗಲೀ ಇವರ ಮಂತ್ರತಂತ್ರಗಳಿಗಾಗಲೀ ಅಥವಾ ಇವರ ಪೈಶಾಚಿಕ ವರ್ತನೆಗಳನ್ನಾಗಲೀ ಮೆಚ್ಚುವುದಿಲ್ಲ. ಎಲ್ಲ ಫರಂಗಿಯವರ ಬಗ್ಗೆ ಅದರಲ್ಲಿಯೂ ಕ್ರೈಸ್ತರ ಬಗ್ಗೆ ತೋರಿಸುವ ನಮ್ರಭಾವ ಮತ್ತು ವರ್ತನೆಗಳಿಗಾಗಿ ಇವರನ್ನು ಮೆಚ್ಚುತ್ತೇನೆ. ನಾವೇ ಆಗಿ ಇವರನ್ನು ಸಿಟ್ಟಿಗೇಳಿಸದಿದ್ದರೆ ಇವರು ನಮಗೆ ಕಿಂಚಿತ್ತೂ ತೊಂದರೆ ಕೊಡುವುದಿಲ್ಲ.

ಇವರ (ಜೆಂಟೂಗಳ) ಹೆಂಗಸರ ಬಗ್ಗೆ ಒಂದು ಮಾತು. ದುಡ್ಡೆಂದರೆ ಈ ಕಾಲದಲ್ಲಿ ಎಷ್ಟು ಆಸೆ ಹುಟ್ಟಿಸಿದೆಯೆಂದರೆ ಅದನ್ನು ಯಾವ ಮಾರ್ಗದಲ್ಲಿ ಸಂಪಾದಿಸಿದರೂ ತಪ್ಪಿಲ್ಲವೆಂದು ಅನೇಕರು ಭಾವಿಸುತ್ತಾರೆ. ಆದ್ದರಿಂದ ಅನೇಕ ಏಷ್ಯಾದ ರಾಜ್ಯಪಾಲರು ನೀತಿನಿಯಮಗಳನ್ನೆಲ್ಲಾ ಗಾಳಿಗೆ ತೂರಿ ಮದುವೆಯಾಗದ ಸ್ತ್ರೀಯರು ವ್ಯಭಿಚಾರ ಮಾಡಲು ಅವಕಾಶ ಮಾಡಿಕೊಟ್ಟು ಹಣ ಸಂಪಾದಿಸುತ್ತಾರೆ. ಮದುವೆಯಾಗದ ಯಾವ ಹೆಂಗಸಾಗಲೀ, ಆಕೆ ಮಹಮ್ಮದೀಯಳಾಗಿರಲೀ ಜೆಂಟೂ ಅಥವಾ ಬನಿಯಳಾಗಿರಲೀ, ಸಾಕಿ ಸಲಹಿದವರನ್ನು ಬಿಟ್ಟು ವೇಶ್ಯೆಯರಾಗಿ ಅವರಿಗೆ ನಿಗದಿಯಾದ ಕೇರಿಗಳಲ್ಲಿ ವಾಸಮಾಡುತ್ತಾ, ತಿಂಗಳಿಗೆ ಇಷ್ಟು ಎಂದು ತೆರಿಗೆ ಕೊಟ್ಟು ತಮ್ಮ ಜೀವನ ನಡೆಸಬಹುದು. ಪ್ರತಿ ಗುರುವಾರ ರಾತ್ರಿ ರಾಜ್ಯಪಾಲರ ಅಥವಾ ಕೊತ್ವಾಲರ ಬಳಿಗೆ

ಒಂದು ರೂಪಾಯಿಗೆ ಆಗುವಷ್ಟು ಕವಡೆಗಳನ್ನು ಕೂಡಿಸಲು ಸಾಧ್ಯವಾಗುತ್ತಿರಲಿಲ್ಲ. ಪಾಪ, ಇವರೆಷ್ಟು ದಡ್ಡರು ಎಂದರೆ ಇವರಿಗೆ ಬೆಳ್ಳಿಗೂ ತೂತ್‌ನಗ್ಗಾಕ್ಕೂ[೧] ವ್ಯತ್ಯಾಸ ಗೊತ್ತಿಲ್ಲ.

ಒರಿಯರಿಗೆ ಕವಡೆಗಳೇ ನಾಣ್ಯ. ಈ ಕವಡೆಗಳು ಮಾಲ್ದೀವ್ ದ್ವೀಪಗಳಿಂದ ಬರುತ್ತವೆ. ಒಂದು ರೂಪಾಯಿಗೆ ಕನಿಷ್ಠ ಪಕ್ಷ ೩,೨೦೦ ಕವಡೆಗಳು.

ಒರಿಯರು ಕಾಯಿಲೆ ಬಿದ್ದರೆ ಆಚರಿಸುವ ಕಸಾಲೆ ಪದ್ಧತಿ ವಿಚಿತ್ರವಾಗಿದೆ. ಕಾಯಿಲೆ ಬಿದ್ದ ರೋಗಿ ಎರಡು ದಿನಗಳು ಹೊಟ್ಟೆಗೆ ಏನೂ ತೆಗೆದುಕೊಳ್ಳಲು ಸಾಧ್ಯವಿಲ್ಲ ವೆಂದು ಕಂಡುಬಂದಾಗ ಆತ ತಂದೆಯಾಗಿರಲಿ ತಾಯಿಯಾಗಿರಲಿ ಅಥವಾ ಮಕ್ಕಳೇ ಆಗಿರಲಿ ರೋಗಿ ಸತ್ತಂತೆ ಎಂದು ಭಾವಿಸಿ ನದಿಯ ಬಳಿಗೆ ಸಾಗಿಸುತ್ತಾರೆ. ನೀರಿನ ಸಮೀಪದಲ್ಲಿ ಮಲಗಿಸಿ ತಲೆಯನ್ನು ಸ್ವಲ್ಪ ಮೇಲಕ್ಕೆ ಎತ್ತಿಹಿಡಿದು ನದಿಯ ನೀರನ್ನು ಬಾಯಿಗೆ ಹೊಯ್ಯುತ್ತಾ ಹೋಗುತ್ತಾರೆ. ಹೀಗೆ ಹೊಯ್ದು ಹೊಯ್ದು ರೋಗಿಯ ಹೊಟ್ಟೆಯನ್ನು ಊದಿಸುತ್ತಾರೆ. ಬಂಧು ಬಳಗದವರೆಲ್ಲ ಸುತ್ತ ಸೇರಿ ಗೋಳೋ ಎಂದು ಅಳುತ್ತಿರುತ್ತಾರೆ. ಹೀಗೆ ಮಾಡಿ ರೋಗಿಯನ್ನು ಎತ್ತರವಾದ ಸ್ಥಳಕ್ಕೆ ತಂದಿಡುತ್ತಾರೆ. ಕೂಡಲೇ ಸಾಯದಿದ್ದರೆ ಮಾರನೆಯ ದಿನವೂ ಹಾಗೆಯೇ ಮಾಡುತ್ತಾರೆ. ರೋಗಿ ಸಾಯುವವರೆಗೆ ಅಥವಾ ಬದುಕುವ ಸೂಚನೆ ಕಾಣುವವರೆಗೆ ಹೀಗೆ ಮಾಡಿ, ಸತ್ತರೆ ಹೆಣವನ್ನು ನದಿಯಲ್ಲಿ ಬಿಸಾಡುತ್ತಾರೆ. ಬದುಕಿದರೆ—ಬದುಕುವುದು ಅಪರೂಪ—ಮನೆಗೆ ಕರೆತರುತ್ತಾರೆ—ಕಾಯಿಲೆಯ ವೇಳೆಯಲ್ಲಿ ಬ್ರಾಹ್ಮಣರು ರೋಗಿಯ ಬಳಿ ಕುಳಿತು ಒಂದೇ ಸಮನೆ ಮಂತ್ರ ಹೇಳುತ್ತಾ ಸತ್ತವನ ಮನಸ್ಸು ದೇವರ ಧ್ಯಾನದಲ್ಲಿ ಮಗ್ನವಾಗಿರುವಂತೆ ಮಾಡುತ್ತಿರುತ್ತಾರೆ. ಒರಿಯರು ಸತ್ತವರನ್ನು ಹೂಳುವುದಿಲ್ಲ, ನದಿಗೆ ಬಿಸಾಡುತ್ತಾರೆ. ಮೊಸಳೆಗಳಿಗೆ ಆಹಾರವಾಗಲಿ ಎಂದು. ಈ ಪದ್ಧತಿಯನ್ನು ಒರಿಯರೆಲ್ಲಾ ಆಚರಿಸುತ್ತಾರೆ.

ಗಂಗಾನದಿಯನ್ನೂ ಅದರ ಉಪನದಿಗಳನ್ನೂ ಈ ದಡ್ಡರಾದ ವಿಗ್ರಹಾರಾಧಕರು ತುಂಬಾ ಪವಿತ್ರವೆಂದು ಭಾವಿಸುತ್ತಾರೆ. ಅವುಗಳಲ್ಲಿ ಸ್ನಾನಮಾಡಿ ದಾನಧರ್ಮಗಳನ್ನು ನೀಡುತ್ತಾರೆ—ವರ್ಷದ ಒಂದು ದಿನ ಒಂದು ದೊಡ್ಡ ಹಬ್ಬ ಆಗುತ್ತದೆ. ಆಗ ಹೆಂಗಸರು ಮಕ್ಕಳಾದಿಯಾಗಿ ಸಾವಿರಾರು ಜನರು ನದಿಯಲ್ಲಿ ಸ್ನಾನ ಮಾಡುತ್ತಾರೆ. ಈ ನೂಕು ನುಗ್ಗಲಿನಲ್ಲಿ ಅನೇಕ ಜನ ನೀರಿನಲ್ಲಿ ಮುಳುಗಿ ಸತ್ತೇಹೋಗುತ್ತಾರೆ. ಸತ್ತವರಿಗೆ ಯಾರೂ ಪರಿತಾಪ ಪಡುವುದಿಲ್ಲ. ಅದರ ಬದಲು ಒಳ್ಳೆಯದೇ ಆಯಿತೆಂದು ಕ್ರೂರಿಗಳಾದ ಬ್ರಾಹ್ಮಣರು ಬೋಧನೆ ಮಾಡುತ್ತಾರೆ. ಈ ಬ್ರಾಹ್ಮಣರು ಎಷ್ಟು ಕ್ರೂರಿಗಳೆಂದರೆ ಗಂಡನ ಚಿತೆಯಲ್ಲಿ ಬೀಳಲು ಹಿಂಜರಿಯುವ ಹೆಂಡತಿಯನ್ನು ಬಲಾತ್ಕಾರದಿಂದ

---

೧. ತೂತ್‌ನಗ್ಗಾ (Toothnagga) ತೂತ್‌ನಾಗ್; ಸತುವು, ಚೀನಾದ 'ಬಿಳಿತಾಮ್ರ'.

ಉರಿಯುವ ಬೆಂಕಿಗೆ ಹಾಕಿ ಗಳುವಿನಿಂದ ಅದುಮಿಹಿಡಿದು ಸುಟ್ಟುಹೋಗುವಂತೆ ಮಾಡುತ್ತಾರೆ. ಒಮ್ಮೆ ಹೀಗೆ ಬಲಾತ್ಕಾರದಿಂದ ಬೆಂಕಿಗೆ ಹಾಕಲು ಪ್ರಯತ್ನಿಸುತ್ತಿದ್ದಾಗ ಒಬ್ಬ ಹೆಂಗಸು ಬ್ರಾಹ್ಮಣನನ್ನೇ ಎಳೆದುಕೊಂಡು ಜತೆಯಲ್ಲಿ ಬಿದ್ದು ಭಸ್ಮವಾದುದನ್ನು ನಾನೇ ಕಂಡೆ.

ಈ ನಾಡಿನ ಬ್ರಾಹ್ಮಣರು ಮಂತ್ರ ತಂತ್ರದಲ್ಲಿ ಎತ್ತಿದಕೈ. ಇವರನ್ನು ಕಂಡರೆ ಮಹಮ್ಮದೀಯರೂ ವಿಗ್ರಹಾರಾಧಕರಷ್ಟೇ ಭಯಪಡುತ್ತಾರೆ. ಎಷ್ಟೋ ಜನ ಮಹಮ್ಮದೀಯರೂ ಪರ್ಷಿಯನರೂ ಇವರ ಮನೆಗಳ ಮೇಲೋ ದೇವಸ್ಥಾನಗಳ ಮೇಲೋ ಧಾಳಿಮಾಡಲು ಹೋಗಿ ಅವರ ಮಾಟ ಮಂತ್ರಗಳಿಂದ ದಿಕ್ಕೆಟ್ಟು ಬೆಪ್ಪರಂತೆ ನಿಂತುಬಿಟ್ಟದ್ದು ಉಂಟು. ಅನೇಕರು ಅಲ್ಲಿಯೇ ಸತ್ತುಹೋದದ್ದೂ ಉಂಟು. ಹಿಂದಿರುಗಿ ಬಂದವರು ಒಂದು ವರ್ಷ ಬದುಕಿದರೆ ಹೆಚ್ಚು.

ಈ ಬ್ರಾಹ್ಮಣರು ತಾವು ಬಹು ದೊಡ್ಡ ವೇದಾಂತಿಗಳೆಂದು ಹೇಳಿಕೊಳ್ಳುತ್ತಾರೆ. ನಿಜವಾಗಿಯೂ ಇವರು 'ಪೈತಾಗೋರಿಯನ್' ತತ್ವಶಾಸ್ತ್ರವನ್ನು ಅಭ್ಯಾಸ ಮಾಡಿದ್ದಾರೆನ್ನಬಹುದು. ಇವರು ವಿಷಪ್ರಯೋಗದಲ್ಲಿಯೂ ಗಟ್ಟಿಗರು. ಒಟ್ಟಿನಲ್ಲಿ ಜನ ಸಾಮಾನ್ಯರು ಇವರನ್ನು ಮನುಷ್ಯರೆಂದು ಭಾವಿಸದೆ ದೇವರೆಂದೇ ಭಾವಿಸುತ್ತಾರೆ. ಬಹು ಬುದ್ಧಿವಂತರಾದ ಯೂರೋಪಿಯನ್ನರೂ ಇವರೊಡನೆ ವಾದವಿವಾದಗಳನ್ನು ನಡೆಸಿದ ನಂತರ ಅವರು ದೊಡ್ಡ ಜೋತಿಷ್ಕರೆಂದೂ ತತ್ವಜ್ಞಾನಿಗಳೆಂದೂ ಒಪ್ಪಿಕೊಂಡಿದ್ದಾರೆ. ಇವರನ್ನು ಬೆತ್ತಲೆಯ ಕುತರ್ಕಿಗಳು (Giymnosophists) ಎಂದು ಕರೆದಿರುವುದು ಸರಿಯಾಗಿದೆ.

ನಾನು ಇವರನ್ನಾಗಲೀ ಇವರ ಮಂತ್ರತಂತ್ರಗಳಿಗಾಗಲೀ ಅಥವಾ ಇವರ ಪೈಶಾಚಿಕ ವರ್ತನೆಗಳನ್ನಾಗಲೀ ಮೆಚ್ಚುವುದಿಲ್ಲ. ಎಲ್ಲ ಫರಂಗಿಯವರ ಬಗ್ಗೆ ಅದರಲ್ಲಿಯೂ ಕ್ರೈಸ್ತರ ಬಗ್ಗೆ ತೋರಿಸುವ ಸಮಭಾವ ಮತ್ತು ವರ್ತನೆಗಳಿಗಾಗಿ ಇವರನ್ನು ಮೆಚ್ಚುತ್ತೇನೆ. ನಾವೇ ಆಗಿ ಇವರನ್ನು ಸಿಟ್ಟಿಗೇಳಿಸದಿದ್ದರೆ ಇವರು ನಮಗೆ ಕಿಂಚಿತ್ತೂ ತೊಂದರೆ ಕೊಡುವುದಿಲ್ಲ.

ಇವರ (ಜೆಂಟೂಗಳ) ಹೆಂಗಸರ ಬಗ್ಗೆ ಒಂದು ಮಾತು. ದುಡ್ಡೆಂದರೆ ಈ ಕಾಲದಲ್ಲಿ ಎಷ್ಟು ಆಸೆ ಹುಟ್ಟಿಸಿದೆಯೆಂದರೆ ಅದನ್ನು ಯಾವ ಮಾರ್ಗದಲ್ಲಿ ಸಂಪಾದಿಸಿದರೂ ತಪ್ಪಿಲ್ಲವೆಂದು ಅನೇಕರು ಭಾವಿಸುತ್ತಾರೆ. ಆದ್ದರಿಂದ ಅನೇಕ ಏಷ್ಯಾದ ರಾಜ್ಯ ಪಾಲರು ನೀತಿನಿಯಮಗಳನ್ನೆಲ್ಲಾ ಗಾಳಿಗೆ ತೂರಿ ಮದುವೆಯಾಗದ ಸ್ತ್ರೀಯರು ವ್ಯಭಿಚಾರ ಮಾಡಲು ಅವಕಾಶ ಮಾಡಿಕೊಟ್ಟು ಹಣ ಸಂಪಾದಿಸುತ್ತಾರೆ. ಮದುವೆಯಾಗದ ಯಾವ ಹೆಂಗಸಾಗಲೀ, ಆಕೆ ಮಹಮ್ಮದೀಯಳಾಗಿರಲೀ ಜೆಂಟೂ ಅಥವಾ ಬನಿಯಳಾಗಿರಲೀ, ಸಾಕಿ ಸಲಹಿದವರನ್ನು ಬಿಟ್ಟು ವೇಶ್ಯೆಯರಾಗಿ ಅವರಿಗೆ ನಿಗದಿಯಾದ ಕೇರಿಗಳಲ್ಲಿ ವಾಸಮಾಡುತ್ತಾ ತಿಂಗಳಿಗೆ ಇಷ್ಟು ಎಂದು ತೆರಿಗೆ ಕೊಟ್ಟು ತಮ್ಮ ಜೀವನ ನಡೆಸಬಹುದು. ಪ್ರತಿ ಗುರುವಾರ ರಾತ್ರಿ ರಾಜ್ಯಪಾಲರ ಅಥವಾ ಕೊತ್ವಾಲರ ಬಳಿಗೆ

ಹೋಗಿ ಹಾಡಿ ಕುಣಿದು ಸಲಾಮು ಹಾಕಿ ಬರಬೇಕು. ಇವರಲ್ಲಿ ಬಹು ರೂಪವತಿಯರು ಹಿಂದೆ ಉಳಿದು ರಾತ್ರಿಯೆಲ್ಲಾ ರಾಜ್ಯಪಾಲನ ಅಥವಾ ಕೊತ್ವಾಲನ ಮತ್ತು ಅವರ 'ಕ್ವೀವನ್'ಗಳ ಕಾಮಲಾಲಸೆಯನ್ನು ತೃಪ್ತಿಪಡಿಸಿ ಹೋಗಬೇಕು. ಇದು ಮಾರನೆಯ ದಿನದ (ಅಂದರೆ ಶುಕ್ರವಾರದ) ಪೂಜೆಗೆ ಮೂರರ ತಯಾರಿ. ಇಷ್ಟಾದರೂ ಮದುವೆ ಯಾದ ಹೆಂಗಸು ವ್ಯಭಿಚಾರ ಮಾಡಿದರೆ ಆಕೆಗೆ ಮರಣದಂಡನೆ ಖಂಡಿತ.

ಮಹಮ್ಮದೀಯರಾಗಲೀ ಜೆಂಟೂಗಳಾಗಲೀ ತಮ್ಮ ಹೆಂಗಸರು ಹೊರಗೆ ಹೋಗಲು ಬಿಡುವುದಿಲ್ಲ. ಅವರ ಸೇವೆಗೆ ಚಿಕ್ಕ ಚಿಕ್ಕ ಹುಡುಗಿಯರನ್ನೂ ಖೋಜಾ ಗಳನ್ನೂ ನೇಮಿಸಿರುತ್ತಾರೆ. ಅವರ ಮೈಮೇಲೆ ಚಿನ್ನದ ಹಾಗೂ ವಜ್ರ ವೈಡೂರ್ಯಗಳ ಆಭರಣಗಳ ಹೊರೆಯನ್ನೇ ಹೇರಿರುತ್ತಾರೆ.

ನಾನು ಆಗಲೇ ಹೇಳಿದಂತೆ ಒರಿಯರು ತುಂಬ ಗರೀಬರು. 'ಲುಂಗಿ' (Lungee) ಯನ್ನು ಬಿಟ್ಟರೆ ಬೇರೊಂದು ಉಡುಪು ಇಲ್ಲ. ಲುಂಗಿ ಎಂದರೆ ಸೊಂಟಕ್ಕೆ ಸುತ್ತಿದ ಬಿಳಿಯ ಬಟ್ಟೆ. ತೋಳುಗಳಿಗೂ ಕಾಲುಗಳಿಗೂ ಹಿತ್ತಾಳೆಯ ಬಳೆಗಳನ್ನೂ ಕಾಲ್ಬೆರಳುಗಳಿಗೆ ಉಂಗುರಗಳನ್ನೂ ಹಾಕಿಕೊಳ್ಳುತ್ತಾರೆ. ಕೆಲವರು ಶಂಖದ ಬಳೆಗಳನ್ನು ಧರಿಸುತ್ತಾರೆ. ಈ ಶಂಖಗಳು ಕೇಪ್ ಕಾಮೊರಿನ್‌ಗೆ ಸಮೀಪದ ತುತ್ತುಕೂಡಿಯಲ್ಲಿ ಸಿಗುತ್ತವೆ. ಒಂದು ಮುಷ್ಟಿ ಗಾತ್ರದ ಈ ಶಂಖಗಳನ್ನು ಬಳೆಗಳಾಗಿ ಕೊಯ್ಯುತ್ತಾರೆ. ಈ ಬಳೆಗಳನ್ನು ಒರಿಸ್ಸಾ ಮತ್ತು ಬಂಗಾಳದ ಜನರು ಧರಿಸುತ್ತಾರೆ. ಕೆಲವರು ಇವಕ್ಕೆ ಕೆಂಪು ಬಣ್ಣ ಹಚ್ಚುತ್ತಾರೆ. ಒಟ್ಟಿನಲ್ಲಿ ಈ ಬಳೆಗಳ ಮೇಲೆ ಎಲ್ಲರಿಗೂ ತುಂಬ ಪ್ರೇಮ.

ಗಂಗಾನದಿ ಬಹು ದೊಡ್ಡ ನದಿ. ಇದು ಸಮುದ್ರವನ್ನು ಸೇರುವ ಕಡೆ ಇದನ್ನು ಗಂಗಾಸಾಗರ ಎಂದು ಕರೆಯುತ್ತಾರೆ. ಇದರ ಅಗಲ ೪೦ ಮೈಲಿಗಳಿಗೂ ಹೆಚ್ಚಾಗಿದೆ. ಈ ನದಿಯ ಬಗ್ಗೆ ಏನೇನೋ ಕಥೆಗಳನ್ನು ಹೇಳುತ್ತಾರೆ. ಆದರೆ ಇವನ್ನೆಲ್ಲಾ ನಾನು ನಂಬುವುದಿಲ್ಲ. ಏಕೆಂದರೆ ನಾನೇ ಎಲ್ಲವನ್ನೂ ನೋಡಿದ್ದೇನೆ. ಏಷ್ಯಾದಲ್ಲಿ ತನ್ನ ದಿಗ್ವಿಜಯದ ಭೇರಿ ಹೊಡೆದ ಅಲೆಕ್ಸಾಂಡರ್ ಈ ನದಿಯ ಮೇಲೆ ಬಂದಿದ್ದನೆಂಬುದರಲ್ಲಿ ಸಂಶಯವಿಲ್ಲ.[೧]

ಗಂಗಾನದಿಯ ಮುಖದಲ್ಲಿ ಅನೇಕ ದ್ವೀಪಗಳಿವೆ. ಈ ದ್ವೀಪಗಳಲ್ಲಿ ಬಹುತೇಕ ಕಾಡುಮೃಗಗಳೇ ಇರುವುದು.

ಬಂಗಾಳದಲ್ಲಿಯೇ ಬಹು ಹೆಸರಾದ ಹಾಗೂ ಸುಂದರವಾದ ಊರೆಂದರೆ ಖಾಸಿಂ ಬಜಾರ್. ಅನೇಕ ಕಾರಣಗಳಿಂದ ಇದು ಹೆಸರಾದರೂ ಮುಖ್ಯವಾಗಿ ಇಲ್ಲಿ ನಡೆಯುವ ವ್ಯಾಪಾರಕ್ಕೂ ಮತ್ತು ಇಲ್ಲಿರುವ ಶ್ರೀಮಂತ ವರ್ತಕರಿಗೂ ಇದು ಹೆಚ್ಚು ಹೆಸರಾಗಿದೆ. ಎಲ್ಲ ವಸ್ತುಗಳು ತಯಾರಾಗುವುದು ಮತ್ತು ದೊರೆಯುವುದು ಈ ಊರಿನಲ್ಲಿ ಮಾತ್ರ.

---

೧. ಇದು ಸರಿಯಲ್ಲ. ಅಲೆಕ್ಸಾಂಡರ್ ಗಂಗಾನದಿಯವರೆಗೆ ಬರಲೇ ಇಲ್ಲ.

ಆದ್ದರಿಂದಲೇ ಇದಕ್ಕೆ 'ಖಾಸಿಂ ಬಜಾರ್' ಎಂಬ ಹೆಸರು ಬಂದಿದೆ. 'ಖಾಸಿಂ' ಎಂದರೆ ಗಂಡ ಅಥವಾ ಯಜಮಾನ. 'ಬಜಾರ್' ಎಂದರೆ ಮಾರುಕಟ್ಟೆ ಎಂದು ಅರ್ಥ.

ಇಲ್ಲಿ ಇಂಗ್ಲಿಷರ ಮತ್ತು ಡಚ್ಚರ ಕಂಪೆನಿಗಳಿವೆ. ಈಸ್ಟ್ ಇಂಡಿಯಾ ಕಂಪೆನಿ ಇಲ್ಲಿ ಭಾರಿ ಬಂಡವಾಳ ಹಾಕಿದೆ. ಇಲ್ಲಿರುವ ಮುಖ್ಯಾಧಿಕಾರಿ ಅನೇಕ ಕುಶಲ ಕೆಲಸಗಾರರನ್ನು ಇಟ್ಟುಕೊಂಡು ಬಣ್ಣ ಹಾಕುವ, ನೇಯುವ, ರೇಷ್ಮೆ ಹುರಿಮಾಡುವ ಕೆಲಸಗಳನ್ನು ಮಾಡಿಸುತ್ತಾನೆ. ಒಳ್ಳೆಯ ಬಣ್ಣ ಹಾಕುವುದು ಇಲ್ಲಿಯ ಜನಕ್ಕೆ ಬರುವುದಿಲ್ಲ.

ಖಾಸಿಂ ಬಜಾರ್ ಪಟ್ಟಣಕ್ಕೆ ಸ್ವಲ್ಪ ದೂರದಲ್ಲಿ ಬ್ರಾಹ್ಮಣರು ವಾಸಮಾಡುತ್ತಾರೆ. ಇವರು ಗಂಗಾನದಿಯ ನೀರನ್ನೂ ಮಣ್ಣನ್ನೂ ಪಾತ್ರೆಗಳಲ್ಲಿ ತುಂಬಿ ಅವಕ್ಕೆ ಛಾಪಾ ಹಾಕಿ ದೂರದ ದೇಶಗಳಿಗೆ ಕಳುಹಿಸುತ್ತಾರೆ. ಬಹು ದೂರದ ಪರ್ಷಿಯಾ ದೇಶಕ್ಕೂ ಕಳುಹಿಸುತ್ತಾರೆ. ನಾನು ಬಂಗಾಳದಿಂದ ಪರ್ಷಿಯಾಕ್ಕೆ ಹೋದಾಗ ನಮ್ಮ ಹಡಗಿನಲ್ಲಿ ನೀರನ್ನೋ ಮಣ್ಣನ್ನೋ ತುಂಬಿ ಛಾಪಾ ಹಾಕಿದ ಮಣ್ಣಿನ ಕೊಡಗಳು ಇದ್ದುವು. ಹಡಗು ಗೋಂಬ್ರೂರಿಗೆ (ಬಂದರ್ ಅಬ್ಬಾಸ್) ತಲುಪಿದಾಗ ಅಲ್ಲಿಯ ಅನೇಕ ಬನಿಯ ಜಾತಿಯ ವರ್ತಕರು ಹಡಗು ಬಂದ ಸುದ್ದಿ ಕೇಳಿ ಸಡಗರದಿಂದ ಬಂದು ಕೊಡಗಳನ್ನು ಹೆಗಲಮೇಲೆ ಬಹು ಭಕ್ತಿಯಿಂದ ಹೊತ್ತುಕೊಂಡು ಹೋದರು. ಕೊಡದ ನೀರನ್ನು ಪೂಜೆಮಾಡುವಾಗ ಮೈಮೇಲೆ ಚಿಮುಕಿಸಿಕೊಳ್ಳುತ್ತಾರೆ; ಮಣ್ಣನ್ನು ಹಣೆಗೂ ತೋಳುಗಳಿಗೂ ಹಚ್ಚಿಕೊಳ್ಳುತ್ತಾರೆ. ಅನೇಕ ವಿಷಯಗಳಲ್ಲಿ ತುಂಬಾ ಬುದ್ಧಿವಂತರೆನಿಸಿಕೊಂಡ ಈ ಜನ ಇಂತಹ ವಿಷಯಗಳಲ್ಲಿ ಬಹು ದಡ್ಡರು. ಆದರೆ ಮಹಮ್ಮದೀಯರಿಗೆ ಬಹು ಆನಂದವಾದುದೆಂದರೆ ವೇಶ್ಯೆಯರನ್ನೂ ಆನೆಗಳನ್ನೂ ಇಟ್ಟುಕೊಳ್ಳುವುದು.

ಈ ರಾಜ್ಯದಲ್ಲಿ ಚಲಾವಣೆಯಲ್ಲಿರುವ ನಾಣ್ಯಗಳೆಂದರೆ ರೂಪಾಯಿ, ಅರ್ಧ ರೂಪಾಯಿ, ಕಾಲು ರೂಪಾಯಿ. ಇವು ಒಳ್ಳೆಯ ಬೆಳ್ಳಿಯ ನಾಣ್ಯಗಳು. ಢಾಕ್ಕಾದ ಟಂಕಸಾಲೆಯಲ್ಲಿ ತಯಾರಾದವುಗಳು. ಇವುಗಳ ಬೆಲೆ ಗುಜರಾತು ಅಥವಾ ಗೋಲ್ಕೊಂಡಾ ನಾಣ್ಯಗಳ ಬೆಲೆಯಷ್ಟೆ ಇರುತ್ತದೆ. ಬೆಳ್ಳಿ ರೂಪಾಯಿಗಳಲ್ಲದೆ ಚಿನ್ನದ ನಾಣ್ಯಗಳನ್ನೂ ತಯಾರಿಸುತ್ತಾರೆ. ಇವನ್ನು 'ಮೊಹರ್'ಗಳೆಂದು ಕರೆಯುತ್ತಾರೆ. ಇವುಗಳ ಅಚ್ಚು, ತೂಕವೆಲ್ಲಾ ಬೆಳ್ಳಿ ರೂಪಾಯಿಗಳಷ್ಟೇ ಇರುತ್ತವೆ. ಆದರೆ ಇವು ಅತ್ಯುತ್ತಮವಾದ 'ಮಟ್ಟ್' (matt)ದ ಚಿನ್ನದಿಂದ ಮಾಡಿದವುಗಳಾದ್ದರಿಂದ ಒಂದಕ್ಕೆ ೧೫½ ಮತ್ತು ೧೫¾ ರೂಪಾಯಿಯಂತೆ ಚಲಾವಣೆ ಆಗುತ್ತವೆ.

ತೂಕಕ್ಕೆ ಮಣ, ಸೇರು, ಅರ್ಧ ಸೇರು, ಕಾಲು ಸೇರುಗಳನ್ನು ಉಪಯೋಗಿಸುತ್ತಾರೆ. ಆದರೆ ಎಲ್ಲಾ ಕಡೆಗಳಲ್ಲಿ ಈ ತೂಕವೇ ಇದ್ದರೂ ಕೊಡುವ ಸರಕು ಹೆಚ್ಚು ಕಡಮೆ ಇರುತ್ತದೆ. ಬಾಲಸೂರಿನ ಮಣಕ್ಕೆ ೭೫ ಪೌಂಡುಗಳು, ಹುಗ್ಲಿ ಮಣಕ್ಕೆ ೭೦ ಪೌಂಡುಗಳು ಮತ್ತು ಖಾಸಿಂಬಜಾರ್ ಮಣಕ್ಕೆ ೯೮ ಪೌಂಡುಗಳು. ದವಸಧಾನ್ಯಗಳನ್ನೂ ತುಪ್ಪ ಎಣ್ಣೆ ಮುಂತಾದ ದ್ರವಪದಾರ್ಥಗಳನ್ನೂ ಹುಗ್ಲಿ ನದಿಯ ಕಡೆಗಳಲ್ಲೆಲ್ಲಾ ಮಣಕ್ಕೆ ೬೮ ಪೌಂಡುಗಳಂತೆ ತೂಗಿಕೊಡುತ್ತಾರೆ. ದೊಡ್ಡ ಮಣವೇ ಆಗಲಿ ಸಣ್ಣ ಮಣವೇ ಆಗಲಿ

ಅದನ್ನು ೪೦ ಸೇರುಗಳಾಗಿ ವಿಂಗಡಿಸುತ್ತಾರೆ. ಸೇರನ್ನು ಅರ್ಧ ಸೇರು ಮತ್ತು ಕಾಲು ಸೇರು ಎಂದೂ ವಿಂಗಡಿಸುತ್ತಾರೆ.

ಮರದ ದಿಮ್ಮಿ, ಹಲಗೆ, ಇಟ್ಟಿಗೆ ಅಥವಾ ಕಲ್ಲಿನ ಗೋಡೆ, ಬಟ್ಟೆ, ರೇಷ್ಮೆ ಮುಂತಾ ದುವುಗಳನ್ನು 'ಗಜ್' (ಗಜ)ದಲ್ಲಿ ಅಳೆಯುತ್ತಾರೆ. ಒಂದು ಗಜಕ್ಕೆ ೨೭ ಅಂಗುಲಗಳು. ಕೊವೆಟ್ (Covet = ಮೊಳ) ದಿಂದಲೂ ಅಳೆಯುವುದುಂಟು. ಮೊಳ ಎಂದರೆ ೧೮ ಅಂಗುಲ. ಧಾನ್ಯಗಳನ್ನು ತೂಕ ಹಾಕಿ ಮಾರುತ್ತಾರೆ.

ಚಿನ್ನದ ಮೊಹರುಗಳ ಬೆಲೆ ನಮ್ಮ ಒಂದು ಪೌಂಡ್ ೧೪ ಷಿಲ್ಲಿಂಗ್ ೧೧೫ ಪೆನ್ನಿ. ಬೆಳ್ಳಿ ರೂಪಾಯಿ ೨ ಷಿಲ್ಲಿಂಗ್ ೩ ಪೆನ್ನಿ. ಚಿಲ್ಲರೆ ನಾಣ್ಯಗಳಿಗೆ ಕವಡೆಗಳನ್ನು ಉಪಯೋಗಿಸು ತ್ತಾರೆ. ಒಂದು 'ಗುಂಡಾ' (Gunda)ಕ್ಕೆ ೪ ಕವಡೆಗಳು. ೫ ಗುಂಡಾಗಳಿಗೆ ಒಂದು ಬುರ್ರಿ (Burrie = Bauri) ಅಥವಾ ೨೦ ಕವಡೆಗಳು. ೪ ಬುರ್ರಿಗಳು ಒಂದು 'ಪೊನ್' (Pone = Pan = ಹೊನ್ನು = ಹಣ) ಅಥವಾ ೮೦ ಕವಡೆಗಳು. ೧೬ ಪೊನ್‌ಗಳಿಗೆ ಒಂದು ಕಾನ್ (Cawne = kahan) ಅಥವಾ ೧,೨೮೦ ಕವಡೆಗಳು. ೨½ ಕಾನ್‌ಗಳಿಗೆ ಒಂದು ರೂಪಾಯಿ ಅಥವಾ ೩,೨೦೦ ಕವಡೆಗಳು. ಮಾಲ್ಡೀವ್ ದ್ವೀಪಗಳಿಂದ ಕವಡೆ ತುಂಬಿಕೊಂಡು ಹಡಗುಗಳು ಬಂದಾಗ ಕವಡೆಗಳ ಬೆಲೆ ಒಂದು ರೂಪಾಯಿಯಲ್ಲಿ ಎರಡು ಪೊನ್ ಏರಬಹುದು ಅಥವಾ ಇಳಿಯಬಹುದು.[೧]

ಈ ರಾಜ್ಯದ ಕಾಡುಗಳಲ್ಲಿ ಹುಲಿ, ಕರಡಿ ಮುಂತಾದ ಕ್ರೂರ ಮೃಗಗಳು ತುಂಬಿವೆ. ಇವು ಉಪವಾಸವಿದ್ದರೂ ಇನ್ನೊಂದು ಹೊಡೆದು ಸಾಯಿಸಿದ ಹಸು ಜಿಂಕೆ ಮುಂತಾದುವು ಗಳನ್ನು ಮುಟ್ಟುವುದಿಲ್ಲ. ತಾವೇ ಕೊಂದು ತಿನ್ನಬೇಕೆಂಬ ಹಟ ಇವಕ್ಕೆ! ಕೂಲಿ ನಾಲಿ ಮಾಡಿಕೊಂಡು ಜೀವಿಸುವ ಅನೇಕ ಬಡಪಾಯಿ ಒರಿಯನರು ಈ ಪ್ರಾಣಿಗಳಿಗೆ ತುತ್ತಾಗುತ್ತಾರೆ. ನಾನು ಒಮ್ಮೆ ಮಾಲ್ಡೀವ್ ದ್ವೀಪಗಳಿಂದ ಹಿಂದಿರುಗಿದಾಗ ನನ್ನ ಮೂರು ಜನ ಆಳುಗಳನ್ನು ಗಂಗಾನದಿಯ ಒಳಗಿರುವ 'ಕೋಳಿ ದ್ವೀಪ' ಎಂಬ ದ್ವೀಪಕ್ಕೆ ಸೌದೆ ಕಡಿಯಲು ಕಳುಹಿಸಿಕೊಟ್ಟೆ. ಆದರೆ ಅವರು ಹುಲಿಗಳ ಕೈಗೆ ಸಿಕ್ಕಿ ಸತ್ತುಹೋದರು. ಇವರಲ್ಲಿ ಇಬ್ಬರು ಮಹಮ್ಮದೀಯರು ಮತ್ತು ಒಬ್ಬ ಪೋರ್ಚುಗೀಸ.

ಇಲ್ಲಿಯ ಕರಡಿಗಳು ಅದರಲ್ಲಿಯೂ ಬೆಟ್ಟ ಗುಡ್ಡಗಳಲ್ಲಿರುವವುಗಳು ಕಲ್ಲಿದ್ದಿಲಿನಷ್ಟು ಕಪ್ಪಗಿವೆ; ದನದ ಕಡಸಿನಷ್ಟು ದೊಡ್ಡವಾಗಿವೆ. ಎಲ್ಲಿ ನವಿಲುಗಳು ಹೆಚ್ಚೋ ಅಲ್ಲಿ ಈ ವಕ್ರ ಕರಡಿಗಳೂ ಹೆಚ್ಚು. ಕೆಲವನ್ನು ಹಿಡಿದು ಪಳಗಿಸಿ ಆಟ ಆಡಿಸಲು ಕರೆದುಕೊಂಡು ಬರುತ್ತಾರೆ. ನಾನು ಅನೇಕ ಸಲ ಇವುಗಳಿಗೆ ಗುಂಡುಹೊಡೆದಿದ್ದೇನೆ. ಆದರೆ ಒಂದೂ ನನ್ನ ಗುರಿಗೆ ಸಿಕ್ಕಲಿಲ್ಲ.

---

೧. ಈ ಕವಡೆ ವ್ಯಾಪಾರದಿಂದ ವರ್ತಕರು ಅಪಾರ ಲಾಭ ಸಂಪಾದಿಸುತ್ತಿದ್ದರಂತೆ. ಮಾಲ್ಡೀವ್ ದ್ವೀಪಗಳಲ್ಲಿ ರೂಪಾಯಿಗೆ ಒಂಬತ್ತು, ಹತ್ತು ಸಾವಿರ ಕವಡೆಗಳಂತೆ ಕೊಂಡು ಬಂಗಾಳದಲ್ಲಿ ರೂಪಾಯಿಗೆ ೩,೨೦೦ರಂತೆ ಮಾರಾಟ ಮಾಡುತ್ತಿದ್ದರಂತೆ.

ಈ ನಾಡಿನಲ್ಲಿ ಕಾಡುಹಂದಿಗಳಿಗಂತೂ ಲೆಕ್ಕವಿಲ್ಲ. ಗುಳ್ಳೆನರಿಗಳೂ ಹೇರಳ ವಾಗಿವೆ. ಇವು ಇಂಗ್ಲೆಂಡಿನ ಸಾಮಾನ್ಯ ನಾಯಿಗಳಂತಿವೆ. ಆದರೆ ಬಹು ತುಂಟತನದ ಹಾಗೂ ಭಂಡಧೈರ್ಯದ ಪ್ರಾಣಿಗಳು. ಬೆಳೆದ ಫಸಲನ್ನು ಬೇರು ಸಮೇತ ಕಿತ್ತುಹಾಕಿ ನಷ್ಟಮಾಡುತ್ತವೆ. ರಾತ್ರಿ ಹೊತ್ತು ಧೈರ್ಯದಿಂದ ಊರೊಳಕ್ಕೆ ನಾಯಿಗಳಂತೆ ಬಂದು ಬಾತು. ಕೋಳಿ ಮುಂತಾದ ಪ್ರಾಣಿಗಳನ್ನು ಕದ್ದುಕೊಂಡು ಹೋಗುತ್ತವೆ. ರಾತ್ರಿ ಹೊತ್ತು ನೂರಾರು ಒಟ್ಟಿಗೆ ಸೇರಿಕೊಂಡು ಬಳ್ಳುಹಾಕುವುದನ್ನು ಕೇಳಿದ್ದೇನೆ.

ಪಾಟ್ನಾ ಬಹು ವಿಶಾಲವೂ ತುಂಬಾ ಶಕ್ತಿಯುತವೂ ಆದ ರಾಜ್ಯ. ಬಹು ಹಿಂದೆಯೇ ಹಿಂದೂಸ್ಥಾನದ ಚಕ್ರವರ್ತಿಗಳಿಗೆ ಅಂದರೆ ಮೊಗಲರಿಗೆ ಸೇರಿಹೋಗಿದೆ. ಇಲ್ಲಿ ಭಾರಿ ವ್ಯಾಪಾರ ನಡೆಯುತ್ತದೆ. ಆದ್ದರಿಂದ ಇದನ್ನು ಬಂಗಾಳ ಮತ್ತು ಒರಿಸ್ಸಾಗಳ ಹೆಬ್ಬಾಗಿಲೆಂದು ಕರೆಯಬಹುದು. ಪರ್ಷಿಯಾ. ಕಾರ್ಮೇನಿಯಾ. ಜಾರ್ಜಿಯಾ, ಟಾರ್ಟೇರಿಯಾ ಮುಂತಾದ ದೇಶಗಳಿಂದ ಭೂಮಾರ್ಗವಾಗಿ ಬರಬೇಕಾದ ಸರಕುಗಳು ಪಾಟ್ನಾ ಮಾರ್ಗವಾಗಿ ಬರುತ್ತವೆ. ಆ ದೇಶಗಳು ಸರಕುಗಳನ್ನು ಇಲ್ಲಿಗೆ ಕಾಫಿಲಾ (Caffila = ಕಾರವಾನ್) ಗಳ ಮೇಲೆ ಸಾಗಿಸುತ್ತಾರೆ. ಇವೇ ಕಾಫಿಲಾಗಳು ಡಚ್ಚರೂ ಇಂಗ್ಲಿಷರೂ ಇಲ್ಲಿಗೆ ತಂದ ಸಾಮಾನುಗಳನ್ನೂ ಈ ದೇಶದ ಸಾಮಾನು ಗಳನ್ನೂ ಆ ದೇಶಗಳಿಗೆ ಸಾಗಿಸುತ್ತವೆ.

ಮುಖ್ಯ ನಗರವಾದ ಪಾಟ್ನಾ ಗಂಗಾನದಿಯ ದಡದಲ್ಲಿ ಹುಗ್ಲಿಯಿಂದ ೧೦೦೦–೧೫೦೦ ಮೈಲಿ ದೂರದಲ್ಲಿದೆ. ಈ ರಾಜ್ಯದಲ್ಲಿರುವ ಕಾಡುಗಳಲ್ಲಿ ವಕ್ರ ಪ್ರಾಣಿಯಾದ ಘೇಂಡಾಮೃಗಗಳು ಸಿಕ್ಕುತ್ತವೆ. ಇವುಗಳನ್ನು ಮರಿಗಳಾಗಿರುವಾಗಲೇ ಹಿಡಿದು ಪಳಗಿಸು ವುದೂ ಉಂಟು. ಇವುಗಳಿಗೂ ಆನೆಗಳಿಗೂ ಬದ್ಧವೈರವೆಂದು ಹೇಳುವ ಮಾತು ನಿಜವೆಂದು ತೋರುತ್ತದೆ. ಏಕೆಂದರೆ. ಇವು ಇರುವ ಕಾಡಿನಲ್ಲಿ ಆನೆಗಳು ಇರುವುದಿಲ್ಲ. ಪಳಗಿದ ಆನೆಗಳೂ ಇವುಗಳ ಬಳಿ ಹೋಗುವುದಿಲ್ಲ.

ಪಾಟ್ನಾದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಒಂದು ಗಡಂಗು ಇದೆ. ಇಲ್ಲಿಂದಲೇ ಬಹು ಭಾಗ ಪೆಟ್ಲುಪ್ಪು ಇಂಗ್ಲೆಂಡಿಗೆ ರವಾನೆಯಾಗುವುದು. ಇಲ್ಲಿರುವ ಇಂಗ್ಲಿಷ್ ಮುಖ್ಯಾಧಿಕಾರಿಯಾದ ಜಾಬ್ ಚರ್ನಾಕ್ ಎಂಬುವರು ಇಲ್ಲಿಯ ರಾಜಭಾಷೆಯಾದ ಪರ್ಷಿಯನ್ ಭಾಷೆಯನ್ನು ಬಹು ಚೆನ್ನಾಗಿ ಕಲಿತುಕೊಂಡು ಇಲ್ಲಿಯ ಜನರ ನಡೆ ನುಡಿಗಳನ್ನು ಅನುಸರಿಸಿಕೊಂಡು ನವಾಬನ ಸ್ನೇಹ ಸಂಪಾದಿಸಿ ಅವನ ಆಸ್ಥಾನಕ್ಕೆ ದಿನಾ ಹೋಗಿಬರುತ್ತಾ ಅನೇಕ ಅನುಕೂಲಗಳನ್ನು ಪಡೆದುಕೊಂಡಿದ್ದಾರೆ.

ಡಚ್ಚರದೂ ಒಂದು ಕಾರ್ಖಾನೆಯಿದೆ. ಆದರೂ ಇವರಿಗೆ ಅಷ್ಟು ಸ್ವಾತಂತ್ರವಿಲ್ಲ.

ಇಲ್ಲಿಂದ ಪೆಟ್ಲುಪ್ಪನ್ನು ಹುಗ್ಲಿಗೆ ಚಪ್ಪಟೆಯಾಗಿರುವ ಪಟೆಲ್ಲಾ ಎಂಬ ನೌಕೆಗಳಲ್ಲಿ ಕಳುಹಿಸುತ್ತಾರೆ. ಒಂದೊಂದು ಪಟೆಲ್ಲಾದಲ್ಲಿ ನಾಲ್ಕರಿಂದ ಆರುಸಾವಿರ ಬಂಗಾಳಿ ಮಣದಷ್ಟು ಉಪ್ಪನ್ನು ಸಾಗಿಸಬಹುದು. ಪಾಟ್ನಾದಿಂದ ಗೋಧಿ ಮುಂತಾದ ದವಸ

ಗಳನ್ನೂ ಬಂಗಾಳಕ್ಕೆ ರವಾನಿಸುತ್ತಾರೆ. ಬರುವಾಗ ಉಪ್ಪು ಜೇನುಮೇಣಗಳನ್ನು ತರುತ್ತಾರೆ.

ಪಾಟ್ನಾ ರಾಜ್ಯ ಇಷ್ಟು ಸಮೃದ್ಧಿಯಾಗಿದ್ದರೂ ಒಮ್ಮೆ ಅಂದರೆ ಕ್ರಿ.ಶ. ೧೬೭೦ರಲ್ಲಿ ಬಂದ ಕ್ಷಾಮದಲ್ಲಿ ಇಲ್ಲಿ ಹೇರಳವಾಗಿ ಬೆಳೆಯುವ ಒಂದು ಸೇರು ಅಕ್ಕಿಗೆ ಒಂದು ರೂಪಾಯಿ ಬೆಲೆಯಾಯಿತು. ಒಂದು ಸೇರು ಅಂದರೆ ತೂಕದ ಲೆಕ್ಕದಲ್ಲಿ ೨೭ ಔನ್ಸುಗಳು ಮಾತ್ರ. ಕೆಲವು ತಿಂಗಳುಗಳ ನಂತರ ಅದೂ ಸಿಕ್ಕುವುದು ಕಷ್ಟವಾಯಿತು. ಹೀಗಾಗಿ ಈ ನಾಡಿನ ಸಾವಿರಾರು ಜನ ಹೊಟ್ಟೆಗಿಲ್ಲದೆ ಹಾದಿ ಬೀದಿಗಳಲ್ಲಿಯೂ ಹೊಲಗದ್ದೆ ಗಳಲ್ಲಿಯೂ ಸತ್ತುಹೋದರು. ಅನೇಕರು ಒಂದು ಹಿಡಿ ಅಕ್ಕಿಗೆ ತಮ್ಮ ಮಕ್ಕಳನ್ನೇ ಮಾರಿಕೊಂಡರು. ನವಾಬನ ಪಟ್ಟದ ರಾಣಿ ದೊಡ್ಡ ದೊಡ್ಡ ಕಣಜಗಳಲ್ಲಿ ದವಸವನ್ನು ತುಂಬಿಕೊಂಡಿದ್ದರೂ ಅದನ್ನು ಬಡಪಟ್ಟಿಗೆ ಮಾರುತ್ತಿರಲಿಲ್ಲ. ತಕ್ಕಡಿಯ ಒಂದು ಕಡೆ ಅಕ್ಕಿ ಅಥವಾ ಗೋಧಿ ಇನ್ನೊಂದು ಕಡೆ ಬೆಳ್ಳಿ ಹಾಕಿ ತೂಗಿಕೊಟ್ಟ ಹೊರತು ಕೊಡುತ್ತಿರಲಿಲ್ಲ. ಆದರೆ ಆಕೆಯ ಕಾಳಸಂತೆಗೆ ದೇವರು ಹೆಚ್ಚು ಅವಕಾಶ ಕೊಡಲಿಲ್ಲ. ಆತನ ದಯದಿಂದ ಸಮೃದ್ಧಿಯಾಗಿ ಮಳೆ ಬೆಳೆಗಳಾದುವು.

ನದಿಯಮೇಲೆ ಉಪಯೋಗಿಸುವ ನಾನಾ ಬಗೆಯ ದೋಣಿಗಳು ಯಾವುವೆಂದರೆ: ಒಲೋಕೊ (Olocko = ulak), ಬುಡ್ಗರೂ (Budgaroo = Bajra) ಎಂಬ ವಿಹಾರದ ದೋಣಿ, ಪರ್ಗೂ (Pargoo = Barge), ಬೂರಾ (Boora = ಭಾರ್) ಮತ್ತು ಪಟೆಲ್ಲಾ (Patella)ಗಳು.

ಪಾಟ್ನಾದಿಂದ ಇಂಗ್ಲೆಂಡಿಗೆ ರವಾನೆಯಾಗುವ ಸಾಮಾನುಗಳೆಂದರೆ ಪೆಟ್ಲುಪ್ಪು ಮತ್ತು ಗಡ್ಡೆ ಕಸ್ತೂರಿ. ಇಲ್ಲಿಯ ಕಸ್ತೂರಿ ಬಹು ಹೆಸರಾದದ್ದು. ಇಲ್ಲಿರುವ ಅಸಂಖ್ಯಾತ ಕಸ್ತೂರಿಮೃಗಗಳಿಂದ ಕಸ್ತೂರಿಯನ್ನು ಪಡೆಯುತ್ತಾರೆ. ಈ ಮೃಗ ಎರಡು ಅಡಿ ಎತ್ತರಕ್ಕಿದ್ದು ಸಣ್ಣ ಜಿಂಕೆಯನ್ನು ಹೋಲುತ್ತದೆ. ಹುಣ್ಣಿಮೆಯ ದಿನಗಳಲ್ಲಿ ಕಸ್ತೂರಿ ಇರುವ ನಾಭಿಯನ್ನು ಕತ್ತರಿಸಿಕೊಳ್ಳುತ್ತಾರೆ. ಮತ್ತೆ ಆ ನಾಭಿ ಬೆಳೆಯುತ್ತದೆ.

ಢಾಕ್ಕಾದಿಂದ ಮುಖ್ಯವಾಗಿ 'ಮಸ್ಲಿನ್' ಎಂಬ ಬಟ್ಟೆಯೂ ಖಾಸಿಂ ಬಜಾರ್ ನಿಂದ ಬಗೆಬಗೆಯ ರೇಷ್ಮೆ ಬಟ್ಟೆಗಳೂ ಜರತಾರಿ ಪೇಟ ಇತ್ಯಾದಿಗಳೂ ಇಲ್ಲಿಗೆ ಬರುತ್ತವೆ. ಹುಗ್ಲಿ ಮತ್ತು ಬಾಲಸೂರುಗಳಿಂದ ಸಾನಾ (ಶಾಲು) ಎಂಬ ತೆಳುವಾದ ಬಟ್ಟೆ, 'ಗಿಂಘಾಂ' ಎಂಬ ನೇಯುವುದಕ್ಕೆ ಮುಂಚೆಯೇ ಬಣ್ಣ ಹಾಕಿದ ಬಟ್ಟೆ, ಒರಮ್ಮಾಲ್‌ಗಳು (ರುಮಾಲು ಗಳು) ಮತ್ತು ಇತರ ಹತ್ತಿಬಟ್ಟೆಗಳು ಬರುತ್ತವೆ. ಇವುಗಳನ್ನು ಈಸ್ಟ್ ಇಂಡಿಯಾ ಕಂಪನಿಯ ಅಪ್ಪಣೆಯಂತೆ ಪ್ರತಿವರ್ಷ ಇಂಗ್ಲೆಂಡಿಗೆ ಹಡಗುಗಳ ಮೇಲೆ ರವಾನಿಸುತ್ತಾರೆ. ಮೇಲೆ ಹೇಳಿದ ಮೂರು ರಾಜ್ಯಗಳಲ್ಲಿ ಯಾವ ರಾಷ್ಟ್ರಕ್ಕೂ ಇಲ್ಲದ ಸೌಕರ್ಯಗಳನ್ನು ಇಂಗ್ಲಿಷ್ ರಾಷ್ಟ್ರ ಪಡೆದಿದೆ. ಸುಂಕ ಸಾರಿಗೆಗಳು ಇಲ್ಲದೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಮಾನುಗಳನ್ನು ರವಾನಿಸುವ ಹಕ್ಕು ಪಡೆದಿದೆ. ಇಷ್ಟೆಲ್ಲವನ್ನೂ ಪಡೆದವರು ಗೇಬ್ರಿಯಲ್ ಬಾಡ್ಡೆನ್ (Gabriel Bawden) ಎಂಬುವರು. ಇವರು ಹೆಸರಾದ



ದಡಕ್ಕೆ ಕಟ್ಟಿದ ಹಡಗು.

ಡಾಕ್ಟರೂ ಆಗಿದ್ದರು. ಮೀರ್ ಜುಮ್ಲಾನ ಹೆಂಡತಿಗೆ ಬಂದ ಕಾಯಿಲೆಯನ್ನು ಇವರು ವಾಸಿಮಾಡಿದಾಗ ಏನು ಕೇಳಿದರೂ ಕೊಡುತ್ತೇನೆಂದು ಜುಮ್ಲಾ ಹೇಳಿದನು. ಆಗ ಇವರು ಇಂಗ್ಲಿಷ್ ರಾಷ್ಟ್ರದ ಸಾಮಾನುಗಳ ಮೇಲೆ ಯಾವ ಸುಂಕ ಸಾರಿಗೆಗಳನ್ನೂ ಹೇರಕೂಡದೆಂದು ಕೇಳಿಕೊಂಡರು. ಈ ಕೋರಿಕೆಯನ್ನು ಮೀರ್ ಜುಮ್ಲಾ ಕೂಡಲೇ ಸಲ್ಲಿಸಿ ಪರ್ಷಿಯಾ ಭಾಷೆಯಲ್ಲಿ ಫರ್ಮಾನುಗಳನ್ನು ನೀಡಿದನು. ಇಂಗ್ಲಿಷರು ಎಲ್ಲಿಯ ವರೆಗೆ ಈ ದೇಶದಲ್ಲಿರುವರೋ ಅಲ್ಲಿಯವರೆಗೆ ಸುಂಕ ಬಂಕಗಳನ್ನು ಕೊಡಬೇಕಾಗಿಲ್ಲ ವೆಂದು ಆಜ್ಞೆಮಾಡಿದನು. ಅಲ್ಲದೆ ಡಾಕ್ಟರಿಗೆ ಅನೇಕ ಬಹುಮಾನಗಳನ್ನಿತ್ತು ಗೌರವಿಸಿ ದನು.

ಇಲ್ಲಿಂದ ಮುಂದೆ ಬೊವ್ರೆಯು ಜಾನ್ಸಿಲೋನ್ ಎಂಬ ಮಲಯ ಪರ್ಯಾಯ ದ್ವೀಪದ ಒಂದು ಭಾಗದ ವಿಚಾರವನ್ನೂ ಸುಮಾತ್ರ ದ್ವೀಪದ ಅಚನ್ ಎಂಬ ಭಾಗದ ವಿಚಾರವನ್ನೂ ಹೇಳುತ್ತಾನೆ. ಅವು ಈ ಗ್ರಂಥಕ್ಕೆ ಪ್ರಕೃತವಲ್ಲವೆಂದು ಅವುಗಳ ಸಂಗ್ರಹವನ್ನು ಇಲ್ಲಿ ಬಿಟ್ಟಿದೆ.

# ಅಬೆ ಕಾರ್

ಫ್ರಾನ್ಸ್‌ನಲ್ಲಿ ೧೪ನೆಯ ಲೂಯಿಯ ದೊರೆತನ (೧೬೩೮–೧೭೧೫). ಹೆಸರಾದ ಕೊಲ್‌ಬರ್ (Colbert) ಆತನ ಮಂತ್ರಿ. ಬಹು ಹಿಂದೆಯೆ ಪೋರ್ಚುಗೀಸರು ಇಂಡಿಯಾದ ಗೋವೆಯಲ್ಲಿ ತಮ್ಮ ರಾಜ್ಯ ಸ್ಥಾಪಿಸಿದ್ದರು. ಅದು ಈಗ ಹೀನ ಸ್ಥಿತಿಯಲ್ಲಿತ್ತು. ಪೋರ್ಚುಗೀಸರನ್ನು ಅನುಸರಿಸಿ ಡಚ್ಚರೂ ಇಂಗ್ಲಿಷರೂ ಇಂಡಿಯಾ ಮುಂತಾದ ಪೌರ್ವಾತ್ಯ ದೇಶಗಳಲ್ಲಿ ವ್ಯಾಪಾರ ಸಾಪಾರದಲ್ಲಿ ತೊಡಗಿ ಅಲ್ಲಲ್ಲಿ ವಸಾಹತುಗಳನ್ನು ಸ್ಥಾಪಿಸಿಕೊಂಡಿದ್ದರು. ತಾನೇಕೆ ಸುಮ್ಮನಿರಬೇಕೆಂದು ಫ್ರಾನ್ಸ್ ಕೂಡ ಇಂಡಿಯಾದಲ್ಲಿ ವ್ಯಾಪಾರ ಆರಂಭಿಸಿತ್ತು. ಸಿಲೋನಿನಲ್ಲಿ ಬೇರೂರಿದ್ದ ಡಚ್ಚರನ್ನು ಓಡಿಸುವ ಪ್ರಯತ್ನವನ್ನು ಫ್ರೆಂಚರು ಮಾಡಿದರು. ಸೆಂಟ್ ಥೋಮನ್ನು ವಶಪಡಿಸಿಕೊಂಡು ಅದರಮೇಲೆ ಗೋಲ್ಕೊಂಡಾ ರಾಜನು ನಡೆಸಿದ ಧಾಳಿಯನ್ನು ಎದುರಿಸುವ ಸಾಹಸ ಮಾಡಿದರು. ಅತ್ತ ಯುರೋಪಿನಲ್ಲಿ ಇಂಗ್ಲಿಷರು ಮತ್ತು ಫ್ರೆಂಚರು ಒಂದಾಗಿ ಡಚ್ಚರ ಹಾಲ್ಯಾಂಡಿನ ಮೇಲೆ ಯುದ್ಧ ನಡೆಸಿದ್ದರು.

ಇಂಥ ಸಮಯದಲ್ಲಿ ಈ ಪ್ರವಾಸಕಥನದ ನಾಯಕ ಅಬೆ ಕಾರ್ (Abbe Carre) ಇಂಡಿಯಾಕ್ಕೆ ಬಂದುಹೋದ. ಸೆಂಟ್ ಥೋಮನ ಕೋಟೆಯನ್ನು ವಶಪಡಿಸಿಕೊಂಡು ಗೋಲ್ಕೊಂಡಾ ರಾಜನ ಸೈನ್ಯದ ಧಾಳಿಯನ್ನು ಎದುರಿಸುತ್ತಿದ್ದ ಫ್ರೆಂಚ್ ಸೇನಾನಾಯಕ ಜನರಲ್ ಬ್ಲಾಂಕ್ ಲಾ ಹೇ (General Blanquet de la Haya) ಎಂಬುವನನ್ನು ಭೇಟಿಮಾಡಿದ. ನಮ್ಮ ಈ ಕಥಾನಾಯಕ ಫ್ರಾನ್ಸ್‌ನಿಂದ ಹೊರಟು ಸೂರತ್‌ಗೆ ಬಂದು ಅಲ್ಲಿಂದ ಗೋವಾ, ಬಿಜಾಪುರ, ಗೋಲ್ಕೊಂಡಾ ಮಾರ್ಗವಾಗಿ ಮದ್ರಾಸ್ ತಲುಪುತ್ತಾನೆ: ಬಿಜಾಪುರದಲ್ಲಿ ಕಾರ್ ಮಲೇರಿಯಾ ಜ್ವರದಿಂದ ಸತ್ತುಬದುಕಿದನೆಂದೇ ಹೇಳಬಹುದು. ಕೇವಲ ಎರಡುವರ್ಷಗಳ ಅವಧಿಯಲ್ಲಿ ಅಂದರೆ ೧೬೭೨ ರಿಂದ ೧೬೭೪ರ ಒಳಗೆ ಕಾರ್ ತನ್ನ ದೇಶದಿಂದ ಹೊರಟು ಸಿರಿಯಾ ಮರುಭೂಮಿ, ಮೆಸೊಪೊಟೋಮಿಯಾ (ಇರಾಕ್), ಪರ್ಷಿಯನ್ ಖಾರಿ—ಇವುಗಳ ಮುಖಾಂತರ ಸಮುದ್ರದಮೇಲೂ ಭೂಮಿಯಮೇಲೂ ಬಹು ಪ್ರಯಾಸದ ಪ್ರವಾಸಮಾಡಿ ಮದ್ರಾಸ್ ತಲುಪಿ ಮಂತ್ರಿ ಕೊಲ್‌ಬರ್ ಕೊಟ್ಟು ಕಳುಹಿಸಿದ್ದ ಕಾಗದ ಪತ್ರಗಳನ್ನು ಲಾ ಹೇಗೆ ಮುಟ್ಟಿಸುತ್ತಾನೆ. ಲಾ ಹೇಯು ಕಾರ್‌ನನ್ನು ಮದ್ರಾಸ್‌ನಲ್ಲಿ ತನ್ನ ಏಜೆಂಟ್ ಆಗಿ ನೇಮಿಸಿಕೊಳ್ಳುತ್ತಾನೆ: ಮದ್ರಾಸ್‌ನಿಂದ ತನಗೆ ಬೇಕಾದ ಸಾಮಾನುಸರಂಜಾಮುಗಳನ್ನು ತರಿಸಿಕೊಳ್ಳುವದಕ್ಕಾಗಿಯೂ. ಅವಶ್ಯವಿದ್ದರೆ ಇಂಗ್ಲಿಷರೊಡನೆ ಸಂಧಾನ ನಡೆಸುವದಕ್ಕಾಗಿಯೂ ತನ್ನ ಪ್ರತಿನಿಧಿಯಾಗಿ ನೇಮಿಸಿಕೊಳ್ಳುತ್ತಾನೆ. ಕಾರ್ ಮದ್ರಾಸಿನಲ್ಲಿ . ಆರು ತಿಂಗಳಿದ್ದು ಇಂಗ್ಲಿಷ್ ಹಡಗೊಂದರಲ್ಲಿ ಹೊರಟು ಅನೇಕ ತೊಂದರೆ ತಾಪತ್ರಯಗಳನ್ನು ಅನುಭವಿಸಿ ತನ್ನ ಸ್ವದೇಶಕ್ಕೆ ಹಿಂದಿರುಗುತ್ತಾನೆ.

ಅಬೆ ಕಾರ್ ಪ್ರವಾಸಕ್ಕೆ ಹೊಸಬನಲ್ಲ. ಇದಕ್ಕೆ ಮುನ್ನ ಸೂರತ್ತಿಗೆ ಬಂದು ಮಲಬಾರ್ ತೀರ ಪ್ರದೇಶವನ್ನು ನೋಡಿಕೊಂಡು ಹೋಗಿದ್ದ. ಇದು ೧೬೬೮ರಲ್ಲಿ. ಮೆಡಿಟರೇನಿಯನ್ ಸಮುದ್ರದ ಹಾಗೂ ಅಟ್ಲಾಂಟಿಕ್ ಸಾಗರದ ದ್ವೀಪಗಳನ್ನು ತಾನು ಆಗಲೇ ನೋಡಿರುವದಾಗಿ ಆತನೇ ಹೇಳಿಕೊಂಡಿದ್ದಾನೆ. ಆತ ತನ್ನ ಪ್ರವಾಸದಲ್ಲಿ ದಿನನಿತ್ಯ ಕಂಡ ವಿಷಯಗಳನ್ನು ವಿವರವಾಗಿ ಗುರುತುಹಾಕಿಕೊಳ್ಳುವ ಅಭ್ಯಾಸ ಬೆಳೆಸಿಕೊಂಡಿದ್ದ. ಈತ ಪ್ರಸ್ತುತ ಪ್ರವಾಸ ಕಥನವಲ್ಲದೆ ಇನ್ನೂ ಹಲವಾರು ಪ್ರವಾಸಕಥನಗಳನ್ನು ಬರೆದಿದ್ದಾನೆ.

ಪ್ರಸ್ತುತ ಪ್ರವಾಸಕಥನ ೧೬೭೨ ರಿಂದ ೭೪ರ ವರೆಗೆ ಇಂಡಿಯಾಕ್ಕೆ ಬಂದುಹೋದುದನ್ನು ವಿವರವಾಗಿ ತಿಳಿಸುತ್ತದೆ. ಕಾರ್ ಫ್ರೆಂಚ್ ಭಾಷೆಯಲ್ಲಿ ತನ್ನ ಸ್ವಹಸ್ತದಿಂದ ಬರೆದುದನ್ನು ಹಸ್ತಪ್ರತಿಯಿಂದ ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡಲಾಯಿತು. ಈ ಹಸ್ತಪ್ರತಿಯನ್ನು ಲಂಡನ್‌ನ ಈಸ್ಟ್ ಇಂಡಿಯಾ

ಕಂಪನಿಯ ಡೈರೆಕ್ಟರುಗಳು ೧೮೨೦ರಲ್ಲಿ ಜಾನ್ ವಾಕರ್ (John Walker) ಎಂಬುವನಿಂದ ಪಡೆದರು. ಕಂಪನಿಯ ಛೇರ್ಮನ್ ಅವರಿಗೆ ವಾಕರ್ ಬರೆದ ಪತ್ರದ ಸಾರಾಂಶ ಹೀಗಿದೆ:

' ಮಾನ್ಯರೆ, .

ಅಬೆ ಕಾರ್‌ರವರು ತಾವು ೧೬೭೨–೭೩ ಮತ್ತು ೭೪ ಈ ವರ್ಷಗಳಲ್ಲಿ ಬರೆದ ದಿನಚರಿಯ ಹಸ್ತಪ್ರತಿಯನ್ನು ತಮ್ಮ ಅವಲೋಕನೆಗೆ ಕಳುಹಿಸುತ್ತಿದ್ದೇನೆ. ಇವರ ದಿನಚರಿಯಲ್ಲಿ ಅನೇಕ ಮುಖ್ಯ ವಿಷಯಗಳು ಇವೆ. ಇದನ್ನು ನಾನು ಹಲವಾರು ಜನಕ್ಕೆ ತೋರಿಸಿದಾಗ ಅದನ್ನು ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಕೊಡುವುದು ಒಳ್ಳೆಯದೆಂಬ ಸಲಹೆಮಾಡಿದರು. ಅದರಂತೆ ಈಗ ಆ ಕೆಲಸ ಮಾಡುತ್ತಿದ್ದೇನೆ '.

ಕಂಪನಿಯ ಪುಸ್ತಕಭಂಡಾರಿ ಇದನ್ನು ನೋಡಿ, ಇದರಲ್ಲಿ ಬಹು ಸ್ವಾರಸ್ಯವಾದ ಸಂಗತಿಗಳಿವೆ ಎಂದು ಛೇರ್ಮನ್‌ರವರಿಗೆ ಶಿಫಾರಸು ಮಾಡಿದ. ಅವರು ವಾಕರ್ ಅವರನ್ನು ಕರೆಸಿ ಮಾತನಾಡಿದರು. ೪೦ ಪೌಂಡು ಹಣ ಕೊಟ್ಟು, ಹಸ್ತಪ್ರತಿಯನ್ನು ಕೊಂಡುಕೊಂಡರು. ವಾಕರ್‌ನಿಗೆ ಈ ಹಸ್ತಪ್ರತಿ ಹೇಗೆ ಹೋಯಿತು ಎಂಬುದು ಒಂದು ಮುಖ್ಯಪ್ರಶ್ನೆ. ಆದರೆ ಇದಕ್ಕೆ ಸರಿಯಾದ ಉತ್ತರ ದೊರಕಿಲ್ಲ. ಕಾರ್ ಇಂಡಿಯಾದಿಂದ ಹಿಂದಿರುಗಿದ ಮೇಲೆ ತನ್ನ ಪ್ರವಾಸವರದಿಯನ್ನು ತನ್ನನ್ನು ಇಂಡಿಯಾಕ್ಕೆ ಕಳುಹಿಸಿಕೊಟ್ಟಿದ್ದ ಕೊಲ್‌ಬರ್ ಅವರಿಗೋ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಗೋ ಕೊಟ್ಟಿರಬಹುದು. ಕೊಟ್ಟಾಗ ಒಂದು ಪ್ರತಿಯನ್ನು ತನ್ನ ಬಳಿ ಇಟ್ಟುಕೊಂಡಿರಬೇಕು. ತನ್ನೀ ಪ್ರವಾಸಕಥನವನ್ನು ೧೬೯೯ರಲ್ಲಿ ಫ್ರೆಂಚ್ ಭಾಷೆಯಲ್ಲಿಯೇ ಪ್ರಕಟಿಸುವ ಸಾಹಸಮಾಡಿದ ಕಾರ್. ಸಾರ್ವಜನಿಕರ ಮನ್ನಣೆ ಇದಕ್ಕೆ ಅನುಕೂಲವಾಗಿ ಕಂಡುಬಂದರೆ ಬೇರೆ ಕಥನಗಳನ್ನೂ ಪ್ರಕಟಿಸುವುದಾಗಿ ಹೇಳಿದ್ದ. ಆದರೆ ಇದಲ್ಲದೆ ಬೇರೆ ಯಾವ ಕಥನವನ್ನೂ ಕಾರ್ ಪ್ರಕಟಿಸದಿರುವ ಕಾರಣ ಇದಕ್ಕೆ ತಕ್ಕ ಮನ್ನಣೆ ಸಿಗಲಿಲ್ಲ ಎಂದು ಊಹಿಸಲಾಗಿದೆ.

ಹಸ್ತಪ್ರತಿಯ ಒಂದು ಹಾಳೆಯ ಮೇಲೆ ' ಈ ಹಸ್ತಪ್ರತಿಯನ್ನು ಅಬೆ ಕಾರ್ ಫ್ರೆಂಚ್ ಮಂತ್ರಿ ಕೊಲ್‌ಬರ್‌ರವರಿಗೆ ಈಸ್ಟ್ ಇಂಡೀಸಿನಿಂದ ಹಿಂದಿರುಗಿದಮೇಲೆ ಕಳಿಸಿದ್ದಾರೆ ' ಎಂಬ ಟಿಪ್ಪಣಿಯನ್ನು ೧೮೭೦ನೆಯ ನವೆಂಬರ್ ೩ ರಂದು ಬರೆಯಲಾಗಿದೆ. ಹಾಗಿದ್ದರೆ ಕೊಲ್‌ಬರ್ ಅವರಿಗೆ ಕೊಡಲ್ಪಟ್ಟ ಈ ಹಸ್ತಪ್ರತಿ ವಾಕರ್‌ನ ಕೈಗೆ ಹೇಗೆ ಬಂದಿತು? ವಾಕರ್ ಎಂಬ ಹೆಸರಿನ ಹಲವಾರು ಜನ ಇದ್ದರು. ಅವರಲ್ಲಿ ಯಾವ ವಾಕರ್ ಈ ಹಸ್ತಪ್ರತಿಯನ್ನು ಪಡೆದ ಎಂಬುದು ಸ್ಪಷ್ಟವಾಗುವುದಿಲ್ಲ. ಸರ್ ವಿಲಿಯಂ ಫಾಸ್ಟರ್ ಎಂಬ ಹೆಸರಾಂತ ಪ್ರವಾಸ ಕಥನಗಳ ಸಂಪಾದಕರು ಈ ಅಭಿಪ್ರಾಯ ಪಡುತ್ತಾರೆ: ' ಬಹುಶಃ ಜಾನ್ ವಾಕರ್ ಎಂಬುವನು ಒಬ್ಬ ಖಾಸಗೀ ವ್ಯಕ್ತಿ ಇರಬೇಕು. ಈತ ಲಂಡನ್ ವಾಸಿಯಾಗಿರಲಾರ. ತನಗೆ ಸಿಕ್ಕಿದ ಈ ಹಸ್ತಪ್ರತಿಯು ಈಸ್ಟ್ ಇಂಡಿಯಾ ಕಂಪನಿಗೆ ಉಪಯೋಗವಾಗಬಹುದೆಂಬ ಉದ್ದೇಶದಿಂದ ಅದನ್ನು ಅದರ ಛೇರ್ಮನ್‌ರಿಗೆ ವಹಿಸಿರಬೇಕು ' ಎಂದು ಹೇಳುತ್ತಾರೆ.

ಇದೂ ಕೂಡ ಸಂದೇಹವನ್ನು ಬಗೆಹರಿಸುವದಿಲ್ಲ. ಕೊಲ್‌ಬರ್‌ಗಾಗಲೀ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯ ಡೈರೆಕ್ಟರುಗಳಿಗಾಗಲೀ ವಹಿಸಿದ ವರದಿ ಜಾನ್ ವಾಕರ್‌ನ ಕೈಗೆ ಹೇಗೆ ಬಂದಿತೆಂಬ ಸಂದೇಹ ಹಾಗೇ ಉಳಿಯುತ್ತದೆ.

ಆದರೆ ಈ ಹಸ್ತಪ್ರತಿ ಅಬೆ ಕಾರ್‌ನದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಹಸ್ತಪ್ರತಿಯ ಬರವಣಿಗೆ ಮತ್ತು ಬೇರೆ ವರದಿಗಳ ಬರವಣಿಗೆ ಒಂದೇ ಆಗಿದೆ. ಅಬೆಯ ಕಥನ ದಿನಚರಿಯ ರೂಪದಲ್ಲಿದೆ. ಆದರೆ ಈ ದಿನಚರಿಯನ್ನು ಆಯಾ ದಿನವೇ ಬರೆದನೇ ಅಥವಾ ಆ ಮೇಲೆ ಬರೆದನೆ? ಆ ಮೇಲೆ ಅಂದರೆ ಹಲವು ತಿಂಗಳ ನಂತರ ಬರೆದಿರಬೇಕೆಂದು ಅಭಿಪ್ರಾಯಪಡಲಾಗಿದೆ. ಆಯಾ ದಿನವೇ ಬರೆದಿದ್ದರೆ ಶಾಯಿಯಲ್ಲಿ ವ್ಯತ್ಯಾಸ ಕಂಡುಬರುತ್ತಿತ್ತು ಮತ್ತು ಬರವಣಿಗೆಯ ಬಗೆಯಲ್ಲೂ ಕೊಂಚ ಬದಲಾವಣೆ ಕಾಣಬಹುದಿತ್ತು. ಆದರೆ ಹೀಗಿಲ್ಲ. ೧೬೭೩ನೆಯ ಮೇ ತಿಂಗಳಿನಿಂದ ಅದೇ ವರ್ಷದ ಅಕ್ಟೋಬರ್‌ವರೆಗೆ, ಅಂದರೆ ಆರುತಿಂಗಳ ದಿನಚರಿ, ಒಂದೇ ಬಗೆಯ ಶಾಯಿಯಲ್ಲಿದೆ. ಇದಕ್ಕೆ ಇನ್ನೂ ಕೆಲವು ಉದಾಹರಣೆಗಳು ದೊರೆಯುತ್ತವೆ. ಆದ್ದರಿಂದ ಇಡೀ ಪ್ರವಾಸಕಥನವನ್ನು ಅಬೆ ಕಾರ್ ಫ್ರಾನ್ಸ್‌ಗೆ ಹಿಂದಿರುಗಿದ ಮೇಲೆ ಬರೆದಿರಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ.

ಎಲ್ಲಾ ಪ್ರವಾಸಿಗಳ ಸ್ವಂತ ವಿಷಯ ಹೇಗೆ ಅಪೂರ್ಣವೋ ಹಾಗೆಯೇ ಅಬೆ ಕಾರ್‌ನದೂ ಆಗಿದೆ. ಮಾತಾ ಪಿತೃಗಳು ಯಾರು? ಹುಟ್ಟಿದ ಸ್ಥಳ ಯಾವುದು? ವಿದ್ಯಾಭ್ಯಾಸ ಎಷ್ಟು? ಕಾಲವಾದ ವರ್ಷ ಯಾವುದು?—ಇವೆಲ್ಲಾ ಊಹಾಪೋಹಗಳಾಗಿಯೇ ಉಳಿದಿವೆ. ಆತನೂ ತನ್ನ ಕಥನದಲ್ಲಿ ಇವುಗಳ ಬಗ್ಗೆ ಹೇಳಿಕೊಳ್ಳುವದಿಲ್ಲ. ಅವರಿವರು ಇವನ ಬಗ್ಗೆ ಬರೆದ ವಿಷಯಗಳನ್ನು ಕೂಡಿಹಾಕಿ ಹೇಳುವು ದಾದರೆ, ಅಬೆ ಕಾರ್ ಇಂಡಿಯಾಕ್ಕೆ ಬಂದಾಗ ಆತನ ವಯಸ್ಸು ಸುಮಾರು ೩೬ ವರ್ಷ. ಹುಟ್ಟಿದ್ದು ಸುಮಾರು ೧೬೩೬–೪೦ರಲ್ಲಿ. ೧೬೭೪ ರನಂತರ ಈತನ ಬಗ್ಗೆ ಪ್ರಸ್ತಾಪ ಎಲ್ಲಿಯೂ ಬರುವುದಿಲ್ಲ. ಆ ವೇಳೆಗೆ ಈತನ ವಯಸ್ಸು ೬೦ ವರ್ಷ ಆಗಿರಬಹುದು. ಇನ್ನು ಆತನ ವಂಶದ ಬಗ್ಗೆ ಹೇಳಬಹುದಾದರೆ ಆತ ಒಬ್ಬ ಹಿರಿಯ ಮನೆತನಕ್ಕೆ ಸೇರಿದವನಾಗಿರಬಹುದೆಂದು ಹೇಳಲಾಗಿದೆ. ಫ್ರಾನ್ಸ್ ದೊರೆಯ ಆಸ್ಥಾನದಲ್ಲಿ ಆತನ ಹಿರಿಯರು ಬಹು ಮುಖ್ಯವಾದ ಒಂದು ಹುದ್ದೆಯಲ್ಲಿದ್ದರೆಂದು ಗೊತ್ತಾಗುತ್ತದೆ. ಇಂಡಿಯಾಕ್ಕೆ ಬರುವ ಮುನ್ನ ಈತ ಒಂದು ಹಡಗಿನಲ್ಲಿ ಪಾದ್ರಿಯಾಗಿದ್ದನೆಂದೂ, ಈ ಕಾರಣ ಈತನಿಗೆ ಅಬೆ (Abbe) ಎಂಬ ಗೌರವನಾಮ ಸೇರಿರಬಹುದೆಂದೂ ಹೇಳಲಾಗಿದೆ. ಕ್ಯಾಥೊಲಿಕ್ ಕ್ರೈಸ್ತನಾದ ಈತ ಎಂತಹ ಪರಿಸ್ಥಿತಿ ಒದಗಿದರೂ ತನ್ನ ವಚನವನ್ನು ನಿಷ್ಠೆಯಿಂದ ಪಾಲಿಸಿಕೊಂಡು ಬರುತ್ತಾನೆ. ಕಷ್ಟದಲ್ಲಿದ್ದ ಕ್ರೈಸ್ತರಿಗೆ ತನ್ನ ಕೈಲಾದ ಸಹಾಯ ಮಾಡುತ್ತಾನೆ.

ಅಬೆ ಕಾರ್‌ನ ಬರವಣಿಗೆ ಆಗಿನ ಕಾಲದ ಫ್ರೆಂಚರ ಬರವಣಿಗೆಯ ಮಾದರಿಯಲ್ಲಿದೆ. ಅತಿ ಎನ್ನಬಹುದಾದ ವಿವರಣೆಗಳೋ ಅನಾವಶ್ಯಕ ಸಂಗತಿಗಳೂ ಇವನ ಬರೆಹದಲ್ಲಿ ಕಂಡುಬರುವ ಲೋಪ ಗಳು. ನಿಕೊಲೊ ಮನೂಚಿಯಂತೆ ಈತನೂ ಯಾವುದಾದರು ಒಂದು ವಿಷಯದ ಬಗ್ಗೆ ಬರೆದದ್ದೂ ಬರೆದದ್ದೆ. ಆದರೆ ಅಲ್ಲಲ್ಲಿ ನಮಗೆ ಬೇಕಾದ ಅನೇಕ ಉಪಯುಕ್ತ ವಿಷಯಗಳೂ ಸಂಗತಿಗಳೂ ಭೇಜಾರನ್ನು ಹೋಗಲಾಡಿಸುವಂತಹ ಪ್ರಸಂಗಗಳೂ ಬರುತ್ತವೆ. ಇತಿಹಾಸದ ದೃಷ್ಟಿಯಿಂದಲೂ ಈತನ ಕಥನ ಸಾಕಷ್ಟು ಉಪಯುಕ್ತವಾಗಿದೆ.

೧೬೬೮ರ ಮಾರ್ಚ್ ೧೪ನೆಯ ಬುಧವಾರ.

ಇಡೀ ಪ್ರಾತಃಕಾಲವನ್ನು ವರ್‌ಸೈ (Varsailles)ನಲ್ಲಿ ಕೊಲ್‌ಬರ್ (Colbert)ರವರ ಭವ್ಯ ಸೌಧದಲ್ಲಿ ಕೆಲಸಮಾಡುತ್ತಾ ಕಳೆದೆ. ನಡುದಿನ ನನಗೆ ಕೊಲ್‌ಬರ್ ಅವರಿಂದ ಕರೆಬಂದು ಅವರ ಆಫೀಸಿಗೆ ಹೋದೆ. ಚಕ್ರವರ್ತಿಗಳ ಅಪ್ಪಣೆ ಯಂತೆ ನಾನು ಇಂಡಿಯಾಕ್ಕೆ ಹೋಗಬೇಕಾಗಿದೆಯೆಂದು ತಿಳಿಸಿ, ಪ್ಯಾರಿಸಿಗೆ ಹೋಗಿ ಈಸ್ಟ್ ಇಂಡಿಯಾ ಕಂಪೆನಿಯ ಆರ್ಡರ್ ತೆಗೆದುಕೊಳ್ಳಬೇಕೆಂದು ಹೇಳಿದರು. ನಾನು ಪ್ಯಾರಿಸ್‌ಗೆ ಹೋದೆ. ಅಲ್ಲಿ ಹಲವು ದಿನಗಳಿದ್ದು ಕಂಪೆನಿಯ ಡೈರೆಕ್ಟರುಗಳನ್ನು ನೋಡಿದೆ. ಅವರೆಲ್ಲ ನನ್ನನ್ನು ವಿಶ್ವಾಸದಿಂದ ಕಂಡು, ಕಂಪೆನಿಯ ಪರವಾಗಿ ಈ ಹಿಂದೆ ಪೂರ್ವ ದೇಶಕ್ಕೆ ಹೋಗಿಬಂದ ಅನುಭವ ಪಡೆದವನಾಗಿರುವದರಿಂದ ನನ್ನನ್ನು ಮತ್ತೆ ಆ ಕಡೆ ಕಳುಹಿಸುತ್ತಿರುವುದಾಗಿ ಹೇಳಿದರು.

ಮಾರ್ಚ್ ೨೪ನೆಯ ಶನಿವಾರ.

ಈ ದಿನ ನಾಟರ್ ಡಾಮ್ ಚರ್ಚಿನಲ್ಲಿ (Notre Dame) (ಪವಿತ್ರ ಮೇರಿಗೆ ಮೀಸಲಾದ ಚರ್ಚು) ಪ್ರಾರ್ಥನೆ ಸಲ್ಲಿಸಿ ಅಪಾಯಕರವಾದ ಪ್ರಯಾಣದಲ್ಲಿ ನನ್ನನ್ನು ಸುರಕ್ಷಿತವಾಗಿ ಇಡಬೇಕೆಂದು ಬೇಡಿದೆ. ಪ್ರಾರ್ಥನೆಯ ನಂತರ ಲೈಯನ್ಸ್ (Lyons)ಗೆ ಹೊರಟೆ. ದಾರಿಯಲ್ಲಿ ಎಲ್ಲೆಲ್ಲೂ ಸಿಪಾಯಿಗಳೇ ಕಂಡರು. ಆದರೆ ಅವರೆಲ್ಲಾ ಬಹು ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದುದನ್ನು ಕಂಡೆ. ಅಶಿಸ್ತಿನ ನಡತೆಯಾಗಲೀ

ಕಳ್ಳತನ ದರೋಡೆಗಳಾಗಲೀ ಅವರಿಂದ ನಡೆದುವೆಂದು ತಿಳಿಯಲಿಲ್ಲ. ಇದು ನಮ್ಮ ಚಕ್ರವರ್ತಿಗೆ ಕೀರ್ತಿ ತರುವಂತಹ ವಿಷಯವೇ ಸರಿ. ಅವರೇ ಸ್ವತಃ ಆಸಕ್ತಿ ವಹಿಸಿ ಈ ಶಿಸ್ತನ್ನು ತಂದಿದ್ದರು. ಅಲ್ಲದೆ ದಾರಿಯುದ್ದಕ್ಕೂ ನಡೆಯುತ್ತಿದ್ದ ಅನೇಕ ಜನೋಪಯೋಗಿ ಕಾಂಗಾರಿಗಳನ್ನೂ ಕಂಡೆ. ಈ ಕೆಲಸಗಳಿಗೆಲ್ಲಾ ನಮ್ಮ ದೇಶದ ಮಹಾಮೇಧಾವಿ ಆದ ಕೊಲ್‌ಬರ್ ಅವರೇ ಕಾರಣ. ಹೆದ್ದಾರಿಗಳನ್ನು ಅಗಲಮಾಡಿಸಿ, ದುರಸ್ತುಪಡಿಸಿ ಪ್ರಯಾಣಿಕರಿಗೂ ವ್ಯಾಪಾರಸಾಪಾರಸ್ಥರಿಗೂ ಅನುಕೂಲವುಂಟುಮಾಡಬೇಕೆಂಬುದು ಅವರ ಹಿರಿಯ ಆಸೆ. ಪ್ರಪಂಚದ ಬೇರೆ ಬೇರೆ ಕಡೆಗಳಿಂದ ವರ್ತಕರು ಫ್ರಾನ್ಸ್ ದೇಶಕ್ಕೆ ಬರಬೇಕೆಂದೂ ಆ ಮೂಲಕ ಫ್ರಾನ್ಸ್ ದೇಶದ ಶ್ರೀಮಂತಿಕೆ ಹೆಚ್ಚಬೇಕೆಂದೂ ಅವರ ಬಯಕೆ.

ಮಾರ್ಚ್ ತಿಂಗಳ ಕೊನೆಯ ದಿನ (ಗುರುವಾರ)

ಮಧ್ಯಾಹ್ನದ ಹೊತ್ತಿಗೆ ಲೈಯನ್ಸ್ ತಲುಪಿದೆ. ಉಳಿದ ದಿನವನ್ನು ಡೈರೆಕ್ಟರುಗಳನ್ನು ನೋಡುವವದರಲ್ಲೂ ಇಂಡೀಸ್‌ನಲ್ಲಿದ್ದ ಅವರ ನೆಂಟರಿಷ್ಟರಿಗೆ ಬರೆದ ಪತ್ರಗಳನ್ನು ತೆಗೆದುಕೊಳ್ಳುವುದರಲ್ಲೂ ಕಳೆದೆ.

ಏಪ್ರಿಲ್ ೧ನೆಯ ತಾರೀಖು: ಅವಿನ್‌ಯಾನ್ (Avignon)ಗೆ ಹೋಗಲು ಒಂದು ದೋಣಿಯನ್ನು ಬಾಡಿಗೆಗೆ ಪಡೆದೆ. ಮಾರ್‌ಸೇಲ್ಸ್ ಮತ್ತು ತೊಲೊನ್‌ಗಳಿಗೆ ಹೋಗುತ್ತಿದ್ದ ತುಂಬಾ ಒಳ್ಳೆಯ ನೌಕಾಧಿಕಾರಿಗಳು ನನ್ನೊಡನಿದ್ದರು. ಎಲ್ಲಿಯೂ ಆಹಾರಕ್ಕಾಗಿ ದೋಣಿಯನ್ನು ನಿಲ್ಲಿಸಬಾರದೆಂದುಕೊಂಡು ಬೇಕಾದ್ದನ್ನೆಲ್ಲಾ ದೋಣಿಯಲ್ಲಿ ಹಾಕಿಕೊಂಡು ರೈನ್ (Rhine) ನದಿಯಮೇಲೆ ಮಧ್ಯಾಹ್ನ ಹೊರಟೆವು.

ಏಪ್ರಿಲ್ ೩ನೆಯ ತಾರೀಖು ಶನಿವಾರ ಬೆಳಕು ಹರಿಯುವ ಹೊತ್ತಿಗೆ ಅವಿನ್‌ಯಾನ್ ತಲುಪಿದೆವು. ಊರನ್ನು ಪ್ರವೇಶಿಸಲು ಮ್ಯಾಜಿಸ್ಟ್ರೇಟರ ಅನುಮತಿ ಪಡೆಯಲು ಇಲ್ಲಿ ಅರ್ಧಗಂಟೆ ವಿಳಂಬವಾಯಿತು. ನಮ್ಮನ್ನ ಒಂದು ಹೊಟೇಲಿನಲ್ಲಿ ಇಳಿಸಿದರು. ಆಳುಗಳು ಸಾಮಾನುಗಳನ್ನು ಅಲ್ಲಿಗೆ ಸಾಗಿಸಿಕೊಟ್ಟರು. ನನ್ನೊಡನೆ ಪ್ರಯಾಣಮಾಡಿದವರಿಗೆಲ್ಲ 'ನಮ್ಮ ಕ್ರೈಸ್ತ ಕರ್ತವ್ಯವನ್ನು ಮರೆಯಬಾರದು' ಎಂದು ಹೇಳಿದೆ. ಎಲ್ಲರೂ ಚರ್ಚಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿದೆವು.

ಮಧ್ಯಾಹ್ನದ ಊಟ ಮುಗಿಸಿಕೊಂಡು ಕುದುರೆಗಳನ್ನೇರಿ ಮಾರ್‌ಸೇಲ್ಸ್ (Marsailles)ಗೆ ಹೊರಟೆವು. ದಾರಿ ಬೆಟ್ಟಗುಡ್ಡಗಳಿಂದ ಕೂಡಿ ಬಹು ಮನೋಹರವಾಗಿತ್ತು.

ನಾಲ್ಕನೆಯ ತಾರೀಖು ಸೋಮವಾರ ಬೆಳಿಗ್ಗೆ ಮಾರ್‌ಸೇಲ್ಸ್ ತಲುಪಿದೆವು. ನಾನು ಚಕ್ರವರ್ತಿಯ ಗ್ಯಾಲಿ ಹಡಗುಗಳ (Galleys) ಹಿರಿಯ ಮೇಲ್ವಿಚಾರಕರಾದ (Intendent–General) ಎಂ. ಆರ್ನೋ (M. Arnou) ಅವರನ್ನು ಕಂಡೆ. ಅವರು ನನ್ನನ್ನು ಬಹು ಪ್ರೀತಿಯಿಂದ ಕಂಡರು. ನನ್ನ ಬಿಡಾರಕ್ಕೆ ಒಂದು ಕೋಣೆ ಕೊಡುವುದಾಗಿ

ಹೇಳಿದರು. ನಾನು ಬೇಡ ಎಂದು, ಮಾರ್ಸೇಲ್ಸ್‌ನಲ್ಲಿ ಇರುವಷ್ಟು ದಿನ ಊಟಕ್ಕೆ ಬರುವುದಾಗಿ ಹೇಳಿದೆ. ನನ್ನ ಪೌರ್ವಾತ್ಯ ಪ್ರವಾಸಕಥನದಲ್ಲಿ ಅವರು ತುಂಬಾ ಆಸಕ್ತಿ ತೋರಿಸಿದರು. ಹಲವಾರು ದಿನ ಇರಿಸಿಕೊಂಡು ನನ್ನ ಕಥೆ ಕೇಳಬೇಕೆಂದು ಅಪೇಕ್ಷೆ ಪಟ್ಟರು. ಆದರೆ ನಾನು ನನ್ನ ಪ್ರಯಾಣ ಮುಂದುವರೆಸುವ ಕಾತರದಲ್ಲಿದ್ದೆ. ಬಂದರಿಗೆ ಹೋಗಿ ಲಿವಾಂಟ್‌ಗೆ (Levant = ಮೆಡಿಟರೇನಿಯನ್ ಸಮುದ್ರದ ಪೂರ್ವ ಭಾಗ) ಹೊರಡುವ ಹಡಗುಗಳಿವೆಯೇ ಎಂದು ವಿಚಾರಿಸಿದೆ. ಅಲ್ಲಿಗೆ ಹೋಗುವ ಎರಡು ಹಡಗುಗಳಿದ್ದುವು. ಆದರೆ ಅವು ಹೊರಡಲು ಇನ್ನೂ ಎರಡು ತಿಂಗಳು ಬೇಕಾಗಿತ್ತು. ಬೇರೆ ದೋಣಿಗಳಿದ್ದವು. ಆದರೆ ಅವೂ ಕೂಡಲೇ ಹೊರಡುವಂತಿರಲಿಲ್ಲ. ಅವುಗಳಲ್ಲಿ ಹೋದರೆ ಬಾರ್ಬರಿ (Barbery) ಕಡಲುಗಳ್ಳರ ಕೈಗೆ ಸಿಕ್ಕಿಕೊಳ್ಳುವ ಸಂಭವವಿತ್ತು. ನಿರಾಶೆಯಿಂದ ಎಂ. ಆರ್ನೋ ಅವರ ಮನೆಗೆ ಹೋಗಿ ನಡೆದದ್ದನ್ನೆಲ್ಲಾ ಹೇಳಿದೆ. ಅವರು ತಮ್ಮ ಕೈಲಾದ ಸಹಾಯ ಮಾಡುವುದಾಗಿ ಹೇಳಿದರು. ಮಾರ್ಸೇಲ್ಸ್‌ನಿಂದ ಆದಷ್ಟು ಜಾಗ್ರತೆ ಪ್ರಯಾಣಮಾಡಲು ಇರುವ ಅನುಕೂಲಗಳನ್ನು ತಿಳಿದುಕೊಂಡು ಬರುವಂತೆ ತಮ್ಮವರನ್ನು ಕಳುಹಿಸಿಕೊಟ್ಟರು. ನಾನು ದೇವರಿಗೆ ಸಲ್ಲಿಸಿದ ಪ್ರಾರ್ಥನೆ ವ್ಯರ್ಥವಾಗ ಲಿಲ್ಲ. ಏಪ್ರಿಲ್ ೭ನೆಯ ತಾರೀಖು ನಾವು ಊಟಮಾಡುತ್ತಾ ಕುಳಿತಿರುವಾಗ ಸಂತೋಷದ ಸುದ್ದಿಯೊಂದು ಬಂದಿತು. ಫ್ರೆಂಚ್ ರಾಯಭಾರಿಯನ್ನು ರೋಮಿಗೆ ಕರೆದುಕೊಂಡು ಹೋಗಿದ್ದ ಎರಡು ಗ್ಯಾಲಿ ಹಡಗುಗಳು ಹಿಂದಿರುಗಿವೆ ಎಂದು ತಿಳಿಯಿತು. ಈ ಹಡಗುಗಳ ಅಧಿಕಾರಿಗಳನ್ನು ಕಂಡು ಲೆವಾಂಟ್‌ಗೆ ಹೋಗುವ ಇಟಲಿ ಹಡಗುಗಳು ಇವೆಯೇ ಎಂದು ಕೇಳಿದೆ. ಎರಡು ಮೂರು ಇಂಗ್ಲಿಷ್ ಮತ್ತು ಫ್ರೆಂಚ್ ಹಡಗುಗಳು ಲೆಗ್‌ಹಾರ್ನ್‌ನಲ್ಲಿ ಇವೆಯೆಂದೂ ಅವು ಸೈಪ್ರೆಸ್ ಮತ್ತು ಅಲೆಕ್ಸಾಂಡ್ರಿಯಾಕ್ಕೆ ಹೋಗಲು ಸರಕುಗಳನ್ನು ಭರ್ತಿಮಾಡಿಕೊಳ್ಳುತ್ತಿವೆಯೆಂದೂ ತಿಳಿಸಿದರು. ಇದು ತುಂಬಾ ಒಳ್ಳೆಯ ಸಂಗತಿಯಾಗಿತ್ತು. ಹಡಗುಗಳು ಕೂಡಲೇ ಹೊರಡುವದಾಗಿಯೂ ತಿಳಿದುಬಂತು. ಏಕೆಂದರೆ, ಅವು ಇಟಲಿಗೆ ಅತಿ ಜರೂರಾಗಿ ಬೇಕಾಗಿದ್ದ ದವಸವನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಆ ಹಡಗುಗಳು ಇದ್ದ ಲೆಗ್‌ಹಾರ್ನ್‌ಗೆ ಹೋಗುವ ಹಡಗೂ ಸಿದ್ಧವಾಗಿತ್ತು. ಆದರೆ ಅನುಕೂಲವಾದ ಗಾಳಿ ಬೀಸದೆ ಮೂರು ದಿನ ಕಾಯಬೇಕಾ ಯಿತು. ನನ್ನ ಕಳವಳಕ್ಕೆ ಮಿತಿಯೇ ಇರಲಿಲ್ಲ. ಲೆಗ್‌ಹಾರ್ನ್‌ನಲ್ಲಿರುವ ಹಡಗುಗಳು ಎಲ್ಲಿ ಹೊರಟುಹೋಗಿಬಿಡುವುವೋ ಎಂದು ನನ್ನ ತಳಮಳ. ಹಡಗಿನಲ್ಲಿ ಹೋಗುವ ಬದಲು ಭೂಮಾರ್ಗವಾಗಿ ಲೆಗ್‌ಹಾರ್ನ್‌ಗೆ ಹೋಗುವುದೆಂದು ತೀರ್ಮಾನಿಸಿದೆ. ದಾರಿ ತುಂಬಾ ಪ್ರಯಾಸಕರವೆಂದೂ ಕಳ್ಳಕಾಕರ ಕಾಟವು ಉಂಟೆಂದೂ ಹೇಳಿದರು. ಆದರೂ ನಾನಲ್ಲಿ ಹೋಗಲೇಬೇಕೆಂದು ತೀರ್ಮಾನಿಸಿದೆ.

ಏಪ್ರಿಲ್ ೧೧ನೆಯ ಭಾನುವಾರ: ಸೂರ್ಯ ಹುಟ್ಟುವದಕ್ಕೆ ಒಂದು ಘಂಟೆ ಮುಂಚೆ ಹತ್ತಿರದಲ್ಲಿದ್ದ ಚರ್ಚಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿದೆ. ಪವಿತ್ರಳಾದ ತಾಯಿ ಮೇರಿಯನ್ನು ಕೇಳಿಕೊಂಡೆ, ನನ್ನ ಕಷ್ಟಗಳನ್ನೆಲ್ಲಾ ಪರಿಹರಿಸಿ ಕಾಪಾಡು ತಾಯಿ ಎಂದು.

ನನ್ನ ಬಿಡಾರಕ್ಕೆ ಹಿಂದಿರುಗಿ ಸಾಮಾನು ಸರಂಜಾಮುಗಳನ್ನು ಕಟ್ಟಿಕೊಂಡು ಡೋಲಿಯಲ್ಲಿ ಹೊರಟೆ. ಎರಡು ದಿನಗಳಲ್ಲಿ ನಾನು ಸೇರಬೇಕಾದ ಸ್ಥಳವನ್ನು ಸುಖವಾಗಿ ತಲುಪಿದೆ.

ಏಪ್ರಿಲ್ ೧೨ನೆಯ ಮಂಗಳವಾರ ಮಧ್ಯಾಹ್ನ ಕಾನೆ (Cannae) ತಲುಪಿದೆ. ಇಲ್ಲಿ ನನ್ನ ಡೋಲಿಯನ್ನು ಬಿಟ್ಟುಬಿಡಬೇಕಾಯಿತು. ಗುಡ್ಡಗಾಡಿನಲ್ಲಿ ಪ್ರಯಾಣ ಮಾಡುವುದು ಸಾಧ್ಯವೇ ಇರಲಿಲ್ಲ. ಉದ್ದಕ್ಕೂ ಕಲ್ಲುದಾರಿ. ನನಗೆ ತುಂಬಾ ಯೋಚನೆಯಾಯಿತು. ಸ್ಥಳದ ಕಾನ್ಸಲ್ (Consul) [೧] ಅವರನ್ನು ಕಂಡು ನನ್ನ ಕಷ್ಟ ಹೇಳಿಕೊಂಡೆ. ಜಿನೋವಾಕ್ಕೆ ಹೋಗಲು ಅನುಕೂಲವಾದ ಮಾರ್ಗ ಯಾವುದೆಂದು ಕೇಳಿದೆ. ಭೂಮಾರ್ಗವಾಗಿ ಅಥವಾ ಸಮುದ್ರಮಾರ್ಗವಾಗಿ ಹೋಗಬಹುದೆಂದೂ, ಆದರೆ ಎರಡೂ ಅಪಾಯಕಾರಿಯೆಂದೂ ಅವರು ತಿಳಿಸಿದರು. ಕಳೆದ ೧೫ ದಿನಗಳಿಂದ ಸಮುದ್ರ ಅಲ್ಲೋಲ ಕಲ್ಲೋಲ. ಯಾವ ಹಡಗೂ ಹೋಗುವಂತಿಲ್ಲ. ಭೂಮಾರ್ಗವೂ ಅಷ್ಟೇ ಅಪಾಯಕಾರಿಯಾಗಿತ್ತು. ದಿಕ್ಕು ತೋಚದೆ ನನ್ನ ಹೊಟೇಲಿಗೆ ಹಿಂದಿರುಗಿದೆ. ಮೇಜಿನ ಬಳಿ ಕುಳಿತಿರುವಾಗ ಒಬ್ಬ ಗಣ್ಯವ್ಯಕ್ತಿ ಅಲ್ಲಿಗೆ ಬಂದ. ಆತ ಆರು ಕುದುರೆ ಸಾರೋಟಿನಲ್ಲಿ ಬಂದಿದ್ದ. ಅವನು ಒಳಗೆ ಬಂದಾಗ ಎದ್ದುನಿಂತು ಗೌರವ ತೋರಿಸಿದೆ. ಇಬ್ಬರೂ ಒಂದೇ ಮೇಜಿನ ಬಳಿ ಕುಳಿತು ಪರಸ್ಪರ ಮಾತಾಡಿದೆವು. ತಾನು ಮಾರ್ಸೇಲ್ಸ್‌ಗೆ ಹೋಗುತ್ತಿರುವುದರಿಂದ ನನ್ನ ಡೋಲಿಯನ್ನು ಅಲ್ಲಿಗೆ ತೆಗೆದುಕೊಂಡು ಹೋಗಿ ಮುಟ್ಟಿಸುವ ಜವಾಬ್ದಾರಿ ವಹಿಸಿಕೊಳ್ಳುವುದಾಗಿ ತಿಳಿಸಿದ. ಆದರೆ ನಾನು ಭೂಮಾರ್ಗವಾಗಿ ಹೋಗುವುದು ಅಪಾಯವೆಂದು ಹೇಳಿದ. ಆ ದಾರಿಯಲ್ಲಿ ತನ್ನ ಎರಡು ಕುದುರೆಗಳು ಕೊರಕಲಿಗೆ ಬಿದ್ದು ಸತ್ತುಹೋದವೆಂದೂ, ತನ್ನಮೇಲೆ ಬಿದ್ದ ಕಳ್ಳಕಾಕರ ಕೈಯಿಂದ ತಪ್ಪಿಸಿಕೊಳ್ಳುವುದೇ ಕಷ್ಟವಾಯಿತೆಂದೂ, ನಾನು ಭೂಮಾರ್ಗವಾಗಿ ಹೋಗಲೇ ಬಾರದೆಂದೂ ತಿಳಿಸಿದ. ದೇವರೇ ಈ ರೀತಿ ಹೇಳಿದನೆಂದು ನನಗೆ ಅನ್ನಿಸಿತು. ಏಕೆಂದರೆ, ಈತನು ಸಿಕ್ಕದಿದ್ದರೆ ಭೂಮಾರ್ಗವಾಗಿ ನಾನು ಹೊರಟುಬಿಡುತ್ತಿದ್ದೆ. ಹಾಗೆ ಮಾಡಿದ್ದರೆ ನನ್ನ ಗತಿ ಮುಗಿಯುತ್ತಿತ್ತು. ಆ ಶ್ರೀಮಂತ ನನ್ನನ್ನು ಹೇಗಾದರೂ ಮಾಡಿ ಸಮುದ್ರ ಮಾರ್ಗವಾಗಿ ಲೆಗ್‌ಹಾರ್ನ್‌ಗೆ ತಲುಪಿಸುವ ಪ್ರಯತ್ನ ಮಾಡುವುದಾಗಿ ತಿಳಿಸಿದ. ಸಮುದ್ರ ಅಲ್ಲೋಲಕಲ್ಲೋಲವಾಗಿದ್ದರೂ ಹೆಚ್ಚು ಜನರನ್ನು ದೋಣಿ ನಡೆಸುವುದಕ್ಕೆ ನೇಮಿಸಿಕೊಂಡರೆ ಅಪಾಯವಿಲ್ಲದೆ ಯಾನ ಮಾಡಬಹುದೆಂದು ತಿಳಿಯಿತು. ಸರಿ, ದೋಣಿಯವನಲ್ಲಿ ಮಾತಾಡಿದೆ. ಅವನು ೨೫ ನಾವಿಕರನ್ನು ಕರೆದುಕೊಂಡು ಬಂದ. ಅವರಿಗೆ ಹೆಚ್ಚು ಕೂಲಿ ಕೊಡುವುದಾಗಿ ಹೇಳಿ ದಿನಸಿ ಇತ್ಯಾದಿ ಕೊಳ್ಳಲು ಹಣ ಕೊಟ್ಟೆ. ಹಣ ತೆಗೆದುಕೊಂಡು ಅವರೆಲ್ಲಾದರೂ ಕೈಕೊಟ್ಟಾರೂ ಏನೊ ಎಂದು ಮೂರು ನಾಲ್ಕು

---

೧. **Consul**—ದಕ್ಷಿಣ ಫ್ರಾನ್ಸ್‌ನಲ್ಲಿ ಮುನಿಸಿಪಾಲಿಟಿಯ ಮ್ಯಾಜಿಸ್ಟ್ರೇಟ್‌ರಿಗೆ ಇದ್ದ ಹುದ್ದೆಯ ಹೆಸರು.

ಸಲ ಬಂದರಿಗೆ ಹೋಗಿ ಅವರು ಜಾಗ್ರತೆ ಸಿದ್ಧರಾಗಿರಬೇಕೆಂದು ಹೇಳಿದೆ. ಸಮುದ್ರದ ಏರಿಳಿತಗಳನ್ನು ಕಂಡು ಅವರ ಹೆಂಡತಿ ಮಕ್ಕಳು ಹೋಗಬೇಡಿರೆಂದು ಗಟ್ಟಿಯಾಗಿ ಕಿರುಚಿದರು. ಆದರೂ ಅದೇ ದಿನ ರಾತ್ರಿ ಎಂಟು ಗಂಟೆಗೆ ನಾವು ದೋಣಿ ಹಿಡಿದು ಹೊರಟೆವು. ಸಮುದ್ರದ ಏರಿಳಿತ ವಿಪರೀತವಾಗಿತ್ತು. ಬರುಬರುತ್ತಾ ಸಮಾಧಾನ ವಾಗುತ್ತಾ ಬಂತು. ಮಧ್ಯರಾತ್ರಿಯವರೆಗೆ ಯಾನ ಸಾಗಿತು. ಆದರೆ ಇದ್ದಕ್ಕಿದ್ದಂತೆ ಸಮುದ್ರ ಬೆಟ್ಟದೆತ್ತರಕ್ಕೆ ಏರಿ ಇಳಿಯಲಾರಂಭಿಸಿತು. ದೋಣಿಯಲ್ಲಿ ಅರ್ಧದಷ್ಟು ನೀರು ತುಂಬಿತು. ನಾವಿಕರಲ್ಲಿ ಅರ್ಧ ಜನಕ್ಕೆ ನೀರು ಎತ್ತಿಹಾಕುವುದೇ ಕೆಲಸವಾಯಿತು. ಇನ್ನರ್ಧ ಜನಕ್ಕೆ ಹುಟ್ಟುಹಾಕುವ ಕೆಲಸ. ನನ್ನ ಧೈರ್ಯವನ್ನು ನಾವಿಕರು ತುಂಬಾ ಮೆಚ್ಚಿದರು. ಅವರ ಉತ್ಸಾಹವನ್ನು ಹೆಚ್ಚಿಸಲು ನಾನು ನನ್ನ ಬಳಿ ಇದ್ದ ಮದ್ಯವನ್ನು ಕುಡಿಯಲು ಕೊಟ್ಟೆ. ಮತ್ತಷ್ಟು ಉತ್ಸಾಹದಿಂದ ಅವರು ದೋಣಿ ನಡೆಸಿದರು. ಬೆಳಕು ಹರಿಯುವ ಮುನ್ನ ಮೊನಾಕೊ ತಲುಪಿದೆವು.

ನಾವು ಮೊನಾಕೊ ತಲುಪಿದಾಗ ನಮ್ಮ ಸ್ಥಿತಿ ಚಿಂತಾಜನಕವಾಗಿತ್ತು. ಕೆಟ್ಟ ಹವೆ ನಮ್ಮನ್ನು ಇಲ್ಲಿಗೆ ಕರೆತಂದಿತು ಎಂದು ತಿಳಿದ ಕೆಲವು ವರ್ತಕರು ದೋಣಿಯಿಂದ ಇಳಿಯಲು ನಮಗೆ ಸಹಾಯ ಮಾಡಿದರು. ದೋಣಿ ನಡೆಸಿದ ನಮ್ಮ ೨೫ ಜನರಂತೂ ಸುಸ್ತಾಗಿ ಮುಂದೆ ಹೆಜ್ಜೆ ಇಡಲಾರದಂತಾಗಿದ್ದರು. ನಮ್ಮ ಸಾಮಾನು ಸರಂಜಾಮು ಗಳನ್ನು ಅಲ್ಲಿದ್ದ ಪುಣ್ಯಾತ್ಮರು ಹತ್ತಿರದ ಒಂದು ಹೊಟೇಲಿಗೆ ಸಾಗಿಸಿಕೊಟ್ಟರು. ಅಲ್ಲಿಗೆ ಹೋಗಿ ಬೆಂಕಿ ಹೊತ್ತಿಸುವಂತೆ ಹೇಳಿ, ಬಟ್ಟೆಬರೆಗಳನ್ನೆಲ್ಲಾ ತೆಗೆದು ಬೆಂಕಿ ಕಾಯಿಸಿ ಕೊಂಡೆವು. ನಾವೆಲ್ಲಾ ಸಮುದ್ರದೊಳಗಿನಿಂದ ಈಚೆಗೆ ಎಳೆದುಹಾಕಿದವರಂತಿದ್ದೆವು. ಹೊರಗಡೆ ಶಾಖದಿಂದ ಮೈ ಬಿಸಿಮಾಡಿಕೊಂಡನಂತರ ಮದ್ಯ ಕುಡಿದು ಒಳಗಡೆಯೂ ಬಿಸಿಮಾಡಿಕೊಂಡೆವು. ನನ್ನ ಕಾಗದಪತ್ರ ಇತ್ಯಾದಿಗಳಿದ್ದ ಚೀಲ (Valise) ತೆಗೆದು ನೋಡಿದೆ. ದೇವರ ದಯೆ! ಯಾವುದೂ ನೀರಿನಲ್ಲಿ ನೆಂದಿರಲಿಲ್ಲ. ನನಗೆಷ್ಟು ಸಂತೋಷ ಆಗಿರಬೇಕು! ಮೊದಲೇ ನಾನು ಎಚ್ಚರಿಕೆ ವಹಿಸಿ ಅವನ್ನೆಲ್ಲ ಎರಡು ಮೇಣದ ಬಟ್ಟೆಗಳಲ್ಲಿ ಸುತ್ತಿದ್ದೆ. ಮೇಲೆ ಚರ್ಮದ ಚೀಲ ಹೊದೆಸಿದ್ದೆ. ಈ ಕಾರಣ ನೀರು ಕೆಂದಿರಲಿಲ್ಲ. ಕೊಂಚ ಊಟ ಮಾಡಿ ಮಲಗಿ ಮೂರು ಗಂಟೆ ನಿದ್ದೆ ಮಾಡಿದೆ. ನನ್ನ ನಾವಿಕರೂ ನಿದ್ದೆ ಮಾಡಿದರು.

ಬುಧವಾರ ೧೩—ಕೆಟ್ಟ ಹವೆ ಮುಂದುವರೆದಿತ್ತು. ನಾವಿಕರಿಗೆಲ್ಲ ಒಂದು ದಿನದ ವಿಶ್ರಾಂತಿ ಕೊಟ್ಟೆ. ನಾನು ಪಟ್ಟಣ ನೋಡಿಕೊಂಡು ಮೂರು ಗಂಟೆಗೆ ಹೊಟೇಲಿಗೆ ಹಿಂದಿರುಗಿದೆ. ನನ್ನ ಸಿಬ್ಬಂದಿಯುವರೆಲ್ಲ ವಿಶ್ರಾಂತಿ ಪಡೆದು ಆರಾಮವಾಗಿದ್ದರು. ಹಿಂದಿನ ರಾತ್ರಿ ಪಟ್ಟ ಕಷ್ಟ ಮರೆತಿದ್ದರು. ನಾನು ಅವರನ್ನು ನೋಡಿಕೊಂಡ ಬಗ್ಗೆ ನನ್ನನ್ನು ಬಾರಿಬಾರಿಗೆ ಹೊಗಳಿ ಮತ್ತೊಂದು ಸಾಹಸಕ್ಕೆ ಸಿದ್ಧರಾಗಿರುವುದಾಗಿ ತಿಳಿಸಿದರು. ಸಂಜೆ ಮುಂದಿನ ಸಮುದ್ರಯಾನ ಮಾಡುವುದಾಗಿ ಹೇಳಿದರು. ಈಗ ಸಮುದ್ರ ಕೊಂಚ ಶಾಂತವಾಗಿತ್ತು. ಸಂಜೆ ಆರು ಗಂಟೆಗೆ ಮತ್ತೆ ದೋಣಿ ಹತ್ತಿದೆವು.

ಆದರೆ ಸಮುದ್ರಯಾನದಷ್ಟು ಅನಿಶ್ಚಿತವಾದುದು ಯಾವುದೂ ಇಲ್ಲ. ಮತ್ತೆ ಬಿರುಗಾಳಿ ಎದ್ದಿತು. ಹಿಂದಿನ ರಾತ್ರಿಯ ಅಪಾಯಕ್ಕೆ ಮತ್ತೆ ಒಳಗಾಗಬಾರದೆಂದು ತೀರದಲ್ಲಿಯೇ ದೋಣಿ ನಡೆಸಿ ನಾಲ್ಕು ಗಂಟೆಗಳ ನಂತರ ಮೆಂಟನ್ (Menton = Mentone) ತಲುಪಿದೆವು. ಇದು ಕಲ್ಲುಗುಡ್ಡೆಗಳ ಬಳಿ ಕಟ್ಟಿರುವ ಊರು. ಎಲ್ಲೆಲ್ಲೂ ಕಿತ್ತಲೆ, ದಾಳಿಂಬೆ, ನಿಂಬೆ ಮುಂತಾದ ಹಣ್ಣುಗಳ ತೋಟಗಳು. ಹೂವಿನ ಪರಿಮಳ ಚೆಲ್ಲಾಡು ತ್ತಿತ್ತು. ಜನರೂ ಹೂವು ಹಣ್ಣುಗಳಷ್ಟೇ ಅಂದಚಂದವಾಗಿದ್ದರು. ಆ ರಾತ್ರಿ ಒಂದು ಹೊಟೇಲಿನಲ್ಲಿ ಇಳಿದುಕೊಂಡೆ.

ಮಂಗಳವಾರ ೪ನೆಯ ತಾರೀಖು ಮತ್ತೆ ಯಾನ ಆರಂಭಿಸಿದೆವು. ಆದರೆ ಸಮುದ್ರ ಹುಚ್ಚುಚ್ಚಾಗಿ ಏರಿಳಿಯುತ್ತಿತ್ತು. ನಾವಿಕರು ಮುಂದಿನ ಪ್ರಯಾಣ ಕಷ್ಟ ಎಂದರು. ಆದರೆ ನಾನು ಬಿಡಬೇಕಲ್ಲ! ಹೊರಟೆ. ದೇವರಿದ್ದಾನೆ ಎಂದು ಹೊರಡಿಸಿದೆ. ಆದರೆ ಏನೂ ಪ್ರಯೋಜನ ಆಗಲಿಲ್ಲ. ತೀರದಲ್ಲೇ ಯಾನ ಮಾಡಿ ಇಟಲಿಯ ಮೊದಲ ನೆಯ ಪಟ್ಟಣವಾದ ರೇಮೊ (Remo) ಮುಟ್ಟಿದೆವು.

ಮಾರನೆಯ ದಿನ ನನ್ನ ನಾವಿಕರಿಗೆ ಕುಡಿಯಲು ಮದ್ಯ, ತಿನ್ನಲು ಊಟ ಕೊಟ್ಟು, ಹುರಿದುಂಬಿಸಿದೆ. ಸಮುದ್ರವು ಕೊಂಚ ಶಾಂತವಾಗಿತ್ತು. ಆದರೂ ನಾವಿಕರು ಹಿಂದು ಮುಂದು ನೋಡಿದರು. ಹೇಗಾದರೂ ಮಾಡಿ ಜಿನೋವಾ ತಲುಪಲೇಬೇಕೆಂದು ಒತ್ತಾಯ ಮಾಡಿದೆ. ಉದ್ದಕ್ಕೂ ಬಹು ಸುಂದರವಾದ ತೀರ. ಎಲ್ಲೆಲ್ಲೂ ಹಳ್ಳಿಗಳು ಪಟ್ಟಣಗಳು. ಇನ್ನೂ ಹೆಚ್ಚು ಕೂಲಿಯ ಆಸೆ ಹುಟ್ಟಿಸಿದೆ. ಮಧ್ಯಾಹ್ನದ ವೇಳೆಗೆ ಅವರು ಜಿನೋವಾ ಮುಟ್ಟಿಸಿದರು. ಸಮುದ್ರದಿಂದ ನೋಡಲು ಜಿನೋವ ಪ್ರಪಂಚ ದಲ್ಲೇ ಅತ್ಯಂತ ಸುಂದರ ನಗರವಾಗಿ ಕಾಣುತ್ತದೆ. ನಗರದ ಪ್ರವೇಶಕ್ಕೆ ತಕರಾರು ಮಾಡಿದರು. ಮಾತಿಗೆ ಮಾತು ಬೆಳೆಯಿತು. ನಮ್ಮ ನಾವಿಕರು ತೀರಾ ರೊಚ್ಚಿಗೆದ್ದು ಬಿಟ್ಟರು. ಬೇರೆ ದಾರಿ ಕಾಣದೆ ಅಲ್ಲಿಯವನ ಕೈಗೆ ಒಂದು ಬೆಳ್ಳಿ ನಾಣ್ಯ ಇಟ್ಟು ನಗರ ಪ್ರವೇಶ ಮಾಡಿದೆವು. ಕೂಡಲೇ ನಾನು ಫ್ರೆಂಚ್ ಕಾನ್ಸಲ್ (French Consul) ನೋಡಲು ಹೋದೆ. ನಮ್ಮ ಪ್ರವೇಶಕ್ಕೆ ಆದ ತೊಂದರೆಯ ಬಗ್ಗೆ ದೂರು ಹೇಳಿದೆ. ಇಷ್ಟು ಮಾಡಿ, ಇಳಿದುಕೊಳ್ಳುವ ಜಾಗಕ್ಕೆ ತಡಕಾಡಿದೆ. ಒಂದು ಸಿಕ್ಕಿತು. ಅಲ್ಲಿ ನನ್ನ ಸಾಮಾನು ಹಾಕಿ ಲಿವ್ಯಾಂಟಿಗೆ ಹೋಗುವ ಹಡಗಿಗಾಗಿ ಹುಡುಕಾಡಿದೆ. ಎರಡು ಹಡಗುಗಳೇನೊ ಇದ್ದುವು. ಆದರೂ ಅವು ಹೊರಡುವುದು ಇನ್ನೂ ತಿಂಗಳು ತಿಂಗಳೂ ವರೆ ಎಂದರು. ಲೆಗ್‌ಹಾರ್ನ್‌ಗೆ ಹೋದರೆ ಈ ಕೂಡಲೆ ಖಂಡಿತ ಹಡಗುಗಳು ಸಿಕ್ಕುತ್ತವೆ ಎಂದರು. ನಮ್ಮ ಕಾನ್ಸಲ್ ಬಳಿಗೆ ಓಡಿದೆ. ಹೇಗಾದರೂ ಮಾಡಿ ಲೆಗ್‌ಹಾರ್ನ್‌ಗೆ ಹೋಗಲು ಸಹಾಯಮಾಡಿ ಎಂದೆ. ಅವರು ವಿಚಾರಿಸುವುದಾಗಿ ಹೇಳಿದರು. ಈ ಮಧ್ಯೆ ಕೆಲವು ಚರ್ಚ್‌ಗಳನ್ನು ನೋಡಿಕೊಂಡು ಬಂದೆ. ಬಂದಾಗ ಒಳ್ಳೆಯ ಸುದ್ದಿಗಾಗಿ ಕಾನ್ಸಲ್‌ರು ಕಾಯುತ್ತಿದ್ದರು. ರೋಮಿಗೆ ಹೋಗಲು ಲೈಯನ್ಸ್‌ನಿಂದ ಹರಿಕಾರರು ಬಂದಿರುವುದಾಗಿಯೂ, ಆತನು ಮಾತ್ರ ಶುಭ ಶುಕ್ರವಾರ ದಿನ ಲೆಗ್‌ಹಾರ್ನ್‌ಗೆ ದೋಣಿ

ಕಳುಹಿಸುವ ಅಧಿಕಾರ ಪಡೆದಿರುವನೆಂದೂ ತಿಳಿಯಿತು. ನಾನು ಕೂಡಲೆ ನನ್ನ ಸಾಮಾನು ಗಳನ್ನು ಬಂದರಿಗೆ ಸಾಗಿಸಿದೆ. ಅಲ್ಲಿ ಆ ಹರಿಕಾರ ಇದ್ದ. ಆತನಾಗಲೇ ತನ್ನ ಸಾಮಾನು ಗಳನ್ನೆಲ್ಲ ದೋಣಿಗೆ ಹಾಕಿಸುತ್ತಿದ್ದ. ನನ್ನನ್ನು ಕಂಡಾಗ ಆತ ನಾನಿದ್ದ ಸ್ಥಳಕ್ಕೆ ಮೂರು ಸಲ ಹೇಳಿಕಳುಹಿಸಿದ್ದುದಾಗಿ ತಿಳಿಸಿದ.

ಸಂಜೆ ಆರು ಗಂಟೆಗೆ ಜಿನೋವಾ ಬಿಟ್ಟೆವು. ಇಡೀ ರಾತ್ರಿ ಸಮುದ್ರ ಏರಿಳಿಯು ತ್ತಿತ್ತು. ಮಾರನೆಯ ದಿನ ಬೆಳಗ್ಗೆ ೯ ಘಂಟೆಗೆ ಪೋರ್ಟೊಫಿನೊ ಎಂಬ ಬಂದರನ್ನು ಬಹು ಪ್ರಯಾಸದಿಂದ ತಲುಪಿದೆವು. ಮುಂದೆ ಸಮುದ್ರದ ಮೇಲೆ ದೋಣಿಯಲ್ಲಿ ಯಾನ ಮಾಡುವದು ಅಸಾಧ್ಯವೆಂದು ನಮ್ಮ ಹರಿಕಾರ ಹೇಳಿ ದೋಣಿಯನ್ನು ಬಿಟ್ಟು ಭೂಮಾರ್ಗವಾಗಿ ಹೋಗೋಣವೆಂದು ಹೇಳಿದ. ಅವನಿಗೆ ಆ ಮಾರ್ಗ ಚೆನ್ನಾಗಿ ಗೊತ್ತಿತ್ತು. ಪ್ರಯಾಣಕ್ಕೆ ಬೇಕಾದ ಕುದುರೆ, ಕತ್ತೆಗಳನ್ನು ತರಿಸಿದ. ಕೂಡಲೆ ಸಾಮಾನು ಸರಂಜಾಮುಗಳನ್ನು ಹೇರಿ ಪ್ರಯಾಣ ಮುಂದುವರೆಸಿದೆವು. ವಿಯರೆಜ್ಜಿಯೋ ಎಂಬ ಊರಿನಲ್ಲಿ ರಾತ್ರಿ ಕಳೆದೆವು.

೧೭ನೆಯ ತಾರೀಖು ಭಾನುವಾರ ಸೂರ್ಯೋದಯಕ್ಕೆ ಎರಡು ಗಂಟೆ ಮುನ್ನವೆ ಪ್ರಯಾಣ ಮುಂದುವರೆಸಿ ಬೆಳಗ್ಗೆ ೮ ಘಂಟೆಗೆ ಪೀಸಾ ತಲುಪಿದೆವು. ಇದು ಸುಂದರ ವಾದ ಪುಟ್ಟ ಪಟ್ಟಣ ನನ್ನ ಲೈಯನ್ಸ್‌ನ ಹರಿಕಾರ ನನ್ನಿಂದ ಬೀಳ್ಕೊಂಡು ರೋಮಿಗೆ ಹೊರಟುಬಿಟ್ಟ. ನಾನು ಪೀಸಾದಲ್ಲಿದ್ದ ಅಪೂರ್ವವೂ ಸುಂದರವೂ ಆದ ಚರ್ಚುಗಳನ್ನೂ ಊರನ್ನೂ ನೋಡಿ ಸಂತಸಪಟ್ಟೆ.

ಮಧ್ಯಾಹ್ನ ಎರಡು ಘಂಟೆಗೆ ಒಂದು ಗಾಡಿ ಮಾಡಿಕೊಂಡು ಲೆಗ್‌ಹಾರ್ನ್‌ಗೆ ಹೊರಟೆ. ಮೂರು ಘಂಟೆ ಪ್ರಯಾಣದಲ್ಲಿ ಆ ಊರು ಸಿಕ್ಕಿತು. ಇಟಲಿಯಲ್ಲಿ ಯಾರೂ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಳ್ಳುವಂತಿಲ್ಲ. ನನ್ನಲ್ಲಿದ್ದ ಬಂದೂಕು ಮತ್ತು ಕುದುರೆ ಪಿಸ್ತೂಲನ್ನು ಟೌನ್‌ಹಾಲಿನಲ್ಲಿ ಡಿಪಾಜಿಟ್ ಮಾಡಿದೆ. ಇಟ್ಟಿದ್ದಕ್ಕೆ ರಸೀದಿ ಕೊಟ್ಟರು. ಬಿಡುವಾಗ ರಸೀದಿ ತೋರಿಸಿ ಹಿಂದಕ್ಕೆ ಪಡೆಯಬಹುದೆಂದರು. ಇಷ್ಟು ಮಾಡಿ ನಾನು ಚರ್ಚಿಗೆ ಹೋಗಿ ಪವಿತ್ರ ಮೇರಿಗೆ ನನ್ನ ಅನಂತಾನಂತ ಪ್ರಣಾಮಗಳನ್ನು ಸಲ್ಲಿಸಿದೆ.

ಆ ದಿನ ಒಂದು ಹೋಟೇಲಿನಲ್ಲಿ ಬಿಡಾರ ಮಾಡಿ, ಬೆಳಗ್ಗೆ ಫ್ರೆಂಚ್ ಕಾನ್ಸಲ್ ನೋಡಲು ಹೋದೆ. ಅವರು ತುಂಬಾ ಒಳ್ಳೆಯವರೆಂದು ಎಲ್ಲರ ಬಾಯಿಂದ ಕೇಳಿದ್ದೆ. ನನ್ನನ್ನು ಕಂಡಾಗ ಅವರು ಬಹು ವಿಶ್ವಾಸದಿಂದ ಕಂಡರು. ಅಷ್ಟೇ ಅಲ್ಲದೆ ಮುಂದಿನ ಪ್ರಯಾಣಕ್ಕೆ ತಕ್ಕ ವ್ಯವಸ್ಥೆ ಮಾಡುವುದಾಗಿಯೂ ತಿಳಿಸಿದರು. ರಾತ್ರಿ ಊಟೋಪ ಚಾರಗಳೂ ನಡೆದುವು.

ಏಪ್ರಿಲ್ ೧೯ರ ಬೆಳಿಗ್ಗೆ ನಮ್ಮ ಫ್ರೆಂಚ್ ಕಾನ್ಸಲ್‌ರು ನಾನಿದ್ದ ಬಿಡಾರಕ್ಕೆ ಬಂದರು. ಇಬ್ಬರೂ ಇಂಗ್ಲಿಷ್ ಕಾನ್ಸಲ್‌ರ ಬಳಿಗೆ ಹೋದೆವು. ಅವರು ಆದಷ್ಟು ಜಾಗ್ರತೆ ಒಂದು ಹಡಗಿನಲ್ಲಿ ನನ್ನ ಮುಂದಿನ ಪ್ರಯಾಣಕ್ಕೆ ವ್ಯವಸ್ಥೆ ಮಾಡುವುದಾಗಿ ತಿಳಿಸಿದರು.

ಎಲ್ಲವೂ ಸಾಂಗವಾಗಿ ನೆರವೇರಿದಂತಾಯಿತು. ಇಷ್ಟೆಲ್ಲಾ ಆದದ್ದು ಆ ದೇವರ ಕೃಪೆ; ಪವಿತ್ರ ಮೇರಿಯ ಆಶೀರ್ವಾದ.

ಇಂಗ್ಲಿಷ್ ಕಾನ್ಸಲ್ ಅವರು ಎಲ್ಲವೂ ಸಿದ್ಧವಾದಾಗ ಹೇಳಿಕಳಿಸುವುದಾಗಿ ತಿಳಿಸಿದ್ದರು. ಯಾವಾಗೆಂದರೆ ಆಗ ಹೊರಡಲು ನಾನು ಸಿದ್ಧತೆ ಮಾಡಿಕೊಂಡೆ. ಮುಂದಿನ ಎರಡು ದಿನಗಳನ್ನು ಚರ್ಚುಗಳು, ಟೌನ್‌ಹಾಲ್, ಕೋಟೆ ಕೊತ್ತಳ ಮುಂತಾದುವುಗಳನ್ನು ನೋಡುವುದರಲ್ಲಿ ಕಳೆದೆ. ಲೆಗ್‌ಹಾರ್ನ್‌ಗೆ ಬರುವ ಹಡಗುಗಳಿಗೆ ಲೆಕ್ಕವಿಲ್ಲ. ಇಡೀ ಇಟಲಿಯಲ್ಲೇ ಇಲ್ಲಿ ಭಾರಿ ವ್ಯಾಪಾರ. ವ್ಯಾಪಾರಿಗಳ ಬಿಡಾರಗಳಲ್ಲಿ ಅಡ್ಡಾಡುತ್ತಿರುವಾಗ ನನಗೆ ಪೂರ್ವ ದೇಶದ ಮೊದಲ ಪ್ರವಾಸದಲ್ಲಿ ಕಂಡಿದ್ದ ಆರ್ಮೇನಿಯನರು, ಪರ್ಷಿಯನರು ಮತ್ತು ಇಂಡಿಯನರ ಭೇಟಿ ಅಚ್ಚರಿಯನ್ನುಂಟುಮಾಡಿತು. ನನ್ನನ್ನು ತಮ್ಮ ಬಿಡಾರಗಳಿಗೆ ಕರೆದುಕೊಂಡುಹೋಗಿ ಬಗೆಬಗೆಯ ಆತಿಥ್ಯ ಮಾಡಿದರು.

ಏಪ್ರಿಲ್ ಭಾನುವಾರ ೨೪ನೆಯ ತಾರೀಖು ಇಂಗ್ಲಿಷ್ ಕಾನ್ಸಲ್‌ರವರಿಂದ ಸುದ್ದಿ ಬಂತು—ನಾನು ನನ್ನ ಸಾಮಾನುಗಳನ್ನು ಹಡಗಿಗೆ ಸಾಗಿಸಬೇಕೆಂದು. ಇಂಗ್ಲಿಷ್ ಹಡಗೊಂದರಲ್ಲಿ ಅವನ್ನು ಹಾಕಿದೆ.

ಮೇ ೯ನೆಯ ಸೋಮವಾರ ಮೇ ಫ್ಲವರ್ (May Flower) ಹಡಗಿನಲ್ಲಿ ಸಮುದ್ರಯಾನ ಆರಂಭವಾಯಿತು. ೪೦೦ ಟನ್ ತೂಕದ ಈ ಹಡಗಿನಲ್ಲಿ ೩೨ ಫರಂಗಿಗಳೂ, ೪೦ ಜನ ಸಿಬ್ಬಂದಿಯೂ ಇದ್ದರು. ಈ ಹಡಗಿನ ನಾಯಕ ೨೮–೩೦ ವರ್ಷದ ಯುವಕ. ಲಂಡನ್ ಪಾರ್ಲಿಮೆಂಟ್ ಮೆಂಬರೊಬ್ಬರ ಮಗ. ಪರಿಣತ ನಾವಿಕ ಸರಿ. ಆದರೆ ಅನಾವಶ್ಯಕ ಸಿಟ್ಟು, ಕೋಪ. ನನ್ನನ್ನು ಹಡಗಿಗೆ ವಿಶ್ವಾಸದಿಂದ ಬರಮಾಡಿಕೊಂಡು ಇರಲು ಒಂದು ಒಳ್ಳೆಯ ಕೋಣೆ ಕೊಟ್ಟ. ಮದ್ಯಾಹ್ನ ಹಡಗು ಲೆಗ್‌ಹಾರ್ನ್‌ನಿಂದ ನಿಧಾನವಾಗಿ ಸಾಗಿತು.

ಇಪ್ಪತ್ತು ದಿನಗಳ ಕಾಲ ಸಮುದ್ರಯಾನ ಮಾಡಿ ನಮ್ಮ ಹಡಗು ಮೇ ೨೯ ಭಾನುವಾರ ಅಲೆಕ್ಸಾಂಡ್ರೆಟಾ (Alexandretta) ತಲುಪಿತು. ಆ ದಿನ ಹಡಗಿನಲ್ಲಿ ಭಾರಿ ಸಂತೋಷಕೂಟ. ಊರಿನ ಇಂಗ್ಲಿಷರೂ ಫ್ರೆಂಚರೂ ಬಂದು ಭಾಗವಹಿಸಿದರು. ರಾತ್ರಿ ನಾನು ನನ್ನ ಸಾಮಾನು ಸಮೇತ ಊರಿಗೆ ಬಂದು ಬೆಳಿಗ್ಗೆ ಅಲೆಪ್ಪೋಗೆ ಹೊರಡುವ ಸಿದ್ಧತೆ ಮಾಡಿಕೊಂಡೆ.

ಮೇ ೩೦ ಸೋಮವಾರ. ಬೆಳಗ್ಗೆ ಇಂಗ್ಲಿಷ್ ಕಾನ್ಸಲ್ ಅವರನ್ನು ಕಂಡು ನಮ್ಮ ಮುಂದಿನ ಭೂಮಾರ್ಗದ ಪ್ರಯಾಣಕ್ಕೆ ಏರ್ಪಾಟು ಮಾಡಬೇಕೆಂದು ಕೇಳಿಕೊಂಡೆ. ಭೂಮಾರ್ಗದ ಪ್ರಯಾಣ ತುಂಬಾ ಅಪಾಯಕಾರಿಯಾದದ್ದು. ತಕ್ಕ ಬಂದೋಬಸ್ತ್ ಇಲ್ಲದೆ ಹೋಗುವಂತಿರಲಿಲ್ಲ. ಟರ್ಕಿಷ್ ಆಗಾ ಎಂಬುವನಿಗೆ ತಲಾ ೨೭ಕ್ರೌನ್ ಹಣ ಕೊಟ್ಟೆ. ಆತ ಪ್ರತಿ ಫರಂಗಿಗೆ (Frank) ಒಂದು ಕುದುರೆ ಮತ್ತು ಒಬ್ಬ ತುರ್ಕಿ ಸೈನಿಕ (Janissary) ಮತ್ತು ತಕ್ಕ ಸಿಬ್ಬಂದಿ ಒದಗಿಸುತ್ತಾನೆ. ಸರಿ. ಇಷ್ಟು ಮಾಡಿ ನಮ್ಮ ಸರಂಜಾಮುಗಳನ್ನು ಮುಂಚೆಯೇ ಹೇರಿಕಳಿಸಿ ನಾವು ಮಧ್ಯಾಹ್ನ ೨ ಘಂಟೆಗೆ

ಹೊರಟೆವು. ನನ್ನೊಡನೆ ಕೆಲವು ಇಂಗ್ಲಿಷ್ ಜನರೂ ಇದ್ದರು. ಅವರಿಗೆ ಭೂಮಿ ಮೇಲಿನ ಪ್ರಯಾಣ ಅಷ್ಟಾಗಿ ಹಿಡಿಸುತ್ತಿರಲಿಲ್ಲ. ಆಗಾಗ ನಿಂತು ಕುಡಿದು ತಿಂದು ವಿಶ್ರಾಂತಿ ಪಡೆಯುತ್ತಿದ್ದರು. ಇದು ನನಗೆ ಸರಿಕಾಣಲಿಲ್ಲ. ಅವರನ್ನು ಪದೇ ಪದೇ ಪ್ರಸಲಾಯಿಸಿ ಪ್ರಯಾಣ ಮುಂದುವರಿಸಿದೆ.

ಹಲವಾರು ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ ಅಬೆ ಕಾರ್ ಅಲಪ್ಪೋ ತಲುಪಿ ಅಲ್ಲಿ ಒಬ್ಬ ಮಾರ್ಗದರ್ಶಕನನ್ನು ನೇಮಿಸಿಕೊಂಡು, ಅರಬ್ಬರ ಗುಂಪಿನಲ್ಲಿ ಪ್ರಯಾಣ ಮುಂದುವರೆಸಿ ಕಳ್ಳರ ಕೈಗೆ ಸಿಕ್ಕಿ ಪಾರಾಗಿ ಬಾಗದಾದ್ ತಲುಪುತ್ತಾನೆ.

ಇಲ್ಲಿಂದ ಮತ್ತೆ ಪ್ರಯಾಣ ಮಾಡಿ ಕುಂಗ್ ಎಂಬಲ್ಲಿಗೆ ಬಂದು, ಅಲ್ಲಿ ಇಂಡಿಯಾಕ್ಕೆ ಹೊರಟಿದ್ದ ಪೋರ್ಚುಗೀಸ್ ಹಡಗಿನಲ್ಲಿ ಯಾನ ಮಾಡುತ್ತಾನೆ. ಹೀಗೆ ಯಾನ ಮಾಡಿದ್ದು ಆಗಸ್ಟ್ ತಿಂಗಳ ೮ನೆಯ ತಾರೀಖು ಸೋಮವಾರ.

ಹಡಗಿನಲ್ಲಿ ಹೊರಟ ಕಾರ್ ಅಕ್ಟೋಬರ್ ೧೫ರಂದು ಇಂಡಿಯಾದ ದಿಯು ದ್ವೀಪಕ್ಕೆ ಬರುತ್ತಾನೆ ಇಲ್ಲಿಂದ ಮುಂದೆ ಆತನ ಪ್ರವಾಸ ಕಥನವನ್ನು ಆತನ ಮಾತಿನಲ್ಲೇ ಮುಂದುವರೆಸುತ್ತೇವೆ.

ಅಕ್ಟೋಬರ್ ೧೫ನೆಯ ಶನಿವಾರ. ನಾವು ಬೆಳಕು ಹರಿಯುವ ಹೊತ್ತಿಗೆ ದಿಯು ಕಂಡೆವು. ರಾತ್ರಿ ದಿಯು ಪ್ರವೇಶಿಸಿದೆವು.' ಈ ದಿನ ಮದರ್ ಥೆರೇಸಾ ಹಬ್ಬ. ಎಲ್ಲೆಲ್ಲೂ ಬಾಣಬಿರುಸುಗಳ ಹಬ್ಬದ ಸಂಭ್ರಮ.

೧೬ನೆಯ ಭಾನುವಾರ:—ಬೆಳಕು ಹರಿದಾಗ ನಾವು ದಿಯು ಕೋಟೆಯ ಅಡಿ ಸಾಗಿದೆವು. ಬಂದಿರುವುದನ್ನು ಸೂಚಿಸಲು ಗುಂಡು ಹಾರಿಸಿದೆವು. ಹಡಗಿನಿಂದ ಇಳಿದ ಮೇಲೆ ನನ್ನನ್ನು ನಮ್ಮ ಕ್ಯಾಪ್ಟನ್ ಅವನ ಸೋದರನ ಮನೆಗೆ ಕರೆದುಕೊಂಡು ಹೋದ. ಆ ಸೋದರನೂ ಒಂದು ಹಡಗಿನ ಕ್ಯಾಪ್ಟನ್. ಆತನ ಹೆಸರು ಮಾನುಯಲ್ ಜಾರ್ಜ್ (Manual George). ಅವನ ಮನೆಯಲ್ಲಿ ಕೊಂಚ ವಿಶ್ರಾಂತಿ ಪಡೆದು ಹತ್ತು ಘಂಟೆಗೆ ಸಂತ ಡೊಮಿನಿಕ್ ಚರ್ಚಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿದೆವು. ಪ್ರತಿದಿನ ಈ ಚರ್ಚಿನಲ್ಲಿ ಸಂಗೀತ, ಬಾಣಬಿರುಸು, ಮುಖವಾಡದಾಟ ಮುಂತಾದ ಅದ್ದೂರಿಯ ಕಾರ್ಯಕ್ರಮ ಗಳು ನಡೆಯುತ್ತವೆ. ಪೋರ್ಚುಗೀಸರು ನಿಜವಾದ ಧಾರ್ಮಿಕ ಉದ್ದೇಶಗಳಿಗಿಂತ ಹೆಚ್ಚಾಗಿ ಇಂಥ ತೋರಿಕೆಯ ಪ್ರದರ್ಶನಗಳಿಗೇ ಹೆಚ್ಚು ಹಣ ಖರ್ಚು ಮಾಡುತ್ತಾರೆ.

ಸೋಮವಾರ ಇಡೀ ದಿನವನ್ನು ದಿಯುನಲ್ಲಿರುವ ಚರ್ಚುಗಳನ್ನು ನೋಡುತ್ತಾ ಕಳೆದೆ. ೧೬೭೭ರಲ್ಲಿ ಮಸ್ಕತ್ (Mascut) ಅರಬ್ಬರು ಮೂರು ದಿನಗಳ ಕಾಲ ನಡೆಸಿದ ಧಾಳಿಯನ್ನು ಎದುರಿಸಿ ಚರ್ಚುಗಳೆಲ್ಲ ಜಖಂ ಆಗಿವೆ. ಕಾರ್ಮೆಲೈಟ್ ಕಾನ್ವೆಂಟ್ ಬಹು ಭವ್ಯವಾಗಿದೆ. ಇಲ್ಲಿಯ ಫಾದರ್ ಸುಪೀರಿಯರ್ ನನ್ನನ್ನು ಕಂಡು ಈಗ ಈ ಚರ್ಚಿಗೆ ಒದಗಿರುವ ಹೀನಸ್ಥಿತಿಯನ್ನು ವಿವರಿಸಿದರು. ಪೋರ್ಚುಗೀಸರ ದರ್ಬಾರು ನಡೆಯುತ್ತಿದ್ದಾಗ ಇಲ್ಲಿ ೨೦ ಸನ್ಯಾಸಿಗಳಿದ್ದರಂತೆ. ಈಗ ಕೇವಲ ೩. ಜನ. ಇವರೂ ಬಡತನ ದಲ್ಲಿದ್ದಾರೆ. ಭಿಕ್ಷೆ ಬೇಡಿ ಜೀವನ ಸಾಗಿಸುತ್ತಿದ್ದಾರೆ. ಅದೇ ದಿನ ಸಂತ ದೊಮಿನಿಕ್ ಚರ್ಚಿಗೆ ಹೋದೆ. ಅಲ್ಲಿಯ ಸುಪೀರಿಯರ್ ಅವರು ತಮ್ಮ ಚರ್ಚನ್ನು ತೋರಿಸಿ,

ಈಗ ಏನೆಲ್ಲ ದುರಸ್ತು ಕೆಲಸ ಆಗುತ್ತಿದೆ ಎಂಬುದನ್ನು ವಿವರಿಸಿದರು. ಖಾಸಗಿಯಾಗಿ ಮಾತನಾಡಲಿಕ್ಕೆಂದು ತಮ್ಮ ಕೋಣೆಗೆ ಕರೆದುಕೊಂಡುಹೋದರು. ಹಿಂದೆ ಪೋರ್ಚು ಗೀಸರ ಆಡಳಿತದಲ್ಲಿ ಈ ಚರ್ಚಿಗೆ ಇದ್ದ ಆದಾಯ, ಆ ವೈಭವ ಇವನ್ನೆಲ್ಲಾ ವರ್ಣಿಸಿದರು. ಆಗ ಅವರಿಗಿದ್ದ ಅಧಿಕಾರ ಎಷ್ಟೆಂಬುದನ್ನು ಹೇಳುತ್ತ ಅನಾಥಮಕ್ಕಳನ್ನು ಅವರ ತಂದೆಯ ಮರಣಾನಂತರ ಬಲಾತ್ಕಾರವಾಗಿ ಅವರ ರಕ್ಷಕರಿಂದ ಕಿತ್ತುಕೊಂಡು ಸಾಕುತ್ತಿದ್ದುದನ್ನು ತಿಳಿಸಿದರು.[೧] ಹಿಂದುಗಳ ಮಕ್ಕಳನ್ನೂ ಹಾಗೆ ಮಾಡಿದ್ದುದುಂಟು. ಅವರಿಗೆ ದೀಕ್ಷೆಕೊಟ್ಟು ವಿದ್ಯಾಬುದ್ಧಿಗಳನ್ನು ಕಲಿಸುತ್ತಿದ್ದರು. ಮಕ್ಕಳಷ್ಟೇ ಅಲ್ಲದೆ ದಿಕ್ಕಿಲ್ಲದ ಹೆಣ್ಣುಮಕ್ಕಳನ್ನೂ, ಸ್ತ್ರೀಯರನ್ನೂ ಹೀಗೆ ನೋಡಿಕೊಳ್ಳುತ್ತಿದ್ದರಂತೆ. ಹಾಗೆ ನೋಡಿಕೊಂಡು ಅನಂತರ ಅವರನ್ನು ಶ್ರೀಮಂತ ಪೋರ್ಚುಗೀಸರ ವಶಕ್ಕೆ ಒಪ್ಪಿಸಿ ಅವರ ಮುಂದಿನ ಯೋಗಕ್ಷೇಮ ನೋಡಿಕೊಳ್ಳುವ ಏರ್ಪಾಡು ಮಾಡುತ್ತಿದ್ದರು. ಸುಪೀರಿಯರ್ ಅವರು ಈ ಕೊನೆಯ ಮಾತು ಹೇಳುತ್ತಿದ್ದಾಗ ಅವರನ್ನು ನೋಡಲು ಇಬ್ಬರು ಹೆಂಗಸರು ಬಂದಿದ್ದಾರೆಂದು ಒಬ್ಬ ಆಳು ಬಂದು ತಿಳಿಸಿದ. ಶ್ರೀಮಂತ ಪೋರ್ಚುಗೀಸನೊಬ್ಬನ ಮನೆಗೆ ಕಳುಹಿಸ ಲ್ಪಟ್ಟಿದ್ದ ಹೆಂಗಸರು ಇವರೆಂದು ಹೇಳಿದ. ಅವರು ಈಗ ಇವರನ್ನು ಸಾಕದೆ ಹೊರಗೆ ಅಟ್ಟಿಬಿಟ್ಟಿದ್ದಾನೆ. ಇನ್ನೊಂದು ಮನೆಗೆ ಕಳುಹಿಸಿಕೊಡಿ ಎಂದು ಕೇಳಲು ಬಂದಿದ್ದಾರೆ ಎಂದು ಹೇಳುತ್ತಾ ಅವರನ್ನು ಕಾಣಲು ಹೊರಗೆ ಹೋದರು. ನಾನೂ ಹೋದೆ. ಅಲ್ಲಿ ನೋಡಿದರೆ ಇಬ್ಬರು ಮುದ್ದಾದ ಯುವತಿಯರು, ಸೀರೆ ಉಟ್ಟಿದ್ದರು. ಹಿರಿಯವ ಳಿಗೆ ೧೮ ವರ್ಷ ವಯಸ್ಸಿರಬಹುದು. ಕಂಕುಳಲ್ಲಿ ಒಂದು ಮಗು ಎತ್ತಿಕೊಂಡಿದ್ದಳು. 'ನೋಡಿ, ಈ ಮಗು ಹುಟ್ಟಿಸಿ ಆ ಫಿದಾಲ್ಗೊ ಇರುಳಿನಲ್ಲಿ ಮನೆ ಬಿಟ್ಟು ಓಡಿಸಿದ್ದಾನೆ. ನಮ್ಮ ಪೋರ್ಚುಗೀಸರು ಎಂಥ ಕೆಟ್ಟ ಜನ ನೋಡಿ' ಎಂದು ಹೇಳುತ್ತಾ ಪಶ್ಚಾತ್ತಾಪ ಪಟ್ಟರು, ನಮ್ಮ ಸುಪೀರಿಯರ್.

ದಿಯುನಲ್ಲಿದ್ದ ಒಂದು ವಾರ ಇಲ್ಲಿಯ ಕೋಟೆ ಕೊತ್ತಳ, ಚರ್ಚುಗಳು, ಬಂದರು ಅಲ್ಲೆಲ್ಲಾ ಅಡ್ಡಾಡುತ್ತ ಕಾಲ ಕಳೆದೆ. ಇಲ್ಲಿರುವ ಜನಸಂಖ್ಯೆ ಮತ್ತು ನಗರಕ್ಕೆ ಮಾಡಿ ಕೊಂಡಿರುವ ರಕ್ಷಣಾ ವ್ಯವಸ್ಥೆ ನೋಡಿದರೆ ಪೋರ್ಚುಗೀಸರು ಮಸ್ಕತ್ ಅರಬ್ಬರನ್ನು ಏಕೆ ಎದುರಿಸುವ ಧೈರ್ಯ ಮಾಡಲಿಲ್ಲವೋ ಕಾಣೆ. ಅರಬ್ಬರು ಈ ನಗರದ ಮೇಲೆ ಧಾಳಿ ಮಾಡಿ ಎಲ್ಲಾ ಐಶ್ವರ್ಯವನ್ನೂ ದೋಚಿಕೊಂಡು ಹೋದರಲ್ಲದೆ ೬,೦೦೦ ಕ್ರೈಸ್ತ ಹೆಂಗಸರನ್ನು ಗುಲಾಮರನ್ನಾಗಿ ಮಾಡಿಕೊಂಡರು. ಊರಿನ ಹಾದಿಬೀದಿಗಳನ್ನು ಕಡಿದು ಹಾಳುಮಾಡಿದರು. ಮನೆಗಳನ್ನು ಕೆಡವಿದರು. ಅವರು ಮಾಡಿರುವ ಅನಾಹುತ ನೋಡಿದರೆ ಹೊಟ್ಟೆ ಉರಿಯುತ್ತದೆ.

---

೧. ೧೬೭೦ರಲ್ಲಿ ಬೊಂಬಾಯಿ ಕ್ರೈಸ್ತರು, ಹಿಂದುಗಳು ಮತ್ತು ಮಹಮ್ಮದೀಯರು ಮಾಡಿ ಕೊಂಡ ಮನವಿ ಹೀಗಿದೆ—"ರೋಮನ್ ಕ್ಯಾಥೊಲಿಕ್ ಕ್ರೈಸ್ತರು ಯಾವ ಅನಾಥಮಕ್ಕಳಾದರೂ ಸರಿಯೆ ತೆಗೆದುಕೊಂಡು ಕ್ರೈಸ್ತಮತಕ್ಕೆ ಸೇರಿಸಿಕೊಳ್ಳುತ್ತಿದ್ದಾರೆ. ಮಕ್ಕಳ ಅಥವಾ ಹತ್ತಿರದ ಬಂಧುಗಳ ಗೋಳನ್ನು ಕೇಳುವುದೇ ಇಲ್ಲ."

ಭಾನುವಾರ ೨೩ನೆಯ ತಾರೀಖು ರೋಸರಿ (Rosary) ಹಬ್ಬದ ಒಂಬತ್ತನೆಯ ದಿವಸ. ಅದ್ದೂರಿಯಾಗಿ ಹಬ್ಬ ಆಚರಿಸಿದರು. ಊರಲ್ಲಿ ನಡೆದ ಉತ್ಸವದಲ್ಲಿ ಮುಂದೆ ನರ್ತಕಿಯರೂ ಮುಖವಾಡದವರೂ ಭಾಗವಹಿಸಿದ್ದರು. ಈ ನರ್ತಕಿಯರು ನಾಚಿಕೆಯಿಲ್ಲದೆ ತಮ್ಮ ಹಾವಭಾವವಿಲಾಸಗಳನ್ನು ತೋರಿದ್ದು ಸರಿಕಾಣಲಿಲ್ಲ. ಇಂಥ ಸಂದರ್ಭಗಳಲ್ಲಿ ಅಂತಹ ಅಸಹ್ಯ ನೃತ್ಯಗಳನ್ನು ಮಾಡಲು ಅವಕಾಶಕೊಡಬಾರದಾಗಿತ್ತು.

ಈ ದಿನ ಸಂಜೆ ನಾನು ಕ್ಯಾಂಬೆಗೆ ಹೊರಟೆ. ನನ್ನನ್ನು ಕರೆತಂದ ಹಡಗಿನ ಕ್ಯಾಪ್ಟನ್‌ನ ಸಹೋದರ ಅಲ್ಲಿಗೆ ಹೊರಟಿದ್ದ. ಖಾಸಗಿ ಹಡಗಿನಲ್ಲಿ ಹೋಗಿ ಕಡಲ್ಗಳ್ಳರ ಕೈಗೆ ಸಿಕ್ಕಿ ಬೀಳುವ ಬದಲು, ಸುಖವಾಗಿ ಈ ಹಡಗಿನಲ್ಲಿ ಹೋಗುವುದು ಒಳ್ಳೆಯದೆಂದು ಅವನೊಡನೆ ಹೊರಟೆ.

ಮಾರನೆಯ ದಿವಸ 'ಸತ್ತವರ ದೀಪ' (Island of the Dead) ದ ಬಳಿ ಲಂಗರು ಹಾಕಿದೆವು. ಮೂರು ದ್ವೀಪಗಳನ್ನೊಳಗೊಂಡ ಆ ದ್ವೀಪಕ್ಕೆ ಈ ಹೆಸರು ಬರಲು ಕಾರಣ ಹೀಗಿದೆ. ಹಿಂದೆ ಪೋರ್ಚುಗೀಸರು ಇಲ್ಲಿ ತಮ್ಮ ದರ್ಬಾರು ನಡೆಸುತ್ತಿದ್ದಾಗ ಈ ದ್ವೀಪಗಳನ್ನು ತಮ್ಮ ವಶಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ದ್ವೀಪದ ಜನ ತಾವು ಪೋರ್ಚುಗೀಸರಿಗಾಗಲೀ ಇನ್ನಾವ ದೇಶಕ್ಕೇ ಆಗಲಿ ತಲೆಬಾಗುವುದಿಲ್ಲವೆಂದು ಹಟ ತೊಟ್ಟರು. ಗೋವೆಯ ಪೋರ್ಚುಗೀಸರ ವೈಸರಾಯ್ ದೊಡ್ಡ ಸೈನ್ಯವನ್ನೇ ಕಳುಹಿಸಿದ. ಆದರೂ ಅವರು ಜಗ್ಗಲಿಲ್ಲ. ಅವನ ಇಬ್ಬರು ಮಕ್ಕಳೂ ಈ ಧಾಳಿಯಲ್ಲಿ ಸತ್ತು ಹೋದರು. ಮಕ್ಕಳನ್ನು ಕಳೆದುಕೊಂಡ ದುಃಖದಲ್ಲಿ ವೈಸರಾಯ್ ತಾನೆ ಮತ್ತಷ್ಟು ಸೈನ್ಯ ಸಮೇತ ಆ ದ್ವೀಪದ ಮೇಲೆ ಧಾಳಿಮಾಡಿದ. ಧಾಳಿಯನ್ನು ಎದುರಿಸಲಾರದ ದ್ವೀಪವಾಸಿಗಳು ಒಂದು ಪಿಳ್ಳೆಯೂ ಶತ್ರುಗಳ ಕೈಗೆ ಸಿಕ್ಕಬಾರದೆಂದು ಪಣತೊಟ್ಟರು. ತಮ್ಮ ಹೆಂಡತಿ ಮಕ್ಕಳನ್ನೂ ಒಡವೆ ವಸ್ತುಗಳನ್ನೂ ಒಂದೆಡೆ ಕೂಡಿಹಾಕಿ ಸುತ್ತ ಸೌದೆ ಒಟ್ಟಿ ಬೆಂಕಿ ಹಚ್ಚಿಬಿಟ್ಟರು. ಹೀಗೆ ಮಾಡಿ ಗಂಡಸರೆಲ್ಲಾ ರೋಷಾವೇಷದಿಂದ ಪೋರ್ಚುಗೀಸರ ಮೇಲೆ ಬಿದ್ದರು. ಆದರೆ ಆ ಭಾರಿ ಸೈನ್ಯವನ್ನು ಎದುರಿಸಲಾರದೆ ಎಲ್ಲರೂ ಹತರಾದರು. ಆದರೂ ಪೋರ್ಚುಗೀಸರ ಕಡೆಯ ೨,೦೦೦ ಸೈನಿಕರನ್ನು ಬಲಿತೆಗೆದುಕೊಳ್ಳದೆ ಬಿಡಲಿಲ್ಲ. ಅಂದಿನಿಂದ ಈ ದ್ವೀಪಕ್ಕೆ 'ಸತ್ತವರ ದ್ವೀಪ' ಎಂದು ಹೆಸರು ಬಂದಿದೆ.

ಈ ಜಯದ ನಂತರ ವೈಸ್‌ರಾಯ್ ಮುಂದೆ ಸಾಗಿ ಗೋಘಾ (Gogha), ಬ್ರೋಚ್ ಮುಂತಾದ ನಗರಗಳನ್ನು ವಶಪಡಿಸಿಕೊಂಡ.

೨೮ನೆಯ ಶುಕ್ರವಾರ ಬೆಳಗ್ಗೆ ಹಡಗು ಗೋಘಾ ತಲುಪಿತು. ಇಲ್ಲಿ ಇಳಿದು ಬ್ರೋಚ್‌ಗೆ ಹೋಗುವ ಹಡಗು ಇದೆಯೇ ಎಂದು ವಿಚಾರಿಸಿದೆ. ಒಬ್ಬ ಹಿಂದೂ ಸಿಕ್ಕಿದ. ಆತನ ಹೆಸರು ಭನೋಬ (Bhanoba) ಎಂದು. ತಾನು ಪೋರ್ಚುಗೀಸರ ಪರ ದಳ್ಳಾಳಿಯಾಗಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿ, ಬ್ರೋಚ್‌ಗೆ ಹೋಗುವ ಹಡಗೊಂದನ್ನು ಪತ್ತೆ ಹಚ್ಚಿದ. ಆ ಸಂಜೆ ನನ್ನ ಪ್ರಯಾಣಕ್ಕೆ ಏರ್ಪಾಡು ಮಾಡಿದ.

ಇಷ್ಟು ಮಾಡಿ ಊರು ತೋರಿಸಲು ಕರೆದುಕೊಂಡು ಹೊರಟ. ಇದು ದೊಡ್ಡ ಊರು, ಹಾಗೂ ಪುರಾತನವಾದದ್ದು. ವ್ಯಾಪಾರ ಸಾಪಾರ್ಕ ಹೇರಳವಾಗಿ ನಡೆಯುತ್ತದೆ. ಇಲ್ಲಿರುವ ಜನರಲ್ಲಿ ಅರ್ಧ ಮೂರರು[೧] (ಮಹಮ್ಮದೀಯರು). ಇನ್ನರ್ಧ ಹಿಂದೂಗಳು. ಮೂರರು ಹೇಗೆಂದರೆ ಹಾಗೆ ಜೀವನ ನಡೆಸುತ್ತಾರೆ. ಯುದ್ಧದಲ್ಲಿ, ಕಳ್ಳತನ ದರೋಡೆ ಗಳಲ್ಲಿ ಮತ್ತು ಕೆಲವು ಜನ ನಾವಿಕರಾಗಿ ಕಾಲಹಾಕುತ್ತಾರೆ. ಇವರಿಗೆ ಯಾವ ನಿಯಮವೂ ಇದ್ದಂತೆ ಕಾಣಲಿಲ್ಲ. ಮನಸ್ಸಿಗೆ ಬಂದಂತೆ ಇದ್ದಾರೆ. ನಾನು ಇಲ್ಲಿಗೆ ಬಂದಾಗ ಶಿವಾಜಿಯ ಮೇಲಿನ ಯುದ್ಧಕ್ಕಾಗಿ ಮೊಗಲ್ ಚಕ್ರವರ್ತಿಯು ಸಿದ್ಧಪಡಿಸುತ್ತಿದ್ದ ನೌಕಾಪಡೆಯಲ್ಲಿ ಸೇರಿಕೊಳ್ಳುವ ಗಡಿಬಿಡಿಯಲ್ಲಿದ್ದರು. ಶಿವಾಜಿಯ ಹೆಸರೆಂದರೆ ಎಲ್ಲರೂ ಗಡಗಡ ನಡುಗುತ್ತಾರೆ. ಇಷ್ಟೆಲ್ಲಾ ಆ ಬಡಪಾಯಿ ಹಿಂದುಗಳ ಖರ್ಚುವೆಚ್ಚದಲ್ಲಿ. ವ್ಯಾಪಾರ ಮಾಡುವುದೊಂದನ್ನು ಬಿಟ್ಟರೆ ಯುದ್ಧಮಾಡಲು ಹಿಂಜರಿಯುವ ಈ ಜನ ತಾವು ಸಂಪಾದಿಸಿದ್ದನ್ನು ಈ ಯುದ್ಧಗಳ ಖರ್ಚಿಗೆ ಕೊಡಬೇಕು.

ಶನಿವಾರ ೨೯ನೆಯ ತಾರೀಖು ಬೆಳಿಗ್ಗೆ ಸೂರ್ಯೋದಯಕ್ಕೆ ಮುನ್ನವೇ ನಾನು ಬಾಡಿಗೆ ಪಡೆದ ಹಡಗು ಹೊರಟಿತು. ಆರು ಗಂಟೆಯ ಯಾನದಲ್ಲಿ ಬ್ರೋಚ್ ತಲುಪಿತು. ಹಡಗು ಇಳಿದು ದೋಣಿಯ ಮೇಲೆ ಊರನ್ನು ಪ್ರವೇಶಿಸಲು ಎರಡು ದಿನ ಬೇಕಾಯಿತು.

ಇಡೀ ಊರಿನಲ್ಲಿ ಹಿಂದೂಗಳೇ ಇರುವುದು. ಇವರಲ್ಲಿ ಬಹು ಜನ ಮೂಢನಂಬಿಕೆ ಯುಳ್ಳವರು. ನಾವು ನದಿಯ ಮೇಲೆ ಹೋಗುತ್ತಿರುವಾಗ ಅಲ್ಲಲ್ಲಿ ಹಿಂದೂಗಳು ಹೆಣ ಸುಡುತ್ತಿರುವುದನ್ನು ಕಂಡೆವು. ಆ ವೇಳೆ ಅವರು ಏನೇನೋ ಆಚರಣೆಗಳನ್ನು ನಡೆಸುತ್ತಿದ್ದರು.

ಈ ವರ್ಷ ಹಿಂದೂಗಳು ಮೊಗಲನಿಂದ ಭಾರಿ ತೊಂದರೆಗೊಳಗಾದರು. ಅವರ ದೇವಸ್ಥಾನಗಳ ಮೇಲೆ ಮೊಗಲನ ಕಣ್ಣುಬಿದ್ದು ಅವನ್ನು ಹಾಳುಮಾಡಿದ. ಹಿಂದೂಗಳು ಹಣ ಕೊಟ್ಟು ದಮ್ಮಯ್ಯಗುಡ್ಡೆ ಹಾಕಿದರು. ಅವರನ್ನು ಹಿಂಸಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳುವುದೆಂದರೆ ಮುಸಲ್ಮಾನರಿಗೆ ಖುಷಿಯೋ ಖುಷಿ.

ಅಕ್ಟೋಬರ್ ಕೊನೆಯ ದಿನ ಸೋಮವಾರ. ಮಧ್ಯಾಹ್ನ ಮೂರು ಘಂಟೆಗೆ ಸುಂಕದ ಮನೆಗೆ ಹೋದೆ. ಅಲ್ಲಿದ್ದ ಷಾ ಬಂದರ್–ಹೆಸರು ಆಘಾಜಾಪರ್ ಎಂದು. ನನ್ನನ್ನು ವಿಶ್ವಾಸದಿಂದ ಕಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ವಿಶ್ರಾಂತಿ ತೆಗೆದುಕೊಳ್ಳುವಂತೆ ತಿಳಿಸಿದ. ತಾನು ತನ್ನ ಅಧಿಕಾರ ಉಪಯೋಗಿಸಿ ಡಚ್ ಕಂಪೆನಿಯು ತನ್ನ ಶಾಖೆಯೊಂದನ್ನು ಇಲ್ಲಿ ತೆರೆಯುವುದಕ್ಕೆ ಸಹಾಯ ಮಾಡುವುದಾಗಿ ಹೇಳಿದ. ಆದರೆ

---

೧. ಮೂರರು (Moors)—ಸ್ಪೈಯ್ನ್ ಮತ್ತು ಪೋರ್ಚುಗೀಸ್ ದೇಶಗಳಲ್ಲಿ ಇಸ್ಲಾಂ ಧರ್ಮದ ಅನುಯಾಯಿಗಳನ್ನು ಮೊರಾಕ್ಕೊ (Moracco) ದಿಂದ ಬಂದ ಧಾಳಿಕಾರರೆಂದು ಕರೆಯಲಾಗುತ್ತಿತ್ತು. ಹೀಗಾಗಿ ಇಂಡಿಯಾಕ್ಕೆ ಸಮುದ್ರಯಾನ ಮಾಡುವ ವೇಳೆ ಕಂಡ ಮಹಮ್ಮದೀಯರನ್ನು ಮೌರೋ (Mouro) ಗಳೆಂದು ಕರೆದರು. ಇದನ್ನೇ ಹಾಲೆಂಡ್, ಫ್ರಾನ್ಸ್ ಮತ್ತು ಇಂಗ್ಲೆಂಡ್ ದೇಶಗಳೂ ಅನುಸರಿಸಿದವು. ಮೌರೋ ಎಂಬುದು ಬರುಬರುತ್ತಾ ಮೂರ್ ಆಯಿತಂತೆ.

ಆತನಿಗೆ ಗೊತ್ತಿಲ್ಲ, ಡಚ್ಚರು ಇದ್ದ ಶಾಖೆಗಳನ್ನೇ ಮುಚ್ಚುತ್ತಿದ್ದಾರೆ ಎಂಬುದು. ಈ ಗುಟ್ಟು ತಿಳಿಸದೆ ನಾನು ಸುಮ್ಮನೆ ಆಗಲಿ ಎಂದೆ.

ನವೆಂಬರ್ ೧ನೆಯ ತಾರೀಖು ಮಂಗಳವಾರ ನಾನು ಬ್ರೋಚ್‌ನಿಂದ ಹೊರಡುವ ಏರ್ಪಾಡು ಮಾಡಿಕೊಂಡೆ. ನದಿ ದಾಟಲು ಷಾ ಬಂದರ್ ಸಹಾಯಮಾಡಿದ. ನದಿ ದಾಟಿಸಿಬರಲು ಆರು ಆಳುಗಳನ್ನು ಕಳುಹಿಸಿದ. ಆ ಕಡೆ ಒಂದು ಗಾಡಿಗೆ ಏರ್ಪಾಡು ಮಾಡಿದ್ದ. ನದಿ ದಾಟಿ ಗಾಡಿ ಹತ್ತಿ ಸೂರತ್ತಿಗೆ ಹೊರಟೆ. ಆ ಸಂಜೆಯನ್ನು ಮಾಮೂಲ್‌ಪಟಂ ಎಂಬ ಊರಿನಲ್ಲಿ ಕಳೆದೆ. ಊರಿನ ಹಾದಿ ಬೀದಿಗಳಲ್ಲಿ ಹಿಂದುಗಳು ತಮ್ಮ ಹೆಂಡತಿ ಮಕ್ಕಳೊಡನೆ ತಂಗಿದ್ದುದನ್ನು ಕಂಡೆ. ಅವರೆಲ್ಲಾ ಸೂರತ್‌ನಿಂದ ಬಂದವರಾಗಿದ್ದರು. ಕಾರಣ, ಶಿವಾಜಿಯ ಧಾಳಿಗೆ ಹೆದರಿ ಊರು ಬಿಟ್ಟು ಒಳನಾಡಿಗೆ ಓಡಿ ಬಂದಿದ್ದರು.

೨ನೆಯ ತಾರೀಖು ಬುಧವಾರ ಪ್ರಯಾಣ ಮುಂದುವರಿಸಿದೆ. ನಿನ್ನೆಯಂತೆಯೇ ಈ ದಿನವೂ ಪ್ರಯಾಣ ತುಂಬಾ ಆಹ್ಲಾದಕರವಾಗಿತ್ತು. ಅಲ್ಲಲ್ಲಿ ಕೆರೆಕುಂಟೆ, ಮರಗಿಡಗಳ ತೋಪುಗಳು. ಸಂಜೆಯ ಹೊತ್ತಿಗೆ ತಪತಿನದಿಯನ್ನು ದೋಣಿಯಲ್ಲಿ ದಾಟಿ ಸೂರತ್ ನಗರ ಪ್ರವೇಶಿಸಿದೆ. ನಮ್ಮ ಕಂಪನಿಯ ಕೇಂದ್ರದಲ್ಲಿ ಬಿಡಾರ ಮಾಡಿದೆ. ಇಲ್ಲಿ ಎಂಎಂ ಗೆಸ್ಟೋನ್ (Gueston) ಮತ್ತು ಬೆರೋನ್ (Baron) ಅವರುಗಳನ್ನು ಕಂಡೆ. ಅವರುಗಳು ಕಂಪನಿಯ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದರು. ಹೊಲಸೆದ್ದಿದ್ದ ಕಂಪನಿಯ ಸ್ಥಿತಿಗತಿಗಳನ್ನು ಸರಿಪಡಿಸಲು ಇಬ್ಬರೂ ತುಂಬಾ ಶ್ರದ್ಧೆಯಿಂದ ದುಡಿಯುತ್ತಿದ್ದರು.

ನಮ್ಮ ಕಂಪೆನಿಯ ಅವ್ಯವಸ್ಥೆಯನ್ನು ಸರಿಪಡಿಸಲು ಫ್ರಾನ್ಸ್‌ನಿಂದ ಕಳಿಸಲ್ಪಟ್ಟವರು ಇನ್ನಷ್ಟು ಅವ್ಯವಸ್ಥೆಗೆ ಕಾರಣರಾಗಿರುವುದನ್ನು ನೋಡಿ ನನಗೆ ಅಚ್ಚರಿಯಾಗುತ್ತದೆ. ಮಾ. ಬ್ಲಾಟ್ (Blot) ಎಂಬುವರು. (೧೬೭೦ರಲ್ಲಿ) ಇಲ್ಲಿಗೆ ಕಳುಹಿಸಲ್ಪಟ್ಟರು. ಇವರು ತುಂಬಾ ಶಕ್ತಿವಂತರು ಹಾಗೂ ವ್ಯಾಪಾರದಲ್ಲಿ ನಿಪುಣರು. ಆದರೆ ನಮ್ಮ ಫ್ರಾನ್ಸಿನ ದುರದೃಷ್ಟಕ್ಕೆ ನಾನೇನು ಹೇಳಲಿ! ಬ್ಲಾಟ್ ಇಲ್ಲಿಗೆ ಬಂದಾಗ ಮಾ. ಕಾರೋನ್ (M. Caron) ಎಂಬುವರು ಅಲ್ಲಿ ಆಗಲೇ ಇದ್ದರು. ಇವರು ಎಲ್ಲರಿಗಿಂತ ಹಿರಿಯರು ಮತ್ತು ವ್ಯಾಪಾರದಲ್ಲಿ ಅನುಭವಸ್ಥರು. ಆದರೆ ತಮ್ಮ ಸ್ಥಾನಮಾನ ಬಹು ದೊಡ್ಡದೆಂದು ಬಿಂಕದಿಂದ ಬೀಗಿದರು. ಹೊಸದಾಗಿ ಬಂದ ಬ್ಲಾಟ್ ಅವರು ತಮ್ಮ ಅಧೀನರಾಗಿ ಕೆಲಸ ಮಾಡಬೇಕೆಂದು ಬಯಸಿದರು. ಆದರೆ ಬ್ಲಾಟ್‌ಗೆ ಇದು ಆಗಲಿಲ್ಲ. ಸರಿ ಇಬ್ಬರಲ್ಲೂ ಲಟಾಪಟಿ ಶುರುವಾಯಿತು. ಅವರಿಬ್ಬರ ವರ್ತನೆ ನಮ್ಮ ರಾಷ್ಟ್ರಕ್ಕೆ ನಾಚಿಕೆಯುಂಟುಮಾಡುವಷ್ಟು ಹೇಯವಾಗಿತ್ತು. ಕಾರೋನ್ ತಾನು ಕಂಪೆನಿಯ ಸೇವೆಯನ್ನೇ ಬಿಟ್ಟುಬಿಡುವುದಾಗಿ ಹೆದರಿಸಿ, ಎರಡು ಕಂಪೆನಿ ಹಡಗುಗಳ ತುಂಬಾ ಬೆಲೆಯಾದ ಸರಕುಗಳನ್ನು ಹೇರಿಕೊಂಡು ಫ್ರಾನ್ಸ್ ದೇಶದಿಂದ ಬಂದ ದೊರೆಯ ನೌಕಾಪಡೆಯೊಡನೆ ಹೊರಟುಬಿಟ್ಟ. ಈ ನೌಕಾಪಡೆಯ ದಂಡನಾಯಕನಾಗಿ ಎಂ.ದೆ.ಲ. ಹೇ (M. de. la. Haye) ಅವರು ಬಂದಿದ್ದರು.

ಕಾರೋನ್ ಹೋದಮೇಲೆ ಮಾ. ಬೆರೋನ್ ಅವರು ಬಂದರು. ಬ್ಲಾಟ್ ಮತ್ತು ಬೆರೋನ್ ಇಬ್ಬರೂ ಅನ್ಯೋನ್ಯವಾಗಿ ನಡೆದುಕೊಳ್ಳುತ್ತಾ ಇದ್ದರು. ಹೀಗಿರು ವಲ್ಲಿ ಫ್ರಾನ್ಸ್‌ನಿಂದ ಎಂ. ಗೆಸ್ರೋನ್ ಎಂಬುವರನ್ನು ಮೂರನೆಯ ಡೈರೆಕ್ಟರರಾಗಿ ಸೂರತ್ತಿಗೆ ಕಳುಹಿಸಿದರು. ಇವರು ಹಡಗು ಇಳಿದ ಕೂಡಲೆ ಮಾ. ಬ್ಲಾಟ್ ಅವರ ಮೇಲೆ ತಿರುಗಿಬಿದ್ದರು. ತಮ್ಮ ದೊಡ್ಡಸ್ಥಿಕೆಯನ್ನು ತೋರಿಸಲು ಯತ್ನಿಸಿದರು. ಇವರ ಜಗಳದಲ್ಲಿ ಕಂಪೆನಿಯ ಬೇರೆ ನೌಕರರು ಇಕ್ಕಟ್ಟಿಗೆ ಸಿಕ್ಕಿದರು. ಅವರಿಗೆ ಯಾರ ಅಪ್ಪಣೆ ಯಂತೆ ನಡೆಯಬೇಕೋ ತಿಳಿಯಲಿಲ್ಲ. ಇದನ್ನು ನೋಡಿ ಡಚ್ಚರಿಗೂ ಇಂಗ್ಲಿಷರಿಗೂ ಭಾರಿ ಖುಷಿಯಾಯಿತು.

ಸ್ಯಾಂಸನ್ (Samson)[೧] ನಮ್ಮ ಕಂಪೆನಿಯ ದಳ್ಳಾಳಿ (Broker). ಬಹು ಚಾಣಾಕ್ಷ ಬುದ್ಧಿಯ ಹಿಂದೂ ಈತ. ಈತನಿಗೆ ಮಾ. ಕಾರೋನ್ ಅವರ ಬೆಂಬಲವಿತ್ತು. ಅವರು ಹೋದಮೇಲೆ ಉಳಿದಿಬ್ಬರು ಜಗಳಾಡಲಾರಂಭಿಸಿದರು. ಇಬ್ಬರ ಜಗಳ ಮೂರನೆಯವನಿಗೆ ಲಾಭ ಎನ್ನುವಂತೆ, ಸ್ಯಾಂಸನ್ ಇಬ್ಬರ ಮುಖಸ್ತುತಿ ಮಾಡುತ್ತಾ ಹೇರಳವಾಗಿ ಹಣ ಮಾಡಿಕೊಂಡ. ಫ್ರೆಂಚರು ಸೂರತ್ತಿಗೆ ಬರುವುದಕ್ಕೆ ಮೊದಲು ಒಂದು ಗುಡಿಸಲಿಗೂ ಗತಿಯಿಲ್ಲದ ಈತ ಅವರಿಲ್ಲಿಗೆ ಬಂದಮೇಲೆ ಊರಿನ ಮಧ್ಯೆ ಮೂರು ನಾಲ್ಕು ಮಹಡಿಗಳನ್ನು ಕಟ್ಟಿಸಿದ.

ಕಂಪೆನಿಯ ಸ್ಥಿತಿ ಹೀಗಿರುವಲ್ಲಿ ಬ್ಲಾಟ್ ಇದ್ದಕ್ಕಿದ್ದಂತೆ ಕಾಲವಾದರು. ಒಂದು ಶತಮಾನವಾದರೂ ಬಾಳಬಲ್ಲಷ್ಟು ಗಟ್ಟಿಮುಟ್ಟಾಗಿದ್ದ ಅವರು ಈ ವರ್ಷ ಅಕ್ಟೋಬರ್ ನಲ್ಲಿ ತೀರಿಕೊಂಡರು. ಈಗ ಗೆಸ್ರೋನ್ ಅವರಿಗೆ ಎಲ್ಲವೂ ಸುಗಮವಾದಂತಾಯಿತು. ಏಕೆಂದರೆ ಬೆರೋನ್ ತೀರಾ ಸಪ್ಪೆ. ಅವರನ್ನು ಕಡೆಗಣಿಸಿ ಗೆಸ್ರೋನ್ ಕಾರುಬಾರು ನಡೆಸಲಾರಂಭಿಸಿದರು. ನಾನು ಸೂರತ್‌ಗೆ ಬಂದಾಗ ನಮ್ಮ ಕಂಪೆನಿಯ ಸ್ಥಿತಿ ಹೀಗಿತ್ತು.

ಮಾ. ಗೆಸ್ರೋನ್ ನನ್ನನ್ನು ಪ್ರೀತಿಯಿಂದ ಕಂಡರು. ಆದರೆ ಇದು ಮೊದಲ ಕೆಲವು ದಿನಗಳು ಮಾತ್ರ. ಆಮೇಲೆ ಹಾಗಿರಲಿಲ್ಲ. ಕಾರಣ ನನ್ನ ಬಗ್ಗೆ ಅವರಿಗೆ ಏಕೋ ಅಪನಂಬಿಕೆ. ಆತನ ಮೇಲೆ ಗೂಢಚಾರಿಕೆ ಮಾಡಲು ಬಂದಿದ್ದೇನೆಂದು ಅವರಿಗೆ ಅನುಮಾನ ವಾಗಿರಬೇಕು. ಅಲ್ಲಿದ್ದ ಎಲ್ಲರೂ ಗೊಣಗಾಡುವವರೆ. ಆದರೆ ನಿಜವಾಗಿ ನೋಡಿದರೆ ಗೆಸ್ರೋನ್ ಮಾಡುತ್ತಿದ್ದುದೆಲ್ಲಾ ಸರಿಯಾಗಿಯೇ ಇತ್ತು. ಸ್ಯಾಂಸನ್ ಕೂಡ ಗೊಣಗಾಡಿ ನನ್ನ ಬಳಿ ಬಂದು ದೂರು ಹೇಳಿದ. ಹಿಂದಿನಂತೆ ತನ್ನನ್ನು ಮರ್ಯಾದೆಯಿಂದ ಕಾಣು ತ್ತಿಲ್ಲವೆಂದೂ, ಆಗಾಗ್ಗೆ ತನ್ನನ್ನು ಹೀಯಾಳಿಸುತ್ತಾರೆಂದೂ, ಫ್ರಾನ್ಸ್‌ಗೆ ಕಳುಹಿಸಲು ಹಿಂದಿದ್ದ ಕಾರೋನ್ ಮತ್ತು ಬ್ಲಾಟ್‌ರವರ ಅಪ್ಪಣೆಯಂತೆ ಶೇಖರಿಸಿದ್ದ ಮಾಲನ್ನು

೧. ಸ್ಯಾಂಸನ್ (Samson)—ಗುಜರಾತಿನಲ್ಲಿದ್ದ ಯಹೂದಿಗಳಲ್ಲಿ ಈ ಹೆಸರು ಸಾಮಾನ್ಯ ವಾಗಿತ್ತೆಂದು ಗೊತ್ತಾಗುತ್ತದೆ. ಆದರೆ ಈ ಸ್ಯಾಂಸನ್ ಬನಿಯಾ ಜಾತಿಯವನೆಂದು ತಿಳಿದುಬಂದಿರು ತ್ತದೆ.

ಹಿಂದಕ್ಕೆ ತೆಗೆದುಕೊಂಡುಹೋಗು ಎಂದು ಹೇಳುತ್ತಿದ್ದಾರೆಂದೂ ತಿಳಿಸಿದ. ಇವೆಲ್ಲಾ ದೂರುಗಳಿಗೆ ನನ್ನದೊಂದೇ ಉತ್ತರ—ನನಗೂ ಕಂಪೆನಿಯ ವಹಿವಾಟಿಗೂ ಸಂಬಂಧ ವಿಲ್ಲ ಎಂದು.

ಇಲ್ಲಿಯ ನಗರದ ಗೌರ್ನರ್ ಒಬ್ಬ ಮೂರ. ಈತನು ಜನರನ್ನು ಪೀಡಿಸಿ ದುಡ್ಡು ಕೀಳುವುದರಲ್ಲಿ ಎತ್ತಿದಕೈ. ಮೊಗಲನಿಗೆ ದೂರು ಕಳುಹಿಸಿದರೆ ಅವನ ಆಸ್ಥಾನ ದಲ್ಲಿರುವ ಈತನ ಸೋದರನಿಂದಾಗಿ ಅವೆಲ್ಲಾ ವಾಪಸ್ಸು ಈತನ ಕೈಗೇ ಬರುತ್ತವೆ. ಮೊಗಲನಿಗೆ ವಿಷಯ ಗೊತ್ತಾಗುವುದೇ ಇಲ್ಲ. ಸರಿ, ದೂರು ಹೋದ ವರ್ತಕರ ಮೇಲೆ ಮತ್ತಷ್ಟು ಸಿಟ್ಟು. ಒಂದು ಸಲ ಅವರನ್ನೆಲ್ಲಾ ತನ್ನ ಅರಮನೆಗೆ ಕರೆಸಿದ. ಮೊಗಲ್ ಚಕ್ರವರ್ತಿಯಿಂದ ತಮಗನುಕೂಲವಾದ ಉತ್ತರ ಬಂದಿದೆಯೆಂದು ಭಾವಿಸಿ ಬಂದ ವರ್ತಕರಿಗೆ ಎಕ್ಕಡದೇಟು ಹೊಡೆಸಿದ. ಶಿವಾಜಿಯನ್ನು ಎದುರಿಸಲು ಹಣ ಬೇಕೆಂದು ಇನ್ನಷ್ಟು ಸುಲಿಗೆ ಮಾಡಲಾರಂಭಿಸಿದ. ಇದು ಹಿಂದೂಗಳು, ಮೂರರು ಮತ್ತು ಯೂರೋಪಿಯನ್ನರೆಲ್ಲರ ಮೇಲೂ ಹಾಕಿದ ಹೊರೆ. ಹಿಂದುಗಳು ತಮ್ಮ ಸಂಸಾರ ಸಮೇತ ಊರುಬಿಡುತ್ತಿದ್ದಾರೆಂದು ತಿಳಿದ ಗೌರ್ನರ್ ಊರಿನ ಎಲ್ಲಾ ಹೆಬ್ಬಾಗಿಲುಗಳನ್ನು ಮುಚ್ಚಿಸಿ ಹೊರಗೆ ಹೋಗಬೇಕೆಂದವರ ಮೇಲೆಲ್ಲಾ ಲಕ್ಷಗಟ್ಟಲೆ ದಂಡ ಹೇರಿದ.[೧]

ಯೂರೋಪಿಯನರಿಗೂ ಇವನ ಹಿಂಸೆ ತಪ್ಪಲಿಲ್ಲ. ಎಲ್ಲಾ ಹ್ಯಾಟ್‌ಧಾರಿಗಳನ್ನು ಅಂದರೆ ಟೋಪಿವಾಲಾ (Hat Wearer)ಗಳನ್ನು ಮುಗಿಸಿಬಿಡಬೇಕೆಂದು ಗುಟ್ಟಾಗಿ ಸನ್ನಾಹ ಮಾಡುತ್ತಿದ್ದಾನೆಂದು ತಿಳಿದಾಗ ಯೂರೋಪಿಯನ್ನರೆಲ್ಲ ಅಂದರೆ ಫ್ರೆಂಚ್, ಇಂಗ್ಲಿಷ್ ಮತ್ತು ಡಚ್ಚರು ಒಟ್ಟಾಗಿ ತಮ್ಮ ರಕ್ಷಣೆ ಮಾಡಿಕೊಳ್ಳಲಾರಂಭಿಸಿದರು. ಯಾರೂ ಸೂರತ್ ಮತ್ತು ಬೇರೆಕಡೆಗಳಲ್ಲಿರುವ ಫ್ಯಾಕ್ಟೊರಿಗಳನ್ನು ಬಿಟ್ಟು ಹೊರಗೆ ಹೋಗಕೂಡದೆಂದು ಕಟ್ಟುಮಾಡಿದರು. ಹೀಗೆ ಅವರು ಒಗ್ಗಟ್ಟಾಗಿದ್ದುದನ್ನು ಕಂಡ ಗೌರ್ನರ್ ಅವರಿಂದ ಅಷ್ಟು ಇಷ್ಟು ಹಣ ಹಾಗೂ ಅದು ಇದು ಬಹುಮಾನಗಳನ್ನು ಗಿಟ್ಟಿಸಿಕೊಂಡು ಅವರ ತಂಟೆಗೆ ಹೋಗುವುದಿಲ್ಲ ಎಂದ. ಆದರೂ ಸಣ್ಣ ಪುಟ್ಟ ಕಿರುಕುಳ ಕೊಡುವುದನ್ನು ಬಿಡಲಿಲ್ಲ. ಇವನ ಕಿರುಕುಳವನ್ನು ತಡೆಯಲಾರದ ಮರ್ಯಾ ದಸ್ತರಾದ, ಸೂರತ್ತಿನಲ್ಲಿದ್ದ ಇಂಗ್ಲಿಷ್ ಪ್ರೆಸಿಡೆಂಟ್ ಆಜ್ಞಿಯ (Aungier) ಬೊಂಬಾಯಿಗೇ ತಮ್ಮ ಕೇಂದ್ರ ಬದಲಾಯಿಸಿದರು.

ನಾನು ಸೂರತ್ತಿಗೆ ಬಂದ ಕೆಲವು ದಿನಗಳಲ್ಲಿ ಮಸುಲಿಪಟ್ಟಣದಿಂದ ಪತ್ರಗಳು ಬಂದುವು. ಅವುಗಳ ಪ್ರಕಾರ ಗೋಲ್ಕೊಂಡಾ ರಾಜ್ಯವೆಲ್ಲಾ ಫ್ರೆಂಚರ ಮೇಲೆ ದಂಗೆ

---

೧. ಈತನ ಹೆಸರು ಘಿಯಾಸುದ್ದೀನ್ (Ghiyasuddin) ಎಂದು. ಈತನ ಕ್ರೌರ್ಯದ ಬಗ್ಗೆ ಸೂರತ್ ಫ್ಯಾಕ್ಟೊರಿ ರಿಕಾರ್ಡುಗಳಲ್ಲೂ ಮಾಹಿತಿ ದೊರೆಯುತ್ತದೆ. ಖ್ವಾಜಾ ಮಿನಾಜ್ ಎಂಬ ಅರ್ಮೇನಿಯನ್ ವರ್ತಕನನ್ನು ಈತ ಎಕ್ಕಡದಿಂದ ಹೊಡೆಸಿ ದೊಣ್ಣೆಯಿಂದ ಬಡಿಸಿದನೆಂದು ಫ್ಯಾಕ್ಟೊರಿ ಯವರು ವರದಿ ಮಾಡಿದ್ದಾರೆ.

ಎದ್ದಿರುವುದಾಗಿ ತಿಳಿಯಿತು. ನಾನು ಫ್ರಾನ್ಸ್ ಚಕ್ರವರ್ತಿಯು ಕೊಟ್ಟುಕಳುಹಿಸಿರುವ ಕಾಗದಪತ್ರಗಳನ್ನು ಸೇಂಟ್ ಥೋಮ್‌ನಲ್ಲಿರುವ ವೈಸರಾಯ್ ಅವರಿಗೆ ಮುಟ್ಟಿಸಲು ಅಲ್ಲಿಗೆ ಹೋಗುವನೆಂಬುದು ಸೂರತ್ತಿನ ಡೈರೆಕ್ಟರ್ ಜನರಲ್ ಅವರಿಗೆ ಗೊತ್ತಿತ್ತು. ಭೂಪ್ರಯಾಣ ತುಂಬಾ ಪ್ರಯಾಸವೆಂದು ಹೇಳಿ ನನ್ನನ್ನು ಸಮುದ್ರಮಾರ್ಗವಾಗಿ ಕಳುಹಿಸಲು ಅವರು ಪ್ರಸಲಾಯಿಸಿದರು. ಆದರೆ ಹಡಗುಗಳು ಹೊರಡುವುದು ಇನ್ನೂ ೨-೩ ತಿಂಗಳು ಆಗುವುದರಿಂದ ಅಲ್ಲಿಯವರೆಗೆ ಕಾಯಲಾರೆ ಎಂದೆ. ಈ ಮಾತು ಕೇಳಿ ಅವರು ಚಕ್ರವರ್ತಿಯ ಕಾಗದಗಳನ್ನು ಪ್ರತಿಮಾಡಿಕೊಳ್ಳಲು ಕೊಟ್ಟ ಹೊರತು ನಾನು ಹೋಗಲು ಬಿಡುವುದಿಲ್ಲ ಎಂದರು. ಆ ಪತ್ರದ ನಕಲನ್ನು ಬೇರೆ ಸುರಕ್ಷಿತವಾದ ರೀತಿಯಲ್ಲಿ ಸೇಂಟ್ ಥೋಮ ವೈಸ್‌ರಾಯ್‌ಗೆ ಕಳುಹಿಸಿಕೊಡುತ್ತೇವೆಂದರು. ಭೂಮಾರ್ಗವಾಗಿ ಹೋದರೆ ಸುರಕ್ಷಿತವಾಗಿ ಸೇಂಟ್ ಥೋಮ್ ಮುಟ್ಟಲಾರೆ ಎಂದು ಅವರ ಭಾವನೆ. ಚಕ್ರವರ್ತಿಯ ಕಾಗದಪತ್ರಗಳನ್ನು ನೋಡುವ ಅಧಿಕಾರ ತಮಗೆ ಇದೆಯೆಂದು ರುಜುವಾತು ಮಾಡಿದ ಮೇಲೆ ನಾನು ಒಪ್ಪಿದೆ. ಹಾಗೆ ಮಾಡುವ ಮುನ್ನ ನನ್ನದೇನೂ ಇದರಲ್ಲಿ ತಪ್ಪಿಲ್ಲ ಎಂದು ಅವರಿಂದ ಪತ್ರ ಬರೆಸಿಕೊಂಡೆ.

ಇವರೊಡನೆ ವ್ಯವಹಾರ ಮುಗಿಸಿಕೊಂಡು ನಾನು ನನ್ನ ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಂಡೆ. ಇಲ್ಲಿಂದ ದಾಮನ್‌ಗೆ ಒಂದು ಹಡಗು ಹೊರಡುವುದರಲ್ಲಿತ್ತು. ಅದರಲ್ಲಿ ಜಾಗ ಸಿಕ್ಕಿತು. ದಾಮನ್‌ನಿಂದ ಗೋವಾಕ್ಕೂ ಅಲ್ಲಿಂದ ವಿಜಾಪುರ ರಾಜ್ಯಕ್ಕೂ ಹೋಗುವುದು ನನ್ನ ಉದ್ದೇಶವಾಗಿತ್ತು. ನಾನು ಸೂರತ್ ಬಿಡುವ ಮುನ್ನ ಡೈರೆಕ್ಟರ್ಸ್ ಜನರಲ್ ಮಾ. ಗೆಸ್ಟೋನ್ ಅವರು ಸಹಿ ಮಾಡಿದ ಕ್ಷಮಾಪಣೆ ಪತ್ರಗಳನ್ನು ನನ್ನ ಕಡೆಗೆ ಕೊಟ್ಟರು. ನೀವು ಹೋಗುವ ಕಡೆ ಅಲ್ಲಲ್ಲಿ ನಮ್ಮ ಕಂಪೆನಿ ಬಿಟ್ಟು ಓಡಿಹೋದ ಫ್ರೆಂಚರಿದ್ದಾರೆ. ಅವರಿಗೆ ಈ ಕ್ಷಮಾಪಣೆ ಪತ್ರ ಕೊಟ್ಟು ಮತ್ತೆ ಕಂಪೆನಿ ಸೇವೆಗೆ ಹಿಂದಿರುಗುವಂತೆ ಮಾಡಿ ಎಂದು ತಿಳಿಸಿದರು.

ನವೆಂಬರ್ ೧ ನೆಯ ಶನಿವಾರ ಸೂರತ್ತಿನಿಂದ ಸ್ವಾಲ್ಲಿಗೆ ಹೋದೆ. ಅಲ್ಲಿ ಕ್ಯಾಪ್ಟನ್ ನಿಕೋಲಸ್ ವಿದಾಲ್ (Vidal)ನ ಹಡಗು ಹತ್ತಿ ಪ್ರಯಾಣ ಮಾಡಿ ಮಾರನೆಯ ದಿನ ಅಂದರೆ ಭಾನುವಾರ ದಾಮನ್ ತಲುಪಿದೆವು. ನಾವು ಅಲ್ಲಿನ ಗೌರ್‍ನರ್‌ರನ್ನು ಕಾಣಲು ಊರಿನೊಳಕ್ಕೆ ಹೋದೆವು. ಈ ಗೌರ್‍ನರ್ ಗೋವಾ ವೈಸರಾಯಿಯ ಸಂಬಂಧಿ. ಬಹು ಬಿಂಕದಿಂದ ನಮ್ಮನ್ನು ಮಾತನಾಡಿಸಿದ. ನನ್ನನ್ನು ಹೋಗಲಿ ಕ್ಯಾಪ್ಟನ್ ವಿದಾಲ್ ನನ್ನು ಹಾಗೆ ಕಂಡದ್ದು ಆಶ್ಚರ್ಯವೆನಿಸಿತು. ಏಕೆಂದರೆ ಈತ ಹಣ ಗಳಿಸಲೂ ತನ್ನ ಗುಪ್ತ ಆಮೋದಗಳಿಗೂ ಕ್ಯಾಪ್ಟನ್ ವಿದಾಲನನ್ನು ಉಪಯೋಗಿಸಿಕೊಳ್ಳುತ್ತಿದ್ದಾನೆ. ಇಂಥವನೊಡನೆ ಹೆಚ್ಚು ಸಂಬಂಧ ಮಾಡಬಾರದೆಂದು ನಾನು ಏನೋ ನೆಪ ಹೇಳಿ ಹೊರಟುಬಂದೆ.

ದಾಮನ್ ಬಹು ಸೊಗಸಾದ ಸ್ಥಳ. ಬೇಕಾದ್ದೆಲ್ಲ ದೊರೆಯುತ್ತದೆ. ಇಂಡಿಯಾದ ಆಮೋದವಿನೋದಗಳಿಗೆಲ್ಲಾ ಇದು ಒಂದು ಆಗರ ಎನ್ನಬಹುದು. ಇಂಥ ಊರನ್ನು

ವಶಪಡಿಸಿಕೊಳ್ಳಲು ಮೊಗಲ್ ಎರಡು ಸಲ ಪ್ರಯತ್ನಪಟ್ಟು, ತನ್ನ ಎರಡು ಲಕ್ಷ ಸೈನ್ಯ ಕಳುಹಿಸಿಕೊಟ್ಟ. ಆದರೆ ಇದಕ್ಕಿರುವ ಭದ್ರವಾದ ರಕ್ಷಣೆಯ ಕಾರಣ ಅವನ ಆಟ ನಡೆಯಲಿಲ್ಲ. ಒಳ್ಳೆಯ ಕೋಟೆಕೊತ್ತಳಗಳಲ್ಲದೆ ಸುಂದರವಾದ ಚರ್ಚುಗಳೂ ಇಲ್ಲಿವೆ.

ಇಲ್ಲಿ ಮುಖ್ಯ ಅಧಿಕಾರಿಗಳೆಂದರೆ ಗೌರ್ನರ್, ದಳ್ಳಾಳಿ ಮತ್ತು ಬಂದರಿನ ಲೆಕ್ಕಾಧಿಕಾರಿ. ಇವರಿಗೆ ಎಲ್ಲಾ ಅಧಿಕಾರಗಳೂ ಉಂಟು. ಪೋರ್ಚುಗೀಸ್ ನಗರಗಳಲ್ಲೆಲ್ಲಾ ಇದೇ ವ್ಯವಸ್ಥೆ. ಹಿಂದೆ ಇಂಥ ಪಟ್ಟಣಗಳಿಂದ ಪೋರ್ಚುಗೀಸರಿಗೆ ಕೈತುಂಬ ಆದಾಯವಿತ್ತು. ಈಗ ಎಲ್ಲವೂ ಕ್ಷೀಣಿಸುತ್ತಿವೆ. ಸೋಮಾರಿತನ ಹಾಗೂ ದುರ್ವ್ಯವಹಾರಗಳು ತಾಂಡವವಾಡುತ್ತಿವೆ. ನಗರದ ನಿವಾಸಿಗಳೆಂದರೆ ಕ್ರೈಸ್ತರು. ಇವರು ಪೋರ್ಚುಗೀಸರು ಮತ್ತು ಬೆರಕೆಜಾತಿಯವರು. ಮೂರರನ್ನಾಗಲೀ ಅಥವಾ ಹಿಂದೂಗಳನ್ನಾಗಲೀ ಹತ್ತಿರ ಸೇರಿಸುವುದಿಲ್ಲ. ಇವರು ಏನಿದ್ದರೂ ಸುತ್ತಮುತ್ತಲ ಹಳ್ಳಿಗಳಲ್ಲಿ ವಾಸಮಾಡಬೇಕು. ದಾಮನ್‌ನಲ್ಲಿರುವ ಮನೆಗಳ ತುಂಬ ಹೆಂಗಸರೇ ಹೆಂಗಸರು. ಇವರು ಬಗೆಬಗೆಯ ಸಿಹಿ ತಿಂಡಿ ಮತ್ತು ಭಕ್ಷ್ಯಭೋಜ್ಯಗಳನ್ನು ಮಾಡಿಕೊಂಡಿದ್ದಾರೆ. ಅಲ್ಲದೆ ಗುಲಾಮರೂ ತುಂಬಿದ್ದಾರೆ. ಇವರು ಒಂದಿಷ್ಟು ಗಂಜಿ ಕುಡಿದು ಮೀನು ನೆಂಜಿಕೊಂಡು ಹೊಟ್ಟೆ ಹೊರೆಯುತ್ತಾರೆ.

ಇಲ್ಲಿ ನಮ್ಮ ಕಂಪೆನಿಯಿಂದ ಓಡಿಬಂದ ಹಲವಾರು ಜನ ಇದ್ದರು. ಮತ್ತೆ ಕಂಪೆನಿ ಸೇವೆಗೆ ಬನ್ನಿ ಎಂದು ಕರೆದೆ. ಮೊದಲು ಒಪ್ಪಿದರು. ಆದರೆ ಗೌರ್ನರನ ಸೇವೆಯಲ್ಲಿದ್ದ ಕಾರಣ ಅವರನ್ನು ಕೇಳಿಬರುತ್ತೇವೆಂದು ಹೋದವರು ಆಮೇಲೆ ಬಂದು ಹಿಂದಿರುಗಲು ಏನೇನೋ ಷರತ್ತುಗಳನ್ನು ಹಾಕಿದರು. ಹಾಳಾಗಿ ಹೋಗಲಿ ಎಂದು ನಾನು ಮುಂದಿನ ಪ್ರಯಾಣ ಆರಂಭಿಸಿದೆ. ಇಬ್ಬರು 'ಕನರಿನ್' (Canarin)೧ ಸೇವಕರನ್ನೂ ಕೆಲವರು ಕೂಲಿಗಳನ್ನೂ ನೇಮಿಸಿಕೊಂಡೆ. ಈ ಕೂಲಿಗಳ ಕೆಲಸ ಪಲ್ಲಕ್ಕಿ ಹೊರುವುದು.

ದಾಮನ್‌ನಲ್ಲಿ ಇಬ್ಬರು ರಾಜರು ಪೋರ್ಚುಗೀಸರ ಆಶ್ರಯಪಡೆದಿದ್ದಾರೆ. ಅವರ್ಯಾರು ಎಂದರೆ 'ಜವರ್' (Javare = Jawhar) ಮತ್ತು ಕೋಸ್ಲೆ (Cosles = Kolis) ಎಂಬ ರಾಜ್ಯಗಳ ಅರಸರು. ಶಿವಾಜಿಗೆ ಹೆದರಿ ಅವರಿಬ್ಬರೂ ಇಲ್ಲಿ ಆಶ್ರಯ ಪಡೆಯುತ್ತಿದ್ದಾರೆ. ಕಳ್ಳತನ, ದರೋಡೆ ಮುಂತಾದ ಹಾವಳಿ ಮಾಡುತ್ತಿದ್ದ ಇವರನ್ನು ಶಿವಾಜಿ ಅಟ್ಟಾಡಿ ಕೊನೆಗೆ ದಾಮನ್‌ನಲ್ಲಿ ಆಶ್ರಯ ಪಡೆಯುವಂತೆ ಮಾಡಿದ್ದಾನೆ.

---

೧. ಕನರಿನ್ (Canarin)—ಈ ಕಾಲಕ್ಕೆ ಪಶ್ಚಿಮ ಸಮುದ್ರತೀರ (ಮಲಬಾರ್ ತೀರ) ಕನರಾ (ಕನ್ನಡ) ಪ್ರದೇಶದಲ್ಲಿದ್ದ ನಿವಾಸಿಗಳನ್ನು ಕನರಿನ್ ಎಂದು ಕರೆಯಲಾಗುತ್ತಿತ್ತು.

ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಂಡು ನವೆಂಬರ್ ೨೨ನೆಯ ಮಂಗಳವಾರ ಬೆಳಗ್ಗೆ ಹೊರಟೆ. ನನ್ನ ಜೊತೆ ತಾರಾಪುರಕ್ಕೆ ಬರಲು ಪೋರ್ಚುಗೀಸ ಫಿದಾಲ್ಗೊ ಒಬ್ಬ ಬಂದ. ಅಲ್ಲಿ ಆತನ ಭೂಮಿಕಾಣಿಗಳಿವೆಯಂತೆ. ಅವನ ಹಿಂದೆ ಗುಲಾಮರ ತಂಡವೇ ಇತ್ತು. ಅವರು ಭಲ್ಲೆ ಮತ್ತು ಗದೆಗಳನ್ನು ಹೊತ್ತಿದ್ದರು. ಗದೆಗಳ ತುದಿಯಲ್ಲಿದ್ದ ಗುಂಡುಗಳ ತೂಕ ಏನಿಲ್ಲ ಅಂದರೂ ಎರಡು ಪೌಂಡು. ಪಾಪ, ಇಷ್ಟು ಭಾರಿ ಗದೆಗಳನ್ನು ಹೊತ್ತು ಕುದುರೆಯ ವೇಗಕ್ಕಿಂತ ಹೆಚ್ಚು ವೇಗವಾಗಿ ಸಾಗುತ್ತ ಪಲ್ಲಕ್ಕಿಯ ಹಿಂದೆ ಓಡುವುದು ಕಾಫರರ (Caffres) ಹಣೆಬರಹ !

ಬೆಳಗಿನ ತಂಪಿನಲ್ಲಿ ಹೊರೆಟೆವು. ಆದರೆ ಬಿಸಿಲಿನ ತಾಪ ತಡೆಯಲಾರದೆ ಅಲ್ಲಲ್ಲಿ ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡು ದಾರಿ ಸಾಗಿಸಬೇಕಾಯಿತು. ಮಾರನೆಯ ದಿನ ಸಂಜೆ ತಾರಾಪುರ[೧] ಮುಟ್ಟಿದೆವು.

ಮಾರನೆಯ ದಿನ ಬೆಳಿಗ್ಗೆ ಹೊರಡಬೇಕೆಂದಿದ್ದೆ: ಆದರೆ ನನ್ನ ಸಹಪ್ರಯಾಣಿಕ ಸಂಜೆಯವರೆಗೂ ಇದ್ದು ಹೋಗಬೇಕೆಂದು ಒತ್ತಾಯಪಡಿಸಿದ. ಈ ತಾರಾಪುರ ಮತ್ತು ಸುತ್ತಮುತ್ತಣ ಪ್ರದೇಶವನ್ನೆಲ್ಲಾ ಮೇಲೆ ಹೇಳಿದ ಕೋಲಿಗಳೂ ಜವರ್‌ಗಳೂ ಹಾಳುಗೆಡವಿದ್ದಾರೆ. ಶಿವಾಜಿ ಬರದಿದ್ದರೆ ಪೋರ್ಚುಗೀಸರಿಗೂ ಭಾರಿ ಅನಾಹುತ ಮಾಡಿಬಿಡುತ್ತಿದ್ದರು.

೨೫ನೆಯ ಶುಕ್ರವಾರ ಹೊತ್ತಿನಂತೆ ತಾರಾಪುರ ಬಿಟ್ಟು ಸಮುದ್ರ ತೀರದಲ್ಲಿ ತೆಂಗಿನ ಮರಗಳ ನೆರಳಿನಲ್ಲಿ ದಾರಿ ಸಾಗಿಸಿ, ಪಸ್ಮೆ ಎಂಬ ನದಿ ದಾಟಿ, ಮಹೀಮ್ ಹಿಂದೆ ಬಿಟ್ಟು, ಕೈಲ್ಮೆ (ಕೆಲ್ವೆ)ಯಲ್ಲಿ ತಂಗಿ, ಮಾರನೆಯ ದಿನ ಮತ್ತೆ ಪ್ರಯಾಣ ಮುಂದುವರಿಸಿ, ಸಂಜೆಯಹೊತ್ತಿಗೆ ಕೋರಾ (Cora = Kora) ಎಂಬ ಊರಿನ ಮೂಲಕ ಬಸ್ಸೀನ್ (Bassin = Bassein) ತಲುಪಿದೆ. ಇಡೀ ಇಂಡಿಯಾದಲ್ಲಿಯೇ ಅತ್ಯುತ್ತಮವಾದ ಸಕ್ಕರೆ ಇಲ್ಲಿ ತಯಾರಾಗುತ್ತದೆ.

ಇಲ್ಲಿಂದ ದೋಣಿಯೊಂದನ್ನು ಬಾಡಿಗೆಗೆ ಪಡೆದು ಬೊಂಬಾಯಿಗೆ ಹೊರಟೆ. ನಡುರಾತ್ರಿಯ ಹೊತ್ತಿಗೆ ಥಾನಾ ತಲುಪಿದೆ. ಅಲ್ಲಿಂದ ಹೊರಟು ಮಾರನೆಯ ದಿನ ಬೆಳಕುಹರಿಯುವ ಹೊತ್ತಿಗೆ ಬೊಂಬಾಯಿ ಮುಟ್ಟಿದೆ.

ನಮ್ಮ ದೇಶದವನೊಬ್ಬ ಇಟ್ಟಿರುವ ಹೊಟೇಲ್‌ನಲ್ಲಿ ನನ್ನ ಸಾಮಾನುಗಳನ್ನು ಹಾಕಿದೆ. ನಾನು ಬೊಂಬಾಯಿಗೆ ಬಂದಿರುವ ವಿಷಯ ತಿಳಿದ ಇಂಗ್ಲಿಷ್ ಕಂಪೆನಿಯ ಗೌರ್ನರ್ ಆಂಜಿಯ (Aungier) ನನಗೆ ಹೇಳಿಕಳುಹಿಸಿದರು. ಇವರು ನನಗೆ ಮೊದಲೇ ಪರಿಚಯವಾಗಿದ್ದವರು. ತಮ್ಮ ನಿವಾಸದ ಕೋಣೆಯಲ್ಲಿ ಇರುವುದು ಬಿಟ್ಟು ಬೇರೆ ಕಡೆ ತಂಗಿದ್ದಕ್ಕೆ ಆಕ್ಷೇಪಣೆ ಮಾಡಿದರು. ಎರಡು ದಿನ ತಮ್ಮ ಕೋಣೆಯಲ್ಲಿರಿಸಿಕೊಂಡು ಅನೇಕ ವಿಷಯಗಳ ಬಗ್ಗೆ ಮಾತಾಡಿದರು. ಮುಖ್ಯವಾಗಿ, ಇಂಗ್ಲಿಷ್ ಕಂಪೆನಿ ಡಚ್ ಕಂಪೆನಿ ಮತ್ತು ಫ್ರೆಂಚ್ ಕಂಪೆನಿ ಈ ಮೂರು ಕಂಪೆನಿಗಳೂ ಒಂದಾಗಿ ಕೆಲಸ ಮಾಡದೆ

---

೧. ತಾರಾಪುರ—ಬೊಂಬಾಯಿಯ ಉತ್ತರಕ್ಕೆ ೬೦ ಮೈಲಿ ದೂರದಲ್ಲಿದೆ.

ಪರಸ್ಪರ ಪೈಪೋಟಿ ನಡೆಸುತ್ತಿವೆ. ಎಲ್ಲರೂ ಒಂದೇ ಬಗೆಯ ಮಾಲುಗಳನ್ನು ಹೆಚ್ಚು ಬೆಲೆ ಕೊಟ್ಟು ಕೊಂಡುಕೊಂಡು ಕಡಿಮೆ ದರದಲ್ಲಿ ಮಾರುವುದರಿಂದ ನಷ್ಟಕ್ಕೆ ಗುರಿಯಾಗುತ್ತಿದ್ದಾರೆ. ಇದರಿಂದ ಸ್ಥಳದ ವರ್ತಕರಿಗೆ ಮಾತ್ರ ಅನುಕೂಲ. ಫ್ರೆಂಚರ ವರ್ತನೆ ಹಾಗೂ ಫ್ರೆಂಚ್ ವೈಸ್‌ರಾಯ್‌ಯ ವರ್ತನೆ ಏನೇನೂ ಸರಿಯಾಗಿಲ್ಲ. ಡಚ್ಚರನ್ನು ಸದೆಬಡಿಯುವ ಅವಕಾಶ ಇದ್ದರೂ ಧೈರ್ಯವಿಲ್ಲದೆ ಆ ಕೆಲಸ ಮಾಡಲಿಲ್ಲ. ಸಿಂಹಳದ ದೊರೆಯ ಸ್ನೇಹ ಬೆಳೆಸಿ ಆ ದೇಶದಿಂದ ಡಚ್ಚರನ್ನು ಓಡಿಸಬಹುದಾಗಿತ್ತು. ಹಾಗೆ ಮಾಡಲಿಲ್ಲ. ಸೆಂಟ್ ಥೋಮನ್ನು ಫ್ರೆಂಚ್ ವೈಸರಾಯ್ ಆಕ್ರಮಿಸಿಕೊಳ್ಳಬಹುದಿತ್ತು. ಈಗ ಇಡೀ ಗೋಲ್ಕೊಂಡಾ ಸೈನ್ಯದ ಧಾಳಿಯನ್ನು ಆತ ಎದುರಿಸಬೇಕಾಗಿದೆ–ಹೀಗೆ ಸಾಗಿತ್ತು ಪ್ರೆಸಿಡೆಂಟ್ ಆಜ್ಞಿಯ ಅವರ ಮಾತಿನ ಧಾಟಿ.

ಇಲ್ಲಿ ನಾನು ಅನೇಕ ಫ್ರೆಂಚ್ ಸಿಪಾಯಿಗಳು ಇಂಗ್ಲಿಷರ ಸೇವೆಯಲ್ಲಿ ಇರುವುದನ್ನು ಕಂಡೆ. ತಮ್ಮ ರಾಷ್ಟ್ರದ ಸೇವೆಗಾಗಿ ಸೂರತ್ತಿಗೆ ಹಿಂದಿರುಗಲು ಸಿದ್ಧವಾಗಿರುವುದಾಗಿ ನನಗೆ ಗೊತ್ತಿದ್ದ ಇಬ್ಬರು ಫ್ರೆಂಚರು ಹೇಳಿದರು. ಈ ವಿಷಯವನ್ನು ಪ್ರೆಸಿಡೆಂಟ್ ಆಜ್ಞಿಯ ಅವರಿಗೆ ತಿಳಿಸಿದೆ. ಅವರನ್ನು ಬಿಟ್ಟುಕೊಡಲು ಕೂಡಲೇ ಒಪ್ಪಿದರು. ಅವರನ್ನು ತಮ್ಮ ಸೇವೆಯಿಂದ ಬಿಡುಗಡೆ ಮಾಡಿರುವುದಾಗಿಯೂ ಅಪ್ಪಣೆ ಮಾಡಿದರು. ಅವರನ್ನು ಕರೆಸಿ ಕುಡಿಯಲು ಮದ್ಯ ಕೊಟ್ಟು ಬೀಳ್ಕೊಟ್ಟರು. ಬೇರೆಯವರನ್ನೂ ಬಿಟ್ಟುಕೊಡುವುದಾಗಿ ಒಪ್ಪಿದರು.

ಹೀಗೆ ಎರಡು ದಿನಗಳು ಬೊಂಬಾಯಿಯಲ್ಲಿ ಇದ್ದು ಪ್ರೆಸಿಡೆಂಟ್‌ರ ನೆರವಿನಿಂದ ದೊರೆತ ದೋಣಿಯೊಂದರಲ್ಲಿ ನವೆಂಬರ್ ೩೦ನೆಯ ಬುಧವಾರ ಚೌಲ್‌ಗೆ ಹೊರಟೆ. ಖಾಂಡೇರಿ ಮತ್ತು ಆಂಧೇರಿಗಳನ್ನು ದಾಟಿ ಮಾರನೆಯ ದಿನ ಅಂದರೆ ಡಿಸೆಂಬರ್ ೧ನೆಯ ಗುರುವಾರ ಚೌಲ್ ತಲುಪಿ ಅಲ್ಲಿದ್ದ ಪೋರ್ಚುಗೀಸ್ ಗೌರ್ನರ್‌ರನ್ನು ಕಂಡೆ. ಪ್ರೀತಿವಿಶ್ವಾಸಗಳಿಂದ ನನ್ನನ್ನು ಕಂಡರು. ನಾನು ಬಂದ ಉದ್ದೇಶವನ್ನು ತಿಳಿಯಲು ಅವರೂ ಬೇರೆಯವರೂ ಪ್ರಯತ್ನಪಟ್ಟರು. ನಾನು ಗುಟ್ಟು ಬಿಟ್ಟುಕೊಡದೆ ಗೋವಾದಲ್ಲಿ ವೈಸರಾಯ್‌ರನ್ನು ನೋಡಬೇಕಾಗಿದೆ ಎಂದಷ್ಟೇ ಹೇಳಿದೆ. ತಾವು ಹಿಂದುಗಳಿಗೆ ಚೌಲ್‌ನಲ್ಲಿರಲು ಅವಕಾಶ ಕೊಟ್ಟಿಲ್ಲವೆಂತಲೂ ಮುಂದೆ ಫ್ರೆಂಚರೂ ಅದೇ ರೀತಿ ನಡೆದುಕೊಳ್ಳಬೇಕೆಂದೂ ನನಗೆ ಬುದ್ಧಿವಾದ ಹೇಳಿದರು.

ಆದರೆ ಪೋರ್ಚುಗೀಸರಿಗೆ ತದ್ವಿರುದ್ಧವಾದ ರೀತಿಯಲ್ಲಿ ಸ್ಥಳದ ಬನಿಯಾಗಳು ನಡೆದುಕೊಂಡರು. ಊರ ಮಧ್ಯೆ ನಾನು ಮಾಡಿದ್ದ ಬಿಡಾರಕ್ಕೆ ತಂಡೋಪತಂಡವಾಗಿ ಬಂದು ತಮ್ಮಿಂದ ಏನಾದರೂ ಸಹಾಯ ಆಗಬೇಕೆ ಎಂದು ಕೇಳಿದರು. ತಾವು ಬಹಳ ಕಾಲದಿಂದ ಫ್ರೆಂಚರಿಗೆ ವ್ಯಾಪಾರದಲ್ಲಿ ನೆರವಾಗುತ್ತಿರುವುದಾಗಿಯೂ ತಿಳಿಸಿದರು. ನಾನು ಇವರನ್ನು ಮರ್ಯಾದೆಯಿಂದ ಕಂಡು ಮುಂದೆ ಈ ನಗರ ನಮ್ಮ ವಶವಾದಾಗ ಅವರ ಸೇವೆಯನ್ನು ಪಡೆದುಕೊಳ್ಳುವುದಾಗಿ ತಿಳಿಸಿ ಕಳುಹಿಸಿಕೊಟ್ಟೆ. ನಾನು ದೋಣಿಯಲ್ಲಿ

ಗೋವಾಕ್ಕೆ ಹೋಗುವುದು ಅಪಾಯವೆಂದು ತಿಳಿಸಿದರು. ಏಕೆಂದರೆ ಕಡಲ್ಗಳ್ಳರ ಕಾಟ. ಆದರೆ ಭೂಮಾರ್ಗವೂ ಅಷ್ಟೇ ಅಪಾಯಕಾರಿ ಎಂದರು. ಬೆಟ್ಟಗುಡ್ಡಗಳ ಮಧ್ಯೆ ಪ್ರಯಾಣ ಮಾಡಿ, ನದಿಗಳನ್ನು ದಾಟುವ ಕಷ್ಟದ ಜೊತೆಗೆ ಶಿವಾಜಿ, ಮೊಗಲನ ಕಡೆಯ ಸಿದಿ ಮತ್ತು ಕಡಲು ತೀರದ ಸಣ್ಣಪುಟ್ಟ ರಾಜರುಗಳು ಕೊಳ್ಳೆಹೊಡೆಯುವ ಅಪಾಯ.

ಹೀಗಾಗಿ ಕೆಲವು ದಿನ ನಾನು ಇಲ್ಲಿಯೇ ತಂಗಬೇಕಾಯಿತು. ಈ ವೇಳೆಯಲ್ಲಿ ಇಲ್ಲಿರುವ ಚರ್ಚು ಮುಂತಾದುವುಗಳನ್ನು ನೋಡುತ್ತಾ ಕಳೆದೆ.

ನಾಲ್ಕು ದಿನಗಳ ಕಾಲ ಕಾದು ಸಾಕಾಗಿ ಪಲ್ಲಕ್ಕಿಯಲ್ಲಿ ಗೋವೆಗೆ ಹೋಗುವುದೆಂದು ತೀರ್ಮಾನಿಸಿದೆ. ದಿನಾ ನನ್ನನ್ನು ಮುತ್ತಿಕೊಳ್ಳುತ್ತಿದ್ದ ವರ್ತಕರಿಗೆ ಹೇಳಿದೆ– ಒಂದು ಪಲ್ಲಕ್ಕಿಯನ್ನೂ ಕೂಲಿಗಳನ್ನೂ ಒದಗಿಸಿಕೊಡಿ ಎಂದು. ಸರಿ, ಪಲ್ಲಕ್ಕಿಯೂ ಬಂತು, ಎಂಟು ಜನ ಗಟ್ಟಿಮುಟ್ಟಾದ ಆಳುಗಳೂ ಬಂದರು. ಕೆಳ ಚೌಲ್ ಪಟ್ಟಣ ಪೋರ್ಚುಗೀಸರ ವಶದಲ್ಲಿದೆ. ಅದರ ಗೌರ್ನರ್‌ನನ್ನು ಕಂಡು ಗೋವಾಕ್ಕೆ ಸುಖವಾಗಿ ಹೋಗಲು ಸಹಾಯ ಮಾಡಬೇಕೆಂದು ಕೇಳಿಕೊಂಡೆ. ಆತ ಆಗಲಿ ಎಂದು ಹೇಳಿ ಒಂದು ಪರವಾನಗಿ ಬರೆಸಿಕೊಟ್ಟ. ಫ್ರೆಂಚರಿಗೆ ಸಹಾಯ ಮಾಡಲು ತನಗೆ ತುಂಬಾ ಇಷ್ಟ ಎಂದು ಆತ ತಿಳಿಸಿದ. ಆತನಿಗೆ ಒಂದು ಪುಟ್ಟ ಬಹುಮಾನ ಕೊಟ್ಟು, ನನ್ನ ಬಿಡಾರಕ್ಕೆ ಹಿಂದಿರುಗಿದೆ.

ಇಷ್ಟೆಲ್ಲಾ ಏರ್ಪಾಡು ಮಾಡಿಕೊಂಡು ಬಿಡಾರಕ್ಕೆ ಬಂದೆ. ಸುಮಾರು ರಾತ್ರಿ ೮ ಘಂಟೆ. ಊಟಕ್ಕೆ ಕುಳಿತಿದ್ದೆ. ಆಗ ಯಾರೋ ಮೆಲ್ಲಗೆ ಬಾಗಿಲು ತಟ್ಟಿದರು. ಹೋಗಿ ನೋಡಿದರೆ ಮೂವರು ಹೆಂಗಸರು! ಒಬ್ಬಳು ಇಳಿವಯಸ್ಸಿನವಳು, ಇನ್ನೊಬ್ಬಳು ಮಧ್ಯವಯಸ್ಸಿನವಳು ಮತ್ತು ಮೂರನೆಯವಳು ಯುವತಿ. ಇಂಡೋ–ಪೋರ್ಚುಗೀಸರಾದ ಇವರು ನೋಡಲು ಅಂದಚಂದವಾಗಿದ್ದರು. ಫ್ರೆಂಚರು ಚೌಲ್ ನಗರಕ್ಕೆ ಬರುತ್ತಿರುವುದು ತುಂಬಾ ಸಂತೋಷದ ಸಂಗತಿಯೆಂದೂ, ತಾನೂ ಕ್ರೈಸ್ತಳೇ ಆದ್ದರಿಂದ ತನ್ನ ಇಬ್ಬರು ಹುಡುಗಿಯರಿಗೆ ಫ್ರೆಂಚ್ ಗಂಡುಗಳನ್ನು ಒದಗಿಸಿಕೊಡುವ ಕೃಪೆ ಮಾಡಬೇಕೆಂದೂ ಕೇಳಿಕೊಂಡು ಗಳಗಳ ಅಳಲಾರಂಭಿಸಿದರು. ಕಣ್ಣೀರು ಕರೆಯುತ್ತ ಆಕೆ ತನ್ನ ಮನೆತನದ ವಿಷಯವನ್ನೆಲ್ಲ ಹೇಳಿದಳು. ತಾನೊಬ್ಬ ಶ್ರೀಮಂತ ಪೋರ್ಚುಗೀಸನ ವಿಧವೆ. ಈ ಇಬ್ಬರು ಹೆಣ್ಣುಮಕ್ಕಳನ್ನು ಬಿಟ್ಟು ಆತ ಸತ್ತುಹೋದ. ಸ್ಥಳದ ಪೋರ್ಚುಗೀಸರು ಲುಚ್ಚಾಜನ. ಕೇವಲ ಗಂಜಿ ಕುಡಿದು ಮೀನು ತಿಂದುಕೊಂಡು ಕಾಲಹಾಕುತ್ತಿದ್ದರೂ ಹೇಳಿಕೊಳ್ಳುವುದು ತಾವು ಶ್ರೀಮಂತರು ಎಂದು. ಅಯೋಗ್ಯತನಗಳ ಆಗರ ಅವರು. ಅವರಿಗೆ ಏನಿದ್ದರೂ ಸಾಲದು. ಮೊಗಲನ ಆಸ್ತಿಪಾಸ್ತಿಗಳನ್ನೆಲ್ಲ ಕೊಟ್ಟರೂ ಮೂರೇ ದಿನಗಳಲ್ಲಿ ಮಜಾಮಾಡಿ ಪಾಪರ್ ಆಗುತ್ತಾರೆ. ಅಂಥವರಿಗೆ ತನ್ನ ಹೆಣ್ಣುಮಕ್ಕಳನ್ನು ಕೊಟ್ಟು ಮದುವೆ ಮಾಡಲು ಇಷ್ಟವಿಲ್ಲ ಎನ್ನುತ್ತಾ ಗೋಳೋ ಎಂದು ಅಳಲಾರಂಭಿಸಿದಳು.

ಇವರನ್ನು ಹೇಗಾದರೂ ಮಾಡಿ ಕಳುಹಿಸಿಕೊಡಬೇಕೆಂದು ನಾನು 'ಆಗಲಿ, ಇಲ್ಲಿಗೆ ಫ್ರೆಂಚರು ಬರಲಿದ್ದಾರೆ. ಅವರಲ್ಲಿ ಯೋಗ್ಯರಾದ ಗಂಡುಗಳನ್ನು ಹುಡುಕಿ ಮದುವೆಗೆ ಏರ್ಪಾಡು ಮಾಡುತ್ತೇನೆ' ಎಂದು ಸಮಾಧಾನ ಮಾಡಿದೆ. ಉತ್ತರದಿಂದ ತುಂಬಾ ಸಂತೋಷಗೊಂಡ ಆಕೆ, ತಾನು ನಾಳೆ ನನ್ನೊಡನೆ ಬರುವುದಾಗಿಯೂ ದಾರಿಯಲ್ಲಿ ತನ್ನ ಹೆಣ್ಣುಮಕ್ಕಳಿಗೆ ಇರುವ ಆಸ್ತಿಪಾಸ್ತಿ ಏನೆಂಬುದನ್ನು ತೋರಿಸುವುದಾಗಿಯೂ ತಿಳಿಸಿದಳು. ಆಗಲಿ ಎಂದೆ.

ಮೊದಲು ದೋಣಿಯಲ್ಲಿ ಚೌಲ್ ನದಿಯ ಮೇಲೆ ಒಳಭಾಗಕ್ಕೆ ಹೋಗಿ, ಅಲ್ಲಿ ಇಳಿದು ಪಲ್ಲಕ್ಕಿಯಲ್ಲಿ ಮುಂದಿನ ದಾರಿ ಸಾಗಿಸಬೇಕಾಗಿತ್ತು. ಡಿಸೆಂಬರ್ ೬ನೆಯ ತಾರೀಖು ಮಂಗಳವಾರ ನನ್ನ ಸಾಮಾನು ಸರಂಜಾಮು ಮತ್ತು ಆಳುಕಾಳುಗಳ ಸಮೇತ ದೋಣಿ ಹತ್ತಲು ಹೋಗಿ ನೋಡಿದರೆ ಅದರಲ್ಲಿ ಹಳ್ಳಿ-ಪಳ್ಳಿ ಜನ ಮತ್ತು ಹಿಂದೂ ವರ್ತಕರು ತುಂಬಿಕೊಂಡಿದ್ದರು. ಇಡೀ ದೋಣಿಯೇ ನನಗೆ ಬೇಕೆಂದು ಗಲಾಟೆ ಎಬ್ಬಿಸಿದೆ. ದೋಣಿಯವ ಎಲ್ಲರನ್ನೂ ಇಳಿಸಿದ. ನಾನು, ನನ್ನ ಸೇವಕರು, ಆ ಹೆಂಗಸು ಮತ್ತು ಆಕೆಯ ಒಬ್ಬಳು ಮಗಳು ಮತ್ತು ಕೆಲವು ಪೋರ್ಚುಗೀಸರು ಮಾತ್ರ ದೋಣಿಯಲ್ಲಿ ಕುಳಿತೆವು. ಹೆಂಗಸರು ಕ್ಯಾಸ್ಟೀಲಿಯನ್ (Castilian) ರೀತಿಯಲ್ಲಿ ಮೈಯನ್ನೆಲ್ಲಾ ಮುಚ್ಚಿಕೊಂಡಿದ್ದರು. ದೋಣಿಯಲ್ಲಿ ನದಿಯನ್ನು ಏರುತ್ತಾ ಅಷ್ಟಮಿ ಎಂಬ ಸ್ಥಳದಲ್ಲಿ ಇಳಿದೆವು. ಆ ಹೆಂಗಸು ತನ್ನ ಆಳುಗಳಿಗೆ ಹೇಳಿ ನನ್ನ ಸಾಮಾನು ಇಳಿಸಿ ಅಲ್ಲಿಂದ ತನ್ನ ಮನೆಗೆ ಕರೆದುಕೊಂಡು ಹೋದಳು. ರಾತ್ರಿ ಹತ್ತು ಗಂಟೆಯಾಗಿತ್ತು. ನಾನೂ ನನ್ನ ಸೇವಕರೂ ಆಕೆಯ ಮನೆಯಲ್ಲಿ ಉಳಿದೆವು. ಬೆಳಿಗ್ಗೆ ನನ್ನ ಸೇವಕರು ಪಲ್ಲಕ್ಕಿ ಸಿದ್ಧಪಡಿಸುತ್ತಿರುವಾಗ ಆ ಹೆಂಗಸು ನನ್ನನ್ನು ಕರೆದುಕೊಂಡುಹೋಗಿ ಅವಳ ಮನೆ ತೋಟ-ತುಡಿಕೆ ಎಲ್ಲಾ ತೋರಿಸಿದಳು. ತನಗೆ ಬರುವ ಆದಾಯ ಬಾಡಿಗೆ-ಬಂಕ ಏನೆಂದು ಹೇಳಿದಳು. ಇನ್ನೂ ಹೆಚ್ಚು ಕಾಲ ತನ್ನನ್ನು ಅಲ್ಲಿ ಉಳಿಸಿಕೊಳ್ಳುವ ಅಪೇಕ್ಷೆಯನ್ನೂ ತಿಳಿಸಿದಳು. ಆದರೆ ಇಷ್ಟರಲ್ಲಿ ನನ್ನ ಪಲ್ಲಕ್ಕಿ ಸಿದ್ಧವಾಗಿತ್ತು. ಅದರಲ್ಲಿ ಕುಳಿತು ಆಕೆಗೆ ನಮಸ್ಕಾರ ಹೇಳಿ ನನ್ನ ಭೂಪ್ರಯಾಣ ಆರಂಭಿಸಿದೆ. ಬೆಟ್ಟ ಕಾಡುಗಳ ಮಧ್ಯೆ ದಾರಿ ಸಾಗಿತು. ತತೋಳಿ (Tatoly=ಬಹುಶಃ ತಳವಳಿ ಅಥವಾ ಬೆಂಚವಳ್ಳಿ) ಎಂಬಲ್ಲಿ ಟೋಲ್ ಕೊಟ್ಟು ಮುಂದೆ ಸಾಗಿ ರಾತ್ರಿ ಕಲ್ವಾನ್ (Calvan) ಎಂಬ ಊರಿನಲ್ಲಿ ಬೀಡುಬಿಟ್ಟೆವು. ಇದು ಹಿಂದೂಗಳಿರುವ ದೊಡ್ಡ ಊರು. ನಾನು ಬಂದಿರುವುದು ಕೇಳಿ ಶಿವಾಜಿ ಕಡೆಯುವರು ಏನಾದರೂ ಗಿಟ್ಟಿಸಿಕೊಳ್ಳಬೇಕೆಂದು ಬಂದರು. ನಾನು ಪಾಸ್‌ಪೋರ್ಟ್ ತೋರಿಸಿದೆ. ಕೊಟ್ಟಷ್ಟು ತೆಗೆದುಕೊಂಡು ಹೋದರು.

ಡಿಸೆಂಬರ್ ೮–ಸೋಮವಾರ ಪ್ರಯಾಣ ಮುಂದುವರೆಯಿತು. ಬೆಟ್ಟಗುಡ್ಡಗಳ ಓರೆಯಲ್ಲಿ ದಾರಿ ಸಾಗಿತು. ಉದ್ದಕ್ಕೂ ಶಿವಾಜಿಯ ಸೈನ್ಯಗಳೇ! ಮೊಗಲನ ಕಡೆಯ ಸಿದಿಯಿಂದ ಪೆಟ್ಟುತಿಂದು ಓಡಿಬರುತ್ತಿದ್ದರು ಅವರು. ಸಿದಿಯು ದಭೋಲ್‌ಗೆ

ಮೇಲಿರುವ ಒಂದು ಬಂದರು—ಕೋಟೆಯ ಒಡೆಯ. ಶಿವಾಜಿಗೆ ಚಳ್ಳೆಹಣ್ಣು ತಿನ್ನಿಸುತ್ತಿದ್ದಾನೆ.

ಸಂಜೆ ಪಂಚಧಾರಾ ಎಂಬ ಊರಿನಲ್ಲಿ ಬಿಡಾರ. ಇಲ್ಲಿ ಒಂದು ನದಿ ಒಡೆದು ಐದು ಭಾಗವಾಗಿ ಹರಿಯುವುದರಿಂದ ಊರಿಗೆ ಈ ಹೆಸರು ಬಂದಿದೆ. ಈ ಊರನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಯಿತು. ಜನರೆಲ್ಲಾ ತಮ್ಮ ದನಕರುಗಳ ಸಮೇತ ಬೆಟ್ಟಗುಡ್ಡಗಳಿಗೆ ಓಡಿಹೋಗಿದ್ದರು. ಸಿದಿಯ ಸೈನಿಕರ ಹಾವಳಿಗೆ ಹೆದರಿ ಹೀಗೆ ಮಾಡಿದ್ದರು. ಹಾಳೂರಿಗೆ ಉಳಿದವನೇ ಗೌಡ ಎಂಬಂತೆ ನಾವು ನಮಗೆ ಬೇಕಾದ ಮನೆಯಲ್ಲಿ ಇಳಿದುಕೊಂಡೆವು. ನಾವು ಹಾಕಿದ ಬೆಂಕಿಯನ್ನು ಬೆಟ್ಟದ ಮೇಲಿಂದಲೇ ನೋಡುತ್ತಿದ್ದ ಹಳ್ಳಿಯವರ ಪೈಕಿ ಕೆಲವರು ನಮ್ಮ ಬಳಿಗೆ ಬಂದು ಅಲ್ಲಿ ಇರುವುದು ಕ್ಷೇಮವಲ್ಲವೆಂದೂ ಇನ್ನೊಂದು ಊರಿಗೆ ಹೋಗಬೇಕೆಂದೂ ತಿಳಿಸಿದರು. ನಾವು ಸಿದಿಯ ಕಡೆಯವರಿಗೆ ಹೆದರುವುದಿಲ್ಲ ಎಂದು ರಾತ್ರಿ ಸರಿಯಾದ ಕಾವಲಿಗೆ ಏರ್ಪಾಡು ಮಾಡಿಕೊಂಡು ಅಲ್ಲಿಯೇ ತಂಗಿದೆವು.

ಮಾರನೆಯ ದಿನ ದೋಣಿಯೊಂದರಲ್ಲಿ ನದಿ ದಾಟಿ ಮರಗಿಡಗಳ ತಪ್ಪಲಿನಲ್ಲಿ ದಾರಿ ಸಾಗಿಸಿದೆವು. ಸಂಜೆಗೆ ಮಿಗ್ನೆರೆ (Megnere = ಬಹುಶಃ ವಿನ್ಹೇರಾ) ಎಂಬ ಊರಿಗೆ ಬಂದೆವು. ಅಲ್ಲಿನ ಕಾಡು ಎಷ್ಟು ಒತ್ತಾಗಿದೆ ಎಂದರೆ ಹಗಲು ಹೊತ್ತೂ ಸೂರ್ಯನ ರಶ್ಮಿ ಕಾಣಿಸುವುದಿಲ್ಲ. ಇಲ್ಲಿ ಒಂದು ಬಗೆಯ ಹಿಂದೂಗಳು ಇದ್ದಾರೆ. ತುಂಬಾ ಮೂಢನಂಬಿಕೆಯ ಜನ. ಇವರು ತಮ್ಮ ಮನೆಯಲ್ಲಿ ಇಳಿಯಲು ಅವಕಾಶ ಕೊಡದೆ ಬಜಾರ್‌ನಲ್ಲಿ ಇಳಿದುಕೊಳ್ಳಿ ಎಂದರು. ತಮ್ಮ ಮನೆಗೆ ಬೇರೆಯವರು ಬಂದರೆ ತಮ್ಮನ್ನು ಜಾತಿಯಿಂದ ಹೊರಗೆ ಹಾಕಿಬಿಡುತ್ತಾರೆಂದು ಹೇಳಿದರು.

ಬೆಳಿಗ್ಗೆ ಹೊರಟು ಬೆಟ್ಟಗುಡ್ಡಗಳನ್ನು ಏರಿಳಿಯುತ್ತಾ ಹಸಿರಿನಿಂದ ಕೂಡಿದ ಬಹು ಸೊಗಸಾದ ಪ್ರದೇಶದಲ್ಲಿ ದಾರಿ ಸಾಗಿಸಿ ಪಾಳುಬಿದ್ದಿದ್ದ ಕೈರೆ (Kaire = Khed) ಎಂಬ ಊರಿನಲ್ಲಿ ತಂಗಿ ಮತ್ತೆ ಬೆಳಿಗ್ಗೆ ಹೊರಟು ಖೇಡ್‌ನದಿ ದಾಟಿ ಮತ್ತೆ ಬೆಟ್ಟಗುಡ್ಡಗಳ ಮಧ್ಯೆ ಹೋಗುತ್ತಿರುವಾಗ ಅಕ್ಕಿ ಮುಂತಾದ ದವಸಧಾನ್ಯದ ಚೀಲಗಳನ್ನೂ ಪಿಂಡಿಗಳನ್ನೂ ಹೊತ್ತು ಸಾಗುತ್ತಿದ್ದ ನೂರಾರು ಜನ ಹೆಂಗಸರನ್ನೂ ಗಂಡಸರನ್ನೂ ಕಂಡೆವು. ನೀವೆಲ್ಲಿಗೆ ಹೋಗುತ್ತೀರಿ ಎಂದು ಕೇಳಿದಾಗ ಅವರು ಶಿವಾಜಿ ಸೈನ್ಯಕ್ಕೆ ಸಾಮಾನು ಸರಬರಾಜು ಮಾಡಲು ಹೋಗುತ್ತಿರುವುದಾಗಿಯೂ, ಹೀಗೆ ಸುತ್ತಮುತ್ತ ಹದಿನೈದು ಹರಿದಾರಿಯೊಳಗಿನ ಊರಿನವರೆಲ್ಲಾ ಹೀಗೆಯೇ ಮಾಡಬೇಕಾಗಿದೆಯೆಂದೂ ತಿಳಿಸಿದರು. ಸಂಜೆಗೆ ಚಿಪ್ಲುನ್ ಎಂಬ ಊರಿಗೆ ಬಂದೆವು. ಸಿದಿಯ ಧಾಳಿಯನ್ನೆದುರಿಸಲು ಶಿವಾಜಿ ಕಡೆಯ ಸೈನ್ಯ ಸಿದ್ಧತೆ ನಡೆಸಿತ್ತು. ಶಿವಾಜಿ ಬಹು ದೂರದಲ್ಲಿ ಎಲ್ಲೋ ತನ್ನ ದಂಡಯಾತ್ರೆಯಲ್ಲಿ ತೊಡಗಿದ್ದಾನೆ. ಇದನ್ನು ಉಪಯೋಗಿಸಿಕೊಂಡು ಸಿದಿ ತನ್ನ ಆಟ ಆಡುತ್ತಿದ್ದಾನೆ. ನಾನು ಇಲ್ಲಿ ತಂಗಿದ್ದಾಗ ನಮ್ಮ ರಾಜಾಪುರ್ ಕಂಪೆನಿಯು ಸೂರತ್ತಿಗೆ ಬರೆದು ಕಳುಹಿಸಿದ

ಕಾಗದ ಪತ್ರಗಳನ್ನು ತೆಗೆದುಕೊಂಡು ಹೊರಟಿದ್ದ ಚರಭಟನೊಬ್ಬ ಸಿಕ್ಕಿದ. ಈ ಕಾಗದ ಪತ್ರಗಳು ಸೆಂಟ್ ಥೋಮಿನಿಂದ ಬಂದವುಗಳು. ಅಲ್ಲಿರುವ ಫ್ರೆಂಚ್ ವೈಸ್‌ರಾಯಿಯ ಕಾರುಬಾರುಗಳನ್ನು ಆ ಪತ್ರಗಳಲ್ಲಿ ಹೇಳಲಾಗಿತ್ತು.

ಡಿಸೆಂಬರ್ ೧೩ನೆಯ ಮಂಗಳವಾರ—ಬೆಳಿಗ್ಗೆ ಪ್ರಯಾಣ ಹೊರಟು ಬಯಲು ಪ್ರದೇಶದಲ್ಲಿ ಹೋಗುತ್ತಿರುವಾಗ ಕೈಯಲ್ಲಿ ಆಯುಧಗಳನ್ನು ಹಿಡಿದು ಹೋ ಹೋ ಎಂದು ಕಿರುಚಿಕೊಳ್ಳುತ್ತಿದ್ದುದನ್ನು ಕೇಳಿ ಏನೆಂದು ತಿಳಿಯಲು ನಾವು ನಿಂತೆವು. ಎರಡು ಮೂರು ಗುಂಡಿನ ಏಟುಗಳ ಶಬ್ದಗಳನ್ನು ಕೇಳಿದೆವು. ಇದ್ದಕ್ಕಿದ್ದಂತೆ ಒಂದು ಕಡೆಯಿಂದ ಒಂದು ಕಾಡುಹಂದಿಯೂ, ಒಂದು ಹುಲಿಯೂ, ಒಂಟೆಯ ಗಾತ್ರದ ಎರಡು ನೀಲಗಾಯಿಗಳೂ ಧಾವಿಸಿ ಬಂದವು. ರಾತ್ರಿ ಅಕ್ಕಪಕ್ಕದ ಬೆಟ್ಟಗುಡ್ಡಗಳಿಂದ ಹೊಟ್ಟೆ ಪಾಡಿಗಾಗಿ ಬಂದಿದ್ದು ಜನರ ಕಣ್ಣಿಗೆ ಬಿದ್ದ ಅವನ್ನು ಹೊಡೆಯಲು ಇಷ್ಟೆಲ್ಲಾ ಚೀರಾಟ ನಡೆಯುತ್ತಿತ್ತು. ಹುಚ್ಚರಂತೆ ಕೂಗಾಡುತ್ತಿದ್ದ ಜನರು ಏಟುತಿಂದ ಹುಲಿಯನ್ನು ಹೊಡೆಯಲು ಹೋದಾಗ ಅದು ಭೂಮಿ ನಡುಗುವಂತೆ ಗರ್ಜಿಸುತ್ತ ಇವರ ಮೇಲೆಯೇ ಎರಗಿತು. ಇಬ್ಬರ ಮೇಲೆ ಬಿದ್ದು ಅವರನ್ನು ಚಿಂದಿ ಚಿಂದಿ ಮಾಡಿಬಿಟ್ಟಿತು. ಕೊನೆಗೆ ನಾನು ನನ್ನ ಪಿಸ್ತೂಲಿನಿಂದ ಒಂದು ಗುಂಡು ಹಾರಿಸಿ ಅದರ ಸದ್ದಡಗಿಸಿದೆ. ಸತ್ತವರ ಹೆಂಗಸರು ಮಕ್ಕಳ ಗೋಳಾಟ ಕೇಳಲಾರದೆ ನನ್ನ ಹಾದಿ ಹಿಡಿದೆ.

ಮಧ್ಯಾಹ್ನ ಘಟ್ಟಗಳ ಬಳಿ ಸಾಗುತ್ತಿರುವಾಗ ಸ್ನಾನ ಮಾಡುತ್ತ ಬಟ್ಟೆ ಒಣಗಿಸಿ ಕೊಳ್ಳುತ್ತಿದ್ದ ಜನರನ್ನು ಕಂಡೆ. ನನ್ನ ಸೇವಕರೆಲ್ಲ ಹಿಂದುಗಳು. ಅವರು ಇಲ್ಲಿ ಪವಿತ್ರವಾದ ನೀರಿನ ಬುಗ್ಗೆಗಳಿವೆಯೆಂದೂ, ಅಲ್ಲಿ ಸ್ನಾನ ಮಾಡಿದರೆ ತಮ್ಮ ಪಾಪ ಪರಿಹಾರವಾಗುವುದೆಂದೂ ಹೇಳಿ ಸ್ನಾನಕ್ಕೆ ಇಳಿದರು. ನಾನೂ ಸ್ನಾನ ಮಾಡಿದೆ. ಒಂದು ಬುಗ್ಗೆಯಿಂದ ಕೊರೆಯುವ ತಣ್ಣೀರು ; ಇನ್ನೊಂದರಿಂದ ಸುಡು ಸುಡುವ ಬಿಸಿನೀರು. ಎರಡೂ ಸೇರಿದಾಗ ಸ್ನಾನಕ್ಕೆ ಹಿತವಾದ ನೀರು[೧] ! ಆಶ್ಚರ್ಯವಾಯಿತು. ಆನಂದವಾಗಿ ಸ್ನಾನ ಮಾಡಿಕೊಂಡು ನಮ್ಮ ಪ್ರಯಾಣ ಮುಂದುವರೆಸಿದೆವು.

ಸಂಜೆ ಸಂಗಮೇಶ್ವರ ಎಂಬ ಊರಿನಲ್ಲಿ ತಂಗಿದೆವು. ಊರಿನವರೆಲ್ಲಾ ಓಡಿ ಹೋಗಿದ್ದರು. ಬಿಟ್ಟುಹೋದ ಒಂದು ದೊಡ್ಡಮನೆಯಲ್ಲಿ ನನ್ನ ಬಿಡಾರ ಹಾಕಿದೆ. ಇಷ್ಟರಲ್ಲಿ ಕೆಲವು ರಾವುತರು ವೇಶ್ಯೆಯರ (Courtesans) ಸಮೇತ ಅಲ್ಲಿಗೆ ಬಂದು ನಾವು ಆ ದೊಡ್ಡಮನೆಯಲ್ಲಿ ಬಿಡಾರ ಮಾಡಿದ್ದಕ್ಕೆ ತಕರಾರು ಮಾಡಲಾರಂಭಿಸಿದರು. ನಾನು ನನ್ನ ಪಾಸ್‌ಪೋರ್ಟ್ ತೋರಿಸಿ ನನ್ನ ತಂಟೆಗೆ ಬಂದರೆ ನೆಟ್ಟಗಾಗುವುದಿಲ್ಲ ಎಂದು ಕೈಯಲ್ಲಿ ಪಿಸ್ತೂಲು ಹಿಡಿದೆ. ನನ್ನ ಆಳುಗಳೂ ಹಿಡಿದರು. ಆಗ ಅವರು ದಾರಿಗೆ ಬಂದರು. ನೀವು ಕುಡಿಯಲು ಮದ್ಯ ಕೊಟ್ಟರೆ ನಾವು ಕೋಳಿಗೀಳಿ ತಂದು ಬೇಯಿಸಿ

---

೧. ಇವು ಸಂಗಮೇಶ್ವರ ಮತ್ತು ಆರವಳ್ಳಿ ಮತ್ತು ತುರಾಳ್ ಹಳ್ಳಿಗಳಲ್ಲಿರುವ ಬಿಸಿನೀರಿನ ಬುಗ್ಗೆಗಳು.

ಕೊಡುತ್ತೇವೆ. ಒಟ್ಟಿಗೆ ತಿಂದು ಕುಡಿದು ಮಜವಾಗಿರಬಹುದು ಎಂದರು. ಇವರ ಸಹವಾಸ ಬೇಡವೆಂದು, ನನ್ನಲ್ಲಿ ಮದ್ಯ ಇಲ್ಲ ನಾನಾಗಲೇ ಊಟ ಮಾಡಿದ್ದೇನೆ ಎಂದು ಹೇಳಿ ಅವರಿಂದ ದೂರಾದೆ.

ಮಾರನೆಯ ದಿನ ಹೊರಟು ಎರಡು ದಿನಗಳ ಕಾಲ ಹಳ್ಳಕೊಳ್ಳ ಕೊರಕಲು ದಾರಿ ನಡೆದು ೧೬ನೆಯ ತಾರೀಖು ರಾಜಾಪುರ ತಲುಪಿದೆ. ಅಲ್ಲಿದ್ದ ನಮ್ಮ ಫ್ರೆಂಚ್ ಮನ್ ನನ್ನನ್ನು ವಿಶ್ವಾಸದಿಂದ ಕಂಡನು. ಕಂಪೆನಿಯ ವ್ಯವಹಾರಗಳನ್ನು ಆತ ತುಂಬ ವ್ಯವಸ್ಥೆಯಿಂದ ನಡೆಸುತ್ತಿದ್ದುದನ್ನು ನೋಡಿ ನನಗೆ ಸಂತೋಷವಾಯಿತು. ನಮ್ಮವರೆಲ್ಲ ಯಾವ ಪೋಲಿ ಕೆಲಸಗಳಿಗೂ ಕೈಹಾಕದೆ ಪರಸ್ಪರ ವೈಷಮ್ಯಗಳಿಲ್ಲದೆ ಇದ್ದರು. ದಿನವೆಲ್ಲ ವ್ಯಾಪಾರ ಸಾಪಾರದಲ್ಲಿ ತೊಡಗಿ ಸಂಜೆ ಅಡ್ಡಾಡಿಕೊಂಡು ಬರುತ್ತಿದ್ದರು. ಇವರೆಲ್ಲಾ ಅಲ್ಲಿದ್ದ ಬಿಸಿನೀರಿನ ಬುಗ್ಗೆಯಲ್ಲಿ ಸ್ನಾನ ಮಾಡಿ ದೇವರ ಪೂಜೆಪುನಸ್ಕಾರಗಳಲ್ಲಿ ತೊಡಗುತ್ತಿದ್ದರು. ಸ್ಥಳದ ಜನರೂ ಅಲ್ಲಿಯ ನಾಯಕನೂ ಅವರ ಬಗ್ಗೆ ಗೌರವ ತೋರುತ್ತಿದ್ದರು. ಇಷ್ಟಕ್ಕೆಲ್ಲಾ ಕಾರಣ ಆ ಫ್ಯಾಕ್ಟೊರಿಯ ಮುಖ್ಯಸ್ಥರಾದ ಮಾ. ಬೊರೊ (M. Boureau) ಅವರು. ನಾನು ಇಲ್ಲಿಗೆ ಬಂದಾಗ ಅವರು ತೆಲ್ಲಿಚೆರಿಗೆ ಹೋಗಿದ್ದರಿಂದ ಅವರನ್ನು ಕಾಣಲಾಗಲಿಲ್ಲ. ದೇವರಿಗೆ ಹೆದರಿ ಕೆಲಸ ಮಾಡುವ ಮನುಷ್ಯ ಈತ.

ರಾಜಾಪುರ ಶಿವಾಜಿಯ ಮುಖ್ಯಪಟ್ಟಣಗಳಲ್ಲಿ ಒಂದು. ಹಿಂದೂಗಳೂ ಮೂರರೂ ಇಲ್ಲಿದ್ದಾರೆ. ವ್ಯಾಪಾರ-ಸಾಪಾರ ಚೆನ್ನಾಗಿ ನಡೆಯುತ್ತವೆ. ಶ್ರೀಮಂತರಾದ ಕೆಲವು ವರ್ತಕರು ಇಲ್ಲಿ ನೆಲಸಿದ್ದಾರೆ. ನನ್ನ ಪಲ್ಲಕ್ಕಿಯನ್ನೂ ಆಳುಗಳನ್ನೂ ಬದಲಿಸುವ ಉದ್ದೇಶ ಇಲ್ಲಿ ಎರಡು ದಿನ ತಂಗಬೇಕಾಯಿತು.

೧೯ನೆಯ ಸೋಮವಾರ ಬೆಳಿಗ್ಗೆ ಹತ್ತು ಗಂಟೆಗೆ ರಾಜಾಪುರದಿಂದ ಹೊರಟು ಅಲ್ಲಿಯ ನದಿ ದಾಟಿ ಒಂದು ದೊಡ್ಡ ಬೆಟ್ಟ ಹತ್ತಿದೆವು. ಅಲ್ಲಿಂದ ದಾರಿ ಮಟ್ಟಸವಾಗಿತ್ತು. ಆ ಮಟ್ಟಸವಾದ ದಾರಿಯಲ್ಲಿ ಹಗಲೂ ರಾತ್ರಿ ಪ್ರಯಾಣ ಮಾಡಿ ಕೊರೆಪಟನ್ (Corepatan = Khorepatan) ಎಂಬಲ್ಲಿಗೆ ಬಂದೆವು. ಇದನ್ನು ಶಿವಾಜಿಯು ಕಿತ್ತುಕೊಂಡು ಭಾರೀ ಸೈನ್ಯ ಇಟ್ಟಿದ್ದಾನೆ.

ಮತ್ತೆ ಎರಡು ದಿನ ಗಿರಿಕಂದರಗಳಲ್ಲಿ ಪ್ರಯಾಣ ಸಾಗಿತು. ಎರಡು ಪಟ್ಟಣಗಳೂ ನಾಲ್ಕು ನದಿಗಳೂ ಅನೇಕ ಹಳ್ಳಗಳೂ ಸಿಕ್ಕಿದುವು. ಬಹು ಸುಂದರವಾದ ನಾಡು.

ಮಂಗಳವಾರ ಬಂಡೆ (Bande = Banda = ಬಂಡ)[೧] ಎಂಬ ಊರಿಗೆ ಸಂಜೆ ಹೊತ್ತಿಗೆ ಬಂದೆವು. ಇಲ್ಲೊಂದು ಚರ್ಚ್ ಇದೆ ಎಂದು ಕೇಳಿ ಅಲ್ಲಿಗೆ ಹೋದೆ. ಮೂವರು ಕಸರಿನ್ ಪಾದ್ರಿಗಳು ನನ್ನನ್ನು ವಿಶ್ವಾಸದಿಂದ ಕಂಡರು. ಈ ಊರು

---

೧. ಬಂಡೆ—ಸಾವಂತವಾಡಿಗೆ ಆರುಮೈಲಿ ದೂರದಲ್ಲಿರುವ ಒಂದು ಊರು.

ಶಿವಾಜಿಯ ಅಧೀನದಲ್ಲಿದೆ. ಬಿಜಾಪುರದ ಸುಲ್ತಾನನ ಧಾಳಿಯನ್ನು ಎದುರಿಸಲು ಇಲ್ಲಿ ಭಾರೀ ಸೈನ್ಯವೊಂದು ಸಿದ್ಧವಾಗಿದೆ.

೨೩ನೆಯ ತಾರೀಖು ಸಂಜೆ ನಾನು ಬಿಚೋಲಿಂ ತಲುಪಿದೆ. ಇಲ್ಲಿರುವ ಬಿಷಪ್ಪರಲ್ಲಿ ಇಳಿದುಕೊಂಡೆ. ಇವರು ನಡೆಸುವ ಚರ್ಚು ತುಂಬಾ ಚನ್ನಾಗಿದೆ. ಆದರೆ ಇವರಿಗೆ ಮೂರರ ಕಾಟದ ಜೊತೆಗೆ ಗೋವಾ ಪೋರ್ಚುಗೀಸರ ಕಾಟ. ಇವರ ಸ್ಥಾನಮಾನವನ್ನು ಗಮನಿಸದೆ ಅವರು ಕೊಡದ ಕಿರುಕುಳವಿಲ್ಲ. ತಾನು ರೋಮಿನಿಂದ ಬಂದಿರುವುದು ಅವರಿಗೆ ಸಹನೆ ಇಲ್ಲ. ಹೇಗಾದರೂ ಮಾಡಿ ತನ್ನನ್ನು ಗೋವಾಕ್ಕೆ ಸಾಗಿಸಿ ಅಲ್ಲಿ ಮತೀಯ ವಿಚಾರಣೆಗೆ (Inquisition) ಒಳಪಡಿಸಬೇಕೆಂದು ಸನ್ನಾಹ ಮಾಡು ತ್ತಿದ್ದಾರೆ ಎಂದು ತಿಳಿಸಿದರು. ಈ ಕಾರಣ ತಾನು ಹೊರಗೆಲ್ಲಿಯೂ ಹೋಗದೆ ಬಿಚೋಲಿಂನಲ್ಲಿಯೇ ಇರುವುದಾಗಿಯೂ ರೋಮಿಗೆ ಹೋಗಿ ಅಲ್ಲಿ ಓದಿಕೊಂಡು ಬಂದ ಮೇಲೆ ೨೨ ವರ್ಷಗಳಿಂದ ತನ್ನ ತಾಯಿಯನ್ನಾಗಲೀ ಬಂಧುಬಳಗವನ್ನಾಗಲೀ ನೋಡಿಯೇ ಇಲ್ಲವೆಂದೂ ಬಹಳ ಸಂಕಟದಿಂದ ಹೇಳಿಕೊಂಡರು. ಆದರೂ ಪೋರ್ಚು ಗೀಸರಿಗೆ ತನ್ನ ಕೈಲಾದ ಸಹಾಯ ಮಾಡುವುದನ್ನು ಬಿಟ್ಟಿಲ್ಲ ಎಂದರು.[೧]

ಬಿಚೋಲಿಂ ಬಹು ಸುಂದರವೂ ವಿಶಾಲವೂ ಆದ ಪಟ್ಟಣ. ಅದನ್ನು ತೆಂಗಿನ ಮರಗಳ ನಂದನವನವೇ ಎನ್ನಬಹುದು. ಮೂರರು, ಹಿಂದೂಗಳು ಮತ್ತು ಹಲವು ಕನರಿನ್ ಕ್ರೈಸ್ತರು ಇಲ್ಲಿಯ ನಿವಾಸಿಗಳು. ಇದು ಬಿಜಾಪುರದ ರಾಜನಿಗೆ ಸೇರಿದೆ. ಈ ಬಿಷಪ್ಪರು ನನಗೆ ನಾಲ್ಕುವರ್ಷಗಳಿಂದ ಗೊತ್ತು.[೨] ನನ್ನನ್ನು ಕಂಡು ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ಕ್ರಿಸ್ಮಸ್ ಹಬ್ಬ ಇಲ್ಲಿಯೇ ಕಳೆದುಕೊಂಡು ಹೋಗಿ ಎಂದು ಒತ್ತಾಯಿಸಿದರು. ಆದರೂ ನಾನು ಅವರ ಕ್ಷಮೆ ಬೇಡಿ ೨೪ನೆಯ ತಾರೀಖು ಗೋವಾಕ್ಕೆ ಹೊರಟೆ. ಮೂರು ಗಂಟೆ ಪ್ರಯಾಣ ಮಾಡಿ ದೊಡ್ಡ ನದಿಯೊಂದನ್ನು ಸಮೀಪಿಸಿದೆ. ಈ ನದಿ

---

೧. ಬಿಚೋಲಿಂ ಬಿಷಪ್: ಮನೂಚಿ ಹೇಳಿರುವ ಕನರೀಸ್ ಜನಾಂಗದ ಡಾಂ ಮಾಥ್ಯೂಸ್ ಎಂಬುವನು ಇವನೇ. ಈತ ಮೊಗಲ್ ಚಕ್ರವರ್ತಿ ಷಾಜಹಾನನನ್ನೂ ಭೇಟಿ ಮಾಡಿದ್ದುದಾಗಿ ತಿಳಿದು ಬಂದಿದೆ. ಗೋವೆಯ ಬಳಿಯ ದಿವಾರ್ ದ್ವೀಪದ ಈ ಬ್ರಾಹ್ಮಣ ಕ್ರೈಸ್ತಮತ ಸೇರಿ ಗೋವೆಯಲ್ಲಿ ಪಾದ್ರಿಯಾಗಿ ದೀಕ್ಷೆ ಪಡೆದು, ರೋಮಿಗೆ ಹೋಗಿ, ಅಲ್ಲಿ ಡಾಕ್ಟರ್ ಆಫ್ ಥಿಯಾಲಜಿ ಡಿಗ್ರಿ ಪಡೆದು ಇಂಡಿಯಾಕ್ಕೆ ಹಿಂದಿರುಗಿ, ಹಳೆ ಗೋವಾದ ಒಂದು ಚರ್ಚಿನಲ್ಲಿ ಪಾದ್ರಿಯಾದ. ಗೋವೆಯ ಆರ್ಚ್ ಬಿಷಪ್ ಮತ್ತು ವೈಸರಾಯರೊಡನೆ ಮನಸ್ತಾಪ ಮಾಡಿಕೊಂಡು ಅವರ ಮೇಲೆ ಬ್ರಾಹ್ಮಣರನ್ನು ಎತ್ತಿಕಟ್ಟಿದನೆಂದೂ ಗೊತ್ತಾಗುತ್ತದೆ. ಆಗ್ರಾದಲ್ಲಿದ್ದ ಮೊಗ್ರೂರ್ ಮಿಷನ್ ನೋಡಲು ಹೋದಾಗ ಷಾಹಜಾನನನ್ನು ಕಂಡಿರಬೇಕೆಂದು ತಿಳಿದುಬರುತ್ತದೆ. ಕೊನೆಯಲ್ಲಿ ಈತ ಪೋರ್ಚುಗೀಸರ ಅಧೀನಕ್ಕೆ ಒಳಪಡದ ಬಿಚೋಲಿಂನಲ್ಲಿ ಇರತೊಡಗಿದ. ಆಮೇಲೆ ಈತನ ಮೇಲೆ ಬಂದ ರಾಜದ್ರೋಹದ ಆಪಾದನೆಯನ್ನು ಎದುರಿಸಲು ರೋಮಿಗೆ ಹೋದವನು ಅಲ್ಲಿಯೇ ೧೬೭೮ರಲ್ಲಿ ಕಾಲವಾದ. ಅವನು ಸತ್ತಾಗ ವಯಸ್ಸು ೭೯.

೨. ಬಹುಶಃ ಕಾರ್ ಸೂರತ್ತಿನಲ್ಲಿದ್ದಾಗ ಈ ಬಿಷಪ್ಪನನ್ನು ಭೇಟಿ ಮಾಡಿರಬೇಕು, ಅಥವಾ ೧೬೭೮ರಲ್ಲಿ ಕಾರ್ ಮಲಬಾರ್ ತೀರಕ್ಕೆ ಬಂದಾಗ ಈ ಭೇಟಿ ಆಗಿರಬೇಕು.

ಹಲವಾರು ಶಾಖೆಗಳಾಗಿ ಒಡೆದು ಫಲವತ್ತಾದ ಅನೇಕ ದ್ವೀಪಗಳನ್ನು ಸೃಷ್ಟಿಸಿದೆ. ಇಲ್ಲಿ ಒಂದು ದೋಣಿ ಹತ್ತಿ ಬಹು ಸುಂದರವಾದ ತಾಣಗಳನ್ನೂ ಕೋಟೆ ಕೊತ್ತಳ ಗಳನ್ನೂ ಚರ್ಚುಗಳನ್ನೂ ಹಳ್ಳಿಪಳ್ಳಿಗಳನ್ನೂ ನೋಡುತ್ತಾ ಗೋವಾ ನಗರ ತಲುಪಿದೆ. ಕಾರ್ಮೆಲೈಟ್ ಫಾದರುಗಳೊಡನೆ ಬಿಡಾರ ಮಾಡಿದೆ. ಇವರಿರುವ ಮನೆ ಭವ್ಯವಾಗಿದೆ. ಇದರ ಹಿರಿಯರು ಒಬ್ಬ ಫ್ರೆಂಚ್‌ಮನ್. ಹೆಸರು ರೆವೆರೆಂಡ್ ಫಾದರ್ ಕಾರ್ನಿಲಿ (Corneille) ಎಂದು. ನನ್ನನ್ನು ಬಹು ಗೌರವದಿಂದ ಕಂಡರು.

ಕಾಲ ವ್ಯರ್ಥಮಾಡದೆ ನಾನು ಫ್ರೆಂಚ್ ಎಜೆಂಟರನ್ನು ನೋಡಲು ಹೋದೆ. ಈತ ಬಹು ಪ್ರಭಾವಶಾಲಿಯೂ ಭಾರಿ ಅನುಕೂಲಸ್ತನೂ ಆದ ಪೋರ್ಚುಗೀಸ್ ವರ್ತಕ. ಈತನಿಂದ ಸೆಂಟ್ ಥೋಮಿನ ವೈಸರಾಯಿಯ ಬಗ್ಗೆ ಹೆಚ್ಚು ವಿಷಯಗಳು ತಿಳಿದುವು. ಮತ್ತು ನನ್ನ ಮುಂದಿನ ಪ್ರಯಾಣದ ಬಗ್ಗೆ ವಹಿಸಬೇಕಾದ ಎಚ್ಚರಿಕೆ ಏನೆಂದೂ ತಿಳಿಸಿದರು.

ಡಿಸೆಂಬರ್ ೨೫ ಭಾನುವಾರ. ಈ ದಿನ ಕ್ರಿಸ್‌ಮಸ್ ದಿನ. ಆದರೆ ಎಲ್ಲಿಯೂ ಪ್ರಾರ್ಥನೆಯ ಸೊಲ್ಲೇ ಇರಲಿಲ್ಲ. ಚರ್ಚ್‌ನಿಂದ ಚರ್ಚ್‌ಗೆ ಓಡಿದೆ. ಎಲ್ಲಾ ಸ್ತಬ್ಧ. ಕೆಲವು ಕಾನ್‌ವೆಂಟ್‌ಗಳಿಗೆ ಹೋಗಿ ಬಾಗಿಲು ಗಂಟೆ ಬಾರಿಸಿದೆ. ದ್ವಾರಪಾಲಕರು ಮಲಗಿರುವ ಪಾದ್ರಿಗಳನ್ನು ಏಕೆ ಎಬ್ಬಿಸುತ್ತೀ ಎಂದು ಬೈದುಬಿಟ್ಟರು. ಎಂತಹ ಗತಿ ಒದಗಿತು. ಒಮ್ಮೆ ವೈಭವದಿಂದ ಮೆರೆದು ಕ್ರೈಸ್ತಧರ್ಮದ ಪೂಜೆ-ಪುರಸ್ಕಾರಗಳಿಗೆ ಹೆಸರಾದ ಗೋವಾ ನಗರಕ್ಕೆ!

ಹಿಂದಿರುಗಿ ಬಂದು ಕಾರ್ಮೆಲೈಟ್ ಫಾದರುಗಳಿಗೆ ನಡೆದಿದ್ದನ್ನೆಲ್ಲಾ ಹೇಳದೆ ಬಿಡ ಲಿಲ್ಲ. ಅವರು 'ಪೋರ್ಚುಗೀಸ್ ಪಾದ್ರಿಗಳ ವಿಷಯ ನಿಮಗೆ ಗೊತ್ತಿಲ್ಲ. ಅವರು ಕ್ರಿಸ್‌ಮಸ್ ಹಬ್ಬದ ಹಿಂದಿನ ರಾತ್ರಿ ಮಧ್ಯರಾತ್ರಿಯವರೆಗೆ ಪ್ರಾರ್ಥನೆ ಸಲ್ಲಿಸಿ ಮಾರನೆಯ ದಿನವನ್ನು ವಿಶ್ರಾಂತಿ ದಿನವೆಂದು ಭಾವಿಸಿ ಮನೆಗಳಲ್ಲಿದ್ದುಕೊಂಡು ಪಟ್ಟಾಗಿ ಕುಡಿದು ತಿಂದು ಮಲಗಿ ಕಾಲಕಳೆಯುತ್ತಾರೆ' ಎಂದರು. ಈ ವಿಚಿತ್ರ ಪದ್ಧತಿ ಕೇಳಿ ನನಗೆ ಆಶ್ಚರ್ಯವಾಯಿತು. ಪೋರ್ಚುಗೀಸ್ ಫಾದರುಗಳು ತಮ್ಮ ಬೋಧನೆ ಕೆಲಸ ಬಿಟ್ಟು ವ್ಯಾಪಾರ ಸಾಪಾರ, ಹೆಣ್ಣುಗಳ ಮತ್ತು ಮದ್ಯದ ಮಾರಾಟದಲ್ಲಿ ತೊಡಗಿರುತ್ತಾ ರೆಂಬುದು ನನ್ನ ಮೊದಲಿನ ಪ್ರವಾಸದಲ್ಲಿ ನನ್ನ ಗಮನಕ್ಕೆ ಬಂದದ್ದಾಗಿದೆ. ಪರ್ಷಿಯಾದ ಪಾದ್ರಿಯೊಬ್ಬ ಇಂತಹ ಕೆಲಸದಲ್ಲಿ ನಿರತನಾಗಿದ್ದುದು ನನಗೆ ಗೊತ್ತಿದ್ದ ವಿಷಯ.

೨೬ನೆಯ ತಾರೀಖು ಹಿಂದೊಮ್ಮೆ ವೈಭವದಿಂದ ಮೆರೆದ ಗೋವಾ ನಗರ ನೋಡಲು ಹೋದೆ. ಹಿಂದಿನ ವೈಭವ ಏನೂ ಕಾಣಲಿಲ್ಲ. ಊರಿನ ಮಧ್ಯೆ ಇರುವ ವೈಸರಾಯ್ ಭವನ ನೋಡಿದೆ. ಅಲ್ಲಿ ಎಲ್ಲಾ ವೈಸರಾಯರುಗಳ, ಅವರ ಬಳಿಗೆ ಕಳುಹಿಸಲ್ಪಟ್ಟ ಇಂಡಿಯಾದ ರಾಜರುಗಳ ಹಾಗೂ ದೊರೆಗಳ ರಾಯಭಾರಿಗಳ

ಮತ್ತು ಅವರನ್ನು ಗೌರವಿಸುವ ಸಂದರ್ಭದಲ್ಲಿ ಚಿತ್ರಿಸಿದ ಚಿತ್ರಪಟಗಳ[೧] ಶಾಲೆಯಲ್ಲದೆ ಬೇರೇನೂ ಹೇಳಿಕೊಳ್ಳುವಂಥಾದ್ದು ಕಾಣಲಿಲ್ಲ.

ಒಟ್ಟಿನಲ್ಲಿ ಪೂರ್ವದ ಕಣಜ ಹಾಗೂ ರಾಣಿ ಎನಿಸಿಕೊಂಡ ಗೋವಾ ಈಗ ಕೊನೆಯುಸಿರೆಳೆಯುತ್ತಿದೆ. ಗೋವೆಯ ಅದ್ದೂರಿಯ ವೈಭವ ಇಂದು ಮಾಯವಾಗಿದೆ. ಒಮ್ಮೆ ಇದರ ಕೃಪಾಕಟಾಕ್ಷಗಾಗಿ ಪೂರ್ವದೇಶದ ದೊರೆಗಳು ಹಾತೊರೆಯುತ್ತಿದ್ದರು. ಇಂಡಿಯಾದ ರಾಯಭಾರಿಗಳು ಬಹು ಬೆಲೆಯಾದ ಬಹುಮಾನಗಳ ಸಮೇತ ಬರುತ್ತಿದ್ದರು. ರಾಜರೂ ದೊರೆಗಳೂ ತಮ್ಮ ಹೆಣ್ಣುಮಕ್ಕಳನ್ನು ವೈಸರಾಯರ ಪತ್ನಿಯರ ಊಳಿಗಕ್ಕೆ ಕಳುಹಿಸುತ್ತಿದ್ದರು. ಪೋರ್ಚುಗೀಸ್ ಮಹಿಳೆಯರು ಹೊರಗೆ ಹೊರಡುವಾಗ ನವರತ್ನಗಳಿಂದ ಅಲಂಕರಿಸಿಕೊಂಡು ಪಲ್ಲಕ್ಕಿಗಳಲ್ಲಿ ಹೋಗುತ್ತಿದ್ದರು. ಆಳುಕಾಳುಗಳಿಂದ ಸೇವೆಯನ್ನು ಕೈಗೊಳ್ಳುತ್ತ ತಾವು ಮಾನವ ದೇವತೆಗಳೋ ಎಂಬಂತೆ ನಜರು ಮಜರುಗಳನ್ನು ಪಡೆಯುತ್ತಿದ್ದರು. ಆ ಸಿರಿಸಂಪತ್ತಿನ ಸ್ತ್ರೀಯರಾಗಲೀ, ಬೇರೆಲ್ಲಾ ವೈಭವಗಳಾಗಲೀ ಈಗ ಇಲ್ಲ. ಆ ಶ್ರೀಮಂತಿಕೆಯ ಅದ್ದೂರಿಯ ಬಾಳಿಗೆ ದೇವರು ತಕ್ಕ ಶಾಸ್ತಿಮಾಡಿದ್ದಾನೆ. ಆದರೂ ತಮ್ಮ ಬಡತನ ಹಾಗೂ ಕೀಳ್ತನದ ಬಾಳಿನಲ್ಲಿ ಈಗಲೂ ಅದನ್ನು ತೋರಿಸಲು ಯತ್ನಿಸುತ್ತಿದ್ದಾರೆ. ಗೋವೆಯ ಘನತೆಯೆಲ್ಲಾ ಕಣ್ಣುಮುಚ್ಚಿ ಬಿಡುವುದರೊಳಗೆ ಮಂಗಮಾಯವಾಯಿತು. ಭಾರಿ ವ್ಯಾಪಾರ ಸಾಪಾರ ನಿಂತುಹೋದುವು. ಅವರು ಸಂಪಾದಿಸಿದ್ದ ಸಿರಿಸಂಪತ್ತೆಲ್ಲ ಹೊಗೆಯಂತೆ ಹಾರಿಹೋಯಿತು. ಹೊಸಬರು ಪೋರ್ಚುಗಲ್‌ನಿಂದ ಬಂದರು. ಅವರು ತಂದದ್ದೆಲ್ಲ ಅರೆಗಳಿಗೆಯಲ್ಲಿ ಮಾಯವಾಯಿತು. ಇದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ. ಮೊದಲು ನೋಡಲು ಗೌರವಸ್ಥರೂ ಆಡಳಿತ ನಡೆಸುವ ಯೋಗ್ಯತೆ ಉಳ್ಳವರನ್ನೇ ಇಲ್ಲಿಗೆ ಕಳುಹಿಸುತ್ತಿದ್ದರು. ಆಮೇಲೆ ಬಂದವರೆಲ್ಲ ಜೈಲಿನಿಂದ ಹೊರಗಟ್ಟಿದ ಕಳ್ಳಬಡವರು. ಇವರಿಗೆ ಹಣ ಗಳಿಸಬೇಕೆಂಬ ಆಸೆಗಿಂತ ಇದ್ದುದನ್ನು ಕಳೆಯುವುದೇ ಹೆಚ್ಚು ಆಪ್ಯಾಯಮಾನವಾಗಿ ಕಂಡಿತು. ಗೋವೆಯಲ್ಲಿ ಈಗ ಅನುಕೂಲವಾಗಿರುವವರು ಯಾರು ಎಂದರೆ ಇದ್ದುದನ್ನೆಲ್ಲಾ ದೋಚಿಕೊಂಡವರು ಮತ್ತು ಅಲ್ಲಿ ಇಲ್ಲಿ ಮಾಡಿದ ಆಸ್ತಿಯಿಂದ ಸಂಪಾದನೆ ಪಡೆಯುತ್ತಿರುವವರು. ಇವರಲ್ಲಿ ಪಾದ್ರಿಗಳೂ ಫಿದಾಲ್ಗೋಗಳೂ ಎತ್ತಿದ ಕೈ. ಈಗಿರುವ ವೈಸರಾಯ್ ಫರ್ನಾಂಡೋಗೆ ಹೆಣ್ಣುಗಳ ಮಧ್ಯೆ ಕಾಲಕಳೆಯುತ್ತ ವಿಲಾಸ ಜೀವನ ನಡೆಸುವುದಲ್ಲದೆ ಬೇರೊಂದು ಗೊತ್ತಿಲ್ಲ. ಮೂರು ಹೊತ್ತು ಅವರನ್ನು ಬಿಟ್ಟು ಅಗಲುವುದಿಲ್ಲ. ಕಷ್ಟಪಟ್ಟು ಕೂಡಿಹಾಕಿದವರ ಆಸ್ತಿಪಾಸ್ತಿಗಳನ್ನು ಕಿತ್ತುಕೊಂಡು ಶ್ರೀಮಂತನಾಗುವ ಒಂದು ಅತ್ಯುತ್ತಮವಾದ ಉಪಾಯ ಹುಡುಕುತ್ತಿದ್ದಾನೆ. ಹಿಂದೂಗಳೂ ಮತ್ತಿತರ ವಿಗ್ರಹಾರಾಧಕರೂ ಇಲ್ಲಿ ನೆಲೆಸಿದರೆ ದೇವರು ಶಾಪ ಹಾಕುತ್ತಾನೆಂದು

---

೧. ಡಾ॥ ಜಾನ್ ಫ್ರೈಯರ್, ಮನೂಚಿ ಮತ್ತು ಪಿರಾರ್ಡ್ ದೇ ಲವಲ್ ಎಂಬ ಪ್ರವಾಸಿಗಳು ರಾಯಭಾರಿಗಳ ಚಿತ್ರಗಳು ಇದ್ದ ವಿಷಯ ಹೇಳಿಲ್ಲ. ಈಗಲೂ ವೈಸರಾಯ್‌ಗಳ ಚಿತ್ರಗಳಷ್ಟೇ ಇರುವುದು.

ಹೇಳಿ ಕ್ರೈಸ್ತರಿಗೆ ಮಾತ್ರ ಅಂದರೆ ಪೋರ್ಚುಗೀಸ್ ಕ್ರೈಸ್ತರು, ಬೆರಕೆ ಕ್ರೈಸ್ತರು ಮತ್ತು ಸ್ಥಳೀಯ ಕ್ರೈಸ್ತರು.—ಇವರಿಗೆ ಮಾತ್ರ ಇರಲು ಅವಕಾಶ ಕೊಡಲಾಗುತ್ತಿತ್ತು. ಈಗ ಇರುವ ವೈಸರಾಯ್‌ಯು ಹಿಂದಿನ ವೈಸರಾಯ್ ಗೋವೆಯು ಜನರಿಲ್ಲದೆ ಬಿಕೋ ಎನ್ನುತ್ತಿದೆ ಎಂದು ಹಿಂದೂಗಳೂ ವರ್ತಕರೂ ಬಂದು ಊರಿನಲ್ಲಿ ನೆಲಸಬಹುದೆಂದೂ ವ್ಯಾಪಾರ ಸಾಪಾರಗಳಲ್ಲಿ ತೊಡಗಬಹುದೆಂದೂ ಅನುಮತಿ ನೀಡಿದ.

ನಾನು ಮುಖ್ಯವಾಗಿ ಇಲ್ಲಿಗೆ ಬಂದ ಕೆಲಸ ಏನೆಂದರೆ ನಮ್ಮ ಫ್ರೆಂಚ್ ವೈಸರಾಯಿಗೆ ಡಚ್ಚರಿಂದ ಹಾಗೂ ಗೋಲ್ಕೊಂಡಾ ರಾಜನಿಂದ ಒದಗಿರುವ ತೊಂದರೆಯ ಬಗ್ಗೆ ಮತ್ತು ಇಡೀ ಇಂಡಿಯಾದಲ್ಲೆಲ್ಲಾ ಚೆಲ್ಲಾಪಿಲ್ಲಿಯಾಗಿರುವ ಫ್ರೆಂಚ್ ಜನರ ಬಗ್ಗೆ ಮಾತಾಡುವುದಾಗಿತ್ತು. ಅದಕ್ಕಾಗಿ ವೈಸರಾಯ್‌ರನ್ನು ನೋಡಲು ಹೋದೆ. ಅವರ ಮನೆಗೆ ಹೋಗಿ ಅವರನ್ನು ಕಂಡಾಗ ಅವರು ತೋರಿದ ಮರ್ಯಾದೆ ನೋಡಿ ಇಂಥ ಮನುಷ್ಯ ಇನ್ನಿಲ್ಲ ಎನ್ನುವಂತೆ ಕಂಡಿತು. ಯುರೋಪಿಯನ್‌ರ ವಿಷಯ ಮತ್ತು ಇತರ ಸಣ್ಣಪುಟ್ಟ ವಿಷಯಗಳ ಪ್ರಸ್ತಾಪ ಮಾಡುವವರೆಗೂ ಹೀಗೆ ನಡೆದುಕೊಂಡವರು ಎಲ್ಲೆಲ್ಲೋ ಚೆದುರಿಹೋಗಿರುವ ಫ್ರೆಂಚರನ್ನು ಸೂರತ್ತಿಗೆ ಕಳುಹಿಸಿಕೊಡುವ ವಿಷಯ ಎತ್ತಿದಾಗ ಸಿಡಿಲುಬಡಿದವರಂತಾಗಿಬಿಟ್ಟರು. 'ನಮ್ಮ ವೈಸರಾಯ್' ಎಂಬ ಮಾತನ್ನು ನನ್ನ ಬಾಯಿಂದ ಕೇಳಿದಕೂಡಲೇ ಪೋರ್ಚುಗೀಸರಿಗೆ ಫ್ರೆಂಚರ ಮೇಲಿದ್ದ ಅಸೂಯೆ ಎಷ್ಟು ಎಂಬುದು ಎದ್ದು ಕಂಡಿತು. 'ಏನು? ಸೆಂಟ್ ಥೋಮಸ ಫ್ರೆಂಚ್ ವೈಸರಾಯಿಯೆ? ಸೆಂಟ್ ಥೋಮನ್ನು ಕಟ್ಟಿದ್ದು ಪೋರ್ಚುಗೀಸರು ಎಂಬುದೂ. ಅದು ಅವರಿಗೆ ಸೇರಿದ್ದೆಂಬುದೂ ನಿಮಗೆ ತಿಳಿದಿಲ್ಲವೆ?' ಎಂದರು. ಅದಕ್ಕೆ ನಾನು 'ಅಲ್ಲಿಂದ ಪೋರ್ಚುಗೀಸರನ್ನು ಓಡಿಸಿ ಹತ್ತು ವರ್ಷ ಅದನ್ನು ವಶಪಡಿಸಿಕೊಂಡಿದ್ದ ಮೂರರನ್ನು ಹೊರಗಟ್ಟಿದವರು ಫ್ರೆಂಚರಲ್ಲವೇ?' ಎಂದಾಗ ಅವರು. 'ಅದು ಫ್ರೆಂಚರಿಗೆ ಸೇರಿದ್ದರೂ ಪೋರ್ಚುಗೀಸರಿಗೇ ಸೇರಿದಂತೆ' ಎಂದು ಉತ್ತರಿಸಿದರು. ಅವರ ಮಾತಿನ ಧಾಟಿಯಿಂದ ಅವರಿಗೆ ಫ್ರೆಂಚರನ್ನು ಕಂಡರೆ ಸುತಾರಾಂ ಆಗುವುದಿಲ್ಲ ಎಂಬುದು ಸ್ಪಷ್ಟವಾಯಿತು. ಮಾತುಕತೆಗಳು ತಣ್ಣಗಾಗುತ್ತಾ ಬಂದುವು. ಅವರ ಸೇವೆಯಲ್ಲಿರುವ ಫ್ರೆಂಚರನ್ನು ಪಡೆಯುವುದು ಆಗದ ಕೆಲಸ ಎಂದುಕೊಂಡ ನಾನು ಬಂದ ದಾರಿಗೆ ಸುಂಕ ಇಲ್ಲವೆಂದು ಅವರಿಂದ ಬೀಳ್ಕೊಂಡು ಹೊರಗೆ ಬಂದೆ.

ಇನ್ನೆರಡು ದಿವಸ ಗೋವೆಯಲ್ಲಿದ್ದ ವೇಳೆ ಕೆಲವು ಫ್ರೆಂಚರನ್ನು ಕಳ್ಳತನವಲ್ಲಿ ನಗರದಿಂದ ಹೊರಗೆ ಕಳುಹಿಸುವ ಪ್ರಯತ್ನ ಮಾಡಿದೆ. ಇದು ವೈಸರಾಯ್‌ಗೆ ಗೊತ್ತಾಗಿ ಎಲ್ಲೆಲ್ಲೂ ಬೇಹುಗಾರರನ್ನಿಟ್ಟು ಯಾರೂ ಹೊರಗೆ ಹೋಗದಂತೆ ತಡೆದುಬಿಟ್ಟ. ಹೀಗಾಗಿ ನನ್ನ ಯೋಚನೆಗಳೆಲ್ಲಾ ತಲೆಕೆಳಕಾದುವು.

ಗೋವೆಯಿಂದ ದೋಣಿಯಲ್ಲಿ ಬಿಜೋಲಂಗೆ ಹಿಂದಿರುಗಿ ಬಿಷಪ್ಪರನ್ನು ಕಂಡೆ. ಅವರ ಪ್ರೀತಿ ವಿಶ್ವಾಸಗಳನ್ನು ಕಂಡು ಗೋವೆಯಲ್ಲಿ ಎಂಥ ಕಾಲ ವ್ಯರ್ಥಮಾಡಿದೆ

ಎಂದು ಪರಿತಪಿಸಿದೆ. ಸ್ವಲ್ಪ ಹೊತ್ತಿನಲ್ಲಿ ಮೂರ್ ಗೌರ್ನರ್ ಬಿಷಪ್ಪನ ಮನೆಗೆ ಬಂದನು. ನಾನು ಬಿಜಾಪುರಕ್ಕೆ ಹೋಗುತ್ತೇನೆಂದು ತಿಳಿದು ಅಲ್ಲಿಗೆ ಹೋಗಲು ಸರಿಯಾದ ಬಂದೋಬಸ್ತು ಮಾಡುವುದಾಗಿ ಹೇಳಿದ. ಬಿಜಾಪುರದ ರಾಜರಿಗೆ ಫ್ರೆಂಚರ ಸ್ನೇಹ ಬೇಕಾಗಿದೆಯೆಂದೂ ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಲು ರಾಜನು ಸಿದ್ಧನಾಗಿರುವುದಾಗಿಯೂ ಈಗಾಗಲೇ ರಾಯಬಾಗ್‌ನಲ್ಲಿ ಫ್ಯಾಕ್ಟೊರಿ ಸ್ಥಾಪಿಸಲು ಒಂದು ಗಡಂಗು ಕೊಟ್ಟಿರುವುದಾಗಿಯೂ ತಿಳಿಸಿದ. ರಾಯಬಾಗ್ ಬಿರ್ಟೋಲಂನಿಂದ ೬ ದಿನದಷ್ಟು ಪ್ರಯಾಣದ ದೂರದಲ್ಲಿದೆ.

ಮಾರನೆಯ ದಿವಸ ನಾನು ಮೂರ್ ಗೌರ್ನರನ ಮನೆಗೆ ಹೋದೆ. ನನಗೆ ಬೇಕಾದ್ದನ್ನೆಲ್ಲ ಒದಗಿಸಿ ಕಳುಹಿಸಿಕೊಟ್ಟ. ಬಿಷಪ್ಪರು ಪಲ್ಲಕ್ಕಿಯನ್ನೂ ಪ್ರಯಾಣಕ್ಕೆ ಬೇಕಾದ ದವಸಧಾನ್ಯಗಳನ್ನೂ ಒದಗಿಸಿದರು.

ಮಾರನೆಯ ದಿನ ಬಿಷಪ್ಪರ ಚರ್ಚಿನಲ್ಲಿ ಪ್ರಾರ್ಥನೆ ಸಲ್ಲಿಸಿ ಅವರ ಆಶೀರ್ವಾದ ಪಡೆದು ಪ್ರಯಾಣ ಆರಂಭಿಸಿದೆ. ಮಧ್ಯಾಹ್ನ ಎರಡು ಘಂಟೆಗೆ ಬತೌರಿ ( Batourary =ಬಹುಶಃ ಬಂಬುರ್ದೆ) ಎಂಬ ಊರು ಮುಟ್ಟಿದೆವು. ಇಲ್ಲಿ ನನ್ನ ಆಳುಗಳು ತಮಗೆ ಬೇಕಾದ ಕಾಳುಕಡ್ಡಿ ಕೊಂಡುಕೊಳ್ಳಲು ಅನುಮತಿ ಕೇಳಿದರು. ಈ ಕಾರಣ ಅಲ್ಲಿಯೇ ಆ ದಿನವನ್ನು ಕಳೆದೆ. ಬಹು ಸೊಗಸಾದ ಪ್ರಕೃತಿಸೌಂದರ್ಯದ ಮಧ್ಯೆ ಒಂದು ದಿನ ಕಳೆದು ಮಾರನೆಯ ದಿನ ಬೆಳಕು ಹರಿಯುವ ಹೊತ್ತಿಗೆ ಪ್ರಯಾಣ ಮುಂದುವರೆಸಿದೆವು.

ಬೆಟ್ಟಗುಡ್ಡಗಳಲ್ಲಿ ಕಣಿವೆ ಕಂದರಗಳಲ್ಲಿ ನಮ್ಮ ದಾರಿ ಸಾಗಿತು. ಒಮ್ಮೊಮ್ಮೆ ಒತ್ತಾದ ಕಾಡಿನಲ್ಲಿ ದಾರಿಯೇ ಕಾಣಿಸುತ್ತಿರಲಿಲ್ಲ. ತುಂಬಾ ಪ್ರಯಾಸಪಟ್ಟು ಸಂಜೆಗೆ ಶಿವಾಜಿಗೆ ಸೇರಿದ ಮೇದಿನ್ ( Medin = ಬಹುಶಃ Mulas ) ಎಂಬ ಊರನ್ನು ತಲುಪಿದೆವು. ರಾತ್ರಿ ಒಬ್ಬ ಹಿಂದುವಿನ ಮನೆಯಲ್ಲಿ ತಂಗಿದೆ. ಶಿವಾಜಿ ಕಡೆಯವರು ಬಂದು ದಾರಿಸುಂಕ ( transit duty )ಕೇಳಿದರು. ಕೊಟ್ಟೆ.[೧]

ಜನವರಿ ೩ನೆಯ ತಾರೀಖು ಎರಡು ಹರಿದಾರಿ ಎತ್ತರದ ದೊಡ್ಡಬೆಟ್ಟ ಹತ್ತಿ ತಡಕಾಡಿಕೊಂಡು ಹೋಗುತ್ತಿರುವಾಗ ನಡುಬೆಟ್ಟದಲ್ಲಿ ಭಾರಿ ಶಬ್ದ ಕೇಳಿಸಿತು. ಇದು ಕಾಡುಪ್ರಾಣಿಗಳ ಶಬ್ದವೆಂದು ನನ್ನ ಆಳುಗಳು ಆಯುಧ ಹಿಡಿದು ನಿಂತರು. ನಾನೂ ಹಾಗೇ ಮಾಡಬೇಕೆಂದರು. ಆ ಕೂಡಲೇ ಹಲವಾರು ಹುಲಿಗಳು ರಭಸದಿಂದ ನಮ್ಮ ಹಿಂದೆ ಮುಂದೆ ಸುತ್ತಾ ನುಗ್ಗುತ್ತಾ ಬಂದುವು. ಅವುಗಳನ್ನು ಹಿಂಬಾಲಿಸಿ ಮೂವತ್ತು ಕಾಡುಹಂದಿಗಳ ಹಿಂಡು ಓಡುತ್ತಾ ಬಂದಿತ್ತು. ಆ ಹಂದಿಗಳ ಹಿಂದೆ ಆರು ದೊಡ್ಡ ನಾಯಿಗಳು ಹಾರಿಬಂದು ಒಂದು ಹಂದಿಯನ್ನು ಅಡ್ಡಹಾಕಿ ಅದರ ಮೇಲೆ ಬಿದ್ದುವು. ಆ ಹಂದಿ ತನ್ನನ್ನು ಕಚ್ಚಿದ ನಾಯಿಗಳನ್ನೇ ಸ್ವಲ್ಪದೂರ ಎಳೆದುಕೊಂಡು ಹೋಯಿತು.

---

೧. ಕಾರ್ ಬಿರ್ಟೋಲಿನಿಂದ ಬೆಳಗಾವಿಗೆ ಹೋದ ದಾರಿ ಪಶ್ಚಿಮಘಟ್ಟದ 'ರಾಮಘಾಟ್' ಎಂದು ಹೇಳಬಹುದು. ಈ ಘಾಟ್ ಬೆಳಗಾವಿಗೆ ೩೦ ಮೈಲಿ ದೂರದಲ್ಲಿದೆ.

ತನ್ನನ್ನು ಹಿಡಿದ ಒಂದೆರಡು ನಾಯಿಗಳನ್ನು ಕಚ್ಚಿ ಹಿಡಿದು ಬೀಸಿ ಬೇರೆ ನಾಯಿಗಳ ಮೇಲೆ ಎತ್ತಿ ಒಗೆಯಿತು. ಆದರೆ ನಾಯಿಗಳು ತಮ್ಮ ಬೇಟೆ ಬಿಡಲಿಲ್ಲ. ನಾನು ನನ್ನ ಪಿಸ್ತೂಲಿನಿಂದ ಗುಂಡು ಹಾರಿಸಿದೆ. ಅದು ಹಂದಿಯ ಎರಡು ಚಪ್ಪೆಗಳ ಮೂಲಕ ತೂರಿಹೋದಾಗ ಮುದುರಿಬಿತ್ತು. ನಾಯಿಗಳ ಹಿಂದೆ ಇಬ್ಬರು ಬೇಟೆಗಾರರು ಎತ್ತರದಲ್ಲಿ ಕಾಣಿಸಿಕೊಂಡರು. ಒತ್ತಾದ ಮರಗಿಡಗಳನ್ನು ತೂರಿ ಕೆಳಗೆ ಇಳಿಯಲಾರದೆ ನಾಯಿಗಳನ್ನು ಕೂಗಿ ಕರೆದರು. ನಮ್ಮ ಆಳುಗಳು ಪ್ರತಿಯಾಗಿ ಕೂಗಿದರು. ಆ ಬೇಟೆಗಾರರು ಮರಗಿಡಗಳನ್ನು ಕಡಿದು ದಾರಿಮಾಡಿಕೊಂಡು ಕೆಳಗಿಳಿದುಬಂದರು. ಹುಲಿಚರ್ಮ ಹೊದ್ದಿದ್ದ ಅವರು ಇದ್ದಿಲಿನಷ್ಟು ಕಪ್ಪಾಗಿದ್ದರು; ಉದ್ದನೆಯ ಗಡ್ಡ ಬೆಳಸಿದ್ದರು. ಅವರ ಕೈಯಲ್ಲಿ ಚಿಪ್ಪುಕೊಡಲಿಯೂ ಹರಿತವಾದ ಆಯುಧಗಳೂ ಇದ್ದುವು. ನನಗೆ ಹೆದರಿಕೆಯಾಗುವಷ್ಟು ವಿಕಾರವಾಗಿದ್ದರು. ದೇವರು ಇಂಥವರನ್ನೇಕೆ ಸೃಷ್ಟಿಮಾಡಿದ ಎನಿಸಿತು ನನಗೆ.

ಕೊನೆಗೆ ಅವರು ನನ್ನ ಆಳುಗಳ ಜೊತೆ ಮಾತುಕತೆ ಆಡಿ ಪರಿಚಯ ಮಾಡಿಕೊಂಡು ಕುಡಿಯಲು ಹೆಂಡ ಕೊಟ್ಟರು. ನಾವು ಇಲ್ಲೇ ತಂಗಿದ್ದು ಮುಂದೆ ಹೋಗಬೇಕೆಂದು ಕೇಳಿಕೊಂಡರು. ಬಿದ್ದ ಹಂದಿಯನ್ನು ನಾಯಿಗಳಿನ್ನೂ ಕಿತ್ತಾಡುತ್ತಿದ್ದುವು. ಅಲ್ಲಿಗೆ ಹೋಗಿ ಹಂದಿಯನ್ನು ಕೊಯ್ದು ಅದರ ಕರುಳುಗಳನ್ನು ನಾಯಿಗಳಿಗೆ ಎಸೆದು ದೇಹ ವನ್ನು ತುಂಡುತುಂಡಾಗಿ ಕತ್ತರಿಸಿ ಕಾಲುಭಾಗ ನನಗೆ ಕೊಟ್ಟರು. ನಾನು ಅದನ್ನು ನನ್ನ ಸೇವಕರಿಗೆ ಕೊಟ್ಟೆ. ತಮ್ಮ ಗುಡಿಸಲಿನಲ್ಲಿ ಹಂದಿಮಾಂಸ ಬೇಯಿಸಿ ತಿನ್ನೋಣ ಎಂದರು ನನ್ನ ಸೇವಕರು; ಜೊಲ್ಲುಸುರಿಸಿದರು. ನಾನು ಅದಕ್ಕೆ ಒಪ್ಪಲಿಲ್ಲ. ಇದರಿಂದ ಇನ್ನೇನು ತಾಪತ್ರಯಗಳಿಗೆ ಸಿಕ್ಕಿಕೊಳ್ಳುತ್ತೇವೋ ಎಂದು ಹೆದರಿದ್ದೆ. ಆ ಇಬ್ಬರಿಗೆ ಸ್ವಲ್ಪ ಹೊಗೆಸೊಪ್ಪು ಕೊಟ್ಟೆ. ಅವರಿಗೆ ಬಹು ಖುಷಿಯಾಯಿತು. ತಮ್ಮ ಬೇಟೆ ಮುಂದುವರಿಸಿದರು. ನಾವು ನಮ್ಮ ದಾರಿ ಹಿಡಿದೆವು.

ಬೆಟ್ಟವನ್ನು ಸುತ್ತಿ ಸುತ್ತಿ ಮೇಲೇರಿದೆವು. ಸಾಕಾಗಿ ಹೋಗಿತ್ತು. ಅಲ್ಲಿ ಕೆಲವು ಮನೆಗಳೂ ಒಂದು ದೇವಸ್ಥಾನವೂ ಇದ್ದುವು. ಯಾರೋ ಹಿಂದೂಪುಣ್ಯಾತ್ಮ ಪ್ರಯಾಸ ಪಟ್ಟು ಬಂದ ಪ್ರಯಾಣಿಕರ ಸೌಕರ್ಯಕ್ಕಾಗಿ ಇವುಗಳನ್ನು ಕಟ್ಟಿಸಿದ್ದ. ಇಲ್ಲಿ ನನ್ನ ಆಳುಗಳು ಊಟಕ್ಕೆ ಕುಳಿತರು. ನಾನು ಮೂರುಗಂಟೆ ವಿಶ್ರಾಂತಿ ಪಡೆದೆ. ಬಿಜಾಪುರ ರಾಜ್ಯದ ಗಡಿ ಇಲ್ಲಿಂದ ಆರಂಭವಾಗುತ್ತದೆ. ದಾರಿ ಮಟ್ಟಸವಾಗಿದ್ದರೂ, ಒತ್ತಾದ ಕಾಡು. ಕಾಡುಪ್ರಾಣಿಗಳ ಹಾವಳಿಯೂ ಉಂಟು. ಸಂಜೆಹೊತ್ತಿಗೆ ಚಂದಗಾಲ[೧] ಎಂಬ ಪಟ್ಟಣಕ್ಕೆ ಬಂದೆವು. ಬಿಜಾಪುರ ರಾಜ್ಯದ ಮೊದಲನೆ ಊರು ಇದು. ಟೋಲು ಕಟ್ಟೆಗೆ ಹೋಗಿ ಮೂರುರೂಪಾಯಿ ದಾರಿಸುಂಕ ಕೊಟ್ಟೆವು. ಪಟ್ಟಣದ ಬಳಿ ಒಳ್ಳೆಯ

---

೧. ಚಂದಗಾಲ (Chandagala) ಬಹುಶಃ ಚಂದಗಡ. ತಾಮ್ರಪರ್ಣಿ ನದಿಯ ತೀರ ದಲ್ಲಿರುವ ಈ ಗಡ ಬೆಳಗಾವಿಯಿಂದ ೨೨ ಮೈಲಿ ದೂರದಲ್ಲಿದೆ.

ನದಿ ಇದೆ. ಈ ಪಟ್ಟಣದಿಂದ ಇಲ್ಲಿಯ ದೊರೆಗೆ ಒಳ್ಳೆಯ ಆದಾಯ ಇದೆ. ಇವನೂ ಇವನ ಅಧಿಕಾರಿಗಳೂ ಮೂರರು. ಉಳಿದ ನಿವಾಸಿಗಳೆಲ್ಲ ಹಿಂದೂಗಳು. ಸುತ್ತಮುತ್ತ ಹಳ್ಳಿಗಳಲ್ಲಿರುವ ರೈತರೂ ವ್ಯಾಪಾರಸ್ಥರೂ ಎಲ್ಲರೂ ಹಿಂದೂಗಳೇ.

ಬಿಸೋಲಂ ಬಿಟ್ಟಾಗಿನಿಂದಲೂ ತಲೆಯ ಮೇಲೆ ಭಾರಿ ಹೊರೆ ಹೊತ್ತು ಉದ್ದಕ್ಕೂ ಸಾಗುತ್ತಿದ್ದ ಜನರನ್ನು ಕಂಡು ನನಗೆ ಅಚ್ಚರಿಯಾಯಿತು. ಏನೂ ಹೊರೆಯಿಲ್ಲದೆ ಬೆಟ್ಟ ಹತ್ತುವುದೇ ಕಷ್ಟವಾಗಿರುವಾಗ ಈ ಜನ ಹೊರಲಾರದಷ್ಟು ಹೊರೆ ಹೊತ್ತು ಹೇಗೆ ಹತ್ತುತ್ತಾರೆ ಎಂದು ನನ್ನ ಆಳುಗಳನ್ನು ಕೇಳಿದೆ. ಅದಕ್ಕೆ ನನ್ನ ಆಳುಗಳು 'ಆ ಜನ ನಮ್ಮ ಜಾತಿ ಜನರೇ. ಒಣಗಿದ ಮೀನು, ತೆಂಗಿನಕಾಯಿ, ಶರಾಬು ಮತ್ತು ಇತರ ತಿಂಡಿ ತೀರ್ಥಗಳನ್ನು ಹೊತ್ತು ಬಿಜಾಪುರದಲ್ಲಿ ಮಾರಲು ತೆಗೆದುಕೊಂಡು ಹೋಗುತ್ತಿದ್ದಾರೆ. ಅವರೆಲ್ಲ ಗೋವೆ ಹತ್ತಿರ ಸಮುದ್ರ ತೀರದಲ್ಲಿ ವಾಸವಾಗಿರುವ ನಮ್ಮ ಜನ. ಅವರಿಗೆ ಕೂಲಿ ತಲೆಹೊರೆ ಒಂದಕ್ಕೆ ೨⅓ ಈಕಸ್. ತೂಕ ಎಷ್ಟೇ ಇರಲಿ ಕೂಲಿ ಮಾತ್ರ ಇಷ್ಟೆ' ಎಂದರು. ಬಿಜಾಪುರಕ್ಕೆ ಹೋಗಿಬರಲು ಸುಮಾರು ೨೫–೩೦ ದಿನಗಳು ಬೇಕು. ಅಷ್ಟು ದಿನವೂ ಆ ಹೊರೆಹೊತ್ತು, ಅಲ್ಪಕೂಲಿಯಲ್ಲಿ ಹೊಟ್ಟೆಗೆ ತಿಂದು ಹೇಗೆ ದಾರಿಸಾಗಿಸುತ್ತಾರೆ ಎಂದು ನನಗೆ ಆಶ್ಚರ್ಯವಾಯಿತು. ಅವರಿಗೆ ಕೊಡುವ ಕೂಲಿ ಸಾಕಾಗಬಹುದೆಂದು ನಾನು ಭಾವಿಸಿಕೊಳ್ಳಬಹುದಿತ್ತು. ಆದರೆ ದಿನಾ ನನ್ನ ಅನುಭವ ಹಾಗೆ ಭಾವಿಸಿಕೊಳ್ಳಲು ಬಿಡಲಿಲ್ಲ. ಅಲ್ಲದೆ ಈ ಕೂಲಿ ಜನ ಸಂಪಾದಿಸಿದ ಕೂಲಿಯನ್ನೆಲ್ಲಾ ಖರ್ಚು ಮಾಡದೆ ತಮ್ಮ ಸಂಸಾರಕ್ಕಾಗಿ ಕೂಡಿಡುತ್ತಿದ್ದರು. ನನ್ನ ಹತ್ತಿರ ಎಂಟು ಜನ ಕೂಲಿಗಳಿದ್ದರು. ಆರು ಜನ ಪಲ್ಲಕ್ಕಿ ಹೊರುವುದಕ್ಕಾಗಿ ಮತ್ತು ಇಬ್ಬರು ಸಾಮಾನು ಹೊರುವುದಕ್ಕಾಗಿ. ಪ್ರತಿಯೊಬ್ಬರಿಗೂ ಮೂರು ರೂಪಾಯಿ ಕೂಲಿ ಗೊತ್ತುಮಾಡಿದ್ದೆ. ಮೂರು ರೂಪಾಯಿ ಎಂದರೆ ೧⅔ ಈಕಸ್. ಇದು ಬಿಜಾಪುರದವರೆಗಿನ ಇಡೀ ಪ್ರಯಾಣಕ್ಕೆ. ಮೇಲೆ ತಿಂಡಿ–ಊಟಕ್ಕೆ ಕೊಡುತ್ತಿರಲಿಲ್ಲ. ದಿನಾ ಹೊರಡುವ ಮುನ್ನ ಸ್ವಲ್ಪ ಗಂಜಿ ಮತ್ತು ಒಣಮೀನು ತಿನ್ನುತ್ತಿದ್ದರು. ಇದಕ್ಕೇನು ಅಷ್ಟು ಖರ್ಚು ಬರುತ್ತಿರಲಿಲ್ಲ. ಇಡೀ ದಿನಕ್ಕೆಲ್ಲ ಇಷ್ಟೇ ಆಹಾರ. ಹಳ್ಳಿಗಳು ಸಿಕ್ಕಿದಾಗ ಅಲ್ಲಿ ಒಂದಷ್ಟು ದವಸ ಕೊಂಡು ಬೀಸಿ ಹಿಟ್ಟುಮಾಡಿ ರೊಟ್ಟಿ ತಟ್ಟಿಕೊಂಡು ತಿನ್ನುತ್ತಿದ್ದರು. ಹಸಿ ಹಿಟ್ಟನ್ನು ನೀರಿನಲ್ಲಿ ಮೆದ್ದು ಮೂರು ಕಲ್ಲೂಡಿ ಮಾಡಿದ ಒಲೆಯ ಮೇಲೆ ಕಬ್ಬಿಣದ ಕಾವಲಿ ಇಟ್ಟು ಅದರಲ್ಲಿ ರೊಟ್ಟಿಯನ್ನು ಬೇಯಿಸುತ್ತಿದ್ದರು. ಕೆಲವು ಕಡೆ ಅವರ ಜಾತಿಯ ಜನರು ಇರುತ್ತಿದ್ದರು. ಅವರು ಇವರಿಗಾಗಿ ತರಕಾರಿ ಸಾರುಗೀರು ಕೊಟ್ಟರೆ ಅದರಲ್ಲಿ ರೊಟ್ಟಿ ತಿನ್ನುತ್ತಿದ್ದರು. ಇವೆಲ್ಲಕ್ಕಿಂತ ಅವರಿಗೆ ಮುಖ್ಯ ಆಧಾರವೆಂದರೆ ಹೊಗೆಸೊಪ್ಪು. ಯಾವಾಗಲೂ ಸೇದುತ್ತಲೇ ಇದ್ದರು. ಹೀಗಾಗಿ ಅವರು ಬೇರೆಯದಕ್ಕಿಂತ ಹೊಗೆಯನ್ನೇ ಹೆಚ್ಚಾಗಿ ಸೇವಿಸುತ್ತಿದ್ದರೆಂದು ಹೇಳಬಹುದು. ನೀರಲ್ಲದೆ ಹೆಂಡ, ಗಂಜಿ ಮತ್ತು ಶರಾಬು ಕುಡಿಯುತ್ತಿದ್ದರು. ಹೆಂಡವನ್ನು ಬಗಿನಿ ಮರಗಳಿಂದ ತೆಗೆಯುತ್ತಾರೆ. ಬಿಳಿ ಮದ್ಯದ ಬಣ್ಣಕ್ಕಿರುವ ಹೆಂಡದ ರುಚಿ ಚೆನ್ನಾಗಿದೆ. ಕುಡಿದರೆ ಬಹು ಖುಷಿಯಾಗುತ್ತದೆ

ಕೊಂಚ ಅಕ್ಕಿಯನ್ನು ಬಿಸಿನೀರಿನಲ್ಲಿ ಕುದಿಸಿದ ನೀರೇ ಗಂಜಿ. ಯಾವ ಹಳ್ಳಿಯಲ್ಲಾಗಲೀ ಗಂಜಿಯನ್ನು ಒಲೆಯ ಮೇಲೆ ಕಾಯಿಸುತ್ತಲೇ ಇರುತ್ತಾರೆ. ಬಿಸಿಲಿನ ಶೆಖೆ ಹಾಗೂ ಬೆವರಿನಲ್ಲಿ ತಣ್ಣೀರು ಕುಡಿದರೆ ಸತ್ತೇಹೋಗಬಹುದೆಂದು ಗಂಜಿ ಕೊಡುತ್ತಾರೆ. ಈ ಗಂಜಿಗೆ 'ಕಂಜಾ' (Canja = Ganja = ಗಾಂಜಾ) ಹಾಕಿ ಕುಡಿಯುತ್ತಾರೆ. ಇದನ್ನು ಹೆಚ್ಚಾಗಿ ಹಾಕಿ ಕುಡಿದರೆ ಹುಚ್ಚರಂತೆ ಮಾತನಾಡುತ್ತಾರೆ. ಆದರೆ ಮಿತವಾಗಿ ತೆಗೆದು ಕೊಂಡರೆ ದೇಹಕ್ಕೆ ಶಕ್ತಿ ಕೊಡುತ್ತದೆ ಮತ್ತು ಆಯಾಸ ಪರಿಹಾರವಾಗುತ್ತದೆ.

ಜನವರಿ ೪ ಪ್ರಾತಃಕಾಲ ಬಹು ಸುಂದರವಾದ ನಾಡಿನಲ್ಲಿ ನನ್ನ ಪ್ರಯಾಣ ಮುಂದುವರಿಸಿದೆ. ದೊಡ್ಡ ನದಿಯೊಂದು ಈ ಪ್ರದೇಶದ ಕೆಂಪು ಭೂಮಿಯನ್ನು ಫಲವತ್ತು ಮಾಡಿದೆ. ಇಡೀ ಭೂಮಿ ಫಲವತ್ತಾಗಿದ್ದರೂ ಜನ ಸಾಗುಮಾಡುವುದು ನೀರು ಹರಿಯುವ ತಗ್ಗು ಪ್ರದೇಶ ಮತ್ತು ಕಣಿವೆಗಳಲ್ಲಿ ಮಾತ್ರ. ಭತ್ತ, ಕಾಳುಕಡ್ಡಿ, ಕಬ್ಬು, ಕಾಯಿಪಲ್ಲೆ ಮುಂತಾದುವನ್ನು ಬೆಳೆಯುತ್ತಾರೆ.

ತಡೆಯಲಾರದ ಬಿಸಿಲಿನ ಬೇಗೆಯಲ್ಲಿ ದಾರಿ ಸಾಗಿಸಿ ಮಧ್ಯಾಹ್ನ ಮೂರುಗಂಟೆಗೆ ನೆಸೇರಿ[೧] ತಲುಪಿದೆವು. ರಾಜನ ಮರಣಾನಂತರ[೨] ಎದ್ದ ದಂಗೆಯೊಂದನ್ನು ಅಡಗಿಸಲು ಕುದುರೆದಳವೊಂದು ಇಲ್ಲಿಂದ ಹೊರಡುವುದರಲ್ಲಿತ್ತು. ನಾಲ್ಕು ರೂಪಾಯಿ ದಾರಿಸುಂಕ ಕೊಡುವುದರ ಬಗ್ಗೆ ಸಂಬಂಧಪಟ್ಟವರೊಡನೆ ತಕರಾರುಮಾಡಿ ಅದನ್ನು ಕೊಟ್ಟು ಪ್ರಯಾಣ ಮುಂದುವರೆಸಿ ರಾತ್ರಿಯ ವೇಳೆಗೆ ಒಂದು ದೊಡ್ಡ ಹಳ್ಳಿಗೆ ಬಂದೆವು. ಈ ಹಳ್ಳಿಯ ಹೆಸರು ಜಬರ್ರೆ (Jabarre = ಜಂಬಲ್‌ವಾಡಿ) ಎಂದು. ಒಬ್ಬ ಯೋಗ್ಯ ಳಾದ ಹೆಂಗಸಿನ ಮನೆಯಲ್ಲಿ ಸೇವಕರು ನನ್ನ ಬಿಡಾರಕ್ಕೆ ಏರ್ಪಡಿಸಿದರು. ಆ ಮನೆಯಾಕೆ ನಮ್ಮನ್ನು ಬಹು ಆದರದಿಂದ ನೋಡಿಕೊಂಡಳು. ಅವಳಿಗೆ ಮೂರು ಜನ ಮುದ್ದಾದ ಹೆಣ್ಣುಮಕ್ಕಳು. ಆ ಹೆಣ್ಣುಮಕ್ಕಳು ಓಡಾಡಿಕೊಂಡು ನಮಗೆ ಬೇಕಾದ್ದನ್ನೆಲ್ಲಾ ಒದಗಿಸಿದರು. ಒಬ್ಬಳು ನಮ್ಮ ಊಟಕ್ಕೆ ಕೋಳಿ, ಅಕ್ಕಿ, ಮೊಟ್ಟೆ, ತುಪ್ಪ ಮುಂತಾದು ವನ್ನು ಒದಗಿಸಿದರೆ ಇನ್ನೊಬ್ಬಳು ಸೌದೆ, ಬೆಂಕಿ, ನೀರು ಮತ್ತು ಪಾತ್ರೆಪರಟೆಗಳನ್ನು ತಂದುಕೊಟ್ಟಳು. ಮತ್ತೊಬ್ಬಳು ಒಂದು ಕೋಣೆ ಗುಡಿಸಿ ಹಾಸಿಗೆ ದಿಂಬು ಹೊದಿಕೆ ಗಳನ್ನು ಸಿದ್ಧಪಡಿಸಿದಳು. ಕೇವಲ ದನ ಕಾಯುವ ಜನರಿರುವ ಈ ನಾಡಿನಲ್ಲಿ ಇಷ್ಟೊಂದು ಸೌಜನ್ಯ ಹಾಗೂ ಆತಿಥ್ಯವನ್ನು ಕಂಡು ನನಗೆ ಅಚ್ಚರಿಯಾಯಿತು. ನಮ್ಮ ಆಳುಗಳಿಗೆ ಒಂದು ಕೆಲಸ ಮಾಡುವುದಕ್ಕೂ ಬಿಡಲಿಲ್ಲ.

---

೧. ನೆಸೇರಿ (Necery)—ಘಟಪ್ರಭಾ ನದಿಯ ಮೇಲಿರುವ ಒಂದು ಊರು. ಈಗ ಕೊಲ್ಲಾಪುರ ಜಿಲ್ಲೆಯಲ್ಲಿದೆ.

೨. ಇವನು ಬಿಜಾಪುರದ ಸುಲ್ತಾನ ಎರಡನೆಯ ಆದಿಲ್ ಷಾ. ಈತ ಕಾಲವಾದದ್ದು ೪–೧೨–೧೬೭೨ರಂದು.

ಮಾರನೆಯ ದಿನ ಹಿಂದಿನ ದಿನದಂತೆಯೇ ಬಯಲುಸೀಮೆಯಲ್ಲಿ ಮತ್ತು ಅದೇ ನದಿ ಹರಿಯುವ ನಾಡಿನಲ್ಲಿ ಪ್ರಯಾಣ ಸಾಗಿತು. ತೆರ್ನಿ (Terny=ಹಾಲ್‌ಕರ್ನಿ) ಎಂಬಲ್ಲಿ ಪಲ್ಲಕ್ಕಿ ಸುಂಕ ಕೊಟ್ಟೆವು. ಮುಂದೆ ನಾವು ಖಾನಾಪುರಕ್ಕೆ ಹೋಗಿ ಅಲ್ಲಿ ಬಿಡಾರ ಹಾಕಿದೆವು. ಇದು ಸಣ್ಣ ಪಟ್ಟಣ. ಊರು ತುಂಬ ಜನ, ದನ, ಫಕೀರರು, ಕುದುರೆಸೈನ್ಯ, ವ್ಯಾಪಾರದ ಸರಕುಗಳು. ಹೀಗಾಗಿ ತಂಗಲು ಜಾಗಕ್ಕಾಗಿ ಪರದಾಡಬೇಕಾಯಿತು. ಒಂದು ಜಾತ್ರೆ ನಡೆಯುತ್ತಿದ್ದ ಕಾರಣ ನಾವು ಮಧ್ಯಾಹ್ನದವರೆಗೆ ಇದ್ದು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ಸುಮಾರು ನಾಲ್ಕು ಘಂಟೆ ಹೊತ್ತಿಗೆ ನದಿ ದಾಟಿ ಒಂದು ಗುಡ್ಡ ಹತ್ತಿ ಸಂಜೆ ವೇಳೆಗೆ ಒಂಕೇರಿ (Onquery=ಹುಕ್ಕೇರಿ) ಪಟ್ಟಣ ತಲುಪಿದೆವು. ಊರಿನ ಮಧ್ಯೆ ಇದ್ದ ಒಂದು ದೊಡ್ಡ ಬೀದಿಯಲ್ಲಿ ವರ್ತಕರಿಗೂ ಪ್ರಯಾಣಿಕರಿಗೂ ನಿಗದಿಯಾದ ಸತ್ರ ಇತ್ತು. ಅಲ್ಲಿ ರಾತ್ರಿ ಕಳೆದೆವು.

ಕಳೆದ ಎರಡು ದಿನಗಳ ಪ್ರಯಾಸದ ದಾರಿ ಹಾಗೂ ಬಿಸಿಲಿನ ಬೇಗೆಯಿಂದ ನನ್ನ ಆರೋಗ್ಯ ಕೆಟ್ಟಿತು. ಜ್ವರ ಕಾಣಿಸಿಕೊಂಡಿತು. ನನ್ನ ಪ್ರಯಾಣ ಮುಗಿಸುವುದೇ ಕಷ್ಟವಾಗಿ ಕಂಡಿತು. ತೀರಾ ಹಾಸಿಗೆ ಹಿಡಿದು ಮಲಗುವ ಮುನ್ನ ನನ್ನ ಪ್ರವಾಸ ಕಥನ ಬರೆದು ಮುಗಿಸಲೇಬೇಕು. ಇತ್ತೀಚಿನವರೆಗೂ ಹುಕ್ಕೇರಿಗೆ ದೊಡ್ಡ ದೊಡ್ಡ ಅಧೀನ ರಾಜ್ಯಗಳಿದ್ದುವು. ಒಳ್ಳೆಯ ಆದಾಯವೂ ಗೌರ್ನರುಗಳಿಗೆ ಹಿರಿಯ ಸ್ಥಾನಮಾನ ಗಳೂ ಇದ್ದುವು. ಕೆಲವು ವರ್ಷಗಳ ಹಿಂದೆ ರುಸ್ತುಂ ಜಮಾನ್ ಎಂಬುವನು ಇಲ್ಲಿ ಗೌರ್ನರ್ ಆಗಿ ಕೆಲಸಮಾಡಿ ಬಿಜಾಪುರದ ರಾಜನ ಮೆಚ್ಚುಗೆ ಗಳಿಸಿಕೊಂಡನು.[೧] ಈತನ ಶಕ್ತಿ ಸಾಮರ್ಥ್ಯಗಳನ್ನು ನೋಡಿ ರಾಜನು ಈತನನ್ನು ದೊಡ್ಡ ಸೇನೆಯ ಮಹಾದಂಡ ನಾಯಕನನ್ನಾಗಿ ನೇಮಿಸಿ ಶಿವಾಜಿಯ ಮೇಲೆ ಯುದ್ಧಕ್ಕೆ ಕಳುಹಿಸಿಕೊಟ್ಟ. ಶಿವಾಜಿ ಎದುರುನಿಂತು ಯುದ್ಧಮಾಡದೆ ಉಪಾಯದಿಂದ ಶತ್ರುಗಳನ್ನು ದಮನ ಮಾಡುವ ಬುದ್ಧಿವಂತ. ಆತ ಜಮಾನನ ಬಳಿಗೆ ತನ್ನ ಕಡೆಯವರನ್ನು ಕಳುಹಿಸಿ ೩೦,೦೦೦ ಪಗೋಡ್ ಲಂಚ ಕೊಟ್ಟು ತನ್ನ ತಂಟೆಗೆ ಬರದಂತೆ ಮಾಡಿದ.[೨] ಇದು ಬಿಜಾಪುರದ ರಾಜನಿಗೆ ತಿಳಿಯಿತು. ಆತನನ್ನು ಬಿಜಾಪುರಕ್ಕೆ ಕರೆಯಿಸಿ ಆತನ ತಲೆ ಕಡಿಸಿದ. ಅವನ ಮಗನನ್ನು ಹುಕ್ಕೇರಿಯ ಗೌರ್ನರ್ ಆಗಿ ನೇಮಿಸಿದ. ಆದರೆ ಅವನ ಆದಾಯವನ್ನೂ ಅಧಿಕಾರ ವನ್ನೂ ಮೊಟಕುಮಾಡಿದ.

ನಾನು ಹುಕ್ಕೇರಿಗೆ ಬಂದಾಗ ಆ ಚಿಕ್ಕ ಪ್ರಾಯದ ಹುಡುಗ ಇಲ್ಲಿ ಗೌರ್ನರ್ ಆಗಿದ್ದ. ಈತ ವಿಲಾಸಪ್ರಿಯನಾಗಿ ಕಾಲಕಳೆಯುತ್ತಿದ್ದಾನೆ. ಈ ದಿನ ರಮ್ಜಾನ್ ಹಬ್ಬದ ಕಾರಣ

೧. ಈತ ರಣದುಲ್ಲಾಖಾನನ ವಂಶಕ್ಕೆ ಸೇರಿದ್ದು, ಈತನಿಗೆ ರುಸ್ತು-ಇ-ಜಮಾನ್ ಎಂಬ ಬಿರುದು ಕೊಡಲಾಗಿತ್ತು.

೨. ಗೌರ್ನರ್ ರುಸ್ತುಮನೇ ಶಿವಾಜಿಗೆ ಸಹಾಯ ಮಾಡುವ ಉದ್ದೇಶದಿಂದ ೩೦,೦೦೦ ಪಗೋಡಾ ಹಣವನ್ನು ಲಂಚವಾಗಿ ಪಡೆದುಕೊಂಡನೆಂದು ಡಚ್ ಫ್ಯಾಕ್ಟೊರಿಯ ಪತ್ರವೊಂದರಲ್ಲಿ ಹೇಳಿದೆ. (ನೋಡಿ— Shivaji the Great by Balakrishna)

ಗೌರ್ನರನ ಮನೆಯಲ್ಲಿ ಭಾರಿ ಸಡಗರ. ಫ್ರಾಂಕ್‌ನೊಬ್ಬ ಪಟ್ಟಣದಲ್ಲಿದ್ದಾನೆಂದು ತಿಳಿದ ಗೌರ್ನರ್ ನನ್ನನ್ನು ಹಬ್ಬಕ್ಕೆ ಕರೆಯಲು ನಾಲ್ಕು ಜನ ಅಧಿಕಾರಿಗಳನ್ನು ಕಳುಹಿಸಿದ. ನನಗೆ ಆಯಾಸವಾಗಿದ್ದರೂ ನನ್ನ ಸೇವಕರ ಸಮೇತ ಹೋದೆ.

ಗೌರ್ನರ್ ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡು, ಪರ್ಶಿಯಾ ಜಮಖಾನದ ಮೇಲೆ ಕುಳ್ಳಿರಿಸಿದ. ಇಡೀ ಕೋಣೆಗೆ ಜಮಖಾನ ಹಾಸಿದ್ದರು. ನನಗೆ ಆಯಾಸವಾಗಿದೆ ಎಂದು ಹೇಳಿದರೂ ಬಿಡದೆ ಊಟಕ್ಕೆ ಬಡಿಸಿದರು. ಮೂರು ಗಂಟೆ ಹಿಡಿಯಿತು ಊಟಮುಗಿಸುವುದಕ್ಕೆ. ಕೋಣೆಯ ಒಂದು ಕಡೆ ವಾದ್ಯಸಂಗೀತ ನಡೆಯುತ್ತಿತ್ತು. ಆಗ ಹತ್ತು–ಹನ್ನೆರಡು ಜನ ನರ್ತಕಿಯರು ಬಂದರು. ಬೆಲೆಯಾದ ಆಭರಣಗಳಿಂದ ತಮ್ಮ ಅಂದಚಂದವನ್ನು ಹೆಚ್ಚಿಸಿಕೊಂಡಿದ್ದ ಅವರು ಕೋಣೆಯ ಮಧ್ಯೆ ಬಂದು ತಮ್ಮದೇ ಆದ ರೀತಿಯಲ್ಲಿ ವಂದಿಸಿ ಅರ್ಧಚಂದ್ರಾಕಾರವಾಗಿ ಕುಳಿತು ಬಹು ಇಂಪಾಗಿ ಹಾಡಿದರು. ಆಮೇಲೆ ಕುಣಿಯಲಾರಂಭಿಸಿದರು. ಇದರಲ್ಲಿ ತಾವು ಪರಿಣತರೆಂಬುದನ್ನು ತೋರಿಸಿ ಕೊಟ್ಟರು. ಅವರ ಬಳ್ಳಿಯಂತೆ ಬಳುಕುವ ದೇಹ, ಹಾಡಿನ ಗತ್ತು, ಹಾವಭಾವಗಳು—ಇವೆಲ್ಲಾ ಅತ್ಯಂತ ಆಕರ್ಷಕವಾಗಿದ್ದುವು. ನಿಜವಾಗಿಯೂ ಅವರು ಎಲ್ಲರನ್ನೂ ಬೆರಗುಗೊಳಿಸಿದರು. ಗೌರ್ನರ್ ಕೂಡ ಬಹು ಖುಷಿಪಟ್ಟ. ಈ ಮೆಹರ್ಬಾನಿಯಷ್ಟೇ ಅವರಿಗೆ ಬೇಕಾಗಿರುವುದು. ಇವರು ವರ್ಷಕ್ಕೆ ಇಷ್ಟು ಎಂದು ತೆರಿಗೆ ಸಲ್ಲಿಸಬೇಕು. ತಮಗೆ ಬೇಕಾದ ಹಣವನ್ನು ತಮ್ಮ ಗಿರಾಕಿಗಳಿಂದ ಪಡೆಯುತ್ತಾರೆ.

ಈ ಭೋಜನಕೂಟವನ್ನೂ ನೃತ್ಯಮೇಳವನ್ನೂ ನೋಡಿಕೊಂಡು ನನ್ನ ಬಿಡಾರಕ್ಕೆ ಹಿಂದಿರುಗಿದೆ. ರಾತ್ರಿ ಆಗಲೇ ಹೊತ್ತಾಗಿತ್ತು. ಗಗನದಲ್ಲಿ ಚಂದ್ರ ಬೆಳಗುತ್ತಿದ್ದ. ಆಳುಗಳೂ ಹೊರಡುವ ಮನಸ್ಸು ತೋರಿಸಿದರು. ಗೌರ್ನರ್ ಕಡೆಯ ಇಬ್ಬರು ದಾರಿ ತೋರಿಸುವುದಕ್ಕಾಗಿ ಬಂದಿದ್ದರು. ನಾನು ಹೊರಡುವುದು ತಿಳಿಯಬಾರದೆಂದು ಅವರಿಗೆ ಸಣ್ಣ ಬಹುಮಾನ ಕೊಟ್ಟು ಕಳುಹಿಸಿಬಿಟ್ಟೆ. ಸೂರ್ಯೋದಯಕ್ಕೆ ಮೂರುಗಂಟೆ ಮುನ್ನ ಹುಕ್ಕೇರಿ ಬಿಟ್ಟೆ. ದಾರಿ ಬಟ್ಟಬಯಲಿನಲ್ಲಿ ಸಾಗಿತು. ಪೈರು-ಪಚ್ಚೆಗಳಿಲ್ಲ. ಕಳೆದ ಎರಡು ವರ್ಷಗಳಿಂದ ಮಳೆಯೇ ಇಲ್ಲ.[೧] ಜನರು ತಮ್ಮ ಹೊಟ್ಟೆಪಾಡಿಗಾಗಿ ದಾರಿಯಲ್ಲಿ ಹೋಗುವ ಪ್ರಯಾಣಿಕರಿಗೆ ಹೆತ್ತಮಕ್ಕಳನ್ನೇ ಮಾರುವ ಸ್ಥಿತಿ ಒದಗಿತ್ತು. ಕುಡಿಯಲು ನೀರಾಗಲೀ ಬೇರೆ ಪಾನೀಯವಾಗಲೀ ನಮಗೆ ಸಿಗಲಿಲ್ಲ. ಬಹು ಪ್ರಯಾಸದಿಂದ ಇಡೀ

---

೧. ಈ ಬರಗಾಲ ೧೭೭೫ರವರೆಗೂ ಇದ್ದಿತೆಂಬುದು ಜಾನ್ ಚೈಲ್ಡ್ (John Child) ಎಂಬ ರಾಜಾಪುರ ಫ್ಯಾಕ್ಟೊರಿಯ ಮುಖ್ಯಸ್ಥನು ಮಾಡಿದ ವರದಿಯಿಂದ ವ್ಯಕ್ತಪಡುತ್ತದೆ. ಆತ ಕೊಲ್ಲಾಪುರದಿಂದ ರಾಯಬಾಗಿಗೆ ಹೋಗುವಾಗ, 'ಹೊಟ್ಟೆಗಿಲ್ಲದೆ ದಾರಿಯ ಬಳಿ ಸತ್ತುಬಿದ್ದಿದ್ದ ಗಂಡಸರು, ಹೆಂಗಸರನ್ನು ಕಂಡೆ' ಎಂದು ಹೇಳುತ್ತಾ, 'ದಾರಿಯಲ್ಲಿ ಸಿಕ್ಕಿದ ಊರುಗಳು ಬಹುಮಟ್ಟಿಗೆ ಹಾಳುಬಿದ್ದಿದ್ದವು. ಒಂದು ಮನೆಯಲ್ಲಿ ಜನ ಇದ್ದರೆ ಇನ್ನು ಹತ್ತುಮನೆಗಳು ಪಾಳುಬಿದ್ದಿದ್ದವು. ಒಂದು ಕಡೆ ಹೊಟ್ಟೆಪಾಡಿನಿಂದಾಗಿ ಇನ್ನೊಂದು ಕಡೆ ಶಿವಾಜಿಯ ಹೆದರಿಕೆಯಿಂದಾಗಿ ಮತ್ತು ಅಲ್ಲಲ್ಲಿಯ ಸರ್ಕಾರಗಳ ಹಿಂಸೆಯಿಂದಾಗಿ ಜನ ಊರು ಬಿಟ್ಟು ಓಡಿಹೋಗಿದ್ದರು' ಎಂದು ತಿಳಿಸುತ್ತಾನೆ.

ದಿನವೆಲ್ಲಾ ಪ್ರಯಾಣ ಮಾಡಿ ಸಂಜೆಗೆ ರಾಯ್‌ಭಾಗ್ ತಲುಪಿದೆವು. ನಮ್ಮ ಫ್ಯಾಕ್ಟೊರಿಯಲ್ಲಿ ಬಿಡಾರ ಮಾಡಿದೆವು. ಒಬ್ಬ ಹಿಂದೂ ದಳ್ಳಾಳಿ ಇದರ ವಹಿವಾಟು ನೋಡಿಕೊಳ್ಳುತ್ತಿದ್ದಾನೆ. ಬಹಳ ಬೇಡಿಕೆ ಇರುವ ಯುರೋಪಿಯನ್ ಸರಕುಗಳ ಮಾರಾಟ ಈ ದಳ್ಳಾಳಿಯ ಕೆಲಸ. ಅಲ್ಲದೆ ಬಿಜಾಪುರ್, ಗೋಲ್ಕೊಂಡಾ ಮುಂತಾದ ಸ್ಥಳಗಳಲ್ಲಿ ತಯಾರಾದ ವಸ್ತುಗಳನ್ನು ಇಲ್ಲಿಗೆ ತಂದು ಇಲ್ಲಿಂದ ರವಾನಿಸುವುದೂ ಈತನ ಕೆಲಸ.

ರಾಯ್‌ಭಾಗ್ ಬಟ್ಟಬಯಲಿನಲ್ಲಿರುವ ಊರು. ಅನೇಕ ರಾಷ್ಟ್ರಗಳ ವರ್ತಕರು ಇಲ್ಲಿ ನೆಲೆಸಿದ್ದು ಭಾರೀ ವ್ಯಾಪಾರ ನಡೆಸುತ್ತಿದ್ದಾರೆ. ಈ ವ್ಯಾಪಾರದಿಂದ ಇಲ್ಲಿಯ ಗೌರ್ನರ್‌ಗೆ ಭಾರೀ ಆದಾಯವಿದೆ. ನದಿ ಕಾಲು ಹರಿದಾರಿ ದೂರದಲ್ಲಿದೆ.[೧] ಮಳೆಯಿಲ್ಲದೆ ಎಲ್ಲವೂ ಸುಟ್ಟು ಕರುಕಲಾಗಿದೆ. ಮರಗಿಡಗಳಿಲ್ಲ. ತೋಟ ತುಡಿಕೆಗಳಿಲ್ಲ. ಹುಲ್ಲು, ಹಾಲು, ಸೌದೆ, ಹಣ್ಣು ಹಂಪಲುಗಳೆಲ್ಲಾ ಎರಡು ಹರಿದಾರಿ ದೂರದಿಂದ ಇಲ್ಲಿಗೆ ಬರಬೇಕು.

ಬಿಜಾಪುರದ ರಾಜನ ಇತ್ತೀಚಿನ ಮರಣ ಎಲ್ಲೆಲ್ಲೂ ಅವ್ಯವಸ್ಥೆಯನ್ನುಂಟು ಮಾಡಿದೆ.[೨] ಸಿಂಹಾಸನದ ಮೇಲೆ ಯಾರನ್ನು ಕುಳ್ಳಿರಿಸಬೇಕೆಂಬುದರ ಬಗ್ಗೆ ಪಕ್ಷ ಪ್ರತಿಪಕ್ಷಗಳು ಆಗಿವೆ. ಪ್ರಾಂತ್ಯಗಳ ಗೌರ್ನರುಗಳು ಇದೇ ಸಮಯವೆಂದು ಜನರನ್ನು ಕೊಳ್ಳೆಹೊಡೆಯಲಾರಂಭಿಸಿದ್ದಾರೆ. ರಾಯಭಾಗ್ ಗೌರ್ನರ್ ಎಲ್ಲಾ ಸ್ಥಳದ ವರ್ತಕರ ಅಂಗಡಿಗಳಿಗೆ ಬೀಗಮುದ್ರೆ ಮಾಡಿಸಿದ್ದಾನೆ. ಕೈತುಂಬ ದುಡ್ಡು ಕೊಟ್ಟ ಹೊರತು ಅವರು ಅಂಗಡಿಗಳನ್ನು ತೆರೆಯುವಂತಿಲ್ಲ. ನಮ್ಮ ಕಂಪೆನಿ ಫ್ಯಾಕ್ಟೊರಿಗೂ ಬೀಗಮುದ್ರೆ ಹಾಕಲಾಯಿತಂತೆ. ಇದನ್ನು ಗೌರ್ನರ್ ಗಮನಕ್ಕೆ ನಮ್ಮ ದಳ್ಳಾಳಿ ತಂದ ಮೇಲೆ ಬೀಗಮುದ್ರೆ ತೆಗೆಯಲಾಯಿತು.

೭ನೆಯ ಜನವರಿ ಶನಿವಾರ—ಹಿಂದಿನ ದಿನದ ಆಯಾಸದಿಂದ ತುಂಬಾ ಸುಸ್ತಾಗಿ ಹೊರಗೆ ಹೋಗಲೇ ಇಲ್ಲ. ಗೌರ್ನರ್ ಅವರನ್ನು ಈ ದಿನ ನೋಡಲು ಸಾಧ್ಯವಾಗದ್ದಕ್ಕಾಗಿ ಕ್ಷಮಾಪಣೆ ಕೇಳಲು ನಮ್ಮ ದಳ್ಳಾಳಿಯನ್ನು ಕಳುಹಿಸಿಕೊಟ್ಟೆ.

ಭಾನುವಾರ ರಾಯಭಾಗ್ ಗೌರ್ನರ್‌ರನ್ನು ಕಂಡೆ. ಈತ ಬ್ರಾಹ್ಮಣ. ಇವನ ಸುತ್ತಮುತ್ತ ಅಧಿಕಾರಿಗಳು ಕೂಡಿ ಅಪ್ಪಣೆ ಪಡೆಯುತ್ತಿದ್ದರು. ನಾನು ಬಂದದ್ದನ್ನು

---

೧. ಇದು ಕೃಷ್ಣಾನದಿ.

೨. ಎರಡನೆಯ ಆದಿಲ್‌ಷಾಹಿಯ ಮರಣ ಕಾರ್‌ನ ದಿನಚರಿಯಲ್ಲಿ ಕಂಡ ದಿನಕ್ಕೆ ಸುಮಾರು ಒಂದು ತಿಂಗಳ ಮುಂಚೆ ಆಗಿತ್ತು. ಸಿಕಂದರ್ ಎಂಬ ನಾಲ್ಕು ವರ್ಷದ ಹುಡುಗನನ್ನು ಪಟ್ಟಕ್ಕೆ ತರಲಾಯಿತು. ಈ ಹುಡುಗನನ್ನು ಪಟ್ಟಕ್ಕೆ ತಂದ ಖವಾಸ್‌ಖಾನನು ಬೇರೆ ಸರದಾರರನ್ನು ಕಡೆಗಣಿಸಿ ತಾನೇ ದರ್ಬಾರ್ ನಡೆಸಲಾರಂಭಿಸಿದ ಕಾರಣ ಪರಸ್ಪರ ವೈಮನಸ್ಸುಗಳು ಹುಟ್ಟಿಕೊಂಡುವು. ಅಧೀನ ಸರದಾರರೆಲ್ಲ ದಂಗೆಯೆದ್ದರು. ಸೊಂದಾ ಮತ್ತು ಬಿದನೂರು ರಾಜರುಗಳು ಬಿಜಾಪುರದ ಅಧೀನತೆಯನ್ನು ಕಿತ್ತೆಸೆದು ಸ್ವತಂತ್ರರಾದರು.

ಕಂಡು ಗೌರ್ನರ್ ಅವರನ್ನೆಲ್ಲಾ ಕಳುಹಿಸಿ ನನ್ನೊಡನೆ ಏಕಾಂತವಾಗಿ ಮಾತುಕತೆ ಆಡಿದನು. ಕಾಲವಾದ ವಿಜಾಪುರ ದೊರೆಯು ಗುಣಗಳನ್ನು ಮನಸಾರೆ ಹೊಗಳಿದನು. ಆತನು ಬಲಾತ್ಕಾರದಿಂದ ಸಿಂಹಾಸನವನ್ನೇರಿದ್ದರೂ, ಆತನ ಒಳ್ಳೆಯ ಆಡಳಿತದಿಂದಾಗಿ ಜನ ಅದನ್ನೆಲ್ಲಾ ಮರೆತುಬಿಟ್ಟಿದ್ದರು. ಸಿಂಹಾಸನಕ್ಕೆ ವಾರಸುದಾರನಾದ ಗಂಡನಿಗೆ ಹೆಂಡತಿ ವಿಷಹಾಕಿ ಸಾಯಿಸಿ ಈತನನ್ನು ಒಲಿಸಿಕೊಂಡಿದ್ದಳು.[೧] ಆತನ ಮರಣಾನಂತರ ರಾಜ್ಯದಲ್ಲಿ ಉಂಟಾಗಿರುವ ಕ್ಷೋಭೆ, ಸಿಂಹಾಸನಕ್ಕಾಗಿ ಪೈಪೋಟಿ ಈ ವಿಷಯಗಳನ್ನೆಲ್ಲಾ ಗೌರ್ನರ್ ಪ್ರಸ್ತಾಪ ಮಾಡಿದನು. ಇಷ್ಟಲ್ಲದೆ ಫ್ರಾನ್ಸ್ ದೊರೆಗಳ ವಿಷಯವನ್ನು ಕೇಳಿ ತಿಳಿದುಕೊಂಡನು. ಇಡೀ ದಿನವೆಲ್ಲಾ ಹೀಗೆ ಗೌರ್ನರ್‌ರೊಡನೆ ಮಾತನಾಡುತ್ತಾ ಕಳೆದೆ.

೯ನೆಯ ಸೋಮವಾರ ಬೆಳಿಗ್ಗೆ ರಾಯಭಾಗ್‌ನಿಂದ ಹೊರಟು, ಬಟ್ಟಬಯಲು ಪ್ರದೇಶದಲ್ಲಿ ಪ್ರಯಾಣಮಾಡುತ್ತ ಮಾರನೆಯದಿನ ಅಥನಿಗೆ ಬಂದೆ. ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತಿತ್ತು. ಅನೇಕ ವರ್ತಕರು ಸೇರಿದ್ದರು. ರಾಯಭಾಗ್‌ನಲ್ಲಿದ್ದ ನಮ್ಮ ದಳ್ಳಾಳಿ ಅನೋಬಾ ಇಲ್ಲಿ ಸಿಕ್ಕಿದ. ಇವನ ಸಹಾಯದಿಂದ ನನಗೆ ಇರಲು ಜಾಗ ಸಿಕ್ಕಿತು. ಏಕೆಂದರೆ, ಎಲ್ಲೆಲ್ಲೂ ಜನ, ದನ, ಅಂಗಡಿಮುಂಗಟ್ಟುಗಳು, ಫಕೀರರು, ಹಾವಾಡಿಗರು, ಮಂತ್ರತಂತ್ರಗಾರರು ಮತ್ತು ಅವರ ಸುತ್ತ ಕೂಡಿದ ಜನ. ಹಿಂದೆ ನಿಂತವರು ಮುಂದೆ ನಡೆಯುತ್ತಿದ್ದುದನ್ನು ನೋಡಲು ಆಗದಿದ್ದಾಗ ಮುಂದಿನವರ ಪೇಟ ಕಿತ್ತು ಒಗೆಯುತ್ತಿದ್ದರು. ಪೇಟದವನು ತನ್ನ ಪೇಟದ ಹಿಂದೆ ಓಡಿದಾಗ ಅವನ ಜಾಗಕ್ಕೆ ಇನ್ನೊಬ್ಬ ಬರುತ್ತಿದ್ದ. ನಾನು ಇವನ್ನೆಲ್ಲಾ ನೋಡದೆ ಇರಲಿಲ್ಲ. ಆದರೆ ಫರಂಗಿಯುವನೊಬ್ಬ ಊರಿಗೆ ಬಂದಿದ್ದಾನೆಂದು ತಿಳಿದ ಮಂತ್ರತಂತ್ರದವರು ನಾನಿದ್ದ ಕಡೆಗೇ ಬರಲಾರಂಭಿಸಿದರು. ಬಂದು, 'ನೋಡಿ, ಬಹು ಅಪೂರ್ವವಾದುದನ್ನು ತೋರಿಸುತ್ತೇವೆ!' ಎಂದು ತಮ್ಮ ಚಮತ್ಕಾರಗಳನ್ನು ತೋರಿಸಿದರು. ನರ್ತಕಿಯರಿಗೂ ಕಡಮೆ ಇರಲಿಲ್ಲ. ಇವರ ಸಂಪಾದನೆ ಭಾರಿ ವರ್ತಕರಿಗಿಂತ ಹೆಚ್ಚು.

೧೧ನೆಯ ಬುಧವಾರ ಬೆಳಕು ಹರಿದಮೇಲೆ ಅಥನಿಯಿಂದ ಹೊರಟೆ. ದಾರಿಯುದ್ದಕ್ಕೂ ಜಾತ್ರೆಗೆ ಬಂದ ಜನ. ಬತ್ತಿಹೋಗಿದ್ದ ಎರಡು ನದಿಗಳನ್ನು ದಾಟಿದೆವು. ಮರಗಿಡಗಳಿಲ್ಲದ ಬೋಳುಸೀಮೆ. ಅಕಸ್ಮಾತ್ ಹಳ್ಳಕೊಳ್ಳಗಳಲ್ಲಿ ನೀರುಕಂಡರೆ ನಾನು ಹೋಗಿ ಅದರಲ್ಲಿ ಕುಳಿತುಬಿಡುತ್ತಿದ್ದೆ. ಅಷ್ಟೇ ಅಲ್ಲ ಆ ನೀರನ್ನು ಕುಡಿಯುತ್ತಿದ್ದೆ. ನನ್ನ ಸೇವಕರು 'ಅಯ್ಯೋ ಆ ನೀರು ಕುಡಿಯಬೇಡಿ, ಕಾಯಿಲೆ ಬರುತ್ತೆ' ಎಂದು

---

೧. ಎರಡನೆಯ ಆದಿಲ್ ಷಾ ನಿಜವಾಗಿ ಸಿಂಹಾಸನಕ್ಕೆ ವಾರಸುದಾರನಾಗಿರಲಿಲ್ಲವೆಂಬ ಮಾತು ಇಡೀ ೧೭ನೇ ಶತಮಾನದಲ್ಲಿ ಕೇಳಿಬರುತ್ತಿತ್ತು. ಪ್ರವಾಸಿಗಳಾದ ಫ್ರೈಅರ್, ಬೆರ್ನೇ, ತವರ್ನೇ, ಥೇವ್ನೋ ಇವರೆಲ್ಲ ಈ ಬಗ್ಗೆ ಹೇಳುತ್ತಾರೆ. ಫ್ರೈಅರ್ ಹೇಳುವುದೇನೆಂದರೆ—ಆದಿಲ್ ಷಾ ಒಬ್ಬ ಮಾವುತನ ಮಗ ಈತ ತನ್ನ ಆನೆಯ ಸೊಂಡಿಲಮೇಲಿಂದ ರಾಣಿವಾಸದಲ್ಲಿ ಇಳಿದು ಆಕೆಯ ಗೆಳೆತನ ಪಡೆದು ದೊರೆಯಾದ ಎಂದು.

ಎಚ್ಚರಿಸುತ್ತಿದ್ದರು. ಅವರು ಹೊಸ ಜಾಗಗಳಲ್ಲಿ ನೀರನ್ನು ಕಾಯಿಸದೆ ಕುಡಿಯು ತ್ತಿರಲಿಲ್ಲ.

ಬೆಳಗಿನ ಪ್ರಯಾಣದ ವೇಳೆ ನಾಲ್ವರು ಫರಂಗಿಯವರು ಇಂಡಿಯನ್ನರ ಉಡುಪಿನಲ್ಲಿ ಬರುತ್ತಿದ್ದುದನ್ನು ಕಂಡೆ. ಅವರಲ್ಲಿ ಇಬ್ಬರು ಮದ್ರಾಸ್‌ನಲ್ಲಿ ಇಂಗ್ಲಿಷರ ಸೇವೆಯಲ್ಲಿದ್ದ ಡಚ್ಚರು. ಅವರ ಸೇವೆ ಬಿಟ್ಟು ಓಡಿಬಂದಿದ್ದರು. ಗೋವಾಕ್ಕೋ ಸೂರತ್ತಿಗೋ ಹೋಗುವದಾಗಿ ತಿಳಿಸಿದರು. ಇನ್ನಿಬ್ಬರು ನಾನು ಫ್ರೆಂಚನೆಂದು ತಿಳಿದು ತಮ್ಮ ಗುಟ್ಟು ಬಿಟ್ಟುಕೊಡಲಿಲ್ಲ. ಬಹುಶಃ ಅವರೂ ಸೆಂಟ್‌ಥೋಮಿನ ಫ್ರೆಂಚ್ ಸೈನ್ಯವನ್ನು ತ್ಯಜಿಸಿ ಬಂದವರಿರಬೇಕು. ಅವರ ಸಹವಾಸ ಬೇಡವೆಂದುಕೊಂಡು ನನ್ನದಾರಿ ಹಿಡಿದು ಮಧ್ಯಾಹ್ನದವೇಳೆಗೆ ಐಗಳೀ ಎಂಬ ಊರಿಗೆ ಬಂದೆ. ಇಲ್ಲಿಯೂ ಊರ ತುಂಬ ಜನವೋ ಜನ. ಹೀಗಾಗಿ ನಾನು ಒಂದು ನದಿಯ ದಡದಲ್ಲಿದ್ದ ತೋಟದಲ್ಲಿ ಬಿಡಾರ ಮಾಡಿದೆ.

ಇಲ್ಲಿಗೆ ಬಂದೆನೋ ಇಲ್ಲವೋ ತಲೆ ತಿರುಗಲಾರಂಭಿಸಿತು. ತಲೆನೋವು ಶುರುವಾಯಿತು. ನಿಶ್ಶಕ್ತಿಯಿಂದ ಅತ್ತಿತ್ತ ಅಲುಗಾಡದಂತಾದೆ. ಪ್ರಜ್ಞೆ ತಪ್ಪಿದಂತೆಯೇ ಆಯಿತು. ನನ್ನ ಸೇವಕರು ತಮ್ಮ ಕೈಲಾದ ಚಿಕಿತ್ಸೆ ಮಾಡಿದರು. ನನ್ನ ಕ್ರೈಸ್ತ ಸೇವಕರಿಗೆ ಭಾರಿ ಸಂಕಟವಾಯಿತು. ಏನು ಔಷಧಿ ಕೊಡುವದೋ ಗೊತ್ತಿಲ್ಲದೆ, ಹಿಂದುಗಳು ಕೊಡುವ ಔಷಧಿ ತೆಗೆದುಕೊಳ್ಳುವದೆಂದು ಸಲಹೆ ಮಾಡಿದರು. ನಾನು ಅನಿವಾರ್ಯವಾಗಿ ಒಪ್ಪಿದೆ. ಒಬ್ಬಿಬ್ಬರು ಯಾವುದೋ ಹಸಿರೌಷಧಿ ತರಲು ಹೋದರು. ಉಳಿದವರು ತಮ್ಮ ಪ್ರಯೋಗ ಶುರುಮಾಡಿದರು. ಪೇಟದಿಂದ ನನ್ನ ತಲೆ, ಸೊಂಟಗಳನ್ನು ಕಟ್ಟಿ ಕೈಗಳನ್ನು ಹಿಂದಕ್ಕೆ ಬಿಗಿದು ಮಖಾಡೆ ಮಲಗಿಸಿದರು. ಅವರಲ್ಲಿ ತುಂಬಾ ಗಟ್ಟಿಮುಟ್ಟಾದವನೊಬ್ಬ ನನ್ನ ಬೆನ್ನಮೇಲೆ ಒಂದು ಕಾಲು ಹಾಕಿ ಎರಡೂ ಕೈಗಳಿಂದ ಕಟ್ಟಿದ್ದ ಕಟ್ಟುಗಳನ್ನು ಹಿಡಿದು ಮೇಲಕ್ಕೆ ಝಟ್ಟೆಂದು ಜಗ್ಗಿದ. ಮೈಮೂಳೆಗಳು ಲಟಲಟ ಎಂದುವು. ಐದಾರುಸಲ ಹೀಗೆ ಲಟಿಕೆ ತೆಗೆದಮೇಲೆ ಮೆಣಸಿನಪುಡಿ, ಏಲಕ್ಕಿ ಮುಂತಾದುವನ್ನು ನೀರಿನಲ್ಲಿ ಬೆರೆಸಿ ರಸವನ್ನು ನನ್ನ ಕಣ್ಣು, ಕಿವಿ ಮೂಗು ಬಾಯಿಗಳಿಗೆ ತುಂಬಿದ. ಏನೋ ಒಂದು ತರಹ ಹಳದೀ ಬಣ್ಣದ ದ್ರವ ಎಲ್ಲಾ ಕಡೆಗಳಿಂದ ಹೊರಡಲಾರಂಭಿಸಿತು. ನನ್ನ ಮೆದುಳೇ ಕರಗಿ ಹರಿದುಬರುತ್ತಿದೆಯೇನೋ ಎನಿಸಿತು. ಇಷ್ಟಾದ ಮೇಲೆ ತೋಟದ ಒಂದು ಮೂಲೆಗೆ ಹೋಗಿ ಏನೋ ಔಷಧಿ ಮಾಡಲಾರಂಭಿಸಿದರು. ಹಸುವಿನ ಗಂಜಲ, ಕುದುರೆ ಲದ್ದಿ, ಯಾವುದೋ ಮೂಲಿಕೆಗಳ ರಸ, ನಾರು ಬೇರುಗಳನ್ನು ಸೇರಿಸಿ ಔಷಧಿ ತಯಾರಿಸಿಕೊಂಡು ತಂದರು. ಕಣ್ಣು ಮೂಗು ಮುಚ್ಚಿಕೊಂಡು ಗಟಗಟನೆ ಒಂದೇ ಗುಟುಕಿಗೆ ಕುಡಿದುಬಿಡಿ ಎಂದರು. ನಾನು ಅದನ್ನು ಒಂದೇ ಸಲ ಕುಡಿಯದೆ ಸ್ವಲ್ಪಸ್ವಲ್ಪ ಕುಡಿದೆ. ಕುಡಿಯುತ್ತಾ ಕುಡಿಯುತ್ತಾ ಆರೋಗ್ಯ ಸುಧಾರಿಸಿತು. ಇನ್ನು ಅಲ್ಲಿ ಇರುವದು ಬೇಡ ಎಂದು ನನ್ನನ್ನು ಪಲ್ಲಕ್ಕಿಯಲ್ಲಿ ಮಲಗಿಸಿ ಹೊತ್ತುಕೊಂಡು ಹೊರಟೇಬಿಟ್ಟರು.

ರಾತ್ರಿ ಆಗಲೇ ಹೊತ್ತಾಗಿತ್ತು, ನಾವು ತೆಲಸಂಗ್ ತಲುಪಿದಾಗ, ರಾತ್ರಿ ನನಗೆ ತುಂಬಾ ಜ್ವರ. ತಡಮಾಡುವುದು ಬೇಡ ಎಂದು ನನ್ನ ಸೇವಕರು ಇನ್ನೆರಡು ದಿನಗಳಲ್ಲಿ ಬಿಜಾಪುರ ಮುಟ್ಟಿಸುತ್ತೇವೆಂದು ನಂಬಿಕೆಕೊಟ್ಟರು. ಅಲ್ಲಿಗೆ ಹೋದರೆ ಕಾಯಿಲೆಗೆ ತಕ್ಕ ಔಷಧಿ ಸಿಕ್ಕಬಹುದೆಂಬ ಭರವಸೆಯಿಂದ ಆಗಲಿ ಎಂದೆ. ಎಡೆಬಿಡದೆ ಪ್ರಯಾಣ ಮುಂದುವರಿಯಿತು. ಲೆಕೋಟಾಕ್ಕೆ ಹೋದೆವು. ಮತ್ತೆ ನನ್ನ ತಲೆತಿರುಗಲಾರಂಭಿಸಿತು. ಮೈ ಕೈ ಗಡಗಡ ನಡುಗಲಾರಂಭಿಸಿದುವು. ನನ್ನೆಲ್ಲಾ ರಗ್ಗುಗಳನ್ನೂ ರಜಾಯಿಗಳನ್ನೂ ಹೊದಿಸಿದರೂ ಮೈ ನಡುಕ ನಿಲ್ಲಲಿಲ್ಲ. ಆದರೂ ಪ್ರಯಾಣ ಮುಂದುವರೆಯಿತು.

ಜನವರಿ ೧೩ನೆಯ ತಾರೀಖು ಶುಕ್ರವಾರ ಮಧ್ಯಾಹ್ನ ನಾಲ್ಕು ಗಂಟೆಗೆ ನಾವು ಬಿಜಾಪುರ ತಲುಪಿದೆವು. ಸತ್ರಗಳ ತುಂಬ ವಿದೇಶಿವರ್ತಕರು ಇದ್ದರು. ಈ ಕಾರಣ ನಾನು ನನ್ನ ಬಿಡಾರವನ್ನು ಬೇರೊಂದು ಕಡೆ ಮಾಡಿದೆ. ನನ್ನ ಕಾಯಿಲೆ ಹೆಚ್ಚಾಗುತ್ತಾ ಬಂದಿತು. ಯಾರಾದರೂ ಆರ್ಮೇನಿಯನ್ ಅಥವಾ ಪರ್ಷಿಯನ್ ಜನ ಸಿಕ್ಕಿಯಾರೆ ನೋಡಿಕೊಂಡು ಬನ್ನಿ ಎಂದು ನನ್ನ ಆಳುಗಳನ್ನು ಕಳುಹಿಸಿದೆ. ಅವರಿಗೆ ಬೇಕಾದಷ್ಟು ಜನ ಸಿಕ್ಕಿದರೂ ಅವರು ತಮ್ಮ ವ್ಯಾಪಾರ ಬಿಟ್ಟು ಬರಲಾಗುವದಿಲ್ಲ ಎಂದರಂತೆ. ಕೊನೆಗೆ ರಾಜನ ಆಸ್ಥಾನದಲ್ಲಿ ಒಬ್ಬ ಪರ್ಷಿಯನ್ ಅಧಿಕಾರಿ ಇರುವದಾಗಿ ತಿಳಿಯಿತು. ಅವನಿಗೆ ನನ್ನ ಸೇವಕರ ಮೂಲಕ ಹೇಳಿಕಳುಹಿಸಿದೆ. ಈತನ ಹೆಸರು ಖ್ವಾಜಾ ಅಬ್ದುಲ್ಲಾ ಎಂದು. ಈತ ವಿಷಯ ತಿಳಿದಕೂಡಲೇ ತನ್ನ ಕುದುರೆ ಹತ್ತಿ ತನ್ನೊಡನೆ ಇಬ್ಬರು ಕುದುರೆ ಸವಾರರನ್ನು ಕರೆದುಕೊಂಡು ನಾನಿದ್ದ ಕಡೆಗೆ ಬಂದ. ನನ್ನ ಜ್ವರದ ತಾಪದಲ್ಲಿ ಅವನು ಯಾರೆಂದು ನಾನು ಗುರುತಿಸಲಾಗಲಿಲ್ಲ. ಆದರೆ ಆತ ನನ್ನ ಗುರುತು ಹಿಡಿದು 'ಏನು ನಿನಗೆ ಗೊತ್ತಾಗಲಿಲ್ಲವೆ ನಾನು ಯಾರು ಎಂದು? ನಾನು ಖ್ವಾಜಾ ಅಬ್ದುಲ್ಲಾ! ನಾನು ಮಿರ್ಜ್ಞಾನ್‌ನ ಗೌರ್ನರ್ ಆಗಿದ್ದಾಗ, ನೀನೂ ನಾನೂ ಗೆಳೆಯರಾಗಿರಲಿಲ್ಲವೆ?' ಎಂದನು. ನಾನು ಆತನ ಗುರುತು ಹಿಡಿದೆ: 'ಗೆಳೆಯಾ ನನಗೆ ಕೂಡಲೇ ನೆರವು ಬೇಕು. ಇರಲು ಈ ಸ್ಥಳ ಸರಿಯಲ್ಲ. ಬೇರೆ ಸ್ಥಳ ಒದಗಿಸಿಕೊಡು' ಎಂದೆ.

ಆತ 'ನಿನ್ನ ಬಿಡಾರಕ್ಕೆ ಯೋಚನೆಮಾಡಬೇಡ. ನನ್ನ ಮನೆಯಲ್ಲೋ ಪಕ್ಕದಲ್ಲೋ ಇರಬಹುದು. ಆದರೆ ನಿನ್ನ ಕಾಯಿಲೆ ನೋಡುವ ವೈದ್ಯರು ಪರ್ಷಿಯನರಲ್ಲಿ ಇಲ್ಲ. ಒಬ್ಬ ಪೋರ್ಚುಗೀಸ್ ವೈದ್ಯ ಇದ್ದಾನೆ. ಆತನನ್ನು ಕಳಿಸಿಕೊಡುತ್ತೇನೆ' ಎಂದ.

ನನಗೆ ಬೇರೆ ದಾರಿಕಾಣದೆ ಆಗಲಿ ಎಂದೆ. ಆದರೆ ಆತನೂ ಎಲ್ಲೋ ಹೊರಟು ಹೋಗಿದ್ದಾನೆಂದು ತಿಳಿಯಿತು. ಔಷಧಿ ಕೊಡುವವರು ಯಾರೂ ಸಿಕ್ಕಲಿಲ್ಲ. ಅಬ್ದುಲ್ಲಾ ಮಾತ್ರ ದಿನಾ ಬಂದು ನೋಡಿಕೊಂಡು ಹೋಗುತ್ತಿದ್ದ. ಆತನ ಮನೆಯಲ್ಲಿಯೇ ನನಗಾಗಿ ಒಂದು ಕೋಣೆಯನ್ನು ಸಿದ್ಧಪಡಿಸಿದ್ದ. ಆದರೆ ಅಲ್ಲಿ ತುಂಬಾ ಸದ್ದುಗದ್ದಲ ಎಂಬುದನ್ನು ಸೇವಕರಿಂದ ತಿಳಿದು, ಗದ್ದಲವಿಲ್ಲದ ಬೇರೆ ಜಾಗವನ್ನು ಗೊತ್ತುಮಾಡಲು ಖ್ವಾಜಾನನ್ನು ಕೇಳಿಕೊಂಡೆ. ಈ ವೇಳೆಗೆ ರಾಯಭಾಗ್‌ನಲ್ಲಿ ಕಂಡಿದ್ದ ಪೋರ್ಚುಗೀಸ್

ಫಿದಾಲ್ಗೊ ಬಿಜಾಪುರಕ್ಕೆ ಬಂದು ನಾನು ಕಾಯಿಲೆಬಿದ್ದಿರುವ ಸಂಗತಿ ಕೇಳಿನೋಡಲು ಬಂದ. ತನ್ನ ದೊಡ್ಡಮನೆ ನನ್ನ ಬಿಡದಿಗೆ ಅನುಕೂಲವಾಗಿದೆಯೆಂದು ಹೇಳಿ ಕೂಡಲೆ ನನ್ನನ್ನು ಅಲ್ಲಿಗೆ ಸಾಗಿಸಿದ.

ಆದರೆ ನನ್ನ ಆರೋಗ್ಯ ಸುಧಾರಿಸಲಿಲ್ಲ. ಜ್ವರ ಹೆಚ್ಚುತ್ತಲೇ ಇತ್ತು. ಒಂದೇ ಸಮನೆ ೩೫ ದಿನ ಜ್ವರ ಕಾಯಿತು. ನಾನು ಬದುಕುವ ಆಸೆಬಿಟ್ಟೆ. ಎಂಥ ಊರು ಇದು! ಒಬ್ಬ ವೈದ್ಯನಿಲ್ಲವಲ್ಲ. ಇಷ್ಟೊಂದು ದೊಡ್ಡ ಊರಿನಲ್ಲಿ! ನಾನು ಸಾಯುವದು ಖಚಿತ ಎನಿಸಿತು. ಮುಂದಿನ ದೀರ್ಘಪ್ರಯಾಣಕ್ಕೆ ಸಿದ್ಧತೆಮಾಡಿಕೊಳ್ಳುವುದು ಉಚಿತ ವೆಂದು ನನ್ನ ಸೇವಕರಮೂಲಕ ಪಾದ್ರಿಯನ್ನೋ ಅಥವಾ ಒಬ್ಬ ಒಳ್ಳೆಯ ಕ್ರೈಸ್ತ ನನ್ನೋ ಕರೆತರಲು ಕಳುಹಿಸಿದೆ. ಆದರೆ ನನ್ನ ಕ್ರೈಸ್ತಸೇವಕರು ಹಿಂದಿರುಗಿ ಬಂದು ಹೇಳಿದರು. 'ಅಂಥವರು ಯಾರೂ ಈ ಊರಿನಲ್ಲಿ ಇಲ್ಲ' ಎಂದು!

ಇನ್ನೊಂದು ವಿಷಯುವನ್ನು ನನ್ನ ಸೇವಕರು ನನಗೆ ತಿಳಿಸಿದರು. ನಾನು ಇದ್ದ ಮನೆಯ ಪೋರ್ಚುಗೀಸ್ ಫಿದಾಲ್ಗೋ ಕ್ರೈಸ್ತಮತ ಬಿಟ್ಟು ಮೂರ್ ಮತ ಅಪ್ಪಿ ಕೊಳ್ಳುವ ಸನ್ನಾಹದಲ್ಲಿದ್ದಾನೆ ಎಂದು. ದಿನಾ ಹಲವಾರು ಜನ ಬಂದು 'ನೀನು ಪೇಟ ಸುತ್ತಿದರೆ ನಿನ್ನ ಭಾಗ್ಯದ ಬಾಗಿಲು ತೆರೆದಂತೆ' ಎಂದು ಅವನ ಕಿವಿಯಲ್ಲಿ ಹೇಳುತ್ತಿದ್ದರಂತೆ. ಇದು ನನಗೆ ಅಚ್ಚರಿಯೆನಿಸಲಿಲ್ಲ. ಆತನ ವಿಷಯ ತಿಳಿದ ನಾನು ಅವನಿಗೆ ನನ್ನ ವಿಷಯ ಏನೂ ಹೇಳಲಿಲ್ಲ. ಸಾಯುವ ಮುನ್ನ ಒಬ್ಬ ಪಾದ್ರಿಯ ಬಾಯಿಂದ ದೇವರನಾಮ ಕೇಳುವ ಭಾಗ್ಯವಿಲ್ಲದೇ ಹೋಯಿತಲ್ಲ ಎಂಬ ಸಂಕಟದಲ್ಲಿ ನನ್ನ ಸೇವಕರನ್ನೆಲ್ಲಾ ಬಳಿಗೆ ಕರೆದೆ. ಅವರಲ್ಲಿ ನಾಲ್ವರು ಕ್ರೈಸ್ತರು, ಇಬ್ಬರು ಹಿಂದೂಗಳು. ಇವರೆಲ್ಲಾ ನನ್ನ ಸೇವೆ ಯನ್ನು ಹಗಲು-ರಾತ್ರಿ ಮಾಡಿದ್ದರು. ನನ್ನ ಸ್ಥಿತಿಗಾಗಿ ಗಳಗಳನೆ ಕಣ್ಣೀರು ಸುರಿಸಿದರು. ಅವರನ್ನು ಸಮಾಧಾನಪಡಿಸುತ್ತ 'ನಿಮ್ಮಿಂದ ಯಾರಾದರೂ ಇಲ್ಲಿಂದಾಚೆ ಗೋಲ್ಕೊಂಡಾಕ್ಕೆ ಹೋಗಿದ್ದೀರಾ?' ಎಂದು ಕೇಳಿದೆ.

'ಓಹೋ ಹೋಗಿ ಬಂದಿದ್ದೇವೆ. ದಾರಿ ಚನ್ನಾಗಿ ಗೊತ್ತು. ದೇಶದ ರೀತಿ ನೀತಿಗಳೆಲ್ಲಾ ಗೊತ್ತು'.

'ಹಾಗಿದ್ದರೆ ಆದಷ್ಟು ಜಾಗ್ರತೆ ಹೋಗಿಬರಲು ಎಷ್ಟುದಿನ ಬೇಕು?'

ಇದಕ್ಕೆ ಅವರು '೨೫-೨೬ದಿನ ಬೇಕು' ಎಂದರು. ಆಗ ನನ್ನ ಇನ್ನೊಬ್ಬ ಸೇವಕ ಸಿಟ್ಟಾಗಿ 'ಅಷ್ಟು ದಿನ ಬೇಕಾಗಿಲ್ಲ, ನಾನು ೧೬—೧೮ ದಿನಗಳಲ್ಲಿ ಹೋಗಿಬರಬಲ್ಲೆ. ಆದರೆ ಹೊರೆಗಿರೆ ಇರಬಾರದು' ಎಂದ.

ಟಪಾಲು ಮತ್ತು ಕಾಗದಪತ್ರಗಳನ್ನು ಒಯ್ಯುವ 'ಪಟ್ಟಿಮಾರರು' ಕುದುರೆ ಸವಾರಿಗಿಂತಲೂ, ಗಾಡಿಗಳಿಗಿಂತಲೂ ಹೆಚ್ಚು ವೇಗವಾಗಿ ಪ್ರಯಾಣ ಮಾಡಬಲ್ಲರೆಂಬು ದನ್ನು ಕೇಳಿ ಆಶ್ಚರ್ಯವಾಗುತ್ತದೆ. ಇವರು ಹಗಲು-ರಾತ್ರಿ ನಡೆದುಕೊಂಡೇ ದಾರಿ ಸಾಗಿಸುತ್ತಾರೆ. ಒಂದೆರಡು ಗಂಟೆಗಳ ಕಾಲ ಮಾತ್ರ ಮರದ ಕೆಳಗೋ ಅಥವಾ ಕೆರೆ,

ನದಿಗಳ ಬಳಿಯೊ ವಿಶ್ರಾಂತಿ ಪಡೆದು ಯಾವಾಗಲೂ ದಾರಿ ನಡೆಯುತ್ತಲೇ ಇರುತ್ತಾರೆ. ಹೊಟ್ಟೆಗೆ ರೊಟ್ಟಿ ಅಥವಾ ಅನ್ನದಬುತ್ತಿ ಇರುತ್ತದೆ. ಅದನ್ನು ತಿಂದಾದಮೇಲೆ ಹೊಗೆಸೊಪ್ಪು ಸೇದಿ ಹೊರಟೇಬಿಡುತ್ತಾರೆ.[೧]

ನನ್ನ ಕ್ರೈಸ್ತಸೇವಕನ ಹುಮ್ಮಸ್ಸಿಗೆ ಮೆಚ್ಚಿ, ಆತನ ಬೆನ್ನುತಟ್ಟಿ ಕೂಡಲೇ ಗೋಲ್ಕೊಂಡಾಕ್ಕೆ ಹೋಗಿ ಪಾದ್ರಿಗಳನ್ನು ಕರೆದುಕೊಂಡು ಬರುವಂತೆ ತಿಳಿಸಿ ಪೋರ್ಚು ಗೀಸ್ ಫಿದಾಲ್ಗೋನ ಗುಮಾಸ್ತನ ಕೈಯಲ್ಲಿ ಒಂದು ಕಾಗದ ಬರೆಸಿ ಕಳುಹಿಸಿಕೊಟ್ಟೆ. ಹಿಡಿದ ಕೆಲಸವನ್ನು ನಿರ್ವಹಿಸಿದರೆ ದೊಡ್ಡ ಬಹುಮಾನ ಕೊಡುವದಾಗಿ ಆ ಸೇವಕನಿಗೆ ಹೇಳಿ ಹುರಿದುಂಬಿಸಿದೆ. ಅವನು ಜನವರಿ ತಿಂಗಳ ಕೊನೆಯದಿನ ಇಲ್ಲಿಂದ ಹೊರಟ.

ಫೆಬ್ರುವರಿ ೧೨ನೆಯ ಭಾನುವಾರ ನನ್ನ ಕಾಯಿಲೆಯಿಂದ ಬದುಕಿ ಉಳಿಯುವುದು ಅಸಾಧ್ಯವೆಂದು ಕಂಡಿತು. ನನ್ನ ಸೇವಕರನ್ನೆಲ್ಲಾ ಕೋಣೆಯಿಂದ ಹೊರಗೆ ಕಳುಹಿಸಿದೆ. ಇಬ್ಬರು ಕ್ರೈಸ್ತಸೇವಕರನ್ನು ಮಾತ್ರ ಹತ್ತಿರದಲ್ಲಿ ಇಟ್ಟುಕೊಂಡೆ. ಪಾಪ! ಆ ಬಡಪಾಯಿ ಗಳು ಅಳುತ್ತಿದ್ದರು. 'ಅಳಬೇಡಿ ಸುಮ್ಮನಿರಿ ಮಕ್ಕಳೇ' ಎಂದು ಅವರನ್ನು ಸಮಾಧಾನ ಮಾಡಿ 'ಈಗ ನಿಮ್ಮಿಂದ ನನಗೊಂದು ಉಪಕಾರವಾಗಬೇಕಾಗಿದೆ ನಡೆಸಿಕೊಡುವಿರಾ?' ಎಂದು ಕೇಳಿದೆ. 'ಅಯ್ಯೋ ಒಡೆಯಾ, ನಮ್ಮ ಪ್ರಾಣ ಕೊಟ್ಟಾದರೂ ನಿಮ್ಮ ಪ್ರಾಣ ಉಳಿಸಲು ಸಿದ್ಧರಾಗಿದ್ದೇವೆ. ಹೇಳಿ, ಏನು ಮಾಡಬೇಕು' ಎಂದು ಅಂಗಾಲಾಚಿದರು.

'ಸಂತೋಷ, ಮಕ್ಕಳೇ ಸಂತೋಷ! ನಿಮ್ಮ ಸ್ವಾಮಿಭಕ್ತಿಗಾಗಿ ಮೆಚ್ಚಿದ್ದೇನೆ. ಈಗ ಅಳಬೇಡಿ, ಧೈರ್ಯತಂದುಕೊಳ್ಳಿ. ಇಗೋ ಈ ಜಪಮಾಲೆ ಪುಸ್ತಕಗಳ ಮೇಲೆ ಆಣೆಯಿಟ್ಟು ಹೇಳಿ. ನಾನು ಹೇಳಿದ ಕೆಲಸವನ್ನು ತಪ್ಪದೇ ಮಾಡುತ್ತೇವೆ ಎಂದು'.

ಇಷ್ಟು ಹೇಳಿ ಅವರ ಕೈಯಿಂದ ನನ್ನ ತೊಗಲಿನ ಕೈಪೆಟ್ಟಿಗೆ ತೆರೆಸಿ ಅದರಲ್ಲಿ ಮೊದಲೇ ಜೋಡಿಸಿಟ್ಟಿದ್ದ ಮುಖ್ಯವಾದ ಕಾಗದ ಪತ್ರಗಳ ಕಟ್ಟನ್ನು ಅವರ ಕೈಯಲ್ಲಿಟ್ಟು 'ನಾನು ಇಹಲೋಕ ತ್ಯಜಿಸಿದ ಕೂಡಲೇ ನೀವು ಹೊರಟು ಸೇಂಟ್ ಥೋಮ್‌ಗೆ ಹೋಗಿ ಅಲ್ಲಿರುವ ವೈಸರಾಯ್ ಕೈಗೆ ಇವನ್ನು ಕೊಡಬೇಕು. ಬಹು ಗುಟ್ಟಾಗಿ ಈ ಕೆಲಸ ಮಾಡಬೇಕು. ವೈಸರಾಯಿಯೂ ನಿಮ್ಮ ಕೆಲಸ ಮೆಚ್ಚಿ ಬಹುಮಾನ ಕೊಡುತ್ತಾರೆ.

---

೧. ಪಟ್ಟಮಾರ್—ಈ ಪಟ್ಟಮಾರರು ಎಷ್ಟು ವೇಗವಾಗಿ ದಾರಿಸಾಗಿಸಿ ಸುದ್ದಿಮುಟ್ಟಿಸು ತ್ತಿದ್ದರು ಎಂಬುದಕ್ಕೆ ಉದಾಹರಣೆಗಳು: ಬನಾರಸಿ ಎಂಬ ಹಿಂದೂ ಚರಭಟ ಜಹಾಂಗೀರನು ಕಾಶ್ಮೀರದ ಗಡಿಯಲ್ಲಿ ಸತ್ತ ಸುದ್ದಿಯನ್ನು ಡೆಕ್ಕನ್ನಿನ ಬುನ್ನಾರ್ ಎಂಬಲ್ಲಿ ಇದ್ದ ಷಾಹಜಾನ್‌ನಿಗೆ ಮುಟ್ಟಿಸಲು ೧೦೦೦ ಮೈಲಿ ದೂರವನ್ನು ೨೦ ದಿವಸಗಳಲ್ಲಿ ನಡೆದನಂತೆ. ಆದರೆ ಸಾಮಾನ್ಯವಾಗಿ ಇಷ್ಟು ವೇಗವಾಗಿ ದಾರಿ ನಡೆಯಲು ಸಾಧ್ಯವಾಗುತ್ತಿರಲಿಲ್ಲ. ಗೋವೆಯಿಂದ ಮದ್ರಾಸಿಗೆ ಇದ್ದ ೪೫೦ ಮೈಲಿ ದೂರವನ್ನು ೨೦ ದಿವಸಗಳಲ್ಲಿ ಸಾಗಿಸಿಬಂದನೆಂದು ಈಸ್ಟ್ ಇಂಡಿಯಾ ಕಂಪೆನಿಯ ೧೬೭೮ರ ವರದಿಯೊಂದು ತಿಳಿಸುತ್ತದೆ. ೧೬೭೯ರಲ್ಲಿ ಪಟ್ನಾದಿಂದ ಹುಗ್ಲಿಗೆ (೨೭೦ ಮೈಲಿ) ಒಂದು ಕಾಗದವನ್ನು ಕಳುಹಿಸಲು ೧೨ ದಿನಗಳು ಹಿಡಿದುವಂತೆ. ಆದ್ದರಿಂದ ಒಬ್ಬ ಪಟ್ಟಮಾರನು ದಿನಕ್ಕೆ ಸುಮಾರು ೨೨ ಮೈಲಿ ಪ್ರಯಾಣ ಮಾಡುತ್ತಿದ್ದನೆಂದು ಹೇಳಬಹುದು.

ನೀವು ಅಲ್ಲೇ ಇರಲು ಇಷ್ಟಪಟ್ಟರೆ ಕೆಲಸವನ್ನೂ ಕೊಡುತ್ತಾರೆ' ಎಂದು ತಿಳಿಸಿದೆ. ನಾನು ಹೇಳಿದ ಕೆಲಸವನ್ನು ಅವರು ಮಾಡಬಲ್ಲರೆಂಬ ಭರವಸೆ ನನಗಿತ್ತು.

ಫೆಬ್ರುವರಿ ೧೬ ಗುರುವಾರ ಪೋರ್ಚುಗೀಸ್, ಫಿದಾಲ್ಗೋ ಮತ್ತು ಖ್ವಾಜಾ ಅಬ್ದುಲ್ಲಾ ಅವರ ಮುಂದೆ ನನ್ನ ಚರ ಆಸ್ತಿಯು ಅಂದರೆ ದುಡ್ಡುಕಾಸು, ಶಸ್ತ್ರಾಸ್ತ್ರ ಇತ್ಯಾದಿಗಳ ಪಟ್ಟಿಮಾಡಿ, ಅದನ್ನು ಪರ್ಷಿಯಾ ಭಾಷೆಗೆ ತರ್ಜುಮೆಮಾಡಿಸಿ ಒಂದು ನಕಲನ್ನು ಫಿದಾಲ್ಗೋ ಕೈಯಲ್ಲೂ ಇನ್ನೊಂದನ್ನು ಅಬ್ದುಲ್ಲಾನ ಕೈಯಲ್ಲೂ ಕೊಟ್ಟೆ. ಅಬ್ದುಲ್ಲಾ ಬಹು ವ್ಯಸನದಿಂದ ಅಲ್ಲಿಂದ ನಿರ್ಗಮಿಸಿದ.

ರಾತ್ರಿ ಒಂಬತ್ತು ಘಂಟೆ ನನ್ನ ಸಾವು ಸಮೀಪಿಸಿತೆಂದು ಎಲ್ಲರೂ ಭಾವಿಸಿದರು. ನನಗೆ ಪ್ರಜ್ಞೆ ತಪ್ಪಲಾರಂಭಿಸಿತು. ನನ್ನ ಪೋರ್ಚುಗೀಸ್ ಸೇವಕನೊಬ್ಬ ನನ್ನ ಕೈಕಾಲು ಮುಟ್ಟಿ ಅವು ತಣ್ಣಗಾಗುತ್ತಿರುವುದನ್ನು ಕಂಡು 'ಪರಮಾತ್ಮಾ, ಯಜಮಾನರ ಕೈಕಾಲು ತಣ್ಣಗಾಗ್ತಾ ಇವೆ. ಅಂತೋಣಿ ದೇವರೆ!' ಎಂದು ಗಾಬರಿಯಿಂದ ಹೇಳಿದ. ಅದಷ್ಟೇ ನಾನು ಕೇಳಿದ ಕೊನೆಯ ಮಾತುಗಳು. ಆಮೇಲೆ ಮೂರು ದಿವಸ ಏನಾಯಿತೆಂದು ಕಾಣೆ. ನನ್ನ ಸೇವಕರಿಂದ ಆಮೇಲೆ ತಿಳಿಯಿತು. ಎಲ್ಲರೂ ನನ್ನ ಹಾಸಿಗೆಯಸುತ್ತ 'ಜೀಸಸ್! ಮೇರಿ!' ಎಂದು ಅತ್ತು ಕರೆದರಂತೆ. ಒಬ್ಬನು ನನ್ನ ನಾಡಿ ಹಿಡಿದು ಅದು ನಿಂತಿರುವುದೋ ಇಲ್ಲವೋ ನೋಡಿದನಂತೆ. ಇನ್ನೊಬ್ಬ ನನ್ನ ಮೂಗು ತಣ್ಣಗಾಗಿದೆಯೇ ಹೇಗೆ ಎಂದು ಮುಟ್ಟಿ ನೋಡಿದನಂತೆ. ಪ್ರಾಣ ಇರುವ ಸೂಚನೆ ಏನೂ ಕಾಣದೆ 'ಎಲ್ಲಾ ಮುಗಿಯಿತು ವಸ್ತು ಹೋಗಿದೆ' ಎಂದರಂತೆ. ನನ್ನವರೆಲ್ಲಾ ಗೊಳೋ ಎಂದು ಅತ್ತರಂತೆ. 'ಪಾಪ ಇಷ್ಟು ಚಿಕ್ಕವಯಸ್ಸಿಗೇ ಸಾಯಬೇಕಾಯ್ತಲ್ಲ, ವಯಸ್ಸು ನಲವತ್ತ ಕ್ಕಿಂತ ಹೆಚ್ಚು ಇರಲಾರದು'. 'ಇಲ್ಲ ಇಲ್ಲಾ, ನನ್ನತ್ರ ಬಹಳ ಸಲ ಹೇಳಿದ್ರು ತಮ್ಮ ವಯಸ್ಸು ಮೂವತ್ತುನಾಲ್ಕು ಎಂದು' ಹೀಗೆಲ್ಲಾ ಮಾತು ಸಾಗಿತಂತೆ.

ಹೀಗೆ ಮಾತುಗಳು ನಡೆಯುತ್ತಿರುವಾಗ ನಮ್ಮ ಪೋರ್ಚುಗೀಸ್ ಫಿದಾಲ್ಗೋ ಡಾಂ ಫೆದ್ರೊ ಕ್ರೈಸ್ತರಿಗೆ ತಕ್ಕ ಒಂದು ಒಳ್ಳೆಯ ಕೆಲಸ ಮಾಡಿದನಂತೆ. ತನ್ನ ಪೆಟ್ಟಿಗೆ ಯಲ್ಲಿದ್ದ ಮೇಣದ ಬತ್ತಿಗಳನ್ನು ತರಿಸಿ ಅವನ್ನು ನನ್ನ ಶವದ ಸುತ್ತ ಎಲ್ಲರ ಕೈಯ್ಯಲ್ಲೂ ಒಂದೊಂದು ಹಚ್ಚಿ ಇಡಿಸಿದ. ಪವಿತ್ರ ಮೇರಿಯ ಬೋಧನೆಯ ಪುಸ್ತಕದಿಂದ ಕೆಲವು ಸಾಲುಗಳನ್ನು ಓದಿ ಬೇರೆಯವರಿಂದಲೂ ಹೇಳಿಸಿದ. ಇಷ್ಟು ಮಾಡಿ ನನ್ನ ಸಾಮಾನು ಸರಂಜಾಮುಗಳನ್ನೆಲ್ಲಾ ತನ್ನ ಕೋಣೆಗೆ ಸಾಗಿಸಿ, ನಾಳೆ ಬೆಳಿಗ್ಗೆ ಹೊತ್ತಿನಂತೆ ಶವ ಸಂಸ್ಕಾರ ಮಾಡಿಬಿಡೋಣ, ಬಿಸಿಲೇರಿದರೆ ಕಷ್ಟ' ಎಂದು ಹೇಳಿ ಹೋದ. ನಾನು ರಾತ್ರಿಹೊತ್ತು ಸತ್ತದ್ದು ಒಳ್ಳೆಯದೇ ಆಯಿತು. ಹಗಲು ಸತ್ತಿದ್ದರೆ ಆ ಕೂಡಲೇ ಸಮಾಧಿಮಾಡಿ ಬಿಡುತ್ತಿದ್ದರು!

ನನ್ನ ಎಲ್ಲಾ ಸಾಮಾನುಗಳನ್ನು ತೆಗೆದುಕೊಂಡು ಹೋದರು. ಬಟ್ಟೆಬರೆಗಳನ್ನು ಡಾಂ ಫೆದ್ರೊ ಅಲ್ಲಿಯೇ ಬಿಟ್ಟಿದ್ದರು. ಅವುಗಳಲ್ಲೇನಾದರೂ ದುಡ್ಡಿರಬಹುದೇ ಎಂದು

ಭಾವಿಸಿ ಮತ್ತೆ ಹಿಂದಿರುಗಿಬಂದು ಜೇಬುಗಳನ್ನು ಕೊಡವಿ ಐವತ್ತು ಈಕಸ್ ದುಡ್ಡು ತೆಗೆದುಕೊಂಡು ಹೋದ. ದಾರಿ ಖರ್ಚಿಗೆಂದು ನಾನು ಯಾವಾಗಲೂ ೫೦ ಈಕಸ್ ದುಡ್ಡು ಇಟ್ಟುಕೊಂಡಿರುತ್ತಿದ್ದೆ.

ಆಮೇಲೆ ನನ್ನ ನಾಲ್ಕೈದು ಜನ ಸೇವಕರು ಹೆಣದ ಜೊತೆ ರಾತ್ರಿಯೆಲ್ಲಾ ಇರಲು ಹೆದರಿ, ಡಾಂ ಫೆದ್ರೋನ ಐದಾರು ಜನರನ್ನೂ ಕೋಣೆಗೆ ಕರೆದುತಂದರು. ದೊಡ್ಡದಾಗಿ ಬೆಂಕಿ ಹಚ್ಚಿದರು. ಅಕ್ಕಿ, ಕೋಳಿ ಮುಂತಾದುವನ್ನು ತಂದು ಅಡಿಗೆಮಾಡಲಾರಂಭಿಸಿದರು. ನನ್ನಲ್ಲಿ ಉಳಿದಿದ್ದ ಪರ್ಷಿಯನ್ ವೈನ್, ಸಿಹಿತಿಂಡಿ ಮುಂತಾದ ರೋಗಿಯ ತಿಂಡಿ ತೀರ್ಥಗಳನ್ನು ಕುಡಿದು ತಿಂದು ಹೆಣ ಕಾಯುವ ಭಯ ನಿವಾರಿಸಿಕೊಂಡರು. ಯಜಮಾನನು ಸತ್ತಮೇಲೆ ಅವೆಲ್ಲಾ ತಮ್ಮವೆಂದುಕೊಳ್ಳುತ್ತಾ ಮುಗಿಸಿಬಿಟ್ಟರು.

ಬೆಳಿಗ್ಗೆ ಹೊತ್ತು ಹುಟ್ಟುವ ಮುನ್ನ ನನ್ನ ಶವಸಂಸ್ಕಾರಕ್ಕೆ ಸಿದ್ಧತೆಗಳು ನಡೆದುವು. ಸರಿ ಹತ್ತಿರ ಬಂದು ಹೆಣದ ಮೇಲೆ ಮುಚ್ಚಿದ್ದ ಬಟ್ಟೆ ತೆಗೆದು ನೋಡುತ್ತಾರೆ, ಕಣ್ಣುಗಳು ತೆರೆದಿವೆ! ಅಷ್ಟೇ ಅಲ್ಲ ಅತ್ತ ಇತ್ತ ಹೊರಳಾಡುತ್ತಿವೆ! ನೋಡಿದ್ದೇ ತಡ ಎಲ್ಲಾ ಬಿಟ್ಟು ಅಲ್ಲಿಂದ ಓಡಿದ್ದೂ ಓಡಿದ್ದೆ. ಮಲಗಿದ್ದವರೂ ಎದ್ದು ಹೆದರಿ ಚಲ್ಲಾಪಿಲ್ಲಿಯಾಗಿ ಓಡಿದರು. ಫಿದಾಲ್ಗೋ ಸಹ ಅಲ್ಲಿಗೆ ಓಡಿಬಂದ. ನನ್ನ ಪಿಶಾಚಿ ಹಿಂದಿರುಗಿ ಬಂದಿದೆಯೆಂದು ಗಾಬರಿಯಿಂದ ಅವನಿಗೆ ತಿಳಿಸಿದರು. ಯಾರಿಗೆ ಏನುಮಾಡುವದೋ ತಿಳಿಯಲಿಲ್ಲ. ಫಿದಾಲ್ಗೋ ಸಹ ಹೆದರಿ ಮನೆಬಿಟ್ಟುಹೋಗುವದೇ ಸರಿ ಎಂದು ತೀರ್ಮಾನಿಸಿದ. ಎಲ್ಲರೂ ಕೋಣೆಯಿಂದ ಹೊರಗೆ ಹೋಗಿ ಹೆದರಿಕೊಂಡು ನಿಂತಿದ್ದರು.

ಸೂರ್ಯ ಹುಟ್ಟಿದ. ನನ್ನ ದಫನ್ ಆಗಿರಲಿಲ್ಲ. ದಫನ್ ಮಾಡದೇ ಹೆಣವನ್ನು ಬಿಡಬಾರದಲ್ಲ ಎಂದು ನನ್ನ ಸೇವಕರು ಪರದಾಡುತ್ತಿರುವಾಗ ನನ್ನ ಪರ್ಷಿಯನ್ ಸ್ನೇಹಿತ ಖ್ವಾಜಾ ಅಬ್ದುಲ್ಲಾ ನನ್ನ ಆರೋಗ್ಯ ಹೇಗಿದೆ ಎಂದು ತಿಳಿಯಲು ಬಂದ. ನಾನು ಸತ್ತುಹೋಗಿದ್ದೇನೆ ಎಂದು ತಿಳಿದ ಆತ 'ಅಲ್ಲಾ' ಎನ್ನುತ್ತಾ ಎರಡು ಕೈಯೆತ್ತಿ ಪ್ರಾರ್ಥನೆಮಾಡಿದ. ಆದರೆ ನಾನು ದೆವ್ವ ಆಗಿರುವೆನೆಂದು ಹೇಳಿದ ಮಾತನ್ನು ಆತ ಮತ್ತೆ ನಾನು ಜೀವಪಡೆದಿರುವೆನೆಂದು ಭಾವಿಸಿದ. ಏಕೆಂದರೆ ಈ ದೇಶದಲ್ಲಿ ಆ ಬಗೆಯ ಮಾತೇ ಇಲ್ಲ. ಕ್ರೈಸ್ತರಲ್ಲಿ ಮಾತ್ರ ಈ ನಂಬಿಕೆ.[೧] ನನ್ನನ್ನು ಮಲಗಿಸಿದ್ದ ಕೋಣೆಗೆ ಬಂದ. ಎಲ್ಲರೂ ಒಳಗೆ ಬರಲು ಹೆದರಿದರು. ಅವನು ಮತ್ತು ಅವನ ಕಡೆಯ ಇಬ್ಬರು ಸೇವಕರು ಮಾತ್ರ ಬಂದರು.

ಆಗಲೇ ಬಹಳ ಹೊತ್ತಾಗಿತ್ತು. ಬಾಗಿಲು ಕಿಟಕಿಗಳನ್ನೆಲ್ಲಾ ತೆರೆದಿದ್ದ ಕಾರಣ ಕೋಣೆಯಲ್ಲಿ ಬೆಳಕು ಚಲ್ಲಾಡುತ್ತಿತ್ತು. ಅಬ್ದುಲ್ಲಾ ನನ್ನ ಕೈಕಾಲುಗಳನ್ನು ಮುಟ್ಟಿ

---

೧. ಇದು ಮುಸಲ್ಮಾನರ ಬಗ್ಗೆ ಸರಿಯಿದ್ದರೂ ಹಿಂದುಗಳ ಬಗ್ಗೆ ಸರಿಯಾಗುವುದಿಲ್ಲ. ಏಕೆಂದರೆ ಹಿಂದುಗಳಿಗೆ ಆಗಲೂ ಮತ್ತು ಈಗಲೂ ದೆವ್ವಗಳ ಬಗ್ಗೆ ಭಾರಿ ನಂಬಿಕೆ ಇದೆ.

ನಾಡಿಹಿಡಿದು ನೋಡಿದ. ನಾನು ಸತ್ತಿಲ್ಲ ಎಂದು ಖಚಿತಮಾಡಿಕೊಂಡು ಕೂಡಲೇ ತನ್ನ ಮನೆಗೆ ಹಿಂದಿರುಗಿ ಯಾವುದೋ ಒಂದು ಬಗೆಯ ಘಮಘಮಿಸುವ ರಸ ತಂದು ಬೆಳ್ಳಿ ಚಮಚದಲ್ಲಿ ಒಂದಿಷ್ಟು ನನಗೆ ಕುಡಿಸಿದ. ನಾನು ಸಲೀಸಾಗಿ ಉಸಿರಾಡಲಾರಂಭಿಸಿದೆ. ಮತ್ತಷ್ಟು ಕುಡಿಸಿದ. ಕೊಂಚ ಕೆಮ್ಮಿದೆ. ನನಗೀಗ ಅಷ್ಟು ಇಷ್ಟು ಪ್ರಜ್ಞೆ ಬಂದಿತು. ಎರಡು ಬಟ್ಟಲು ಅಕ್ಕಿ ಗಂಜಿ ಕುಡಿಸಿದರು.[೧]

ಈಗ ನಾನು ಬದುಕಿದೆ ಎಂದು ಎಲ್ಲರೂ ಭಾವಿಸಿದರು. ಆದರೆ ರಾತ್ರಿ ಮತ್ತೆ ಕಳೆದ ಸಂಜೆ ಆದಂತೆ ಆಯಿತು. ನಾಡಿ ಇಲ್ಲ, ಉಸಿರಾಟ ಇಲ್ಲ. ಶರೀರವೆಲ್ಲ ತಣ್ಣಗೆ. ಈಗ ನನ್ನ ಸೇವಕರು ಕೋಣೆಯಿಂದ ಹೊರಗೆ ಹೋಗದೆ ಕಿಟಕಿ ಬಾಗಿಲು ಮುಚ್ಚಿ ಮತ್ತೆ ಪ್ರಾಣ ಬರುವದೆಂದು ಕಾದರು. ಆದರೆ ಬರಲಿಲ್ಲ. ಹಸಿವನ್ನು ತೀರಿಸಿಕೊಳ್ಳಲು ಇನ್ನೊಂದು ಕೋಣೆಗೆ ಹೋದರು. ರಾತ್ರಿ ಎರಡು ಘಂಟೆ. ನನಗೆ ಬೆಚ್ಚಿದಂತಾಯಿತು. ಗಾಢ ನಿದ್ರೆಯಲ್ಲಿದ್ದು ಎಚ್ಚರಾದಂತಾಯಿತು. ನನ್ನ ಕಣ್ಣು ತೆರೆದೆ. ಕೋಣೆಯಲ್ಲಿ ಏನೂ ಇರಲಿಲ್ಲ. ಯಾರೂ ಇರಲಿಲ್ಲ. ನನ್ನ ಕಾಲಬಳಿ ಉರಿಯುತ್ತಿದ್ದ ಎರಡು ಮೇಣದ ಬತ್ತಿಗಳನ್ನು ಬಿಟ್ಟರೆ 'ಓ ಪವಿತ್ರ ಮೇರಿ, ನನ್ನ ಸಂರಕ್ಷಕಿ, ಮಹಾತಾಯಿ' ಎಂದು ಬಾಯಲ್ಲಿ ಉದ್ಗರಿಸಿದೆ. ಹೀಗೆಂದು ಪಕ್ಕದಲ್ಲಿದ್ದ ಕುರ್ಚಿಯಮೇಲೆ ಕುಳಿತುಕೊಳ್ಳಲು ಹಾಸಿಗೆಯಿಂದ ಕೆಳಗೆ ಇಳಿಯುವಾಗ ಬಿದ್ದುಬಿಟ್ಟೆ. ಈ ಶಬ್ದಕೇಳಿ ಸೇವಕರು ಓಡಿ ಬಂದರು. ನನ್ನನ್ನು ಎತ್ತಿ ಹಾಸಿಗೆ ಮೇಲೆ ಮಲಗಿಸಿದರು. ನಾಡಿ ಬಡಿದುಕೊಳ್ಳುತ್ತಿತ್ತು. ಪರ್ಷಿಯನ್ ಕೊಟ್ಟಿದ್ದ ಔಷಧಿಯನ್ನು ಒಂದು ಚಮಚ ಕುಡಿಸಿದರು.

ಫೆಬ್ರುವರಿ ೧೮ ಶನಿವಾರ ಬೆಳಿಗ್ಗೆ ನಾನು ಕಣ್ಣು ತೆರೆದೆ. ಸುತ್ತಮುತ್ತ ಇದ್ದವರನ್ನು ಗುರುತಿಸಿದೆ. ಮಾತುಬಂತು. ಅಂಗಾಂಗಗಳು ಚಲಿಸಲಾರಂಭಿಸಿದುವು. ಆಗ ನನಗೆ ಅನ್ನಿಸಿತು ರಕ್ತತೆಗೆಸಿದರೆ ಒಳ್ಳೆಯದು ಎಂದು. ಆ ಕೆಲಸಮಾಡಲು ಒಬ್ಬ ಸಿಕ್ಕಿದ. ಆದರೆ ಅದಕ್ಕೆ ಬೇಕಾದ ಈಟಿಶಸ್ತ್ರ (Laneet) ಇರಲಿಲ್ಲ. ಪೋರ್ಚುಗೀಸ್ ಫಿದಾಲ್ಗೋ ಬಳಿ ಎರಡು ಇದ್ದುವು. ನಾನು ಸಾಯದೆ ಬದುಕಿದೆನಲ್ಲ ಎಂಬ ಸಂಕಟ ಆ ಪಾಪಿಗೆ. ಕೊಡುವದಿಲ್ಲ ಎಂದ. ಹೇಗಾದರೂ ಮಾಡಿ ಒಂದು ಸಣ್ಣ ಚೂರಿಯನ್ನಾದರೂ ತನ್ನಿ ಎಂದೆ. ಒಂದು ತುಕ್ಕುಹಿಡಿದ ಚೂರಿ ತಂದರು. ಅದನ್ನು ಇಟ್ಟಿಗೆಯ ಮೇಲೆ ಮಸೆದು ಹೊಳಪು ಮಾಡಿ ಕ್ಷೌರದ ಕತ್ತಿಮಸೆಯುವ ಚರ್ಮದ ಪಟ್ಟಿಯ ಮೇಲೆ ಆಡಿಸಿ ಹರಿತ ಮಾಡಿದರು. ಎರಡು ಚೀನೀ ಬಟ್ಟಲು ತರಿಸಿದೆ. ಎಡತೋಳನ್ನು ಕಾಲುಪಟ್ಟಿಯಿಂದ ಬಿಗಿಯಾಗಿ ಕಟ್ಟಿಸಿದೆ. ರಕ್ತನಾಳ ಕಾಣಲಿಲ್ಲ. ತೋಳಿನುದ್ದಕ್ಕೂ ಇಪ್ಪತ್ತು ಗಾಯಗಳನ್ನು ಮಾಡಿದೆ. ರಕ್ತ ಮತ್ತು ನೀರು ಹರಿದುವು. ಎರಡು ಬಟ್ಟಲುಗಳೂ ತುಂಬಿದುವು. ರಕ್ತತೆಗೆದ ಕಾರಣ ಪ್ರಜ್ಞೆತಪ್ಪಿತು. ನಾನು ಸತ್ತೆನೆಂದೇ ಸೇವಕರು ಭಾವಿಸಿದರು.

---

೧. ಕಾರ್‌ನನ್ನು ಪೀಡಿಸಿದ್ದು ಮಲೇರಿಯಾ ಜ್ವರ ಎಂದು ವೈದ್ಯರ ಅಭಿಪ್ರಾಯ.

ಆದರೆ ಈಗ ನನ್ನ ಉಸಿರಾಟ ಸರಿಯಾಯಿತು. ಮಾತು ಸ್ಪಷ್ಟವಾಗಿ ಆಡಲಾರಂಭಿಸಿದೆ. ಇದು ಒಳ್ಳೆಯ ಸೂಚನೆಯೆಂದು ತೊಡೆಯಿಂದಲೂ ರಕ್ತತೆಗೆದೆ. ನಾಲ್ಕು ಮಡಿಕೆ ಮಾಡಿದ ಬಟ್ಟೆಗಳನ್ನು ಗಾಯಗಳಮೇಲೆ ಬಿಗಿದೆ. ಏನು ನೋವೂ ಕಾಣಲಿಲ್ಲ. ಆದರೆ ಗಾಯದ ಕಲೆಗಳು ಮಾತ್ರ ಖಾಯಂ ಆಗಿ ಉಳಿದುವು. ಆ ದಿನ ಗಂಜಿಕುಡಿದು ಮಲಗಿದೆ. ಹಿಂದಿನ ಎರಡು ರಾತ್ರಿ ಆದಂತೆ ಈ ರಾತ್ರಿ ಆಗಲಿಲ್ಲ.

ಭಾನುವಾರ—ಈ ದಿನವೂ ತೋಳು ಮತ್ತು ತೊಡೆಗಳಿಂದ ರಕ್ತ ತೆಗೆದುಕೊಂಡೆ. ಹಾಗೆ ಮುಂದಿನ ಎರಡು ದಿನಗಳೂ ಮಾಡಿದೆ. ನಿಶ್ಶಕ್ತಿ ಇದ್ದರೂ ಜ್ವರ ಇರಲಿಲ್ಲ. ಅದು ಇದು ತಿನ್ನುವ ಚಪಲದಿಂದ ದೂರವಿದ್ದೆ. ಎಲ್ಲವೂ ಸರಿಯಾಯಿತು. ಆದರೆ ಇಲ್ಲಿಯವರೆಗೆ ಏನು ನಡೆಯಿತೆಂದು ಗೊತ್ತಾಗಲಿಲ್ಲ. ನನ್ನ ಸಾಮಾನು ಸರಂಜಾಮು ಗಳು ಏನಾದುವೆಂದು ಕೇಳಿದೆ. ನನ್ನ ಸೇವಕನೊಬ್ಬ ನಡೆದದ್ದನ್ನೆಲ್ಲ ಸಾಂಗವಾಗಿ ಹೇಳಿದ.

ಇಷ್ಟರಲ್ಲಿ ಗೋಲ್ಕೊಂಡಾಕ್ಕೆ ಕಳುಹಿಸಿಕೊಟ್ಟಿದ್ದ ಸೇವಕನು ಹಿಂದಿರುಗಿದ. ಹೋಗಿ ಬರಲು ಒಟ್ಟು ಇಪ್ಪತ್ನಾಲ್ಕುದಿನ ತೆಗೆದುಕೊಂಡಿದ್ದ. ಬೇಕಾಗಿದ್ದ ಇಬ್ಬರು ಪಾದ್ರಿಗಳು ಬರಲಿಲ್ಲ. ಅದರಬದಲು ಅವರು ಕಳುಹಿಸಿಕೊಟ್ಟಿದ್ದ ಪತ್ರಗಳು ಬಂದಿದ್ದುವು. ವಯಸ್ಸು, ದಾರಿಯ ಕಷ್ಟ ಇವನ್ನೆಲ್ಲಾ ಸಹಿಸಿಕೊಂಡು ಬರಲು ಸಾಧ್ಯವಿಲ್ಲ ಎಂದು ಪತ್ರ ಬರೆದು ಕಳುಹಿಸಿದ್ದರು.

ಕಾಯಿಲೆ ಮತ್ತೊಮ್ಮೆ ಮರುಕಳಿಸದೆಂಬ ಭರವಸೆ ಉಂಟಾದಮೇಲೆ ನನ್ನನ್ನು ನೋಡಲು ಜನ ಬರಲಾರಂಭಿಸಿದರು. ಮೂರರ ಆಸ್ಥಾನದಲ್ಲಿ ನಮ್ಮ ಫಿದಾಲ್ಗೋ ನೌಕರಿ ಗಿಟ್ಟಿಸಿಕೊಂಡಿದ್ದ. ಅವನ ಮನೆಗೆ ಬರುವವರಿಗೆ ಹೋಗುವವರಿಗೆ ಲೆಕ್ಕವಿಲ್ಲ. ಹೀಗೆ ಬಂದವರಲ್ಲಿ ಆತನ ಹಳೆಯ ಸ್ನೇಹಿತನೊಬ್ಬ. ಆತ ಬಿಜಾಪುರದ ರಾಜಾಸ್ಥಾನದಲ್ಲಿ ಅಧಿಕಾರಿ. ಆತ ಬಂದದ್ದು ಈ ಹಿಂದೆ ತನಗೆ ಮಾರಿದ್ದ ಇಬ್ಬರು ಪೋರ್ಚುಗೀಸ್ ಹುಡುಗಿಯರಲ್ಲದೆ ಇನ್ನಿಬ್ಬರು ಬೇಕೆ ಎಂದು ಕೇಳಲು ಬಂದಿದ್ದ. ಇಬ್ಬರು ಆಗಲೇ ದಾರಿಗೆ ಬಂದಿದ್ದಾರೆ. ಈಗ ಅವರಿಗೂ ಸ್ಥಳದ ಹೆಂಗಸರಿಗೂ ಹೆಚ್ಚು ವ್ಯತ್ಯಾಸವಿಲ್ಲ ಎಂದ ಫಿದಾಲ್ಗೊ. ಮೂರ್‌ಮತ ಸೇರಿ ಏನೆಲ್ಲಾ ಸುಖಸಂತೋಷ ಸೌಲತ್ತುಗಳನ್ನು ಅನುಭವಿಸುತ್ತಿದ್ದೇವೆಂದು ಹೇಳಿಕೊಳ್ಳುತ್ತಿದ್ದ ಪೋರ್ಚುಗೀಸ್ ಭಂಡರೇ ಹೆಚ್ಚಾಗಿದ್ದರು.

ಆರೋಗ್ಯ ಸುಧಾರಿಸಿದಮೇಲೆ ನನ್ನ ಸಾಮಾನು ಸರಂಜಾಮುಗಳನ್ನು ತೆಗೆದು ಕೊಂಡಿದ್ದ ಫಿದಾಲ್ಗೋಗೆ ಹೇಳಿ ಕಳುಹಿಸಿದೆ. ನಾನು ಸತ್ತರೆ ಸಾಕು ಅವೆಲ್ಲಾ ತನ್ನವು ಗಳಾಗುತ್ತವೆಯೆಂದು ಭಾವಿಸಿದ್ದ ಆತ. ಈಗ ಬೇರೆ ದಾರಿಕಾಣದೆ ಅವನ್ನೆಲ್ಲಾ ಹಿಂದಿರು ಗಿಸಿದ. ಫ್ರೆಂಚರು ತಮ್ಮ ಕ್ಯಾಥೊಲಿಕ್ ಮತ ತ್ಯಜಿಸಿ ಮೂರ್‌ಮತ ಅವಲಂಬಿಸು ತ್ತಿರುವರೆಂಬುದು ನನಗೆ ತಿಳಿಯಬಾರದೆಂದು ಅವರು ಮೂರರನ್ನು ವಂಚಿಸುವದಕ್ಕೆ ಅವರ ಉಡುಪು ಧರಿಸಿಕೊಳ್ಳುತ್ತಿದ್ದಾರೆ ಅಷ್ಟೇ ಎಂದು ಸುಳ್ಳು ಹೇಳಿದ. ಇದನ್ನು

ನನಗೆ ಮಂದಟ್ಟುಮಾಡಲು ಮಾರನೆಯದಿನ ನನ್ನ ಬಳಿಗೆ ಇಬ್ಬರು ಫ್ರೆಂಚರನ್ನು ಕಳುಹಿಸಿಕೊಟ್ಟ. ತಲೆಗೆ ಪೇಟ, ಸೊಂಟದಲ್ಲಿ ಕತ್ತಿ—ಆ ಉಡುಪಿನಲ್ಲಿ ಅವರು ಹುಟ್ಟು ಮೂರರಂತೆ ಕಂಡರು. ಫ್ರಾನ್ಸ್‌ನಿಂದ ವೈಸ್‌ರಾಯ್ ಒಡನೆ ಸೆಂಟ್‌ಥೋಮ್‌ಗೆ ಬಂದು ಅಲ್ಲಿಂದ ಬಿಜಾಪುರಕ್ಕೆ ಭೂಮಾರ್ಗವಾಗಿ ಬಂದಿರುವದಾಗಿಯೂ, ಇಲ್ಲಿ ಮೂರ್ ಸರದಾರರ ನೆರವಿನಿಂದ ಒಳ್ಳೆಯ ನೌಕರಿ, ಕೈತುಂಬ ಸಂಬಳ, ಕುದುರೆಗಳ ಸವಾರಿ, ಆಳುಕಾಳು—ಇವೆಲ್ಲಾ ಸೌಕರ್ಯಗಳನ್ನು ಪಡೆದು ಸುಖವಾಗಿರುವದಾಗಿ ತಿಳಿಸಿದರು. 'ನಿಮಗೆ ನಮ್ಮ ಫ್ರೆಂಚ್ ಹ್ಯಾಟ್ ಮತ್ತು ಉಡುಪು ಚೆಂದಲ್ಲವೆ?' ಎಂದು ಕೇಳಿದೆ. ಅದಕ್ಕೆ ಅವರು 'ಇಲ್ಲಿ ಹ್ಯಾಟ್ ಸಿಗುತ್ತಿಲ್ಲ. ಉಡುಪು ಹೊಲಿದುಕೊಡುವ ದರ್ಜಿಗಳಿಲ್ಲ' ಎಂದರು.

'ಮೂರರಿಗೆ ಕ್ಯಾಥೊಲಿಕ್ ಮತ ಕಂಡರೆ ಆಗದು. ಹೀಗಿರುವಾಗ ನೀವು ಮೂರರಾಗಿರುವದು ಸಂದೇಹ' ಎಂದೆ.

'ಹೌದು, ನಿಜ. ಅವರೇನೇನೋ ಆಸೆ ಹುಟ್ಟಿಸಿದರು. ತಮ್ಮ ಮತ ಸೇರಿ ಎಂದು. ಆದರೆ ನಾವು ಸೇರಲಿಲ್ಲ'.

ಇಷ್ಟು ಹೇಳಿದ್ದಲ್ಲದೆ ತಾವು ಮೂರರ ಉಡುಪು ಧರಿಸಿ ಕ್ಯಾಥೊಲಿಕ್ ಚರ್ಚಿನ ಏಳಿಗೆಗಾಗಿ ಕೆಲಸಮಾಡುವದಾಗಿಯೂ ವಿಗ್ರಹಾರಾಧಕರನ್ನು ಕ್ಯಾಥೊಲಿಕ್ ಮತಕ್ಕೆ ಸೇರಿಸಿಕೊಳ್ಳುವದಕ್ಕಾಗಿ ಅವರ ಭಾಷೆ ಹಾಗೂ ನಡೆನುಡಿಗಳನ್ನು ಕಲಿಯುವದಾಗಿಯೂ ತಿಳಿಸಿದರು.

ಹೀಗೆ ಮಾತನಾಡಿದವರು ನನ್ನ ಮುಂದಿನ ಯೋಚನೆಗಳನ್ನು ತಿಳಿಯಲೆತ್ನಿಸಿದರು. ನಾನು ಮದ್ರಾಸಿಗೆ ಹೋಗುತ್ತೇನೆ ಎಂದು ಅವರು ಭಾವಿಸಿ ಅದನ್ನು ಖಚಿತಪಡಿಸಿಕೊಳ್ಳಲು ಪ್ರಯತ್ನಪಟ್ಟರು. ಆದರೆ ನನ್ನ ಉದ್ದೇಶವನ್ನು ಮರೆಮಾಚಿ ಅಲ್ಲಿಗೆ ಹೋಗುವದಿಲ್ಲ ಎಂದೆ. ನನ್ನ ಬಳಿ ಮಾತನಾಡಿಕೊಂಡು ಅವರು ಸೀದಾ ಫಿದಾಲ್ಗೋನ ಕೋಣೆಗೆ ಹೋಗಿ ನಡೆದದ್ದನ್ನೆಲ್ಲಾ ಅವನಿಗೆ ಹೇಳಿದರಂತೆ ಎಂದು ಆತನ ಚಿಕ್ಕಪ್ರಾಯದ ಸೇವಕನೊಬ್ಬ ನನಗೆ ತಿಳಿಸಿದ. ಆ ಇಬ್ಬರು ಫ್ರೆಂಚರು ಶುದ್ಧ ಕಳ್ಳಬಡವರೆಂದು ಈಗ ಸ್ಪಷ್ಟವಾದಂತಾಯಿತು.

ಮಧ್ಯಾಹ್ನದ ನಂತರ ಮತ್ತಿಬ್ಬರು ಫ್ರೆಂಚರು ನನ್ನನ್ನು ಕಾಣಲು ಬಂದರು. ಇವರೂ ಮಹಮ್ಮದೀಯರ ಉಡುಪಿನಲ್ಲಿದ್ದರು. ಬೆಳಿಗ್ಗೆ ಬಂದಿದ್ದ ಇಬ್ಬರು ಫ್ರೆಂಚರ ಬಗ್ಗೆ ರಕ್ತಕಾರಿದರು. ಅವರಿಂದ ತಾವು ಹಾಳಾದೆವೆಂದು ಗೋಳಾಡಿ ತಮ್ಮ ಕಥೆ ಹೇಳಿಕೊಂಡರು. 'ನಾವೂ, ಅವರೂ ಸೆಂಟ್‌ಥೋಮ್‌ನಲ್ಲಿ ವೈಸ್‌ರಾಯ್ ಸೇವೆಯಲ್ಲಿದ್ದೆವು. ಒಂದುದಿನ ಅವರು ಖುಷಿಗಾಗಿ ಮದ್ರಾಸಿಗೆ ಹೋಗಿಬರೋಣ ಎಂದು ನಮ್ಮನ್ನು ಕರೆದರು. ನಾವು ಹೋದೆವು. ಅಲ್ಲಿ ಒಬ್ಬ ಮದುವೆಯಾದ ಇಂಗ್ಲಿಷ್ ಅಧಿಕಾರಿಯ ಮನೆಯಲ್ಲಿ ಮೂರು ದಿವಸ ಮಜಾಮಾಡಿದೆವು. ಇದ್ದುದನ್ನೆಲ್ಲಾ ಖರ್ಚು

ಮಾಡಿಬಿಟ್ಟೆವು. ಸೆಂಟ್‌ಥೋಮ್‌ಗೆ ಹಿಂದಿರುಗುವದು ಬೇಡ ಅಂದುಕೊಂಡು ಗೋವೆಗೋ ಇನ್ನೆಲ್ಲಿಗೋ ಹೋಗುವದೆಂದು ತೀರ್ಮಾನಿಸಿದೆವು. ನಮ್ಮ ಶಸ್ತ್ರಾಸ್ತ್ರ ಗಳನ್ನೆಲ್ಲಾ ಮಾರಿದೆವು. ಪಿಸ್ತೂಲುಗಳನ್ನು ಮಾತ್ರ ಮಾರದೆ ಅವನ್ನು ನಮ್ಮ ಉಡುಪಿ ನಲ್ಲಿ ಅಡಗಿಸಿಕೊಂಡೆವು.

'ಮದರಾಸಿನಿಂದ ಎರಡು ಹರಿದಾರಿಕೂಡ ಹೋಗಿಲ್ಲ ಡಚ್ಚರು ನಮ್ಮನ್ನು ತಡೆಹಾಕಿದರು. ಕದ್ದುಹೋಗುವ ಪೋರ್ಚುಗೀಸರನ್ನು ಹಿಡಿದು ಪುಲಿಕಾಟ್‌ಗೆ ಕೊಂಡೊಯ್ದು ಅಲ್ಲಿ ಡಚ್‌ಕಂಪನಿಗೆ ಸೇರಿಸಿಕೊಳ್ಳುವದು ಅವರ ಉದ್ದೇಶವಾಗಿತ್ತು. ನಮಗೆ ದಾರಿತೋರಿಸಲು ಬಂದಿದ್ದ ಪೋರ್ಚುಗೀಸನು ಬುದ್ಧಿ ಉಪಯೋಗಿಸಿ ನಾವು ಪೋರ್ಚುಗೀಸರೆಂದೂ ಗೋವಾಕ್ಕೆ ಹೋಗುತ್ತಿರುವದಾಗಿಯೂ ತಿಳಿಸಿದ. ಆದರೂ ನಾವು ಪುಲಿಕಾಟ್‌ಗೆ ಹೋಗಿ ಅಲ್ಲಿಯ ಡಚ್ ಕಮಾಂಡರನಿಂದ ಪರವಾನಗಿ ತೆಗೆದು ಕೊಳ್ಳಬೇಕೆಂದು ತಿಳಿಸಿದ. ನಾವು ಆಗಲಿ ಎಂದೆವು. ನಮ್ಮನ್ನು ಅಲ್ಲಿಗೆ ಕರೆದೊಯ್ಯಲು ಇಬ್ಬರು ಮೂರ್ ಅಂಗರಕ್ಷಕರನ್ನು ನೇಮಿಸಿದರು. ಅವರು ಹಿಂದೆ, ನಾವು ಮುಂದೆ ಹೋಗುತ್ತಿರುವಾಗ ಇದ್ದಕ್ಕಿದ್ದಂತೆ ನಾವು ಹಿಂದಿರುಗಿ ಬಿದ್ದು ಅವರ ಕುತ್ತಿಗೆಗೆ ಪಿಸ್ತೂಲ ಹಿಡಿದು ಅವರ ಕತ್ತಿ ಕಠಾರಿಗಳನ್ನು ಕಿತ್ತುಕೊಂಡು ಒದ್ದು ಹಿಂದಕ್ಕೆ ಅಟ್ಟಿದೆವು. ಅವರು ನಾಯಿಗೆ ಹೆದರಿ ಮೊಲ ಓಡುವಂತೆ ಓಡಿದರು.

'ಪುಲಿಕಾಟ್ ದಾಟಿ ಮುಂದೆ ಹೋದರೆ ಮೂರ್ ಸೈನಿಕರು ಅಲ್ಲಲ್ಲಿ ಕಾಣಿಸಿ ಕೊಂಡರು. ಹೆದರಿ ಕತ್ತಲಾಗುವವರೆಗೆ ಒಂದು ಕಾಡಿನಲ್ಲಿ ಅವಿತುಕೊಂಡೆವು. ಹೊಟ್ಟೆ ಗಿಲ್ಲದೆ ಒದ್ದಾಡಿದೆವು. ಇಡೀ ರಾತ್ರಿಯೆಲ್ಲಾ ದಾರಿ ಸಾಗಿಸಿದೆವು. ಹಗಲು ಅವಿತು ಕೊಳ್ಳುವುದು, ರಾತ್ರಿ ಪ್ರಯಾಣಮಾಡುವುದು ಹೀಗೆ ಆರುದಿನ ಮಾಡಿದೆವು. ದಾರಿ ಯಲ್ಲಿ ಇಪ್ಪತ್ತು ಹೇರೆತ್ತುಗಳನ್ನು ಹೊಡೆದುಕೊಂಡು, ಗೋಲ್ಕೊಂಡಾಕ್ಕೆ ಹೋಗುತ್ತಿದ್ದ ಹಿಂದೂ ವರ್ತಕರು ಸಿಕ್ಕಿದರು. ಹೇರುಗಳನ್ನು ಇಳಿಸಿ ಬರೇ ಎತ್ತುಗಳನ್ನು ಹೊಡೆದು ಕೊಂಡು ಹೋಗುತ್ತಿದ್ದರು. ಇವುಗಳ ಮೇಲೆ ಗೋಲ್ಕೊಂಡಾವರೆಗೆ ಸವಾರಿ ಮಾಡಲು ಕೇಳಿಕೊಂಡೆವು. ಆಗಲಿ ಎಂದರು. ಇದರಿಂದ ನಮ್ಮ ಶ್ರಮ ತುಂಬಾ ಕಡಿಮೆಯಾಯಿತು. ಉದ್ದಕ್ಕೂ ಕಾಲ್ದಳ, ಕುದುರೆ ಸೈನಿಕರು ಸಿಕ್ಕುತ್ತಿದ್ದರು. ನಾವು ವರ್ತಕರೆಂದು ಹೇಳಿ ಕೊಂಡು ಅವರ ಕಣ್ಣಿಗೆ ಮಣ್ಣೆರಚಿದೆವು. ನಮ್ಮ ಪೋರ್ಚುಗೀಸ್ ಮಾರ್ಗದರ್ಶಕನಿಗೆ ಸ್ಥಳದ ಭಾಷೆ ಬರುತ್ತಿತ್ತು. ಹೀಗಾಗಿ ಅವನೇ ನಮ್ಮ ಪರವಾಗಿ ಮಾತುಕತೆ ಆಡುತ್ತಿದ್ದ. ನಾವು ಎತ್ತುಗಳಿಗೆ ಹುಲ್ಲುಹಾಕುವುದು ಮೈತಿಕ್ಕುವುದು ಇಂತಹ ಕೆಲಸಗಳಲ್ಲಿ ತೊಡಗಿರು ವಂತೆ ನಟಿಸುತ್ತಿದ್ದೆವು.

'ಗೋಲ್ಕೊಂಡಾ ತಲುಪಿ ಅಲ್ಲಿ ಮೂರುದಿನ ಇದ್ದೆವು. ಊರತುಂಬೆಲ್ಲಾ ಜನವೋ ಜನ. ಎಲ್ಲೆಲ್ಲೂ ವರ್ತಕರು. ಯುದ್ಧಕ್ಕೆ ಸಿದ್ಧಪಡಿಸಲ್ಪಟ್ಟ ಆನೆ, ಕುದುರೆಗಳು. ಗೋಲ್ಕೊಂಡಾ ರಾಜನ ಆಸ್ಥಾನಿಕರ ಕಣ್ಣುಕೋರೈಸುವ ಉಡುಪು ಮತ್ತು ಮತ್ತಿತರ

ಅಲಂಕಾರದಲ್ಲಿ ನೋಡಿದಾಗ ನಮ್ಮ ಬಾಯಲ್ಲಿ ನೀರೂರಿತು. ಇಂಥ ಕಡೆ ಇದ್ದರೆ ಜೀವನ ಸಲೀಸು ಅಂದುಕೊಂಡೆವು. ಎಷ್ಟೋ ಜನ ಇಂಗ್ಲಿಷರೂ ಪೋರ್ಚುಗೀಸರೂ ಗೋಲ್ಕೊಂಡಾ ರಾಜನ ಸೇವೆಯಲ್ಲಿ ಸೇರಿ ಆಳುಕಾಳುಗಳನ್ನು ಇಟ್ಟುಕೊಂಡು ಕುದುರೆ ಗಳ ಮೇಲೆ ಕುಳಿತು ಮೆರೆಯುತ್ತಿದ್ದುದನ್ನು ಕಂಡೆವು. ಆದರೆ ಫ್ರೆಂಚರಿಗೆ ಇಲ್ಲಿ ಅವಕಾಶ ವಿಲ್ಲವೆಂದೂ, ಕೆಲವು ದಿನಗಳ ಹಿಂದೆ ಹೀಗೆ ಸಿಕ್ಕಿಬಿದ್ದ ಇಬ್ಬರು ಫ್ರೆಂಚರನ್ನು ಗಲ್ಲಿಗೇರಿಸಿದ ರೆಂದೂ ತಿಳಿಯಿತು. ಇದನ್ನು ಕೇಳಿದಕೂಡಲೇ ನಾವು ಅಲ್ಲಿಂದ ಪರಾರಿಯಾಗುವದೇ ಒಳ್ಳೆಯದೆಂದು ತೀರ್ಮಾನಿಸಿ ಇಲ್ಲಿಗೆ (ಬಿಜಾಪುರಕ್ಕೆ) ಹೊರಟೆವು. ಗೋಲ್ಕೊಂಡಾಕ್ಕೆ ಬಂದುಹೋಗುವ ವರ್ತಕರ ಸಹವಾಸಕ್ಕೆ ಕೊರತೆಯಿರಲಿಲ್ಲ. ಅವರೊಡನೆ ಹೊರಟೆವು.

'ದಾರಿಯಲ್ಲಿ ಅವಶ್ಯಕಬಿದ್ದಾಗ ನಾವು ಫ್ರೆಂಚರೆಂದು ಹೇಳಿಕೊಂಡು ಬೇಕಾದ್ದು ಪಡೆಯಲು ಹಿಂಜರಿಯಲಿಲ್ಲ. ಆ ಉರಿಬಿಸಿಲಿನಲ್ಲಿ ೧೫ ದಿನ ಪ್ರಯಾಣಮಾಡಿ ಇಲ್ಲಿಗೆ ಬಂದೆವು. ಇಲ್ಲಿ ಕೆಲವು ದಿನ ಇದ್ದು ಮುಂದೆ ಗೋವಾಕ್ಕೆ ಹೋಗಬೇಕೆಂಬುದು ನಮ್ಮ ಉದ್ದೇಶವಾಗಿತ್ತು. ಇಲ್ಲಿಯ ಆಸ್ಥಾನ ಅದ್ದೂರಿಯಾಗಿತ್ತು. ಊರ ತುಂಬ ಜನ. ರಾಜನ ಅರಮನೆ ಹಾಗೂ ಶ್ರೀಮಂತರ ಮನೆಗಳು ಭವ್ಯವಾಗಿದ್ದುವು. ಸ್ಥಳದ ಜನ ಪರಸ್ಥಳದವರ ಬಗ್ಗೆ ನಯವಿನಯಗಳಿಂದ ನಡೆದುಕೊಳ್ಳುತ್ತಿದ್ದರು. ಎಷ್ಟೋ ಜನ ಪೋರ್ಚುಗೀಸರು ಪೇಟಧರಿಸಿ ಒಳ್ಳೆಯ ಸ್ಥಾನಮಾನದಲ್ಲಿ ಮೆರೆಯುತ್ತಿದ್ದುದನ್ನು ಕಂಡೆವು. ನಮ್ಮ ಕೈಯಲ್ಲಿ ಕಾಸಿರಲಿಲ್ಲ. ನಮ್ಮ ಪೋರ್ಚುಗೀಸ್ ಮಾರ್ಗದರ್ಶಕ ಯಾರಬಳಿಯೋ ಹೋಗಿ ಹಿಂದಿರುಗಿಬಂದು 'ನೀವಿನ್ನು ಮುಂದೆ ಹೋಗುವದು ಬೇಡ. ಪೇಟ ಧರಿಸಿದರೆ ಸಾಕು, ನಿಮ್ಮ ಅದೃಷ್ಟ ಖುಲಾಯಿಸಿದಂತೆಯೇ' ಎಂದ.

'ಮಾರನೆಯ ದಿನ ಒಬ್ಬ ಮೂರ ಸರದಾರನ ಬಳಿಗೆ ಹೋದೆವು. ಈತ ಊರಿನ ದೊಡ್ಡ ಶ್ರೀಮಂತ. ನಮಗೊಬ್ಬಬರಿಗೆ ಒಂದೊಂದು ಕುದುರೆ ಕೊಟ್ಟು, ನಮ್ಮನ್ನು ಊರಹೊರಗಿದ್ದ ಭಾರಿ ದೊಡ್ಡಮನೆಗೆ ಕರೆದುಕೊಂಡು ಹೋದ. ಅಲ್ಲಿ ಅನೇಕ ಸರದಾರರೂ ಗಣ್ಯರೂ ಸೇರಿ ತಮ್ಮ ಕಾಲವನ್ನು ಖುಷಿಯಾಗಿ ಕಳೆಯುತ್ತಿದ್ದರು. ನಾವು ಬರುವುದಾಗಿ ಗೊತ್ತಿದ್ದ ಕಾರಣ ಅವರೆಲ್ಲಾ ನಮ್ಮನ್ನು ವಿಶ್ವಾಸದಿಂದ ಬರಮಾಡಿಕೊಂಡು ರತ್ನಗಂಬಳಿಯ ಮೇಲೆ ಕುಳ್ಳಿರಿಸಿದರು. ನಮ್ಮ ದೇಶದ ಸಂಗತಿಗಳನ್ನೆಲ್ಲಾ ಕೇಳಿ ತಿಳಿದು ಕೊಂಡರು. ನಾವು ಹೇಳಿದ್ದನ್ನು ಬಹು ಖುಷಿಯಿಂದ ಕೇಳಿ ತಿಳಿದುಕೊಂಡಮೇಲೆ ನಾವು ಅವರೊಡನೆ ಸೇರಲು ಇಚ್ಛೆ ಇದೆಯೇ ಎಂದು ಕೇಳಿದರು. ಸೇರಿದರೆ ಬಹು ಸುಖವಾಗಿರಬಹುದು ಕೈತುಂಬ ಹಣ, ಏರಲು ಕುದುರೆಗಳು, ಮತ್ತು ಬೇರೆಲ್ಲಾ ಸುಖಸಂತೋಷಗಳು. ನಮಗೆ ಬೇರೆ ದಾರಿಯಿರಲಿಲ್ಲ. ಇಂಥದ್ದನ್ನೆಲ್ಲಾ ಏಕೆ ಬಿಡಬೇಕೆಂದು ಆಗಲಿ ಎಂದೆವು. ಮೂರರಿಗೆ ಖುಷಿಯೋಖುಷಿ. ನಮ್ಮನ್ನು ತಬ್ಬಿಕೊಂಡು ತಮ್ಮ ಸ್ನೇಹ ವ್ಯಕ್ತಪಡಿಸಿ ನಮಗೆ ಏನು ಬೇಕಾದರೂ ಮಾಡುವದಾಗಿ ಪದೆಪದೆ ಹೇಳಿದರು.

'ಅನಂತರ ನಮ್ಮನ್ನು ಹಲವಾರು ಶ್ರೀಮಂತರಿಗೆ ಹಂಚಿದರು. ಅವರು ಆ ಕೂಡಲೇ ಅವರಂತೆಯೇ ನಮಗೂ, ಕೋಟು, ಬೆಲ್ಟು, ಪೇಟ ಹಾಗೂ ಬೆಲೆಯಾದ ಆಭರಣಗಳನ್ನು ತೊಡಿಸಿದರು. ಇಷ್ಟಾದ ಮೇಲೆ ಒಬ್ಬ ಮುದುಕ ಅಲ್ಲಿದ್ದ ಪುಟ್ಟ ಮಸೀದಿಗೆ ಕರೆದುಕೊಂಡು ಹೋದ. ಎಲ್ಲರೂ ಅಲ್ಲಿಗೆ ಬಂದರು. ಕತ್ತಿ, ಚೂರಿಗಳನ್ನು ಮಸೆಯುತ್ತಿದ್ದಾಗ ನಾನು ನಡುಗಿಬಿಟ್ಟೆ. ಆದರೆ ಉಳಿದ ಫ್ರೆಂಚರು ಧೈರ್ಯ ಹೇಳಿದರು. ನಾವೆಲ್ಲಾ ಕತ್ತಿ-ಚೂರಿಗಳಿಂದ ಕತ್ತರಿಸಲ್ಪಟ್ಟು ನಮ್ಮಮತದಿಂದ ಬೇರೆಯಾಗಿ ಮುಹಮ್ಮದೀಯರ ಮತ ಸೇರಿದೆವು. ಎಲ್ಲಾ ಮುಗಿದಮೇಲೆ ನಾವು ಮಸೀದಿ ಬಿಟ್ಟು 'ದಿವಾನ್'ಗೆ ಹಿಂದಿರುಗಿದೆವು. ಅದು ಮರಗಿಡಗಳಿಂದಲೂ, ತಿಳಿಗೊಳಗಳಿಂದಲೂ ಕೂಡಿ ಬಹು ಆಪ್ಯಾಯಮಾನವಾಗಿತ್ತು.

'ಅಲ್ಲಿ ನಾವು ಹೊಸಮತದ ಸುಖಸೌಕರ್ಯಗಳನ್ನು ಅನುಭವಿಸಿದೆವು. ಬಗೆ ಬಗೆಯ ಭೋಜನ, ಸಂಗೀತ, ವೇಶ್ಯಾಂಗನೆಯರ ನೃತ್ಯ ಬಹು ಅಂದಚಂದವಾಗಿ ಅಲಂಕರಿಸಿಕೊಂಡಿದ್ದ ಎರಡು ಮೂರು ತರಹದ ವೇಶ್ಯಾಂಗನೆಯರು ತಮ್ಮ ನೃತ್ಯ ನಾಟ್ಯಗಳಲ್ಲಿ ನಮ್ಮ ಕಣ್‌ಮನಗಳನ್ನು ತಣಿಸಿದ್ದಲ್ಲದೆ, ಅವರ ಸಹವಾಸದಿಂದ ನಮ್ಮ ದೇಹದ ತಾಪವನ್ನು ಪರಿಹರಿಸಿದರು. ನಮಗೆ ಇಷ್ಟಬಂದಂತೆ ಅವರನ್ನು ಇಟ್ಟುಕೊಳ್ಳಬಹುದೆಂದೂ, ಅದಕ್ಕೆ ಹೊಸಮತ ಅನುಮತಿ ಕೊಡುವದೆಂದೂ ತಿಳಿಸಿದರು.'

ಈ ಕಥೆಯನ್ನೆಲ್ಲಾ ಕೇಳಿ ನನ್ನ ಸಿಟ್ಟು ನೆತ್ತಿಗೇರಿತು. 'ಎಂಥಾ ಅಯೋಗ್ಯ ಕೆಲಸ ಮಾಡಿದಿರಿ? ಈಗಲೂ ಹಿಂದಿರುಗಿ ನಾನು ಸಹಾಯ ಮಾಡುತ್ತೇನೆ' ಎಂದೆ.

ಆದರೆ ಪಾಪಿಗೆ ಪಾಪಿಯಾಗಿರಲೇ ಆಸೆ. ಆಗಾಗ್ಗೆ ಅವರು ಬಂದುಹೋಗುತ್ತಿದ್ದರು. ನಾನಿದ್ದ ಫಿದಾಲ್ಗೋನ ಮನೆಗೆ ಬಂದುಹೋಗುವ ಪುಂಡರಿಗೆ ಲೆಖ್ಖವಿರಲಿಲ್ಲ. ವೇಶ್ಯಾಂಗನೆಯರೂ ಬಂದು ದಿನಗಟ್ಟಲೆ ಇದ್ದುಹೋಗುತ್ತಿದ್ದರು. ಆ ಮನೆಯಲ್ಲಿ ನಡೆಯುತ್ತಿದ್ದ ಅತ್ಯಾಚಾರಗಳನ್ನು ನೋಡಿ, ನನಗೆ ಅಯ್ಯೋ ಎನಿಸಿತು. ಆದರೆ ನಾನೇನೂ ಮಾಡಲೂ ನಿಶ್ಶಕ್ತನಾಗಿದ್ದೆ.

ಒಮ್ಮೆ ಆ ಫಿದಾಲ್ಗೋ ಇಬ್ಬರು ಮುಸಲ್ಮಾನರೊಡನೆ ನನ್ನ ಕೋಣೆಗೆ ಬಂದು ಅವರು ಕೊಡುವ ಔಷಧಿ ತೆಗೆದುಕೊಂಡರೆ ಒಳ್ಳೆಯದೆಂದನು. ನನಗೆ ಯಾವ ಔಷಧಿಯೂ ಬೇಡವೆಂದು ಹೇಳುತ್ತಿರುವಷ್ಟರಲ್ಲಿ ನನ್ನ ಕೋಣೆಗೆ ೧೦–೧೨ಜನ ಹೆಂಗಸರು ನುಗ್ಗಿಬಿಡುವದೆ? ಅಪ್ಸರೆಯರಂತೆ ಅಲಂಕರಿಸಿಕೊಂಡಿದ್ದ ಅವರು ನನ್ನ ಹಾಸಿಗೆಯ ಬಳಿಗೆ ಬಂದು ಜಮಖಾನ ಹಾಸಿಕೊಂಡು ಕುಳಿತುಬಿಟ್ಟರು. ಸಧ್ಯ ಇವರನ್ನೆಲ್ಲ ಹೊರಗೆ ಕರೆದುಕೊಂಡು ಹೋಗು ಎಂದು ಆ ಫಿದಾಲ್ಗೋಗೆ ಕೈಮುಗಿದು ಹೇಳಿದೆ. ಆದರೇನೂ ಪ್ರಯೋಜನ ಆಗಲಿಲ್ಲ. ಅವರು ಹಾಡಲಾರಂಭಿಸಿದರು. ಕಾಲುಗಂಟೆ ಹಾಡಿದಮೇಲೆ ನರ್ತನ ಶುರುವಾಯಿತು. ನನಗೆ ಮೂರ್ಛೆಬಂದಂತಾಯಿತು. ನನ್ನ ಸೇವಕನೊಬ್ಬ ಹತ್ತಿರಬಂದು ನಾನು ಕಣ್ಣುಮುಚ್ಚಿಕೊಂಡಿರುವದನ್ನು ನೋಡಿ 'ಅಯ್ಯೋ,

ಸತ್ತುಹೋಗಿದ್ದಾರೆ' ಎಂದು ಕೂಗಿಕೊಂಡ. ಕತ್ತೆಮುಂದೆ ಕಿನ್ನುಡಿ ಬಾರಿಸಿದಂತೆ ಎಂದು ತಾಖತ್ತಿಲ್ಲದ ನನ್ನ ಮುಂದೆ ಹಾಡಿ ಏನು ಪ್ರಯೋಜನ ಎಂದು ಆ ಹೆಂಗಸರು ಅಲ್ಲಿಂದ ಹೊರಟು, ಫಿದಾಲ್ಗೋನ ಕೋಣೆಗೆ ಹೋದರು. ಸಂಗೀತ ನೃತ್ಯದ ಜೊತೆ ನನ್ನ ಕೋಣೆಯನ್ನು ಮತ್ತೆ ಪ್ರವೇಶಿಸಿದ. ಜ್ವರ ತನ್ನ ಸುಂಕ ತೆಗೆದುಕೊಳ್ಳದೆ ಹೋಗಲಿಲ್ಲ. ಮತ್ತೆರಡುಸಲ ರಕ್ತ ತೆಗೆಯಬೇಕಾಯಿತು. ನಿಧಾನವಾಗಿ ಕಾಯಿಲೆ ವಾಸಿಯಾಗುತ್ತಾ ಬಂತು.

ಆ ಫಿದಾಲ್ಗೋ ಏನೋ ದುರುದ್ದೇಶದಿಂದ ಇಷ್ಟೆಲ್ಲಾ ಮಾಡುತ್ತಿದ್ದಾನೆಂಬುದು ಸ್ಪಷ್ಟವಾಯಿತು. ಆ ಸ್ಥಳ ಬಿಡುವದೇ ಸರಿಯೆಂದು ತೀರ್ಮಾನಿಸಿದೆ. ಆಸ್ಥಾನದಲ್ಲಿದ್ದ ನನ್ನ ಪರ್ಷಿಯನ್ ಸ್ನೇಹಿತ ತನ್ನ ಮನೆಗೆ ಕರೆಯುತ್ತಲೇ ಇದ್ದ. ಈ ಹೊಲಸು ಮನೆ ಬಿಟ್ಟರೆ ಸಾಕೆಂದು ನನ್ನ ಆಳುಕಾಳು ಸಾಮಾನು ಸರಂಜಾಮುಗಳನ್ನು ಕಟ್ಟಲು ಹೇಳಿದೆ. ಆಗ ಗೊತ್ತಾಯಿತು, ನನ್ನ ಕೆಲವು ಸಾಮಾನುಗಳು ನಾಪತ್ತೆ ಎಂದು. ಅವನ್ನು ಆ ಫಿದಾಲ್ಗೋ ಹೊಡೆದುಬಿಟ್ಟಿದ್ದ. ಬಹು ಚಂದವಾಗಿ ಕೆತ್ತನೆ ಕೆಲಸಮಾಡಲ್ಪಟ್ಟಿದ್ದ ತುರ್ಕಿಕತ್ತಿ, ಚಿನ್ನದ ಮೊಹರುಗಳಿದ್ದ ಪುಟ್ಟಚೀಲ, ಎರಡು ಗಡಿಯಾರಗಳು—ಒಂದು ಅಲಾರಾಂ ಹೊಡೆಯುತ್ತಿದ್ದುದು, ಇನ್ನೊಂದು ಬರೇ ಗಂಟೆ ತೋರಿಸುತ್ತಿದ್ದುದು—ಇಷ್ಟನ್ನು ಲಪಟಾಯಿಸಿದ್ದ. ಆಮೇಲೆ ಭಾರಿ ತಕರಾರು ನಡೆಸಿದೆ. ಅವನ್ನು ವಾಪಸು ಪಡೆಯದೆ ಬಿಡಲಿಲ್ಲ.

ಫಿದಾಲ್ಗೋ ಬಳಿ ಇದ್ದ ಕ್ರೈಸ್ತ ಸೇವಕರು ನನ್ನಲ್ಲಿ ತಮ್ಮ ಗೋಳು ಹೇಳಿಕೊಂಡು ಹೇಗಾದರೂ ಆ ಪಾಪಿಯ ಮುಷ್ಟಿಯಿಂದ ತಮ್ಮನ್ನು ತಪ್ಪಿಸಬೇಕೆಂದರು. ಅವರ ಕಷ್ಟ ನನಗೆ ತಿಳಿಯಿತು. ಸಮಯಕ್ಕಾಗಿ ಕಾಯುತ್ತಾ ಇದ್ದೆ.

ಮಾರ್ಚ್ ೧ನೆಯ ತಾರೀಖು ಬುಧವಾರ ನನ್ನ ಸ್ನೇಹಿತ ಖ್ವಾಜಾ ಅಬ್ದುಲ್ಲಾ ತನ್ನ ದೊಡ್ಡ ಪರಿವಾರ ಸಮೇತ ಬಂದು ನನ್ನ ಸಾಮಾನುಗಳನ್ನೆಲ್ಲಾ ತನ್ನ ಮನೆಗೆ ಕಳುಹಿಸಿಕೊಟ್ಟ. ನನ್ನನ್ನು ಮುಚ್ಚಿದ ಬಹು ಸೊಗಸಾದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕರೆದುಕೊಂಡುಹೋದ.

ಬಿಜಾಪುರದ ಆಸ್ಥಾನದಲ್ಲಿ ಈಗ ದೊಡ್ಡದೊಡ್ಡ ಕಾರಾಬಾರುಗಳು ನಡೆಯುತ್ತಿದ್ದುವು. ಮೊಗಲ್ ಆಸ್ಥಾನದಿಂದ ಈಗತಾನೇ ಒಬ್ಬ ರಾಯಭಾರಿ ಬಂದಿದ್ದಾನೆ. ಭಾರಿ ಪರಿವಾರದೊಡನೆ ಆಗಮಿಸಿದ. ಆತನಿಗೆ ವೈಭವದ ಸ್ವಾಗತ ನೀಡಲಾಯಿತು. ಯುವಕನಾದ ಹೊಸರಾಜ ಈಗ ಬಿಜಾಪುರದ ಸಿಂಹಾಸನವನ್ನೇರಿದ್ದಾನೆ. ರಾಯಭಾರಿ ದರ್ಬಾರ್ ಭವನವನ್ನು ಪ್ರವೇಶಿಸಿದಾಗ ರಾಜನು ತನ್ನ ಸಿಂಹಾಸನದಲ್ಲಿ ಆಗಲೇ ಮಂಡಿಸಿದ್ದ ಅವನಿಗೆ ಅತಿ ಸಮೀಪದಲ್ಲಿ ಖವಾಸ್‌ಖಾನ್ ದಿವ್ಯ ಆಸನದಲ್ಲಿ ಕುಳಿತಿದ್ದ. ಆತನ ಕೆಳಗೆ ಬೇರೆಲ್ಲ ರಾಜಕುಮಾರರೂ, ಶ್ರೀಮಂತ ಸರದಾರರೂ ಕುಳಿತಿದ್ದರು. ರಾಯಭಾರಿ ತಾನು ಬಂದ ಉದ್ದೇಶದ ಬಗ್ಗೆ ಪರಿಣಾಮಕಾರಿಯಾದ ಭಾಷಣಮಾಡಿದ. ಹೊಸ

ರಾಜನನ್ನೂ ಆತನ ಒಳ್ಳೆಯ ಆಡಳಿತವನ್ನೂ ಹೊಗಳಿ ಮಾತನಾಡಿದ. ಮುಖ್ಯವಾಗಿ ಶಿವಾಜಿಯ ವಿಷಯ ಎತ್ತಿಕೊಂಡ. 'ಬಿಜಾಪುರದಲ್ಲಿಯೇ ಒಬ್ಬ ಸಣ್ಣ ಮಂತ್ರಿಯಾಗಿದ್ದ ಶಿವಾಜಿ ಈಗ ಬೆಳೆದು ಎಷ್ಟು ಬಲಾಢ್ಯನಾಗಿದ್ದಾನೆಂದರೆ ಇಂಡಿಯಾದ ಬೇರೆಲ್ಲರೂ ಥರಗುಟ್ಟಿಕೊಂಡು ನಡುಗುತ್ತಿದ್ದಾರೆ.೧ ದೇಶದ ಬಹುಮುಖ್ಯವಾದ ಭಾಗಗಳ ಅಂದರೆ ಸಮುದ್ರತೀರ ಹಾಗೂ ಕಡಲಮೇಲಿನ ಹತೋಟಿ ಪಡೆದಿದ್ದಾನೆ. ನಮ್ಮ ಮೊಗಲ್ ಚಕ್ರವರ್ತಿಗೆ ಸೇರಿದ ಬಹು ಶ್ರೀಮಂತ ನಗರಗಳನ್ನು ಕೊಳ್ಳೆಹೊಡೆದಿದ್ದಾನೆ. ದೇಶದ ಬಲವಾದ ಕೋಟೆಕೊತ್ತಳಗಳನ್ನು ವಶಮಾಡಿಕೊಂಡಿದ್ದಾನೆ. ಯಾವ ನದಿ, ಬೆಟ್ಟ ಅಥವಾ ದುರ್ಗ ಹಾಗೂ ಕೋಟೆಕೊತ್ತಳಗಳೂ ಅವನ ಮುಂದೆ ನಿಲ್ಲಲಾಗಿಲ್ಲ. ಇವನನ್ನು ಹತ್ತಿಕ್ಕದೆ ಹೋದರೆ, ಇಡೀ ಪೂರ್ವದೇಶದಲ್ಲೇ ಅತ್ಯಂತ ಬಲಾಢ್ಯನಾದ ರಾಜನಾಗಿ ಬಿಡುತ್ತಾನೆ. ಆದ್ದರಿಂದ ೧೪,೦೦೦ ರಾವುತರನ್ನೂ, ೧೦,೦೦೦ ಕಾಲ್ದಳವನ್ನೂ ಬಿಜಾಪುರದ ರಾಜನು ಒದಗಿಸಬೇಕು. ಈ ಸೈನ್ಯವು ಅವನು ಆಕ್ರಮಿಸಿಕೊಂಡಿರುವ ಸಮುದ್ರ ತೀರದ ಪಟ್ಟಣಗಳ ಮೇಲೆ ಧಾಳಿಮಾಡುವುದು. ಮೊಗಲ ಸೈನ್ಯ ಬೇರೆ ಕಡೆಯಿಂದ ಶಿವಾಜಿಯ ಮೇಲೆ ಎರಗುವುದು. ಈ ಯುದ್ಧದ ಖರ್ಚುವೆಚ್ಚಗಳನ್ನು ಮೊಗಲ್ ಚಕ್ರವರ್ತಿಗೆ ಕೊಡುತ್ತಿರುವ ಪೊಗದಿಯಲ್ಲಿ ತಟಾಯಿಸಿಕೊಳ್ಳಬಹುದು.

ಹೀಗೆ ರಾಯಭಾರಿ ಹೇಳಿದನಂತರ ಖವಾಸ್‌ಖಾನ್ ಶ್ರೀಮಂತ ಸರದಾರರನ್ನೆಲ್ಲಾ ಕರೆದು ಹಲವಾರು ಬಾರಿ ಸಮಾಲೋಚನೆ ನಡೆಸಿದ. ಯುದ್ಧಕ್ಕೆ ತಯಾರಾಗಬಹುದೆಂಬ ತೀರ್ಮಾನ ಕೈಕೊಳ್ಳಲಾಯಿತು. ಆದಷ್ಟು ಜಾಗ್ರತೆ ಸೈನಿಕರನ್ನು ನೇಮಿಸಿಕೊಳ್ಳಲು ಸೇನಾಪತಿಗಳನ್ನೂ, ಸರದಾರರನ್ನೂ ರಾಜ್ಯದ ಬೇರೆ ಬೇರೆ ಭಾಗಗಳಿಗೆ ಕಳುಹಿಸಿಕೊಡಲಾಯಿತು. ಬಹು ಜಾಗ್ರತೆಯಾಗಿ ಸೇನೆಗಳನ್ನು ಕಟ್ಟಲಾಯಿತು. ಬೇರೆ ಬೇರೆ ಕಡೆಗಳಿಂದ ಬಂದ ಸೈನಿಕರ ತರಪೇತಿಗೆ ಬಿಜಾಪುರ ಪಟ್ಟಣದಲ್ಲಿ ಜಾಗ ಸಾಲದಾಯಿತು. ಊರ ತುಂಬೆಲ್ಲ ಸಿಪಾಯಿಗಳ ಕವಾಯಿತ್‌ನ ಹಾಗೂ ಕೊಂಬು ಕಹಳೆ ತುತ್ತೂರಿಗಳ ಶಬ್ದವೇ ಶಬ್ದ. ವಜೀರರು ತಮ್ಮ ಆನೆಗಳ ಮೇಲೆ ಶಸ್ತ್ರಾಸ್ತ್ರಗಳನ್ನು ಹೇರುತ್ತಿದ್ದರು. ಹೀಗೆ ಹೇರುವಾಗ ಆಗುತ್ತಿದ್ದ ಶಬ್ದ ಕಿವಿ ಕಿವುಡಾಗುವಂತೆ ಮಾಡುತ್ತಿತ್ತು. ಇನ್ನು ಅವುಗಳ ಅಲಂಕಾರವಂತೂ ಬಹು ಬರ್ಜರಿಯಾಗಿತ್ತು.

ಇದೆಲ್ಲಾ ಶಿವಾಜಿಗೆ ತಿಳಿಯದೇ ಹೋಗಲಿಲ್ಲ. ಆತನ ಗೂಢಚಾರರು ಇಂಡಿಯಾದಲ್ಲೆಲ್ಲಾ ಇದ್ದಾರೆ. ಇವರಿಂದ ಬಿಜಾಪುರದಲ್ಲಿ ಹಾಗೂ ಮೊಗಲ್ ರಾಜ್ಯದಲ್ಲಿ ನಡೆಯುತ್ತಿದ್ದ ಯುದ್ಧದ ಸಿದ್ಧತೆಯನ್ನು ಕೇಳಿ ಆತ ಅಪಹಾಸ್ಯ ಮಾಡಿದ. ಎರಡನೆಯ ಅಲೆಕ್ಸಾಂಡರನಂತೆ ಆತ ತನ್ನ ಸೇನಾಪಡೆಯನ್ನು ಕುರಿತು ಹೇಳಿದ್ದೇನೆಂದರೆ, 'ದೊಡ್ಡ

---

೧. ಶಿವಾಜಿ ಬಿಜಾಪುರ ರಾಜ್ಯದಲ್ಲಿ ಎಂದೂ ಮಂತ್ರಿಯಾಗಿರಲಿಲ್ಲ. ಅವನ ತಂದೆ ಷಾಹಜಿ ೧೬೩೭ರಲ್ಲಿ ರಾಜನ ಸೇವೆಯನ್ನು ಸೇರಿ ಬಿಜಾಪುರ-ಕರ್ಣಾಟಕ ಪ್ರಾಂತ್ಯದಲ್ಲಿ ಗೌರ್ನರ್ ಆಗಿದ್ದ. ಆಗ ಅಂದರೆ ೧೬೪೬ರಲ್ಲಿ ಶಿವಾಜಿ ಬಿಜಾಪುರ ರಾಜ್ಯದ ಮೇಲೆ ದಂಗೆ ಎದ್ದ.

ದೊಡ್ಡ ಬಿರುದುಬಾವಲಿಗಳು, ಅದ್ದೂರಿಯ ಅಲಂಕಾರ, ಹೇರಳವಾದ ಶಸ್ತ್ರಾಸ್ತ್ರ— ಇವೆಲ್ಲಾ ಇದ್ದಷ್ಟೂ ಸೈನಿಕರ ಶಕ್ತಿ ಕಡಿಮೆಯಾಗುತ್ತದೆ. ಧೈರ್ಯ ಕುಗ್ಗುತ್ತದೆ. ನನ್ನ ಸೈನಿಕರಿಗೆ ತಮ್ಮನ್ನು ರಕ್ಷಿಸಿಕೊಳ್ಳುವ ಕಬ್ಬಿಣ ಮತ್ತು ಉಕ್ಕು ಇದ್ದರೆ ಸಾಕು. ಇವೇ ಒಬ್ಬ ಸಿಪಾಯಿಯ ನಿಜವಾದ ಅಲಂಕಾರಗಳು' ಎಂದು. ಅಲ್ಲದೆ ಶಿವಾಜಿಯ ಯುದ್ಧದ ಬಗೆಯೇ ಬೇರೆ. ಅವನೇನೇನು ಸನ್ನಾಹ ಹೂಡಿದ್ದಾನೆಂದು ಯಾರಿಗೂ ಗೊತ್ತಾಗು ತ್ತಿರಲಿಲ್ಲ. ಶತ್ರುವು ನಿರೀಕ್ಷಿಸಿದ್ದು ಒಂದಾದರೆ, ಅವನು ಮಾಡುತ್ತಿದ್ದುದು ಬೇರೊಂದು. ಸೂರತ್ತಿಗೆ ಮುತ್ತಿಗೆ ಹಾಕಿದನಂತರ ಅಹಮದಾಬಾದಿನಮೇಲೆ ದಾಳಿಮಾಡಬಹುದೆಂದು ಎಣಿಸಿಕೊಂಡರೆ ಆತ ನುಗ್ಗಿದ್ದು ಗೋಲ್ಕೊಂಡಾ ಕಡೆಗೆ. ಅಲ್ಲಿಗೆ ಹೋಗಿ ಆ ರಾಜನಿಂದ ಎರಡು ದಶಲಕ್ಷ ಪಗೋಡಾ ಹಣ ಬೇಕೆಂದು ಕೇಳಿದ. ಕೊಡದಿದ್ದರೆ ಯುದ್ಧಕ್ಕೆ ಸಿದ್ಧನಾಗು ಎಂದು ಹೆದರಿಸಿದ. ರಾಜ ದಿಕ್ಕೆಟ್ಟವನಾಗಿ ಕೇಳಿದಷ್ಟು ಹಣ ಕೊಡಬೇಕಾ ಯಿತು.[೧] ಏಕೆಂದರೆ, ಅವನಸೈನ್ಯ ಫ್ರೆಂಚರಮೇಲೆ ಯುದ್ಧಮಾಡಲು ಸೆಂಟ್‌ಥೋಮಿಗೆ ಹೋಗಿತ್ತು. ಊರಲ್ಲಿದ್ದವರು ಕೇವಲ ವರ್ತಕರು ಮತ್ತು ಆಸ್ಥಾನದ ಸೊಗಸುಗಾರರು ಅಷ್ಟೆ. ಶಿವಾಜಿಗೆ ಫ್ರೆಂಚರ ಬಗ್ಗೆ ವಿಶ್ವಾಸವಿದೆ. ಆ ಕಾರಣವೇ ಆತ ಗೋಲ್ಕೊಂಡಾ ರಾಜನ ಶಕ್ತಿಯನ್ನು ಕುಗ್ಗಿಸಲು ಪ್ರಯತ್ನಿಸಿದ್ದು.

ಬಿಜಾಪುರದ ಯುದ್ಧಸಿದ್ಧತೆಯನ್ನು ಕೇಳಿದ ಶಿವಾಜಿ ಗೋವಾಕ್ಕೆ ಸಮೀಪದಲ್ಲಿದ್ದ ಆ ರಾಜ್ಯದ ಊರುಗಳ ಮೇಲೆ ಎರಗಿ ಅವನ್ನು ತನ್ನ ವಶಪಡಿಸಿಕೊಂಡನು.[೨]

ನನ್ನ ಸ್ನೇಹಿತ ಪರ್ಷಿಯನನ ಮನೆಯಲ್ಲಿ ಮೂರುದಿನ ಇದ್ದೆ. ಇಷ್ಟರಲ್ಲಿ ನನ್ನ ಆರೋಗ್ಯ ಕುದುರಿತು. ಆದರೆ ತೀರಾ ನೆಟ್ಟಗಾಗಬೇಕಾದರೆ ಬಿಜಾಪುರ ಬಿಟ್ಟು ಹೊರ ಗಾಳಿಗೆ ಮೈಯೊಡ್ಡಿದರೆ ಒಳ್ಳೆಯದೆಂದುಕೊಂಡು ನನ್ನ ಪ್ರಯಾಣವನ್ನು ಮುಂದು ವರಿಸಲು ತೀರ್ಮಾನಿಸಿದೆ. ಇದನ್ನು ನನ್ನ ಮಿತ್ರನಿಗೆ ತಿಳಿಸಿ ವಿಷಯವನ್ನು ಗುಟ್ಟಾಗಿಟ್ಟಿರ ಬೇಕೆಂದು ಕೇಳಿಕೊಂಡೆ. ಆ ಫಿದಾಲ್ಗೋಗೆ ಈ ವಿಷಯ ತಿಳಿಯಬಾರದೆಂದು ನಾನು ಹಿಂದಿರುಗಿ ಹೋಗುವ ಸನ್ನಾಹದಲ್ಲಿರುವೆನೆಂಬ ಭಾವನೆ ಬರುವಂತೆ ಮಾಡಿದೆ. ಪಲ್ಲಕ್ಕಿ ಯನ್ನೂ ನನ್ನ ಸಾಮಾನು ಸರಂಜಾಮುಗಳನ್ನೂ ಹೊರಲು ನನ್ನ ಸ್ನೇಹಿತ ಹತ್ತುಜನ ಗಟ್ಟಿಮುಟ್ಟಾದ ಆಳುಗಳನ್ನು ಒದಗಿಸಿದ. ನನ್ನ ರಕ್ಷಣೆಗಾಗಿ ತನ್ನ ನಾಲ್ಕು ಜನರನ್ನು ಒದಗಿಸಿದ. ಗೋಲ್ಕೊಂಡಾ ರಾಜ್ಯ ತಲುಪಿದಮೇಲೆ ನಾನು ಫರಂಗಿವೇಷ ತೆಗೆದು

---

೧. ಶಿವಾಜಿ ೧೬೭೮ರಲ್ಲಾಗಲೀ, ೧೬೭೫ರಲ್ಲಾಗಲೀ ಗೋಲ್ಕೊಂಡಾದ ಮೇಲೆ ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಲಿಲ್ಲ. ಆತ ಹಾಗೆ ಮಾಡಿದ್ದು ೧೬೭೭ರಲ್ಲಿ. ಶಿವಾಜಿ ಗುಪ್ತವಾಗಿ ಗೋಲ್ಕೊಂಡಾಕ್ಕೆ ಭೇಟಿ ಕೊಟ್ಟಿದ್ದ. ಇದು ಕಾರ್‌ನ ಹೇಳಿಕೆಗೆ ಪುಷ್ಟಿಕೊಡುತ್ತದೆ. ಗುಪ್ತ ಭೇಟಿಯಿಂದಾಗಿ ಶಿವಾಜಿಗೆ ಹೊಸ ರಾಜನಿಂದ ಭಾರಿ ಹಣ ಸಿಕ್ಕಿತು. ಇದನ್ನು ಶಿವಾಜಿ ರಾಯಗಡಕ್ಕೆ ಸಾಗಿಸಿದ.

೨. ಇದು ಶಿವಾಜಿಯು ೧೬೭೫ರಲ್ಲಿ ಹುಬ್ಬಳ್ಳಿ ಮುಂತಾದ ಕೋಟೆಗಳನ್ನೂ ಪಟ್ಟಣಗಳನ್ನೂ ವಶಪಡಿಸಿಕೊಂಡು ಕೊಳ್ಳೆಹೊಡೆದದ್ದು ಇರಬೇಕು.

ಪರ್ಷಿಯನ್ ವರ್ತಕನ ಉಡುಪಿನಲ್ಲಿ ಪ್ರಯಾಣಮಾಡಬೇಕೆಂದು ನನ್ನ ಸ್ನೇಹಿತ ಹೇಳಿದ.

ಫಿದಾಲ್ಗೊ್ೕನ ಚಿತಾವಣೆಯಿಂದ ಮಹಮ್ಮದೀಯರಾಗುವುದನ್ನು ತಪ್ಪಿಸಿಕೊಳ್ಳಲು ಆತನ ಎಂಟು ಹತ್ತು ಜನ ಕ್ರೈಸ್ತ ಸೇವಕರು ನನ್ನೊಡನೆ ಬರುವುದಾಗಿ ಪಟ್ಟು ಹಿಡಿದರು. ಆಗಲಿ ಎಂದು ನಾನು ಅವರಿಗೆ ಅಂಗಡಿಯಿಂದ ಜನಸಾಮಾನ್ಯರು ಉಡುವ ಬಟ್ಟೆಗಳನ್ನು ತರಿಸಿಕೊಟ್ಟೆ. ಅವರು ವರ್ತಕನ ಆಳುಗಳಂತೆ ಕಾಣುವ ಹಾಗೆ ಮಾಡಿದೆ. ಸೂರ್ಯನ ತಾಪದಿಂದ ಪಾರಾಗಲು ನನ್ನ ಪಲ್ಲಕ್ಕಿಗೆ ಒಂದು ದಪ್ಪ ಬಟ್ಟೆಯ ಗೌಸು ಹೊದಿಸಿದೆ.

ಇಷ್ಟೆಲ್ಲಾ ಸಿದ್ಧತೆ ಮಾಡಿ ನನ್ನ ಆಳುಕಾಳುಗಳು ಮನೆಯಿಂದ ಹೊರಗೆ ಹೋಗದಂತೆ ನೋಡಿಕೊಂಡೆ. ನನ್ನ ಪರ್ಷಿಯನ್ ಸ್ನೇಹಿತನಿಗೆ ನನ್ನ ಅಪಾರ ವಂದನೆಗಳನ್ನು ಸಲ್ಲಿಸಿ ಪಲ್ಲಕ್ಕಿಯಲ್ಲಿ ಕುಳಿತೆ. ಈ ದೇಶದಲ್ಲಿ ಕಾಯಿಲೆಯವರಿಗೆ ಕೊಡುವ 'ಕಂಜಿ' (ಗಂಜಿ)ಯಲ್ಲದೆ ಬೇರೇನನ್ನೂ ಇಲ್ಲಿಯ ವರೆಗೆ ತೆಗೆದುಕೊಂಡಿರಲಿಲ್ಲ. ಈ ಕಾರಣ ತುಂಬಾ ನಿಶ್ಶಕ್ತಿ ಇತ್ತು. ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳಲೂ ಆಗುತ್ತಿರಲಿಲ್ಲ. ಮುಂದೆ ದಾರಿಯಲ್ಲಿ ಏನೇನು ಅಪಾಯಗಳು ಒದಗುತ್ತವೆಯೋ ಯಾರಿಗೆ ಗೊತ್ತು. ಆದರೂ ದೇವರಲ್ಲಿ ನಂಬಿಕೆ ಇಟ್ಟು ನನ್ನ ದೀರ್ಘ ಪ್ರಯಾಣವನ್ನು ಆರಂಭಿಸಿದೆ.

೧೬೭೩ನೆಯ ಶನಿವಾರ ೩ನೆಯ ತಾರೀಖು ಸಂಜೆ ೮ ಘಂಟೆಗೆ ೪೦ 'ಪ್ಯೂನ್'ಗಳ ಸಮೇತ ಬಿಜಾಪುರ ಬಿಟ್ಟೆ. ಈ ೪೦ ಜನ ಪ್ಯೂನ್‌ಗಳನ್ನು ಖ್ವಾಜಾ ಅಬ್ದುಲ್ಲಾ ಪಟ್ಟಣದಿಂದಾಚೆ ಹಲವಾರು ಹರಿದಾರಿ ದೂರ ನನ್ನನ್ನು ಸಾಗಿಸಿ ಬರಲು ಕಳುಹಿಸಿಕೊಟ್ಟಿದ್ದ. ನನ್ನ ಸ್ವಂತ ಆಳುಗಳಿಗೂ ಬಿಡುವು ಕೊಡದೆ ಇಡೀ ರಾತ್ರಿಯೆಲ್ಲಾ ದಾರಿ ಸಾಗಿಸುವಂತೆ ಮಾಡಿದೆ. ಮಾರನೆಯ ದಿನ ಬೆಳಕು ಹರಿಯುವ ಹೊತ್ತಿಗೆ ನಾತನ್ (ಬಿಜಾಪುರದಿಂದ ೧೧ ಮೈಲಿ) ಪಟ್ಟಣ ತಲುಪಿದೆವು. ಮರಗಿಡಗಳಿಲ್ಲದ ಬಟ್ಟಬಯಲು ಪ್ರದೇಶದಲ್ಲಿದೆ ಈ ಊರು. ಊರಿನ ಸುತ್ತ ಇದ್ದ ಪಾಳುಕೋಟೆಯನ್ನು ನೋಡಿದರೆ ಇದೊಂದು ಪುರಾತನ ಸ್ಥಳವೆಂದು ಕಾಣುತ್ತಿತ್ತು. ಕೋಟೆಯ ಮೇಲೆಲ್ಲಾ ಹಬ್ಬಿಕೊಂಡಿದ್ದ ಬಳ್ಳಿಗಳನ್ನೂ ಬೆಳೆದಿದ್ದ ಹುಲ್ಲನ್ನೂ ನೋಡಿದರೆ ಯಾರಿಗೂ ಈ ಕೋಟೆ ಬೇಕಾದಂತೆ ಕಾಣಲಿಲ್ಲ. ಊರಿನ ಹೆಬ್ಬಾಗಿಲಿನ ಬಳಿ ಪ್ರಯಾಣಿಕರಿಗಾಗಿ ಒಂದು ಸತ್ರ ಇದೆ. ಇದು ಊರಿಗಿಂತ ಹಳೆಯದರಂತೆ ಕಂಡಿತು. ದವಸಧಾನ್ಯಗಳ ಮಾರಾಟಕ್ಕೆ ಒಂದು ಬಜಾರ್ ಇದೆ. ಈ ಊರು ಖವಾಜ್‌ಖಾನ್ ಎಂಬುವನ ಜಾಗೀರಿಯಾಗಿದೆ. ವ್ಯಾಪಾರ ಸಾಪಾರ ಚೆನ್ನಾಗಿ ನಡೆಯುತ್ತಿದೆ. ಇಲ್ಲಿ ತಂಗೋಣವೇ ಎಂದು ನನ್ನವರು ಕೇಳಿದರು. ಆದರೆ ನಾನು ಬಿಜಾಪುರದಿಂದ ಇನ್ನೂ ದೂರ ಹೋಗಿ ತಂಗೋಣವೆಂದು ಹೇಳಿದೆ. ಹೊಟ್ಟೆಗೆ ಬೇಕಾದ ಆಹಾರ ಪದಾರ್ಥಗಳನ್ನು ನನ್ನ ಆಳುಕಾಳುಗಳು ಕೊಂಡುಕೊಂಡರು. ನನಗೆ ಬೇಕಾದ ಗಂಜಿ ತಯಾರಾಯಿತು. ನನ್ನೊಡನೆ ಬಂದಿದ್ದ ಪರ್ಷಿಯನ್ ಪ್ಯೂನ್‌ಗಳನ್ನು ಬಿಜಾಪುರಕ್ಕೆ ವಾಪಸು ಕಳುಹಿಸಿಕೊಟ್ಟು ಮಧ್ಯಾಹ್ನದವರೆಗೂ ನಮ್ಮ ಪ್ರಯಾಣ

ಮುಂದುವರಿಸಿ ತಂಬಾ ಎಂಬ ಊರಿಗೆ ಬಂದೆವು. ಊರಿನ ಪಕ್ಕದಲ್ಲಿ ಒಂದು ನದಿ. ಆದರೆ ಬಟ್ಟ ಬೇಸಗೆಯ ಕಾರಣ ಒಂದು ಹನಿಯೂ ನೀರಿರಲಿಲ್ಲ. ಈ ನದಿಯಷ್ಟೇ ಅಲ್ಲ ಕೆರೆ ಕುಂಟೆಗಳೂ ಒಣಗಿಹೋಗಿದ್ದುವು. ಇಷ್ಟು ದೂರದ ಪ್ರಯಾಣದಿಂದ ನನಗೆ ಆಯಾಸವಾಯಿತು. ಇನ್ನು ಸಾಕು ಎಂದು ಉಳಿದ ದಿನವೆಲ್ಲಾ ಅಲ್ಲೇ ತಂಗಿದೆ. ಅಲ್ಲಿ ತಂಗಲು ಇನ್ನೊಂದು ಕಾರಣವೂ ಇತ್ತು. ಮುಂದೆ ಪ್ರಯಾಣಮಾಡಬೇಕಾಗಿದ್ದ ವಿಶಾಲ ವಾದ ಪ್ರದೇಶ ಮರುಭೂಮಿಯಂತಿತ್ತು. ಹಳ್ಳಿಗಳಲ್ಲಿ ರಾತ್ರಿಹೊತ್ತು ಸಿಪಾಯಿ ಗಳಿಂದಲೂ ಕಳ್ಳಕಾಕರಿಂದಲೂ ಭಾರಿ ಅಪಾಯವಿದೆ ಎಂದು ಹೆದರಿಸಿದರು.

ಮಾರ್ಚಿ ೫ನೆಯ ತಾರೀಖು ಇಡೀ ದಿನ ಪ್ರಯಾಣ ಮಾಡಿದೆವು. ಅನೇಕ ಜನ ಸಿಪಾಯಿಗಳನ್ನು ಕಂಡೆವು. ಅವರಿಂದ ಏನೂ ತೊಂದರೆಯಾಗಲಿಲ್ಲ. ಅದರ ಬದಲು ನನ್ನ ಬಗ್ಗೆ ವಿನಯವಾಗಿ ನಡೆದುಕೊಂಡರು. ಅವರು ನನಗೆ ತೊಂದರೆ ಮಾಡಲೂ ಸಾಧ್ಯವಿರಲಿಲ್ಲ. ಏಕೆಂದರೆ, ನನ್ನೊಡನೆ ೨೫ ಜನ ಇದ್ದರು. ದಾರಿಯಲ್ಲಿ ಮೂರು ನದಿ ಸಿಕ್ಕಿದವು. ಒಂದರಲ್ಲಿ ಅಷ್ಟಿಷ್ಟು ನೀರು; ಇನ್ನೆರಡರಲ್ಲಿ ನೀರೇ ಇಲ್ಲ.

ಸಂಜೆ ಹೊತ್ತಿಗೆ ಅಲ್ಮೇದಾ (Almeda = Almel ?) ಎಂಬ ಊರಿಗೆ ಬಂದೆವು. ಇಲ್ಲಿಯವರೆಗೆ ನಾನು ಕೇವಲ ಗಂಜಿ ಕುಡಿದುಕೊಂಡಿದ್ದೆನಷ್ಟೆ. ನಿಶ್ಶಕ್ತಿ ಇದರಿಂದ ಹೆಚ್ಚಾಯಿತು. ಇನ್ನು ಮೇಲೆ ಬೇರೆ ಆಹಾರ ತೆಗೆದುಕೊಳ್ಳುವುದೊಳ್ಳೆಯದು ಎನಿಸಿತು. ಕೋಳಿಸಾರು ಮಾಡಿಸಿ ಇಲ್ಲಿ ಸಿಕ್ಕಿದ ಕೆಲವು ನಾರುಬೇರುಗಳನ್ನು ಹಾಕಿ ಕುಡಿದೆ. ಕುಡಿದ ಮೇಲೆ ಎಷ್ಟೋ ಶಕ್ತಿ ಬಂದಂತಾಯಿತು. ಹೊರಡುವ ಮುನ್ನ ಮತ್ತಷ್ಟು ಕುಡಿದೆ. ಕೋಳಿ ಸಾರು ಮತ್ತು ಹೊರ ಗಾಳಿ ನನ್ನ ಆರೋಗ್ಯವನ್ನು ಕುದುರಿಸಿದುವು.

ಬೆಳಗ್ಗೆ (ಮಂಗಳವಾರ) ಹೊತ್ತಿನಂತೆ ಹೊರಟೆವು. ಆ ಬೆಳಗಿನ ತಂಪಿಗೆ ನಾನು ನನ್ನ ಪಲ್ಲಕ್ಕಿಯಲ್ಲೇ ಮಲಗಿ ಮೂರು ಗಂಟೆ ನಿದ್ದೆಹೋದೆ. ನಾನು ಕಾಯಿಲೆ ಬಿದ್ದಮೇಲೆ ಇದೇ ನನ್ನ ಸರಿಯಾದ ನಿದ್ದೆ. ಎಂಟುಗಂಟೆಗೆ ಒಂದು ನದಿಯ ಕಡವಿನ ಬಳಿಗೆ ಬಂದೆವು. ಇಲ್ಲಿ ನನ್ನ ಆಳುಗಳು ಬೆಳಗಿನ ತಿಂಡಿ ತಿನ್ನಲು ಕುಳಿತರು. ಹುಲ್ಲಿನ ಮೇಲೆ ಕುಳಿತು ಹಳ್ಳಿಯ ಹೆಂಗಸರು ತಂದ ಮೊಸರಿನಲ್ಲಿ ಕಲ್ಲಂಗಡಿ, ಉಪ್ಪುಮೀನು ಮುಂತಾದ ಅಸಹ್ಯವಾದ ತಿಂಡಿ ತಿನಿಸುಗಳನ್ನು ನಮ್ಮ ದೇಶದಲ್ಲಿ ಹೆತ್ತ ಕೆನೆ ಮತ್ತು ಸಕ್ಕರೆಯೊಡನೆ ಸ್ಟ್ರಾಬೆರಿ ಹಣ್ಣು ತಿನ್ನುವಂತೆ ಗಪಗಪನೆ ತಿಂದರು. ನನ್ನ ಬಾಯಲ್ಲೂ ನೀರೂರಿತು. ತಿನ್ನುವ ಆಸೆಯಾಯಿತು. 'ಕಲ್ಲಂಗಡಿ ಹಣ್ಣು ಕೊಡಿ' ಎಂದು ಕೇಳಿದೆ. 'ಅಯ್ಯೋ ತಿನ್ನಬೇಡಿ, ಕಾಯಿಲೆಯವರಿಗೆ ಇದು ತುಂಬಾ ಕೆಟ್ಟದು' ಎಂದ ಆಳೊಬ್ಬ. ಬಿಜಾಪುರ ಬಿಡುವಾಗ ನನ್ನ ಸ್ನೇಹಿತ ಅಬ್ದುಲ್ಲಾ ಕೊಟ್ಟಿದ್ದ ಒಂದು ದೊಡ್ಡ ಬುಟ್ಟಿ ದ್ರಾಕ್ಷಿಹಣ್ಣು ಮತ್ತು ಆಗತಾನೇ ಕಿತ್ತ ಅಂಜೂರದ ಹಣ್ಣುಗಳನ್ನು ತಿನ್ನಿ ಎಂದು ಕೊಟ್ಟ. ಇವುಗಳ ಜೊತೆ ಒಂದಿಷ್ಟು ಬ್ರೆಡ್ ತಿನ್ನಿ ಎಂದ. ಸ್ವಲ್ಪ ತಿಂದೆ. ದ್ರಾಕ್ಷಿಹಣ್ಣು ಬಹು ರುಚಿ

ಯಾಗಿದ್ದುವು. ತಿಂದರೆ ಏನಾಗಿಬಿಡುವುದೋ ಎಂದು ಹೆದರಿ ಕಳ್ಳನಂತೆ ಒಂದೊಂದಾಗಿ ತಿಂದೆ. ಇದರಿಂದ ಏನೂ ತೊಂದರೆ ಆಗಲಿಲ್ಲ. ದ್ರಾಕ್ಷಿ ಬೆಳೆಯುವ ಕಡೆಗೆ ಹೋಗುವವರೆಗೆ ಬುಟ್ಟಿಯನ್ನು ಹಾಗೇ ಇಡಿ ಎಂದು ಹೇಳಿದೆ.

ಇಡೀ ದಿನ ಪ್ರಯಾಣ ಮಾಡಿ ಸಂಜೆಗೆ ಅಫ್‌ಜಲ್‌ಪುರಕ್ಕೆ ಬಂದೆವು. ಇದು ತಗ್ಗುಪ್ರದೇಶದಲ್ಲಿರುವ ಬಹು ಸೊಗಸಾದ ಸ್ಥಳ. ದೊಡ್ಡ ದೊಡ್ಡ ಕೆರೆಗಳು. ನೀರನ್ನು ಹಾಯಿಸಿ ಪೈರು ಪಚ್ಚೆಗಳನ್ನು ಬೆಳೆದಿದ್ದಾರೆ. ಬಿಜಾಪುರದ ಹಿಂದಿನ ಸುಲ್ತಾನನೊಬ್ಬನ (ಮಹಮದ್ ಆದಿಲ್ ಷಾ) ಹೆಸರಾದ ದಂಡನಾಯಕ ಅಫ್‌ಜಲ್‌ಖಾನ್ ಈ ಕೆರೆಯನ್ನು ಕಟ್ಟಿಸಿದ. ನಿವೃತ್ತನಾದ ಮೇಲೆ ಇಲ್ಲೇ ನೆಲೆಸಿ ಇಲ್ಲಿ ಬಹು ಆರಾಮವಾಗಿ ಅದ್ದೂರಿಯಿಂದ ಕಾಲ ಕಳೆಯುತ್ತಿರುವಾಗ ಹಿಂದಿನ ಬಿಜಾಪುರ ರಾಜ ಇವನನ್ನು ಶಿವಾಜಿಯ ಮೇಲೆ ದಂಡೆತ್ತಿ ಹೋಗಲು ಹೇಳಿದ. ೧೫,೦೦೦ ರಾವುತ ಸೈನ್ಯಪಡೆ ಸಿದ್ಧವಾಯಿತು. ಶತ್ರುವನ್ನು ಗೆದ್ದುಬರುವೆ, ಇಲ್ಲ ಪ್ರಾಣಕೊಡುವೆ ಎಂದು ಮಾತುಕೊಟ್ಟು ತನ್ನ ಊರಿಗೆ ಬಂದನು. ಅಂತಃಪುರದಲ್ಲಿ ೨೦೦ ಹೆಂಗಸರು. ಅವರೊಡನೆ ಆಮೋದ ವಿನೋದಗಳಲ್ಲಿ ಕಾಲ ಕಳೆದ. ತಾನು ಯುದ್ಧದಲ್ಲಿ ಸತ್ತರೆ ಅವರಾರೂ ಶತೃಗಳ ಕೈಗೆ ಸಿಕ್ಕಬಾರದೆಂದು ಎಲ್ಲರನ್ನೂ ಕಡಿದು ಅರಮನೆಯ ಮಧ್ಯೆ ಒಂದು ಬೆಂಕಿಯ ಕೊಂಡಕ್ಕೆ ಎಸೆದುಬಿಟ್ಟ. ಯಾರೊಡನೆ ಅಷ್ಟೊಂದು ಸುಖಪಟ್ಟಿದ್ದನೋ ಆ ಬಡಪಾಯಿ ಹೆಂಗಸರಿಗೆ ಕೊಟ್ಟ ಕ್ರೂರಶಿಕ್ಷೆಯಿಂದ ಆತನಿಗೆ ತಕ್ಕ ಪ್ರಾಯಶ್ಚಿತ್ತವಾಯಿತು.[೧]

ಶಿವಾಜಿ ತನ್ನ ಸೈನ್ಯ ಸಮೇತ ಯುದ್ಧಕ್ಕೆ ಸಿದ್ಧನಾದ. ತನ್ನ ಸೈನಿಕರನ್ನು ಹುರಿದುಂಬಿಸಿದ. ಈ ಕಡೆಯವರೂ ಯುದ್ಧಸನ್ನದ್ಧರಾದರು. ಆಗ ಶಿವಾಜಿ ಅಫ್‌ಜಲ್‌ಖಾನನೊಡನೆ ಒಂದು ವಿಷಯವಾಗಿ ಮಾತಾಡಬೇಕಾಗಿದೆ ಎಂದೂ ಇಬ್ಬರೂ ಒಂದೆಡೆ ಸೇರಿ ಮಾತಾಡೋಣವೆಂದೂ ಹೇಳಿಕಳುಹಿಸಿದ. ಅಫ್‌ಜಲ್‌ಖಾನ್ ಒಪ್ಪಿದ. ಒಬ್ಬೊಬ್ಬರ ಕಡೆ ಕೇವಲ ಇಬ್ಬರು ಸಿಪಾಯಿಗಳಿರಬೇಕೆಂದೂ ತಾವು ನಿಶ್ಶಸ್ತ್ರಗಳಾಗಿ ಭೇಟಿ ಮಾಡಬೇಕೆಂದೂ ಸಿಪಾಯಿಗಳು ತಮ್ಮ ಮಾತು ಕೇಳಿಸಿಕೊಳ್ಳದಂತೆ ದೂರದಲ್ಲಿರಬೇಕೆಂದೂ ಒಪ್ಪಂದ ಮಾಡಿಕೊಂಡರು. ಭೇಟಿಗೆ ಬಂದಾಗ ಶಿವಾಜಿಯೇ ಮೊದಲ ಮಾತು ಆರಂಭಿಸಿದ: 'ನಿಮ್ಮ ಶಕ್ತಿ ಸಾಮರ್ಥ್ಯಗಳು ನನಗೆ ಗೊತ್ತಿವೆ. ನೀವು ಹೆಸರಾಂತ

---

೧. ಕಾರ್‌ನ ಈ ಹೇಳಿಕೆಗೆ ಸಾಕಷ್ಟು ಆಧಾರಗಳು ಬೊಂಬಾಯಿ ಗೆಜೆಟಿಯರ್‌ನಲ್ಲಿ ದೊರೆಯುತ್ತವೆ. ಶಿವಾಜಿಯ ಮೇಲೆ ೧೬೫೯ರಲ್ಲಿ ಅಫ್‌ಜಲ್‌ಖಾನನು ಹೊರಟಾಗ ಆತನ ಜೋತಿಷ್ಕರು ಆತ ಯುದ್ಧದಿಂದ ಹಿಂದಿರುಗುವುದೇ ಇಲ್ಲವೆಂದು ಹೇಳಿದರಂತೆ. ಇದನ್ನು ನಂಬಿದ ಅಫ್‌ಜಲ್‌ಖಾನ್ ೨೨ ಜನ ಹೆಂಡತಿಯರನ್ನು ಕೊಳದಲ್ಲಿ ಹಾಕಿ ಸಾಯಿಸಿ ಪಕ್ಕದಲ್ಲಿಯೇ ಸಮಾಧಿ ಮಾಡಿದನಂತೆ. ಈಗಲೂ ಸಾಲುಸಾಲಾದ ಹೆಂಗಸರ ಗೋರಿಗಳನ್ನು ನೋಡಬಹುದಾಗಿದೆ. ಒಂದೇ ಬಗೆಯ ಅಷ್ಟೊಂದು ಗೋರಿಗಳಿರುವುದನ್ನು ನೋಡಿದರೆ ಈ ಕಥೆಯಲ್ಲಿ ಸತ್ಯಾಂಶವಿರಬಹುದೆಂದು ಹೇಳಲಾಗಿದೆ. ಅಫ್‌ಜಲ್‌ಪುರ ಎಂಬುದು ಬಿಜಾಪುರ ನಗರಕ್ಕೇ ಸೇರಿದಂತಿರುವ ತಕ್ಕಿ ಎಂಬ ಹಳ್ಳಿ.

ಸೇನಾನಾಯಕರಾಗಿದ್ದೀರಿ. ಬಿಜಾಪುರ ರಾಜ್ಯಕ್ಕೆ ಕೀರ್ತಿ ತಂದಿದ್ದೀರಿ. ನಿಮ್ಮಂತಹ ವೀರನ ಮೇಲೆ ಯುದ್ಧಮಾಡಲು ನಾನು ದೊಡ್ಡ ಸೈನ್ಯವನ್ನೇ ತಂದಿರುವೆ. ನಿಮ್ಮನ್ನೆಲ್ಲಾ ಸದೆಬಡಿದು ಗೆಲ್ಲಲೆಂದೇ ಬಂದಿದ್ದೇನೆ. ಆದರೆ ನಿಮ್ಮಲ್ಲಿರುವ ಒಬ್ಬ ಹೇಡಿಯೊಡನೆ ನಾವು ಯುದ್ಧಮಾಡಲು ಸಿದ್ಧರಿಲ್ಲ. ಅವನಿಗೆ ವೀರಮರಣ ತಕ್ಕುದಲ್ಲ' ಎಂದನು. ಶಿವಾಜಿಯ ಈ ಮಾತಿನಿಂದ ಆಚ್ಚರಿಗೊಂಡ ಅಫ್‌ಜಲ್‌ಖಾನ್ 'ಆ ಸಿಪಾಯಿ ಯಾರು?' ಎಂದು ಕೇಳಿದ.

'ಅವನ್ಯಾರೂ ಅಲ್ಲ, ನೀನೇ! ನಿನ್ನ ಶಕ್ತಿ ಸಾಮರ್ಥ್ಯವನ್ನು ಆ ೨೦೦ ಹೆಂಗಳೆಯರ ಮೇಲೆ ತೋರಿಸಿ ಅವರನ್ನು ಕಡಿದು ಬೆಂಕಿಯಲ್ಲಿ ಭಸ್ಮಮಾಡಿದೆಯಲ್ಲ! ನಿನ್ನಂತ ಹೇಡಿಗೆ ಇದೇ ತಕ್ಕ ಮರಣ" ಎನ್ನುತ್ತ ಶಿವಾಜಿ ತಾನು ಅಡಗಿಸಿ ಇಟ್ಟುಕೊಂಡಿದ್ದ ವಿಷಪೂರಿತ ಈಟಿಯಿಂದ ಆತನನ್ನು ಮೂರು ಸಲ ಇರಿದುಬಿಟ್ಟ. ಅಫ್‌ಜಲ್ ಸತ್ತು ಅವನ ಕಾಲ ಬಳಿ ಬಿದ್ದುಬಿಟ್ಟ.೧

ಇದೇ ಸಮಯಕ್ಕಾಗಿ ಕಾಯುತ್ತಿದ್ದ ಶಿವಾಜಿಯ ಸೈನ್ಯ ಅಫ್‌ಜಲ್‌ಖಾನನ ಸೈನ್ಯದ ಮೇಲೆ ಬಿದ್ದು ಅದನ್ನೆಲ್ಲಾ ಧೂಳೀಪಟ ಮಾಡಿತು. ಸತ್ತು ಉಳಿದವರು ಶರಣಾಗತ ರಾದರು. ಖಾನನ ಮಗ ಮತ್ತು ಆರು ಸೇನಾನಾಯಕರು ಪ್ರಾಣಭಿಕ್ಷೆ ಬೇಡಿದರು. ನೀವು ನನ್ನ ಸೈನ್ಯಕ್ಕೆ ಸೇರುವುದಾದರೆ ನಿಮ್ಮ ಪ್ರಾಣ ಉಳಿಸುತ್ತೇನೆ ಎಂದ ಶಿವಾಜಿ. ಆಗಲಿ ಎಂದು ಒಪ್ಪಿದರು. ಶಿವಾಜಿ ಅವರಿಗೆ ತನ್ನ ಸೈನ್ಯದಲ್ಲಿ ತಕ್ಕ ಸ್ಥಾನಮಾನ ಕೊಟ್ಟು ಯುದ್ಧದಲ್ಲಿ ಜಯಭೇರಿ ಹೊಡೆದ. ಅಫ್‌ಜಲ್‌ಖಾನನ ಶವವನ್ನು ತನ್ನ ಸ್ವಂತ ಪಲ್ಲಕ್ಕಿಯಲ್ಲಿ ಇಡಿಸಿ ಕರಿಬಟ್ಟೆ ಹೊದಿಸಿ ಅಫ್‌ಜಲ್‌ಪುರಕ್ಕೆ ಕಳುಹಿಸಿಕೊಟ್ಟ.೨ ಅಲ್ಲಿ ೨೦೦ ಹೆಂಗಳೆಯರು ಆಹುತಿಯಾದ ಸ್ಥಳದಲ್ಲಿಯೇ ಅವನ ಸಮಾಧಿ ಕಟ್ಟಿದರು.

ಅಫ್‌ಜಲ್‌ಪುರವು ಉದ್ದುದ್ದವಾಗಿ ಹಬ್ಬಿರುವ ಪಟ್ಟಣ. ಊರು ತುಂಬ ತೆಂಗಿನ ಮರಗಳೂ ಹಣ್ಣು ಹಂಪಲು ಗಿಡಗಳೂ ಬೆಳೆದು ಮನೆಗಳೇ ಕಾಣಿಸುವುದಿಲ್ಲ. ಇಲ್ಲಿಯ ನಿವಾಸಿಗಳಲ್ಲಿ ಹಿಂದೂಗಳೇ ಹೆಚ್ಚು. ಕೆಲವರು ಮಾತ್ರ ಮೂರರಿದ್ದಾರೆ.

ನಾವು ಇಲ್ಲಿ ರಾತ್ರಿ ತಂಗಿದ್ದು ಮಾರನೆಯದಿನ ಕೋಳಿ ಕೂಗುವ ಹೊತ್ತಿಗೆ ನಮ್ಮ ಪ್ರಯಾಣ ಮುಂದುವರಿಸಿದೆವು. ಮಧ್ಯಾಹ್ನ ಒಂದು ನದಿಯ ಬಳಿ ನಮ್ಮ ಊಟ ತೀರಿಸಿಕೊಂಡು ಸಂಜೆಯ ಹೊತ್ತಿಗೆ ಗೋಬೂರ್ ಎಂಬ ಊರಿಗೆ ಬಂದೆವು. ಊರಿನ ತುಂಬಾ ಪ್ರಯಾಣಿಕರು. ನಮಗೆ ಇಳಿದುಕೊಳ್ಳಲು ಜಾಗವೇ ಇಲ್ಲ. ಮೊದಲು

---

೧. ಅಫ್‌ಜಲ್‌ಖಾನನನ್ನು ಶಿವಾಜಿಯು 'ವ್ಯಾಘ್ರನಖ' ಎಂಬ ಆಯುಧದಿಂದ ಕೊಂದನೆಂದು ಸಾಮಾನ್ಯವಾಗಿ ಹೇಳಲಾಗಿದೆ. ಕಾರ್ ತನ್ನ ಕತೆಯನ್ನು ಕೊಂಚ ನಾಟಕೀಯವಾಗಿ ಹೇಳಿದ್ದಾನೆಂಬುದ ರಲ್ಲಿ ಸಂದೇಹವಿಲ್ಲ.

೨. ಅಫಜಲ್‌ಖಾನನ ತಲೆಯನ್ನು ಶಿವಾಜಿಯು ಪ್ರತಾಪಘಡಕ್ಕೆ ಕಳುಹಿಸಿ ಅಲ್ಲಿ ಹೂಳಿಸಿದ ನೆಂದೂ ಹೇಳಲಾಗಿದೆ.

ಒಂದು ಸತ್ರದಲ್ಲಿ ಜಾಗ ಹಿಡಿದವನನ್ನು ಅವನು ಎಷ್ಟೇ ಚಿಕ್ಕವನಾಗಿರಲಿ ಬಿಡಿಸು ವಂತಿಲ್ಲ. ದಾಕ್ಷಿಣ್ಯಕ್ಕೋ ಅಥವಾ ಹಣಕ್ಕೋ ಬಿಡಬೇಕಷ್ಟೆ. ನಾನು ಬೆಳ್ಳಿ ನಾಣ್ಯವನ್ನು ಅವನ ಕೈಯಲ್ಲಿ ಹಾಕಿ ಒಂದು ಅನುಕೂಲವಾದ ಸ್ಥಳ ಗಿಟ್ಟಿಸಿಕೊಂಡು ಠಿಕಾಣಿ ಹಾಕಿದೆ. ಮಾರನೆಯ ದಿನ ತಂಪು ಹೊತ್ತಿನಲ್ಲಿ ಪ್ರಯಾಣ ಆರಂಭಿಸಿದೆ. ದಾರಿಯುದ್ದಕ್ಕೂ ಫಕೀರರು ಮತ್ತು ಹಿಂದೂ ಯಾತ್ರಿಕರು ಕಂಡರು. ಕೆಲವರು ನಾವು ಹೋಗುತ್ತಿದ್ದ ಕಡೆ ಹೋದರೆ ಕೆಲವರು ನಮಗೆ ಎದುರಾಗಿ ಬರುತ್ತಿದ್ದರು. ವಿಚಾರಿಸಿದಾಗ ತಿಳಿಯಿತು ಅವರೆಲ್ಲ ಕಲ್ಬೆರ್ಗಾ (Calberga = ಕಲ್ಬುರ್ಗಿ = ಗುಲ್ಬರ್ಗ) ದಲ್ಲಿರುವ ಮುಂದುನ್ ಲಾ ಹೆಬ್ (Mundun la Heb = ಖ್ವಾಜಾ ಬಂದೇ ನವಾಜ್)[೧] ಉರುಸಿಗೆ ಹೋಗುತ್ತಿದ್ದರು, ಅಲ್ಲಿಂದ ಬರುತ್ತಿದ್ದರು. ಈ ಊರು ತ್ರಾಪೂರ್ (Trapour)ಗೆ ಎರಡು ಹರಿದಾರಿ ದೂರದಲ್ಲಿದೆ. ಉರುಸಿನಿಂದ ಹಿಂದಿರುಗಿ ಬರುತ್ತಿದ್ದ ಬಹು ಜನರ ತಲೆಯಮೇಲೆ ಒಂದು ಬಗೆಯ ತೊಟ್ಟಿಲುಗಳಿದ್ದುವು. ಅವಕ್ಕೆ ಕೋಳಿಗರಿ ಗಂಟೆ ಮುಂತಾದುವುಗಳ ಅಲಂಕಾರ ಮಾಡಿದ್ದರು. ಹೆಂಗಸರು ಮಕ್ಕಳ ಕೈಯಲ್ಲಿ ಗಿರಿಗಿಟ್ಟೆ ಕೋಲುಗಳಿದ್ದುವು. ಬಗೆಬಗೆಯ ಬಣ್ಣ ಬಣ್ಣದ ಬಟ್ಟೆಯಲ್ಲಿ ಮಾಡಿದ ಇವನ್ನು ಮೇಲೆ ಎತ್ತಿ ಹಿಡಿದಾಗ ಅವು ಗಿರ್ರೆಂದು ತಿರುಗುತ್ತಿದ್ದುವು. ಕೆಲವರು ತಾಮ್ರದ ತಟ್ಟೆ, ಚಿಕ್ಕಪುಟ್ಟ ಪಾತ್ರೆ ಮತ್ತು ಸಣ್ಣ ಸಣ್ಣ ಬಿಂದಿಗೆಗಳನ್ನು ಹಿಡಿದಿದ್ದರು. ಇವುಗಳನ್ನು ಬಡಿದು ನಮ್ಮ ಡ್ರಂಗಳನ್ನು ಬಡಿದಂತೆ ಶಬ್ದ ಮಾಡುತ್ತಿದ್ದರು. ತಲೆ ಬೋಳಿಸಿಕೊಂಡ ಕೆಲವರ ಕೈಯಲ್ಲಿ ಬೋಳಿಸಿದ ಕೂದಲನ್ನು ಕಟ್ಟಿದ ಕೋಲುಗಳಿದ್ದುವು. ಇದೆಲ್ಲಾ ಏನು ಎಂದು ನನಗೆ ಕುತೂಹಲ. ಕೇಳಿದೆ. ಅವರು ಹೇಳಿದ್ದೇನೆಂದರೆ: 'ನಾವು ಪ್ರತಿವರ್ಷ ಕಲ್ಬೆರ್ಗಾದಲ್ಲಿ ನಡೆಯುವ ಉರುಸಿಗೆ ಹೋಗುತ್ತೇವೆ. ನಾವು ತಂದಿರುವ ಇವೆಲ್ಲಾ ಯಾತ್ರೆಗೆ ಹೋಗಿ ಬಂದುದರ ಗುರುತುಗಳು. ಮಕ್ಕಳಿಗೆ ಕಾಯಿಲೆ ಕಸಾಲೆ ಆದರೆ ಈ ತೊಟ್ಟಿಲುಗಳಲ್ಲಿ ಮಲಗಿಸುತ್ತೇವೆ. ಈ ತೊಟ್ಟಿಲುಗಳು ಆ ಮಹಾತ್ಮನ ಮನೆಯಲ್ಲಿದ್ದ ಕಾರಣ ಬಹು ಪವಿತ್ರವಾದವುಗಳು. ಕೈಯಲ್ಲಿ ಹಿಡಿದ ಗಿರಿಗಿಟ್ಟೆಗಳನ್ನು ಹೆಂಗಸರ ಹೆರಿಗೆ ಸಲೀಸಾಗಿ ಆಗಲೆಂದು ಅವರ ತಲೆಗೆ ಸಿಕ್ಕಿಸುತ್ತೇವೆ, ಅಥವಾ ಕೈಗೆ ಕೊಡುತ್ತೇವೆ. ನಾವು ತಂದ ಪಾತ್ರೆಪರಟೆಗಳಲ್ಲಿ ಅಡುಗೆಮಾಡಿ ಕಾಯಿಲೆಯವರಿಗೆ ಬಡಿಸಿದರೆ ಕಾಯಿಲೆ ವಾಸಿಯಾಗು ತ್ತದೆ. ಕೋಲಿಗೆ ಸಿಕ್ಕಿಸಿ ಹಿಡಿದುಕೊಂಡ ಕೂದಲು ಆ ಮಹಾತ್ಮನಿಗೆ ಕೊಟ್ಟ ಮುಂಡೆ. ಇದನ್ನು ಹಿಡಿದಿರುವವರು ಮದುವೆಯಾಗದ ಚಿಕ್ಕ ಪ್ರಾಯದ ಹೆಣ್ಣುಮಕ್ಕಳು.

---

೧. ಖ್ವಾಜಾ ಬಂದೇ ನವಾಜ್: ಈತ ೧೪೧೩–೨೨ರವರೆಗೆ ಗುಲ್ಬರ್ಗಾದಲ್ಲಿದ್ದನೆಂದೂ ಈತನ ಸಮಾಧಿಯ ದರ್ಶನ ಮಾಡಿದರೆ ಮಕ್ಕಾಕ್ಕೆ ಹೋಗಿ ಬಂದಷ್ಟೇ ಪುಣ್ಯ ಎಂಬ ಭಾವನೆಯೂ ಬೆಳೆದಿತ್ತು. ಬರಬರುತ್ತಾ ಈ ಸಂತನ ಉರುಸಿನ ವೇಳೆ ಏನೇನೋ ಅತ್ಯಾಚಾರಗಳು ನಡೆಯಲಾರಂಭಿಸಿ ದುವು. ಈ ಕಾರಣ ಸಂತನ ಕಡೆಯವರನ್ನು ಸ್ಥಳ ಬಿಡಿಸಿ ಸಮಾಧಿಯನ್ನು ಸರ್ಕಾರ ತನ್ನ ವಶಕ್ಕೆ ತೆಗೆದು ಕೊಂಡಿತು. ಹೀಗಾಗಿ ಉರುಸಿಗೆ ಬರುವ ಜನರ ಸಂಖ್ಯೆ ಕ್ರಮೇಣ ಕಡಿಮೆಯಾಯಿತು.

ತಾವು ಚಿಕ್ಕವಯಸ್ಸಿನಲ್ಲೇ ಯಾತ್ರೆ ಹೋಗಿದ್ದೆವೆಂಬ ಗುರುತಿಗಾಗಿ ಅದನ್ನು ಅವರು ಜೋಪಾನವಾಗಿ ಇಟ್ಟುಕೊಳ್ಳುತ್ತಾರೆ.'

ನನ್ನೊಡನೆ ಮಾತಾಡಿದ ಹಿಂದೂಗಳು ಇನ್ನೂ ಏನೇನೋ ಅಸಹ್ಯವಾದ ಸಂಗತಿಗಳನ್ನು ಹೇಳಿದರು. ಇವರ ದಡ್ಡತನಕ್ಕೆ ನಾನು ಅಯ್ಯೋ ಎಂದೆ. ಹೊಟ್ಟೆ ಬಟ್ಟೆಗಿಲ್ಲದ ಪ್ರಪಂಚದಲ್ಲಿ, ಎಲ್ಲಿಯೂ ಕಾಣದ ಬಡತನದಲ್ಲಿ ಬೇಯುತ್ತಿರುವ ಈ ಜನ ಇಂಥ ಮೂಢ ನಂಬಿಕೆಗಳಿಗೆ ಮಾರುಹೋಗಿದ್ದರು ಆದರೂ ಖುಷಿಯಾಗಿ ತೃಪ್ತಿಯಿಂದ ಇದ್ದುದನ್ನು ನೋಡಿ ನನಗೆ ಆಶ್ಚರ್ಯವೂ ಆಯಿತು.

ಫಕೀರರು ಬೂದಿ, ಮಣ್ಣು ಮತ್ತು ಏನೇನೋ ಹೊಲಸನ್ನು ಮೈಕೈಗೆ ಬಳಿದು ಕೊಂಡಿರುವುದನ್ನು ನೋಡಿ ನನಗೆ ತೀರಾ ಅಸಹ್ಯವಾಯಿತು. ಇದಕ್ಕಿಂತ ಹೊಲಸು ಇನ್ನೊಂದಿಲ್ಲ. ಹೀಗೆ ತಾವು ಮಹಾತ್ಮರೆಂಬ ಸೋಗಿನಲ್ಲಿ ಈ ಫಕೀರರು ಗೃಹಸ್ಥರ ಮನೆಯಲ್ಲಿ ಮಾಡುವ ಅನಾಚಾರಗಳಿಗೆ ಲೆಕ್ಕವಿಲ್ಲ. ಅವನ್ನೆಲ್ಲಾ ಬಾಯಲ್ಲಿ ಹೇಳಬಾರದು.

ಒಂದು ರಾತ್ರಿ ತಾಪುರದಲ್ಲಿ ನಿಂತು ಎರಡು ದಿನ ಒಂದೇ ಸಮನೆ ಪ್ರಯಾಣ ಮಾಡಿದೆ. ಉದ್ದಕ್ಕೂ ಹತ್ತಿಯ ಹೊಲಗಳು ಮತ್ತು ಹತ್ತಿ ಬಿಡಿಸುತ್ತಿದ್ದ ತಂಡೋಪತಂಡ ಗಂಡಸರು, ಹೆಂಗಸರು ಮತ್ತು ಮಕ್ಕಳು. ಇದನ್ನು ನೋಡಿದಾಗ ನಮ್ಮ ಲೋಯಿರೇ (Loire) ನದಿಯ ಉದ್ದಕ್ಕೂ ಸೆಪ್ಟೆಂಬರ್ ತಿಂಗಳಿನಲ್ಲಿ ದ್ರಾಕ್ಷಿ ಕೊಯ್ಯುವ ದೃಶ್ಯದ ನೆನಪಾಯಿತು.

ಮಾರ್ಚ್ ೧೧ನೆಯ ತಾರೀಖು ಮಧ್ಯಾಹ್ನ ತಾಬುರ್ಗ್ (Taburg) ಎಂಬ ಸಣ್ಣ ಹಳ್ಳಿಗೆ ಬಂದೆವು. ಇದು ಬಿಜಾಪುರ ರಾಜ್ಯದ ಕೊನೆಯ ಊರು. ಇಲ್ಲಿ ಹರಿಯುವ ಒಂದು ದೊಡ್ಡ ನದಿ ಈ ರಾಜ್ಯದ ಗಡಿ, ಗೋಲ್ಕೊಂಡಾ ರಾಜ್ಯದ ಮೊದಲ ಊರಾದ ಜೊಯ್‌ವಿಗ್ನಿ (Joyvigny)[೧] ಎಂಬ ಊರಿಗೆ ಬಂದೆವು. ಇಲ್ಲಿ ಬಿಜಾಪುರದ ನಾಣ್ಯದ ಚಲಾವಣೆ ಇಲ್ಲ. ಅದು ನದಿಯಿಂದಾಚೆಗೆ ಮಾತ್ರ.

ಮುಂದಿನ ಎರಡು ದಿನಗಳು ನಮ್ಮ ಪ್ರಯಾಣ ಕೆರೆಕುಂಟೆಗಳಿಂದಲೂ ಹಳ್ಳಕೊಳ್ಳಗಳಿಂದಲೂ ಕೂಡಿ ಫಲವತ್ತಾದ ಪ್ರದೇಶದಲ್ಲಿ ಸಾಗಿತ್ತು. ಹತ್ತಿ ಮತ್ತು ರೇಷ್ಮೆ ಸರಕುಗಳನ್ನು ತಯಾರಿಸುವ ಈ ಪ್ರದೇಶದಲ್ಲಿ ಅವುಗಳ ಭಾರಿ ವ್ಯಾಪಾರ ನಡೆಯುತ್ತದೆ.

ಮಾರ್ಚಿ ೧೪ನೆಯ ತಾರೀಖು ಮಂಗಳವಾರ ನಾವು ಗೋಲ್ಕೊಂಡಾ ರಾಜಧಾನಿಗೆ ಒಂದು ಹರಿದಾರಿ ದೂರದಲ್ಲಿದ್ದೆವು. ದಾರಿ ತುಂಬಾ ಇಕ್ಕಟ್ಟು. ಬೆಟ್ಟಗುಡ್ಡಗಳ ಮಧ್ಯೆ ನಾನು ಮತ್ತು ನನ್ನ ಸೇವಕರು ದಾರಿ ಸಾಗಿಸುವುದೇ ಕಷ್ಟವಾಯಿತು. ಒಮ್ಮೊಮ್ಮೆ ಕಲ್ಲುಗೊಟರುಗಳಲ್ಲಿ ದಾರಿಯೇ ಕಾಣಿಸುತ್ತಿರಲಿಲ್ಲ. ಅಂತೂ ಹೇಗೋ ಮಾಡಿ ಸಂಜೆಯ

---

೧. ಜೊಯ್‌ವಿಗಿ = ಇದು ಜೀವಾನಿಯೀ (Jeevaniyee) ಎಂಬ ಊರು.

ಹೊತ್ತಿಗೆ ಭಾಗನಗರ ಮತ್ತು ಗೋಲ್ಕೊಂಡಾ ಪಟ್ಟಣಗಳ ಮಧ್ಯಭಾಗಕ್ಕೆ ಬಂದೆವು. ಮಿಲ್ಲಾಪುರ (Millapour = Milkapur = ಮಿಲ್ಕಾಪುರ) ಎಂಬ ಊರಿನಲ್ಲಿದ್ದ ಒಬ್ಬ ಪೋರ್ಚುಗೀಸ್ ಪಾದ್ರಿಯ ಮನೆಯಲ್ಲಿ ಇಳಿದುಕೊಂಡೆವು. ಇವರು ಗೋಲ್ಕೊಂಡಾ ಮಿಷನ್ನಿನ ಪ್ರತಿನಿಧಿ (Vicar) ಆಗಿದ್ದರು. ಈ ವೃದ್ಧ ನನ್ನನ್ನು ತುಂಬಾ ಪ್ರೀತಿವಿಶ್ವಾಸಗಳಿಂದ ಕಂಡರು. ನಾನು ಬಿಜಾಪುರದಲ್ಲಿ ಕಾಯಿಲೆ ಬಿದ್ದಾಗ ಹೇಳಿ ಕಳುಹಿಸಿದ್ದು ಇವರಿಗೇ. ತಾವು ಬರಲಾಗದಿದ್ದುದಕ್ಕಾಗಿ ಕ್ಷಮೆ ಕೇಳಿದರು. ನನ್ನ ತಾಯಿ ಮೇರಿ ಹಾಗೂ ಆ ಪರಮಾತ್ಮನನ್ನು ಮನದುಂಬಿ ಪೂಜಿಸುವ ಅವಕಾಶ ಸಿಕ್ಕಿತಲ್ಲಾ ಎಂದು ಆನಂದಭರಿತನಾದೆ. ಕೆಲವು ದಿನ ಒಂಟಿಯಾಗಿ ಇದ್ದು ದೇಹಕ್ಕೂ ಮನಸ್ಸಿಗೂ ಬೇಕಾಗಿದ್ದ ಚೈತನ್ಯವನ್ನು ಪಡೆದೆ. ಸೆಂಟ್ ಥಾಮಸ್‌ಗೆ ಹೋಗುವ ನನ್ನ ಮುಂದಿನ ಕೆಲಸಕ್ಕೆ ಇವು ಆವಶ್ಯಕವಾಗಿದ್ದವು. ಆದರೆ ಆರು ದಿನಗಳು ಯಾರಿಗೂ ಗೊತ್ತಾಗದಂತೆ ಹೊರಗಡೆ ಹೋಗದೇ ಇದ್ದರೂ ಕೆಲವು ಸಲ ಪರ್ಷಿಯಾ ವರ್ತಕನ ವೇಷದಲ್ಲಿ ಪಲ್ಲಕ್ಕಿಯಲ್ಲಿ ಕುಳಿತು ಗೋಲ್ಕೊಂಡಾಕ್ಕೂ ಭಾಗನಗರಕ್ಕೂ ಹೋಗಿ ಬಂದೆ.

ಗೋಲ್ಕೊಂಡಾ ಮತ್ತು ಭಾಗನಗರಗಳು ಒಂದು ಹರಿದಾರಿ ಅಂತರದಲ್ಲಿವೆ. ಇವು ಶ್ರೀಮಂತ ಗೋಲ್ಕೊಂಡಾ ರಾಜ್ಯದ ಮಹಾ ನಗರಗಳು. ರಾಜನು ಸಾಮಾನ್ಯವಾಗಿ ಗೋಲ್ಕೊಂಡಾದಲ್ಲಿರುತ್ತಾನೆ. ಈ ನಗರಗಳನ್ನು ಕೋಟೆಕೊತ್ತಲಗಳಿಂದ ಬಹು ಭದ್ರಪಡಿಸಿದ್ದಾರೆ. ಕೋಟೆಯ ಒಳಗಡೆ ರಾಜನ ಅರಮನೆಯೂ ಅವನ ಅಂತಃಪುರವೂ ಶ್ರೀಮಂತ ಸರದಾರರ ಸೌಧಗಳೂ ಇವೆ.[೧]

ಪ್ರತಿದಿನ ಬೆಳಗ್ಗೆ ಈ ಶ್ರೀಮಂತ ಸರದಾರರ ಅದ್ದೂರಿಯ ವೈಭವವನ್ನು ನೋಡಿ ಬೆರಗಾಗುತ್ತಿದ್ದೆ. ಅವರ ಥಳಥಳಿಸುವ ಉಡುಪು ಫಳಫಳನೆ ಹೊಳೆಯುವ ವಜ್ರ ವೈಡೂರ್ಯಗಳ ಆಭರಣಗಳನ್ನು ನೋಡಿ ಯಾರಾದರೂ ಅಸೂಯೆ ಪಡಬೇಕು. ತಮ್ಮ ತಮ್ಮ ಆನೆ ಕುದುರೆ ಪಲ್ಲಕ್ಕಿಗಳನ್ನೂ ಶಸ್ತ್ರಾಸ್ತ್ರಗಳನ್ನೂ ಬಹು ಸೊಗಸಾಗಿ ಅಲಂಕರಿಸಿಕೊಂಡು ಅದ್ದೂರಿಯ ಉಡುಪು ಧರಿಸಿ ಒಂದು ಕಡೆ ನೆರೆದಾಗ ಅದನ್ನು ನೋಡಲು ಎರಡು ಕಣ್ಣು ಸಾಲವು. ಗೋಲ್ಕೊಂಡಾ ಆಸ್ಥಾನದ ಈ ಮಹಾ ವೈಭವವನ್ನು ಗಂಟೆಗಟ್ಟಲೆ ನೋಡಿ ನನ್ನ ಕಣ್ಣು ತೃಪ್ತಿಪಟ್ಟವೆಂದು ಹೇಳದೆ ಇರಲಾರೆ.

ಪ್ರತಿದಿನ ಬೆಳಗ್ಗೆ ಇವನ್ನೆಲ್ಲಾ ನೋಡಿ ಸಂತೋಷಗೊಂಡರೆ ಸಂಜೆ ಈ ಸೇನಾ ನಾಯಕರುಗಳೂ ದಂಡನಾಯಕರುಗಳೂ ರಾಜಧಾನಿಯಿಂದ ಹೊರಗೆ ತಂಡೋಪ

---

೧. ಈತನ ಹೆಸರು ಅಬ್ದುಲ್ ಹಸನ್ ಷಾ ಎಂದು. ಮಾವನಾದ ಅಬ್ದುಲ್ಲಾ ಖುತುಬ್ ಷಾ ಕಾಲವಾದ ಮೇಲೆ ಈತ ೧೬೭೨ರಲ್ಲಿ ಸಿಂಹಾಸನಕ್ಕೆ ಬಂದನು.

ಗೋಲ್ಕೊಂಡಾದ ಸುತ್ತ ಮೂರು ಮೈಲಿ ಸುತ್ತಳತೆಯ ಕಲ್ಲಿನ ಕೋಟೆ ಇದೆ. ಮೂಲೆಮೂಲೆಗಳಲ್ಲಿ ೮೭ ಕೊತ್ತಲಗಳಿವೆ. ಕೋಟೆಯ ಒಳಗಡೆ ಈಗಲೂ ಅನೇಕ ಅರಮನೆಗಳನ್ನೂ ಮಸೀದಿಗಳನ್ನೂ ಸರದಾರರ ಸೌಧಗಳನ್ನೂ ಕಾಣಬಹುದು.

ತಂಡವಾಗಿ ಸೇರಿ ಯುದ್ಧಕ್ಕೆ ತರಬೇತಿ ಪಡೆಯುತ್ತಿದ್ದುದನ್ನು ನೋಡಿ ಮನಸ್ಸಿಗೆ ಆತಂಕವೂ ಆಗುತ್ತಿತ್ತು. ಹೊಸದಾಗಿ ಕಟ್ಟಿದ ಸೈನ್ಯಕ್ಕೆ ತರಬೇತಿ. ಶಸ್ತ್ರಾಸ್ತ್ರಗಳ ಕಣಕಣ ಶಬ್ದ ಮಾಡುತ್ತ ಆನೆಗಳ ಮೇಲೆ ಅವನ್ನು ಹೇರಿ ಪಳಗಿಸುತ್ತಿದ್ದರು. ಇನ್ನು ಕೆಲವು ದಿನಗಳಲ್ಲಿ ಈ ಸೈನ್ಯಗಳು ಸೇಂಟ್ ಥೋಮಿಗೆ ಹೊರಡುವುದಾಗಿಯೂ ಜನ ಮಾತಾಡುತ್ತಿದ್ದರು. ಇವನ್ನೆಲ್ಲಾ ಕೇಳಿ ನೋಡಿ ನನಗೆ ಭಯವೇ ಆಯಿತು. ಫ್ರಾನ್ಸಿನಿಂದ ಸೇಂಟ್ ಥೋಮಿಗೆ ಫ್ರೆಂಚರು ಬಂದು ಕೇವಲ ಎಂಟು ತಿಂಗಳಾಗಿದ್ದವು. ಇವರನ್ನು ಹೊರಗಟ್ಟಲು ಬಂದ ಗೋಲ್ಕೊಂಡಾ ರಾಜನ ಸೈನ್ಯದ ೨೦,೦೦೦ ಜನರನ್ನು ಆಗಲೇ ಆಹುತಿ ತೆಗೆದು ಕೊಂಡಿದ್ದರು.

ಯುದ್ಧಕ್ಕೆ ತಯಾರಿ ನಡೆಸುವುದನ್ನು ನೋಡಲು ಅನೇಕ ಜನ ಬರುತ್ತಿದ್ದರು. ಅವರಲ್ಲಿ ಕೆಲವರು ವಿದೇಶಿ ವರ್ತಕರಿದ್ದರು. ನಾನೊಬ್ಬ ಪರ್ಷಿಯನ್ ಎಂದು ಭಾವಿಸಿ ಪಲ್ಲಕ್ಕಿಯಲ್ಲೇ ಕುಳಿತು ನನ್ನ ಪಲ್ಲಕ್ಕಿಯ ಬಳಿಗೆ ಬಂದು ರಾಜನ ಬಗ್ಗೆ ಏನೇನೋ ಹರಟೆ ಹೊಡೆಯುತ್ತಿದ್ದರು. ಅವರಿಂದ ಆಸ್ಥಾನದ ಅನೇಕ ಸಂಗತಿಗಳು ತಿಳಿದುವು. ರಾಜನಿಗೆ ಯುದ್ಧ ಸಾಕಾಗಿದೆಯೆಂದೂ ಫ್ರೆಂಚ್ ವೈಸ್‌ರಾಯ್ ಜೊತೆ ಸಂಧಿಮಾಡಿ ಕೊಳ್ಳುವ ಮನಸ್ಸಿದೆಯೆಂದೂ ಗೊತ್ತಾಯಿತು. ಆದರೆ ಇದಕ್ಕೆ ಆತನ ನವಾಬರೂ ಡಚ್ಚರೂ ತುಂಬಾ ವಿರೋಧವಾಗಿದ್ದರು. ಫ್ರೆಂಚರ ಶಸ್ತ್ರಾಸ್ತ್ರಗಳೂ ಹಣವೂ ಮುಗಿದು ಹೋಗಿವೆ. ಯೂರೋಪಿನಿಂದ ಅವು ಬರುವುದು ಕಷ್ಟ. ಅನಿವಾರ್ಯವಾಗಿ ಅವರು ಶರಣಾಗತರಾಗಲೇಬೇಕು. ಹಾಗೆ ಆಗದಿದ್ದರೆ ಡಚ್ಚರು ತಾವು ಬಟೇವಿಯಾದಿಂದ ಸೇನಾಪಡೆಗಳನ್ನು ತಂದು ಸಮುದ್ರದ ಕಡೆಯಿಂದ ಸೇಂಟ್ ಥೋಮನ್ನು ಮುತ್ತಿಗೆ ಹಾಕಿ ಫ್ರೆಂಚರನ್ನು ಮಟ್ಟಹಾಕಬಲ್ಲೆವೆಂದು ಹೇಳುತ್ತಿದ್ದರು. ಈ ಕಾರಣ ಗೋಲ್ಕೊಂಡಾ ರಾಜ ಯುದ್ಧ ಮುಂದುವರಿಸಲು ಮನಸ್ಸುಮಾಡಿ ಅದಕ್ಕೆ ಸಜ್ಜಾಗುತ್ತಿದ್ದ. ಇಷ್ಟೆಲ್ಲಾ ಸಂಗತಿಗಳು ನನ್ನ. ಗೋಲ್ಕೊಂಡಾ ಭೇಟಿಯಿಂದ ತಿಳಿದುವು.

ಭಾಗನಗರಕ್ಕೆ ಹೋಗಿ ಬಂದೆ. ಅದು ವಿಶಾಲವಾದ ಮೈದಾನದಲ್ಲಿ ಕಟ್ಟಿದ ನಗರವಾದ್ದರಿಂದ ನನ್ನ ಓಡಾಟಕ್ಕೆ ಯಾವ ಅಡ್ಡಿಯೂ ಆಗಲಿಲ್ಲ. ಸೊಗಸಾದ ನದಿಯ ಬಳಿ ಊರು ಇದೆ. ಊರಿನಲ್ಲಿ ದೇಶವಿದೇಶಗಳ ವರ್ತಕರು ತುಂಬಿದ್ದಾರೆ. ಇಲ್ಲಿರುವ ಜನರ ವ್ಯಾಪಾರದ ಸರಕುಗಳು ಮತ್ತು ಸಿರಿಸಂಪತ್ತುಗಳನ್ನು ನೋಡಿ ಇದು ಇಡೀ ಪೂರ್ವದ ಎಲ್ಲಾ ವ್ಯಾಪಾರ ಕೇಂದ್ರವೋ ಎನಿಸಿತು.

ಹಲವಾರು ದಿನಗಳ ತನಕ ಸಾಂಥೋಮ್‌ನಲ್ಲಿ ಫ್ರೆಂಚರು ತೋರಿಸುತ್ತಿರುವ ಸಾಹಸದ ಮಾತೇ ಮಾತು. ಅವರ ಮೇಲೆ ಯುದ್ಧ ವ್ಯರ್ಥ .ಎಂದೇ ಜನರ ಭಾವನೆ ಯಾಗಿತ್ತು. ಫ್ರೆಂಚರ ಈ ಸಾಹಸ ಕೇಳಿ ನನ್ನ ಎದೆ ಉಬ್ಬಿತು. ಆದಷ್ಟು ಜಾಗ್ರತೆ ಸಾಂಥೋಮ್‌ಗೆ ಹೋಗಬೇಕೆಂದು ಮನಸ್ಸು ಚಡಪಡಿಸಿತು. ಈಗ ದಾರಿಯ ಆಯಾಸ ಪರಿಹಾರವಾಗಿ ನನ್ನ ಆರೋಗ್ಯ ಕುದುರಿತ್ತು. ಪೋರ್ಚುಗೀಸ್ ಪಾದ್ರಿಯನ್ನು ಕೇಳಿ

ಕೊಂಡೆ, ದಯಮಾಡಿ ನನ್ನನ್ನು ಮದ್ರಾಸಿಗೆ ತಲುಪಿಸುವ ನಂಬಿಕಸ್ಥರಾದ ಆಳುಗಳನ್ನು ಒದಗಿಸಿಕೊಡಿ ಎಂದು. ಆದರೆ ದಾರಿಯಲ್ಲಿ ಕಳ್ಳಕಾಕರ ಕಾಟ ವಿಪರೀತವೆಂದೂ ಅದರಲ್ಲೂ ಡಚ್ಚರ ಹಾವಳಿ ಹೆಚ್ಚೆಂದೂ ಇಂಥ ವೇಳೆ ಅಲ್ಲಿಗೆ ಹೋಗುವುದು ಕ್ಷೇಮಕರ ವಲ್ಲವೆಂದೂ ಹೇಳಿ ಅವರು ನಾನು ಹೊರಡುವುದನ್ನು ತಡಮಾಡುತ್ತಾ ಬಂದರು.

ಅಲ್ಲದೆ ನಾನು ನನ್ನ ಗುರುತನ್ನು ಮೂರರಿಗೂ ಡಚ್ಚರಿಗೂ ಹೇಳದೆ ಊರು ಬಿಡುವಂತಿರಲಿಲ್ಲ. ಏಕೆಂದರೆ ಇಲ್ಲಿಯ ವ್ಯಾಪಾರ ಸಾಪಾರವೆಲ್ಲ ಅವರ ಕೈಯಲ್ಲಿದೆ. ಡಚ್ಚರಿಂದ ಪರವಾನಗಿ ಪಡೆದ ಹೊರತು ಪ್ರಯಾಣ ಸಾಧ್ಯವಿರಲಿಲ್ಲ. ಅಥವಾ ಮೂರ್ 'ಕೊತ್ವಾಲ'ನಿಂದಲಾದರೂ ಪರವಾನಗಿ ಪಡೆಯಬೇಕಿತ್ತು. ಈ ಇಬ್ಬರಿಗೂ ಫ್ರೆಂಚರನ್ನು ಕಂಡರೆ ಆಗುತ್ತಿರಲಿಲ್ಲ. ಈ ಇಕ್ಕಟ್ಟಿನ ಪರಿಸ್ಥಿತಿಯಿಂದ 'ಹೇಗೆ ಪಾರಾಗು ವುದೋ ಎಂದು ಯೋಚಿಸತೊಡಗಿದೆ. ನಮ್ಮ ಪೋರ್ಚುಗೀಸ್ ಪಾದ್ರಿ ಡಚ್ಚರೊಡನೆ ಸ್ನೇಹದಿಂದಿದ್ದರು. ಅವರನ್ನು ಕೇಳಿಕೊಂಡೆ, ಹೇಗಾದರೂ ಮಾಡಿ ಆ ಡಚ್ ಅಧಿಕಾರಿ ಯಿಂದ ಪರವಾನಗಿ ಪಡೆದುಕೊಂಡು ಬನ್ನಿ ಎಂದು. ನಾನು ಫ್ರೆಂಚ್ ಪಾದ್ರಿಯೆಂದೂ ನಾನು ಮಸುಲಿಪಟ್ಟಣದ ಮಾರ್ಗ ಸಯಾಂಗೆ ಹೋಗಬೇಕಾಗಿದೆಯೆಂದೂ ಪಾದ್ರಿ ಯವರಿಗೆ ಹೇಳಿಕೊಟ್ಟೆ. ಪಾದ್ರಿಯವರು ನಾನು ಹೇಳಿದಂತೆ ಮಾಡಿದರು. ಫಲಿತಾಂಶ ಬಹು ಉತ್ತೇಜಕರವಾಗಿತ್ತು. ಡಚ್ ಕಮಾಂಡೆಂಟ್ ಕಡೆಯ ಒಬ್ಬ ಮನುಷ್ಯ ಬಂದು ಪರವಾನಗಿ ಕೊಡುವುದಾಗಿಯೂ ನಾನು ಡಚ್ಚರ ಫ್ಯಾಕ್ಟರಿಯಲ್ಲಿ ಕೆಲವು ದಿನ ಇದ್ದು ಅನಂತರ ಹೊರಡಬಹುದೆಂದೂ ತಿಳಿಸಿದ. ನನಗೆ ತುಂಬಾ ಸಂತೋಷವಾಯಿತು. ಆಗಲಿ ಎಂದು ಭಾಗನಗರದಲ್ಲಿದ್ದ ಡಚ್ ಫ್ಯಾಕ್ಟರಿಗೆ ಹೋದೆ. ಫ್ಯಾಕ್ಟರಿಯ ಮುಖ್ಯಸ್ಥ ನನ್ನನ್ನು ವಿಶ್ವಾಸದಿಂದ ಬರಮಾಡಿಕೊಂಡನು. ಫ್ರೆಂಚರಿಗೂ ಡಚ್ಚರಿಗೂ ನಡೆಯುತ್ತಿರುವ ಯುದ್ಧ ಆ ರಾಷ್ಟ್ರಗಳಿಗೆ ಸಂಬಂಧಪಟ್ಟ ವಿಷಯವೆಂದೂ ವಿದೇಶ ದಲ್ಲಿರುವ ನಾವು ಅವುಗಳ ಬಗ್ಗೆ ತಲೆ ಕೆಡಿಸಿಕೊಳ್ಳಬಾರದೆಂದೂ ತಿಳಿಸಿದನು. ಕೆಲವು ದಿನಗಳ ಕಾಲ ನನ್ನನ್ನು ಇರಿಸಿಕೊಂಡು ಉಪಚಾರ ಮಾಡಿದ. ನಾನು ಸಯಾಂಗೆ ಹೋಗಬೇಕಾಗಿದೆಯೆಂದು ನನ್ನ ಕಾತರ ತೋರಿಸಿದೆ. ನಿಧಾನವಾದರೆ ಮಸುಲಿಪಟ್ಟಣ ದಿಂದ ಸಯಾಂಗೆ ಹೊರಡುವ ಹಡಗುಗಳು ಹೊರಟುಬಿಡುತ್ತವೆ ಎಂದು ತಿಳಿಸಿದೆ. ಆತ ನನ್ನ ಮಾತನ್ನು ನಂಬಿದ. ಪರವಾನಗಿ ಕೊಡಬೇಕೆಂದು ಮೂರರ ಕೊತ್ವಾಲನಿಗೆ ಹೇಳಿಕಳುಹಿಸಿದ. ಆದರೆ ಕೊತ್ವಾಲ ಕೊಡಲಿಲ್ಲ. ಡಚ್ ಕಮಾಂಡೆಂಟ್ ದೊರೆಗೆ ದೂರು ಕೊಟ್ಟ. ದೊರೆಗೆ ಆಶ್ಚರ್ಯವಾಯಿತು. ನನಗೆ ಪರವಾನಗಿ ಕೊಡಬೇಕೆಂದೂ ಡಚ್ಚರ ತಂಟೆಗೆ ಯಾರೂ ಹೋಗಬಾರದೆಂದೂ ಆತನ ಅಪ್ಪಣೆಯಾಯಿತು. ಸರಿ, ನಾನು ಪ್ರಯಾಣಕ್ಕೆ ತಕ್ಕ ಸಿದ್ಧತೆಮಾಡಿಕೊಳ್ಳಲಾರಂಭಿಸಿದೆ. ನನ್ನ ಬಟ್ಟೆಬರೆಗಳನ್ನೆಲ್ಲ ಮಡಿಸಿದೆ; ಸಾಮಾನು ಸರಂಜಾಮುಗಳನ್ನು ಜೋಡಿಸಿ ಕಟ್ಟಿದೆ.

ಊರು ಬಿಡುವ ಮುನ್ನ ಇಲ್ಲಿಯ ಡಚ್ಚರ ಅದ್ದೂರಿಯ ಜೀವನದ ಬಗ್ಗೆ ನಾಲ್ಕು ಮಾತು. ಡಚ್ಚರ ಫ್ಯಾಕ್ಟರಿ ಭಾಗನಗರದ ಅತ್ಯುತ್ತಮ ಸ್ಥಳದಲ್ಲಿದೆ. ಬಹು ಸೊಗಸಾದ

ದೊಡ್ಡಮನೆ ಕಟ್ಟಿದ್ದಾರೆ. ಅದರಲ್ಲಿ ಒಳ್ಳೆಯ ತೋಟಗಳೂ ದೊಡ್ಡ ಗಡಂಗೂ ಚೊಕ್ಕಟವಾದ ಕುದುರೆ ಲಾಯಗಳೂ ಇವೆ. ಇಪ್ಪತ್ತು ಬೆಲೆಯಾದ ಕುದುರೆಗಳನ್ನಿಟ್ಟಿದ್ದಾರೆ. 'ಊರಿನ ಎರಡು ದೊಡ್ಡ ಕೆರೆಗಳಿಂದ ಕೊಳಾಯಿಗಳ ಮೂಲಕ ಇಲ್ಲಿಗೆ ನೀರು ತಂದಿದ್ದಾರೆ. ಸೊಗಸಾದ ಕೈತೋಟವಿದೆ. ಈ ನಿವಾಸವನ್ನು ಬಹು ಸುಂದರವಾಗಿಯೂ ಅನುಕೂಲವಾಗಿಯೂ ಮಾಡಲು ಕಂಪೆನಿಗೆ ದಶಲಕ್ಷ ಹಣ ಖರ್ಚಾಯಿತೆಂದು ಕಮ್ಯಾಂಡೆಂಟ್ ಹೇಳಿದ. ಗೋಲ್ಕೊಂಡಾ ರಾಜ್ಯದಲ್ಲಿ ಸರಕುಗಳನ್ನು ಕೊಳ್ಳಲೂ ಮತ್ತು ರವಾನೆ ಮಾಡಲೂ ರಾಜನಿಗೆ ಪ್ರತಿವರ್ಷ ನಾಲ್ಕು ಲಕ್ಷ ಏಕಸ್ ಹಣ ಕೊಡುತ್ತಿರುವುದಾಗಿ ತಿಳಿಸಿದ. ಇವರು ಕೊಳ್ಳುವ ನೂಲಿಗೆ ಯಾವ ಸುಂಕ ಬಂಕಗಳನ್ನೂ ಕೊಡಬೇಕಾಗಿಲ್ಲ.' ಇಡೀ ರಾಜ್ಯದಲ್ಲಿ ಎಲ್ಲೆಂದರಲ್ಲಿ ವ್ಯಾಪಾರ ಮಾಡಬಹುದು. ಹೀಗಾಗಿ ಇಂಡಿಯಾದಲ್ಲಿ ಡಚ್ಚರು ನಡೆಸುತ್ತಿರುವ ಆಡಳಿತ ಬಹು ಉತ್ತಮವಾಗಿದೆ. ತಮ್ಮನ್ನು ಯಾರೂ ಮೀರಿಸಲಾರರೆಂದು ಡಚ್ಚರು ಬೀಗುತ್ತಿದ್ದಾರೆ. ಆದರೆ ಇದು ಅವರಿಗೇ ಕೇಡು. ಯಾರಿಗೂ ಇವರನ್ನು ಕಂಡರೆ ಆಗುತ್ತಿಲ್ಲ.

ನಮ್ಮ ಕ್ಯಾಥೋಲಿಕ್ ಮತದ ಆಚರಣೆಗೆ ಇಲ್ಲಿ ಯಾವ ಅಡ್ಡಿ ಆತಂಕಗಳಿಲ್ಲ. ಎರಡು ಚರ್ಚುಗಳಿವೆ. ಒಂದು, ನಾನು ಇಳಿದುಕೊಂಡಿದ್ದ ಮಲ್ಕಾಪುರದ ಚರ್ಚು. ಆದರೆ ಫ್ರೆಂಚರನ್ನು ಕಂಡರೆ ಇಲ್ಲಿಯೂ ಮೂರರಿಗೂ ಡಚ್ಚರಿಗೂ ಆಗುವುದಿಲ್ಲ. ಅವರು ಸಿಕ್ಕಿದರೆ ಸಾಕು ಹಿಡಿದು ಸೆರೆಮನೆಗೆ ಹಾಕುತ್ತಾರೆ. ಇಂಥವರನ್ನು ನಾನು ಬೇಟಿಮಾಡಿ ಅವರಿಗೆ ಸಮಾಧಾನ ಹೇಳಿದೆ.

ಡಚ್ಚರು ತಮ್ಮ ಸೇವೆಗೆ ಗೋವಾ ಬಳಿಯ ಕನರಾದ ಸಂಗೀತಗಾರರನ್ನು ನೇಮಿಸಿಕೊಂಡಿದ್ದಾರೆ. ಪೋರ್ಚುಗೀಸರಿಂದ ಹಾಡುವುದನ್ನೂ ವಾದ್ಯ ನುಡಿಸುವುದನ್ನೂ ಈ ಸಂಗೀತಗಾರರು ಕಲಿತಿದ್ದಾರೆ. ನನಗೂ ತಮ್ಮ ಸಂಗೀತದ ಸವಿ ತೋರಿಸಿದರು. 'ಹೆಲಾಸ್', 'ಹಾ', ಹಿಸ್ಸ್, 'ಹೊಸ್' ಎನ್ನುವುದನ್ನು ಬಿಟ್ಟರೆ ಬೇರೆ ಗೊತ್ತಿಲ್ಲ. ಕೇಳಲು ಏನೇನೂ ಹಿತವಿಲ್ಲ. ಆದರೂ ತಾವು ಬಹು ದೊಡ್ಡ ಸಂಗೀತಗಾರರೆಂದು ಹೇಳಿಕೊಳ್ಳುತ್ತಾರೆ.[೧]

೧೬೭೬ನೆಯ ಮಾರ್ಚಿ ೨೮ನೆಯ ತಾರೀಖು ಮಂಗಳವಾರ. ನನ್ನ ಪಲ್ಲಕ್ಕಿಯೂ ಸಾಮಾನು ಸರಂಜಾಮುಗಳೂ ಸಿದ್ಧವಾದವು. ಡಚ್ ಕಮಾಂಡೆಂಟ್ ಮತ್ತು ಕೊತ್ವಾಲನು ತಲಾ ಎರಡು ಆಳುಗಳನ್ನು ಒದಗಿಸಿದರು. ಬೆಳಕು ಹರಿಯುತ್ತಲೇ ನನ್ನ ಪ್ರಯಾಣ ಆರಂಭಿಸಿದೆ. ಊರಿನಿಂದ ಹೊರಕ್ಕೆ ಹೋದಮೇಲೆ ಆ ನಾಲ್ಕು

---

೧. 'ಕನರಿಸ್' ಎಂದರೆ ಕನರಾ (Kanara)ದ ನಿವಾಸಿಗಳೆಂದು ಈ ಹಿಂದೆಯೇ ಹೇಳಿದೆ. 'ಹಾಬ್‌ಸನ್–ಜಾಬ್‌ಸನ್' ಪ್ರಕಾರ ಗೋವೆಯ ಕೊಂಕಣಿಗಳಿಗೂ ಅವರ ಭಾಷೆಗೂ 'ಕನರಿನ್' ಎಂಬ ಪದ ಉಪಯೋಗಿಸುತ್ತಿದ್ದರು. ಆದ್ದರಿಂದ ಇಲ್ಲಿ ಹೇಳಲ್ಪಟ್ಟಿರುವ ಕನರಿನರು ಗೋವಾದವರು ಇರಬೇಕು.

ಜನರನ್ನು ವಾಪಸು ಕಳುಹಿಸಿಕೊಟ್ಟೆ. ಮಧ್ಯಾಹ್ನದ ಹೊತ್ತಿಗೆ ಅಥನೋಗಾರ್ಡ್ (ಬಹುಶಃ ಹೈದರಾಬಾದಿನಿಂದ ಎಂಟು ಮೈಲಿ ದೂರದಲ್ಲಿರುವ ಹಯಾತ್ ನಗರ) ತಲುಪಿದೆ. ಬಿಸಿಲೋ ಬಿಸಿಲು. ಇಲ್ಲಿ ಕೊಂಚ ಹೊತ್ತು ಸುಧಾರಿಸಿಕೊಂಡು ಸಂಜೆ ಮಲ್ಕಾಪುರ ಎಂಬ ಹಳ್ಳಿ ತಲುಪಿ ಅಲ್ಲಿಯ ಹಿಂದೂ ಒಬ್ಬನ ಮನೆಯಲ್ಲಿ ಇಳಿದುಕೊಂಡೆ.

ಮುಂದಿನ ಮೂರುದಿವಸದ ಪ್ರಯಾಣ ಫಲವತ್ತಾದ ಪ್ರದೇಶದಲ್ಲಿ ಸಾಗಿತು. ತಾಳೆಮರಗಳ ಹಾಗೂ ಮಾವಿನ ಮರಗಳ ತೋಪಿನಲ್ಲಿ ನಡೆದೆವು. ತಾಳೆಮರಗಳಿಂದ 'ಟಾರಿ' (Tary = Toddy = ಹೆಂಡ) ತೆಗೆಯುತ್ತಾರೆ. ಹೆಂಡವನ್ನು ದಿನಾ ನಲವತ್ತು ಐವತ್ತು ಕುದುರೆಗಳು ಮತ್ತು ಎತ್ತುಗಳ ಮೇಲೆ ಚರ್ಮದ ತಿತ್ತಿಗಳಲ್ಲಿ ತುಂಬಿ ಗೋಲ್ಕೊಂಡಾಕ್ಕೆ ಹೇರುತ್ತಾರೆ. ಆರೋಗ್ಯಕರವಾದ ಹಾಗೂ ರುಚಿಯಾದ ಈ ಮದ್ಯಕ್ಕೆ ಸುತ್ತಮುತ್ತ ೨೦ ಹರಿದಾರಿಗಳವರೆಗೆ ಭಾರಿ ಬೇಡಿಕೆ ಇದೆ.

ಏಪ್ರಿಲ್ ೧ನೆಯ ತಾರೀಖು 'ಕ್ವಿಷ್ನೊ' (Quisno = Krishna = ಕೃಷ್ಣ) ನದಿ ಸಿಕ್ಕಿತು. ನದಿಯ ದಂಡೆಯಲ್ಲಿ ವ್ಯಾಪಾರದ ಸರಕುಗಳೂ ಪಲ್ಲಕ್ಕಿಗಳೂ ಜನರು ಮತ್ತು ಕುದುರೆಗಳ ಮೇಲೆ ಸುಂಕ ವಸೂಲು ಮಾಡುವ ಕಟ್ಟೆಯೂ ಇವೆ. ನಮಗೆ ಸುಂಕ ಸಾರಿಗೆಗಳಿಂದ ವಿನಾಯಿತಿ ದೊರಕಿತ್ತು. ದೋಣಿಯಲ್ಲಿ ನದಿ ದಾಟಿ ಅದೇ ಹೆಸರಿನ ಊರಿನಲ್ಲಿ ಸ್ವಲ್ಪ ಹೊತ್ತು ತಂಗಿ ಊಟ ಮುಗಿಸಿ ವಿಶ್ರಾಂತಿ ಪಡೆದೆವು. ಅಲ್ಲಿ ನಮಗೆ ಮದ್ರಾಸಿನಿಂದ ಹದಿನೆಂಟು ದಿನ ಪ್ರಯಾಣಮಾಡಿ ಬಂದ ಕೆಲವು ಕ್ರೈಸ್ತರೂ ಒಬ್ಬ ಪೋರ್ಚುಗೀಸ್ ಪಾದ್ರಿಯೂ ಸಿಕ್ಕಿದರು. ಅವರಿಂದಲೂ ಸಾಂಥೋಮಿನ ಫ್ರೆಂಚರ ಸಾಹಸವನ್ನು ಕೇಳಿ ತಿಳಿದುಕೊಂಡೆ. ಸಂತೋಷದ ಸುದ್ದಿಗಾಗಿ ಅವರನ್ನು ವಂದಿಸಿ ಕಲ್ಲುಗೊಟರು ದಾರಿಯಲ್ಲಿ ನಮ್ಮ ಪ್ರಯಾಣ ಮುಂದುವರಿಸಿದೆವು. ಬರಿಗಾಲಿನಲ್ಲಿ ಚೂಪಾದ ಕಲ್ಲಿನಮೇಲೆ ಹೆಜ್ಜೆ ಇಟ್ಟು ನಡೆಯಲಾರದ ನನ್ನ ಆಳುಗಳನ್ನು ನೋಡಿ ನನಗೆ ಅಯ್ಯೋ ಎನಿಸಿತು. ಆದರೆ ಇದು ಅವರಿಗೆ ಸಾಮಾನ್ಯ. ತಲೆ ಮೇಲೆ ಹೊರೆ ಹೊತ್ತು ಹುಚ್ಚರಂತೆ ನಡೆದೇ ನಡೆಯುತ್ತಾರೆ!

ಇಂತಹ ದಾರಿಯಲ್ಲಿ ನಾವು ದಾರಿ ಸಾಗಿಸುತ್ತಿರುವಾಗ ನಮಗೆ ಹಿಂದೂ ಲಷ್ಕರಿಗಳ (ಸಿಪಾಯಿಗಳ) ಎರಡು ತುಕಡಿಗಳು ಸಿಕ್ಕಿದವು. ಇವರು ಸಾಮಾನು ಸರಂಜಾಮುಗಳನ್ನು ಹೊತ್ತು ತಮ್ಮ ಹೆಂಡತಿ ಮಕ್ಕಳ ಸಮೇತ ಹೋಗುತ್ತಿದ್ದರು. ವಿಚಾರಿಸಿದಾಗ ಇವರು ಸಾಂಥೋಮಿನವರೆಂದೂ ಮೂರ್ ಸೈನ್ಯದಲ್ಲಿ ಸೇರಿಕೊಂಡುದಾಗಿಯೂ ಆ ಊರನ್ನು ಫ್ರೆಂಚರು ವಶಪಡಿಸಿಕೊಂಡ ಕಾರಣ ಮೂರರು ತಮ್ಮನ್ನೆಲ್ಲಾ ಗೋಲ್ಕೊಂಡಾಕ್ಕೆ ಕರೆದುಕೊಂಡು ಹೋದರೆಂದೂ ಎಂಟು ಹತ್ತು ದಿವಸಗಳ ಹಿಂದೆ ತಮ್ಮನ್ನೆಲ್ಲಾ ಬಿಡುಗಡೆ ಮಾಡಿದರೆಂದೂ ಈಗ ವಾಪಸು ಮದ್ರಾಸಿಗೆ ಹಿಂದಿರುಗುತ್ತಿರುವುದಾಗಿಯೂ ಹೇಳಿದರು.

ಸಂಜೆ ಮಾಚೆರ್ಲಾ ತಲುಪಿದೆವು. ಇದು ದೊಡ್ಡ ಪಟ್ಟಣ. ಹಿಂದೂಗಳೇ ಹೆಚ್ಚಾಗಿರುವ ಇಲ್ಲಿ ಒಂದು ಭಾರಿ ದೇವಸ್ಥಾನವಿದೆ. ಇಡೀ ರಾತ್ರಿಯೆಲ್ಲ ದೇವರ ಪೂಜೆ ಮತ್ತು ಪಲ್ಲಕ್ಕಿ ಉತ್ಸವ. ಆ ಹೊಲಸು ಪೂಜೆ ಉತ್ಸವಗಳನ್ನು ನೋಡಿ ನನ್ನ ತಲೆ ಚಿಟ್ಟು ಹಿಡಿಯಿತು. ಆದರೆ ನನ್ನ ಸೇವಕರು ಮಾತ್ರ ತಾವು ಉತ್ಸವ ನೋಡಲೇಬೇಕೆಂದು ಹೇಳಿ ಹೋದರು. ಹಾಳಾಗಿ ಹೋಗಿ ಎಂದು ನಾನು ಸುಮ್ಮನಾದೆ. ಇಂಥ ಉತ್ಸವಗಳನ್ನು ನಾನಾಗಲೇ ಎಷ್ಟೋ ಸಲ ನೋಡಿದ್ದೇನೆ.

ಮಾರನೆಯ ದಿನ ಈಸ್ಟರ್ ಡೇ. ಗುಡ್ಡಗಾಡಿನ ದಾರಿಯಲ್ಲಿ ಪ್ರಯಾಣ ಮುಂದುವರೆಯಿತು. ದಾರಿಯುದ್ದಕ್ಕೂ ಗೋಲ್ಕೊಂಡಾ ರಾಜನ ಸೈನ್ಯ ಕಾಣುತ್ತಿತ್ತು. ಎಲ್ಲರೂ ಮದ್ರಾಸ್ ಕಡೆಯಿಂದ ಬರುತ್ತಿರುವಾಗ ನೀನೇಕೆ ಆ ಕಡೆ ಹೋಗುತ್ತಿರುವೆ ಎಂದು ಕೆಲವು ಸರದಾರರು ಕೇಳಿದರು. ನಾನು ಡಚ್ಚರವನು, ಪುಲಿಕಾಟ್‌ಗೆ ಹೋಗುತ್ತಿದ್ದೇನೆ ಎಂದೆ.

ಏಪ್ರಿಲ್ ೫ನೆಯ ತಾರೀಖು ರಾತ್ರಿ ಬಂಗನಪಲ್ಲಿಯಲ್ಲಿ ಬಿಡಾರ ಮಾಡಿದೆ. ಎಲ್ಲೆಲ್ಲೂ ನೀರಿನ ಹಕ್ಕಿಪಕ್ಷಿಗಳು. ಏಕೆಂದರೆ, ಕೆರೆಯ ನೀರು ಆ ಪ್ರದೇಶದಲ್ಲೆಲ್ಲಾ ಹರಿದು ಅವುಗಳಿಗೆ ಆಶ್ರಯ ಕೊಟ್ಟಿತ್ತು. ನನ್ನ ಸೇವಕರು ಒಂದು ಗಳಿಗೆಯಲ್ಲಿ ಹತ್ತಾರು ಬಾತುಗಳನ್ನು ಹೊಡೆದುಕೊಂಡು ಬಂದರು. ತಿನ್ನಲು ಬಹು ರುಚಿಯಾಗಿದ್ದುವು.

ಮುಂದಿನ ಎರಡು ದಿನಗಳು ಕೆಸರಿನಲ್ಲಿ ದಾರಿ ಸಾಗಿಸಿದೆವು. ಏಪ್ರಿಲ್ ೮ ಶನಿವಾರ—ಈ ದಿನ ನಾವು ಸಮತಟ್ಟಾದ ಪ್ರದೇಶದಲ್ಲಿ ನಡೆದೆವು. ಕುರುಚಲು ಗಿಡ ಮತ್ತು ಸಣ್ಣಪುಟ್ಟ ಮರಗಿಡಗಳಿಂದ ಕೂಡಿದ್ದ ಈ ಪ್ರದೇಶದಲ್ಲಿ ಜಿಂಕೆ, ಮೊಲ, ಕೌಜುಗ ಮುಂತಾದ ಪ್ರಾಣಿಪಕ್ಷಿಗಳು ಹೇರಳವಾಗಿದ್ದವು. ನನ್ನ ಸೇವಕರು ಕೊಂಚ ದೂರ ಹೋಗಿ ಬೇಕಾದಷ್ಟು ಹೊಡೆದುಕೊಂಡು ಬಂದರು. ಮಧ್ಯಾಹ್ನದ ಹೊತ್ತಿಗೆ ಒಬ್ಬ ಇಂಗ್ಲಿಷ್‌ಮನ್‌ಗೆ ಸೇರಿದ ಸುಂದರವಾದ ಹಳ್ಳಿಗೆ ಬಂದೆವು. ಈತ ಮದ್ರಾಸಿನಲ್ಲಿ ಕೈತುಂಬ ಸಂಪಾದನೆ ಮಾಡಿ ಮುಸ್ಲಿಮ್ ಆಗಿ ಮತಾಂತರಗೊಂಡು ಈ ಹಳ್ಳಿ ಕೊಂಡುಕೊಂಡು ಹಿಂದೂಗಳ ರೀತಿಯ ಒಂದು ದೊಡ್ಡ ಮನೆ ಕಟ್ಟಿಕೊಂಡು ಆರಾಮವಾಗಿದ್ದಾನೆ. ಪ್ರಯಾಣಿಕರಿಗೆ ಸತ್ರ ಕಟ್ಟಿಸಿದ್ದಾನೆ. ಕೆರೆಯೊಂದರ ಹೂಳು ತೆಗೆಸಿ ವರ್ಷವೆಲ್ಲಾ ನೀರು ಸಿಕ್ಕುವಂತೆ ಮಾಡಿದ್ದಾನೆ.

ಇಲ್ಲಿಂದ ನಾವು ಪ್ರಯಾಣಮಾಡಿ ಮೇಲೆ ಹೇಳಿದ ಇಂಗ್ಲಿಷ್‌ಮನ್‌ಗೆ ಸೇರಿದ ಎರಡು ಹಳ್ಳಿ ದಾಟಿ ರಾತ್ರಿ ನೆಲ್ಲೂರಿನಲ್ಲಿ ತಂಗಿದೆವು. ದೊಡ್ಡ ನದಿಯೊಂದರ ಬಳಿ (ಪೆನ್ನಾರ್ ನದಿ) ಈ ಊರು ಇದೆ. ನದಿಯ ತುಂಬ ಮೀನು. ಬಹು ಎತ್ತರದ ಎರಡು ದೇವಸ್ಥಾನಗಳಿವೆ. ನದಿ ದಾಟಿ ಊರಿಗೆ ಹೋದರೆ ಕೋತಿಗಳ ಹಿಂಡೋ ಹಿಂಡು. ಅವು ಏನು ಮಾಡಿದರೂ ಅವುಗಳ ತಂಟೆಗೆ ಯಾರು ಹೋಗುವಂತಿಲ್ಲ. ದಾರಿಯಲ್ಲಿ ಪಲ್ಲಕ್ಕಿಯಲ್ಲಿ ಕುಳಿತು ಹೋಗುವವರೆಲ್ಲ ಅವಕ್ಕೆ ತಿಂಡಿಗಿಂಡಿ ಕೊಡುತ್ತಾರೆ.

ನನ್ನ ಪಲ್ಲಕ್ಕಿಯನ್ನು ಕಂಡು ನನ್ನ ಹಿಂದೆಯೇ ಬಂದುವು. ಹೊಡೆಯಬೇಡಿರೆಂದು ನನ್ನ ಸೇವಕರು ಅಂಗಲಾಚಿದರು. ಹಿಂದೂಗಳ ಈ ದಡ್ಡತನಕ್ಕೆ ಏನು ಹೇಳಬೇಕು! ಇವನ್ನು ಹೊಡೆದು ಸಾಯಿಸದಿದ್ದರೆ ನೀವು ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತದೆ ಎಂದ ನನ್ನ ಸೇವಕರಿಗೆ ಛೀಮಾರಿ ಹಾಕಬೇಕಾಯಿತು.

ರಾತ್ರಿ ನಮಗೆ ಪುಲಿಕಾಟ್ ಕಡೆಯಿಂದ ಬಂದ ವರ್ತಕರಿಂದ ತಿಳಿಯಿತು. ದಾರಿ ಯುದ್ದಕ್ಕೂ ಸೈನಿಕರು ಸಿಕ್ಕಿದವರನ್ನೆಲ್ಲಾ ಕೊಳ್ಳೆ ಹೊಡೆಯುತ್ತಿದ್ದಾರೆ, ಎಚ್ಚರಾಗಿರಿ ಎಂದ ನನ್ನ ಸೇವಕರು ಒಳದಾರಿಯಲ್ಲಿ ಪ್ರಯಾಣಮಾಡಿದರೆ ಒಳ್ಳೆಯದೆಂದು ಸಲಹೆ ಮಾಡಿ ದರು. ಆಗಲಿ ಎಂದೆ.

ಮಾರನೆಯ ದಿನ ಬಯಲು ಪ್ರದೇಶದಲ್ಲಿ ಪ್ರಯಾಣಮಾಡಿದೆವು. ಉದ್ದಕ್ಕೂ ಬತ್ತ ಮುಂತಾದ ಪೈರುಪಚ್ಚೆಗಳ ಗದ್ದೆ ಬಯಲು. ಹಳ್ಳಿಯವರು ಬಹು ವಿಚಕ್ಷಣೆಯಿಂದ ಗದ್ದೆಗಳಿಗೆ ನೀರು ಹಾಯಿಸಿ ಬೇಸಾಯ ಮಾಡುತ್ತಾರೆ. ಸಣ್ಣಪುಟ್ಟ ಕೆರೆಕುಂಟೆಗಳಿಂದ ಏತದಿಂದ ನೀರು ಎತ್ತಿ ಕಿಳ್ಳೆಗಾಲುವೆಗಳ ಮೂಲಕ ಗದ್ದೆಗಳಿಗೆ ಹಾಯಿಸಿ ವರ್ಷದ ಒಂಬತ್ತು ತಿಂಗಳು ಸಾಗುಮಾಡುತ್ತಾರೆ.

ಮುಂದೆ ಮರಳು ಪ್ರದೇಶದಲ್ಲಿ ದಾರಿ ಸಾಗಿಸಿ ಡಚ್ಚರ ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಂಡು ಸಮುದ್ರತೀರಕ್ಕೆ ಬಂದೆವು. ದಾರಿಯಲ್ಲಿ ಸಿಕ್ಕಿದ ಆರ್ಮುಗಂ ಎಂಬ ಊರಿನಲ್ಲಿ ಹಿಂದೂಗಳೇ ಹೆಚ್ಚಾಗಿದ್ದರೂ ಊರಿನ ಮಧ್ಯಭಾಗದಲ್ಲಿದ್ದ ಒಂದು ಮನೆ ಮುಂದೆ ದೊಡ್ಡ ಶಿಲುಬೆಯೊಂದನ್ನು ನೋಡಿದೆ. ವಿಚಾರಿಸಿದಾಗ ತಿಳಿಯಿತು, ಈ ಊರು ಮೊದಲಿಗೆ ಪೋರ್ಚುಗೀಸರಿಗೆ ಸೇರಿತ್ತು, ಇಲ್ಲಿ ಅನೇಕ ಕ್ರೈಸ್ತರು ಇದ್ದರು, ಆಮೇಲೆ ರೋಮನ್ ಕ್ಯಾಥೋಲಿಕರಿಗೆ ಸೇರಿತು, ಅವರು ಈ ಊರನ್ನು ವೀರಣ್ಣ ಎಂಬ ಬ್ರಾಹ್ಮಣನೊಬ್ಬನಿಗೆ ಮಾರಿಬಿಟ್ಟರು ಎಂದು. ಈ ವೀರಣ್ಣ ಈ ನಾಡಿನಲ್ಲೇ ಶ್ರೀಮಂತ ಹಾಗೂ ಪ್ರಭಾವಶಾಲಿಯಾದ ವ್ಯಕ್ತಿ. ಈಗ ಮದ್ರಾಸಿನಲ್ಲಿದ್ದಾನೆ. ಇಂಗ್ಲಿಷರ ವ್ಯಾಪಾರ ಸಾಪಾರವೆಲ್ಲ ಇವನ ಕೈಲಿದೆ.

ಮುಂದಿನ ಕೆಲವು ದಿನಗಳು ನಮ್ಮ ಪ್ರಯಾಣ ಸಮುದ್ರತೀರದಲ್ಲಿಯೇ ಸಾಗಿತು. ಒಂದು ಕಡೆ ಸಮುದ್ರ, ಇನ್ನೊಂದು ಕಡೆ ಉರಿಯುವ ಮರಳು. ರಾತ್ರಿಯಾದಾಗ ಶ್ರೀಹರಿಕೋಟಾದಲ್ಲಿ ತಂಗಿದೆವು. ಸಮುದ್ರದ ಕೊಲ್ಲಿಯಿಂದ ಆವರಿಸಲ್ಪಟ್ಟು, ಮೈದಾನ ಪ್ರದೇಶದಲ್ಲಿರುವ ದೊಡ್ಡ ಹಳ್ಳಿ ಇದು.

ಏಪ್ರಿಲ್ ೧೨ರಂದು ಪುಲಿಕಾಟ್ ತಲುಪಿದೆವು. ಇಲ್ಲಿ ನಾನೂ ನನ್ನ ಸೇವಕರೂ ಉಡುಪು ಬದಲಾಯಿಸಿ ಪೋರ್ಚುಗೀಸ್ ಉಡುಪು ಧರಿಸಿದೆವು. ನಾನು ಗೋವಾದಿಂದ ಬಂದ ಪೋರ್ಚುಗೀಸನೆಂದು ಕೇಳಿದವರಿಗೆಲ್ಲ ಹೇಳಿ ಎಂದು ನನ್ನ ಸೇವಕರಿಗೆಲ್ಲ ತಾಕೀತು ಮಾಡಿದೆ. ದಾರಿಯಲ್ಲಿ ನಮ್ಮನ್ನು ಡಚ್ಚರು ತಡೆದು ಡಚ್ ಕಮಾಂಡೆಂಟ್‌ನಿಂದ ಪರವಾನಗಿ ಪಡೆಯಬೇಕೆಂದರು. ಸರಿ ಕೋಟೆಯೊಳಕ್ಕೆ ಕರೆದೊಯ್ದರು. ಅಲ್ಲಿ ನನ್ನಂತೆ

ಇನ್ನಿಬ್ಬರು ಪೋರ್ಚುಗೀಸರು ಪಲ್ಲಕ್ಕಿಗಳಲ್ಲಿ ಕಾಯುತ್ತಿದ್ದರು. ಅವರು ಮದ್ರಾಸ್‌ನಿಂದ ಗೋವೆಗೆ ಹೋಗಲು ಬಂದಿದ್ದರು. ನಾನೂ ಅರ್ಧಘಂಟೆ ಕಾಯಬೇಕಾಯಿತು. ಆಗ ನಮ್ಮನ್ನು ನೋಡಲು ಕಾವಲುಕಾಯುವ ಸಿಪಾಯಿಗಳೂ ಊರಿನ ಪುಂಡುಪೋಕರಿಗಳೂ ತಂಡೋಪತಂಡವಾಗಿ ಬಂದರು. ನೀವು ಎಲ್ಲಿಯವರು? ಕ್ರೈಸ್ತರೇ? ನಿಮ್ಮ ಭಾಷೆ ಯಾವುದು?—ಹೀಗೆಲ್ಲಾ ಕುತೂಹಲದಿಂದ ಪ್ರಶ್ನೆ ಕೇಳಿದರು. ಇಷ್ಟರಲ್ಲಿ ಒಬ್ಬ ಸಾರ್ಜೆಂಟ್ ಬಂದು ಅವರನ್ನೆಲ್ಲಾ ದೂರ ಅಟ್ಟಿ ನಮ್ಮನ್ನು ಒಳಗೆ ಕರೆದುಕೊಂಡು ಹೋದ. ಡಚ್ ಕಮಾಂಡೆಂಟ್ ದಿವಾನ್ ಮೇಲೆ ಕುಳಿತಿದ್ದ. ನಾವು ಪೋರ್ಚುಗೀಸರೋ ಅಲ್ಲವೋ ಎಂದು ತಿಳಿದುಕೊಳ್ಳಲು ಏನೇನೋ ಪ್ರಶ್ನೆಗಳನ್ನು ಕೇಳಿದ. ನಾನು ಅವನಿಗೆ ಮೆಚ್ಚಿಗೆಯಾಗುವ ರೀತಿಯಲ್ಲಿ ಉತ್ತರ ಕೊಟ್ಟೆ. ನನ್ನ ಉತ್ತರದಿಂದ ಡಚ್ಚರಿಗೆ ತುಂಬಾ ಖುಷಿಯಾಯಿತು. ತಮ್ಮ ವಠಾರದಲ್ಲಿ ನನ್ನನ್ನು ಇಳಿಸಿ ಯೋಗಕ್ಷೇಮ ನೋಡಿಕೊಂಡರು. ನಾನೊಬ್ಬ ಪಾದ್ರಿ ಎಂದು ತಿಳಿದ ಮೇಲಂತೂ ಭಾರಿ ಭಕ್ತಿ ತೋರಿಸಿದರು. ಅನೇಕ ಜನ ಸಿಪಾಯಿಗಳು ನನ್ನ ಬಳಿಗೆ ಬಂದು ಆಶೀರ್ವಾದ ಬೇಡಿದರು.

ಎರಡು ದಿನಗಳ ನಂತರ ತಾಳೆಗರಿಯ ಮೇಲೆ ಪಾಸ್‌ಪೋರ್ಟ್ ಬರೆದು ಹವಾಲ್ದಾರನಿಂದ ರುಜು ಮಾಡಿಸಿಕೊಟ್ಟರು. ಜೊತೆಗೆ ಎರಡು ಗ್ಲಾಸು ಸೊಗಸಾದ ವೈನ್ ಕುಡಿಸಿದರು.

ತಡಮಾಡದೆ ಈ ಊರು ಬಿಟ್ಟು ಮುಂದಿನ ಪ್ರಯಾಣ ಆರಂಭಿಸಿದೆ. ಮಾರನೆಯ ದಿನ ಬಿಸಿಲಿನ ಬೇಗೆಯಲ್ಲಿ ದಾರಿ ಸಾಗಿಸಿ ರಾತ್ರಿ ವಲ್ಲೂರು ಎಂಬ ಊರಿನಲ್ಲಿ ತಂಗಿ ಮತ್ತೆ ನಮ್ಮ ಪ್ರಯಾಣ ಮುಂದುವರಿಸಿದೆವು. ಏಪ್ರಿಲ್ ೧೪ನೆಯ ತಾರೀಖು ಶುಕ್ರವಾರ ಮಧ್ಯಾಹ್ನ ಮೂರುಗಂಟೆಗೆ ಮದ್ರಾಸ್ ತಲುಪಿದೆ. ಇಲ್ಲಿಯ ಪೋರ್ಟ್ ಸೆಂಟ್ ಜಾರ್ಜ್ ಕೋಟೆಯ ಬಳಿ ಕಾವಲುಗಾರರು ತಡೆದು ಗೌರ್ನರ್‌ನಿಂದ ಪರವಾನಗಿ ಪಡೆಯಬೇಕೆಂದರು. ಕಾಯುವುದು ಸಾಕಾಗಿ ಒಬ್ಬ ದ್ವಾರಪಾಲಕನ ಮೂಲಕ ಫಾದರ್ ಎಫ್ರೈಂ ಅವರಿಗೆ ಒಂದು ಚೀಟಿ ಕಳುಹಿಸಿದೆ. ಇವರು ಫ್ರೆಂಚ್ ಕಾಪುಚಿನ್. ಕೂಡಲೆ ಅವರು ಬಂದು ನನ್ನನ್ನು ಒಳಗೆ ಕರೆದುಕೊಂಡು ಹೋದರು. ಅಲ್ಲಿ ದವಸಧಾನ್ಯಗಳನ್ನು ಕೊಳ್ಳಲು ಮದ್ರಾಸಿಗೆ ಬಂದಿದ್ದ ಫ್ರೆಂಚ್ ಅಧಿಕಾರಿಗಳನ್ನು ಕಂಡೆ. ಅವರಿಂದ ತಿಳಿಯಿತು, ವೈಸ್‌ರಾಯ್ ದೇ ಲಹೇ ಅವರಿಗೆ ಆಗಲೇ ಫ್ರೆಂಚ್ ಕೋರ್ಟ್‌ನಿಂದ ನಾನು ಸೂರತ್ತಿಗೆ ಕಳುಹಿಸಿಕೊಟ್ಟಿದ್ದ ಕಾಗದ ಪತ್ರಗಳ ನಕಲುಗಳು ಬಂದಿರುವುದಾಗಿ. ನಾನು ಬರಲು ತಡವಾದುದಕ್ಕಾಗಿ ಅವರಿಗೆಲ್ಲಾ ಕಾತರವಾಗಿತ್ತಂತೆ. ಗೋಲ್ಕೊಂಡಾದಲ್ಲಿ ಮೂರರ ನಾನು ಖೈದಿಯಾಗಿರುವುದಾಗಿ ಒಂದು ವದಂತಿ ಹಬ್ಬಿತ್ತೆಂದು ತಿಳಿಯಿತು.

ಮದ್ರಾಸಿನಿಂದ ಸೇಂಟ್ ಥೋಮ್‌ಗೆ ಹೋಗುವ ದಾರಿಯಲ್ಲಿ ಮೂರರ ಹಾವಳಿ ಇದೆಯೆಂದು ತಿಳಿದ ನಾನು ಫ್ರೆಂಚ್ ಅಧಿಕಾರಿಗಳ ರಕ್ಷಣೆಯಲ್ಲಿ ಅಲ್ಲಿಗೆ ಹೊರಟೆ. ನನ್ನ ಸಾಮಾನು ಸರಂಜಾಮುಗಳನ್ನು ಫ್ರೆಂಚ್ ಸಿಪಾಯಿಗಳೂ ಲಷ್ಕರಿಗಳೂ ಹೊತ್ತು

ಮುಂದೆ ಸಾಗಿದರು. ಅರ್ಧ ಗಂಟೆಯಲ್ಲಿ ಸೆಂಟ್ ಥೋಮ್ ತಲುಪಿದೆ. ಗೌರ್ನರ್ ದೇ ರೆಬ್ರಿ (de Rebry) ನನ್ನನ್ನು ತುಂಬಾ ವಿಶ್ವಾಸದಿಂದ ಕಂಡರು. ಅವರ ಜೊತೆ ಕೆಲವು ದಿನ ತಂಗಿದ್ದೆ. ತಂಗಲು ಬೇರೆ ಸ್ಥಳ ಇರಲಿಲ್ಲ. ಇದ್ದ ಮನೆಮಠಗಳಲ್ಲಿ ಸೈನ್ಯ ಪಡೆಗಳು ಸೇರಿಕೊಂಡಿದ್ದುವು.

ಗೌರ್ನರನ ಮನೆಯಲ್ಲಿ ಇದ್ದ ವೇಳೆ ನನ್ನನ್ನು ನೋಡಲು ಬಂದವರಿಗೆ ಲೆಕ್ಕವಿಲ್ಲ. ಫ್ರೆಂಚ್ ಅಧಿಕಾರಿಗಳು, ಸಿಪಾಯಿಗಳು-ನಾವಿಕರು ಒಟ್ಟಿನಲ್ಲಿ ಇಡೀ ಪಟ್ಟಣವೇ ಬಂದು ನೋಡಿತು. ನಾನು ಫ್ರೆಂಚ್ ರಾಜನಿಂದ ಕಳುಹಿಸಲ್ಪಟ್ಟವನೆಂದು ಅವರಿಗೆ ಗೊತ್ತಾಗುವಂತೆ ಮಾಡಿದೆ. ನಿಮ್ಮ ಸಾಹಸಗಳಿಗೆ ತಕ್ಕ ಗೌರವವನ್ನು ಫ್ರೆಂಚ್ ದೊರೆ ಮಾಡುವನೆಂದು ಹುರಿದುಂಬಿಸಿದೆ. ನಾನು ಫ್ರಾನ್ಸ್‌ನಿಂದ ಹೊರಡುವುದಕ್ಕೆ ಮೊದಲೇ ಒಂದು ಹಡಗು ಫ್ರಾನ್ಸ್‌ನಿಂದ ಹೊರಟಿದೆಯೆಂದೂ ಅದರಲ್ಲಿ ಅವರಿಗೆ ಹಣ ಬರುತ್ತಿರುವುದಾಗಿಯೂ ತಿಳಿಸಿದೆ. ಹೀಗಾಗಿ ನಾನು ಇಲ್ಲಿಗೆ ಬಂದದ್ದು ಎಲ್ಲರಿಗೂ ಹರ್ಷವನ್ನುಂಟುಮಾಡಿತು. ಒಂದು ವರ್ಷ ಸತತವಾದ ಹೋರಾಟದಲ್ಲಿ ಪಟ್ಟ ಸಂಕಟ ವ್ಯರ್ಥವಾಗಲಿಲ್ಲ ಎಂದು ಅವರಿಗೆ ಸಮಾಧಾನವಾಯಿತು. ಒಬ್ಬೊಬ್ಬರೂ ಯುದ್ಧದಲ್ಲಿ ತಮಗಾದ ಪೆಟ್ಟುಗಳನ್ನೂ ಗಾಯಗಳನ್ನೂ ತೋರಿಸಿದರು. ಕತ್ತಿಯ ಏಟು ಬಿದ್ದ ಮುಖ, ಈಟಿ ಭರ್ಜಿಗಳಿಂದ ತಿವಿಸಿಕೊಂಡ ಮೈ, ಗುಂಡು ಹೊಕ್ಕ ದೇಹ, ಕೈಕಾಲು ಕಳೆದುಕೊಂಡ ಶರೀರ ಇವನ್ನೆಲ್ಲಾ ತೋರಿಸಿ ಇಷ್ಟಾದರೂ ತಮ್ಮ ಉತ್ಸಾಹ ಕುಗ್ಗಿಲ್ಲವೆಂದೂ ಫ್ರಾನ್ಸ್‌ಗಾಗಿ ತಾವು ಏನೇ ತ್ಯಾಗಮಾಡಲು ಸಿದ್ಧರಾಗಿರುವುದಾಗಿಯೂ ತಿಳಿಸಿದರು. ೫೦,೦೦೦ ಜನ ಮೂರ್ ಸೈನ್ಯವನ್ನು ಕೇವಲ ೨೦ ಫ್ರೆಂಚರು ಎದುರಿಸಿದ ಸಾಹಸವನ್ನು ವರ್ಣಿಸಿದರು.

ನಿಜವಾಗಿಯೂ ನಮ್ಮ ಸೈನಿಕರ ಸಾಹಸ ಮೆಚ್ಚತಕ್ಕದ್ದೆ. ಆದರೆ ಇವರ ಯಜಮಾನರಾಗಿ ಬಂದವರು ತಕ್ಕ ಅರ್ಹತೆಯುವರಾಗಿರಲಿಲ್ಲ. ಅರ್ಹರಾದವರನ್ನು ಫ್ರಾನ್ಸ್ ಕಳುಹಿಸಿದ್ದರೆ ಇಡೀ ಪೂರ್ವದ ವ್ಯಾಪಾರವೆಲ್ಲ ಫ್ರೆಂಚರ ಕೈವಶವಾಗುತ್ತಿತ್ತು. ಪೋರ್ಚುಗೀಸರೂ ಡಚ್ಚರೂ ಜಯಗಳಿಸಿದಂತೆ ಇವರೂ ಜಯಗಳಿಸಬಹುದಿತ್ತು. ಆದರೆ ನಮ್ಮವರಿಗೆ ಅನುಭವ ಸಾಲದು. ಬುದ್ಧಿವಂತರಾದ ಹಾಗೂ ಶ್ರದ್ಧಾವಂತರಾದವರ ಅಭಾವವಿತ್ತು. ಹಡಗು, ಜನ ಮತ್ತು ಹೇರಳವಾಗಿ ಹಣ ಕಳುಹಿಸಿಕೊಟ್ಟು ಫ್ರೆಂಚರು ತೆಪ್ಪಗೆ ಕುಳಿತರು. ಹಾಕಿದ ಹಣಕ್ಕೆ ಲಾಭ ಬರುವ ಬದಲು ನಷ್ಟವಾಗಲಾರಂಭಿಸಿತು. ಹೆಚ್ಚು ಕಡಿಮೆ ಇಲ್ಲಿಗೆ ಕಳುಹಿಸಲ್ಪಟ್ಟವರೆಲ್ಲಾ ಪ್ರಾಣ ಕಳೆದುಕೊಂಡರು ಅಥವಾ ಹಡಗು ಕಳೆದುಕೊಂಡರು. ೧೬೫೭ರಲ್ಲಿ ಮೊಟ್ಟಮೊದಲ ಫ್ರೆಂಚ್ ಹಡಗು ಇಂಡಿಯಾಕ್ಕೆ ಹೊರಟಿತು. ಆದರೆ ಮಡಗಾಸ್ಕರ್ ತಲುಪಿ ಅಲ್ಲಿ ಇದ್ದಬದ್ದದ್ದನ್ನೆಲ್ಲಾ ಕಳೆದುಕೊಂಡಿತು. ೧೬೬೮ರಲ್ಲಿ ಎಂ. ಕಾರೋನ್ (M. Caron) ಎಂಬುವರು ಇಂಡಿಯಾಕ್ಕೆ ಬಂದು ಸೂರತ್ತಿನಲ್ಲಿ ಕಂಪನಿ ಸ್ಥಾಪಿಸಿ ದೊಡ್ಡ ಫ್ಯಾಕ್ಟರಿ ಕಟ್ಟಿದರು. ದಳ್ಳಾಳಿಗಳನ್ನು ನೇಮಿಸಿದರು. ಮತ್ತು ಹೇರಳವಾದ ಸರಕುಗಳನ್ನು ಫ್ರಾನ್ಸ್‌ಗೆ ರವಾನೆ ಮಾಡಿದರು. ಆದರೆ

ನಮ್ಮ ಫ್ರೆಂಚ್ ರಾಷ್ಟ್ರದ ಹಣೇಬರಕ್ಕೆ ಏನೆಂದು ಹೇಳಲಿ! ಎಲ್ಲಾ ಚೆನ್ನಾಗಿ ನಡೆಯು ತ್ತಿರುವಾಗ ಫ್ರೆಂಚರ ಹುಟ್ಟುಗುಣ ಎದ್ದು ಕಾಣಿಸಿತು. ಅವರಲ್ಲಿ ಹೊಟ್ಟೆಕಿಚ್ಚು, ಪರಸ್ಪರ ಧಿಕ್ಕಾರ, ಜಗಳ ಗುದ್ದಾಟ ಆರಂಭವಾದವು. ಬೇರೆ ರಾಷ್ಟ್ರಗಳಿಗೆ ಇದರಿಂದ ಬಹು ಖುಷಿಯಾಯಿತು. ಫ್ರೆಂಚರ ವ್ಯಾಪಾರಗಳನ್ನು ನಾವು ಹಾಳುಮಾಡಬೇಕಾಗಿಲ್ಲ, ಅವರೇ ಹಾಳುಮಾಡಿಕೊಳ್ಳುತ್ತಿದ್ದಾರೆ ಎಂದುಕೊಂಡರು! ಇದರಲ್ಲಿ ಡಚ್ಚರು ಮುಖ್ಯ ಪಾತ್ರ ವಹಿಸಿದರು. ನಮ್ಮ ಬಗ್ಗೆ ಏನೇನೋ ಸುಳ್ಳುಸುದ್ದಿಗಳನ್ನು ಹರಡಿ ಸ್ಥಳದ ಜನರ ಮನಸ್ಸು ಕೆಡಿಸಿದರು. ಮೂರರನ್ನು ನಮ್ಮ ಮೇಲೆ ಎತ್ತಿಕಟ್ಟಿದರು. ಎಂ. ಕಾರೋನ್ ಮೇಲೆ ನಮ್ಮವರೇ ತಿರುಗಿಬಿದ್ದರು. ಅವರಿಗೆ ಬೇಜಾರಾಯಿತು. ತಮ್ಮ ನಾಯಕತ್ವ ಬಿಟ್ಟುಕೊಟ್ಟರು. ಆಮೇಲೆ ದೇ ಲ ಹೇ ಅವರು ನಾಯಕತ್ವ ವಹಿಸಿದರು. ಇಂಡಿಯಾಕ್ಕೆ ಹೊರಡುವ ಮುನ್ನವೇ ತಾವು ಇಂಡಿಯಾದ ವೈಸ್‌ರಾಯ್ ಎಂದು ಘೋಷಿಸಿಕೊಂಡರು. ನಾಲ್ಕು ಹಡಗುಗಳ ಸಮೇತ ಇಂಡಿಯಾಕ್ಕೆ ಹೊರಟು ಸೂರತ್ ತಲುಪಿ ಅಲ್ಲಿಂದ ಮಲಬಾರ್ ತೀರಕ್ಕೆ ಹೊರಟು ಗೋವಾಕ್ಕೆ ಬಂದರು. ಆದರೆ ಇಲ್ಲಿ ಪೋರ್ಚುಗೀಸರು ತಮ್ಮ ಅದ್ದೂರಿಯ ವೈಭವವನ್ನು ತೋರಿಸಲು ಹಿಂಜರಿಯ ಲಿಲ್ಲ. ನಮ್ಮ ಅಧಿಕಾರಿಗಳನ್ನೂ ನಾವಿಕರನ್ನೂ ಎದುರುಗೊಂಡು ತಾವು ಯಾವರೀತಿಯಲ್ಲಿ ಬಾಳುತ್ತಿದ್ದೇವೆಂದು ಹೆಮ್ಮೆಯಿಂದ ಹೇಳಿಕೊಂಡರು. ಫ್ರೆಂಚರ ವೈಭವದ ಉಡುಪು ತಮ್ಮ ಸಾಮಾನ್ಯ ಸಿಪಾಯಿಯುದಕ್ಕಿಂತ ಹೆಚ್ಚಿಲ್ಲವೆಂದರು. ಎಷ್ಟೇ ಕಡಿಮೆ ದರ್ಜೆಯವನಾದರೂ ಪೋರ್ಚುಗೀಸ್ ಸಿಪಾಯಿ ತನ್ನ ತಿಂಗಳ ಸಂಬಳವನ್ನಷ್ಟೇ ಅಲ್ಲ ಆರುತಿಂಗಳ ಮುಂಗಡ ಸಂಬಳವನ್ನೂ ಲೀಲಾಜಾಲವಾಗಿ ಖರ್ಚುಮಾಡಬಲ್ಲನೆಂದು ತೋರಿಸಿದರು. ತಮ್ಮ ಶ್ರೀಮಂತಿಕೆಯ ಉಡುಪು, ಪಲ್ಲಕ್ಕಿಗಳ ಅಲಂಕಾರ, ತಮ್ಮ ಭೋಜನ ಇವುಗಳ ವೈಖರಿಯನ್ನು ತೋರಿಸಿ ಫ್ರೆಂಚರನ್ನು ಸತ್ಕರಿಸಿದರು. ನಮ್ಮ ಫ್ರೆಂಚರೂ ತಾವೇನೂ ಇದರಲ್ಲಿ ಕಡಿಮೆ ಇಲ್ಲ ಎಂದು ಪ್ರತಿಯಾಗಿ ಮೆರೆದರು. ಊಟೋಪಚಾರ ಮತ್ತಿತರ ಗಮ್ಮತ್ತುಗಳಲ್ಲಿ ಪರಸ್ಪರ ಪೈಪೋಟಿ ನಡೆಯಿತು. ಹೀಗಾಗಿ ಸೊಂಪಾದ ಮೀಸೆ ತೀಡಿ ಕೊಂಡು ಸೊಂಟಕ್ಕೆ ಕತ್ತಿ ಕಟ್ಟಿಕೊಂಡು ಬಿಂಕದಿಂದ ಕಂಡ ಫ್ರೆಂಚರನ್ನು ಗೋವೆಯ ಜನ ಪೋರ್ಚುಗೀಸ್ ಫಿದಾಲ್ಗೋಗಳೆಂದೇ ಭಾವಿಸಿದರು. ಗತವೈಭವದಿಂದಿದ್ದ ಗೋವೆ ಯಲ್ಲಿ ಪೋರ್ಚುಗೀಸರ ವೈಭವ ಮತ್ತೆ ತಲೆಯೆತ್ತಿದಂತೆ ಕಂಡಿತು. ಊರಿನ ಬೀದಿಗಳ ತುಂಬ ಪಲ್ಲಕ್ಕಿಗಳು. ಸುಂದರವಾಗಿ ಸಜ್ಜುಗೊಳಿಸಿದ ಕುದುರೆಗಳು: ಹಿಂದೆ ಮುಂದೆ ಗುಲಾಮರ ತಂಡಗಳು. ಗೋವೆಯ ವೈಸರಾಯಿಯ ಅರಮನೆಯಲ್ಲಿ ಅದ್ದೂರಿಯೋ ಅದ್ದೂರಿ. ವರ್ತಕರೂ ವ್ಯಾಪಾರಿಗಳೂ ಕೊನೆಗೆ ಜನಸಾಮಾನ್ಯರೂ ಕೂಡ ಮನಸ್ವೇಚ್ಛೆ ಆಗುತ್ತಿದ್ದ ವೆಚ್ಚದ ಅನುಕೂಲ ಪಡೆದರು. ಕೇವಲ ಅನ್ನ ಉಪ್ಪು ಮೀನು ತರಕಾರಿ ತಿಂದು ಬಡತನದಲ್ಲಿ ಕಾಲ ಹಾಸುತ್ತಿದ್ದ ನಗರದ ಜನ ಫ್ರೆಂಚರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಅವರಿಗೆ ಬೇಕಾದ ಆಮೋದವಿನೋದಗಳನ್ನು ಒದಗಿಸಿ ಹಣ ಮಾಡಿದರು. ಮದ್ಯ ನೀರಿನಂತೆ ಹರಿಯಿತು. ಅದರ ಮಾರಾಟದಿಂದ ಅನೇಕರು

ಬೆಳಕು ಹರಿಯುವುದರೊಳಗೆ ಶ್ರೀಮಂತರಾದರು. ರೊಟ್ಟಿ ತಯಾರಿಸುವವರೂ ಹಣ್ಣು ಹಂಪಲು ಮಾರುವವರೂ ರುಚಿರುಚಿಯಾದ ತಿಂಡಿ ಮಾಡುವವರೂ ಹಣ ಮಾಡಿದರು. ಊರ ತುಂಬ ಇರುವ ದೇಹ ಮಾರಿ ಜೀವಿಸುವವರ ಸಂಪಾದನೆ ಎಷ್ಟು ಅಂತ ಹೇಳಲಿ! ದುಡ್ಡಿನ ಸೂರೆ ಮಾಡಿಬಿಟ್ಟರು. ಹೀಗೆ ನಮ್ಮ ಸೇನಾಪಡೆಯ ಆಗಮನದಿಂದ ಗೋವೆಗೆ ಮತ್ತೆ ಶ್ರೀಮಂತಿಕೆ ಬಂದಂತಾಯಿತು. ಎಷ್ಟೋ ವರ್ಷಗಳಾಗಿದ್ದುವು ಇಂತಹ ವೈಭವದ ಹಾಗೂ ಧಾರಾಳದ ಜನರನ್ನು ನಾವು ಕಂಡು ಎಂದರು ಜನ.

ಹೀಗೆ ಒಂದು ಕಡೆ ನಡೆಯುತ್ತಿದ್ದರೆ ಬೇರೊಂದು ಕಡೆ ಒಂದು ನಾಟಕ ನಡೆಯುತ್ತಿತ್ತು. ಇಂಡಿಯಾದಲ್ಲಿ ತಾನಲ್ಲದೆ ಬೇರೆ ಯಾರೂ ವೈಸ್‌ರಾಯ್ ಎಂದು ಕರೆದುಕೊಳ್ಳುವ ಯೋಗ್ಯತೆ ಇಲ್ಲ ಎಂದು ಫ್ರೆಂಚ್ ವೈಸ್‌ರಾಯ್ ಮೇಲೆ ಪೋರ್ಚುಗೀಸ್ ವೈಸ್‌ರಾಯ್ ಹೊಟ್ಟೆಕಿಚ್ಚು. ಆತ ಮೇಲೆ ಮೇಲೆ ಸ್ನೇಹ ನಟಿಸಿದರೂ ಒಳಗೊಳಗೆ ಫ್ರೆಂಚರನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಪ್ರಯತ್ನ ಮಾಡಿದ. ಹೀಗಾಗಿ ಫ್ರೆಂಚ್ ನೌಕಾಪಡೆ ಗೋವಾ ಬಿಟ್ಟಾಗ ಅನೇಕ ಜನ ಫ್ರೆಂಚರು ಗೋವಾದಲ್ಲಿಯೇ ಉಳಿದರು. ಅವರನ್ನೆಲ್ಲಾ ತನ್ನ ಸೈನ್ಯಕ್ಕೆ ಸೇರಿಸಿಕೊಂಡು ಗೋವಾ ವೈಸ್‌ರಾಯ್ ಎರಡು ತುಕಡಿ ಸೈನ್ಯಪಡೆ ಕಟ್ಟಿದ.

ಗೋವಾ ಬಿಟ್ಟ ನಮ್ಮ ನೌಕಾಪಡೆ ಶ್ರೀಮಂತವಾದ ಮಲಬಾರ್ ತೀರದಲ್ಲಿ ಸಾಗಿ ಕ್ಯಾಲಿಕಟ್ ಮುಟ್ಟಿ ಅಲ್ಲಿಯ ಜಾಮೋರಿನ್‌ನ ಸ್ನೇಹ ಬೆಳಸಿ ಕೇಪ್ ಕಾಮೋರಿನ್ ಮೂಲಕ ೧೬೭೨ನೆಯ ಮಾರ್ಚ್ ೨೮ರಂದು ಸಿಲೋನ್ ದ್ವೀಪದ ಟ್ರಿಂಕೋಮಲೆಯಲ್ಲಿ ಲಂಗರು ಹಾಕಿತು. ಟ್ರಿಂಕೋಮಲೆ ಬಹು ಸುಂದರವಾದ ಬಂದರು. ಪೂರ್ವದಿಂದ ಪಶ್ಚಿಮಕ್ಕೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಹಡಗುಗಳೆಲ್ಲ ಈ ಮೂಲಕವೇ ಹೋಗಬೇಕು. ಸಾವಿರ ಹಡಗುಗಳು ಒಮ್ಮೆಯೇ ತಂಗಬಹುದಾದಷ್ಟು ದೊಡ್ಡದು ಈ ಬಂದರು.

ಸಿಲೋನಿನ ರಾಜನಿಗೆ ನಮ್ಮ ಹಡಗುಪಡೆ ಕಂಡು ತುಂಬಾ ಸಂತೋಷವಾಯಿತು. ತನ್ನ ನಾಡನ್ನು ಆಕ್ರಮಿಸಿಕೊಂಡ ಡಚ್ಚರನ್ನು ಸದೆಬಡಿಯಲು ಫ್ರಾನ್ಸ್ ರಾಜನು ಬಹು ಉಪಕಾರ ಮಾಡಿರುವನೆಂದುಕೊಂಡು ನಮ್ಮ ವೈಸರಾಯ್‌ಗೂ ನೌಕಾಧಿಪತಿ ಎಂ. ಕಾರೋನ್ ಅವರಿಗೂ ನಮ್ರತೆಯ ಸ್ವಾಗತ ನೀಡಿದನು. ಕೋಟೆಕೊತ್ತಳಗಳನ್ನು ಕಟ್ಟಲು ಅನುಮತಿ ಕೊಟ್ಟನು. ಹಡಗುಗಳಿಗೆ ಬೇಕಾದ ಕೆಲಸಗಾರರನ್ನೂ ಮರಮುಟ್ಟು ಮುಂತಾದ ಆವಶ್ಯಕ ವಸ್ತುಗಳನ್ನೂ ಒದಗಿಸಿದನು. ಇದನ್ನೆಲ್ಲಾ ಡಚ್ಚರು ನೋಡಿಕೊಂಡು ತಕ್ಕ ಸಮಯಕ್ಕಾಗಿ ಕಾಯುತ್ತಿದ್ದರು.

ಏಪ್ರಿಲ್ ೮ ನಮ್ಮ ದುರದೃಷ್ಟ ಆರಂಭವಾಯಿತು. ಆ ದಿನ ನಮ್ಮ ವೈಸ್‌ರಾಯ್ ಮತ್ತು ಎಂ. ಕಾರೋನ್ ತಮಗೆ ಬೇಕಾದ ಆಹಾರ ಸಾಮಗ್ರಿಗಳನ್ನು ತರಲು ಮೂರು ಹಡಗುಗಳನ್ನು ಕಾರೋಮಂಡಲತೀರಕ್ಕೆ ಕಳುಹಿಸಿಕೊಟ್ಟರು. ಹೀಗೆ ಮಾಡಿ "ಸೂರ್ಯ

ದ್ವೀಪ" ಎಂಬ ದ್ವೀಪದ ರಕ್ಷಣೆ ಕಾರ್ಯದಲ್ಲಿ ತೊಡಗಿದರು. ಈ ದ್ವೀಪದ ರಕ್ಷಣೆ ಮಾಡಿಕೊಂಡರೆ ಸಾಕು ಯಾವ ನೌಕಾಪಡೆಯೂ ಟ್ರಿಂಕೋಮಲೆ ದ್ವೀಪವನ್ನು ಪ್ರವೇಶಿಸ ದಂತೆ ತಡೆಯಬಹುದಾಗಿತ್ತು. ವೈಸ್‌ರಾಯಿಯೇ ಮುಂದೆ ನಿಂತು ಹಗಲು ರಾತ್ರಿ ಕೆಲಸ ಮಾಡಿಸಿದ.

ಇದನ್ನು ಕಂಡ ಡಚ್ಚರ ನೌಕಾಧಿಪತಿ ೧೫ ಹಡಗುಗಳ ಸಮೇತ ಬಂದು ನಮ್ಮವರಿಗೆ ಏನೆಲ್ಲಾ ತೊಂದರೆ ಕೊಡಲಾರಂಭಿಸಿದ. ಯೂರೋಪಿನಲ್ಲಿ ಫ್ರೆಂಚರೂ ಡಚ್ಚರೂ ಪರಸ್ಪರ ಯುದ್ಧದಲ್ಲಿ ತೊಡಗಿರಲಿಲ್ಲ. ಆದರೆ ಇಲ್ಲಿ ತೊಡಗಬೇಕಾಯಿತು. ತಮ್ಮ ಸ್ಥಳವನ್ನು ಆಕ್ರಮಿಸಿಕೊಂಡುದಕ್ಕೆ ಡಚ್ಚರು ರೇಗಾಡಿದರು. ಸಣ್ಣ ಪುಟ್ಟ ಜಗಳಗಳಾದವು. ಡಚ್ಚರ ನೌಕಾಧಿಪತಿ ತುಂಬಾ ಅನುಭವಸ್ಥ. ನಮಗೆ ಆಹಾರದ ಕೊರತೆ ಇರುವುದನ್ನು ಕಂಡ ಆತ ಅದನ್ನು ತರಲು ಕೋರಮಂಡಲ ತೀರಕ್ಕೆ ಹೋಗಿ ಹಿಂದಿರುಗುತ್ತಿದ್ದ ನಮ್ಮ ಮೂರು ಹಡಗುಗಳನ್ನು ಬಂದರಿಗೆ ಬರದಂತೆ ತಡೆದ. ಸಿಲೋನಿನಿಂದಲೂ ಏನೂ ಬರದಂತೆ ಮಾಡಿದ. ಹೀಗಿರುವಾಗ ನಮ್ಮವರು ಡಚ್ಚರ ಮೇಲೆ ಬೀಳಬೇಕಾಗಿತ್ತು. ಹಾಗೆ ಮಾಡುವ ಬದಲು ಅವರೇ ನಮ್ಮ ಮೇಲೆ ಬೀಳಲಿ ಎಂದು ಸುಮ್ಮನಿದ್ದು ತಪ್ಪು ಮಾಡಿದರು. ಡಚ್ಚರು ನಮ್ಮ ಅತ್ಯುತ್ತಮವಾದ ಎರಡು ಹಡಗುಗಳನ್ನು ಹಿಡಿದು ಕೊಂಡರು. ನಮ್ಮ ರಾಷ್ಟ್ರದ ಬಾವುಟವನ್ನು ವೈಸ್‌ರಾಯ್ ಕಣ್ಣು ಮುಂದೆಯೇ ಹರಿದು ಚಿಂದಿ ಚಿಂದಿ ಮಾಡಿ ಬಿಸಾಡಿದರು. ಆಹಾರ ಸಾಮಗ್ರಿಗಳನ್ನು ತರುತ್ತಿದ್ದ ಹಡಗುಗಳನ್ನು ತಮ್ಮ ವಶಪಡಿಸಿಕೊಂಡರು. ಈಗಲಾದರೂ ನಮ್ಮವರು ಬಂದರಿನಿಂದ ಹೊರಟು ಪಲಾಯನ ಮಾಡಬಹುದಿತ್ತು. ಇಲ್ಲ, ಹಾಗೆ ಮಾಡುವ ಬುದ್ಧಿ ಬರಲಿಲ್ಲ. ಈ ದಡ್ಡತನವನ್ನು ಸೂಕ್ಷ್ಮವಾಗಿ ಅರಿತ ಡಚ್ ನೌಕಾಧಿಪತಿ ನಮ್ಮ ಕಡೆಯ ಹಡಗು ಗಳನ್ನು ಕೊಳ್ಳೆಹೊಡೆದ. ನೌಕಾಪಡೆಯವರನ್ನು ಹಿಡಿದು ಹಡಗಿನ ಕೆಳಕೋಣೆಯಲ್ಲಿ ಕುರಿಗಳಂತೆ ತುಂಬಿ ನಾಗಪಟ್ಟಣಕ್ಕೆ ರವಾನಿಸಿದ. ದಾರಿಯಲ್ಲಿ ಎಷ್ಟೋ ಜನ ಸತ್ತರು. ಉಳಿದವರನ್ನು ನಾಗಪಟ್ಟಣದಲ್ಲಿ ಸುಖವಾಗಿರಲು ಬಿಡಲಾಯಿತು. ಒಳ್ಳೆಮನೆ, ಓಡಾಡಲು ಅನುಕೂಲ, ಊಟ ಉಪಚಾರ, ಖರ್ಚು ವೆಚ್ಚಗಳಿಗೆ ಹಣ ಇವನ್ನೆಲ್ಲಾ ಒದಗಿಸಿದರು. ಸೊಗಸು ಮಾಡಿಕೊಂಡು ವೇಶ್ಯೆಯರ ಮನೆಗೆ ಹೋಗಿ ಬರುವುದಕ್ಕೆ ಬೇಕಾದ ಬಟ್ಟೆ ಬರೆಗಳನ್ನೂ ಒದಗಿಸಿದರು. ಅವರಿಗೆ ಕೊಡುವುದಕ್ಕೆ ಬೇಕಾದ ಹಣ ಒಡವೆ ವಸ್ತ್ರಗಳಿಗೂ ಕೊರತೆ ಇರಲಿಲ್ಲ. ಹೀಗಾಗಿ ಎಂಥ ಕಷ್ಟದಲ್ಲೂ ಸಹ ಫ್ರೆಂಚರಷ್ಟು ಧಾರಾಳ ಜನ ಯಾರೂ ಇಲ್ಲ ಎಂಬುದು ಮನೆಮಾತಾಗಿಬಿಟ್ಟಿತು.

ಅತ್ತ ಸೂರತ್ತಿನಲ್ಲಿ ಇದ್ದ ನಮ್ಮ ಫ್ಯಾಕ್ಟೊರಿಯಲ್ಲಿ ಜಗಳ ಗುದ್ದಾಟಗಳು ಆರಂಭ ವಾಗಿದ್ದವು. ಎಂ. ಕಾರೋನ್ ಅದನ್ನು ಬಿಟ್ಟ ಮೇಲೆ ಎಂ. ಬ್ಲಾಟ್ ಒಬ್ಬರೇ ಆದರು. ಅವರು ಒಳ್ಳೆಯ ಮನುಷ್ಯ. ಅವರಿಗೆ ಮಗ್ಗುಲು ಮುಳ್ಳಾಗಿ ಬಂದರು ಎಂ. ಗೆಸ್ಟೋನ್ ಎಂಬುವರು. ಸರಿ ಇಬ್ಬರಿಗೂ ಲಟಾಪಟಿ ಶುರುವಾಯಿತು. ಕಂಪೆನಿಗೆ ಕೆಟ್ಟ ಹೆಸರು ತಂದರು.

ಇತ್ತ ಟ್ರಿಂಕೋಮಲೆಯಲ್ಲಿ ನಮಗೂ ಫ್ರೆಂಚರಿಗೂ ಒಂದಲ್ಲ ಒಂದು ರೀತಿಯಲ್ಲಿ ಯುದ್ಧ ನಡೆಯುತ್ತಲೇ ಇತ್ತು. ಈ ಮಧ್ಯೆ ಸಿಲೋನ್ ರಾಜನ ರಾಯಭಾರಿಗಳು ಬಂದು ತಮ್ಮ ರಾಜನ ಸ್ನೇಹಹಸ್ತವನ್ನು ನೀಡಿ ಅನೇಕ ಬಹುಮಾನಗಳನ್ನು ಕೊಟ್ಟು ಹೋದರು.

ಒಂದು ಸಲ ನಮ್ಮ ನೌಕಾಪಡೆ ಡಚ್ಚರ ಮೇಲೆ ವಿಜಯ ಸಾಧಿಸಿತು. ಅದನ್ನು ಉಪಯೋಗಿಸಿಕೊಂಡು ಅರ್ಧಂಬರ್ಧ ಮುಗಿಸಿದ್ದ ರಕ್ಷಣಾ ವ್ಯವಸ್ಥೆಯನ್ನು ಪೂರ್ಣವಾಗಿ ಮುಗಿಸಿ ಎದೆಗುಂದದೆ ಟ್ರಿಂಕೋಮಲೆಯಲ್ಲಿ ನಿಂತಿದ್ದರೆ ನಮ್ಮ ಕಥೆಯೇ ಬೇರೆಯಾಗುತ್ತಿತ್ತು. ಆದರೆ ನಮ್ಮ ವೈಸ್‌ರಾಯ್ ಆಹಾರದ ಅಭಾವದಿಂದ ಕಾರೋಮಂಡಲ ತೀರಕ್ಕೆ ಹೋಗುವುದೆಂದು ತೀರ್ಮಾನಿಸಿದರು. ಬೇಕಾದ ಆಹಾರ ಸಾಮಗ್ರಿಗಳನ್ನು ಒದಗಿಸದೇಹೋದುದಕ್ಕಾಗಿ ಸಿಲೋನ್ ರಾಜನನ್ನೂ ದೂರಿದರು. ಒಂದು ಹಡಗನ್ನೂ ಸ್ವಲ್ಪ ಸಿಬ್ಬಂದಿಯನ್ನೂ ಟ್ರಿಂಕೋಮಲೆ ತೀರದಲ್ಲಿ ಬಿಟ್ಟು ಡಚ್ಚರು ಅದರ ಮೇಲೆ ಬಿದ್ದರೆ ಏನು ಮಾಡಬೇಕೆಂದು ಹೇಳಿ ಕಾರೋಮಂಡಲ ತೀರಕ್ಕೆ ತನ್ನ ಎಂಟು ಹಡಗುಗಳ ಸಮೇತ ೧೭೮೨ನೆಯ ಜುಲೈ ೯ರಂದು ಹೊರಟರು. ತಮ್ಮ ಮತ್ತು ಕಾರೋನ್ ಅವರ ಕಾಗದ ಪತ್ರಗಳನ್ನು ಒಂದು ಹಡಗಿನಲ್ಲಿ ಫ್ರಾನ್ಸಿಗೆ ಕಳುಹಿಸಿಕೊಟ್ಟನು.

ಮಾರನೆಯ ದಿನ ಸಿಲೋನ್‌ನಿಂದ ಅಕ್ಕಿ ಮುಂತಾದುವುಗಳನ್ನು ಹೇರಿಕೊಂಡು ಒಂದು ಹಡಗು ಟ್ರಿಂಕೋಮಲೆಗೆ ಬಂದಿತು. ಇದರಲ್ಲಿ ತಿನ್ನುವುದಕ್ಕೆ ಎಮ್ಮೆಗಳೂ ಮತ್ತಿತರ ಪ್ರಾಣಿಗಳೂ ಇದ್ದವು. ಇದನ್ನೆಲ್ಲಾ ಕಂಡ ಡಚ್ಚರು ತಮ್ಮ ಹನ್ನೆರಡು ಹಡಗುಗಳ ಸಮೇತ ಬಂದು ಆಹಾರ ತಂದಿದ್ದ ಹಡಗಿನ ಕರಿಯರನ್ನು ಕೊಂದು ಆಹಾರ ತುಂಬಿದ್ದ ಹಡಗನ್ನು ವಶಪಡಿಸಿಕೊಂಡರು. ಅಷ್ಟೇ ಅಲ್ಲ ನಮ್ಮ ವೈಸ್‌ರಾಯ್ ಹಿಂದೆ ಬಿಟ್ಟು ಹೋಗಿದ್ದ ಹಡಗನ್ನೂ ಅದರಲ್ಲಿದ್ದವರನ್ನೂ ಸೆರೆಹಿಡಿದರು. ಬೇರೆ ದಾರಿ ಕಾಣದ ಫ್ರೆಂಚರು ಡಚ್ಚರೊಡನೆ ಸಂಧಿ ಮಾಡಿಕೊಂಡು ತಾವು ಆಕ್ರಮಿಸಿದ್ದ ಸ್ಥಳವನ್ನು ಅವರಿಗೆ ಒಪ್ಪಿಸಿಬಿಟ್ಟರು. ಹೀಗೆ ಪಡೆದ ಸ್ಥಳವನ್ನು ಡಚ್ಚರು ಭದ್ರಪಡಿಸಲು ಏರ್ಪಾಡುಮಾಡಿ ಕಾರೋಮಂಡಲ ತೀರಕ್ಕೆ ಹೊರಟರು.

ಹೀಗೆ ಕೊನೆಗೊಂಡಿತು, ಸಿಲೋನ್ ದ್ವೀಪದಲ್ಲಿ ನಮ್ಮ ನೌಕಾಪಡೆಯ ಸಾಹಸ!

ಜುಲೈ ೯ರಂದು ಕಾರೋಮಂಡಲ ತೀರಕ್ಕೆ ಹೊರಟ ನಮ್ಮ ನೌಕಾಪಡೆ ಟ್ರಾಂಕೋಬಾರ್‌ಗೆ ಹೋಗಿ ಅಲ್ಲಿಯ ಡೇನಿಷ್ ಕಂಪನಿಯ ನೆರವಿನಿಂದ ಸಾಕಷ್ಟು ಆಹಾರ ಸಾಮಗ್ರಿಗಳನ್ನು ಪಡೆದು ಬಿಜಾಪುರ ರಾಜನಿಗೆ ಸೇರಿದ ಪೋರ್ಟ್‌ನೋವೋ ಬಂದರಿಗೆ ಹೋಯಿತು. ಅಲ್ಲಿಯೂ ಅವರಿಗೆ ಬೇಕಾದ ಅನುಕೂಲಗಳು ದೊರಕಿದುವು. ಮುಂದೆ ಬಂಟಾಂಗೆ ಹೋಗಬೇಕೆನ್ನುವುದು ನಮ್ಮ ಪಡೆಯ ಉದ್ದೇಶವಾಗಿತ್ತು. ಆದರೆ ಆಹಾರದ ಕೊರತೆ ಇನ್ನೂ ಇದ್ದೇ ಇತ್ತು. ಸಮುದ್ರತೀರದಲ್ಲೇ ಉತ್ತರಕ್ಕೆ ತನ್ನ ಯಾನ ಮುಂದುವರಿಸಿ ಜುಲೈ ೧೭ರಂದು ಸೆಂಟ್ ಥೋಮ್ ನಗರ ತಲುಪಿತು.

ಸೆಂಟ್ ಥೋಮ್ ಕಾರೋಮಂಡಲ ತೀರದಲ್ಲಿ ಬಹು ಮುಖ್ಯವಾದ ಪಟ್ಟಣ. ಕ್ಯಾಲಿಕೋ ಬಟ್ಟೆ ಮತ್ತು ಒಳ್ಳೊಳ್ಳೆಯ ಬಣ್ಣಗಳ ವ್ಯಾಪಾರ ಹೆಚ್ಚು. ಇದನ್ನು ಮೊದಲಿಗೆ ಪೋರ್ಚುಗೀಸರು ಕಟ್ಟಿ ಬಹಳ ಕಾಲ ಆಳಿದರು. ಆದರೆ ಇಂಡಿಯಾದ ಬೇರೆ ಕಡೆ ಅವರ ಏಳಿಗೆ ಕುಗ್ಗಿದಂತೆ ಇಲ್ಲಿಯೂ ಕುಗ್ಗಿತು. ಸ್ಥಳದ ಜನರಿಗೆ ಅವರ ಅಸಹ್ಯ ವರ್ತನೆ ಸಹಿಸದಾಯಿತು. ಗೋಲ್ಕೊಂಡಾ ರಾಜ ಇದರ ಸದುಪಯೋಗ ಪಡಿಸಿಕೊಂಡು ೧೬೭೦ರಲ್ಲಿ ಭಾರಿ ಸೈನ್ಯ ಕಳುಹಿಸಿ ಪೋರ್ಚುಗೀಸರನ್ನು ಓಡಿಸಿ ಊರನ್ನು ತನ್ನ ವಶಪಡಿಸಿಕೊಂಡನು. ಆಗಿನಿಂದ ಈ ಊರು ಮೂರರ ವಶದಲ್ಲಿತ್ತು.

ಇಲ್ಲಿಯವರೆಗೆ ಟೋಪಿ ಜನರನ್ನು ಕಂಡರೆ ಅನುಮಾನ. ಈ ಕಾರಣ ನಮ್ಮ ಫ್ರೆಂಚರಿಗೆ ಊರನ್ನು ಪ್ರವೇಶಿಸಲು ಅವಕಾಶ ದೊರೆಯಲಿಲ್ಲ. ಇದರಿಂದ ಸಿಟ್ಟಿಗೆದ್ದ ವೈಸ್‌ರಾಯ್ ಆ ಊರನ್ನು ವಶಪಡಿಸಿಕೊಳ್ಳುವ ಸಿದ್ಧತೆ ಮಾಡಿದ. ಅಲ್ಲಿ ಮೂರರ ಸೈನ್ಯ ಅಷ್ಟೇನೂ ಇರಲಿಲ್ಲ. ಅಲ್ಲಿದ್ದ ಕ್ರೈಸ್ತರೂ ಕಾಪುಚಿನ್ ಫಾದರ್ ಎಫ್ರೈಮರೂ ತಾವು ಸಹಾಯ ಮಾಡುವುದಾಗಿ ವಾಗ್ದಾನ ಮಾಡಿದರು. ಆಗ ನಮ್ಮ ವೈಸ್‌ರಾಯ್ ಕೊಂಚ ದೂರಾಲೋಚನೆ ಮಾಡಬೇಕಾಗಿತ್ತು. ಗೋವೆ ಮತ್ತು ಸಿಲೋನ್‌ನಲ್ಲಿ ಆದ ಮುಖಭಂಗವನ್ನೂ ಅರ್ಧಕ್ಕರ್ಧ ನೌಕಾಪಡೆಯ ನಾಶವನ್ನೂ ಹೇರಳವಾಗಿ ವ್ಯರ್ಥವಾದ ಹಣವನ್ನೂ ಲೆಕ್ಕಹಾಕಬೇಕಾಗಿತ್ತು. ಉಹುಂ, ಅವೇನೂ ನಮ್ಮ ವೈಸ್‌ರಾಯ್‌ಗಾಗಲೀ ಕಾರೋನರವರಿಗಾಗಲೀ ಬೇಕಾಗಿರಲಿಲ್ಲ. ಬಂಟಾಂ ದೊರೆಗೆ ಕೊಟ್ಟ ಮಾತು ಮರೆತು ಹೋಯಿತು. ಏನಾದರೂ ಮಾಡಿ ಆ ಊರನ್ನು ವಶಪಡಿಸಿಕೊಳ್ಳುವ ತೀರ್ಮಾನ ಮಾಡಿದರು. ಮೂರರ ಕಡೆಯ ಮಂಡಾಲನೆಂಬ ಸೇನಾನಾಯಕ ಊರಿಗೆ ಅರ್ಧದಿನದ ದಾರಿಯ ಒಂದೂರಿನಲ್ಲಿದ್ದ. ಅಲ್ಲಿಗೆ ಈ ಧಾಳಿಯ ವರ್ತಮಾನ ಹೋಯಿತು. ಅವನು ತಕ್ಕ ಸೇನೆಯೊಡನೆ ಬರುವುದರೊಳಗೆ ಫ್ರೆಂಚರ ಧಾಳಿ ಶುರುವಾಗಿತ್ತು. ಊರಿನ ಮೂರರು ಹೋರಾಡುವುದನ್ನು ಬಿಟ್ಟು ತಮ್ಮ ಹೆಂಡತಿ ಮಕ್ಕಳನ್ನೂ ಸಾಮಾನು ಸರಂಜಾಮುಗಳನ್ನೂ ಹೊರಗೆ ಸಾಗಿಸುವ ತರದೂದಿನಲ್ಲಿ ತೊಡಗಿದರು. ಆಮೇಲೆ ಇದ್ದುಬಿದ್ದ ಶಸ್ತ್ರಾಸ್ತ್ರಗಳನ್ನು ಕೈಗೆತ್ತಿಕೊಂಡು ಹೋರಾಡಲು ಆರಂಭಿಸಿದರು. ನಮ್ಮ ಮದ್ದುಗುಂಡುಗಳ ಸುರಿಮಳೆಯಾಯಿತು. ಕೈಕೈ ಮಿಲಾಯಿಸಿ ಯುದ್ಧ ಮಾಡಿದರು. ನಮ್ಮವರು ಜಯಗಳಿಸಿದರು. ನಗರದ ಬೀಗದ ಕೈ ಗೊಂಚಲೇ ಅವರ ವಶವಾಯಿತು. ಮೂರರು ಊರುಬಿಟ್ಟು ಓಡಿದರು. ವೈಸ್‌ರಾಯ್ ಮತ್ತು ಕಾರೋನ್ ಜಯಭೇರಿ ಹೊಡೆಯುತ್ತ ಕೈಯಲ್ಲಿ ಫ್ರೆಂಚ್ ಬಾವುಟ ಹಿಡಿದು ನಗರ ಪ್ರವೇಶ ಮಾಡಿದರು. ಸೆಂಟ್ ಥಾಮಸನ ನೆನಪಿಗಾಗಿ ಕಟ್ಟಿದ ಚರ್ಚೂ ಬೇರೆ ಚರ್ಚುಗಳೂ ಯಾವ ಅನಾಹುತಕ್ಕೂ ಒಳಗಾಗಿರಲಿಲ್ಲ. ಕ್ರೈಸ್ತಮತದ ಬದ್ಧ ವಿರೋಧಿಗಳಾದ ಮೂರರು ಅವನ್ನು ಸುರಕ್ಷಿತ ವಾಗಿ ಬಿಟ್ಟಿದ್ದು ನೋಡಿ ಅವರಿಗೆ ಆಶ್ಚರ್ಯ. ಹಾಳುಮಾಡುವುದು ಹೋಗಲಿ ಅವುಗಳ ಬಾಗಿಲನ್ನೇ ತೆಗೆದಿರಲಿಲ್ಲ. ಯೂರೋಪಿನಲ್ಲಿ ಇಂಥದು ನಡೆಯಲು ಸಾಧ್ಯವಿಲ್ಲ. ಇಂಗ್ಲೆಂಡ್, ಹಾಲೆಂಡ್ ಮತ್ತು ಫ್ರಾನ್ಸ್‌ನಲ್ಲಿ ದಂಗೆಯೆದ್ದ ಕ್ರೈಸ್ತರು ಚರ್ಚ್‌ಗಳಿಗೆ

ಮಾಡಿದ ಅನಾಹುತ ನೆನೆಸಿಕೊಂಡರೆ ಇಷ್ಟು ದೂರದಲ್ಲಿದ್ದ ನಮ್ಮ ಪವಿತ್ರಸ್ಥಳಗಳ ತಂಟೆಗೆ ಹೋಗದಿದ್ದುದು ಅಚ್ಚರಿಯಲ್ಲವೆ?

ಮಾರನೆಯ ದಿನ ಮೂರರ ಹೊಸ ಸೈನ್ಯ ಬಂದಿತು. ಆದರೆ ಅವರು ಬರುವುದ ರೊಳಗೆ ಎಲ್ಲವೂ ಮುಗಿದ ಹೋಗಿತ್ತು. ಬಂದ ದಾರಿಗೆ ಸುಂಕವಿಲ್ಲದೆ ಹಿಂದಿರುಗಿದರು.

ಪಟ್ಟಣವನ್ನು ವಶಪಡಿಸಿಕೊಂಡ ನಮ್ಮ ವೈಸ್‌ರಾಯ್ ಅದರ ರಕ್ಷಣೆಗೆ ತಕ್ಕ ವ್ಯವಸ್ಥೆ ಮಾಡಿದ. ಹಡಗಿನಲ್ಲಿದ್ದ ಶಸ್ತ್ರಾಸ್ತ್ರಗಳನ್ನೂ ಮದ್ದುಗುಂಡುಗಳನ್ನೂ ಊರಿಗೆ ಸಾಗಿಸಿದ. ಆದರೂ ಅವನಿಗೆ ಸಿಪಾಯಿಗಳ ಕೊರತೆ. ಪೋರ್ಟೋನೋವೋ ಗೌರ್‍ನರ್ ಮತ್ತು ತಂಜಾವೂರು ನಾಯಕರುಗಳ ಸಹಾಯ ಕೋರಿದ. ಅವರು ತಮ್ಮ ಸೈನ್ಯ ಕಳುಹಿಸಿಕೊಟ್ಟರು. ಬೇಕಾದಷ್ಟು ಮದ್ದುಗುಂಡುಗಳನ್ನು ಆಹಾರ ಧಾನ್ಯಗಳನ್ನೂ ಒದಗಿಸಿದರು.

ಒಂದು ತಿಂಗಳ ಕಾಲ ಯಾರೂ ತನ್ನ ತಂಟೆಗೆ ಬರದಿದ್ದುದನ್ನು ನೋಡಿ ವೈಸ್ ರಾಯ್ ಪಟ್ಟಣದ ಭದ್ರತೆಗೆ ಏನೆಲ್ಲಾ ಮಾಡಬೇಕೋ ಅದನ್ನು ಮಾಡಿದ. ನಮ್ಮ ಜಯಭೇರಿ ಇಡೀ ಪೂರ್ವದಲ್ಲಿ ಕೇಳಿಸಿತು. ಫ್ರೆಂಚ್ ರಾಷ್ಟ್ರದ ಬಗ್ಗೆ ಇಂಡಿಯಾದ ದೊರೆಗಳು ಕಣ್ಣುಬಿಟ್ಟು ನೋಡುವಂತಾಯಿತು. ತಮ್ಮ ಗತಿ ಏನಾದೀತೋ ಎಂದು ಅವರವರ ರಕ್ಷಣೆಯಲ್ಲಿ ತೊಡಗಿದರು. ಇನ್ನು ಡಚ್ಚರೂ ಇಂಗ್ಲಿಷರೂ ತಮ್ಮ ವ್ಯಾಪಾರಕ್ಕೆ ಕುತ್ತು ಬಂತೆಂದು ಭಾವಿಸಿ ಫ್ರೆಂಚರು ಹಡಗುಗಳ್ಳರೆಂಬ ಸುದ್ದಿ ಹಬ್ಬಿಸಿದರು. ಸೆಂಟ್ ಥಾಮಸ್ ಎಂದೂ ತಮ್ಮದೆಂದು ಭಾವಿಸಿದ ಪೋರ್ಚುಗೀಸರು ಹಾರಾಡ ಲಾರಂಭಿಸಿದರು. ಆದರೆ ಅವರೆಲ್ಲರಿಂದ ಏನೂ ತೊಂದರೆಯಾಗಲಿಲ್ಲ. ಆದದ್ದು ಗೋಲ್ಕೊಂಡಾ ರಾಜನಿಂದ. ಆತ ತನ್ನ ಕಡೆಯ ಶೂರ ಸೇನಾಧಿಪತಿಗಳ ದಂಡ ನಾಯಕತ್ವದಲ್ಲಿ ೫೦,೦೦೦ ಸೈನ್ಯ ಕಳುಹಿಸಿಕೊಟ್ಟ. ಆ ಸೈನ್ಯ ಬಂದು ಮದ್ರಾಸ್ ಬಳಿ ಬೀಡುಬಿಟ್ಟಿತು. ಇಷ್ಟು ದೊಡ್ಡ ಸೈನ್ಯ ಗೋಲ್ಕೊಂಡಾದಿಂದ ಸಾಗಿಬರುವಾಗ ಅದನ್ನು ನೋಡಲು ಉದ್ದಕ್ಕೂ ಜನ ಸೇರಿದ್ದರು. ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಮದ್ರಾಸಿನಲ್ಲಿದ್ದ ಇಂಗ್ಲಿಷರು ಮೂರರ ಕಡೆ ಸೇರಿಕೊಂಡರು. ಸೆಂಟ್ ಥೋಮಿಗೆ ಹೋಗುವ ಆಹಾರ ಸಾಮಗ್ರಿಗಳನ್ನು ಸಾಮಾನು ಸರಂಜಾಮುಗಳನ್ನೂ ತಡೆಹಿಡಿದರು. ಕೊನೆಗೆ ಮದ್ರಾಸಿನ ಸುತ್ತಮುತ್ತೆಲ್ಲ ಬೀಡುಬಿಟ್ಟಿದ್ದ ಮೂರ್ ಸೈನ್ಯ ಸೆಂಟ್ ಥೋಮಿನ ಮೇಲೆ ಧಾಳಿ ಆರಂಭಿಸಿತು. ಕೇವಲ ೩೦೦ ಜನ ಫ್ರೆಂಚರು ಸೆಂಟ್ ಥೋಮನ್ನು ವಶಪಡಿಸಿಕೊಂಡಿದ್ದರು. ಈಗ ೫೦,೦೦೦ ಸೈನಿಕರನ್ನೂ ದೊಡ್ಡ ದೊಡ್ಡ ಫಿರಂಗಿ ಗಳನ್ನೂ ಎಲ್ಲೆಲ್ಲೂ ಕಂಡುಬರುತ್ತಿದ್ದ ಆನೆ, ಕುದುರೆ, ಒಂಟೆ, ಎತ್ತು ಕತ್ತೆಗಳ ಸೈನ್ಯವನ್ನೂ ಎದುರಿಸಬೇಕಾಯಿತು.

ಆದರೆ ನಮ್ಮ ಫ್ರೆಂಚರು ಧೈರ್ಯಗೆಡಲಿಲ್ಲ. ತಮ್ಮ ಸಾಹಸ ತೋರಿಸಿಯೇ ಬಿಡುತ್ತೇವೆಂದು ನಿರ್ಧಾರ ಮಾಡಿದರು. ಸಾಗರದೋಪಾದಿಯಲ್ಲಿ ಬೀಡುಬಿಟ್ಟಿದ್ದ

ಮೂರರ ಇಡೀ ಸೈನ್ಯವನ್ನು ಎತ್ತರವಾದ ಸ್ಥಳದಲ್ಲಿ ನಿಂತಿದ್ದ ತನ್ನ ಸೈನ್ಯಕ್ಕೆ ತೋರಿಸಿ ನಮ್ಮ ವೈಸ್‌ರಾಯ್ ತನ್ನವರನ್ನೂ ತನ್ನ ದೇಶವನ್ನೂ ಹೊಗಳಿದ. ಹೆದರಬೇಡಿ, ನಿಮ್ಮ ಸಾಹಸದ ಮುಂದೆ ಅವರೆಲ್ಲ ಹುಲುಮನುಜರು ಎಂದು ಅವರನ್ನು ಹುರಿದುಂಬಿಸಿದ. ಎದೆಗೆಡಬೇಡಿ. ಮುನ್ನುಗ್ಗಿ, ವಿಜಯ ನಮ್ಮದು ಎಂದು ವೀರಾವೇಶದಿಂದ ನುಡಿದ. ಫ್ರೆಂಚ್ ಸೈನಿಕರು ಅಮಿತ ಉತ್ಸಾಹ ತೋರಿಸಿದರು. ನಾವು ಎಂತಹ ಹೋರಾಟಕ್ಕೂ ಸಿದ್ಧ, ಇಗೋ ನಾವು ತಯಾರಾಗಿದ್ದೇವೆ ಎಂದು ಒಕ್ಕೊರಲಿನಿಂದ ಘೋಷಿಸಿದರು.

ಯುದ್ಧ ಆರಂಭವಾಯಿತು. ಫ್ರೆಂಚರು ಪೋರ್ಟ್ ರಾಯಲ್ ಕೋಟೆಯೊಳಗೆ. ಮೂರರು ಹೊರಗೆ. ಕೋಟೆಯೆಂದರೆ ಸಾಮಾನ್ಯ ಕೋಟೆಯಲ್ಲ. ಇಪ್ಪತ್ತು ಅಡಿ ದಪ್ಪದ ಗೋಡೆ. ಅದನ್ನು ಗೆಯ್ದ ಭಾರಿ ಕಲ್ಲುಗಳಿಂದ ಗಾರೆಯಲ್ಲಿ ಕಟ್ಟಿದ್ದರು. ಕೋಟೆಯ ದ್ವಾರಕ್ಕೆ ಎರಡು ಬಾಗಿಲುಗಳಿದ್ದವು. ಎಂತಹ ಶಕ್ತಿಯೂ ಅವನ್ನು ಮುರಿಯಲು ಸಾಧ್ಯವಿರಲಿಲ್ಲ. ಈ ಕೋಟೆಯೊಳಗೆ ಸೇರಿದ್ದ ಫ್ರೆಂಚರು ಹೊರಗೆ ಬಂದು ಯುದ್ಧ ಮಾಡಲಾರರೆಂದು ಮೂರರು ಭಾವಿಸಿದ್ದರು. ಆದರೆ ನಮ್ಮ ಧೀರ ವೈಸ್‌ರಾಯ್ ಹಗಲೂ ರಾತ್ರಿ ಕೆಲವು ಸೈನಿಕರ ಸಮೇತ ಕೋಟೆಯಿಂದ ಹೊರಗೆ ಹೋಗಿ ಸಣ್ಣಪುಟ್ಟ ಯುದ್ಧಮಾಡಿ ಶತ್ರು ಸೈನ್ಯದ ಅನೇಕ ಜನರನ್ನು ಕೊಂದು ಅವರ ಪಾಳೆಯದಲ್ಲಿ ಭೀತಿ ಹುಟ್ಟಿಸಿ ಹಿಂದಿರುಗುತ್ತಿದ್ದ. ಶತ್ರುಗಳು ತಮ್ಮ ಸುತ್ತ ಭಾರಿ ಭಾರಿ ಕಂದಕಗಳನ್ನು ಅಗೆದು ಅದರಲ್ಲಿ ರಕ್ಷಣೆ ಪಡೆದು ಫಿರಂಗಿಗಳನ್ನು ಸಜ್ಜುಗೊಳಿಸುತ್ತಿದ್ದರು. ಕೋಟೆಯ ಗೋಡೆಯನ್ನು ಸಿಡಿಸಲು ಒಳಗೊಳಗೇ ಸುರಂಗಮಾರ್ಗಗಳನ್ನು ಮಾಡುತ್ತಿದ್ದರು. ಇವನ್ನೆಲ್ಲ ಪತ್ತೆ ಹಚ್ಚಿದ ವೈಸ್‌ರಾಯ್ ಅವುಗಳನ್ನು ನಾಶಮಾಡಲೆತ್ನಿಸಿದ. ಹೀಗೆ ಹಲವಾರು ತಿಂಗಳು ನಡೆದ ಯುದ್ಧದಲ್ಲಿ ಮೂರರ ಕಡೆ ಸಾವಿರಾರು ಜನರು ಸತ್ತರು.

ಆದರೆ ಸೆಂಟ್ ಥೋಮ್‌ನಲ್ಲಿ ಆಹಾರದ ಕೊರತೆ ಹೆಚ್ಚಾಯಿತು. ಅದಕ್ಕೆ ಬರುವ ಮಾರ್ಗಗಳನ್ನೆಲ್ಲಾ ಶತ್ರುಗಳು ಮುಚ್ಚಿಬಿಟ್ಟಿದ್ದರು. ಟ್ರಾಂಕೋಬಾರ್, ಪೋರ್ಟ್ ನೋವೋ ಮುಂತಾದ ತೀರಪಟ್ಟಣಗಳಿಂದ ಆಹಾರ ಸಾಮಗ್ರಿಗಳನ್ನು ಹಡುಗುಗಳಲ್ಲಿ ತರಿಸುವ ಪ್ರಯತ್ನ ತಕ್ಕಮಟ್ಟಿಗೆ ಫಲ ಕೊಟ್ಟಿತು. ಆದರೆ ಹಡಗುಗಳಲ್ಲಿ ಹೋದ ಫ್ರೆಂಚರು ತಮ್ಮ ದುರ್ನಡತೆ ಬಿಡಲಿಲ್ಲ. ಫ್ರೆಂಚ್ ರಾಷ್ಟ್ರಕ್ಕೇ ಕೆಟ್ಟ ಹೆಸರು ತಂದರು. ಅನೇಕರು ಫ್ರೆಂಚ್ ಸೈನ್ಯ ತೊರೆದು ಎಲ್ಲೆಲ್ಲೋ ಹೊರಟುಹೋದರು. ಕೆಲವರು ಕ್ರೈಸ್ತಮತ ತ್ಯಜಿಸಿ ಮೂರರಾದರು.

ಇತ್ತ ಕಾರೋನ್ ಅವರು ತಾವು ಫ್ರಾನ್ಸಿಗೆ ಹೋಗಿ ಅಲ್ಲಿಂದ ಹಣವನ್ನೂ ಆಹಾರಸಾಮಗ್ರಿಗಳನ್ನೂ ತರುವುದಾಗಿ ಹೇಳಿ ಒಂದು ಹಡಗಿನಲ್ಲಿ ಹೊರಟರು. ತಮ್ಮ ಚಿನ್ನ ಬೆಳ್ಳಿಗಳನ್ನೂ ಹೇರಳವಾದ ತಟ್ಟೆ ಬಟ್ಟಲುಗಳನ್ನೂ ಅನೇಕ ಸಾಮಾನು ಸರಕುಗಳನ್ನೂ ಹಡಗಿನಲ್ಲಿ ತುಂಬಿಕೊಂಡರು. ಆದರೆ ದಾರಿಯಲ್ಲಿ ಕೊಲಂಬೋದಲ್ಲಿ ಡಚ್ಚರ ಕೈಗೆ ಸಿಕ್ಕಿ ಎಲ್ಲವನ್ನೂ ಕಳೆದುಕೊಂಡರು. ಇನ್ನೇನು ಯೂರೋಪು ಮುಟ್ಟಬೇಕು, ಆಗ ಲಿಸ್ಬನ್ ಬಳಿ ಅವರು ತಮ್ಮ ಗತಿ ಕಂಡರು.

ವೈಸ್‌ರಾಯ್ ಧೈರ್ಯಗೆಡದೆ ತನ್ನ ಯುದ್ಧ ಮುಂದುವರಿಸಿದರು. ಸ್ಥಳದ ಜನರು ಫ್ರೆಂಚರ ಸಾಹಸಗಳನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ತಮ್ಮ ಕೈಲಾದ ಸಹಾಯ ಮಾಡಲು ನಿರ್ಧರಿಸಿದರು. ಮದ್ರಾಸಿನಿಂದ ಆಹಾರ ಸಾಮಗ್ರಿಗಳನ್ನು ಒದಗಿಸಿದರು. ಸಬಲರಾದ ಗಂಡಸರಂತೆ ಧೈರ್ಯ ಮಾಡಿ ಪ್ರಾಣ ಕೊಟ್ಟು ಫ್ರೆಂಚರಿಗೆ ಸಹಾಯ ಮಾಡಲಾರದ ಅಬಲೆಯರ ಪ್ರೇಮ ಮಾಡಿದ ಕೆಲಸ ಮೆಚ್ಚುವಂತಿತ್ತು. ಶಾಂತಿಯಲ್ಲಾಗಲೀ ಸಮರದಲ್ಲಾಗಲೀ ಪ್ರೇಮ ತನ್ನ ಕಾರುಬಾರು ನಡೆಸಿಯೇ ನಡೆಸುತ್ತದಷ್ಟೆ. ಸೆಂಟ್ ಥೋಮನ್ನು ಆಕ್ರಮಿಸಿಕೊಂಡ ಫ್ರೆಂಚರಿಗೆ ಮೂರರ ಮೇಲೆ ಯುದ್ಧ ಆರಂಭವಾಗುವವರೆಗೆ ಎರಡು ತಿಂಗಳು ಕೊಂಚ ಬಿಡುವು ಸಿಕ್ಕಿತು. ಅವರು ದಿನವೆಲ್ಲಾ ಕೆಲಸ ಮಾಡಿ ಸಂಜೆ ವಿಹಾರಕ್ಕೆ ಸೆಂಟ್ ಥೋಮ್ ಹಾಗೂ ಮದ್ರಾಸಿನ ಆಸುಪಾಸಿನಲ್ಲಿ ಅಡ್ಡಾಡಲು ಹೋಗುತ್ತಿದ್ದರು. ಪೋರ್ಚುಗೀಸ್ ಮತ್ತು ಕ್ರೈಸ್ತ ಹೆಂಗಸರು ಬಿಳಿಯ ಕ್ರೈಸ್ತರಿಗೆ ಮನಸೋತು ಅವರಿಗೆ ಬೇಕಾದ ಸುಖಸಂತೋಷ ಗಳನ್ನು ಒದಗಿಸಿದರು. ಒಬ್ಬೊಬ್ಬಳು ಇಬ್ಬರು ಮೂವರು ಬಿಳಿಯ ತೊಗಲಿನ ಫ್ರೆಂಚರ ಗೆಳೆತನ ಗಿಟ್ಟಿಸಿಕೊಂಡಳು. ಕೊಡೋದು ಕಾಸು ಕೋಣೆ ತುಂಬ ಹಾಸು ಎನ್ನುವ ಹಲ್ಕಾ ಪೋರ್ಚುಗೀಸರ ಸಹವಾಸಕ್ಕಿಂತ ಈ ಪ್ರೀತಿವಿಶ್ವಾಸದ ಫ್ರೆಂಚರ ಸಹವಾಸ ಹಿತವೆನಿಸಿತು. ಹೀಗಾಗಿ ನಮ್ಮ ಅನೇಕ ಫ್ರೆಂಚರಿಗೆ ಆಳುಕಾಳುಗಳೂ ಅಡುಗೆಯವರೂ ಮೇಲಾಗಿ ಮುದ್ದು ಲಲನೆಯರ ಸುಖ ಸಹವಾಸವೂ ದೊರಕಿದವು. ಇನ್ನು ಹಣಕ್ಕೇನೂ ಕೊರತೆ ಇರಲಿಲ್ಲ. ವೈಸ್‌ರಾಯನ್ನು ಮೆಚ್ಚಿಸಿದರೆ ಸಾಕು ಕೇಳಿದಷ್ಟು ಕೊಡುತ್ತಿದ್ದರು. ಆದರೆ ಮೂರರ ಸೈನ್ಯವು ಬಂದ ಮೇಲೆ ಅವರನ್ನೆಲ್ಲಾ ಊರಿನಿಂದ ಹೊರಗಟ್ಟಿಬಿಟ್ಟರು. ಆಗ ಲಲನೆಯರ ಅಳು ದುಃಖ ಕಣ್ಣೀರು ಹೇಳತೀರದು.

ಆದರೆ ಪ್ರೇಮಕ್ಕೆ ಕೋಟೆಕೊತ್ತಲಗಳು ಅಡ್ಡ ಬಂದಾವೆ! ಪ್ರೇಯಸಿಯರು ತಮ್ಮ ವಿರಹತಾಪ ತಡೆಯಲಾರದಾದರು. ಇಂಗ್ಲಿಷರು ಫ್ರೆಂಚರಿಗೆ ಆಹಾರ ಸಾಮಗ್ರಿ ಗಳನ್ನು ಒದಗಿಸದೇಹೋದುದನ್ನು ಕಂಡ. ಅವರು ಏನೆಲ್ಲಾ ಉಪಾಯಗಳಿಂದ ಅವನ್ನು ತಮ್ಮ ಪ್ರಿಯರಿಗೆ ಒದಗಿಸುವ ಸನ್ನಾಹ ಹೂಡಿದರು. ಮದ್ದುಗುಂಡುಗಳು ಹಾರಾಡು ತ್ತಿದ್ದರೂ ಅದರೊಳಗೆ ನುಸುಳಿಕೊಂಡು ಹೋಗುತ್ತಿತ್ತು ಈ ಪ್ರೇಯಸಿಯರ ಪ್ರೇಮ. ಎಂತಹ ಬಲವಾದ ಕಾವಲೂ ಇವರಿಗೆ ಅಡ್ಡಿಯಾಗಲಿಲ್ಲ. ಏನೇನೊ ಉಪಾಯಗಳಿಂದ ಬಗೆಬಗೆಯ ತಿಂಡಿ ತೀರ್ಥಗಳನ್ನು ತಮ್ಮ ಪ್ರಿಯರಿಗೆ ಮುಟ್ಟಿಸುತ್ತಿದ್ದರು. ಕೆಲವರು ಸೈನಿಕರಂತೆ ಉಡುಪು ಧರಿಸಿ ಕತ್ತಿ ಹಿಡಿದು ಶತ್ರುಸೈನ್ಯದಲ್ಲಿ ಸೇರಿಕೊಂಡು ಹೇಗೋ ಫ್ರೆಂಚರಿಗೆ ಆಹಾರ ಸಾಮಗ್ರಿಗಳನ್ನು ಒದಗಿಸಿದರು. 'ಕಟಮರನ್' ಎಂಬ ತೆಪ್ಪಗಳ ಮೇಲೆ ಕುಳಿತು ಕೇವಲ ತಮ್ಮ ಪ್ರೇಮದ ಹರಿಗೋಲು ಮತ್ತು ಹಾಯಿಪಟಗಳಿಂದ ಅವುಗಳನ್ನು ನಡೆಸಿ ಸಮುದ್ರದ ಕಡೆಯಿಂದ ಆಹಾರ ಸಾಮಗ್ರಿಗಳನ್ನು ಒದಗಿಸಿದರು. ನಂಬಿಕಸ್ಥರ ಮೂಲಕ ಅವನ್ನು ಒಳಗೆ ಕಳುಹಿಸಿ ತಮ್ಮ ಪ್ರಿಯರಿಂದ ಪ್ರೇಮದ ಪತ್ರಗಳನ್ನು ಪಡೆಯುತ್ತಿದ್ದರು. ಹೀಗೆ ಮುತ್ತಿಗೆಗೆ ಒಳಗಾದ ಫ್ರೆಂಚರಿಗೆ ಪ್ರೇಮ

ಒದಗಿಸಿದ್ದು ಒಂದಲ್ಲ ಎರಡಲ್ಲ. ಕುಡಿಯಲು ಮದ್ಯ, ತಿನ್ನಲು ರೊಟ್ಟಿ ಅನ್ನ ಕೋಳಿ ಹಂದಿ ತೊಡಲು ಬಟ್ಟೆಬರೆ ಮತ್ತು ಕೋವಿಗೆ ಮದ್ದುಗುಂಡುಗಳನ್ನು ಒದಗಿಸಿದರು. ಇಷ್ಟೇ ಅಲ್ಲ, ಶತ್ರುಗಳ ಬಗ್ಗೆ ಗುಪ್ತ ವರದಿಗಳನ್ನು ಮದ್ರಾಸಿನ ಹೆಂಗಸರು ಒದಗಿಸಿದರು. ಅತ್ತ ಮೂರರಿಗೆ ಗೋಲ್ಕೊಂಡಾದಿಂದ ಪ್ರತಿನಿತ್ಯ ಬೇಕಾದ್ದೆಲ್ಲ ಬರುತ್ತಿದ್ದವು. ಏನೇ ಆಗಲಿ ಸೆಂಟ್ ಥೋಮಸ್ಸನ್ನು ವಶಪಡಿಸಿಕೊಳ್ಳಬೇಕೆಂಬ ಕಟ್ಟಾಜ್ಞೆಗಳೂ ಬರುತ್ತಿದ್ದವು. ಮೂರರು ಬಹು ಶ್ರಮವಹಿಸಿ ಅಗಳುಗಳನ್ನು ಅಗೆದರು. ಬುದ್ಧಿವಂತರಾದ ಇಂಜಿನಿಯರುಗಳು ಕೋಟೆಯ ಗೋಡೆಯಷ್ಟು ಎತ್ತರದ ಮರೆಗೋಡೆಗಳನ್ನು ಕಟ್ಟಿದರು. ಅವೆಷ್ಟು ಭದ್ರವಾಗಿದ್ದುವೆಂದರೆ ನಮ್ಮ ಫಿರಂಗಿಗಳು ಅವನ್ನು ಭೇದಿಸಲು ಸಾಧ್ಯವಾಗುತ್ತಿರಲಿಲ್ಲ. ಮರದ ದಸಿಗಳನ್ನು ನೆಟ್ಟು, ಕೊಂಬೆರೆಂಬೆಗಳನ್ನು ಅವುಗಳಿಗೆ ಹೆಣೆದು, ಮಣ್ಣಿನಲ್ಲಿ ಕಲೆಸಿದ ಹುಲ್ಲನ್ನು ಮೆರೆದು ಹನ್ನೆರಡು ಅಡಿ ದಪ್ಪದ ಗೋಡೆಗಳನ್ನು ನಿರ್ಮಿಸಿದರು. ಬಿಸಿಲಿನಲ್ಲಿ ಒಣಗಿದ ಮೇಲೆ ಗೋಡೆ ಕಲ್ಲಿಗಿಂತ ಹೆಚ್ಚು ಗಟ್ಟಿಯಾಗುತ್ತಿತ್ತು. ಇವನ್ನು ನಾಶಪಡಿಸಲು ನಮ್ಮವರು ಶತಪ್ರಯತ್ನ ಮಾಡಿದರು. ಶತ್ರುಗಳ ಕಡೆ ಸಾವುನೋವುಗಳು ಹೆಚ್ಚಿದುವು. ಕೋಟೆಯನ್ನು ವಶಪಡಿಸಿಕೊಳ್ಳುವ ಸಾಹಸ ಬಿಟ್ಟುಬಿಡಬೇಕೆಂದು ಒಮ್ಮೊಮ್ಮೆ ಶತ್ರುಗಳಿಗೆ ಅನಿಸುತ್ತಿತ್ತು. ಆದರೆ ಯಾವುದೂ ಕೊನೆಗಾಣದೆ ದಿನ ಕಳೆಯುತ್ತಾ ಹೋದವು. ನಮ್ಮ ಕಡೆಯೂ ಅನೇಕ ಸಾವುನೋವುಗಳಾದವು. ನಮ್ಮ ವೈಸ್‌ರಾಯಿಗೂ ಸಹ ಹಲವಾರು ಸಲ ಕತ್ತಿಯ ಪೆಟ್ಟೂ ಗುಂಡಿನ ಏಟುಗಳೂ ಬಿದ್ದವು. ಆದರೂ ಬದುಕಿದರು. ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಓಡಾಡುತ್ತಾ ತನ್ನ ಕಡೆಯವರನ್ನು ಹುರಿದುಂಬಿಸುತ್ತಾ ಕೋಟೆಯ ರಕ್ಷಣೆಯಲ್ಲಿ ತೊಡಗಿದರು. ದಿನವೂ ನಡೆಯುತ್ತಿದ್ದ ಈ ಯುದ್ಧದಲ್ಲಿ ಪೋರ್ಚುಗೀಸರ ಕೈ ಮೇಲಾಗುತ್ತಿದ್ದುದನ್ನು ಕಂಡ ಸ್ಥಳದ ಜನ ದೇವರೇ ನಮ್ಮ ಕಡೆ ಇದ್ದಾನೆಂದು ಹೇಳಲಾರಂಭಿಸಿದರು.

ಆದರೆ ಶತ್ರುವಿನ ಧಾಳಿ ಕುಗ್ಗಲಿಲ್ಲ. ಕೋಟೆಗೆ ತೀರಾ ಹತ್ತಿರದವರೆಗೂ ಬಂದು ೧೨೦ ಪೌಂಡ್ ತೂಕದ ಫಿರಂಗಿ ಗುಂಡುಗಳನ್ನು ಹಾರಿಸಲಾರಂಭಿಸಿದರು. ಅಷ್ಟು ಭಾರಿ ಗುಂಡುಗಳು ಕೋಟೆಯೊಳಗೆ ಬಿದ್ದು ಮನೆಮಠಗಳಿಗೆಲ್ಲಾ ಮಾಡಬಾರದ ಅನಾಹುತ ಮಾಡಿದವು. ಕೋಟೆಯ ಮೇಲೆ ಒಮ್ಮೆಯೇ ಧಾಳಿ ಮಾಡುವ ಸನ್ನಾಹದಲ್ಲಿ ಶತ್ರುಗಳು ತೊಡಗಿದ್ದಾರೆಂಬುದು ಸ್ಪಷ್ಟವಾಯಿತು. ಏಣಿಗಳ ಸಹಾಯದಿಂದ ಕೋಟೆಗಳನ್ನು ಹತ್ತಲು ಪ್ರಯತ್ನ ನಡೆಯಿತು. ಅಲ್ಲದೆ ನಮ್ಮ ಕಡೆ ಮದ್ದುಗುಂಡುಗಳು ಕಡಿಮೆಯಾಗುತ್ತಾ ಬಂದವು. ಆದರೆ ಬೆರಳೆಣಿಕೆಯಷ್ಟಿದ್ದ ನಮ್ಮ ಸೈನಿಕರ ಧೈರ್ಯ ಸಾಹಸಗಳು ಶತ್ರುಗಳ ಎದೆಗೆಡಿಸಿದವು. ಈ ಮಧ್ಯೆ ಶಾಂತಿ ಸಂಧಾನದ ಮಾತುಕತೆಗಳೂ ನಡೆದವು. ಆದರೆ ಅವು ಫಲಪ್ರದವಾಗಲಿಲ್ಲ. ಒಬ್ಬರ ಮಾತಿನಲ್ಲಿ ಇನ್ನೊಬ್ಬರಿಗೆ ನಂಬಿಕೆ ಬರಲಿಲ್ಲ. ಫ್ರಾನ್ಸ್‌ನಿಂದ ಭಾರಿ ಸೈನ್ಯ ಬರುತ್ತಿದೆ ಎಂಬ ಸುದ್ದಿ ಶತ್ರುಗಳ ಎದೆಯಲ್ಲಿ ದಿಗಿಲು

ಹುಟ್ಟಿಸಿತು. ಹೊಸ ಸೈನ್ಯ ಬಂದರೆ ಗೋಲ್ಕೊಂಡಾ ಸಿಂಹಾಸನವೇ ಅವರ ಕೈಗೆ ಹೋಗುವುದೆಂಬ ಭಾವನೆ ಉಂಟಾಯಿತು. ಮತ್ತೆ ರಾಜಿ ಕಬೂಲಿ ಮಾತುಕತೆಗಳು ಆರಂಭವಾದವು. ಗೋಲ್ಕೊಂಡಾ ರಾಜನೂ ಕಬೂಲಿಗೆ ಒಪ್ಪುವ ಸಂಭವ ಇತ್ತು. ಆದರೆ ರಾಜ್ಯದ ಪ್ರಧಾನಮಂತ್ರಿ ಹಾಗೂ ದಂಡನಾಯಕನಾದ ನವಾಬ ಇದನ್ನು ವಿರೋಧಿಸಿದ. ಸೆಂಟ್ ಥೋಮ್‌ನಂತಹ ಬಹು ಉಪಯುಕ್ತ ಸ್ಥಳವನ್ನು ಫ್ರೆಂಚರಿಗೆ ಬಿಟ್ಟುಕೊಡಬಾರದೆಂದು ಆತ ಹೇಳಿ ರಾಜನ ಮನಸ್ಸನ್ನು ಬದಲಾಯಿಸಿದ. ಯುದ್ಧ ಮುಂದುವರಿಯಬೇಕೆಂದಾಯಿತು. ಇಡೀ ಗೋಲ್ಕೊಂಡಾ ರಾಜ್ಯ ನಮ್ಮ ಫ್ರೆಂಚರನ್ನು ನದೆಬಡಿಯಬೇಕೆಂದು ಸಿದ್ಧವಾಯಿತು. ಈ ಮಧ್ಯೆ ಗೋಲ್ಕೊಂಡಾ ರಾಜನು ಕಾಲವಾದನು. ಅವನ ಕಿರಿಯ ಮಗ ಸಿಂಹಾಸನವನ್ನೇರಿ ರಾಜ್ಯ ಆಳಲಾರಂಭಿಸಿದ. ಆತನಿಗೂ ಆಸೆ ಸೆಂಟ್ ಥೋಮನ್ನು ಗೆದ್ದುಕೊಳ್ಳಬೇಕು ಎಂದು. ಕೋಟೆಯ ಮೇಲೆ ಭಾರಿ ಧಾಳಿ ಆರಂಭವಾಯಿತು. ನಮ್ಮ ವೈಸ್‌ರಾಯ್ ಧೈರ್ಯದಿಂದ ಶತ್ರುಗಳನ್ನು ಹಿಮ್ಮೆಟ್ಟಿಸಿದ. ಅಷ್ಟೇ ಅಲ್ಲ, ಶತ್ರು ಪಾಳೆಯವನ್ನು ಹೊಕ್ಕು ಅವರ ಎದೆಗೆಡಿಸಿದ. ಶತ್ರುಗಳ ಸಾವಿರಾರು ಪ್ರಾಣಗಳು ಹತವಾದವು. ಆ ಕಡೆಯ ಮಂಡಾಲ ನಾಯಕನೂ ಹತ ವಾದನು. ನಾಯಕನ ಮರಣದಿಂದ ಶತ್ರುಸೈನ್ಯ ದಿಕ್ಕೆಟ್ಟಿತು. ಈ ಸುದ್ದಿ ಗೋಲ್ಕೊಂಡಾ ತಲುಪಿತು. ಯುದ್ಧ ನಡೆಯಲೇಬೇಕೆಂದು ಹಟ ಹಿಡಿದ ಪ್ರಧಾನಮಂತ್ರಿಯಾದ ನವಾಬನನ್ನು ಬಂಧಿಸಿ ಸೆರೆಮನೆಯಲ್ಲಿ ಇಡಲಾಯಿತು. ಕೋಟೆಯ ಸುತ್ತಮುತ್ತ ಇದ್ದ ಶತ್ರುಸೈನ್ಯ ಮೂರು ಹರಿದಾರಿ ಹಿಂದಕ್ಕೆ ಹೋಗಿ ಅಲ್ಲಿ ತನ್ನ ಪಾಳೆಯ ಹೂಡಿತು.

ಈಗ ಸೆಂಟ್ ಥೋಮ್‌ಗೆ ಹೋಗುವ ದಾರಿಗಳು ತೆರೆಯಲ್ಪಟ್ಟವು. ಆಹಾರ ಮುಂತಾದವು ಬರಲಾರಂಭಿಸಿದವು. ನಮ್ಮ ಫ್ರೆಂಚರು ಸಂಜೆ ಹೊತ್ತಿಗೆ ಮದ್ರಾಸಿಗೆ ಹೋಗಿ ಮತ್ತೆ ತಮ್ಮ ಆಮೋದ ವಿನೋದಗಳಲ್ಲಿ ತೊಡಗಿದರು. ಹೇರಳವಾಗಿ ಹಣ ವೆಚ್ಚ ಮಾಡಿದರು. ಕೈಯಲ್ಲಿದ್ದುದನ್ನೆಲ್ಲಾ ವೆಚ್ಚ ಮಾಡಿದ ನಮ್ಮವರು ತಮ್ಮ ಸೈನ್ಯವನ್ನೇ ಬಿಟ್ಟು ಮೂರರು ಇಂಗ್ಲಿಷರ ಕಡೆ ಸೇರಿಕೊಳ್ಳಲಾರಂಭಿಸಿದರು. ಫ್ರೆಂಚರ ಶಸ್ತ್ರಾಸ್ತ್ರಗಳು ಇಂಗ್ಲಿಷರ ಕೋಟೆ ಸೇರಿದವು.

ಆಗ ನಮ್ಮ ಫ್ರೆಂಚ್ ವೈಸ್‌ರಾಯ್ ಒಂದು ತಪ್ಪುಮಾಡಿಬಿಟ್ಟರು. ಫಾದರ್ ಎಫ್ರೈಮರ ಸಲಹೆಯಂತೆ ಮಸುಲಿಪಟ್ಟಣಕ್ಕೆ ಹೋಗಿ ಅಲ್ಲಿ ಮೂರ್ ಹಡಗುಗಳನ್ನು ವಶಪಡಿಸಿಕೊಳ್ಳುವ ಮನಸ್ಸು ಮಾಡಿದರು. ಆ ಹಡಗುಗಳ ತುಂಬ ಭಾರಿ ಹಣವೂ ಬೆಲೆಯಾದ ಸರಕುಗಳೂ ಇದ್ದುವು. ಕೊಂಚವೂ ಹಿಂದುಮುಂದು ನೋಡದೆ ವೈಸ್ ರಾಯ್ ಎರಡು ಹಡಗುಗಳನ್ನು ತೆಗೆದುಕೊಂಡು ಅಲ್ಲಿಗೆ ಹೊರಟ. ಸೆಂಟ್ ಥೋಮ್ ಕೋಟೆಯನ್ನು ರೆಬೆರ್ ಅವರ ವಶಕ್ಕೆ ಬಿಟ್ಟುಹೋದರು.

ಈ ಸ್ಥಿತಿ ಇತ್ತು, ನಾನು ಇಲ್ಲಿಗೆ ಬಂದಾಗ. ಗೌರ್ನರ್ ರೆಬೆರ್ ನನ್ನ ಆಗಮನದಿಂದ ಸಂತೋಷಗೊಂಡರು. ತಮ್ಮ ಮನೆಯಲ್ಲಿಯೇ ಒಂದು ಕೋಣೆಯನ್ನು

ನನಗೆ ಬಿಟ್ಟುಕೊಟ್ಟರು. ವೈಸ್‌ರಾಯರ ಆಗಮನಕ್ಕಾಗಿ ಕಾಯುತ್ತಾ ನಾನು ಇಲ್ಲಿ ತಂಗಿದೆ.

ಏಪ್ರಿಲ್ ೧೬ ಭಾನುವಾರ ನಾನು ಬಂದಿರುವ ಸಂಗತಿಯನ್ನೂ ಸೆಂಟ್ ಥೋಮಿನ ವಿದ್ಯಮಾನಗಳನ್ನೂ ಮಸುಲಿಪಟ್ಟಣದಲ್ಲಿದ್ದ ವೈಸ್‌ರಾಯ್‌ಗೆ ತಿಳಿಸಲು ಗೌರ್ನರ್ ಒಬ್ಬ ಚರಭಟನನ್ನು ಕಳುಹಿಸಿಕೊಟ್ಟರು. ಸಂಜೆ ನಮ್ಮವರು ಮೂರರಿಂದ ವಶಪಡಿಸಿಕೊಂಡಿದ್ದ ಕಂದರಗಳನ್ನು ಕಾಪುಗೋಡೆಗಳನ್ನು ನೋಡಲು ತಮ್ಮ ಜೊತೆ ಕರೆದುಕೊಂಡು ಹೋದರು. ನಮ್ಮ ಆಳುಗಳು ಅವುಗಳನ್ನು ಮುಚ್ಚುವ ಕೆಲಸದಲ್ಲಿ ತೊಡಗಿದ್ದರು. ಶತ್ರುವಿನ ಭಾರಿ ರಕ್ಷಣೆ ನೋಡಿ ನನಗೆ ಅಚ್ಚರಿಯಾಯಿತು. ದೇವರ ಕೃಪೆಯಿಲ್ಲದಿದ್ದರೆ ಇವನ್ನು ನಮ್ಮವರು ವಶಪಡಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ನಮ್ಮ ಫಿರಂಗಿ ಧಾಳಿಯಿಂದ ರಕ್ಷಣೆ ಪಡೆಯಲು ಅವರು ಏಳೆಂಟು ಸಾವಿರ ಕುದುರೆಗಳಿಗಾಗುವಷ್ಟು ಲಾಯಗಳನ್ನು ಕಟ್ಟಿದ್ದರು. ಅವರ ಕಾಪಿನ ಗೋಡೆಗಳಂತೂ ಬಹು ದಪ್ಪವಾಗಿದ್ದವು. ಅವನ್ನು ಹೇಗೆ ಕಟ್ಟಿದರೆಂಬುದೇ ನನಗೆ ಅರ್ಥವಾಗಲಿಲ್ಲ. ದಂಡಿನ ವಸತಿಗಾಗಿ ಕಟ್ಟಿದ ಪಾಳೆಯವು ಒಂದು ನಗರದಂತೆ ಕಂಡಿತು. ಅದರಲ್ಲಿ ಒಂದು ಲಕ್ಷ ಜನ ಸೈನಿಕರು ಇರಬಹುದಿತ್ತು. ಇದನ್ನೆಲ್ಲಾ ನಾಶಪಡಿಸಲು ಎಷ್ಟು ಜನ ಮತ್ತು ಎಷ್ಟು ಹಣ ಬೇಕಾಗಿತ್ತು! ಅನೇಕ ಜನ ಬೆಳಗಿನಿಂದ ಸಂಜೆಯವರೆಗೆ ಎಡೆಬಿಡದೆ ಕೆಲಸದಲ್ಲಿ ತೊಡಗಿದರು.

ನಮಗೆ ಗೋಲ್ಕೊಂಡಾ ಮತ್ತು ಬಟೇವಿಯಾದಿಂದ ಪತ್ರಗಳು ಬಂದವು. ಮೊದಲನೆಯ ಪತ್ರದಲ್ಲಿ ಗೋಲ್ಕೊಂಡಾ ರಾಜ ನಮ್ಮ ಮೇಲಿನ ಧಾಳಿಗೆ ಹೊಸ ಸೈನ್ಯ ಸಿದ್ಧಪಡಿಸುತ್ತಿದ್ದಾನೆಂಬ ಸುದ್ದಿ ಇತ್ತು. ಬಟೇವಿಯಾದ ಪತ್ರದಲ್ಲಿ ಡಚ್ಚರು ನಮ್ಮನ್ನು ಸಮುದ್ರದ ಕಡೆಯಿಂದ ಸುತ್ತುಗಟ್ಟಲು ಭಾರಿ ನೌಕಾಪಡೆಯನ್ನು ಸಜ್ಜುಗೊಳಿಸುತ್ತಿರುವುದಾಗಿ ತಿಳಿಸಲಾಗಿತ್ತು. ಇದನ್ನೆಲ್ಲಾ ನಮ್ಮ ವೈಸ್‌ರಾಯಿಗೆ ತಿಳಿಸಿದೆವು. ನಾವೂ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದೆವು.

ಮೇ ಒಂಬತ್ತನೆಯ ತಾರೀಖು (ಇದಕ್ಕೆ ಹಿಂದಿನ ರಾತ್ರಿ) ನಮ್ಮ ಸೆಂಟ್ ಥೋಮ್ ಪಟ್ಟಣದಲ್ಲಿ ಇಡೀ ರಾತ್ರಿ ಭಾರಿ ಧೂಮ್ ಧಾಮ್ ಮಾಡಿ ನಮ್ಮ ವಿಜಯವನ್ನು ಆಚರಿಸಿದೆವು, ಶತ್ರುಗಳ ಎದೆ ಬಡಿಯುವಂತೆ.

ಅದೇ ದಿನ ನಾನು ಒಂದು ಪೋರ್ಚುಗೀಸ್ ಮದುವೆಗಾಗಿ ಮದ್ರಾಸಿಗೆ ಹೋದೆ. ಭಾರಿ ವಿಜೃಂಭಣೆಯಿಂದ ಮದುವೆ ನಡೆಯಿತು. ಇಂಗ್ಲಿಷ್ ಗೌರ್ನರ್ ಮತ್ತು ಶೆಟ್ಟಿ ಸರದಾರರುಗಳೆಲ್ಲ ಮದುವೆಗೆ ಬಂದಿದ್ದರು. ಗೋವಾದಿಂದ ಬಂದಿದ್ದ ಒಬ್ಬ ಪೋರ್ಚುಗೀಸ ತನ್ನ ಮಗಳನ್ನು ಇನ್ನೊಬ್ಬ ಪೋರ್ಚುಗೀಸನಿಗೆ ಕೊಟ್ಟು ಮದುವೆ. ಈ ಮದುವೆಯ ನಂತರ ಆ ಪೋರ್ಚುಗೀಸನು ಇಡೀ ನಾಡಿನಲ್ಲೆಲ್ಲಾ ಭಾರಿ ದೊಡ್ಡ ಮನುಷ್ಯನಂತೆ ಅಂದರೆ ಫಿದಾಲ್ಗೋನಂತೆ ಮೆರೆದ. ಇವನು ವಿಹಾರಕ್ಕಾಗಲೀ ಚರ್ಚಿ

ಗಾಗಲೀ ಹೋದರೆ ಅವನಿಗೂ ಅವನ ಪರಿವಾರಕ್ಕೂ ಮದರಾಸಿನ ಬೀದಿ ಹಿಡಿಸುತ್ತಿರ ಲಿಲ್ಲ. ಗೋವಾದಲ್ಲಿ ಯಾವುದಕ್ಕೂ ಗತಿಯಿಲ್ಲದ ಈತ ಸಮೃದ್ಧಿಯ ನಾಡಿನಲ್ಲಿ ಅದ್ದೂರಿಯಿಂದ ಇರಲಾರಂಭಿಸಿದ. ಅವನ ಜೀವನವೆಲ್ಲಾ ಕಾಮಕೇಳಿಯಲ್ಲಿ ಕಳೆಯು ತ್ತಿತ್ತು. ಹತ್ತು ಹನ್ನೆರಡು ಗುಲಾಮಗಿತ್ತಿಯರು ಅವನ ಮೈ ಕೈ ನೀವಿ ಮಲಗಿಸಬೇಕು. ಅಲ್ಲಿಯವರೆಗೆ ಅವನಿಗೆ ನಿದ್ದೆಯೇ ಬರುತ್ತಿರಲಿಲ್ಲ.

ಮೇ ೪ನೆಯ ತಾರೀಖು ಬೆರೋನ್ (Baron) ಅವರ ನಾಯಕತ್ವದಲ್ಲಿ ಸೂರತ್ತಿನಿಂದ ನಮ್ಮ ಮೂರು ಹಡಗುಗಳು ಬಂದವು. ಇದು ನಮಗೆ ಮತ್ತಷ್ಟು ಧೈರ್ಯ ಕೊಟ್ಟಿತು.

ಮಾರನೆಯ ದಿನ ನಾನು ಮದ್ರಾಸಿಗೆ ಹೋದೆ. ಬೊಂಬಾಯಿಯಲ್ಲಿದ್ದ ಇಂಗ್ಲಿಷರ ಗೌರ್ನರ್ ವಿಲಿಯಂ ಲಾಂಗ್‌ಹಾರನ್ ಅವರು ಬೆರೋನ್ ಮೂಲಕ ಮದ್ರಾಸಿನ ಗೌರ್ನರ್‌ಗೆ ಕೆಲವು ಕಾಗದ ಪತ್ರಗಳನ್ನು ಕಳುಹಿಸಿದ್ದರು. ಇವನ್ನು ಕೊಡಲು ನಾನು ಅವರನ್ನು ನೋಡಿದ್ದು. ಗೌರ್ನರ್ ನನ್ನನ್ನು ಇಡೀ ದಿನವೆಲ್ಲ ಇಟ್ಟುಕೊಂಡು ತುಂಬ ವಿಶ್ವಾಸದಿಂದ ಕಂಡರು. ಆದರೆ ನಮ್ಮ ಫ್ರೆಂಚರ ಬಗ್ಗೆ ಏನೇನೋ ದೂರು ಹೇಳಿದರು. ನಮ್ಮವರು ದಿನಾ ಮದ್ರಾಸಿಗೆ ಬಂದು ಮೂರರನ್ನೂ ಸ್ಥಳದ ಜನರನ್ನೂ ಪಿಯ್ಯಾಳಿಸುತ್ತಾರೆಂದು ಹೇಳಿದರು. ನಾನು ಅವನು ಹೇಳಿದ್ದನ್ನೆಲ್ಲಾ ಸಾವಧಾನವಾಗಿ ಕೇಳಿಕೊಂಡು ಹೊರಗೆ ಬಂದು ನಮ್ಮ ಹಡಗುಗಳು ಬಂದಿರುವ ಸಂಗತಿಯನ್ನೂ ಅದರಲ್ಲಿ ೧,೨೦೦ ಸೈನಿಕರು ಹೇರಳವಾದ ಹಣ ಹಾಗೂ ಶಸ್ತ್ರಾಸ್ತ್ರಗಳ ಸಮೇತ ಬಂದಿರುವುದನ್ನೂ ಪ್ರಕಟಿಸಿದೆ. ಈ ಪ್ರಚಾರವನ್ನು ಕೆಲವು ಪೋರ್ಚುಗೀಸ್ ಮಹಿಳೆಯರ ಮೂಲಕ ಮಾಡಿದೆ. ಯಾವ ಸುದ್ದಿಯನ್ನೇ ಆಗಲಿ ಊರಲ್ಲೆಲ್ಲಾ ಮೆರೆಸುವವರೆಂದರೆ ಇವರೇ ತಾನೆ! ಸುದ್ದಿ ಮದ್ರಾಸಿನಲ್ಲಿ ಕಾಳ್ಗಿಚ್ಚಿನಂತೆ ಹಬ್ಬಿತು. ನಾನು ಊರು ಬಿಡುವುದರೊಳಗೆ ಎಲ್ಲೆಲ್ಲೂ ಅದೇ ಸುದ್ದಿ.

ಸೆಂಟ್ ಥೋಮ್‌ನಲ್ಲಿ ದವಸಧಾನ್ಯಗಳ ಅಭಾವವಿತ್ತು. ಮುಂದೆ ನಡೆಯಲಿರುವ ಮುತ್ತಿಗೆ ವೇಳೆಗೆ ಅವು ಇಲ್ಲದೆ ಭಾರಿ ತೊಂದರೆಗೆ ಈಡಾಗಬಹುದೆಂದು ನಾನು ನಮ್ಮ ಗೌರ್ನರ್‌ಗೆ ಹೇಳಿದೆ. ನಿಜ, ನಮ್ಮಲ್ಲಿ ದಾಸ್ತಾನು ತುಂಬಾ ಕಡಿಮೆ ಇದೆ. ಆದರೆ ಮಸುಲಿ ಪಟ್ಟಣದಿಂದ ವೈಸ್‌ರಾಯ್ ಬರುವವರೆಗೂ ನಮ್ಮಲ್ಲಿರುವ ಸ್ವಲ್ಪ ಹಣವನ್ನು ದವಸಧಾನ್ಯಕ್ಕಾಗಿ ವೆಚ್ಚ ಮಾಡುವಂತಿಲ್ಲ ಎಂದರು. ನಾನು ಮದ್ರಾಸಿಗೆ ಹೋಗಿ ವರ್ತಕರನ್ನು ಕಂಡು ಖರೀದಿ ಮಾಡಿದ್ದ ಅಕ್ಕಿ ಗೋಧಿಯನ್ನು ಕೊಳ್ಳದೆ ನಿಲ್ಲಿಸಬೇಕಾಯಿತು.

ನನ್ನ ಆರೋಗ್ಯದೃಷ್ಟಿಯಿಂದ ನಾನು ಸೆಂಟ್ ಥೋಮ್‌ಗಿಂತ ಮದ್ರಾಸಿನಲ್ಲಿ ರುವುದು ಒಳ್ಳೆಯದೆಂದು ಭಾವಿಸಿ ಅಲ್ಲಿಗೆ ನನ್ನ ವಸತಿ ಬದಲಾಯಿಸಿದೆ. ಇಂಗ್ಲಿಷ್ ಗೌರ್ನರ್ ನನಗೊಂದು ಮನೆ ಕೊಡಿಸಿಕೊಟ್ಟರು. ಅತ್ತ ಮಸುಲಿಪಟ್ಟಣಕ್ಕೆ ಹೋದ ನಮ್ಮ ವೈಸ್‌ರಾಯ್ ಗತಿ ಏನಾಯಿತೆಂದು ತಿಳಿಯಲಿಲ್ಲ. ಈ ಮಧ್ಯೆ ಡಚ್ಚರ ಭಾರಿ

ನೌಕಾಪಡೆಯೊಂದು ಸಮುದ್ರದಲ್ಲಿ ಬಂದು ನಿಂತಿತು. ಎಲ್ಲೆಲ್ಲೂ ಅದರ ಮಾತೇ ಮಾತು. ಮೂರರೂ ಹಿಂದೂಗಳೂ ಇನ್ನಿತರ ಸ್ಥಳದ ಜನರೂ ಸಮುದ್ರತೀರಕ್ಕೆ ಓಡಿದರು, ಆ ನೌಕಾಪಡೆಯನ್ನು ನೋಡಲು. ನಾಲ್ಕು ಹರಿದಾರಿ ಉದ್ದದ ಸಮುದ್ರತೀರದಲ್ಲಿ ಎರಡು ಲಕ್ಷ ಜನ ಸೇರಿದರು, ಮುಂದೇನಾಗುವುದೆಂದು ನೋಡಲು. ಆದರೆ ಡಚ್ಚರು ಕೂಡಲೇ ತಮ್ಮ ಧಾಳಿ ಆರಂಭಿಸಲಿಲ್ಲ. ಗೋಲ್ಕೊಂಡಾ ರಾಜನೊಡನೆ ಸಂಧಾನ ನಡೆಸಿದ ನಂತರ ಮುಂದಿನ ಕ್ರಮ ಜರುಗಿಸುವ ಆಲೋಚನೆಯಲ್ಲಿದ್ದರು. ಇಷ್ಟೆಲ್ಲಾ ಸೆಂಟ್ ಥೋಮ್‌ನಲ್ಲಿ ನಡೆಯುತ್ತಿದ್ದರೂ ಅದು ಮಸುಲಿಪಟ್ಟಣಕ್ಕೆ ಹೋಗಿದ್ದ ವೈಸ್‌ರಾಯ್‌ಗೆ ತಿಳಿದಿರಲಿಲ್ಲ. ಜೂನ್ ಒಂದರಂದು ಇಲ್ಲಿಂದ ಹೊರಟ ಅವರಿಗೆ ಹೋದ ದಾರಿಗೆ ಸುಂಕ ಇಲ್ಲದಂತಾಗಿತ್ತು. ಅವರು ಬರುವುದನ್ನು ತಿಳಿದ ಮೂರರು ತಮ್ಮ ಹಡಗುಗಳಲ್ಲಿದ್ದುದನ್ನೆಲ್ಲಾ ಇಳಿಸಿ ಒಳನಾಡಿಗೆ ಸಾಗಿಸಿದ್ದರು. ಸಿಕ್ಕಿದ ಅಷ್ಟಿಷ್ಟನ್ನು ಸಾಗಿಸಿಕೊಂಡು ತಮ್ಮ ಎರಡು ಹಡಗುಗಳ ಜೊತೆಗೆ ಸೆರೆ ಹಿಡಿದ ಮತ್ತೆ ಕೆಲವು ಹಡಗುಗಳನ್ನು ತೆಗೆದುಕೊಂಡು ಬರುತ್ತಿದ್ದರು. ಆದರೆ ಜೂನ್ ೧೫ ಆದರೂ ಅವರು ಹಿಂದಿರುಗಲಿಲ್ಲ.

ಅಂತೂ ಕೊನೆಗೆ ಜೂನ್ ೨೦ ರಂದು ಒಂದು ಹಡಗು ಕಾಣಿಸಿತು. ಇದು ನಮ್ಮ ವೈಸ್‌ರಾಯ್ ಹಡಗು ಇರಲಾರದೆಂದು ನಮ್ಮ ಭಾವನೆ. ಅದು ಡಚ್ಚರ ಹಡಗಿರ ಬೇಕೆಂದೂ ಅವರ ಬೇರೆ ಬೇರೆ ಹಡಗುಗಳನ್ನು ಕೂಡಿಕೊಳ್ಳಲು ಬರುತ್ತಿರಬಹುದೆಂದೂ ನಾವು ಊಹಿಸಿದೆವು. ಆದರೆ ಆರು ಡಚ್ ಹಡಗುಗಳು ತಮ್ಮ ಹಾಯಿಪಟಗಳನ್ನು ಬಿಚ್ಚುತ್ತಿದ್ದುದನ್ನು ಕಂಡಾಗ ಎಲ್ಲರೂ ಸಮುದ್ರ ತೀರಕ್ಕೆ ಧಾವಿಸಿದರು. ಮೂರರೂ ಹಿಂದೂಗಳು ಕ್ರೈಸ್ತರೂ ಪರಿಯರೂ (Pariahs) ಪಲ್ಲಿಗಳೂ (Pallis) ಇಂಗ್ಲಿಷರೂ ಪೋರ್ಚುಗೀಸರೂ ಒಟ್ಟಿನಲ್ಲಿ ಎಲ್ಲ ಬಗೆಯ ಜನರೂ ಮಾಡುವ ಕೆಲಸ ಬಿಟ್ಟು ಮುಂದೆ ನಡೆಯಲಿರುವುದನ್ನು ಕಾಣಲು ಅನುಕೂಲವಾದ ಜಾಗಕ್ಕಾಗಿ ನುಗ್ಗಿ ಬಂದರು. ಮೂರು ಹರಿದಾರಿ ಉದ್ದದ ಇಡೀ ತೀರ ಜನಗಳಿಂದ ತುಂಬಿಹೋಗಿತ್ತು. ನಮ್ಮ ವೈಸ್‌ರಾಯನ್ನು ಆಗಲೇ ಸೆರೆಹಿಡಿದಿರುವುದಾಗಿಯೂ ಅವನಿಗೆ ಬಟೇವಿಯಾದಲ್ಲಿ ಒಳ್ಳೆ ಸೆರೆಮನೆ ಸಿದ್ಧಪಡಿಸಿರುವುದಾಗಿಯೂ ಡಚ್ಚರು ಸುಳ್ಳುಸುದ್ದಿ ಹರಡಿದ್ದರು. ಆದರೆ ಈಗ ಕಂಡುದೇನು? ಅದೇ ವೈಸ್‌ರಾಯ್ ಹಡಗಿನಲ್ಲಿ ಬರುತ್ತಿದ್ದರು. ಒಂದು ಹಡಗಿನ ಮೇಲೆ ತನ್ನ ಇಡೀ ಹಡಗುಪಡೆ ಬೀಳುವುದು ತನ್ನ ಘನತೆಗೆ ತಕ್ಕುದಲ್ಲವೆಂದು ಡಚ್ಚರ ನೌಕಾನಾಯಕ ರೈಕ್‌ಲೋಫ್ (Rijkloff) ಕೇವಲ ಆರು ಹಡಗುಗಳನ್ನು ಮಾತ್ರ ನಮ್ಮ ಹಡಗನ್ನು ಹಿಡಿಯಲು ಕಳುಹಿಸಿಕೊಟ್ಟ. ನೆರೆದ ಅಸಂಖ್ಯಾತ ಜನರಿಗೆ ತಮ್ಮ ಶಕ್ತಿ ಏನೆಂಬುದನ್ನು ತೋರಿಸಲು ಆ ದುರಹಂಕಾರದ ಹಾಗೂ ಬಿಂಕದ ಡಚ್ಚರು ಮಾಡಿದ ಯೋಜನೆ ಇದು. ಆದರೆ ನಮ್ಮ ಕೀರ್ತಿವೆತ್ತ ದೊರೆಯ ಧೀರ ವೈಸ್‌ರಾಯ್ ಏನು ಮಾಡಿದರು ಗೊತ್ತೆ? ಅವರಿಗೆ ಮೊದಮೊದಲು ತನ್ನ ಕಡೆಗೆ ಬರುತ್ತಿದ್ದ ಹಡಗುಗಳು ಯಾವೆಂದು ತಿಳಿಯಲಿಲ್ಲ. ಆಮೇಲೆ ಗೊತ್ತಾದಾಗ ಅವರು ತಮ್ಮ

ಶಕ್ತಿ ತೋರಿಸಲು ತೀರ್ಮಾನಿಸಿದರು. ತಮ್ಮ ನಾವಿಕರನ್ನು ಹುರಿದುಂಬಿಸಿ ಹೋರಾಟಕ್ಕೆ ಸಿದ್ಧರಾದರು. ಯಾವ ಅಡೆ ತಡೆಗಳೂ ಇಲ್ಲವೆಂದು ಭಾವಿಸಿ ಹಡಗುನಿಲ್ದಾಣದ ಕಡೆಗೆ ಧಾವಿಸಿದರು. ನಾನು ಇಂಗ್ಲಿಷ್ ಗೌರ್ನರನ ಜೊತೆ ಫೋರ್ಟ್ ಸೆಂಟ್ ಜಾರ್ಜ್ ಕೋಟೆಯ ಮೇಲೆ ಎತ್ತರದಲ್ಲಿ ಕುಳಿತು ಇದನ್ನೆಲ್ಲಾ ನೋಡುತ್ತಿದ್ದೆ. ನಾನು ನಮ್ಮ ವೈಸ್‌ರಾಯಿಯ ಧೈರ್ಯಸ್ಥೈರ್ಯಗಳನ್ನು ಹೊಗಳುತ್ತಿದ್ದೆ. ನೋಡುನೋಡುತ್ತಿದ್ದ ಹಾಗೆ ಡಚ್ಚರ ಹಡಗುಗಳು ನಮ್ಮ ಹಡಗನ್ನು ಸುತ್ತುವರಿದವು. ಆದರೆ ವೈಸ್‌ರಾಯ್ ಹಡಗಿನಿಂದ ಬಂದ ಗುಂಡುಗಳಿಂದ ಡಚ್ಚರ ಹಡಗುಗಳು ನುಚ್ಚುನೂರಾದವು. ಡಚ್ಚರ ಸೊಕ್ಕಡಗಿಸಿ ವೈಸ್‌ರಾಯ್ ಹಡಗು ಸೆಂಟ್ ಥೋಮ್ ಬಂದರನ್ನು ಸಮೀಪಿಸಿತು. ಹವೆ ಡಚ್ಚರಿಗೆ ಅನಾನುಕೂಲವಾಗಿತ್ತು. ರಾತ್ರಿ ಆಗುತ್ತಿತ್ತು. ಡಚ್ಚರ ಬೇರೆ ಹಡಗುಗಳು ನಮ್ಮ ಹಡಗಿನ ಮೇಲೆ ಎರಗುವ ಧೈರ್ಯ ಮಾಡಲಿಲ್ಲ.

ಮಾರನೆಯ ದಿನ ಫ್ರೆಂಚರ ವಿಜಯೋತ್ಸಾಹ. ಊರಿನವರೆಲ್ಲ ತಿಂದು ತೇಗಿ ಮೆರೆದಾಡಿದರು. ನೂರಾರು ಮೂಢನಂಬಿಕೆಗಳನ್ನುಳ್ಳ ಹಿಂದೂಗಳು ತಮ್ಮ ಜ್ಯೋತಿಷ್ಕರನ್ನು ಕೇಳಿದರು. ಫ್ರೆಂಚರೇ ಕೊನೆಗೆ ಗೆಲ್ಲುವುದೆಂದೂ ಡಚ್ಚರಿಗೆ ತಕ್ಕ ಶಾಸ್ತಿ ಆಗುವುದೆಂದೂ ಜ್ಯೋತಿಷ್ಕರು ಭವಿಷ್ಯ ನುಡಿದರು.

ಡಚ್ಚರನ್ನು ಕಂಗೆಡಿಸಿದ ವೈಸ್‌ರಾಯ್ ಮತ್ತೊಂದು ಕಷ್ಟದಲ್ಲಿ ಸಿಕ್ಕಿಕೊಂಡರು. ವಿರುದ್ಧವಾದ ಗಾಳಿ ಬೀಸಿದ್ದರಿಂದ ಅವರ ಹಡಗು ಮತ್ತೆ ಸಮುದ್ರಕ್ಕೆ ಒಯ್ಯಲ್ಪಟ್ಟಿತು. ಈ ಅವಕಾಶವನ್ನುಪಯೋಗಿಸಿಕೊಂಡು ವೈಸ್‌ರಾಯ್ ಇಡೀ ರಾತ್ರಿ ದಕ್ಷಿಣಕ್ಕೆ ಯಾನ ಮಾಡಿ ಪಾಂಡಿಚೆರಿಗೆ ಹೋದರು. ಅಲ್ಲಿಯ ಪಾಳೆಯಗಾರ ನಮ್ಮ ವೈಸ್‌ರಾಯನ್ನು ಗೌರವದಿಂದ ಕಂಡನು. ಅಲ್ಲಿಂದ ಸೆಂಟ್ ಥೋಮಿಗೆ ಬರುವುದು ಹೇಗೆಂದು ವೈಸ್‌ರಾಯ್ ಯೋಚಿಸುತ್ತಿರುವಾಗ ಮದ್ರಾಸಿನ ಸುತ್ತಮುತ್ತ ಇದ್ದ ಡಚ್ಚರಿಗೆ ಸುದ್ದಿ ಬಂದಿತು, ಇಂಗ್ಲಿಷರ ಒಂಬತ್ತು ಹಡಗುಗಳು ಮಸುಲಿಪಟ್ಟಣಕ್ಕೆ ಬಂದಿವೆ ಎಂದು. ವೈಸ್‌ರಾಯ್ ಹಡಗನ್ನು ಹಿಡಿಯುವ ಸನ್ನಾಹದಲ್ಲಿ ತಾವು ಇಂಗ್ಲಿಷರ ಹಡಗುಗಳನ್ನು ವಶಪಡಿಸಿಕೊಳ್ಳುವ ಸದವಕಾಶವನ್ನು ಕಳೆದುಕೊಂಡೆವೆಂದು ಡಚ್ಚರು ಕೈಕೈ ಹಿಸುಕಿಕೊಂಡರು. ಇರಲಿ, ಮೊದಲು ಫ್ರೆಂಚರ ವೈಸ್‌ರಾಯ್ ಹಡಗನ್ನು ಮೊದಲು ಹಿಡಿಯೋಣ ಎಂದು ಅದಕ್ಕಾಗಿ ಸೆಂಟ್ ಥೋಮ್ ತೀರದಲ್ಲಿ ಕಾದು ಕುಳಿತರು.

ಇತ್ತ ಸೆಂಟ್ ಥೋಮ್ ಪಟ್ಟಣದಲ್ಲಿ ಏನಾಯಿತೆಂದು ನೋಡೋಣ. ಜೂನ್ ೨೧ನೆಯ ತಾರೀಖು ಅಲ್ಲಿಯ ಫ್ರೆಂಚ್ ಸಾರ್ಜೆಂಟ್ ನನ್ನನ್ನು ನೋಡಲು ಮದ್ರಾಸಿಗೆ ಬಂದ. ಆಗ ಗೌರ್ನರ್ ಅವರಿಂದ ಪತ್ರ ತಂದಿದ್ದ. ಅದೇನೆಂದರೆ, ತಮ್ಮ ಸೇವೆಯನ್ನು ಬಿಟ್ಟು ಓಡಿಹೋಗಿ ಮದ್ರಾಸಿನಲ್ಲಿ ಸೇರಿಕೊಂಡಿರುವ ಫ್ರೆಂಚರನ್ನು ಹುಡುಕಿಕೊಡಬೇಕು ಎಂದು. ಫ್ರೆಂಚರೆಲ್ಲ ಮದ್ರಾಸಿಗೆ ಬಂದು ಮದ್ಯದ ಅಂಗಡಿಗಳಲ್ಲೂ ಮಧ್ಯಮ ವರ್ಗದ ಮನೆಗಳಲ್ಲೂ ಸೇರಿಕೊಂಡು ಆರಾಮವಾಗಿ ಕಾಲ ಕಳೆಯುತ್ತಿದ್ದರು.

ಗೌರ್ನರ್ ಅವರ ಪತ್ರ ಬಂದಮೇಲೆ ನಾನು ಇಂಗ್ಲಿಷ್ ಗೌರ್ನರನ್ನು ಕಂಡು ಅವರ ಸಹಾಯ ಕೇಳಿದೆ. ಅವರ ಆಜ್ಞೆಯ ಮೇರೆಗೆ ಊರೊಳಗೆ ಎಲ್ಲೆಲ್ಲೋ ಇದ್ದ ಫ್ರೆಂಚರು ನನ್ನ ಮನೆಗೆ ಬಂದರು. ಅವರನ್ನೆಲ್ಲಾ ಒಟ್ಟುಗೂಡಿಸಿ ಸೆಂಟ್ ಥೋಮಿಗೆ ಕಳುಹಿಸಿಕೊಟ್ಟೆ.

ನಮ್ಮ ವೈಸ್‌ರಾಯ್ ಡಚ್ಚರೊಡನೆ ನಡೆಸಿದ ಹೋರಾಟದ ನಂತರ ಎತ್ತ ಹೋದರು ಎಂದು ಸೆಂಟ್ ಥೋಮಿನ ನಮ್ಮವರಿಗೆ ತಿಳಿದಿರಲಿಲ್ಲ. ಜುಲೈ ೧ ರಂದು ಬಂದ ಪತ್ರಗಳಿಂದ ಅವರು ಪಾಂಡಿಚೆರಿಯಲ್ಲಿದ್ದಾರೆಂದು ಕೇಳಿ ಬಹು ಸಂತೋಷ ವಾಯಿತು. ಅಲ್ಲಿ ಅವರು ಫ್ರೆಂಚರಿಗೆ ಬೇಕಾದ ಆಹಾರ ಸಾಮಗ್ರಿಗಳನ್ನೂ ಮದ್ದು ಗುಂಡುಗಳನ್ನೂ ಶೇಖರಿಸಿ ತಮ್ಮ ಹಡಗಿಗೆ ತುಂಬಿಸುತ್ತಿದ್ದರು. ಇದು ಡಚ್ಚರಿಗೆ ತಿಳಿದು ಆ ಕಡೆಗೆ ಹೊರಟರು.

ನಾನು ಮದ್ರಾಸಿನಲ್ಲಿ ಸುಮ್ಮನೆ ಕುಳಿತಿರಲಿಲ್ಲ. ಗೂಢಚಾರರ ಮೂಲಕ ಡಚ್ಚರ ಹಾಗೂ ಮೂರರ ಸಂಗತಿಗಳನ್ನು ತಿಳಿದುಕೊಳ್ಳುತ್ತಿದ್ದೆ. ಮತ್ತು ಸೆಂಟ್ ಥೋಮಿಗೆ ಅತ್ಯಾವಶ್ಯಕವಾಗಿ ಬೇಕಾಗಿದ್ದ ಆಹಾರ ಸಾಮಗ್ರಿಗಳನ್ನು ರಾತ್ರಿ ಹೊತ್ತು ಕಾಣದಂತೆ ಕಳುಹಿಸಿಕೊಡುತ್ತಿದ್ದೆ. ಊರೊಳಗೆ ನಾನಿದ್ದ ಮನೆ ಇಂಥ ಕೆಲಸಗಳಿಗೆ ಅನುಕೂಲ ವಾಗಿರಲಿಲ್ಲ. ಆದ್ದರಿಂದ ಊರಿನ ಹೊರಗಿದ್ದ ದೊಡ್ಡ ಮನೆಯೊಂದಕ್ಕೆ ನನ್ನ ವಸತಿ ಬದಲಾಯಿಸಿದೆ. ಇಲ್ಲಿ ಇದ್ದು ಹಳ್ಳಿಗಾಡಿನವರಿಂದ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸು ವುದು ಸುಲಭವಾಯಿತು. ಕಾಳು ಕಡ್ಡಿ, ಅಕ್ಕಿ, ತರಕಾರಿ, ತುಪ್ಪ, ಬೆಣ್ಣೆ, ಹಂದಿ, ಕೋಳಿ ಮುಂತಾದುವನ್ನು ಹೇರಳವಾಗಿ ಕಳುಹಿಸಿಕೊಟ್ಟೆ.

ಡಚ್ಚರು ತಮ್ಮ ಹಡಗುಗಳ ಸಮೇತ ಪಾಂಡಿಚೆರಿಗೆ ಹೋಗಿ ಅಲ್ಲಿಯ ಬಂದರಿ ನಲ್ಲಿದ್ದ ನಮ್ಮ ವೈಸ್‌ರಾಯ್ ಹಡಗಿನ ಸುತ್ತ ಅರ್ಧಚಂದ್ರಾಕಾರದಲ್ಲಿ ತಮ್ಮ ಹಡಗು ಗಳನ್ನು ನಿಲ್ಲಿಸಿ ಬೆಳಕು ಹರಿಯುವುದನ್ನೇ ಕಾಯುತ್ತಿದ್ದರು. ಆದರೆ ನಮ್ಮ ವೈಸ್‌ರಾಯ್ ಧೈರ್ಯಮಾಡಿ ರಾತ್ರಿಯಲ್ಲೇ ಹೊರಟುಬಿಟ್ಟರು. ಡಚ್ಚರ ಹಡಗುಗಳ ಮಧ್ಯೆಯೇ ತೂರಿಕೊಂಡು ಗುಂಡುಹಾರಿಸುತ್ತಾ ಹೊರಟು ಸೆಂಟ್ ಥೋಮಿಗೆ ವಿಜಯೋತ್ಸಾಹ ದಿಂದ ಬಂದೇ ಬಿಟ್ಟರು, ಜುಲೈ ಐದರಂದು! ಎಲ್ಲವೂ ದೇವರ ಕೃಪೆ.

ನನ್ನನ್ನು ವೈಸ್‌ರಾಯ್ ಕಂಡ ರೀತಿ ಅಮೋಘವಾಗಿತ್ತು. ಆ ಪ್ರೀತಿವಿಶ್ವಾಸ ಹೇಳತೀರದು. ಎರಡು ದಿನಗಳ ಕಾಲ ಅವರು ನನ್ನೊಡನೆ ಮಾತನಾಡಿದ್ದೂ ಆಡಿದ್ದೇ ನಾನು ಮದ್ರಾಸಿನಲ್ಲಿಯೇ ಇದ್ದು ಆಹಾರ ಸಾಮಗ್ರಿ ಮುಂತಾದುವನ್ನು ಒದಗಿಸುವ ಕೆಲಸದಲ್ಲಿ ತೊಡಗಬೇಕೆಂದು ತಿಳಿಸಿದರು. ಡಚ್ಚರಿಗೆ ಮಣ್ಣು ಮುಕ್ಕಿಸಿ ಸೆಂಟ್ ಥೋಮಿಗೆ ವೈಸ್‌ರಾಯ್ ಹಿಂದಿರುಗಿದ ಸುದ್ದಿ ನಾಡಿನಲ್ಲೆಲ್ಲಾ ಮೊಳಗಿತು. ಮೂರರೂ ಹೆದರಿ ಬಿಟ್ಟರು. ಸೆಂಟ್ ಥೋಮನ್ನು ಪಡೆಯುವ ಆಸೆ ಬಿಟ್ಟುಬಿಟ್ಟಂತೆ ಕಂಡಿತು. ಗೋಲ್ಕೊಂಡಾ ರಾಜನ ಆಜ್ಞೆಗಾಗಿ ಕಾಯುತ್ತಿದ್ದರು. ಇಂಗ್ಲಿಷರು ಡಚ್ಚರ ಕಡೆಯೇ ವಾಲಿದ್ದರು. ನಮಗೆ ಯಾವ ಸಹಾಯವನ್ನೂ ಮಾಡುವ ಮನಸ್ಸು ಅವರಿಗಿರಲಿಲ್ಲ. ತಮ್ಮ ವ್ಯಾಪಾರವನ್ನು ಹೆಚ್ಚಿಸಿಕೊಳ್ಳುವುದೇ ಅವರ ಮುಖ್ಯ ಉದ್ದೇಶವಾಗಿತ್ತು.

ಇಂಗ್ಲಿಷರ ಹಡಗುಗಳು ಮಸುಲಿಪಟ್ಟಣಕ್ಕೆ ಬಂದಿವೆಯೆಂದು ತಿಳಿದ ಇಂಗ್ಲಿಷ್ ಗೌರ್‍ನರ್ ಅಲ್ಲಿಗೆ ತನ್ನ ಅಧಿಕಾರಿಗಳನ್ನು ಕಳುಹಿಸಿಕೊಡುವ ತರದೂದು ಮಾಡಿದ. ಅವರಿಗೆ ಬೇಕಾದ ಪಲ್ಲಕ್ಕಿಗಳು, ಕುದುರೆ, ಕತ್ತೆಗಳು, ಸಾಮಾನು ಸರಂಜಾಮುಗಳನ್ನು ಸಿದ್ಧಪಡಿಸಿದ. ಸಂಜೆಯ ಹೊತ್ತಿಗೆ ಸಿದ್ಧತೆಗಳೆಲ್ಲ ಮುಗಿದವು. ಗೌರ್‍ನರ್ ತಾನೇ ಊರಿನ ಹೊರಗೆ ಅರ್ಧ ಹರಿದಾರಿ ದೂರ ಹೋಗಿ ಅವರನ್ನು ಕಳುಹಿಸಿಕೊಟ್ಟು ಬಂದ. ಬಹು ಅದ್ದೂರಿಯ ಆ ಬೀಳ್ಕೊಡುಗೆ ಇಂಗ್ಲಿಷ್ ಕಂಪನಿಯು ಎಷ್ಟು ಉನ್ನತಸ್ಥಿತಿಯಲ್ಲಿದೆ ಎಂಬುದನ್ನು ತೋರಿಸಿಕೊಡುತ್ತದೆ. ತನ್ನ ಅಧಿಕಾರಿಗಳನ್ನು ಕಳುಹಿಸಿಕೊಟ್ಟು ಇಂಗ್ಲಿಷ್ ಗೌರ್‍ನರ್ ಪಂಜಿನ ಬೆಳಕಿನಲ್ಲಿ ಊರೆಲ್ಲಾ ಮಲಗಿದ್ದ ವೇಳೆ ಹಿಂದಿರುಗಿದ. ಫೋರ್ಟ್‌ನಿಂದ ಹೋದವರ ಗೌರವಾರ್ಥವಾಗಿ ಕುಶಾಲತೋಪುಗಳು ಹಾರಿದವು. ಊರಿನಲ್ಲಿ ಮಲಗಿದ್ದವರೆಲ್ಲ ಈ ಶಬ್ದ ಕೇಳಿ ಗಾಬರಿಯಿಂದ ಎದ್ದು ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಡಚ್ಚರೋ ಮೂರರೋ ಅಥವಾ ಫ್ರೆಂಚರೋ ಊರಿನ ಮೇಲೆ ಬಿದ್ದಿರಬಹುದೆಂದು ಊಹಿಸಿ ತಮ್ಮ ಪ್ರಾಣರಕ್ಷಣೆಗೆ ಎಲ್ಲವನ್ನೂ ಬಿಟ್ಟು ಓಡಿದ್ದೇ ಓಡಿದ್ದು. ನನ್ನ ಮನೆಯ ಬೀದಿಯಲ್ಲಿದ್ದ ಮೂವತ್ತು ನಲವತ್ತು ಪೋರ್ಚುಗೀಸ್ ಮತ್ತು ಕ್ರಿಶ್ಚಿಯನ್ ಹೆಂಗಸರು ಎಲ್ಲಿಗೆ ಹೋಗುವುದೆಂದು ತಿಳಿಯದೆ ಅವರ ಗಂಡಂದಿರು, ಅಣ್ಣತಮ್ಮಂದಿರು ಮತ್ತು ಬಂಧುಬಳಗದವರಿಂದ ತ್ಯಜಿಸಲ್ಪಟ್ಟು ನನ್ನ ಮನೆಗೆ ನುಗ್ಗಿದರು, ತಮ್ಮ ಪ್ರಾಣರಕ್ಷಣೆಗಾಗಿ. ಈ ದಿಗ್ಭ್ರಾಂತಿಗೆ ಕಾರಣ ಏನೆಂದು ಮೊದಮೊದಲಿಗೆ ನನಗೂ ತಿಳಿಯಲಿಲ್ಲ. ಹೆದರಬೇಡಿರೆಂದು ಹೆಂಗಸರಿಗೆ ಧೈರ್ಯ ಹೇಳಿ ನನ್ನ ಮನೆಯಲ್ಲಿ ಆಶ್ರಯ ನೀಡಿದೆ. ಮದ್ರಾಸ್ ನಗರದಲ್ಲಿ ರಾತ್ರಿ ವೇಳೆ ಇಂತಹ ಅಶಾಂತಿಯ ಪ್ರಸಂಗಗಳು ನಡೆಯುವುದೇ ಇಲ್ಲ. ಹೀಗಾಗಿ ಅಪರೂಪದ ಈ ಪ್ರಸಂಗದಿಂದ ಊರಿನ ಜನರೆಲ್ಲ ಕೊಂಚ ಹೊತ್ತು ದಿಕ್ಕೆಟ್ಟುಹೋಗಿದ್ದರು.

ಜುಲೈ ೮ ರಂದು ಸೂರತ್ತಿನಿಂದಲೂ ಗೋಲ್ಕೊಂಡಾದಿಂದಲೂ ಚರಭಟರು ಬಂದು ಪತ್ರಗಳ ಕಟ್ಟುಗಳನ್ನೇ ನಮ್ಮ ವೈಸ್‌ರಾಯ್ ಕೈಲಿಟ್ಟರು. ಫ್ರಾನ್ಸ್ ದೊರೆಯಿಂದ ಬಂದ ಪತ್ರದಲ್ಲಿ ವೈಸ್‌ರಾಯ್ ಸಾಹಸವನ್ನು ಮೆಚ್ಚಿ ಬರೆದ ಮಾತುಗಳಿದ್ದವು. ಗೋಲ್ಕೊಂಡಾದಿಂದ ಬಂದ ಪತ್ರದಲ್ಲಿ ಅಲ್ಲಿದ್ದ ನಮ್ಮ ರಾಯಭಾರಿ ತಾನು ಗೋಲ್ಕೊಂಡಾ ಆಸ್ಥಾನದೊಡನೆ ನಡೆಸಿದ ಸಂಧಾನ ಫಲಪ್ರದವಾಗುವ ಸೂಚನೆ ಇದೆ ಎಂದು ತಿಳಿಸಲಾಗಿತ್ತು. ಆದರೆ ಮೂರರನ್ನು ನಂಬುವಂತಿಲ್ಲ. ಇದು ಸರಿ ಎನ್ನುವಂತೆ ೯ ನೆಯ ರಾತ್ರಿ ಮೂರರ ಕಡೆಯ ಮುನ್ನೂರು ಸೈನಿಕರು ಸೆಂಟ್ ಥೋಮ್ ಬಳಿ ಕಾಣಿಸಿಕೊಂಡರು. ಅವರನ್ನು ನಮ್ಮ ವೈಸ್‌ರಾಯ್ ಕಡೆಯವರು ಅಟ್ಟಾಡಿಬಿಟ್ಟರು.

ಇದಾದ ಮೇಲೆ ಮೂರರು ವೀರಣ್ಣನ ಮೂಲಕ ಸಂಧಿಯ ಮಾತುಕತೆ ನಡೆಸಿದರು. ವೀರಣ್ಣ[೧] ನಮ್ಮ ಕಂಪನಿಯ ಏಜೆಂಟ್. ಇಡೀ ಮದ್ರಾಸಿನಲ್ಲಿ ಹಾಗೂ ಇಡೀ ನಾಡಿನಲ್ಲಿ

---

೧. ಈತನಿಗೆ ಕಾಶಿ ವೀರಣ್ಣನೆಂದೂ ಹೆಸರಿತ್ತು. ಈ ವೀರಣ್ಣನ ಸ್ಥಾನಮಾನದ ಬಗ್ಗೆ ಅಬೆ

ಬಹು ಹೆಸರಾದ ವರ್ತಕ. ನಮ್ಮ ವ್ಯಾಪಾರ ಸಾಪಾರವೆಲ್ಲ ಈತನ ಮೂಲಕವೇ ನಡೆಯುತ್ತಿತ್ತು. ನಾನು ಆತನ ಮನೆಗೆ ಹೋಗಿ ಮಾತುಕತೆ ನಡೆಸಿದೆ. ಫ್ರೆಂಚರು ಇಂಡಿಯಾಕ್ಕೆ ಬಂದಿರುವುದು ಈ ದೇಶವನ್ನು ಗೆದ್ದು ಆಳಲಿಕ್ಕಲ್ಲ, ವ್ಯಾಪಾರಕ್ಕಾಗಿ ಎಂಬುದನ್ನು ಸ್ಪಷ್ಟಪಡಿಸಿದೆ. ಹೀಗಿರುವಾಗ ಗೋಲ್ಕೊಂಡಾದಿಂದ ಸುದ್ದಿ ಬಂದಿತು, ಅಲ್ಲಿ ನಡೆಯುತ್ತಿದ್ದ ಸಂಧಾನಗಳೆಲ್ಲ ಮುರಿದು ಬಿದ್ದಿವೆ, ಬಟೇವಿಯಾದಿಂದ ಬರುತ್ತಿರುವ ಡಚ್ಚರ ನೌಕಾಪಡೆಯ ಸಹಾಯದಿಂದ ಮೂರರು ನಮ್ಮ ಗತಿ ಮುಗಿಸಲು ಯತ್ನಿಸುತ್ತಿದ್ದಾರೆ ಎಂದು. ನಮ್ಮ ವೈಸ್‌ರಾಯ್ ಇಂಗ್ಲಿಷ್ ಗೌರ್ನರ್‌ಗೆ ಪತ್ರ ಬರೆದು ಫ್ರಾನ್ಸೂ ಇಂಗ್ಲೆಂಡೂ ಸ್ನೇಹದಿಂದಿರುವಾಗ ಇಂಗ್ಲಿಷರು ಫ್ರೆಂಚರಿಗೆ ಸಹಾಯ ಮಾಡುವುದು ಸರಿಯಾದದ್ದು ಎಂದು ತಿಳಿಸಿದರು. ಆದರೆ ಇಂಗ್ಲಿಷ್ ಗೌರ್ನರ್ ಹೇಳಿದರು, ವೈಸ್‌ರಾಯ್ ಫ್ರೆಂಚ್ ದೊರೆಯ ಪ್ರತಿನಿಧಿ. ತಾನು ಕಂಪನಿಯ ಪ್ರತಿನಿಧಿ. ಹೀಗಿರುವಾಗ ತಾನು ಫ್ರೆಂಚರಿಗೆ ಸಹಾಯ ಮಾಡುವುದು ಸರಿಯಾದುದಲ್ಲ. ತಾನು ಕಂಪನಿಯ ಪ್ರತಿನಿಧಿಯಾಗಿ ವ್ಯಾಪಾರವನ್ನು ವೃದ್ಧಿಪಡಿಸುವುದು ತನ್ನ ಕರ್ತವ್ಯವಾಗಿದೆ ಎಂದು ತಿಳಿಸಿದ. ಈ ದೃಷ್ಟಿಯಿಂದ ತಾನು ಮೂರರೊಡನೆ ಸ್ನೇಹದಿಂದಿರಬೇಕಾದ್ದು ಅನಿವಾರ್ಯ ಎಂದು ಹೇಳಿದ. ಮೂರರು ಮತ್ತೆ ತಮ್ಮ ಕಿತಾಪತಿ ಆರಂಭಿಸಿದರು. ಇದಕ್ಕೆ ಇಂಗ್ಲಿಷರ ಪುಸಲಾವಣೆಯೂ ಇತ್ತು. ವೈಸ್‌ರಾಯ್ ತಕ್ಕ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದ. ಜುಲೈ ೧೩ ರಂದು ತನ್ನ ಎಲ್ಲಾ ಸೈನ್ಯದ ವೀಕ್ಷಣೆ ನಡೆಸಿದ. ಹಡಗಿನಲ್ಲಿದ್ದ ಮತ್ತು ಪಟ್ಟಣದಲ್ಲಿದ್ದ ಎಲ್ಲಾ ಸೈನಿಕರೂ ಸೇರಿದರು. ಫ್ರೆಂಚರು, ಪೋರ್ಚುಗೀಸರು, ಲಾಸ್ಕರ್‌ಗಳು ಎಲ್ಲಾ ಸೇರಿ ಇದ್ದದ್ದು ೧,೨೦೦ ಜನ ಅಷ್ಟೇ. ಇಷ್ಟು ಚಿಕ್ಕ ಸೈನ್ಯಪಡೆಯಿಂದ ಇಡೀ ಪೂರ್ವವನ್ನು ಎದುರಿಸುವ ಧೈರ್ಯಮಾಡಿದ್ದರು ನಮ್ಮ ವೈಸ್‌ರಾಯ್. ಆಹಾರದ ಸರಬರಾಜು ಮುಖ್ಯವಾಗಿ ಆಗಬೇಕಾಗಿತ್ತು. ನಾನು ಇಂಗ್ಲಿಷ್ ಗೌರ್ನರರನ್ನು ಕಂಡು ಅವರ ಮನವೊಲಿಸಿ ರಾತ್ರಿ ಹೊತ್ತು ಆದಷ್ಟು ಸರಬರಾಜು ಮಾಡಿಸುತ್ತಿದ್ದೆ. ನನ್ನನ್ನು ನಂಬಬಾರದೆಂದು ಆಗದವರು ಅವರಿಗೆ ಚಾಡಿ ಹೇಳುತ್ತಿದ್ದರು.

ನಮ್ಮ ಫ್ರೆಂಚರು ಹತೋಟಿ ಮೀರಿ ನಡೆಯುತ್ತಿದ್ದರು. ದಿನಾ ಅವರು ಮದ್ರಾಸಿಗೆ ಬಂದು ಅಲ್ಲಿ ಭಾರಿ ಗಲಾಟೆ ಮಾಡುತ್ತಿದ್ದಾರೆಂದು ವೈಸ್‌ರಾಯಿಗೆ ದೂರುಗಳು ಹೋಗಲಾರಂಭಿಸಿದವು. ಅಷ್ಟೇ ಅಲ್ಲ, ಎಷ್ಟೋ ಜನ ವೈಸ್‌ರಾಯ್ ಸೇವೆಯನ್ನು ಬಿಟ್ಟು ಓಡಿಹೋಗುತ್ತಿದ್ದಾರೆಂಬುದೂ ತಿಳಿಯಿತು. ಆಗ ವೈಸ್‌ರಾಯ್ ಯಾರೂ ತನ್ನಿಂದ ಪರ್ಮಿಟ್ ಪಡೆಯದೆ ಮದ್ರಾಸಿಗೆ ಹೋಗಕೂಡದೆಂದು ಕಟ್ಟಪ್ಪಣೆ ಮಾಡಿದರು. ಇದರಿಂದ ಅನುಕೂಲವಾಯಿತು. ಇದು ಮೂರರು, ಡಚ್ಚರು ಮತ್ತು ಇಂಗ್ಲಿಷರ ಕಡೆ ಹೋಗುತ್ತಿದ್ದ ನಮ್ಮ ಫ್ರೆಂಚರನ್ನು ತಡೆಯಿತು.

---

ಕಾರ್ ಅಷ್ಟೇ ಅಲ್ಲ ಇಂಗ್ಲಿಷರೂ ಹೇಳಿದ್ದಾರೆ. ೧೬೭೩ರಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಯ ನೌಕರನೊಬ್ಬ ಬರೆದ ಪತ್ರದಲ್ಲಿ 'ಸರ್ ವಿಲಿಯಂ ಕೋಟೆಯೊಳಗೆ ಆಡಳಿತ ನಡೆಸಿದರೆ ವೆರೋನ (Verona=ವೀರಣ್ಣ) ಕೋಟೆ ಹೊರಗಡೆ ಆಡಳಿತ ನಡೆಸುತ್ತಾನೆ' ಎಂದು ಬರೆದಿದ್ದಾನೆ.

ಡಚ್ಚರ ದುರಹಂಕಾರಕ್ಕೆ ಶಾಸ್ತಿಯೋ ಎಂಬಂತೆ ಪುಲಿಕಾಟ್‌ನಲ್ಲಿ ಅವರಿಗೆ ಭಾರಿ ಹಾನಿಯಾಯಿತು. ಆಕಸ್ಮಾತ್ ಹತ್ತಿಕೊಂಡ ಬೆಂಕಿ ಅರ್ಧ ಊರನ್ನು ಸುಟ್ಟು ಬೂದಿ ಮಾಡಿತು. ಸರಿ, ಹಿಂದೂಗಳೆಲ್ಲ ಸೇರಿ ಏಕೆ ಹೀಗಾಯಿತೆಂದು ಆಲೋಚಿಸಿದರು. ಇದು ಡಚ್ಚರ ನಿರ್ನಾಮದ ಸೂಚನೆ ಎಂದು ಜೋತಿಷ್ಕರು ಹೇಳಿದರು. ನಮ್ಮ ಮೇಲಿನ ಯುದ್ಧವನ್ನು ಮೂರರು ಕೈಬಿಟ್ಟಂತೆ ಕಂಡಿತು. ಏಕಾಂಗಿಯಾಗಿ ನಮ್ಮ ವೈಸ್‌ರಾಯ್ ಡಚ್ಚರ ಹಡಗುಗಳಿಗೆ ಚಳ್ಳೆಹಣ್ಣು ತಿನ್ನಿಸಿದ್ದು ಅವರ ಮನಸ್ಸಿನ ಮೇಲೆ ಭಾರಿ ಪರಿಣಾಮ ವನ್ನುಂಟುಮಾಡಿತ್ತು. ಆದರೆ ತಮ್ಮ ಸೈನ್ಯವನ್ನೆಲ್ಲಾ ಮದ್ರಾಸಿನಿಂದ ವಾಪಸು ಕರೆಸಿಕೊಂಡರೆ ಫ್ರೆಂಚರು ೨೦,೦೦೦ ತಲ್ಲಿಯಾರ್‌ಗಳೊಡನೆ ಸೇರಿ ಇನ್ನೂ ಬಲವಾಗಿ ಬಿಡುತ್ತಾರೆ ಎಂದು ಹೆದರಿ ಸೈನ್ಯವು ಇದ್ದಲ್ಲಿಯೇ ಇರಲಿ ಎಂದಿದ್ದರು. ತಲ್ಲಿಯಾರ್ ಗಳೆಂದರೆ ಬೆಟ್ಟ ಗುಡ್ಡಗಳಲ್ಲಿ ನೆಲೆಸಿರುವ ಬಹು ಕ್ರೂರಿಗಳಾದ ಜನರು.

ಇಂಗ್ಲಿಷರು ಮದ್ರಾಸಿನಲ್ಲಿ ಭದ್ರವಾಗಿ ಬೇರೂರಿ ನಮಗೆ ಬೇಕಾದ ಆಹಾರ ಸಾಮಗ್ರಿಗಳನ್ನು ತಡೆಯುತ್ತಿದ್ದರು. ಮದ್ರಾಸಿನಲ್ಲಿ ಅವರದೇ ಆಡಳಿತ. ಸುಂಕ ಸಾರಿಗೆಗಳನ್ನು ಹಾಕುವ ಅಧಿಕಾರವೂ ಅವರಿಗಿತ್ತು. ಕೊಂಚ ಹಣವನ್ನು ಗೋಲ್ಕೊಂಡಾ ರಾಜನಿಗೆ ಕೊಟ್ಟುಕೊಂಡು ತಮ್ಮ ಒಳ್ಳೆಯ ಆಡಳಿತದ ರೀತಿಯಿಂದ ಇಡೀ ನಾಡಿನ ಗೌರವಕ್ಕೆ ಪಾತ್ರರಾಗಿದ್ದರು. ಇವರನ್ನು ಹೇಗಾದರೂ ಮಾಡಿ ಒಲಿಸಿಕೊಂಡು ತನಗೆ ಬೇಕಾದ ಆಹಾರಸಾಮಗ್ರಿಗಳನ್ನು ಪಡೆಯುವ ಪ್ರಯತ್ನ ಮಾಡಿದರು, ನಮ್ಮ ವೈಸ್ ರಾಯ್. ಆಗೆಲ್ಲಾ ನಾನೇ ಸಂಧಾನ ನಡೆಸುತ್ತಿದ್ದೆ. ಆದರೆ ದೇಶದಲ್ಲಿ ಫ್ರೆಂಚರೇ ಇಲ್ಲದಂತೆ ಮಾಡುವ ಮನಸ್ಸು ಮಾಡಿದ್ದರು ಇಂಗ್ಲಿಷ್ ಗೌರ್ನರ್. ಅವರು ನಮಗೇನೂ ಸಹಾಯ ಮಾಡಲಿಲ್ಲ. ಅದರ ಬದಲು ಸಮುದ್ರತೀರದ ಮೂಲಕ ಆಹಾರ ಸಾಮಗ್ರಿಗಳು ಸೆಂಟ್ ಥೋಮಿಗೆ ಹೋಗುವುದನ್ನು ತಡೆದರು. ನಮ್ಮವರು ಸೆಂಟ್ ಥೋಮಿನ ಸುತ್ತಮುತ್ತ ಮೇಯುತ್ತಿದ್ದ ೨೦೦೦ ಕುರಿಗಳನ್ನು ಹಿಡಿದುಕೊಂಡರು. ಗೌರ್ನರ್‌ಗೆ ದೂರುಕೊಟ್ಟರು. ನನ್ನನ್ನು ಕೇಳಿದಾಗ ನಾನು ಹೇಳಿದೆ, ಫ್ರೆಂಚರು ತಮ್ಮ ಭೂಮಿಯಲ್ಲಿ ಮೇಯುತ್ತಿದ್ದ ಕುರಿಗಳನ್ನು ಹಿಡಿದುಕೊಂಡರೆ ತಪ್ಪೇನು ಎಂದು. ಇದು ಗೌರ್ನರ್‌ಗೆ ಹಿಡಿಸಲಿಲ್ಲ. ತಮ್ಮ ನೆಲ ಎಂದು ಹೇಳಿಕೊಳ್ಳುವ ಹಕ್ಕು ಫ್ರೆಂಚರಿಗೆ ಎಲ್ಲಿದೆ ಎಂದು ಅವರು ಕೇಳಿದರು. ಈಗ ಗೌರ್ನರ್‌ನನ್ನು ಮೇಲೆ ಹಾಕಿಕೊಳ್ಳಬಾರದೆಂದು ಸಮಾಧಾನ ವಾಗಿ ಹೇಳಿದೆ. ಹೇಗಾದರೂ ಮಾಡಿ ಗೌರ್ನರ್‌ನನ್ನು ಒಳ್ಳೆಯ ರೀತಿಯಲ್ಲಿ ಇಟ್ಟು ಕೊಂಡಿರಬೇಕೆಂದು ವೈಸ್‌ರಾಯ್‌ರಿಂದ ದಿನವೂ ನನಗೆ ಪತ್ರಗಳು ಬರುತ್ತಿದ್ದವು.

ಕುರಿ ಜಗಳ ಅಲ್ಲಿಗೇ ಮುಗಿಯಲಿಲ್ಲ. ಮೂರರೂ ಮದ್ರಾಸ್ ಗೌರ್ನರ್‌ಗೆ ದೂರುಕೊಟ್ಟರು. ಗೌರ್ನರ್ ಅವರ ಕಡೆ ಸೇರಿಕೊಂಡು ಊರಿನ ಹಿಂದೂ ಮುಖಂಡ ರನ್ನೂ ವರ್ತಕರನ್ನೂ ಕರೆಸಿ ಸೆಂಟ್ ಥೋಮಿಗೆ ಹೋಗುವುದನ್ನೆಲ್ಲಾ ತಡೆಯಬೇಕೆಂದು ತಿಳಿಸಿದರು. ಅಲ್ಲಿಗೆ ಹೋಗುವ ದಾರಿಗಳಿಗೆಲ್ಲ ಕಾವಲಿಟ್ಟರು. ಮೂವರು ಮುದುಕಿಯರು

ಸೇಂಟ್ ಥೋಮಿನಲ್ಲಿದ್ದ ಕಡೆಯುವರಿಗೆ ಅನ್ನ ತೆಗೆದುಕೊಂಡು ಹೋಗುತ್ತಿದ್ದರು. ಅವರನ್ನು ಹಿಡಿದು ಮದ್ರಾಸ್ ಬೀದಿಗಳಲ್ಲಿ ಎಳೆದಾಡಿದರು, ಪೋರ್ಚುಗೀಸ್ ಸಿಪಾಯಿಗಳು. ಫಾದರ್ ಎಫ್ರೈಮ್ ಅವರೂ ಇಂಗ್ಲಿಷರ ಕಡೆಯೇ. ಊರೊಟ್ಟಿನ ಗೋಮಾಳದಲ್ಲಿ ಮೇಯುತ್ತಿದ್ದ ಕುರಿಗಳನ್ನು ಫ್ರೆಂಚರು ಹಿಡಿದಿದ್ದು ಸರಿಯಲ್ಲ ಎಂದು ವಾದಿಸಿದರು. ನಾನು ಪ್ರತಿಯಾಗಿ ವಾದಿಸಿದೆ; ಯುದ್ಧದಲ್ಲಿ ಎಲ್ಲವೂ ನ್ಯಾಯ ಎಂದೆ. ಫಾದರ್ ಸಿಟ್ಟುಮಾಡಿಕೊಂಡು ಹೋದರು. ಆದರೆ ನಾನು ಗುಟ್ಟಾಗಿ ಆಹಾರ ಸಾಮಗ್ರಿಗಳನ್ನು ಸೇಂಟ್ ಥೋಮಿಗೆ ಕಳುಹಿಸಿಕೊಡುವುದನ್ನು ಬಿಡಲಿಲ್ಲ. ನನ್ನ ಕಡೆ ನಂಬಿಕಸ್ಥರಾದ ಲಾಸ್ಕರ್‌ಗಳಿದ್ದರು. ಅವರ ಮೂಲಕ ದಿನವೂ ಆಹಾರ ಸಾಮಗ್ರಿಗಳನ್ನು ಸಾಗಿಸುತ್ತಲೇ ಇದ್ದೆ. ಹೀಗಾಗಿ ಸೇಂಟ್ ಥೋಮ್ ಪೇಟೆಯಲ್ಲಿ ಹೇರಳವಾದ ದವಸಧಾನ್ಯಗಳು ಮಾರಾಟವಾಗುತ್ತಿದ್ದವು. ಫ್ರೆಂಚರು ತಮ್ಮ ಮನೆಮಠಗಳಲ್ಲಿ ಅವನ್ನು ತುಂಬಿಕೊಂಡರು.

ನಾನು ಈ ಮಧ್ಯೆ ಕಾಯಿಲೆಬಿದ್ದೆ. ನಮ್ಮ ವೈಸ್‌ರಾಯರು ನನಗೆ ತಮ್ಮ ಮನೆಯಲ್ಲಿಯೇ ಒಂದು ಕೋಣೆ ಸಿದ್ಧಪಡಿಸುವುದಾಗಿಯೂ ಅಲ್ಲಿಗೆ ಬರಬೇಕೆಂದೂ ಹೇಳಿಕಳುಹಿಸಿದರು. ಆದರೆ ನಾನು ಹೋಗಲಿಲ್ಲ. ಆ ಮನೆಯು ತುಂಬ ಕಾಳುಕಡ್ಡಿ ತುಂಬಿರುವುದರಿಂದ ಅದು ನನಗೆ ಅನುಕೂಲವಾಗುವುದಿಲ್ಲ ಎಂದು ತಿಳಿಸಿದೆ. ಅಲ್ಲದೆ ನಾನು ಮದ್ರಾಸಿನಲ್ಲಿರುವುದೇ ಒಳ್ಳೆಯದೆಂದೆ. ಹೀಗಾಗಿ ನನ್ನನ್ನು ಮದ್ರಾಸ್ ಬಿಡಿಸುವ ಪ್ರಯತ್ನವನ್ನು ಇಂಗ್ಲಿಷ್ ಗೌರ್ನರ್ ಮಾಡಲಾರಂಭಿಸಿದರು, ಒಳ್ಳೆಯ ಮಾತಿನಲ್ಲಿ. ಆದರೆ ನಾನು ಜಗ್ಗಲಿಲ್ಲ. ನಾನೊಬ್ಬ ಫ್ರೆಂಚ್ ವರ್ತಕ. ನನಗೂ ಫ್ರೆಂಚರು ಮಾಡು ತ್ತಿರುವ ಯುದ್ಧಕ್ಕೂ ಸಂಬಂಧವಿಲ್ಲ ಎಂದು ಹೇಳಿಕೊಂಡೆ. ಬೇರೆಯುವರಿಗೂ ಹಾಗೇ ಹೇಳಿದೆ. ನಾನು ಊರ ಹೊರಗಿರುವುದು ಇಂಗ್ಲಿಷ್ ಗೌರ್ನರ್‌ಗೆ ಇಷ್ಟವಿರಲಿಲ್ಲ. ನನ್ನ ಸುತ್ತಮುತ್ತ ಇದ್ದವರು ಹಿಂದೂಗಳು, ಪರಿಯರು, ಪೋರ್ಚುಗೀಸರು ಮತ್ತು ಆ ಬಗೆಯ ಜನರು. ನಾನು ಹೊರಗಿದ್ದು ಅವರ ಮೂಲಕ ಏನೇನು ಕಾರುಬಾರು ನಡೆಸು ತ್ತೇನೆಂಬುದು ಗೊತ್ತಾಗಲೊಲ್ಲದು ಎಂದು ಗೌರ್ನರ್‌ನ ವಾದ.

ಆಗಸ್ಟ್ ೨. ಈ ದಿನ ಹಿಂದೂಗಳ ಪ್ರಮುಖನೊಬ್ಬನ ಶವಸಂಸ್ಕಾರ. ಅದನ್ನು ಬಹು ವಿಧಿವತ್ತಾಗಿ ಆಚರಿಸಿದರು. ಬೆಲೆಯಾದ ಎಣ್ಣೆ ತುಪ್ಪಗಳನ್ನು (Liquors) ಚಿತೆಯ ಮೇಲೆ ಸುರಿದರು. ಸತ್ತವನ ಹೆಂಡತಿಯೂ ಚಿತೆಯಲ್ಲಿ ಬಿದ್ದು ಸತ್ತಳು.

ಸಮುದ್ರತೀರದಲ್ಲಿ ಬಗೆಬಗೆಯ ನೇಟೀವ್ ಜನರು ನೆಲೆಸಿದ್ದಾರೆ. ನಾನಾಗಲೇ ತಿಳಿಸಿದ ತಲ್ಲಿಯರ್‌ಗಳು, ಮಲಬಾರಿಗಳು (ತಮಿಳರು), ಪರಿಯಾಗಳು, ಚೇರಿಪರಿಗಳು (Cheriperies) ಮತ್ತು ಹೇಳಲಸದಳವಾದ ಅನೇಕಾನೇಕ ಜಾತಿಯ ಜನರು. ಮಲಬಾರಿಗಳು (ತಮಿಳರು) ಹೆಚ್ಚಾಗಿ ಕ್ರೈಸ್ತರ ತೋಟತುಡಿಕೆ ಮಾಡಿಕೊಂಡು ಕಂಕೋಟ್ (Cumquot) ಮುಂತಾದುವನ್ನು ಬೆಳೆಯುತ್ತಾರೆ. ಅರಾಕ್ ತಯಾರಿಸಿ ಮಾರುತ್ತಾರೆ. ಬಹು ಮೃದು ಸ್ವಭಾವದ ಈ ಜನರು ನಾಡಿಗೆ ತುಂಬಾ ಉಪಯೋಗ

ವಾಗಿದ್ದಾರೆ. ಪರಿಯರು ಬಹು ಹೀನಸ್ಥಿತಿಯಲ್ಲಿದ್ದು ತೀರಾ ಕೀಳುಮಟ್ಟದ ವೃತ್ತಿಗಳಿಂದ ಜೀವಿಸುತ್ತಾರೆ. ಇವರಿಗಿಂತ ಕೀಳಾದವರೆಂದರೆ ಚೇರಿಪೇರಿಗಳು. ಇವರಿಗೆ ಇರಲು ಮನೆಮಠಗಳಿಲ್ಲ. ಮರ ಗಿಡಗಳ ಕೆಳಗೆ ಇವರ ವಾಸ. ನಾಯಿಗಳಂತೆ ಕಸಪಸದಲ್ಲಿ ಸಿಕ್ಕಿದ್ದನ್ನು ತಿನ್ನುತ್ತಾರೆ. ಬೆಸ್ತರಲ್ಲಿ ಎರಡು ಜಾತಿ: ಪಟ್ಣವರುಗಳು (Patnavars) ಮತ್ತು ತುಕುವಾಗಳು (Tuacouas = ಬಹುಶಃ Macolas). ಇವರು ಮೂರು ಮರದ ತುಂಡುಗಳ ತೆಪ್ಪ (ಕಟ್ಟುಮರ) ಕಟ್ಟಿಕೊಂಡು ಅದರ ಮೇಲೆ ಕುಳಿತು ಇಡೀ ದಿನವೆಲ್ಲ ಸಮುದ್ರತೀರದಲ್ಲಿ ಮೀನು ಹಿಡಿಯುತ್ತಾರೆ.

ಹಿಂದೂ ವರ್ತಕರುಗಳಲ್ಲಿ 'ಚೆಟ್ಟಿ'ಗಳು ಹೆಸರಾದವರು. 'ಕೋಮ್ಟಿ' (Comti) ಜನ ಅಂಗಡಿ ಮುಂಗಟ್ಟುಗಳನ್ನಿಟ್ಟುಕೊಂಡು ದವಸಧಾನ್ಯ ಎಣ್ಣೆ ಬೆಣ್ಣೆ ತರಕಾರಿ ಮುಂತಾದುವುಗಳನ್ನು ಮಾರುತ್ತಾರೆ. 'ಪಲ್ಲಿ' (Pulli) ಎಂಬುವರು ಬಣ್ಣಹಚ್ಚುವ ಜನ. ಕ್ಯಾಲಿಕೋ ಬಟ್ಟೆಗಳಿಗೆ ಚಿತ್ತಾರ ಮಾಡುವವರೂ ಇವರೇ. 'ಗವಾರಿ' ಗಳು ನೆಯ್ಗೆಯವರು. ಬಲಗೈಯಿಂದ ಕೆಲಸ ಮಾಡುವ ಇವರು ಎಡಗೈಯಿಂದ ಕೆಲಸಮಾಡುವ ಅಕ್ಕಸಾಲಿಗಳು, ಬಡಗಿಗಳು ಮತ್ತು ಕಮ್ಮಾರರು—ಇವರಿಗಿಂತ ಕುಲದಲ್ಲಿ ಹೆಚ್ಚು. ಈ ಕೊನೆಯ ಜಾತಿಯವರಲ್ಲಿ ಹಾಗೂ ಚೆಟ್ಟಿಗಳಲ್ಲಿ ಒಂದು ಪದ್ಧತಿ ಇದೆ. ಅದೇನೆಂದರೆ, ಯಾರಾದರೂ ತಮ್ಮ ಜಾತಿಯವರಿಗೆ ತೊಂದರೆ ಮಾಡಿದರೆ ಎಲ್ಲರೂ ಅಂಗಡಿಗಳನ್ನು ಮುಚ್ಚಿ ಕೆಲಸ ನಿಲ್ಲಿಸಿಬಿಡುವುದು. ಮೂರರ ಸಂಖ್ಯೆ ಇಲ್ಲಿ ಅಷ್ಟಿಲ್ಲ. ಅವರು ಬೇರೆಯವರೊಡನೆ ಸೇರುವುದಿಲ್ಲ. ಪೋರ್ಚುಗೀಸರನ್ನು ಇಲ್ಲಿಂದ ಓಡಿಸಿದಿಂದೀಚೆಗೆ ಮಾತ್ರ ಅವರು ಇಲ್ಲಿದ್ದಾರೆ. ಅವರ ಮತ ಹಿಂದೂಗಳ ಮತಕ್ಕೆ ವಿರುದ್ಧವಾದ್ದರಿಂದ ಸ್ಥಳದ ಜನರಿಗೆ ಅವರನ್ನು ಕಂಡರೆ ಆಗುವುದಿಲ್ಲ.

ಇಡೀ ಸಮುದ್ರತೀರ ಫಲವತ್ತಾಗಿದೆ. ಸುತ್ತಮುತ್ತಲ ಹಳ್ಳಿಗಳಲ್ಲಿ ಬೆಲೆಯಾದ ಸರಕುಗಳನ್ನು ತಯಾರಿಸುತ್ತಾರೆ. ದವಸಧಾನ್ಯಗಳು ಬಹು ಅಗ್ಗ. ಇಲ್ಲಿಯ ಜನರ ನಿತ್ಯ ಆಹಾರವಾದ ಅಕ್ಕಿ ಐದು ಪೌಂಡಿಗೆ ಮೂರು ಸೋಲ್ (Sol). ಐದು ಕೋಳಿಗಳಿಗೆ ಒಂದು ಏಕು. ಕೊಬ್ಬಿದ ಭಾರಿ ಹಂದಿಗೆ ೩೦ ಸೋಲ್‌ಗಳು. ಕುರಿ ಆಡುಗಳು ಒಂದಕ್ಕೆ ೨೦ ಸೋಲ್‌ಗಳು. ತುಪ್ಪ, ಬೆಣ್ಣೆ, ಗೋಧಿ, ತರಕಾರಿ, ಹಣ್ಣುಹಂಪಲು, ಮೀನು—ಇವೆಲ್ಲಾ ಹೇರಳವಾಗಿ ದೊರೆಯುತ್ತವೆ.

ಮದ್ರಾಸಿನ ಇಂಗ್ಲಿಷರು ಮೂರು ಬಗೆಯ ನಾಣ್ಯಗಳನ್ನು ಟಂಕಿಸುತ್ತಾರೆ; ಪಗೋಡಾ, ಫನಂ ಮತ್ತು ಕಾಷ್ (ಕಾಸು). ಪಗೋಡಾ ಚಿನ್ನದ ಸಣ್ಣ ನಾಣ್ಯ. ಒಂದು ಕಡೆ ಮಾತ್ರ ಹಿಂದೂ ದೇವರ ವಿಗ್ರಹವಿದೆ. ಇದರ ಬೆಲೆ ಎರಡು ಏಕಸ್. ಫನಂ (ಹಣ) ಅರ್ಧ ಚಿನ್ನ ಅರ್ಧ ಬೆಳ್ಳಿಯ ಸಣ್ಣ ನಾಣ್ಯ. ಅದರ ಮೇಲೆ ಹಿಂದೂಗಳ ಲಿಪಿಯಲ್ಲಿ ಏನೋ ಬರೆದಿದೆ. ಇದರ ಬೆಲೆ ಮೂರೂವರೆ ಸೋಲ್‌ಗಳು. ಒಂದು ಏಕಸ್‌ಗೆ ೧೮ ಸಿಕ್ಕುತ್ತವೆ. ಕಾಸ್ ಬಹು ಚಿಕ್ಕ ನಾಣ್ಯ. ಬಡಬಗ್ಗರು ಚಲಾವಣೆಗೆ

ಉಪಯೋಗಿಸುವುದೇ ಈ ನಾಣ್ಯ. ತಾಮ್ರದ ೧೨೦ ನಾಣ್ಯಗಳು ಒಂದು ಫನಂಗೆ ಸಮ. ಪಗೋಡಾ ನಾಣ್ಯ ಗೋಲ್ಕೊಂಡಾ, ಬಿಜಾಪುರ ಮುಂತಾದ ಕಡೆಗಳಲ್ಲೆಲ್ಲಾ ಚಲಾವಣೆಯಲ್ಲಿದೆ. ಮತ್ತು ಮಲಬಾರ್ ತೀರದಲ್ಲಿಯೂ ನಡೆಯುತ್ತದೆ. ಫನಂ ಮತ್ತು ಕಾಸ್ ಮದ್ರಾಸ್ ಮತ್ತು ಅದರ ಸುತ್ತಮುತ್ತ ಮಾತ್ರ.

ಯುದ್ಧ, ಮೂರರ ಅಡ್ಡಿ ಆತಂಕ ಹಾಗೂ ಇಂಗ್ಲಿಷರ ತಂಟೆ ತಕರಾರು ಇವು ಗಳಿದ್ದರೂ ಸೇಂಟ್ ಥೋಮಿನ ಜನಸಂಖ್ಯೆ ದಿನಾ ಹೆಚ್ಚುತ್ತಲೇ ಇತ್ತು. ಪೋರ್ಚುಗೀಸ್ ಮತ್ತು ಕ್ರೈಸ್ತ ಹೆಂಗಸರಿಗೆ ನಮ್ಮ ಫ್ರೆಂಚರನ್ನು ಮದುವೆಯಾಗುವ ಆಸೆ. ಇದಕ್ಕೆ ನಮ್ಮ ವೈಸ್‌ರಾಯ್ ಬೆಂಬಲವೂ ಇತ್ತು. ಫ್ರೆಂಚರು ಹೊರಗಡೆ ಹೋಗದಂತೆಯೂ ದಂಡಿನ ಪಾಳೆಯದಲ್ಲಿ ಅನಾಚಾರಗಳು ನಡೆಯದಂತೆ ತಡೆಯಲೂ ಇದು ಒಳ್ಳೆಯ ಮಾರ್ಗ ಎಂದು ಅವರು ಭಾವಿಸಿದ್ದರು. ಆಶ್ಚರ್ಯದ ಸಂಗತಿ ಎಂದರೆ ನಮ್ಮ ಸಿಪಾಯಿಗಳು ಮದ್ರಾಸಿಗೆ ಬಂದರೆ ಮದುವೆಯಾಗದೆ ಹಿಂದಿರುಗುತ್ತಿರಲಿಲ್ಲ.

ಆಗಸ್ಟ್ ೮ ಮತ್ತು ೯ನೆಯ ದಿನ ಸೇಂಟ್ ಥೋಮಿಗೆ ಹೋಗಿ ವೈಸ್‌ರಾಯ್ ರೊಡನೆ ಇದ್ದು ಹಲವಾರು ವಿಷಯಗಳ ಬಗ್ಗೆ ಸಮಾಲೋಚನೆ ನಡೆಸಿ ಹಿಂದಿರುಗಿದೆ. ೧೧ನೆಯ ತಾರೀಖು ನಮ್ಮ ಇಬ್ಬರು ಗೂಢಚಾರರು ಮೂರರ ಪಾಳೆಯದಿಂದ ಹಿಂದಿರುಗಿ ಗೋಲ್ಕೊಂಡಾದಿಂದ ಬಂದಿರುವ ಸುದ್ದಿ ತಿಳಿಸಿದರು. ಹೊಸ ಸೈನ್ಯ ಹಾಗೂ ಹಣ ಕಳುಹಿಸುತ್ತಿದ್ದೇವೆ, ಅಲ್ಲಿಯವರೆಗೂ ಜಗ್ಗದಿರಬೇಕೆಂಬುದೇ ಆ ಸುದ್ದಿ. ಅಲ್ಲದೆ ಮೊಗಲ್ ಚಕ್ರವರ್ತಿಯೂ ಬಿಜಾಪುರದ ಸುಲ್ತಾನನೂ ಗೋಲ್ಕೊಂಡಾ ಮೇಲೆ ಯುದ್ಧಕ್ಕೆ ಸಿದ್ಧರಾಗುತ್ತಿದ್ದಾರೆಂಬ ಸುದ್ದಿ. ಗೋಲ್ಕೊಂಡಾ ರಾಜ್ಯದಲ್ಲಿ ಅಲ್ಲೋಲ ಕಲ್ಲೋಲ ವಾಗಿದೆಯೆಂದೂ ತಿಳಿಯಿತು.

ನಮ್ಮ ಫ್ರೆಂಚರು ಒಬ್ಬ ಹಿಂದೂ ಪುರೋಹಿತನನ್ನು ಹಿಡಿದುಕೊಂಡು ಹೋಗಿದ್ದರು. ಅವನನ್ನು ಬಿಡುಗಡೆ ಮಾಡಿಸಬೇಕೆಂದು ವರ್ತಕ ವೀರಣ್ಣ ಕೇಳಿದರು. ನಾನು ವೈಸ್‌ರಾಯರಿಗೆ ಹೇಳಿ ಆತನನ್ನು ಬಿಡಿಸಿದೆ. ಇದರಿಂದ ಹಿಂದೂ ವರ್ತಕರಿಗೆಲ್ಲ ಖುಷಿಯಾಯಿತು. ನಮಗೆ ಏನು ಬೇಕಾದರೂ ಒದಗಿಸುವುದಾಗಿ ಹೇಳಿದರು; ಹಾಗೆ ಮಾಡಿಯೂ ಮಾಡಿದರು. ಅವರು ಒದಗಿಸಿದ ಅಕ್ಕಿ, ಕಾಳು ಕಡ್ಡಿ, ಕಾಯಿಪಲ್ಲೆ ಇವನ್ನೆಲ್ಲಾ ಒಂದು ಹಗಲು ಒಂದು ರಾತ್ರಿ ನಿದ್ದೆಗೆಟ್ಟು ಅಳೆದು ತೂಗಿ ದೋಣಿ ಗಳಿಗೆ ತುಂಬಿಸಿದೆ ಮತ್ತು ನನ್ನ ಮನೆಯಲ್ಲೂ ಭರ್ತಿ ಮಾಡಿಸಿದೆ. ಭರ್ತಿಯಾದ ದೋಣಿ ಗಳನ್ನು ಸೇಂಟ್ ಥೋಮಿಗೆ ಕಳುಹಿಸುವುದಕ್ಕೆ ಇಂಗ್ಲಿಷ್ ಗೌರ್‍ನರ್ ತಕರಾರು ಮಾಡಿದ.

ಈ ಮಧ್ಯೆ ಮೂರರ ಕಡೆಯವರು ವೀರಣ್ಣನ ಮೂಲಕ ರಾಜಿ ಸಂಧಾನ ನಡೆಸಿದರು. ಯುದ್ಧದ ವಿಷಯಗಳಲ್ಲಿ ಬಹು ಚತುರರಾದ ನಮ್ಮ ವೈಸ್‌ರಾಯ್ ಇದನ್ನು ಮೂರರ ಅಶಕ್ತಿಯೆಂದು ಭಾವಿಸಿ ಅವರ ಮೇಲೆ ಬೀಳುವ ನಿರ್ಧಾರ ಮಾಡಿದರು. ತನ್ನ ಗೂಢಚಾರರ ಮೂಲಕ ಮೂರರ ಪಾಳೆಯಕ್ಕೆ ಹೋಗುವ ಬೇರೆ

ಬೇರೆ ಕಳ್ಳದಾರಿಗಳನ್ನೆಲ್ಲಾ ತಿಳಿದುಕೊಂಡಿದ್ದರು. ತನ್ನ ಇಡೀ ಸೈನ್ಯವನ್ನು ಹುರಿದುಂಬಿಸಿ ರಾತ್ರೋ ರಾತ್ರಿ ಶತ್ರುಪಾಳೆಯವನ್ನು ಸಮೀಪಿಸಿದರು. ಮಲಗಿದ್ದವರಿಗೆ ಎಚ್ಚರವಾಗದಂತೆ ತಮ್ಮ ಕೆಲಸ ಸಾಧಿಸಬೇಕೆಂದಿದ್ದರು. ಆದರೆ ನಮ್ಮ ಕಡೆಯ ಕುದುರೆಯೊಂದು ಆ ಕಡೆಯ ವಾಸನೆಗೆ ಕೆನೆಯಿತು. ಪಾಳೆಯದ ಕಾವಲುಗಾರರು ಎಚ್ಚರಗೊಂಡು ಬಂದೂಕ ಹಾರಿಸಿದರು. ನಮ್ಮ ಕಡೆಯ ಒಬ್ಬ ಸಾರ್ಜೆಂಟ್ ಗಾಯಗೊಂಡ. ಕಾವಲುಗಾರರು ಅವರ ಭಾಷೆಯಲ್ಲಿ ಕೂಗಿದರೋ ಇಲ್ಲವೋ ಇಡೀ ಪಾಳೆಯ ಎಚ್ಚರಗೊಂಡಿತು. ನಮ್ಮವರು ಆ ಕೂಡಲೇ ಅವರ ಮೇಲೆರಗಿದರು. ಗಂಡಸರು ಹೆಂಗಸರು ಮಕ್ಕಳು ಮರಿಗಳು ಕುದುರೆ ಕತ್ತೆ ಎಲ್ಲರೂ ನಮ್ಮವರ ಕತ್ತಿಗೆ ಬಲಿಯಾದರು. ಸತ್ತವರ ಹೆಣಗಳು ರಾಶಿರಾಶಿಯಾಗಿ ಬಿದ್ದುವು. ಅವನ್ನು ದಾಟಿ ತಲೆ ತಪ್ಪಿಸಿಕೊಳ್ಳುವುದೇ ಶತ್ರುಗಳಿಗೆ ಕಷ್ಟವಾಯಿತು. ಹಾರಿ ನೆಗೆದು ಕಂದಕಗಳಲ್ಲಿ ಬಿದ್ದರು.

ಶತ್ರುಗಳು ಎದುರು ಬೀಳದ್ದನ್ನು ಕಂಡು ನಮ್ಮ ವೈಸ್‌ರಾಯ್ ಆ ಕಗ್ಗೊಲೆಯನ್ನು ನಿಲ್ಲಿಸಿ ಇಡೀ ಪಾಳೆಯಕ್ಕೆ ಬೆಂಕಿ ಇಡಿಸಿದ. ಆ ಬೆಂಕಿಯ ಜ್ವಾಲೆ ಸುತ್ತೆಲ್ಲಾ ಕಾಣಿಸಿತು. ನಡುರಾತ್ರಿಯಲ್ಲಿ ಇದೇನು ಎಂದು ಬೆಕ್ಕಸಬೆರಗಾದ ಮದ್ರಾಸಿನ ಜನ ಕೋಟೆಯ ತುದಿಗೇರಿ ನೋಡಲಾರಂಭಿಸಿದರು. ಒಬ್ಬೊಬ್ಬರು ಒಂದೊಂದು ಬಗೆಯಾಗಿ ಊಹಿಸಿದರು. ಕೊನೆಗೆ ಗೊತ್ತಾಯಿತು ಇದು ಫ್ರೆಂಚರು ಮಾಡಿದ ಕೆಲಸ ಎಂದು.

ಬೆಳಗಿನವರೆಗೂ ನಮ್ಮ ಫ್ರೆಂಚರು ಮೂರರ ಪಾಳೆಯಕ್ಕೆ ಹಚ್ಚಿದ ಬೆಳಕಿನಲ್ಲಿ ಸಿಕ್ಕಿದ್ದನ್ನೆಲ್ಲಾ ದೋಚಿದರು. ಮೂರರ ಬಾವುಟ ಇಳಿಸಿ ಫ್ರೆಂಚರ ಬಾವುಟ ಹಾರಿಸಿದರು. ಆನೆ, ಕುದುರೆ, ಒಂಟೆ, ಹೇರೆತ್ತು, ಸಾಮಾನು ಸರಂಜಾಮುಗಳನ್ನೆಲ್ಲಾ ವಶಪಡಿಸಿಕೊಂಡರು. ದನಕರುಗಳನ್ನೆಲ್ಲಾ ಅಟ್ಟಾಡಿದರು. ಹುಷಾರಿನ ನಮ್ಮ ವೈಸ್‌ರಾಯ್ ಕುದುರೆಯ ಮೇಲೆ ಕುಳಿತು ನಾಗಾಲೋಟದಲ್ಲಿ ಪಾಳೆಯದ ಸುತ್ತಮುತ್ತ ಓಡಾಡಿ ಏನು ನಡೆಯುತ್ತಿದೆ ಎಂದು ನೋಡಿದರು. ಅವರಿಗೆ ಅಶ್ವಪಡೆಗಳು ಸುತ್ತಲ ಬೆಟ್ಟಗುಡ್ಡ ಕಣಿವೆಗಳಲ್ಲಿ ಹೇರಳವಾಗಿ ಕಾಣಿಸಿದವು. ತನ್ನ ಸೈನ್ಯದ ಯೋಗಕ್ಷೇಮದ ಮೇಲೆ ಕಣ್ಣಿಟ್ಟು ವೈಸ್‌ರಾಯ್ ಬಂದು ಪಾಳೆಯದಲ್ಲಿ ನಡೆಯುತ್ತಿದ್ದ ಲೂಟಿಯನ್ನು ನಿಲ್ಲಿಸಿ ತನ್ನವರನ್ನೆಲ್ಲಾ ಒಂದೆಡೆ ಸೇರಿಸುವಷ್ಟರಲ್ಲಿ ಮೂರರ ೧,೫೦೦ ಅಶ್ವಸೈನ್ಯ ಕತ್ತಿ ಹಿಡಿದು ನಮ್ಮವರ ಮೇಲೆ ಬಿದ್ದಿತು. ನಮ್ಮವರು ಹಾರಿಸಿದ ಬಂದೂಕುಗಳಿಂದ ಶತ್ರುಸೈನ್ಯದ ಕುದುರೆಗಳ ಬಣಬೆಯೇ ಬಿದ್ದಿತು. ಮೂರರು ಹೆದರಿ ಹಿಂಜರಿದರು. ನಮ್ಮವರು ಕೇವಲ ಹತ್ತು ಜನರನ್ನು ಕಳೆದುಕೊಂಡು ವಿಜಯೋತ್ಸಾಹದಿಂದ ಹಿಂದಿರುಗಿದರು.

ಇದಕ್ಕೆ ಮುನ್ನ ಮಸುಲಿಪಟ್ಟಣಕ್ಕೆ ಹೋಗಿದ್ದ ಇಂಗ್ಲಿಷರ ಒಂಬತ್ತು ಹಡಗುಗಳು ಮದ್ರಾಸಿಗೆ ಬಂದವು. ಈ ಹಡಗುಗಳಲ್ಲಿ ಒಂಬತ್ತು ಪೆಟ್ಟಿಗೆ ಚಿನ್ನ ಬೆಳ್ಳಿಯ ಗಟ್ಟಿಗಳಿದ್ದವು. ಒಂದೊಂದು ಪೆಟ್ಟಿಗೆಯ ಬೆಲೆ ೩೦,೦೦೦ ಪೌಂಡುಗಳು.[೧] ಇಂಗ್ಲಿಷ್ ಹಡಗುಗಳ

---

೧. ಇಂಗ್ಲೆಂಡಿನಿಂದ ತಂದ ಚಿನ್ನವನ್ನು ಮದ್ರಾಸಿನ ಟಂಕಸಾಲೆಯಲ್ಲಿ ಪಗೋಡಾಗಳಾಗಿ ಟಂಕಿಸಿ ಅವನ್ನು ಮಸುಲಿಪಟ್ಟಣ ಮುಂತಾದ ಕಡೆಗಳಿಗೆ ಕಳುಹಿಸುತ್ತಿದ್ದರು. ಹೆಚ್ಚು ಕಾಲ ಸಿಕ್ಕದಿದ್ದಾಗ ಹೆಚ್ಚಿಗೆ ಅಕ್ಕಸಾಲಿಗರನ್ನು ಹಣ ಟಂಕಿಸುವ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು.

ಮೇಲೆ ಬೀಳಲು ೨೨ ಡಚ್ ಹಡಗುಗಳು ಸಿಲೋನ್‌ನಿಂದ ಬರುತ್ತಿರುವುದಾಗಿ ಸುದ್ದಿ ತಿಳಿದರೂ ಇಂಗ್ಲಿಷರು ಆ ಪೆಟ್ಟಿಗೆಗಳನ್ನು ಇಳಿಸಲು ಮನಸ್ಸು ಮಾಡಲಿಲ್ಲ. ಆ ಡಚ್ಚರೇನು ಮಾಡುತ್ತಾರೆಂಬ ದುರಹಂಕಾರ ಇಂಗ್ಲಿಷರಿಗೆ. ಮದ್ರಾಸ್ ಮತ್ತು ಸುತ್ತಮುತ್ತಲ ಅಕ್ಕಸಾಲಿಗರಿಗೆಲ್ಲ ಹೇಳಿಕಳುಹಿಸಿದ್ದರು, ೬೦,೦೦೦ ಪಗೋಡಾ ನಾಣ್ಯ ತಯಾರಿಸಲು. ಹೀಗೆ ತಯಾರಾದ ನಾಣ್ಯಗಳನ್ನು ಈ ಹಡಗುಗಳಲ್ಲಿ ಹಾಕಿ ಮಸುಲಿ ಪಟ್ಟಣಕ್ಕೆ ಕಳುಹಿಸಲು ಏರ್ಪಾಡು ಮಾಡಿದ್ದರು. ಸುಲಭವಾಗಿ ಭೂಮಾರ್ಗವಾಗಿ ಈ ಹಣ ಕಳುಹಿಸಬಹುದಿದ್ದರೂ ಡಚ್ಚರ ಭಯವಿಲ್ಲದೆ ಹಡಗುಗಳಲ್ಲಿ ಹಾಕಿದ್ದರು. ಮೇಲೆ ಮೇಲೆ ಡಚ್ಚರಿಗೆ ಹೆದರುವುದಿಲ್ಲವೆಂಬಂತೆ ನಟಿಸಿದರೂ ಅವರ ಹಡಗುಗಳು ಇನ್ನೇನು ಮದ್ರಾಸನ್ನು ತಲುಪುತ್ತಿವೆ ಎಂದು ತಿಳಿದಾಗ ಇಂಗ್ಲಿಷರು ತಮ್ಮ ಹಡಗು ಗಳನ್ನು ಮಸುಲಿಪಟ್ಟಣಕ್ಕೆ ಕಳುಹಿಸಿಬಿಟ್ಟರು.

ಡಚ್ಚರ ಹಡಗುಗಳು ಬಂದೇ ಬಂದವು. ಆಗಸ್ಟ್ ೨೨ನೆಯ ತಾರೀಖು ಹಡಗಿನ ಪ್ರಧಾನ ದಂಡನಾಯಕ ತನ್ನ ಕಡೆಯ ಕೆಲವರನ್ನು ಇಳಿಸಿ ಮೂರರ ಪಾಳೆಯಕ್ಕೆ ಕಳುಹಿಸಿಕೊಟ್ಟ. ಮುಂದೇನು ಮಾಡಬೇಕೆಂದು ತಿಳಿದು ಬರಲು ಹೋದವರಿಗೆ ಅಲ್ಲಿ ಬೂದಿ ಕೆಂಡವಲ್ಲದೆ ಬೇರೇನೂ ಕಾಣಲಿಲ್ಲ. ಮೂರರ ಸಹಾಯದಿಂದ ಫ್ರೆಂಚರನ್ನು ಸದೆಬಡಿಯುವ ಡಚ್ಚರ ಆಲೋಚನೆ ತಲೆಕೆಳಕಾಯಿತು. ಇದನ್ನೆಲ್ಲಾ ನನ್ನಿಂದ ತಿಳಿದ ವೈಸ್‌ರಾಯ್ ಹಡಗುಗಳ ಮೇಲೆ ಗುಂಡು ಹಾರಿಸಿದ. ಸಾವಿರಾರು ಜನ ಸಮುದ್ರ ತೀರದಲ್ಲಿ ನಿಂತು ಗುಂಡಿನ ಹಾರಾಟವನ್ನು ನೋಡಿ ಖುಷಿಪಟ್ಟರು. ಡಚ್ಚರು, ಮೂರರು ಬೀಡುಬಿಟ್ಟಿದ್ದ ಪೂನಾಮಲೆಗೆ ತಮ್ಮವರನ್ನು ಕಳುಹಿಸಿದರು. ಅಲ್ಲಿ ಮೂರರ ದಂಡ ನಾಯಕ ಬುಸ್ಸೋರಾ ಪೆಟ್ಟುತಿಂದು ಮಲಗಿದ್ದ. ಅವನ ಮುಖ್ಯ ಸೇನಾಪಡೆಗಳು ಪರಲೋಕವಾಸಿಗಳಾಗಿದ್ದರು. ಅಥವಾ ಕೈಕಾಲು ಕಳೆದುಕೊಂಡು ಬಿದ್ದಿದ್ದರು. ಸೆಂಟ್ ಥೋಮಿನ ಮೇಲೆ ಬೀಳೋಣ ಬನ್ನಿರೆಂದು ಡಚ್ಚರು ಹೇಳಿದಾಗ ಆ ಮೂರರು ತಮ್ಮಲ್ಲಿ ಹಣವೂ ಇಲ್ಲ, ಜನರೂ ಇಲ್ಲ. ಎರಡು ಲಕ್ಷ ಪಗೋಡಾ ಹಣ ಮತ್ತು ೫೦,೦೦೦ ಜನ ಕಳುಹಿಸಿಕೊಟ್ಟರೆ ಆಮೇಲೆ ಯೋಚನೆ ಮಾಡುತ್ತೇವೆ ಏನು ಮಾಡ ಬೇಕು ಎಂದು ತಿಳಿಸಿದರು. ಡಚ್ಚರು ತಮಗೆ ಮೋಸ ಮಾಡಿದರೆಂದು ಮೂರರು ಭಾವಿಸಿದರು. ತಮ್ಮ ಕಡೆ ೨೩ ಹಡಗುಗಳಿದ್ದರೂ ಫ್ರೆಂಚರ ಮೇಲೆ ತಮ್ಮ ಬೇಳೇಕಾಳು ಬೇಯುವುದಿಲ್ಲವೆಂದು ಭಾವಿಸಿದ ಡಚ್ಚರು ಲಂಗರು ಎತ್ತಿ ಪುಲಿಕಾಟ ಕಡೆ ಹೊರಟರು. ಹಿಂದಿನಿಂದ ಭಾರಿ ಸರಕುಗಳನ್ನು ತುಂಬಿಕೊಂಡು ಬರುತ್ತಿದ್ದ ಹಡಗುಗಳ ರಕ್ಷಣೆಗೆ ಐದು ಹಡಗುಗಳನ್ನು ದೂರದಲ್ಲಿ ಬಿಟ್ಟರು.

ಸೆಂಟ್ ಥೋಮಿಗೆ ಬೇಕಾದ ದವಸಧಾನ್ಯಗಳನ್ನು ಒದಗಿಸುವ ಕೆಲಸ ನಡೆದೇ ಇತ್ತು. ಸುತ್ತಾಮುತ್ತಾ ಹಳ್ಳಿಯಲ್ಲಿ ಸಿಕ್ಕಿದ ೩೦೦ ಹೇರೆತ್ತುಗಳನ್ನು ಹೊಡೆದುಕೊಂಡು ಬಂದು ನನ್ನ ಮನೆಯಲ್ಲಿ ಆ ದವಸ ತುಂಬಿದರು. ಆ ದವಸಕ್ಕೆಲ್ಲ ಒಂದು ಕಾಸಿಗೂ

ಲೋಪ ಬರದಂತೆ ಹಣ ಕೊಡಲಾಯಿತು. ಇದು ಜನರಲ್ಲಿ ನಮ್ಮ ಬಗ್ಗೆ ಒಳ್ಳೆಯ ಅಭಿಪ್ರಾಯ ಉಂಟುಮಾಡಿತು.

ಡಚ್ಚರ ದಂಡನಾಯಕನು ಇಂಗ್ಲಿಷ್ ಗೌರ್ನರ್ ಜೊತೆ ಸಂಧಾನ ನಡೆಸಿ ಫ್ರೆಂಚ ರನ್ನು ಸದೆಬಡಿಯುವ ಸಲಹೆ ಮಾಡಿದ. ಇದರಲ್ಲಿ ಕುತಂತ್ರವನ್ನು ಕಂಡ ಇಂಗ್ಲಿಷ್ ಗೌರ್ನರ್ ಏನೇನೊ ನೆಪ ಹೇಳಿಬಿಟ್ಟರು. ಆದರೂ ನಮ್ಮವರಿಗೆ ಆಹಾರ ಸಾಮಗ್ರಿಗಳು ಹೋಗದಂತೆ ತಡೆದರು. ಅಲ್ಲದೆ ವರ್ತಕರನ್ನೂ ಹೆದರಿಸಿದರು. ಹೆದರದಿದ್ದವನೆಂದರೆ ವೀರಣ್ಣ ಒಬ್ಬನೇ. ಆತ ಹೇರಳವಾಗಿ ಕಾಳುಕಡ್ಡಿಗಳನ್ನು ಒದಗಿಸಲು ಮುಂದೆ ಬಂದ. ನಮ್ಮ ವೈಸ್‌ರಾಯ್ ದಿನಾ ಹೊರಗೆ ಹೋಗಿ ಸಿಕ್ಕಿದ ದವಸಧಾನ್ಯಗಳನ್ನು ಸೆಂಟ್ ಥೋಮಿಗೆ ಸಾಗಿಸುತ್ತಿದ್ದರು. ಒಂದು ದಿನ ೨,೦೦೦ ಹೇರು ಸರಕುಗಳನ್ನು ಸಾಗಿಸಿದರು. ಆದರೆ ಇದು ಇಂಗ್ಲಿಷರಿಗಾಗಿ ಮದ್ರಾಸಿಗೆ ಹೋಗುತ್ತಿತ್ತು. ಮೊದಮೊದಲು ಇದನ್ನು ಇಂಗ್ಲಿಷರಿಗೆ ಬಿಟ್ಟುಕೊಡಲು ಒಪ್ಪದ ವೈಸ್‌ರಾಯ್ ವೀರಣ್ಣ ಹೇಳಿದ ಮೇಲೆ ಬಿಟ್ಟು ಕೊಟ್ಟರು.

ಅತ್ತ ಡಚ್ಚರೂ ಮೂರರೂ ಒಂದಾಗಿ ಫ್ರೆಂಚರ ಮೇಲೆ ಬೀಳಲು ಸನ್ನಾಹ ಮಾಡುತ್ತಿದ್ದಾರೆಂದೂ, ಮೂರರು ತಮಗಾದ ಅವಹೇಳನಕ್ಕೆ ಪ್ರತಿಯಾಗಿ ಮದ್ರಾಸನ್ನೂ ಸುತ್ತಮುತ್ತಲ ಹಳ್ಳಿಗಳನ್ನೂ ಸುಟ್ಟು ಭಸ್ಮ ಮಾಡಬೇಕೆಂದಿದ್ದಾರೆಂದೂ ತಿಳಿದು ಮದ್ರಾಸಿನ ಇಂಗ್ಲಿಷರೂ ಪೋರ್ಚುಗೀಸರೂ ಇಡೀ ಜನರೆಲ್ಲರೂ ದಿಗ್ಭ್ರಾಂತರಾದರು. ಇದನ್ನು ಎದುರಿಸಲು ಇಂಗ್ಲಿಷ್ ಗೌರ್ನರ್ ತಕ್ಕ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದರು. ಫ್ರೆಂಚ್ ಸೇನೆಯಿಂದ ಬಿಟ್ಟುಬಂದವರನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಳ್ಳುವುದನ್ನು ಮಾಡುತ್ತಿದ್ದರು. ನಮ್ಮ ವೈಸ್‌ರಾಯ್ ಯಾವುದಕ್ಕೂ ಹೆದರದೆ ಎಲ್ಲರನ್ನೂ ಎದುರಿಸುವ ಸನ್ನಾಹ ಮಾಡಿದ್ದರು. ಇನ್ನು ಮದ್ರಾಸಿನ ಹೆಣ್ಣುಗಳಿಗೂ ಸೆಂಟ್ ಥೋಮಿನ ಗಂಡುಗಳಿಗೂ ಪ್ರೇಮ ವ್ಯವಹಾರಗಳು ನಡದೇ ಇದ್ದುವು. ಮದ್ರಾಸಿನಲ್ಲಿರುವುದು ಕ್ಷೇಮಕರವಲ್ಲವೆಂದು ತಿಳಿದ ಹೆಣ್ಣುಗಳು ಆದಷ್ಟು ಜಾಗ್ರತೆ ಮದುವೆಯಾಗಿ ತಮ್ಮ ಗಂಡಂದಿರೊಡನೆ ಇರಲು ಅಪೇಕ್ಷೆಪಡುತ್ತಿದ್ದರು. ಮದುವೆ ಮಾಡಿಸು ಎಂದು ನನ್ನ ಬಳಿಗೆ ಹೆಣ್ಣುಗಂಡುಗಳು ಬರುತ್ತಿದ್ದವು. ಹೀಗಾಗಿ ನನ್ನ ಬೇರೆ ಕೆಲಸದ ತಾಪತ್ರಯದ ಜೊತೆಗೆ ಮದುವೆ ಏಜಂಟನಾಗಿಯೂ ಕೆಲಸ ಮಾಡಬೇಕಾಗಿತ್ತು. ಒಂದು ದಿನ ಫ್ರೆಂಚರ ನಿಜವಾದ ಗೆಳೆಯ ವೀರಣ್ಣ ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಗುಟ್ಟಿನ ಸಮಾಚಾರ ಹೇಳಿದ. ಅದೇನೆಂದರೆ, ಡಚ್ಚರು ಸೆಂಟ್ ಥೋಮಿನ ಮೇಲೆ ಧಾಳಿ ಮಾಡಿ ಅದನ್ನು ಹಾಳು ಮಾಡುವ ಬದಲು ಮದ್ರಾಸಿನ ಬಳಿ ಬೀಡುಬಿಟ್ಟು ನಮ್ಮ ಫ್ರೆಂಚರಿಗೆ ಹಣದ ಆಸೆ ತೋರಿಸಿ ತಮ್ಮ ಕಡೆಗೆ ಎಳೆದುಕೊಳ್ಳುವ ಸಂಚು ಹೂಡಿದ್ದಾರೆ ಎಂದು. ಆಗಲೇ ಹಲವಾರು ಜನ ಫ್ರೆಂಚರು ಡಚ್ಚರ ಕಡೆ ಸೇರಿರುವುದಾಗಿಯೂ ತಿಳಿಯಿತು. ಇದನ್ನೆಲ್ಲಾ ನಾನು ನಮ್ಮ ವೈಸ್‌ರಾಯಿಗೆ ವರದಿಮಾಡಿದೆ. ವೈಸ್‌ರಾಯ್ ಕೂಡಲೇ

ತನ್ನ ಸೈನ್ಯವನ್ನೆಲ್ಲಾ ಒಂದೆಡೆ ಸೇರಿಸಿ ಅಲೆಕ್ಸಾಂಡರನು ಮುಂದೆ ಹೋಗಲು ಹಿಂಜರಿದ ಸೈನಿಕರನ್ನು ಕುರಿತು ಆಡಿದ ಮಾತಿನ ಧಾಟಿಯಲ್ಲಿ ಮಾತಾಡಿ ಹುರಿದುಂಬಿಸಿದರು: 'ನಮ್ಮ ದೊರೆಯ ಸೇವೆಯನ್ನು ಬಿಟ್ಟು ನೀವು ಡಚ್ಚರ ಕಡೆ ಹೋದರೆ ನಿಮಗೆ ದಾಸ್ಯ ತಪ್ಪಿದ್ದಲ್ಲ. ಧೈರ್ಯಗೆಡಬೇಡಿ. ನಿಮ್ಮ ಸೇವೆಗೆ ತಕ್ಕ ಪ್ರತಿಫಲ ನಮ್ಮ ದೊರೆಯಿಂದ ಸಿಗುವುದು' ಎಂದು ಹೇಳಿ ಅವರ ಮನವೊಲಿಸಿದರು. ತಾನು ಹೊಸದಾಗಿ ತಯಾರು ಮಾಡಿದ ೨೦೦ ಸೈನಿಕರಿಗೆ ಕತ್ತಿಗಳು ಬೇಕೆಂದು ಹೇಳಿಕಳುಹಿಸಿದರು. ನಾನು ವೀರಣ್ಣ ನಿಗೆ ಹೇಳಿದೆ. ಆತ ತನ್ನ ಕೋಠಿಯಲ್ಲಿದ್ದ ೨೦೦ ಕತ್ತಿಗಳನ್ನು ಕಳುಹಿಸಿಕೊಟ್ಟ.

ಡಚ್ಚರು ಗೋಲ್ಕೊಂಡಾ ರಾಜನಿಗೆ ಪದೇ ಪದೇ ಒತ್ತಾಯ ಹಾಕುತ್ತಿದ್ದರು. ಮದ್ರಾಸನ್ನು ಧ್ವಂಸ ಮಾಡದೆ ಫ್ರೆಂಚರನ್ನು ಸದೆಬಡಿಯಲು ಕಷ್ಟವಾಗುತ್ತಿದೆ, ಆದ್ದರಿಂದ ಮೂರರು ನಮ್ಮೊಡನೆ ಸೇರುವಂತೆ ಆಜ್ಞೆಮಾಡಬೇಕು ಎಂದು. ಮದ್ರಾಸಿನಿಂದ ಗೋಲ್ಕೊಂಡಾ ರಾಜನಿಗೆ ಭಾರಿ ಆದಾಯವಿತ್ತು. ಅದನ್ನು ಕಳೆದುಕೊಳ್ಳಲು ಆತನಿಗೆ ಇಷ್ಟವಿರಲಿಲ್ಲ. 'ನೀವು ಬಹು ಶಕ್ತಿವಂತರೆಂದು ಹೇಳಿಕೊಳ್ಳುತ್ತಿದ್ದೀರಿ. ನೀವೇ ಏಕೆ ಮದ್ರಾಸನ್ನು ಧ್ವಂಸ ಮಾಡಬಾರದು?' ಎಂದು ಗೋಲ್ಕೊಂಡಾ ರಾಜ ಹೇಳಿಬಿಟ್ಟ. ಡಚ್ಚರು ತಬ್ಬಿಬ್ಬಾದರು. ಡಚ್ಚರ ದಂಡನಾಯಕ ಇಂಗ್ಲಿಷರ ನೆರವು ಕೇಳಿದ. ಮಾತುಕತೆ ಗಾಗಿ ಇಂಗ್ಲಿಷ್ ಗೌರ್ನರ್ ತನ್ನ ಕಡೆಯ ಸ್ಮಿತ್, ವಿಲ್ಕ್ಸ ಮತ್ತು ಥಾಮಸ್ ಕ್ಲಾರ್ಕ್ ಎಂಬುವರನ್ನು ಪಲ್ಲಕ್ಕಿ ಕುದುರೆ ಮುಂತಾದ ಪರಿವಾರದೊಡನೆ ರೈಕ್‌ಲೋಫ್ ಬಳಿಗೆ ಕಳುಹಿಸಿಕೊಟ್ಟ. ಇತ್ತೀಚೆಗೆ ನಡೆದ ನೌಕಾಯುದ್ಧದಲ್ಲಿ ಬಂಧಿಸಲ್ಪಟ್ಟ ಇಂಗ್ಲಿಷರನ್ನು ಬಿಟ್ಟುಬಿಡುವುದಾಗಿಯೂ ತಮ್ಮ ಮತ್ತು ಇಂಗ್ಲಿಷರ ಹಿತಕ್ಕಾಗಿ ಫ್ರೆಂಚರನ್ನು ಓಡಿಸು ವುದು ಸೂಕ್ತವೆಂದೂ ರೈಕ್‌ಲೋಫ್ ಹೇಳಿದ. ಹೋದ ಇಂಗ್ಲಿಷ್ ರಾಯಭಾರಿಗಳು ಸಮಾಧಾನದಿಂದ ಹಿಂದಿರುಗಿದರು.

ಸೆಪ್ಟಂಬರ್ ೧೯ ಮಂಗಳವಾರ. ಈ ದಿನ ಇಂಗ್ಲಿಷ್ ಕಂಪನಿಯ ಪ್ರಥಮ ಸಲಹೆ ಗಾರನ ಹೆಂಡತಿಯ ಶವಸಂಸ್ಕಾರ ನಡೆಯಿತು. ಇಂಡಿಯಾಕ್ಕೆ ಬಂದ ಇಂಗ್ಲಿಷ್ ಹೆಂಗಸರಲ್ಲಿ ಈಕೆಯಷ್ಟು ರೂಪವತಿ ಬೇರೆ ಯಾರೂ ಇರಲಿಲ್ಲ. ಕೇವಲ ೧೯ ವರ್ಷ ವಯಸ್ಸಿನ ಈಕೆ ತನ್ನ ಚೊಚ್ಚಲು ಹೆರಿಗೆಯಲ್ಲಿ ಅಸುನೀಗಿದಳು. ಇಡೀ ಇಂಗ್ಲಿಷರೂ ಅವರ ಸೈನ್ಯವೂ ಶೋಕ ಆಚರಿಸಿದರು. ಸುಂದರವಾದ ಎಂಟು ಯುವತಿಯರು ಶವದ ಪೆಟ್ಟಿಗೆ ಹಿಡಿದಿದ್ದರು. ಶೋಕದ ಅರೆ ಉಡುಪು ಧರಿಸಿದ್ದ ಆ ಅಪ್ಸರೆಯರನ್ನು ನೋಡಿ ದವರಲ್ಲಿ ವ್ಯಸನಕ್ಕಿಂತ ಹೆಚ್ಚಾಗಿ ಕಾಮದ ಕಿಚ್ಚೆಬ್ಬಿಸಿತ್ತು.

ಡಚ್ಚರು ಏನೇ ಸಿದ್ಧತೆ ಮಾಡಿಕೊಳ್ಳಲಿ, ನಮಗೆ ಆಗದವರು ಏನೆಲ್ಲಾ ಹೆದರಿಕೆ ಬೆದರಿಕೆ ಮಾಡಲಿ ಮೂರರ ಮೇಲೆ ನಾವು ಸಾಧಿಸಿದ ವಿಜಯ ಎಲ್ಲರಲ್ಲೂ ನಮ್ಮ ಬಗ್ಗೆ ಭಯಭೀತಿಯನ್ನುಂಟುಮಾಡಿತು. ನಾಡಿನ ರಾಜ ಮಹಾರಾಜರೂ ಪಾಳೆಯ ಗಾರರೂ ತಮ್ಮ ರಾಯಭಾರಿಗಳನ್ನು ಕಳುಹಿಸಿ ನಮ್ಮ ವೈಸ್‌ರಾಯ್ ಸ್ನೇಹ ಹಸ್ತ ಕೋರಿದರು. ಕರ್ನಾಟಕ ರಾಜ (The King or Carntic) ಸ್ವತಃ ತಾನೇ

ಬಂದು ಮೂರು ದಿನ ಯಾರಿಗೂ ತಿಳಿಯದಂತೆ ಸೆಂಟ್ ಥೋಮ್ ಪಟ್ಟಣದಲ್ಲಿದ್ದು ವೈಸ್‌ರಾಯ್ ಒಡನೆ ಮಾತುಕತೆ ಆಡಿದ. ತನ್ನ ಕರ್ನಾಟಿಕ ದೇಶ ಗೋಲ್ಕೊಂಡಾ ರಾಜ್ಯದ ಮೊದಲ ಶಾಹಿ. ಇದನ್ನು ತನ್ನಿಂದ ಕಿತ್ತುಕೊಂಡಿದ್ದಾರೆ. ತನಗೆ ವೈಸ್‌ರಾಯ್ ಸಹಾಯ ಮಾಡಿ ತನ್ನ ರಾಜ್ಯವನ್ನು ಗೆದ್ದುಕೊಟ್ಟದ್ದಾದರೆ ತಾನು ವೈಸ್‌ರಾಯನ್ನು ಇಡೀ ರಾಜ್ಯದ ಅಧಿಪತಿಯಾಗಿ ಮಾಡುವುದಾಗಿ ಹೇಳಿದ.[೧] ಕ್ಯಾಲಿಕಟ್, ಕೊಚಿನ್ ಮುಂತಾದ ಅಕ್ಕಪಕ್ಕದ ರಾಜ್ಯಗಳೂ ತಮ್ಮ ರಾಯಭಾರಿಗಳನ್ನು ಕಳುಹಿಸಿ ಡಚ್ಚರ ಹಾವಳಿಯಿಂದ ತಮ್ಮನ್ನು ಪಾರುಮಾಡಬೇಕೆಂದು ಹೇಳಿಕೊಂಡರು. ವೈಸ್‌ರಾಯ್ ಖಚಿತವಾಗಿ ಏನೂ ಹೇಳಲಿಲ್ಲ. ತನಗೆ ಅತ್ಯಾವಶ್ಯಕವಾದ ಸೈನ್ಯ, ಹಣ ಮತ್ತು ಇನ್ನಿತರ ಸಲಕರಣೆಗಳು ಇಲ್ಲದಿರುವಾಗ ಏನು ತಾನೇ ಹೇಳಲಾದೀತು? 'ಆಗಲಿ ನೋಡೋಣ' ಎಂದಷ್ಟೇ ಹೇಳಿ ಅವರಲ್ಲಿ ಆಸೆ ಹುಟ್ಟಿಸಿ ಕಳುಹಿಸಿಕೊಟ್ಟರು.

ಸೆಪ್ಟೆಂಬರ್ ೨೦ನೆಯ ಬುಧವಾರ ಬೆಳಗ್ಗೆ ಸೆಂಟ್ ಥೋಮಿಗೆ ಹೋಗಿ ವೈಸ್‌ರಾಯ ರನ್ನು ಕಂಡೆ. ಇಡೀ ದಿನ ಅವರ ಜೊತೆ ಇದ್ದೆ. ಎಲ್ಲಾ ವಿದ್ಯಾಮಾನಗಳನ್ನೂ ಗಮನಿಸಿದ ಮೇಲೆ ನಾನು ಇಂಗ್ಲಿಷ್ ಹಡಗೊಂದರಲ್ಲಿ ಸೂರತ್ತಿಗೆ ಹೋಗಬೇಕೆಂದೂ, ಅಲ್ಲಿ ನಮ್ಮ ಕಂಪನಿಯವರಿಗೆ ಹೇಳಿ ಧನಸಹಾಯ ಒದಗಿಸುವಂತೆ ಮಾಡಬೇಕೆಂದೂ, ಸೂರತ್ತಿನಿಂದ ಭೂಮಾರ್ಗದಾಗಿ ಫ್ರಾನ್ಸಿಗೆ ಹೋಗಿ ತಾನು ಕೊಡುವ ಕಾಗದ ಪತ್ರಗಳನ್ನು ಆಸ್ಥಾನಕ್ಕೆ ಒಪ್ಪಿಸಿ ಈ ಪೂರ್ವದೇಶದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನೆಲ್ಲ ತಿಳಿಸಬೇಕೆಂದೂ ವೈಸ್‌ರಾಯ್ ಹೇಳಿದರು. ಇಂಗ್ಲಿಷ್ ಗೌರ್‍ನರ್‌ಗೆ ಕೊಡಲು ಒಂದು ಕಾಗದವನ್ನೂ ಕೊಟ್ಟರು. ಇದನ್ನು ತಂದು ಅವರಿಗೆ ಕೊಟ್ಟೆ. ನನ್ನನ್ನು ತಮ್ಮ ಹಡಗಿನಲ್ಲಿ ಕಳುಹಿಸಿ ಕೊಡಲು ಸಂತೋಷದಿಂದ ಒಪ್ಪಿದರು.

ಬೆಳಗ್ಗೆ ಫೋರ್ಟ್ ಸೆಂಟ್ ಜಾರ್ಜ್‌ಗೆ ಹೋಗಿ ಇಂಗ್ಲಿಷ್ ಗೌರ್‍ನರರಿಂದ ಬೀಳ್ಕೊಂಡೆ. ಐದು ತಿಂಗಳುಗಳ ಕಾಲ ಮದ್ರಾಸ್‌ನಲ್ಲಿದ್ದ ವೇಳೆ ನನಗೆ ತೋರಿಸಿದ ಪ್ರೀತ್ಯಾದರಗಳಿಗೆ ವಂದನೆ ಹೇಳಿದೆ. ನನಗಾದ ತೊಂದರೆಯನ್ನು ಗಮನಿಸಬಾರದೆಂದೂ, ಅದೆಲ್ಲಾ ಅನಿವಾರ್ಯವಾಗಿತ್ತೆಂದೂ ಹೇಳಿ ಅವರು ನನ್ನನ್ನು ಕಳುಹಿಸಿಕೊಟ್ಟರು.

ನನ್ನ ಬಿಡಾರಕ್ಕೆ ಹಿಂದಿರುಗಿದಾಗ ಅಲ್ಲಿ ವೈಸ್‌ರಾಯರು ಕಳುಹಿಸಿಕೊಟ್ಟ ಇಬ್ಬರು ಅಂಗರಕ್ಷಕರೂ ಜೀನು ಬಿಗಿದ ಕುದುರೆಗಳೂ ೬೦ ಲಸ್ಕರಿಗಳೂ ನನ್ನನ್ನು ಸೆಂಟ್ ಥೋಮಿಗೆ ಕರೆದುಕೊಂಡು ಹೋಗಲು ಕಾಯುತ್ತಿದ್ದರು. ನಾನು ಹೊರಟೆ. ಹೋಗು ವಾಗ ಡಚ್ಚರ ಸೇನಾಧಿಪತಿ ಜನರಲ್ ರೈಕ್‌ಲೋಫರು ಕಳುಹಿಸಿದ ಮೂವರು ರಾಯಭಾರಿಗಳನ್ನು ಕಂಡೆ. ಇದಕ್ಕೆ ಮುನ್ನ ನಮ್ಮ ವೈಸ್‌ರಾಯ್ ಪುಲಿಕಾಟ್‌ಗೆ ಕೆಲವು

---

೧. ಈ ಕರ್ನಾಟಿಕ ರಾಜನ ಹೆಸರು ವೆಂಕಟಪತಿರಾಯಲು (೧೬೭೨–೯೨). ವಿಜಯ ನಗರದ ಅರಸರ ವಂಶಕ್ಕೆ ಸೇರಿದ ಈತ ಆ ರಾಜ್ಯದ ಪತನದ ನಂತರ ಚಂದ್ರಗಿರಿಯಲ್ಲಿ ಇದ್ದುಕೊಂಡು ಹೇಗೋ ಕಾಲ ಹಾಕುತ್ತಿದ್ದ.

ಫ್ರೆಂಚ್ ಅಧಿಕಾರಿಗಳನ್ನು ಕಳುಹಿಸಿದ್ದರು. ಅದಕ್ಕೆ ಪ್ರತಿಯಾಗಿ ಈ ಡಚ್ ಅಧಿಕಾರಿಗಳು ಬಂದಿದ್ದರು. ಇವರು ಸಂಧಾನದ ನೆಪ ಹೇಳಿ ಬಂದಿದ್ದರೂ ಬಂದ ನಿಜವಾದ ಉದ್ದೇಶ ಸೆಂಟ್ ಥೋಮಿನ ಸ್ಥಿತಿಗಳನ್ನು ತಿಳಿದುಕೊಳ್ಳುವುದೇ ಆಗಿತ್ತು. ವೈಸ್‌ರಾಯ್ ತನ್ನ ಶಕ್ತಿಸಾಮರ್ಥ್ಯಗಳೇನಿವೆಯೆಂದು ತೋರಿಸದೆ ಬಿಡಲಿಲ್ಲ. ಎಲ್ಲಾ ತೋರಿಸಿ, ಡಚ್ಚರು ನಮ್ಮ ಮೇಲೆ ವ್ಯರ್ಥವಾಗಿ ಹೋರಾಡುತ್ತಿದ್ದಾರೆ. ಅದು ಬೇಡ. ಇಬ್ಬರೂ ಒಂದಾಗಿರೋಣ. ಇದರಿಂದ ಡಚ್ಚರ ವ್ಯಾಪಾರ ಸಾಪಾರಕ್ಕೆ ತುಂಬಾ ಅನುಕೂಲ. ಇದನ್ನೆಲ್ಲಾ ನಿಮ್ಮ ಜನರಲ್ ರೈಕ್‌ಲೋಫರಿಗೆ ವರದಿಮಾಡಿ. ಯೂರೋಪಿನಿಂದ ಬರುತ್ತಿರುವ ನಮ್ಮ ಭಾರಿ ಸೈನ್ಯವು ಡಚ್ಚರಿಗೆ ವಿರೋಧವಾಗಿ ನಡೆಯುವುದನ್ನು ತಪ್ಪಿಸಿ ಎಂದು ಹೇಳಿ ಅದ್ದೂರಿಯ ಭೋಜನಕೊಟ್ಟ ಏರ್ಪಡಿಸಿ ಹನ್ನೊಂದು ಕುಶಾಲ್ ತೋಪಿನ ಮರ್ಯಾದೆ ಕೊಟ್ಟು ಕಳುಹಿಸಿದರು.

ಇವರು ಹೋದ ಮೇಲೆ ವೈಸ್‌ರಾಯರೂ ಬೊರೊ ಅವರೂ ಸೂರತ್ತಿಗೂ ಫ್ರಾನ್ಸಿಗೂ ಕಳುಹಿಸಿಕೊಡಬೇಕಾದ ಓಲೆಗಳನ್ನು ಸಿದ್ಧಪಡಿಸಿದರು. ನಾನು ಸೂರತ್ತಿನಲ್ಲಿ ಏನುಮಾಡಬೇಕು, ಫ್ರಾನ್ಸಿನ ಆಸ್ಥಾನದಲ್ಲಿ ಏನು ಮಾಡಬೇಕು ಎಂಬ ಬಗ್ಗೆ ವಿವರಗಳನ್ನು ಬರೆದರು. ಈ ಮಧ್ಯೆ ನಾನು ಸೆಂಟ್ ಥೋಮಿನ ಗೌರ್ನರ್ ಮತ್ತು ಇನ್ನಿತರರನ್ನು ಕಂಡು ಬಂದೆ. ಅವರೆಲ್ಲಾ ನಾನು ಫ್ರಾನ್ಸಿಗೆ ಹೋಗುತ್ತಿರುವುದಕ್ಕಾಗಿ ತುಂಬಾ ಖುಷಿಪಟ್ಟರು. ತಾವು ಈ ಪೂರ್ವ ಪ್ರಪಂಚದಲ್ಲಿ ಫ್ರೆಂಚ್ ದೊರೆ ಹಾಗೂ ನಾಡಿನ ಹಿರಿಮೆಗಾಗಿ ಏನೇನು ಸಾಧಿಸಿದ್ದೇವೆಂಬುದನ್ನು ಅಲ್ಲಿಯವರಿಗೆ ಹೇಳಬೇಕೆಂದು ತಿಳಿಸಿದರು.

ಸಂಜೆ ಆರು ಗಂಟೆಯ ವೇಳೆ ನಾನು ವೈಸ್‌ರಾಯ್ ಜೊತೆ ಮಾತನಾಡುತ್ತಾ ಅವರ ಕೊನೆಯ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವಾಗ ಇಂಗ್ಲಿಷ್ ಹಡಗು ಲಂಗರು ಎತ್ತಿ ಗುಂಡು ಹಾರಿಸಿ ಹೊರಡುವ ಸೂಚನೆ ಕೊಟ್ಟಿತು. ಇನ್ನು ತಡಮಾಡುವುದು ಬೇಡ ಎಂದು ವೈಸ್‌ರಾಯರಿಂದ ಬೀಳ್ಕೊಂಡು ಹೊರಟೆ. ನನ್ನನ್ನು ಕಳುಹಿಸಲು ಅವರು ಸಮುದ್ರತೀರದವರೆಗೂ ಬಂದರು. ಅಲ್ಲಿ ನನ್ನನ್ನು ಸಮುದ್ರದಲ್ಲಿದ್ದ ಹಡಗಿಗೆ ಕೊಂಡೊಯ್ಯಲು ಒಂದು ದೋಣಿ ಸಿದ್ಧವಾಗಿತ್ತು. 'ಬೊಂಬಾಯಿ ಮರ್ಚೆಂಟ್' ಎಂಬ ಹೆಸರಿನ ಹಡಗಿನಲ್ಲಿ ಕುಳಿತೆ. ಹಡಗಿನ ನಾಯಕ ಜಾರ್ಜ್ ಎರ್ವಿನ್ ಎಂಬುವರು ನನ್ನನ್ನು ಬಹು ಪ್ರೀತಿಯಿಂದ ಎದುರುಗೊಂಡು ಒಂದು ಒಳ್ಳೆಯ ಸ್ಥಳ ಮಾಡಿಕೊಟ್ಟರು.

ಹಡಗಿನಲ್ಲಿ ನಮ್ಮ ಫ್ರೆಂಚ್ ಸೇನೆಯಿಂದ ಓಡಿಬಂದಿದ್ದ ಮ. ದೇ. ಶಾಂಪಿನ್ಯೊಲ್ (M. de. Champignolle) ಎಂಬುವನನ್ನು ಕಂಡು ನನಗೆ ಅಚ್ಚರಿಯಾಯಿತು. ಇಂಗ್ಲಿಷ್ ಗೌರ್ನರ್ ಮತ್ತು ಫಾದರ್ ಎಫ್ರೈಮರು ಅವನನ್ನು ಕಳುಹಿಸಿಕೊಟ್ಟಿರುವುದಾಗಿ ಎರ್ವಿನರು ತಿಳಿಸಿದರು. ವೇಳೆ ಇದ್ದರೆ ಇದನ್ನು ನಮ್ಮ ವೈಸ್‌ರಾಯರಿಗೆ ತಿಳಿಸಿ ಅವನನ್ನು ತೀರಕ್ಕೆ ಕಳುಹಿಸುವುದಕ್ಕೆ ವ್ಯವಸ್ಥೆ ಮಾಡುತ್ತಿದ್ದೆ. ಆದರೆ ಹಡಗು ಆಗಲೇ ಹೊರಟಿತ್ತು. ರಾತ್ರಿ ೯ ಗಂಟೆ. ಹೂಗಾಳಿಯಲ್ಲಿ ಹಡಗು ತೇಲುತ್ತಾ ದಕ್ಷಿಣ ದಿಕ್ಕಿಗೆ ಹೊರಟಿತು.

ಸೆಪ್ಟಂಬರ್ ೨೨ನೆಯ ಗುರುವಾರ ತೀರದಲ್ಲೇ ನಿಧಾನವಾಗಿ ಯಾನ ಮಾಡಿ ಸಂಜೆ ಹೊತ್ತಿಗೆ ಚಿಂಗಲ್‌ಪಟ್ (ಮದ್ರಾಸಿನಿಂದ ದಕ್ಷಿಣಕ್ಕೆ ೩೯ ಮೈಲಿ) ಸಮೀಪಿಸಿದೆವು. ಮಾರನೆಯ ದಿನ ಹಡಗುಪಡೆಯ ದಂಡನಾಯಕ (Commondore) ಕ್ಯಾಪ್ಟನ್ ಬಾಸ್ (Basse) ನಮ್ಮ ಹಡಗಿಗೆ ಬಂದು ಇಡೀ ದಿನವೆಲ್ಲಾ ಇದ್ದರು. ಅವರ ಕಂಪನಿಯ ವಹಿವಾಟುಗಳ ಬಗ್ಗೆ ನಾನು ಅವರೊಡನೆ ಬಹಳ ಹೊತ್ತು ಮಾತನಾಡಿದೆ. ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಈ ವರ್ಷ ಹತ್ತು ಹಡಗುಗಳು ಹೊರಟವು. ಅವುಗಳಲ್ಲಿ ಲಂಡನ್ ಮರ್ಚೆಂಟ್ ಎಂಬುದೊಂದೇ ಕಂಪನಿಯ ಸ್ವಂತ ಹಡಗು. ಉಳಿದ ಒಂಬತ್ತು ಇತರರಿಂದ ಬಾಡಿಗೆ ಪಡೆದವುಗಳು. ಡಚ್ಚರೊಡನೆ ನಡೆಯುತ್ತಿರುವ ಯುದ್ಧದ ಕಾರಣ ಈ ವರ್ಷ ಇಷ್ಟೊಂದು ದೊಡ್ಡ ಹಡಗುಪಡೆ ಕಳುಹಿಸಬೇಕಾಯಿತು. ಇದನ್ನು ನೋಡಿ ಡಚ್ಚರಾಗಲೀ ಫ್ರೆಂಚರಾಗಲೀ ಇಂಡಿಯಾಕ್ಕೆ ತಮ್ಮ ಪಡೆಗಳನ್ನು ಕಳುಹಿಸದಿರಲಿ ಎಂಬುದು ಉದ್ದೇಶ. ಅಲ್ಲದೆ ಈಗ ಹಿಂದಿರುಗುತ್ತಿರುವ ಏಳು ಹಡಗುಗಳಲ್ಲಿ ಹೇರಿರುವ ಸರಕುಗಳಿಂದ ಇಂಗ್ಲೆಂಡಿಗೆ ಅಪಾರ ಲಾಭ ಇದೆ ಮತ್ತು ಕಳೆದುಕೊಂಡ ಮೂರು ಹಡಗುಗಳಿಂದಲೂ ಏನೂ ನಷ್ಟವಿಲ್ಲ ಎಂದು ಹೇಳಿದರು.

ಯೂರೋಪಿನಲ್ಲಿ ಹಾಗೂ ಪೂರ್ವದಲ್ಲಿ ಇಂಗ್ಲಿಷ್ ಕಂಪನಿ ತನ್ನ ವ್ಯಾಪಾರ ವಹಿವಾಟುಗಳನ್ನು ಬಹು ಎಚ್ಚರಿಕೆ ಹಾಗೂ ವಿಚಕ್ಷಣೆಗಳಿಂದ ನಡೆಸುತ್ತಿರುವುದು ನಿಜವಾಗಿಯೂ ಮೆಚ್ಚತಕ್ಕ ವಿಷಯ. ಇಂಗ್ಲೆಂಡಿನಿಂದ ಕೋರಮಂಡಲ ಮತ್ತು ಬಂಗಾಳ ತೀರಕ್ಕೆ ಬಂದ ಹತ್ತು ಹಡಗುಪಡೆ ಡಚ್ಚರೊಡನೆ ನಡೆದ ಹೋರಾಟದಲ್ಲಿ ಮೂರು ಹಡಗುಗಳನ್ನು ಕಳೆದುಕೊಂಡರೂ ಮದ್ರಾಸ್, ಮಸುಲಿಪಟ್ಟಣ ಮುಂತಾದ ಸ್ಥಳಗಳಿಗೆ ಎರಡು ಭಾರಿ ಅಡ್ಡಾಡಿದವು. ಈ ಸ್ಥಳಗಳಲ್ಲಿ ಇಂಡಿಯಾದಲ್ಲಿ ಬಹು ಬೆಲೆಯಾದುವೆಂದು ಪರಿಗಣಿಸಲ್ಪಟ್ಟ ಸರಕುಗಳನ್ನು ಎರಡು ಮೂರು ಹಡಗುಗಳಲ್ಲಿ ತುಂಬಿಕೊಂಡಿದ್ದಾರೆ. ಈಗ ತಮ್ಮ ವಹಿವಾಟನ್ನು ಎಷ್ಟು ಮೆಚ್ಚುಗೆಯಾಗುವ ರೀತಿಯಲ್ಲಿ ನಡೆಸುತ್ತಿದ್ದಾರೆಂದರೆ ದಾರಿಯಲ್ಲಿ ಮಲಬಾರ್ ತೀರದಲ್ಲೂ, ಸೂರತ್ತಿನಲ್ಲೂ, ಪರ್ಷಿಯಾ, ಕೆಂಪುಸಮುದ್ರ ಹಾಗೂ ಹಿಂದೂಸ್ತಾನದಲ್ಲೂ ಅಮೂಲ್ಯವಾದ ಸರಕುಗಳನ್ನು ಉಳಿದ ಹಡಗುಗಳಲ್ಲಿ ತುಂಬಿಕೊಂಡು ಜನವರಿಯಲ್ಲಿ ಇಂಗ್ಲೆಂಡಿಗೆ ಹಿಂದಿರುಗಲಿವೆ.

ನಿಜವಾದ ನಾವಿಕರೆಂದರೆ ಇಂಗ್ಲಿಷರೇ. ಇವರನ್ನು ಮೀರಿಸುವವರು ಯಾರೂ ಇಲ್ಲ. ತಾವು ಸಮುದ್ರದ ಒಡೆಯರೆಂದು ಹೇಳಿಕೊಳ್ಳುವುದು ಬರೀ ಒಣಜಂಭವಲ್ಲ. ಸಮುದ್ರದ ಕಷ್ಟ ನಷ್ಟ ನೋವು ದುಃಖಗಳನ್ನು ಎದುರಿಸಲು ಹುಟ್ಟಿರುವ ನಿಜವಾದ ಧೀರರೆಂದರೆ ಇಂಗ್ಲಿಷರು. ಸಮುದ್ರಯಾನ ಮಾಡುವಾಗ ಎಷ್ಟೊಂದು ವ್ಯವಸ್ಥೆ ಮಾಡಿಕೊಳ್ಳುತ್ತಾರೆಂದರೆ ಅವರಿಗೆ ಮತ್ತೇನೂ ಬೇಕಾಗಿರುವುದಿಲ್ಲ. ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಹೊರಡುವಾಗ ಹಡಗುಗಳ ಕ್ಯಾಪ್ಟನ್‌ಗಳೇ ತಮ್ಮ ತಮ್ಮ ಹಡಗುಗಳಿಗೆ ಬೇಕಾದ ಸರಕುಗಳನ್ನೂ ತಿಂಡಿತೀರ್ಥದ ಹಾಗೂ ಆಹಾರದ ಸರಬರಾಜನ್ನೂ ನೋಡಿಕೊಳ್ಳುತ್ತಾರೆ. ಇಂಡಿಯಾದಲ್ಲಿರುವ ಇಂಗ್ಲಿಷ್ ಫ್ಯಾಕ್ಟರಿಯಲ್ಲಿ ತಾವು ಇಂಗ್ಲೆಂಡಿನಿಂದ

ತಂದ ಸಾಮಾನು ಸರಂಜಾಮುಗಳನ್ನು ಇಳಿಸಿ ಲೆಕ್ಕ ಕೊಟ್ಟು, ಅಲ್ಲಿ ಗಡಂಗುಗಳಲ್ಲಿ ಸಿದ್ಧಮಾಡಿಟ್ಟಿರುವ ಸರಕುಗಳನ್ನು ತಮ್ಮ ಹಡಗುಗಳಿಗೆ ತುಂಬಿಕೊಳ್ಳುವುದಷ್ಟೇ ಕೆಲಸ.

ಅಲ್ಲದೆ ನಮ್ಮ ಫ್ರೆಂಚ್ ಹಡಗುಗಳಲ್ಲಿ ಕಂಡುಬರುವ ಆಫೀಸರುಗಳ ಮತ್ತು ಅನಾವಶ್ಯಕವಾದ ಜನರ ಗೊಂದಲವಿಲ್ಲ. ಒಂದೊಂದು ಹಡಗಿನಲ್ಲಿ ಒಬ್ಬ ಕ್ಯಾಪ್ಟನ್, ಒಬ್ಬ ಅಥವಾ ಇಬ್ಬರು ಪೈಲಟ್‌ಗಳು, ಒಬ್ಬ ಮಾಸ್ಟರ್, ಒಬ್ಬ ರೈಟರ್, ಒಬ್ಬ ಸರ್ಜನ್ (ವೈದ್ಯ)—ಇಷ್ಟೇ ಜನ ಆಫೀಸರುಗಳು. ಇವರು ಬೇರೆ ಬೇರೆ ಊಟ ಮಾಡುವುದಿಲ್ಲ. ಎಲ್ಲರೂ ಸಾಮಾನ್ಯವಾಗಿ ಕ್ಯಾಪ್ಟನ್ ಜೊತೆ ಕುಳಿತು ಊಟ ಮಾಡುತ್ತಾರೆ. ಇದೇ ರೀತಿಯಲ್ಲಿ ಹಡಗಿನ ಸಿಬ್ಬಂದಿಯವರನ್ನೂ ನೋಡಿಕೊಳ್ಳುತ್ತಾರೆ. ಅವರಿಗೆ ಕಂಪೆನಿಯು ನಿಗದಿ ಮಾಡಿದಷ್ಟು ದಿನಭತ್ಯ ಕೊಡಲಾಗುವುದು. ಹೀಗಾಗಿ ನಮ್ಮ ಫ್ರೆಂಚ್ ಹಡಗುಗಳಲ್ಲಿ ಕೇಳಿಬರುವ ಗೊಣಗಾಟ ಗುದ್ದಾಟಗಳು ಇಲ್ಲ. ನಮ್ಮ ಹಡಗುಗಳಲ್ಲಿ ಎಲ್ಲರೂ ಯಜಮಾನರೇ. ಒಂದು ವ್ಯವಸ್ಥೆಯಿಲ್ಲ. ದೊಡ್ಡವರು ಚಿಕ್ಕವರು ಎಂಬ ಭಾವನೆಯಿಲ್ಲ, ಗೌರವವಿಲ್ಲ. ನಾನು ಹೆಚ್ಚು ತಾನು ಹೆಚ್ಚು ಎನ್ನುವವರೇ ಎಲ್ಲರು.

ಇಂಗ್ಲೆಂಡಿನ ಹಡಗುಗಳಲ್ಲಿ ನಾವಿಕವೃತ್ತಿಗೆ ಹೊಸಬರಾದವರು ಯಾರೂ ಇಲ್ಲ. ಕೂಲಿ ಕೆಲಸಕ್ಕೆ ಬಂದ ಮಕ್ಕಳಾಗಲೀ ಸುಮ್ಮನೆ ಕಾಲಕಳೆಯಲು ಬಂದ ಸೋಮಾರಿಗಳಾಗಲೀ ಇಲ್ಲ. ದುಡಿಸುತ್ತಾರೆಂಬ ಹೆದರಿಕೆಯಿಂದ ಕೊಳೆತು ನಾರುವ ಹಡಗಿನ ಸಂದುಗೊಂದುಗಳಲ್ಲಿ ತಿಂಗಳುಗಟ್ಟಲೆ ಅಡಗಿ ಕೂತುಕೊಳ್ಳುವುದೂ ಇಲ್ಲ. ಇಂಗ್ಲಿಷ್ ಹಡಗುಗಳಲ್ಲಿರುವವರೆಲ್ಲ ಎಂಥ ಸಮುದ್ರದ ಮೇಲೂ ಯಾನ ಮಾಡಬಲ್ಲವರೆ.

ಇಂಗ್ಲಿಷರ ಒಂದೊಂದು ದೊಡ್ಡ ಹಡಗಿನಲ್ಲಿ ಐವತ್ತು ಅರವತ್ತು ಜನ ಅಷ್ಟೇ. ಅವರು ತಮ್ಮ ಕೆಲಸವನ್ನು ಬಹು ಕ್ರಮವಾಗಿ ಹಾಗೂ ಅಚ್ಚುಕಟ್ಟಾಗಿ ಮಾಡುತ್ತಾರೆ. ಹಡಗಿನ ತಳಭಾಗದಲ್ಲಿ ಸೇರುವ ಕೊಳಕು ನೀರನ್ನು ಗುಡಿಸಿ ತೊಳೆದು ಶುಚಿ ಮಾಡುತ್ತಾರೆ. ಕೊಳಕಿನಿಂದ ಏನಾದರೂ ಸರಕುಗಳು ಕೆಟ್ಟರೆ ಅದರ ನಷ್ಟವನ್ನು ಸಿಬ್ಬಂದಿಯಿಂದ ವಸೂಲು ಮಾಡುತ್ತಾರೆ. ಇಪ್ಪತ್ತು ವರುಷ ವಯಸ್ಸಿನ ಹುಡುಗರು ಸಮುದ್ರಯಾನ ಹಾಗೂ ವ್ಯಾಪಾರ ಮಾಡುವುದನ್ನು ಕಲಿಯಲು ಹಡಗಿನಲ್ಲಿ ಸೇರಿಕೊಳ್ಳುತ್ತಾರೆ. ಇವರು ಲೆಕ್ಕಕ್ಕೆ ಹಡಗಿನ ಸಿಬ್ಬಂದಿಯಲ್ಲಿ ಸೇರಿದರೂ ಸಂಬಳ ಇಲ್ಲ. ಆದರೆ ಸಂಬಳದವರಂತೆಯೇ ಎಲ್ಲ ಕೆಲಸ ಮಾಡಬೇಕು. ಪ್ರತಿಯೊಬ್ಬ ಕ್ಯಾಪ್ಟನ್‌ನಿಗೆ ಏಳೆಂಟು ಹುಡುಗರ ಸಿಬ್ಬಂದಿ ಇರುತ್ತದೆ. ಈ ಹುಡುಗರ ಕೆಲಸ ಕೋಣೆಗಳನ್ನು ಗುಡಿಸುವುದು, ಮೇಜು ಕುರ್ಚಿಗಳನ್ನು ಒರೆಸುವುದು, ಆಫೀಸರುಗಳ ಊಟದ ವೇಳೆ ಅವರನ್ನು ನೋಡಿಕೊಳ್ಳುವುದು, ಒಟ್ಟಿನಲ್ಲಿ ಏನೇನು ಕೆಲಸ ಇದೆಯೋ ಅದನ್ನೆಲ್ಲಾ ಮಾಡುವುದು. ಹಾಗಿದ್ದರೆ ಈ ಸಣ್ಣಪುಟ್ಟ ಕೆಲಸಗಳನ್ನು ಮಾಡುವ ಹುಡುಗರು ಯಾವ ಅಂತಸ್ತಿನವರೆಂದು ತಿಳಿದಿದ್ದೀರಿ? ಬಹುಶಃ ಬಡ ಬೆಸ್ತರ ಅಥವಾ ನಾವಿಕರ ಮಕ್ಕಳೋ ತಂದೆ ತಾಯಿಗಳು ಸಾಕಲಾರದೆ ಸಮುದ್ರಕ್ಕೆ ಅಟ್ಟಿದ ಅಪಾಪೋಲಿಗಳೋ ಎಂದು ಭಾವಿಸುತ್ತೀರಲ್ಲವೆ? ಅಲ್ಲ, ಅಲ್ಲ. ಈ ಮಕ್ಕಳು

ಆ ವರ್ಗದ ಮಕ್ಕಳಲ್ಲ. ಇವರುಗಳು ಬಹುತೇಕ ಇಂಗ್ಲೆಂಡಿನ ಪಾರ್ಲಿಮೆಂಟ್ ಮೆಂಬರುಗಳ ಅಥವಾ ಶ್ರೀಮಂತ ವರ್ತಕರ ಮಕ್ಕಳು. ತಮ್ಮ ಮಕ್ಕಳಿಗೆ ಸಮುದ್ರಯಾನ ಕಲಿಸಿ ಅವರನ್ನು ಯುದ್ಧನೌಕೆಯ ಹಾಗೂ ವ್ಯಾಪಾರ ನೌಕೆಯ ನಾಯಕರನ್ನಾಗಿ ಮಾಡುವುದು ತಂದೆತಾಯಿಗಳ ಹಿರಿಯ ಆಸೆ. ತಮ್ಮ ಮಕ್ಕಳನ್ನು ಒಬ್ಬ ಅನುಭವಸ್ಥ ಕ್ಯಾಪ್ಟನ್ ಕೈಕೆಳಗೆ ಏಳೆಂಟು ವರ್ಷ ತರಬೇತಿಗಾಗಿ ಕಳುಹಿಸಿಕೊಡುತ್ತಾರೆ. ಈ ತರಬೇತಿಗಾಗಿ ಕ್ಯಾಪ್ಟನ್‌ಗೆ "ಫೀಜು" ಕೊಡುತ್ತಾರೆ ಅಥವಾ ಏನಾದರೊಂದು ಯೋಗ್ಯ ಬಹುಮಾನ ಕೊಡುತ್ತಾರೆ. ಕ್ಯಾಪ್ಟನ್ ಈ ಮಕ್ಕಳನ್ನು ತನ್ನ ಸ್ವಂತ ಮಕ್ಕಳಂತೆಯೇ ನೋಡಿಕೊಳ್ಳುತ್ತಾನೆ. ತನ್ನ ಸಮುದ್ರಯಾನದ ವೇಳೆ ಇವರನ್ನು ಕರೆದುಕೊಂಡು ಹೋಗಿ ಹಡಗಿನ ಸಿಬ್ಬಂದಿಯಲ್ಲಿ ಸೇರಿಸಿಕೊಳ್ಳುತ್ತಾನೆ. ಮಕ್ಕಳು ಸಹ ತಾವು ದೊಡ್ಡವರ ಮಕ್ಕಳೆಂದು ಭಾವಿಸದೆ ತೀರಾ ಬಡವರ ಮಕ್ಕಳು ಹೇಗೆ ನಡೆದುಕೊಳ್ಳುವರೋ ಹಾಗೆ ನಡೆದುಕೊಳ್ಳುತ್ತಾರೆ. ಗೌರವ, ವಿನಯ ಹಾಗೂ ಸೇವಾಭಾವನೆಯಿಂದ ವರ್ತಿಸುತ್ತಾರೆ. ಹೀಗಾಗಿ ಸ್ವಲ್ಪ ಕಾಲದಲ್ಲೇ ಇವರು ತಮ್ಮ ವೃತ್ತಿಯಲ್ಲಿ ನಿಪುಣರಾಗಿಬಿಡುತ್ತಾರೆ. ಪ್ರತಿದಿನ ಇವರು ಹಡಗುಯಾನ ಮಾಡಿದ ನಕ್ಷೆ ಬರೆಯಬೇಕು. ಸೂರ್ಯನ ಗತಿಯನ್ನು ಗುರ್ತಿಸಬೇಕು. ಗಾಳಿಯ ದಿಕ್ಕನ್ನು ಸೂಚಿಸಬೇಕು. ರಾತ್ರಿ ಧ್ರುವನಕ್ಷತ್ರ ಕಾಣುವ ಸ್ಥಳವನ್ನು ತೋರಿಸಬೇಕು. ಇದನ್ನು ಎಷ್ಟು ಅಚ್ಚುಕಟ್ಟಾಗಿ ಮಾಡುತ್ತಾರೆಂದರೆ ಹಡಗು ಪಡೆಯ ಪ್ರತಿಯೊಬ್ಬನೂ ಪಕ್ಕಾ ನಾವಿಕನಾಗಿಬಿಡುತ್ತಾನೆ. ತಾವು ಕಲಿತಿದ್ದನ್ನು ಇನ್ನೊಬ್ಬರಿಗೆ ಹೇಳಿಕೊಡುತ್ತಾರೆ.

ಈಗ ಸಂಬಳದ ಮೇಲೆ ನೇಮಿಸಿಕೊಂಡ ಸಿಬ್ಬಂದಿಯ ವಿಷಯ. ಇವರು ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಹೊರಟಾಗ ಪ್ರತಿಯೊಬ್ಬರಿಗೂ ಎರಡು ತಿಂಗಳ ಸಂಬಳ ಮುಂಗಡವಾಗಿ ಪಾವತಿ ಮಾಡುತ್ತಾರೆ. ಇದನ್ನು ಎಷ್ಟು ವ್ಯವಸ್ಥೆಯಿಂದ ಮಾಡುತ್ತಾರೆಂದರೆ ಯಾರೂ ಗೊಣಗಾಡುವುದಕ್ಕೆ ಅವಕಾಶ ಕೊಡುವುದಿಲ್ಲ. ಆದರೆ ಅದೇ ನಮ್ಮ ಫ್ರೆಂಚ್ ಹಡಗುಗಳಲ್ಲಿ ಆರು ತಿಂಗಳ ಸಂಬಳ ಮುಂಗಡವಾಗಿ ಪಡೆದರೂ ಇಂಡಿಯಾಕ್ಕೆ ಬಂದಕೂಡಲೇ ತಕರಾರು ಮಾಡಲು ಆರಂಭಿಸುತ್ತಾರೆ. ಅನೇಕ ವೇಳೆ ಕೆಲಸ ಬಿಟ್ಟು ಓಡಿಹೋಗುತ್ತಾರೆ. ಮುಂಗಡವಾಗಿ ಪಡೆದದ್ದನ್ನು ವ್ಯಭಿಚಾರಕ್ಕೆ ವೆಚ್ಚ ಮಾಡಿ ಬರಿಗೈಯಾಗಿ ತಮ್ಮ ತಕರಾರು ಷುರುಮಾಡುತ್ತಾರೆ. ಸಂಬಳದಲ್ಲಿ ಹಣ ಉಳಿಸಿ ತಮ್ಮ ಹೆಂಡತಿ ಮಕ್ಕಳಿಗೆ ಏನಾದರೂ ತೆಗೆದುಕೊಂಡು ಹೋಗಬೇಕೆಂಬ ಬುದ್ಧಿ ಇಲ್ಲ. ದೀರ್ಘಕಾಲದ ಯಾನದ ನಂತರ ಏನಾದರೂ ಹಣ ತಂದಾನೆಂದು ಭಾವಿಸಿದ ಹೆಂಡತಿ ಮಕ್ಕಳ ಕೈಗೆ ಏನೂ ಇಲ್ಲ. ಇಂಗ್ಲೆಂಡಿನಿಂದ ಹೊರಟ ಹುಡುಗರಿಗೆ ಲೆಕ್ಕಪತ್ರಗಳನ್ನು ಇಡುವುದು ಗೊತ್ತಿದ್ದರೂ ಅವರು ಅದನ್ನು ಮತ್ತೆ ಹಡಗಿನಲ್ಲಿ ಕಲಿಯುತ್ತಾರೆ. ಹೊಸ ದೇಶದ ಭಾಷೆ, ರೀತಿ ನೀತಿ, ಬೆಲೆ ಮತ್ತು ವ್ಯಾಪಾರದ ಗುಟ್ಟುಗಳನ್ನು ತಿಳಿದುಕೊಂಡ ನಂತರವೇ ಅವರಿಗೆ ಅವರವರ ಯೋಗ್ಯತಾನುಸಾರ ನೌಕರಿ ಕೊಡಲಾಗುವುದು. ಹಡಗಿನ ಆಫೀಸರುಗಳು ಇಂಗ್ಲೆಂಡಿನಿಂದ ಹೊರಟಾಗ ಸಣ್ಣಪುಟ್ಟ ಸಾಮಾನುಗಳನ್ನು ತೆಗೆದುಕೊಂಡು ಹೋಗಲು ಅವಕಾಶ ಕೊಡುತ್ತಾರೆ. ಕಂಪೆನಿ ವ್ಯಾಪಾರ ಮಾಡುವ

ಸರಕುಗಳನ್ನು ಇವರು ತೆಗೆದುಕೊಂಡು ಹೋಗುವಂತಿಲ್ಲ. ಸಾಮಾನ್ಯವಾಗಿ ವೈನು, ಬ್ರಾಂದಿ, ಅಂದಚಂದದ ಹ್ಯಾಟುಗಳು, ಕತ್ತಿಗಳು, ಬಂದೂಕುಗಳು, ರೇಷ್ಮೆ ಕಾಲುಚೀಲಗಳು, ಎಣ್ಣೆ, ಆಲಿವ್ ಮರದ ಸಾಮಾನುಗಳು, ಚೀಸ್ (Cheese), ರಿಬ್ಬನ್‌ಗಳು–ಹೀಗೆ ಇಂಡಿಯಾದಲ್ಲಿ ನೆಲೆಸಿದ ಯೂರೋಪಿಯನ್‌ರಿಗೆ ಬೇಕಾದ ಸಾಮಾನುಗಳನ್ನು ಮಾತ್ರ ತೆಗೆದುಕೊಂಡು ಹೋಗುತ್ತಾರೆ. ಇಂಥಾ ಸಾಮಾನುಗಳಿಗೆ ಇಂಡಿಯಾದಲ್ಲಿರುವ ಯೂರೋಪಿಯನರು ಕಾಯುತ್ತಿರುತ್ತಾರೆ. ಹೀಗೆ ಕಂಪೆನಿಯ ವ್ಯಾಪಾರಕ್ಕೆ ಮೋಸ ಬರದಂತೆ ಹಡಗಿನ ಆಫೀಸರುಗಳು ಒಳ್ಳೆಯ ಲಾಭ ಸಂಪಾದಿಸುತ್ತಾರೆ.

ಸೆಪ್ಟೆಂಬರ್ ತಿಂಗಳಿನ ಉಳಿದ ದಿನಗಳನ್ನು ನಾವು ಕಾರೋಮಂಡಲ ತೀರದಲ್ಲೇ ಸಾಗಿ ಸಿಲೋನ್ ಕಡೆಗೆ ಯಾನ ಮಾಡಿದೆವು.

ಅಕ್ಟೋಬರ್ ಒಂದನೆಯ ತಾರೀಖು ಪಶ್ಚಿಮದ ಕಡೆಯಿಂದ ಭಾರಿ ಗಾಳಿ ಬೀಸಿತು. ಎರಡು ಹಗಲು ಎರಡು ರಾತ್ರಿ ಬೀಸಿದ ಈ ಗಾಳಿ ನಮ್ಮ ಹಡಗುಗಳನ್ನು ಸಮುದ್ರದೊಳಕ್ಕೆ ಕೊಂಡೊಯ್ಯಿತು. ಹೊರಟು ಹನ್ನೆರಡು ದಿನಗಳಾದರೂ ಹೆಚ್ಚು ದಾರಿ ಸಾಗಿಸಲಾಗಲಿಲ್ಲವೆಂಬುದನ್ನು ಕಂಡ ಹಡಗಿನ ಕ್ಯಾಪ್ಟನ್‌ಗಳೂ ಮತ್ತು ಮುಖ್ಯ ನಾವಿಕರೂ ನೌಕಾಧಿಪತಿಯ ಹಡಗಿನಲ್ಲಿ ಸಮಾಲೋಚನೆಗೆ ಸೇರಿದರು. ಮರು ಪ್ರಯಾಣಕ್ಕೆ ಅನುಕೂಲವಾದ ಗಾಳಿ ಬೀಸುವುದಕ್ಕೆ ಆರಂಭವಾಗುವುದು ಅಕ್ಟೋಬರ್ ೧೦ ಅಥವಾ ೧೫. ಆದರೆ ಡಚ್ಚರೊಡನೆ ಎರಡನೆಯ ಹೋರಾಟ ತಪ್ಪಿಸಿಕೊಳ್ಳಲು ಮೂರು ವಾರ ಮುಂಚಿತವಾಗಿಯೇ ಹಡಗುಗಳು ಹೊರಟಿದ್ದುವು. ಸಮಾಲೋಚನೆಯ ನಂತರ ಯಾನ ಮುಂದುವರಿಸಿ ಸಿಲೋನ್ ದ್ವೀಪದ ಮುಖಾಂತರ ಮಲಬಾರ್ ತೀರಕ್ಕೆ ಹೋಗುವುದೆಂದು ತೀರ್ಮಾನವಾಯಿತು.

ಈ ಸಮಾಲೋಚನೆ ಮುಗಿದ ಮೇಲೆ ನನಗೆ ನೌಕಾಧಿಪತಿಯ ಹಡಗಿಗೆ ಬರಲು ಆಹ್ವಾನ ಕೊಡಲಾಯಿತು. ಅಲ್ಲಿ ಇಡೀ ದಿನ ಊಟೋಪಚಾರ ಮುಂತಾದ ಸುಖ ಸಂತೋಷಗಳು ನಡೆದುವು. ಎಲ್ಲರ ನಡೆನುಡಿಗಳು ಬಹು ಮೆಚ್ಚುಗೆಯಾಗಿದ್ದುವು. ಇಂತಹ ಕೂಟಗಳನ್ನು ಸಿಬ್ಬಂದಿಯವರು ನೋಡುವುದಕ್ಕಾಗಲೀ ಮಾತುಕತೆಗಳನ್ನು ಕೇಳುವುದಕ್ಕಾಗಲೀ ಅವಕಾಶವಿಲ್ಲ. ಈ ಕೂಟಗಳು ನಡೆಯುವ ಸ್ಥಳವನ್ನು ಜಮಖಾನಗಳಿಂದಲೋ ಹಾಯಿಪಟಗಳಿಂದಲೋ ಮುಚ್ಚಿ ಏನೂ ಕೇಳದಂತೆ ಕಾಣಿಸದಂತೆ ಮರೆ ಮಾಡುತ್ತಾರೆ. ಹಡಗಿಗೆ ಹೋದ ನನ್ನನ್ನು ಹಡಗಿನ ಕ್ಯಾಪ್ಟನ್‌ಗಳು ತುಂಬಾ ಪ್ರೀತಿಯಿಂದ ಕಂಡರು. ಆ ಹೊತ್ತೇ ಅಲ್ಲ, ಇಡೀ ಯಾನದಲ್ಲಿ ಹಾಗೇ ನಡೆದುಕೊಂಡರು. ಪ್ರತಿ ಹಡಗಿನಲ್ಲಿ ನಡೆಯುತ್ತಿದ್ದ ಭೋಜನ ಕೂಟಗಳಿಗೆ ನನ್ನನ್ನು ಕರೆಯುತ್ತಿದ್ದರು. ಈ ಭೋಜನ ಕೂಟಗಳಲ್ಲಿ ಬಹು ಆಕರ್ಷಕವಾದ ಭಕ್ಷ್ಯವೆಂದರೆ ಅಂದ ಚೆಂದದ ಇಂಗ್ಲಿಷ್ ಲೇಡಿಗಳು. ಈ ವರ್ಷ ಇಂಗ್ಲೆಂಡಿನಿಂದ ೨೨ ಮಹಿಳೆಯರನ್ನು ಕರೆತಂದಿದ್ದರು. ಮೈ ಕೈ ತುಂಬಿಕೊಂಡ ರೂಪುಲಾವಣ್ಯದ ಹುಡುಗಿಯರು ಇವರು. ಇವರಲ್ಲಿ ಹಲವರನ್ನು ಮದ್ರಾಸ್, ಮಸುಲಿಪಟ್ಣ ಹಾಗೂ ಬಂಗಾಳದ ಫ್ಯಾಕ್ಟೊರಿಗಳಲ್ಲಿ ಬಿಟ್ಟು ಉಳಿದವರನ್ನು

ಬೊಂಬಾಯಿ, ಸೂರತ್ ಮತ್ತು ಇಂಡಿಯಾದ ಇತರ ಕಡೆಗಳಲ್ಲಿ ಬಿಡಲು ಕರೆದುಕೊಂಡು ಬರಲಾಗಿತ್ತು. ತಮ್ಮ ಆಫೀಸರುಗಳಿಗೆ ಹೆಂಡತಿಯರನ್ನು ಒದಗಿಸುವ ಈ ಇಂಗ್ಲಿಷರ ವ್ಯವಸ್ಥೆ ಮೆಚ್ಚತಕ್ಕದ್ದೇ ಸರಿ. ಪೂರ್ವ ದೇಶಗಳ ಹವೆಯಲ್ಲಿ ಮನಸ್ಸನ್ನು ಚಂಚಲಗೊಳಿಸುವ ಏನೋ ಇದೆ. ಯೂರೋಪಿನಲ್ಲಿ ಆಗದ ಚಟವನ್ನು ತೀರಿಸಿಕೊಳ್ಳಲು ಇಲ್ಲಿ ಹೆಣ್ಣಿನ ಸಹವಾಸಕ್ಕಾಗಿ ಚಡಪಡಿಸುತ್ತಾರೆ. ಇಂಡಿಯಾದ ಹೆಂಗಸರ ಸಹವಾಸ ಮಾಡಿ ಹಣ ಆರೋಗ್ಯ ಎರಡನ್ನೂ ಕಳೆದುಕೊಳ್ಳುತ್ತಾರೆ. ಸುಲಭವಾಗಿ ತೃಪ್ತಿಪಡಿಸಲಾಗದ ಈ ಹೆಂಗಸರು ತಮ್ಮಲ್ಲಿಗೆ ಬಂದವರನ್ನು ಕ್ಷಣಮಾತ್ರದಲ್ಲಿ ದಣಿಸಿಬಿಡುತ್ತಾರೆ. ಕ್ರೈಸ್ತರಿಗೆ ಪೋರ್ಚುಗೀಸ್ ಹೆಂಡತಿಯರು ಸಿಕ್ಕುತ್ತಾರೆ. ಆದರೆ ಗಂಡಂದಿರು ಪೋರ್ಚುಗೀಸ್ ಪದ್ಧತಿಗೆ ಬಲಿಯಾಗಿ ಗಾಣದ ಎತ್ತಿನಂತೆ ದುಡಿಯಬೇಕಾಗುತ್ತದೆ. ಹೆಂಡತಿಯರು ನಂಬಿಕೆಯಿಂದ ನಡೆದುಕೊಳ್ಳುವುದೇ ಅಪರೂಪ. ಇಂತಹ ಉದಾಹರಣೆಗಳನ್ನು ನಾನು ಆಮೇಲೆ ಹೇಳುತ್ತೇನೆ. ಹೀಗಾಗಿ, ಈ ದೇಶದಲ್ಲಿ ನೆಲಸಿರುವ ಯೂರೋಪಿಯನರು ಜಾರ್ಜಿಯಾ, ಪರ್ಷಿಯಾ, ಅರೇಬಿಯಾದ ಬಾಸ್ರ ಮುಂತಾದ ಕಡೆಗಳಿಂದ ಹುಡುಗಿಯರನ್ನು ತಂದು ತಮ್ಮ ಮತಕ್ಕೆ ಸೇರಿಸಿಕೊಂಡು ಮದುವೆಯಾಗಿ ಸಂಸಾರ ಸಾಗಿಸುತ್ತಾರೆ. ಇವರ ಒಡವೆ ವಸ್ತುಗಳಿಗಾಗಿ ಖರ್ಚು ಮಾಡಿದ ಹಣಕ್ಕೆ ಮೋಸವಿಲ್ಲ. ಇಂಥವುಗಳಿಗೆ ಅವಕಾಶ ಕೊಡಬಾರದೆಂದು ಇಂಗ್ಲಿಷರು ತಮ್ಮ ಆಫೀಸರುಗಳಿಗೆ ಬೇಕಾದ ಹೆಂಡಂದಿರನ್ನು ತಮ್ಮ ದೇಶದಿಂದಲೇ ಒದಗಿಸುತ್ತಾರೆ. ಇಂಗ್ಲಿಷರು ಇಲ್ಲಿ ತಮ್ಮ ಸಂಸಾರ ಹೂಡಿ ನೆಮ್ಮದಿಯಿಂದ ಬಾಳುತ್ತಾರೆ. ಹುಟ್ಟಿದ ಮಕ್ಕಳಿಗೆ ಈ ದೇಶದ ನಡೆನುಡಿಗಳನ್ನು ಕಲಿಸಿ ಒಳ್ಳೆಯ ವ್ಯಾಪಾರಸ್ಥರನ್ನಾಗಿ ಮಾಡುತ್ತಾರೆ. ಬೊಂಬಾಯಿ ಮತ್ತು ಫೋರ್ಟ್ ಸೇಂಟ್ ಜಾರ್ಜ್‌ನಲ್ಲಿರುವ ಇಂಗ್ಲಿಷರು ಇಂಗ್ಲಿಷ್ ಹೆಣ್ಣುಗಳನ್ನೇ ಮದುವೆಯಾಗಿ ನಿಸ್ಪೃಹತೆಯಿಂದಲೂ ಗೌರವದಿಂದಲೂ ಸೇವೆ ಸಲ್ಲಿಸಲು ಅವಕಾಶ ಒದಗಿಸಲಾಗಿದೆ.

ಒಂದು ದಿನ ಇಂಗ್ಲಿಷ್ ಲೇಡಿಗಳೆಲ್ಲಾ ಸೇರಿದ ಭೋಜನ ಕೂಟ ಮುಗಿದ ಮೇಲೆ ಮದ್ರಾಸಿನ ಗೌರ್ನರ್ ಮಿಸ್ಟರ್ ಲಾಂಗ್ ಹಾರ್ಸ್ ಅವರ ವಿಷಯ ಬಂದಿತು. ಹಾಗೆಯೇ ಆತನಿಗೂ ನಮ್ಮ ಫ್ರೆಂಚ್ ವೈಸ್‌ರಾಯಿಗೂ ಇದ್ದ ವಿರಸದ ಬಗ್ಗೆಯೂ ಮಾತೆತ್ತಿದರು. ನಮ್ಮ ವೈಸ್‌ರಾಯ್ ಬಗ್ಗೆ ದೂರು ಹೇಳಿದರು. ನಾನು ಹೇಳಿದ್ದನ್ನೆಲ್ಲಾ ಸುಮ್ಮನೆ ಕೇಳಿ ನಮ್ಮ ವೈಸ್‌ರಾಯ್‌ದೇನೂ ತಪ್ಪಿಲ್ಲವೆಂದು ಅವರ ವರ್ತನೆಯನ್ನು ಸಮರ್ಥಿಸಿಕೊಂಡೆ. ಆ ಸಣ್ಣ ಜನ ಡಚ್ಚರ ಬಗ್ಗೆ ಇಂಗ್ಲಿಷರಿಗೆ ದ್ವೇಷವಿದ್ದರೂ ಫ್ರೆಂಚರನ್ನು ಬೆಳೆಯಲು ಬಿಡಬಾರದೆಂಬ ಭಾವನೆ ಅವರ ಮಾತಿನಿಂದ ವ್ಯಕ್ತಪಟ್ಟಿತು. ಅವರು ಏನೇ ಹೇಳಲಿ ದೈವಸಹಾಯ ಫ್ರೆಂಚರಿಗಿದ್ದೇ ಇದೆ ಎಂದು ಸಮಾಧಾನ ಪಟ್ಟುಕೊಂಡೆ.

ಅನುಕೂಲವಾದ ಗಾಳಿ ಬೀಸದಿದ್ದ ಕಾರಣ ನಮ್ಮ ಹಡಗುಗಳು ಹೆಚ್ಚು ದೂರ ಪ್ರಯಾಣ ಸಾಗಿಸಲಾಗಲಿಲ್ಲ. ಹಾಗೂ ಹೀಗೂ ಯಾನ ಮಾಡಿ ಕೇಪ್ ಕಾಮೊರಿನ್ ಬಳಸಿ ಪೊನ್ನಾದಿಗಳ ಮುಖಾಂತರ ತಣೂರ್ ತಲುಪಿದೆವು. ಇಲ್ಲಿ ಇಂಗ್ಲಿಷರ ಫ್ಯಾಕ್ಟೊರಿ ಇದೆ. ಹಡಗುಗಳಿಗೆ ಸರಕು ತುಂಬುವವರೆಗೆ ನಾನು ತಣೂರಿನ ಒಬ್ಬ ಪೋರ್ಚುಗೀಸ್

ಖಿದಾಲ್ಲೊ ಮನೆಯಲ್ಲಿ ಉಳಿದುಕೊಂಡೆ. ಇಲ್ಲಿರುವಾಗ ಕ್ಯಾಲಿಕಟ್‌ನಲ್ಲಿರುವ ಇಂಗ್ಲಿಷ್ ಫ್ಯಾಕ್ಟೊರಿ ಮುಖ್ಯಸ್ಥ ಬಂದನು. ಆದಷ್ಟು ಜಾಗ್ರತೆ ಹಡಗುಗಳನ್ನು ಭರ್ತಿ ಮಾಡಿಸುವ ಉದ್ದೇಶದಿಂದ ಆತ ಅಲ್ಲಿಗೆ ಬಂದಿದ್ದ. ಅವನ ಜೊತೆ ನಮ್ಮ ಕಂಪನಿಯಲ್ಲಿ ಸಣ್ಣ ವರ್ತಕ ನಾಗಿ ಕೆಲಸ ಮಾಡುತ್ತಿದ್ದ ಆಬರ್ಟ್ (Aubert) ಎಂಬ ಫ್ರೆಂಚ್ ಯುವಕನೊಬ್ಬನನ್ನು ನೋಡಿ ನನಗೆ ಆಶ್ಚರಿಯಾಯಿತು. ಫ್ರೆಂಚ್ ಕಂಪನಿ ಬಿಟ್ಟು ಬಂದದ್ದಕ್ಕಾಗಿ ನಾನು ಆತನನ್ನು ತರಾಟೆಗೆ ತೆಗೆದುಕೊಂಡೆ. ಆತ ತನಗೆ ಆದ ಅನ್ಯಾಯದ ದೊಡ್ಡ ಪಟ್ಟಿ ಯನ್ನೇ ಹೇಳಿ ಅನಿವಾರ್ಯವಾಗಿ ತಾನು ಕ್ಯಾಲಿಕಟ್‌ನ ಇಂಗ್ಲಿಷ್ ಫ್ಯಾಕ್ಟೊರಿಯಲ್ಲಿ ಸೇರಿಕೊಂಡುದಾಗಿ ಹೇಳಿದ. ಅಲ್ಲಿ ಸೇರಿದ ಮೇಲೆ ತನ್ನನ್ನು ಮಂಗಳೂರಿನ ದಳ್ಳಾಳಿ ಯಾಗಿ ನೇಮಿಸಿದುದಾಗಿಯೂ ಅಲ್ಲಿ ತಾನು ಬಹು ಅಚ್ಚುಕಟ್ಟಾಗಿ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿರುವುದಾಗಿಯೂ ತಿಳಿಸಿದ.

ಈತ ಕಳೆದ ವರ್ಷ ಅಂದರೆ ೧೭೭೦ನೆಯ ಡಿಸೆಂಬರ್ ತಿಂಗಳಿನಲ್ಲಿ ಮಂಗಳೂರಿನ ನಾಡಿನಲ್ಲಿ ನಡೆದ ಒಂದು ವಿಚಿತ್ರ ಪ್ರಸಂಗ ಹೇಳಿದ. ಅದೇನೆಂದರೆ:

ಕಳೆದ ವರ್ಷದ ಡಿಸೆಂಬರ್‌ನಲ್ಲಿ ಪ್ರಭಾವಶಾಲಿಗಳಾದ ಬ್ರಾಹ್ಮಣರಿಬ್ಬರು ಪಿತೂರಿ ಯಿಂದ ಮಂಗಳೂರು ದೊರೆಯನ್ನು (ಬಿದನೂರು ರಾಜ್ಯದ ಕೆಳದಿ ನಾಯಕನನ್ನು) ಕೊಲೆ ಮಾಡಿ ತಾಯ್‌ಬೀ ಎಂಬುವನನ್ನು ಸೇನಾಧಿಪತಿಯಾಗಿ ನೇಮಿಸಿದರಂತೆ. ಹೆಂಡ ಕಟ್ಟುವ (ಈಡಿಗರ) ಜಾತಿಗೆ ಸೇರಿದ ಈತ ಬಹು ಶಕ್ತಿವಂತನಾದ. ಸೈನ್ಯವನ್ನೆಲ್ಲಾ ತನ್ನ ಹತೋಟಿಯಲ್ಲಿಟ್ಟುಕೊಂಡ. ಆಮೇಲೆ ಅವನೇ ನಾಯಕನೆಂದು ಮೆರೆಯುತ್ತಾ ಮೈಸೂರಿನ (Moisoul) ಅಂದರೆ ಶ್ರೀರಂಗಪಟ್ಟಣದ (Syrepatan) ರಾಜನ ಮೇಲೆ ಯುದ್ಧಕ್ಕೆ ಹೊರಟ. ಆ ರಾಜ್ಯವನ್ನು ಗೆಲ್ಲುತ್ತಾ ಶ್ರೀರಂಗಪಟ್ಟಣದ ಕಡೆ ಸಾಗುತ್ತಿರುವಾಗ ಅದೇ ಬ್ರಾಹ್ಮಣರು ತನ್ನ ಕೊಲೆಗೆ ಸನ್ನಾಹ ಮಾಡುತ್ತಿದ್ದಾರೆಂದು ತಿಳಿದು ಯುದ್ಧದಿಂದ ಹಿಂದಿರುಗಿ ಬಿದನೂರಿನ ರಾಣಿಯನ್ನು ಕಂಡು ಆಕೆಗೆ ತನ್ನ ರಾಜಭಕ್ತಿಯನ್ನು ಸಲ್ಲಿಸಿ ಅನುಕೂಲವಾಗಿ ನಡೆದುಕೊಳ್ಳುವುದಾಗಿ ತಿಳಿಸಿದ. ಆ ಬ್ರಾಹ್ಮಣರು ದೇಶದ ಜನಗಳನ್ನೆಲ್ಲಾ ಕೊಳ್ಳೆಹೊಡೆದು ಹಿಂಸಿಸುತ್ತಿದ್ದರೆಂದು ತಾಯ್‌ಬೀ ಯಿಂದ ತಿಳಿದ ರಾಣಿ ಅವರೀರ್ವರನ್ನೂ ಬಂಧಿಸಿ ಅವರ ಆಸ್ತಿಪಾಸ್ತಿಯನ್ನೆಲ್ಲಾ ವಶಪಡಿಸಿಕೊಳ್ಳಲು ಆಜ್ಞೆ ಮಾಡಿದಳು. ಇದರಿಂದ ಇನ್ನಷ್ಟು ಬಲಯುತನಾದ ತಾಯ್‌ಬೀ ಸಿಂಹಾಸನಕ್ಕೆ ಉತ್ತರಾಧಿಕಾರಿಯಾದವನನ್ನೇ ಬಂಧಿಸಿ ಕಡಲತೀರದ ಒಂದು ಭದ್ರವಾದ ಕೋಟೆಯಲ್ಲಿ ಇಟ್ಟನು. ಕೆಲವರು ಆತನನ್ನು ಬಿಡಿಸುವ ಸನ್ನಾಹ ದಲ್ಲಿದ್ದಾರೆಂದು ತಿಳಿದು ಆತನ ಕೊಲೆಗೆ ಅಪ್ಪಣೆಕೊಟ್ಟನು. ಆದರೆ ಆತನ ಕೊಲೆಯಾಗ ಲಿಲ್ಲ. ಅದರ ಬದಲು ಆತನನ್ನು ಬಂಧನದಿಂದ ಬಿಡಿಸಿ ಆತನನ್ನೇ ರಾಜನೆಂದು ಘೋಷಿಸ ಲಾಯಿತು. ಮತ್ತು ಶ್ರೀರಂಗಪಟ್ಟಣದ ರಾಜನ ಮೇಲೆ ತಾಯ್‌ಬೀ ಯುದ್ಧದಲ್ಲಿ ತೊಡಗಿರುವಾಗ ಹೊಸ ರಾಜ ಸಮುದ್ರತೀರದ ಕೋಟೆಕೊತ್ತಲಗಳನ್ನು ವಶಪಡಿಸಿ ಕೊಳ್ಳಲಾರಂಭಿಸಿದ. ಯುದ್ಧದಲ್ಲಿ ಹಣವೇ ಮುಖ್ಯತಾನೆ. ಆ ಹಣದ ಕೊರತೆ ಇತ್ತು

ಆತನಿಗೆ. ಆಗ ಆತ ಸ್ಥಳದ ವರ್ತಕರಿಂದಲೂ ಮಂಗಳೂರಿನಲ್ಲಿದ್ದ ವಿದೇಶಿಯರಿಂದಲೂ ಹಣ ಕೀಳಲಾರಂಭಿಸಿದ. ಪೋರ್ಚುಗೀಸರ ಫ್ಯಾಕ್ಟೊರಿಯನ್ನು ಕೊಳ್ಳೆಹೊಡೆದ. ಇಂಗ್ಲಿಷ್ ಫ್ಯಾಕ್ಟೊರಿಯ ವಹಿವಾಟು ನೋಡಿಕೊಳ್ಳುತ್ತಿದ್ದ ಆಬರ್ಟ್‌ನನ್ನು ಅವನ ಮನೆಯಿಂದ ಹಿಡಿದುತಂದು ಬಂಧನದಲ್ಲಿಡಲಾಯಿತು. ಅವನ ಫ್ಯಾಕ್ಟೊರಿಯಲ್ಲಿದ್ದುದ ನ್ನೆಲ್ಲಾ ಸೂರೆ ಮಾಡಿದರು. ಆಮೇಲೆ ಆತನ ಬಿಡುಗಡೆಯಾಯಿತು. ಮುಂದೆ ಒಳ್ಳೆಯ ಕಾಲ ಬಂದಾಗ ಪೋರ್ಚುಗೀಸರು ಮತ್ತು ಇಂಗ್ಲಿಷ್‌ರಿಂದ ಕಿತ್ತುಕೊಂಡುದನ್ನು ವಾಪಸು ಕೊಡುವುದಾಗಿ ರಾಜ ಹೇಳಿದ. ಆದರೆ ಆತನಿಗೆ ಆ ಅವಕಾಶ ಕೊಡಲೇ ಇಲ್ಲ ತಾಯ್‌ಬೀ. ಭಾರಿ ಬಲಾಢ್ಯನಾಗಿದ್ದ ಆತ ಮಂಗಳೂರು ಮುಂತಾದ ಸ್ಥಳಗಳನ್ನೆಲ್ಲಾ ತನ್ನ ವಶಪಡಿಸಿ ಕೊಂಡು ಯುವಕನಾದ ರಾಜನ ಕೊಲೆಮಾಡಿದ.

ಇಷ್ಟೆಲ್ಲಾ ತೊಂದರೆಗಳು ಮುಗಿದುವು ಎಂದಾದ ಮೇಲೆ ಆತ ರಾಣಿಯ ಬಳಿಗೆ ಹೋಗಿ ರಾಜನ ಕೊಲೆಯಾದ ಮೇಲೆ ತಲೆಮರೆಸಿಕೊಂಡು ಹೋಗಿದ್ದ ನಾರಾಯಣ ಮಲ್ಯನನ್ನು ವಾಪಸು ಕರೆಸಿಕೊಳ್ಳುವ ಸಲಹೆಮಾಡಿದ. ಇದನ್ನು ಕೇಳಿ ಇನ್ನೂ ಚಿಕ್ಕಪ್ರಾಯದ ರಾಣಿಗೆ ದಿಕ್ಕೆಟ್ಟಂತಾಯಿತು. ಕೇವಲ ಹದಿನಾರು ವರ್ಷಕ್ಕೇ ವಿಧವೆಯಾಗಿದ್ದ ಆಕೆ ಏನುತಾನೆ ಮಾಡಿಯಾಳು ? ಗಂಡನ ಕೊಲೆಮಾಡಿದವ ನನ್ನು ಹೇಗೆತಾನೆ ಮತ್ತೆ ಕರೆಸಿಕೊಂಡಾಳು? ಆದರೆ ತಾಯ್‌ಬೀಯ ಮಾತು ಮೀರು ವಂತಿರಲಿಲ್ಲ. ನಾರಾಯಣ ಮಲ್ಯನ ಸಹಾಯವಿಲ್ಲದೆ ಮಂಗಳೂರಿನಲ್ಲಿ ವ್ಯಾಪಾರವೇ ನಡೆಯುತ್ತಿರಲಿಲ್ಲ. ಸಂಬಾರ ಮುಂತಾದ ಸರಕುಗಳಿಗಾಗಿ ಬರುತ್ತಿದ್ದ ವರ್ತಕರು ಈಗ ಬರುತ್ತಿರಲಿಲ್ಲ. ಈಗ ಅವೆಲ್ಲಾ ನಾರಾಯಣ ಮಲ್ಯ ಇರುವ ಕಡೆಗೇ ಹೋಗುತ್ತಿವೆ. ವ್ಯಾಪಾರ ಸಾಪಾರವೆಲ್ಲ ಅವನ ಹತೋಟಿಯಲ್ಲಿದೆ ಎಂದೆಲ್ಲಾ ಹೇಳಿದ ತಾಯ್‌ಬೀ. ಆ ಬಡಪಾಯಿ ರಾಣಿ ಏನು ಮಾಡಲೂ ತೋಚದೆ ನಿನಗೆ ತಿಳಿದಂತೆ ಮಾಡು ಎಂದಳು. ನಾರಾಯಣ ಮಲ್ಯನನ್ನು ಮಂಗಳೂರಿಗೆ ಹಿಂದಿರುಗುವಂತೆ ಒತ್ತಾಯಮಾಡಿದ. ಅಲ್ಲಿಗೆ ಬಂದ ಆತನನ್ನು ಕೆಲವು ಕಾಲ ಬಂಧನದಲ್ಲಿಟ್ಟು ಬಿಡುಗಡೆ ಮಾಡಿದ. ಇದೆಲ್ಲಾ ಕೇವಲ ನಾಟಕ ಅಷ್ಟೆ. ಮಂಗಳೂರಿನ ರಾಜ, ಅಂದರೆ ಬಿದನೂರಿನ ಕೆಳದಿ (ಈಗಿನ ನಗರ) ಅರಸು ಸೋಮಶೇಖರ ನಾಯಕನ ಕೊಲೆ ಆದದ್ದು ೧೬೭೧ನೆಯ ಡಿಸೆಂಬರ್ ನಲ್ಲಿ. ಈತ ೧೬೬೩ ರಿಂದ ೧೬೭೧ರವರೆಗೆ ಆಳಿದ. ಆಗಿದ್ದ ಕಾರವಾರದ ಇಂಗ್ಲಿಷ್ ಏಜೆಂಟರ ಪ್ರಕಾರ ಅಂದರೆ ಅವರು ೧೬೭೨ನೆಯ ಜನವರಿಯಲ್ಲಿ ಬರೆದ ಪತ್ರದ ಪ್ರಕಾರ ಬಿಜಾಪುರ ರಾಜ್ಯದ ರಾಯಭಾರಿ ಮತ್ತು ಅವನ ಸಿಪಾಯಿಗಳು ರಾಜನ ಸರದಾರರು ಆತನ ದುರಾಡಳಿತವನ್ನು ಸಹಿಸಲಾರದೆ ಆತನನ್ನು ಕೊಲೆಮಾಡಿದರೆಂದು ಹೇಳಲಾಗಿದೆ. ಡಾ॥ ಫ್ರೇಸರ್ ಕೂಡ ಈ ಕೊಲೆಯ ವಿಷಯ ಹೇಳುತ್ತಾನೆ. ಕಾರ್ ಹೇಳಿರುವ ನಾರಾಯಣ ಮಲ್ಯ ಮಂಗಳೂರಿನಲ್ಲಿ ಬಿದನೂರು ರಾಜ್ಯದ ಪ್ರತಿನಿಧಿಯಾಗಿದ್ದ ನಲ್ಲದೆ ಭಟ್ಕಳ ಬಂದರಿನ ಮುಖ್ಯ ವರ್ತಕನೂ ಆಗಿದ್ದ. ತಾಯ್‌ಬೀ ಜಾತಿ ಎಂಬುದು ತಿಯ್ಯಾ ಜಾತಿ ಎಂದಿರಬೇಕು. ತಾಯ್‌ಬೀ ಎಂಬುವನು ಆ ಜಾತಿಯ ತಿಮ್ಮನಾಯಕ ಎಂದು ಡಾ॥ ಫ್ರೇಸರ್ ಹೇಳುತ್ತಾರೆ.

ಹೀಗೆಲ್ಲಾ ಆದಮೇಲೆ ಇಂಗ್ಲಿಷರು, ಪೋರ್ಚುಗೀಸರು ಮತ್ತು ಇತರ ವಿದೇಶೀ ವರ್ತಕರು ತಮ್ಮಿಂದ ಕಿತ್ತುಕೊಂಡದಕ್ಕೆ ತಕ್ಕ ಪರಿಹಾರ ಕೊಡಬೇಕೆಂದು ಒತ್ತಾಯ ಮಾಡಿದರು. ಹಾಗೇನಾದರೂ ಪರಿಹಾರ ದೊರೆತರೆ ಆಬರ್ಟ್ ಮತ್ತೆ ಮಂಗಳೂರಿಗೆ ಹಿಂದಿರುಗಿ ಇಂಗ್ಲಿಷರ ವ್ಯಾಪಾರದಲ್ಲಿ ತೊಡಗುವ ಆಲೋಚನೆ ಮಾಡಿದ್ದಾನೆ. ಆತನಿಗೆ ಸ್ಥಳದ ಭಾಷೆ ಚೆನ್ನಾಗಿ ಬರುತ್ತದೆ. ಮಾಲುಗಳ ಗುಣ, ಬೆಲೆ ಇವುಗಳ ಮಾಹಿತಿ ಚೆನ್ನಾಗಿದೆ. ವಾಸ್ತವವಾಗಿ ತಣೂರ್‌ನಲ್ಲಿ ಹಡಗುಗಳಿದ್ದ ಮೂರು ದಿನ ಆತ ಬೇರೆಯವರಿಗಿಂತ ಹೆಚ್ಚು ಕಷ್ಟಪಟ್ಟು ಹಡಗುಗಳನ್ನು ಭರ್ತಿಮಾಡಿದ.

ತಣೂರು ಬಹು ಸುಂದರವಾದ ಸ್ಥಳ. ಬ್ರಾಹ್ಮಣರೂ, ಹಿಂದೂಗಳೂ, ಕ್ರೈಸ್ತರೂ ದೇವಸ್ಥಾನ ಮಸೀದಿ, ಮತ್ತು ಚರ್ಚುಗಳನ್ನು ಕಟ್ಟಿಕೊಂಡು ಸುಖವಾಗಿದ್ದಾರೆ.

೧೫ನೆಯ ತಾರೀಖು ತಣೂರ್ ಬಿಟ್ಟು ಮಾರನೆಯ ದಿನ ಕ್ಯಾಲಿಕಟ್ ತಲಪಿದೆವು. ಹಡಗುಗಳ ಲಂಗರು ಇಳಿಸಿ ನಾವು ತೀರಕ್ಕೆ ಹೋದೆವು. ಇಲ್ಲಿರುವ ಕ್ಯಾಲಿಕಟ್ ರಾಜನ ಪ್ರತಿನಿಧಿ ನಮಗೆ ಒಂಬತ್ತು ಕುಶಾಲ್ ತೋಪುಗಳ ಮರ್ಯಾದೆ ಸಲ್ಲಿಸಿದ. ಆಮೇಲೆ ನಾವೆಲ್ಲಾ ಇಂಗ್ಲಿಷ್ ಫ್ಯಾಕ್ಟೊರಿಗೆ ಹೋದೆವು. ಅಲ್ಲಿರುವ ಇಂಗ್ಲಿಷ್ ಮುಖ್ಯಸ್ಥ ಎಲ್ಲ ಕ್ಯಾಪ್ಟನ್‌ಗಳನ್ನು ಊಟೋಪಚಾರಗಳಿಂದ ಸತ್ಕರಿಸಿದ. ನಾನು ಆ ಸಂಜೆ ಒಬ್ಬ ಕ್ರೈಸ್ತನ ಮನೆಗೆ ಹೋಗಿ ಅಲ್ಲಿ ಎರಡು ದಿನ ಬಿಡಾರ ಮಾಡಿದೆ. ಆದರೆ ಹಡಗುಗಳು ಹೊರಡುವುದು ನಿಧಾನವೆಂದು ಗೊತ್ತಾಯಿತು. ಕಾರಣ ಡಚ್ಚರು ಸ್ಥಳದ ವರ್ತಕರಿಗೆ ಲಂಚ ಕೊಟ್ಟು ಇಂಗ್ಲಿಷರಿಗಾಗಲೀ ಫ್ರೆಂಚರಿಗಾಗಲೀ ಸಂಬಾರ ವಸ್ತುಗಳನ್ನೂ ಬೇರೆ ಸರಕುಗಳನ್ನೂ ಮಾರದಂತೆ ಮಾಡಿದ್ದರು. ಆದರೆ ಇಂಗ್ಲಿಷರು ಬಿಗಿಯಾಗಿ ಕೊಂಡ ಮಾಲಿನಲ್ಲಿ ನಗದು ಹಣ ಕೊಟ್ಟು ವ್ಯಾಪಾರ ಮುಗಿಸಿದರು.

ಇಂಗ್ಲಿಷರು ಈ ವಹಿವಾಟಿನಲ್ಲಿ ತೊಡಗಿರುವಾಗ ನಾನು ತೆಲ್ಲಿಚೆರಿಗೆ ಹೋಗಿ ಬಂದೆ. ಅಲ್ಲಿ ನಮ್ಮದೇ ಫ್ಯಾಕ್ಟೊರಿ ಇದೆ. ಭೂಮಾರ್ಗವಾಗಿ ದಾರಿ ನಡೆದೆ. ಆ ನಾಡೆಲ್ಲ ಕಾಡುಮಯವಾಗಿತ್ತು. ಉದ್ದಕ್ಕೂ ತೋಟ ತುಡಿಕೆಗಳು. ಅವುಗಳಿಗೆ ಹಾಕಿದ ಬೇಲಿ ಬಂಕ ಮತ್ತು ಅಗೆದ ಕಂದಕಗಳು. ಇಂಥ ದಾರಿಯಲ್ಲಿ ನಡೆದುಕೊಂಡು ಹೋಗದೆ ಕುದುರೆ ಗಿದುರೆ ಹತ್ತಿ ಹೋಗುವಂತಿರಲಿಲ್ಲ. ಭರ್ಜಿ ಕತ್ತಿಗಳಿಂದ ಸಜ್ಜಿತರಾದ ನಾಲ್ಕು ಜನ ನಾಯರುಗಳನ್ನು ನನ್ನ ರಕ್ಷಣೆಗೆ ಕರೆದುಕೊಂಡೆ. ನನ್ನ ಸ್ವಂತ ಆಳುಗಳು ಇಬ್ಬರಿದ್ದರು. ಸಂಜೆ ನನ್ನ ನಾಯರುಗಳು ಒಬ್ಬ ತಾಯ್‌ಬಿ ಮನೆಯಲ್ಲಿ ಬಿಡಾರಕ್ಕೆ. ಇವರ ನಡೆ ನುಡಿ ನಾಯರ್‌ಗಳು ಮತ್ತು ಬ್ರಾಹ್ಮಣರಿಗಿಂತ ಬೇರೆ ಬಗೆಯಾಗಿದ್ದುವು. ಅವರ ಮೂಢನಂಬಿಕೆಗಳು ಇವರಲ್ಲಿಲ್ಲ. ಹೊಸಬರನ್ನು ತಮ್ಮ ಮನೆಯೊಳಕ್ಕೆ ಯಾವ ಅಭ್ಯಂತರವೂ ಇಲ್ಲದೆ ಬಿಟ್ಟುಕೊಳ್ಳುತ್ತಾರೆ. ನನ್ನನ್ನು ಇಲ್ಲಿ ಇಳಿಸಿ ನಾಯರ್‌ಗಳು ತಮ್ಮ ಜಾತಿಯವರ ವಠಾರಕ್ಕೆ ಹೋದರು. ಅವರು ತಮ್ಮ ನಿತ್ಯಕರ್ಮಗಳನ್ನು ಮುಗಿಸಲು ನಾಲ್ಕೈದು ಗಂಟೆ ತೆಗೆದುಕೊಂಡರು. ಊಟಕ್ಕೆ ಮುನ್ನ ಮತ್ತು ಆಮೇಲೆ ಅವರು ಅನುಸರಿಸುವ ಆಚರಣೆಗಳಿಗೆ ಲೆಕ್ಕವಿಲ್ಲ. ಅವನ್ನೆಲ್ಲಾ ಸಾಂಗವಾಗಿ ಮುಗಿಸುವು

ದಕ್ಕೆ ಬಹಳ ಹೊತ್ತಾಯಿತು. ಅವರನ್ನು ಹೊರಡಿಸಲು ನಾನೇ ಅವರಿದ್ದ ಮನೆಗೆ ಹೋಗಬೇಕಾಯಿತು. ನನ್ನನ್ನು ಕಂಡು ಮನೆಯ ಹೆಂಗಸರು ಮಕ್ಕಳೆಲ್ಲಾ ಓಡಿಬಂದರು. ಮನೆಯೊಳಗೆ ಕಾಲಿಡಲು ಆಕ್ಷೇಪಣೆ ಮಾಡಲಿಲ್ಲ. ಆಗ ಆ ನಾಯರ್‌ಗಳು ಮಾಡುತ್ತಿದ್ದ ಆಚರಣೆಗಳನ್ನೆಲ್ಲಾ ನೋಡಿದೆ. ಅವನ್ನೆಲ್ಲಾ ಹೇಳಿದರೆ ನೀವು ನಂಬಲಾರಿರಿ.

ನನ್ನ ನಾಯರ್‌ಗಳನ್ನು ಹೊರಡಿಸಿಕೊಂಡು ನನ್ನ ಪ್ರಯಾಣ ಮುಂದುವರೆಸಿ ನವೆಂಬರ್ ೨೧ನೆಯ ತಾರೀಖು ತಲ್ಲಚೆರಿ ತಲುಪಿ ನಮ್ಮ ಫ್ರೆಂಚ್ ಫ್ಯಾಕ್ಟೊರಿಗೆ ಹೋದೆ. ಬೂರೋ (Boureau) ಅವರು ಫ್ಯಾಕ್ಟೊರಿ ನೋಡಿಕೊಳ್ಳುತ್ತಿದ್ದರು. ಈ ಫ್ಯಾಕ್ಟೊರಿಯನ್ನು ಮುಚ್ಚಿಬಿಡಬೇಕೆಂದು ಸೂರತ್ತಿನ ನಮ್ಮ ಡೈರೆಕ್ಟರುಗಳು ತೀರ್ಮಾನಮಾಡಿ ಆ ಕೆಲಸಕ್ಕೆ ಬೂರೋ ಅವರನ್ನು ಕಳುಹಿಸಿದ್ದರು. ಆದರೆ ಬೂರೋ ಅವರು ಫ್ಯಾಕ್ಟೊರಿಯನ್ನು ಮುಚ್ಚುವ ಬದಲು ಅಭಿವೃದ್ಧಿ ಪಡಿಸಿದ್ದರು. ಸೊಗಸಾದ ಮನೆ, ಗಡಂಗು, ಹಿತ್ತಲು ಎಲ್ಲಾ ಇರುವ ಮತ್ತು ಹೇರಳವಾಗಿ ಮೆಣಸು ಸಿಕ್ಕುವ ಈ ಸ್ಥಳದಲ್ಲಿದ್ದ ಫ್ಯಾಕ್ಟೊರಿಯನ್ನು ಮುಚ್ಚುವುದು ತಾನೆ ಹೇಗೆ? ಅಂತೂ ಬೂರೋ ಸೂರತ್ತಿನಿಂದ ಬರುವ ಹಡಗಿಗಾಗಿ ಕಾಯುತ್ತಿದ್ದರು, ಸಾಮಾನು ಸರಂಜಾಮುಗಳನ್ನು ಹೇರಿ ಕಳುಹಿಸಿ ಕೊಡಲು. ನಮ್ಮ ಸೂರತ್ ಡೈರೆಕ್ಟರುಗಳು ಇವರನ್ನೂ ಸರ್ಜನ್ ಡಿಲ್ಲೋನ್ ( M Dellon Surgeon ) ಅವರನ್ನೂ ಸರಿಯಾಗಿ ನೋಡಿಕೊಳ್ಳದೆ ಈ ದೇಶದಲ್ಲಿ ಅಲೆದಾಡುವಂತೆ ಮಾಡಿದ್ದಾರೆ.

ನವೆಂಬರ್ ೨೨ನೆಯ ತಾರೀಖು ಇಂಗ್ಲಿಷ್ ಹಡಗುಗಳು ಬಂದು ಧರ್ಮಪಟ್ಟಂ ನದಿಯ ಮುಖದಲ್ಲಿ ಲಂಗರು ಹಾಕಿದುವು. ಹಡಗು ಬಂದಕೂಡಲೇ ಮೆಣಸು ತುಂಬಿದ್ದ ದೋಣಿಗಳು ಹಿಂಡು ಹಿಂಡಾಗಿ ಹೋಗಿ ಅರ್ಧ ದಿನದಲ್ಲಿ ಇಲ್ಲಿದ್ದ ೮೦೦ ಖಂಡಿ (Candy) ಮೆಣಸನ್ನು ಹಡಗಿಗೆ ಭರ್ತಿಮಾಡಿದುವು. ಒಂದು ಖಂಡಿಗೆ ಇಪ್ಪತ್ತು ಮಣ. ಮಣಕ್ಕೆ ೨೫ ಪೌಂಡು. ಒಂದು ಖಂಡಿಗೆ ೧೨ ಸೆಂಟ್ ಥೋಮಸ್ ಕೊಟ್ಟು ಖರೀದಿ ಮಾಡಲಾಗಿತ್ತು. ಸೆಂಟ್ ಥೋಮಸ್ ಎಂಬುದು ಒಂದು ಚಿನ್ನದ ನಾಣ್ಯ. ಎರಡು ಎಕಸ್‌ಗೆ ಸಮ. ಅಂದರೆ ಮೆಣಸನ್ನು ಒಂದು ಪೌಂಡಿಗೆ ೩ ಸೋಲ್‌ಗಳಂತೆ ಕೊಂಡಂತಾಯಿತು. ಇಲ್ಲಿರುವ ಇಂಗ್ಲಿಷರ ಚಿಕ್ಕವಯಸ್ಸಿನ ಒಬ್ಬ ಕ್ಲಾರ್ಕ್ ಮತ್ತು ಆಗಲೇ ಹೇಳಿದ ಆಬರ್ಟ್ (Aubert) ಇಷ್ಟೆಲ್ಲಾ ಕೆಲಸ ಮಾಡಿದ್ದರು. ಇವರೇ ಮಂಗಳೂರಿಗೆ ಹೋಗಿ ಅಲ್ಲಿ ಸರಕುಗಳನ್ನು ಸಿದ್ಧಪಡಿಸಲು ಅಲ್ಲಿಗೆ ಕಳುಹಿಸಿಕೊಡಲಾಯಿತು. ಇದರಿಂದ ಇಂಗ್ಲಿಷರು ಎಷ್ಟು ವ್ಯವಸ್ಥೆಯಿಂದ ತಮ್ಮ ವ್ಯಾಪಾರ ಸಾಪಾರಗಳನ್ನು ನಡೆಸುತ್ತಾರೆಂಬುದನ್ನು ತಿಳಿಯಬಹುದು.

೨೫ನೆಯ ತಾರೀಖು ಮಂಗಳೂರು ಸಮೀಪಿಸಿದೆವು. ಮೊದಲಿಗೆ ಸಮುದ್ರ ತೀರದಲ್ಲಿ ಎರಡು ಕೋಟೆಗಳನ್ನು ಕಂಡೆವು. ಅವಕ್ಕೆ ಸುಣ್ಣ ಬಳಿದಿದ್ದರು. ನೋಡಲು ಅಂದವಾಗಿ ಕಂಡುವು. ನದೀಮುಖದಲ್ಲಿ ಮಂಗಳೂರು (ಬಿದನೂರು) ರಾಜನಿಗೆ ಸೇರಿದ ಒಂದು ದೊಡ್ಡ ಹಡಗು ನಿಂತಿತ್ತು. ಅದು ಅಕ್ಕಿ ಮತ್ತು ಸಂಬಾರಗಳನ್ನು

ಹೇರಿಕೊಂಡು ಅರೇಬಿಯಾಕ್ಕೊ ಪರ್ಷಿಯಾಕ್ಕೊ ಹೊರಡಲು ಸಿದ್ಧವಾಗಿತ್ತು. ನಮ್ಮ ಹಡಗುಗಳನ್ನು ಕಂಡಕೂಡಲೇ ನದಿಯ ಮೇಲಿನಿಂದ ಹಲವಾರು ದೋಣಿಗಳು ನಮ್ಮ ಹಡಗಿನ ಕಡೆಗೆ ಬರಲಾರಂಭಿಸಿದುವು. ತುಂಬಬೇಕಾದ ಸರಕುಗಳನ್ನು ತುಂಬಿದುವು. ಒಂದು ಗಂಟೆಯೂ ವ್ಯರ್ಥವಾಗಲಿಲ್ಲ. ಹಡಗು ಹೊರಟೇ ಬಿಟ್ಟವು. ಮಾರನೆಯ ದಿನ ಭಟ್ಕಳ ದಲ್ಲಿ ಮೆಣಸು ತುಂಬಿಕೊಂಡು ಹಡಗಿಗೆ ಬೇಕಾದ ಸೌದೆ ಮತ್ತು ನೀರು ತೆಗೆದುಕೊಂಡು ೨೦ನೆಯ ತಾರೀಖು ಹೊನ್ನಾವರ ತಲುಪಿ ಅಲ್ಲಿ ಮೂರು ದಿನ ತಂಗಿದೆವು. ಇಂಗ್ಲಿಷರು ತಮ್ಮ ಹಡಗುಗಳಿಗೆ ಕೊಪರಿ (Copra), ಅಡಕೆ, ಏಲಕ್ಕಿ ಮುಂತಾದ ಸರಕುಗಳನ್ನು ಭರ್ತಿಮಾಡಿಕೊಂಡರು. ಈ ಸರಕುಗಳಿಂದ ಅಪಾರ ಲಾಭ. ಸೂರತ್ತಿನಲ್ಲಿ ಮಾರಿದರೂ ಲಾಭಕ್ಕೆ ಕಡಮೆ ಇಲ್ಲ. ಹೊನ್ನಾವರದಲ್ಲಿ ನಮ್ಮ ಫ್ರೆಂಚರ, ಡಚ್ಚರ ಮತ್ತು ಇಂಗ್ಲಿಷ್ ಫ್ಯಾಕ್ಟೊರಿಗಳಿವೆ.

ಡಿಸೆಂಬರ್ ೩ರಂದು ನಾವು ಮಿರ್ಜಾನ್ ತಲಪಿದೆವು. ಇಲ್ಲಿಯ ಗೌರ್ನರ್ (ನಾಯಕ) ಇಂಗ್ಲಿಷರನ್ನು ಕಂಡು ದಯಮಾಡಿ ಇಲ್ಲೊಂದು ಫ್ಯಾಕ್ಟೊರಿ ಹಾಕಿ ಎಂದು ಕೇಳಿಕೊಂಡ. ಈತನೇ ಬಿದನೂರಿನ ಪರವಾಗಿ ರಾಜ್ಯಭಾರ ನಡೆಸುತ್ತಿದ್ದ ತಿಮ್ಮನಾಯಕ ಅಥವಾ ತಿಮ್ಮಣ್ಣನಾಯಕ. ನಾವು ಈ ಬಗ್ಗೆ ಏನೂ ತೀರ್ಮಾನ ಹೇಳುವಂತಿಲ್ಲವೆಂದೂ ಇದನ್ನೆಲ್ಲಾ ಬೊಂಬಾಯಲ್ಲಿರುವ ಮುಖ್ಯಸ್ಥರಿಗೆ ತಿಳಿಸುವುದಾಗಿ ಇಂಗ್ಲಿಷರು ಹೇಳಿ ಗೌರ್ನರ್‌ನನ್ನು ಎರಡು ದಿನ ಊಟೋಪಚಾರಗಳಿಂದ ಸಂತೋಷಪಡಿಸಿದರು. ಆದರೆ ಈ ಎರಡು ದಿನಗಳೂ ಹಗಲೂ ರಾತ್ರಿ ದೋಣಿಗಳು ಹಡಗಿಗೂ ತೀರಕ್ಕೂ ತಿರುಗಿದ್ದೂ ತಿರುಗಿದ್ದೆ, ಸಂಬಾರ ಮುಂತಾದ ಸರಕುಗಳನ್ನು ಸಾಗಿಸುತ್ತ.

ಮುಂದೆ ನಮ್ಮ ಹಡಗುಗಳು ನಿಂತಿದ್ದು ಕಾರವಾರದಲ್ಲಿ. ಹಡಗು ಇಳಿದು ನಾವು ಇಂಗ್ಲಿಷ್ ಫ್ಯಾಕ್ಟೊರಿಗೆ ಹೋದೆವು. ಇದು ಮೂರು ಅಂತಸ್ತಿನ ದೊಡ್ಡ ಮನೆ. ಕಾರವಾರ ಬಂದರು ಇಲ್ಲಿಂದ ಒಂದು ಒಂದೂವರೆ ಹರಿದಾರಿ ದೂರದಲ್ಲಿದೆ. ಮಧ್ಯೆ ನದಿ ಇದೆ. ಪಟ್ಟಣ ಇನ್ನೊಂದು ಕೊನೆಯಲ್ಲಿ ದೂರದಲ್ಲಿದೆ. ಇಲ್ಲಿ ಮೂರರು, ಹಿಂದು ಗಳು ಮತ್ತು ಬೇರೆ ಬೇರೆ ಜಾತಿಯ ಜನರಿದ್ದಾರೆ.

ಇಲ್ಲಿದ್ದ ಇಂಗ್ಲಿಷ್ ಫ್ಯಾಕ್ಟೊರಿಯ ಮುಖ್ಯಸ್ಥ ಚೆಂಬರ್‌ಲೇನ್ ಎಂಬುವರೂ ನಮ್ಮ ಜೊತೆ ತಮ್ಮ ಮನೆಯ ಸಾಮಾನುಗಳ ಸಮೇತ ಹಡಗಿನಲ್ಲಿ ಬಂದರು. ಇವರಿಗೆ ಬಡ್ತಿಕೊಟ್ಟು ಫ್ಯಾಕ್ಟೊರಿಗೆ ಹಾಕಿದ್ದರು. ಇಂಗ್ಲಿಷರು ಒಬ್ಬನ ಸರ್ವಿಸು, ಅರ್ಹತೆ ಇವುಗಳನ್ನೆಲ್ಲಾ ಗಮನಿಸಿಯೇ ಬಡ್ತಿ ಕೊಡುತ್ತಾರೆ. ನಮ್ಮ ಫ್ರೆಂಚರು ಹಾಗಲ್ಲ. ಏನೂ ಗೊತ್ತಿಲ್ಲದ ಹುಡುಗರನ್ನು ಫ್ಯಾಕ್ಟೊರಿ ಯಜಮಾನನನ್ನಾಗಿ ಮಾಡಿ ಎಲ್ಲವನ್ನೂ ಕುಲಗೆಡಿಸಿಬಿಡುತ್ತಾರೆ.

ಮಾರನೆಯ ದಿನ ನಮ್ಮ ಹಡಗುಗಳು ಗೋವಾ ದ್ವೀಪ ಕಂಡುವು. ಇಲ್ಲಿ ಪೋರ್ಚುಗಲ್‌ನಿಂದ ಆಗತಾನೆ ಬಂದಿದ್ದ ಮೂರು ಹಡಗುಗಳು ನಿಂತಿದ್ದುವು. ನಾವು ಬರುತ್ತಿರುವುದಾಗಿ ಕಾರವಾರದಿಂದ ಸುದ್ದಿ ತಿಳಿದ ಹಲವು ಶ್ರೀಮಂತ ಪೋರ್ಚುಗೀಸ್

ವರ್ತಕರು ದೆ ೞಣಿಗಳಲ್ಲಿ ಬಂದು ನಮ್ಮ ಹಡಗುಗಳನ್ನು ಎದುರುಗೊಂಡು ಕುಡಿಯಲೂ ತಿನ್ನಲೂ ಒದಗಿಸಿದರು. ಹಂದಿ, ದನ, ಕುರಿ, ಕೋಳಿ, ರೊಟ್ಟಿ, ಹಣ್ಣು, ಚೀಸ್ ಮತ್ತು ಪೋರ್ಚುಗೀಸ್ ವೈನ್‌ಗಳನ್ನು ಕೊಟ್ಟರು. ಇವನ್ನೆಲ್ಲಾ ಒಂದರಗಳಿಗೆಯಲ್ಲಿ ಹಡಗಿನವರು ಕೊಂಡುಕೊಂಡುಬಿಟ್ಟರು. ಬೇರೆ ಕಡೆ ಇವನ್ನೆಲ್ಲಾ ಕೊಳ್ಳಲು ಅವಕಾಶವಿರಲಿಲ್ಲ. ಗೋವೆಯು "ನೀಪ್" ಅಂದರೆ ತೆಂಗಿನ ಬ್ರಾಂದಿ ಇದರ ಬೆಲೆ ಒಂದು ಪೈಪ್ (Pipe ಪಿಪಾಯಿ) ೩೩ ಪಾರ್ದೊಗಳು. ಒಂದು ಪಾರ್ದೊಗೆ ಒಂದು ಷಿಲ್ಲಿಂಗ್ ಆರು ಪೆನ್ನಿ. ಪೋರ್ಚುಗೀಸ್ ವೈನ್ ಒಂದು ಪಿಪಾಯಿಗೆ ೨೦೦ ಪಾರ್ದೊಗಳು. ಉಳಿದ ಸಾಮಾನುಗಳೂ ಸಹ ಅಗ್ಗ. ಪೋರ್ಚುಗೀಸರಿಗೆ ಬೇಕಾದ ಚೀಸ್, ಹ್ಯಾಟ್‌ಗಳು, ಒಲೀವ್‌ಮರದ ಸಾಮಾನುಗಳು, ರೇಷ್ಮೆ ಕಾಲುಚೀಲಗಳು, ರಿಬ್ಬನ್‌ಗಳು, ಸ್ಪೇನ್ ದೇಶದ ವೈನು, ಫ್ರೆಂಚ್‌ಬ್ರಾಂದಿ ಮತ್ತು ಈ ತರಹ ಸಾಮಾನು ಗಳನ್ನು ಇಂಗ್ಲಿಷರು ಮಾರಿದರು. ಹಡಗುಗಳು ಗೋವೆಯಲ್ಲಿ ಹೆಚ್ಚು ಕಾಲ ನಿಂತದ್ದು ಈ ಸಣ್ಣಪುಟ್ಟ ವ್ಯವಹಾರಕ್ಕಲ್ಲ. ಗೋವಾ ವರ್ತಕರು ಇಂಗ್ಲಿಷರಿಗೆ ವಜ್ರ ಮುಂತಾದ ರತ್ನಗಳನ್ನು ಮಾರುತ್ತಾರೆ. ಆ ಹಣ ಈ ಹಡಗುಗಳಲ್ಲಿ ಇಂಗ್ಲೆಂಡಿನಿಂದ ಬರುತ್ತದೆ. ಇದನ್ನು ಹಡಗಿನಿಂದ ತೆಗೆದುಕೊಡಲು ಅಷ್ಟು ಹೊತ್ತು ಆಗುತ್ತದೆ. ಮಧ್ಯರಾತ್ರಿ ಆಯಿತು ಕೆಲಸ ಮುಗಿಯಲು. ಆಗ ನಮ್ಮ ಹಡಗುಗಳು ಹೊರಟವು.

ಡಿಸೆಂಬರ್ ೧೦ ವೆಂಗೂರ್ಲಾ ದಾಟಿದ ಮೇಲೆ ಉತ್ತರದಲ್ಲಿ ಹನ್ನೆರಡು ಹಡಗು ಗಳು ಕಾಣಿಸಿಕೊಂಡವು. ಡಚ್ಚರ ಹಡಗುಗಳಿರಬೇಕೆಂದು ಇಂಗ್ಲಿಷರು ಯುದ್ಧಕ್ಕೆ ಸಿದ್ಧರಾದರು. ಅಲ್ಲಲ್ಲಿ ಚದುರಿ ಯಾನಮಾಡುತ್ತಿದ್ದ ಹಡಗುಗಳನ್ನು ಒಂದು ಕಡೆ ಸೇರಿಸಿ ದ್ದಾಯಿತು. ಬಂಗಾಳ ಕೊಲ್ಲಿಯಲ್ಲಿ ಕಳೆದ ಸೆಪ್ಟೆಂಬರ್ ತಿಂಗಳಿನಲ್ಲಿ ಡಚ್ಚರ ಮೇಲೆ ನಡೆದ ಯುದ್ಧಕ್ಕಿಂತ ಭಾರಿ ಎನ್ನಬಹುದಾದ ಯುದ್ಧಕ್ಕೆ ಸಿದ್ಧರಾದರು. ಆದರೆ ಆ ಹಡಗುಗಳು ಪೋರ್ಚುಗೀಸರ ಹಡಗುಗಳಾಗಿದ್ದುವು. ಅವು ಗೋವೆ ಕಡೆಗೆ ಹೊರಟುಹೋದುವು. ನಾವು ಬೊಂಬಾಯಿ ಕಡೆಗೆ ಹೊರಟೆವು. ೧೬ನೆಯ ತಾರೀಖು ಆ ಊರು ಕಂಡೆವು.

ಮಾರನೆಯ ದಿನ ನಾನು ಹಡಗು ಇಳಿದು ಇಂಗ್ಲಿಷ್ ಫ್ಯಾಕ್ಟೊರಿಗೆ ಹೋಗಿ ಪ್ರೆಸಿಡೆಂಟ್ ಮಿ|| ಅಂಗಿಯೇರ್ ಅವರನ್ನು ನೋಡಿದೆ. ನನ್ನನ್ನು ವಿಶ್ವಾಸದಿಂದ ಕಂಡರು. ಫ್ರೆಂಚ್ ಫ್ಯಾಕ್ಟೊರಿಗಳ ಹೀನಸ್ಥಿತಿಯನ್ನು ವಿವರಿಸಿದರು. ಮದ್ರಾಸಿನಿಂದ ಭೂಮಾರ್ಗವಾಗಿ ಆಗತಾನೆ ಬಂದಿದ್ದ ಕಾಗದಗಳನ್ನು ತೋರಿಸಿದರು. ಡಚ್ಚರು ಕೊನೆಗೂ ಗೋಲ್ಕೊಂಡ ರಾಜನ ಮನವೊಲಿಸಿ ಆತನ ಕಡೆಯ ೮೦೦೦ ಸೈನಿಕರನ್ನು ಸೇರಿಸಿ ಟ್ರಿಪ್ಲಿಕೇನ್ ತೋಪಿನಲ್ಲಿ ಪಾಳೆಯ ಹೂಡಿ ಸೆಂಟ್ ಥೋಮಿಗೆ ಆಹಾರ ಸಾಮಗ್ರಿ ಗಳು ಹೋಗದಂತೆ ತಡೆ ಹಿಡಿದಿರುವುದಾಗಿ ಆ ಪತ್ರಗಳಿಂದ ತಿಳಿಯಿತು. ಅಲ್ಲದೆ ಡಚ್ಚರ ಬಳಿ ಈಗ ಕೇವಲ ನಾಲ್ಕು ಹಡಗುಗಳು ಇವೆಯೆಂದೂ ಉಳಿದ ಹಡಗು ಗಳಿಗಾಗಿ ಅವರು ಕಾಯುತ್ತಿದ್ದಾರೆಂದೂ ಗೊತ್ತಾಯಿತು. ನಾನು ಮದ್ರಾಸಿನಲ್ಲಿದ್ದ ಇಂಗ್ಲಿಷರ, ಫ್ರೆಂಚರ ಬಗ್ಗೆ ತೋರಿಸುತ್ತಿರುವ ಅಸಹಕಾರದ ಬಗ್ಗೆ ಪ್ರೆಸಿಡೆಂಟರಿಗೆ

ದೂರು ಹೇಳಿದೆ. ಇದು ತಮಗೆ ಸಂಬಂಧಪಟ್ಟ ವಿಷಯವಲ್ಲವೆಂದುಬಿಟ್ಟರು ಆಂಗಿಯೇರ್.

ಮಾತುಕತೆಗಳು ಮುಗಿದಮೇಲೆ ಪ್ರೆಸಿಡೆಂಟರು ತಮ್ಮ ಕೋಟೆಯಲ್ಲಿಯೇ ಇರಲು ಹೇಳಿದರು. ಆದರೆ ನಾನು ಭೂಮಾರ್ಗವಾಗಿ ಸೂರತ್ತಿಗೆ ಹೊರಡಲು ತೀರ್ಮಾನಿಸಿದೆ. ಏಕೆಂದರೆ ಹಡಗುಗಳು ಹೊರಡಲು ಇನ್ನೂ ಎಂಟು ಹತ್ತು ದಿನ ಬೇಕಾಗಿತ್ತು. ಅಷ್ಟು ದಿನ ವ್ಯರ್ಥವಾಗುವುದು ಬೇಡ ಎಂದು ಅಲ್ಲಿಂದ ಹೊರಡುವುದಾಗಿ ತಿಳಿಸಿದೆ. ಪ್ರೆಸಿಡೆಂಟರು ಮೂರ್ ಪ್ಯೂನ್‌ಗಳ ಧಫೇದಾರರನ್ನು ಕರೆದು ನಾಲ್ಕು ಜನರನ್ನು ನನ್ನ ಸಹಾಯಕ್ಕೆ ಕೊಟ್ಟು ಏನೂ ತೊಂದರೆಯಾಗದಂತೆ ನೋಡಿಕೊಳ್ಳಬೇಕೆಂದು ಕಡ್ಡಾಯವಾಗಿ ಹೇಳಿದರು.

ಗೌರ್ನರ್ ಜೊತೆ ತಿಂಡಿ ಮುಗಿಸಿ ಬೇರೆ ಕೆಲಸದ ಮೇಲೆ ಊರೊಳಕ್ಕೆ ಹೋದೆ.

ಇಂಗ್ಲಿಷ್ ಪ್ರೆಸಿಡೆಂಟರು ಇಂಗ್ಲಿಷರ ಎಲ್ಲಾ ಹಡಗುಗಳಿಗೂ ಭೇಟಿಕೊಟ್ಟರು. ನಾಲ್ಕು ಕ್ಯಾಪ್ಟನ್‌ಗಳ ಬೆನ್ನು ತಟ್ಟಿ ಭೇಷ್ ಎಂದರು. ಆದರೆ ಡಚ್ಚರೊಡನೆ ನಡೆದ ಹೋರಾಟದಲ್ಲಿ ಓಡಿಹೋಗಲೆತ್ನಿಸಿದ್ದ ಯಾರಿಗೂ ಹಡಗಿಗೆ ಹೋಗಿ ಅದರ ಕ್ಯಾಪ್ಟನ್‌ನನ್ನು ತಮ್ಮಕೈಯಲ್ಲಿದ್ದ ಬೆತ್ತದಿಂದ ಚೆನ್ನಾಗಿ ಥಳಿಸಿದರು. ಈ ಅವಮಾನ ಡಚ್ಚರ ಪೆಟ್ಟಿಗಿಂತ ಹೆಚ್ಚಾಗಿತ್ತು. ಪ್ರೆಸಿಡೆಂಟರಿಗೆ ಇಷ್ಟು ಕೋಪಬರಲು ಕಾರಣವೇನೆಂದರೆ ಮೂರು ಹಡಗುಗಳು ನಾಶವಾದುದಲ್ಲದೆ ಅವುಗಳ ಮೇಲೆ ಹಾಕಿದ್ದ ತಮ್ಮ ಸ್ವಂತ ಹಣ ಎರಡು ಲಕ್ಷ ಎಕಸ್‌ಗಳು (೪೫,೦೦೦ ಪೌಂಡು) ನಷ್ಟವಾಗಿತ್ತು.

ನಾನು ಬೊಂಬಾಯಿಂದ ಹೊರಟೆ. ಬಸ್ಸೀನ್‌ವರೆಗೆ ಹೋಗಲು ಪ್ರೆಸಿಡೆಂಟರು ತಮ್ಮ ದೋಣಿಯನ್ನೇ ಕೊಟ್ಟಿದ್ದರು. ಮಧ್ಯಾಹ್ನ ಹೊರಟ ನಾನು ಮನೋಲ್, ಪಿರ್‌ಪಿನ್, ಪೌರಿದಿಯು, ದಿವಾನ್, ಕಾರಂಜಿ ಇವುಗಳ ಮುಖಾಂತರ ಬಸ್ಸೀನ್ ಬಂದರನ್ನು ತಲಪಿದೆವು. ಅಷ್ಟುಹೊತ್ತಿಗೆ ಪಟ್ಟಣದ ಬಾಗಿಲು ಹಾಕಿದ್ದರು. ಆದ್ದರಿಂದ ನಾವು ರಾತ್ರಿಯನ್ನು ದೋಣಿಯಲ್ಲೇ ಕಳೆದೆವು.

ಮಾರನೆಯ ದಿನ ಅಂದರೆ ಡಿಸೆಂಬರ್ ೧೮ ಬೆಳಿಗ್ಗೆ ೫ ಘಂಟೆಗೆ ಪಟ್ಟಣದ ಬಾಗಿಲುಗಳು ತೆರೆದುವು. ದೋಣಿಯನ್ನು ಬೊಂಬಾಯಿಗೆ ಕಳುಹಿಸಿಕೊಟ್ಟೆ. ನಾನು ಬಂದಿರುವ ಸಂಗತಿ ತಿಳಿದು ಇಲ್ಲಿಯ ಸೀಗೂನಾ (Seguinean) ಎಂಬ ಫ್ರೆಂಚ್ ಡಾಕ್ಟರು ಬಂದು ಅವರ ಮನೆಗೆ ಕರೆದುಕೊಂಡು ಹೋದರು. ಅವರು ಪೋರ್ಚುಗೀಸ್ ಯುವತಿಯನ್ನುಮದುವೆ ಮಾಡಿಕೊಂಡು ಆರಾಮವಾಗಿ ಇದ್ದಾರೆ. ಬಹು ಸೊಗಸಾದ ಮನೆ ಮತ್ತು ಆಳುಕಾಳುಗಳು.

ಬಸ್ಸೀನ್ ವಿಷಯ ನಾನು ಇಲ್ಲಿಗೆ ಹಿಂದೆ ಬಂದಾಗಲೇ ಹೇಳಿದ್ದೇನೆ. ಪೋರ್ಚುಗೀಸರು ಆಳುತ್ತಿರುವ ಶ್ರೀಮಂತ ಪಟ್ಟಣಗಳಲ್ಲಿ ಇದು ಒಂದು. ಶ್ರೀಮಂತ ಫಿದಲ್ಗೋಗಳೂ ಪ್ರಭಾವಶಾಲಿಗಳಾದ ಪಾದ್ರಿಗಳೂ ಇಲ್ಲಿಯ ಬಹುತೇಕ ನಿವಾಸಿಗಳು. ಇಲ್ಲಿ ಹಡಗುಗಳನ್ನು ಕಟ್ಟುತ್ತಾರೆ. ಡಾಕ್ಟರು ನನ್ನನ್ನು ತುಂಬಾ ಚೆನ್ನಾಗಿ ನೋಡಿಕೊಂಡರು.

ತಾರಾಪುರಕ್ಕೆ ಹೋಗಲು ಒಂದು ಪಲ್ಲಕ್ಕಿಯನ್ನೂ ಆಳುಗಳನ್ನೂ ಒದಗಿಸಿದರು. ಇನ್ನೊಂದು ಹೆಜ್ಜೆ ಮುಂದೆ ಹೋಗಿ ತಮ್ಮ ಹೆಂಡತಿಯ ಪರಿಚಯ ಮಾಡಿಕೊಟ್ಟರು. ಪೋರ್ಚುಗೀಸರಲ್ಲಿ ತಮ್ಮ ಹೆಂಡತಿಯರನ್ನು ಬೇರೆಯವರಿಗೆ ಪರಿಚಯಮಾಡಿಕೊಡುವ ಪದ್ಧತಿ ಇಲ್ಲ. ನಮ್ಮ ಡಾಕ್ಟರ ಹೆಂಡತಿ ಮುದ್ದು ಮುದ್ದಾಗಿದ್ದಳು. ತುಂಬಾ ಚಿಕ್ಕವಯಸ್ಸು. ಚಂಡಿನಂತೆ ಗುಂಡುಗುಂಡಾಗಿದ್ದಳು. ಮೊದಲ ಹೆರಿಗೆಯಾಗಿ ಕೇವಲ ಒಂದು ತಿಂಗಳಾಗಿತ್ತು.

೧೯ನೆಯ ಡಿಸೆಂಬರ್ ಮಧ್ಯಾಹ್ನ ಪಲ್ಲಕ್ಕಿಯಲ್ಲಿ ಬಸ್ಸೀನ್ ಬಿಟ್ಟು ಸಂಜೆ ಇಲ್ಲಿಯ ಫಿದಲ್ಗೋ ಒಬ್ಬನ ತೋಟದ ಮನೆಯಲ್ಲಿ ತಂಗಿದೆ. ಈ ತೋಟದಿಂದ ೬೦೦೦ ಅಥರ್ ಬಾಡಿಗೆ ಬರುತ್ತದೆ. ನನ್ನನ್ನು ಕೆಲವು ಪೋರ್ಚುಗೀಸ್ ಫಿದಲ್ಗೊಗಳು ಅಂದರೆ ಫಿಥಾಲ್ಗೊ ಎಂದು ಕರೆದುಕೊಳ್ಳುತ್ತಿದ್ದ ಮೋಸಗಾರರು ವಿಶ್ವಾಸದಿಂದ ಎದುರು ಗೊಂಡರು. ನನಗೆ ಕೋಳಿಗಳನ್ನೂ ವೈನನ್ನೂ ಒದಗಿಸಿ ಏನೋ ಮಹಾ ಉಪಕಾರ ಮಾಡುತ್ತಿರುವುದಾಗಿ ಕಂಡರು. ಆದರೆ ಅವಕ್ಕೆ ಮೂರರಷ್ಟು ದುಬಾರಿ ಬೆಲೆ ತೆಗೆದುಕೊಂಡುದಲ್ಲದೆ ನನ್ನೊಡನೆ ಸೇರಿ ತಿಂದು ಕುಡಿದರು. ಅವರ ಸಹವಾಸದಲ್ಲಿ ನನಗೆ ದೊಡ್ಡ ಉಪಕಾರವೆಂಬಂತೆ ಭಾವಿಸಿ ರಾತ್ರಿಯೆಲ್ಲಾ ಖುಷಿಯಾಗಿ ಕಾಲಕಳೆದರು.

ಬೆಳಿಗ್ಗೆ ಹೊತ್ತುಹುಟ್ಟುವುದಕ್ಕಿಂತ ಮೊದಲೇ ಹೊರಟು ದಂತಿವ್ರಾ (Dantivra) ನದಿ ದಾಟಿದೆವು. ನದಿ ದಾಟುವಾಗ ಒಂದು ಪ್ರಸಂಗ ನಡೆಯಿತು. ಬಾಡಿಗೆ ದೋಣಿ ಆ ಕಡೆ ದಡದಲ್ಲಿತ್ತು. ನಮ್ಮನ್ನು ಈ ಕಡೆ ಕಂಡ ದೋಣಿಯವ ಇಲ್ಲಿಗೆ ಬರಬೇಕಾಗಿತ್ತು. ಬರಲಿಲ್ಲ. ಆಗ ಮರದ ದಿಮ್ಮಿಗಳನ್ನು ಹೇರಿಕೊಂಡು ಸಮುದ್ರ ಕಡೆಗೆ ಹೋಗುತ್ತಿದ್ದ ಒಂದು ದೋಣಿ ಬಂತು. ಗುಂಡು ಹಾರಿಸುವುದಾಗಿ ಬೆದರಿಸಿ ಆ ದೋಣಿಯಲ್ಲಿ ಆಚೆ ದಡಕ್ಕೆ ಹೋದೆವು. ಅಲ್ಲಿ ಬಾಡಿಗೆ ದೋಣಿಯವನನ್ನು ಪೋರ್ಚು ಗೀಸರ ಪೊಲಸು ಭಾಷೆಯಲ್ಲಿ ಸಿಕ್ಕಾಪಟ್ಟೆ ಬಯ್ದುಬಿಟ್ಟೆ. ಅವನು ದಮ್ಮಯ್ಯ ಕಾಣಲಿಲ್ಲ ಎಂದು ಅಂಗಲಾಚಿದ. ನನ್ನನ್ನು ಸಾಗಿಸಿಕೊಟ್ಟ ದೋಣಿಯವನಿಗೆ ಕೊಡಬೇಕಾದ ಕೂಲಿ ಕೊಟ್ಟೆ. ಅವನಿಗೆ ಬಹು ಆಶ್ಚರ್ಯವಾಯಿತು. ಪೋರ್ಚುಗೀಸ ರ‍್ಯಾರೂ ಹೀಗೆ ಕೂಲಿ ಕೊಡುವುದಿಲ್ಲ. ಅವರಿಗೆ ಎಲ್ಲಾ ಬಿಟ್ಟಿ. ಈ ಕಾರಣವೇ ಅವರನ್ನು ಕಂಡರೆ ಯಾರಿಗೂ ಆಗುವುದಿಲ್ಲ.

ನದಿ ದಾಟಿ ಎರಡು ಗಂಟೆಗಳ ಕಾಲ ಪ್ರಯಾಣಮಾಡಿ ಮಹಲು ತಲಪಿದೆ. ಇದು ಪೋರ್ಚುಗೀಸರ ಪಟ್ಟಣ. ನದಿ ದಾಟುವಾಗ ನನ್ನ ದೋಣಿಯಲ್ಲಿ ಒಬ್ಬ ಫಿದಲ್ಗೋನೂ ಇದ್ದ. ಆತ ನನ್ನೊಡನೆ ತಾರಾಪುರಕ್ಕೆ ಬರುವುದಾಗಿ ತಿಳಿಸಿದ. ಆಗಲಿ ಎಂದೆ. ದಾರಿಯಲ್ಲಿ ನಾನು ತಂದಿದ್ದ ಬುತ್ತಿ ಬಿಚ್ಚಿ ಊಟಕ್ಕೆ ಕುಳಿತೆ. ಪೋರ್ಚು ಗೀಸನೂ ನನ್ನೊಡನೆ ಊಟ ಮಾಡಿದ. ಅವನು ತಿಂದದ್ದು ನೋಡಿದರೆ ಒಂದು ವಾರದಿಂದ ಏನೂ ತಿಂದಿರಲಿಲ್ಲವೇನೋ ಎಂದು ಅನಿಸಿತು. ಮಿಕ್ಕದ್ದನ್ನು ನಾನು ನನ್ನ ಸೇವಕರಿಗೆ ಕೊಟ್ಟೆ. ಇದನ್ನು ನೋಡಿ ಆ ಪೋರ್ಚುಗೀಸ 'ಅಯ್ಯೊ ಅಯ್ಯೊ ಹಾಗೆ

ಕೊಡೋದುಂಟೆ? ನಾವು ಉಂಡದ್ದನ್ನು ಅವರು ಉಣ್ಣಬಹುದೆ? ಅವರಿಗೆ ಒಂದಿಷ್ಟು ಹೆಂಡ ಹುರಿಗಾಳು ಕೊಟ್ಟರೆ ಸಾಕು!' ಎಂದ. ಅದಕ್ಕೆ ನಾನು 'ನೀವು ಪೋರ್ಚುಗೀಸರು ಹೇಗಾದರೂ ಮಾಡಿ. ನಾನು ಮಾತ್ರ ನನ್ನ ಸೇವಕರಿಗೆ ಹೊಟ್ಟೆತುಂಬ ಹಾಕದೆ ಇರುವುದಿಲ್ಲ' ಎಂದೆ.

ರಾತ್ರಿ ಎಂಟು ಗಂಟೆಗೆ ತಾರಾಪುರ ತಲುಪಿದೆವು. ನನಗೆ ಗಂಟುಬಿದ್ದಿದ್ದ ಪೋರ್ಚುಗೀಸನಿಂದ ಕೈಕಳಚಿಕೊಂಡು ನನಗೆ ಗೊತ್ತಿದ್ದ ಒಬ್ಬ ಫ್ರೆಂಚನ ಮನೆಯಲ್ಲಿ ಬಿಡಾರ ಮಾಡಿದೆ.

ಪೋರ್ಚುಗೀಸರು ಏನೇನೋ ಉಪಾಯಮಾಡಿ ತಮ್ಮ ಹೆಣ್ಣುಗಳನ್ನು ಫ್ರೆಂಚರ ಕೊಳ್ಳಿಗೆ ಗಂಟುಹಾಕುತ್ತಾರೆ. ಒಮ್ಮೆ ಅವರ ಬಲೆಗೆ ಬಿದ್ದರೆ ಸಾಕು, ಗಂಡಂದಿರನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡು ದುಡಿಸಿಕೊಳ್ಳುತ್ತಾರೆ. ಹೆಂಡತಿಯನ್ನಷ್ಟೇ ದುಡಿದು ಅಲ್ಲ, ಆಕೆಯ ಅತ್ತೆ ಮಾವಂದಿರು ಭಾವಮೈದುನರನ್ನೆಲ್ಲಾ ಸಾಕಬೇಕು. ಹಾಗೆ ಸಾಕದಿದ್ದರೆ ಅವನನ್ನೇ ಮುಗಿಸಿಬಿಡುತ್ತಾರೆ. ಹೀಗೆಯೇ ಆಗಿದೆ ನಮ್ಮ ಅನೇಕ ಫ್ರೆಂಚ್ ಹುಡುಗರ ಗತಿ. ಇಂತಹ ಗತಿಗೆ ಸಿಕ್ಕಿದ್ದವರನ್ನು ನಾನು ತಾರಾಪುರದಲ್ಲಿ ನೋಡಿ ನನಗೆ ಸಂಕಟವಾಯಿತು. ಇಂಥವರಲ್ಲಿ ಕೌಲೋಲಿಜೆ (Coulange) ಎಂಬುವನೊಬ್ಬ. ಈತನಿಗೆ ಪೋರ್ಚುಗೀಸರು ಮೋಸಮಾಡಿ ಒಬ್ಬ ಸೂಳೆ ಮಗಳನ್ನು ಗಂಟುಹಾಕಿದ್ದರು. ಸರಿ, ತಾರಾಪುರದಲ್ಲಿ ಸಂಸಾರ ಸಾಗಿಸುತ್ತಿದ್ದ. ನಾನು ಬಂದಿರುವುದು ಕೇಳಿ ನೋಡಲು ಬಂದ. ಒಂದು ದಿನ ಅವರ ಮನೆಗೆ ಹೋದೆ. ಅಲ್ಲಿ ಗಂಡ ಹೆಂಡಿರು ಸೇರಿ ಒಂದು ಸಂಚು ಹೂಡಿದ್ದರು. ಅದೇನೆಂದರೆ, ಅವರ ಮನೆಯಲ್ಲಿ ಒಬ್ಬ ಹುಡುಗಿ ಇದ್ದಳು. ಅವಳನ್ನು ನನ್ನ ಬಳಿ ಇದ್ದ ಹುಡುಗನಿಗೆ ಗಂಟುಹಾಕಲು ಅವರು ಪ್ರಯತ್ನಪಟ್ಟರು. ನನ್ನ ಬಳಿ ಇದ್ದ ಫ್ರೆಂಚ್ ಹುಡುಗನಿಗೆ ಹದಿನೈದು ವರ್ಷ. ಸೆಂಟ್‌ಥೋಮಿನಲ್ಲಿರುವಾಗ ವೈಸ್‌ರಾಯರು ಆತನನ್ನು ನನ್ನ ಸೇವೆಗೆ ಕೊಟ್ಟಿದ್ದರು. ಊರು ಬಿಡುವಾಗ ಕರೆದುಕೊಂಡು ಹೋಗಬಹುದೆಂದೂ ಹೇಳಿದ್ದರು. ಅದರಂತೆ ನಾನು ಆ ಹುಡುಗನನ್ನು ಕರೆದುಕೊಂಡು ಬಂದಿದ್ದೆ. ಆದರೆ ಇವರ ಮನೆಗೆ ಬಂದಾಗ ಆತ ನನ್ನ ಜೊತೆ ಇರಲಿಲ್ಲ. ಅವನನ್ನು ಕರೆದುಕೊಂಡು ಬರುವುದಾಗಿ ಗಂಡ ನನ್ನ ಬಿಡಾರಕ್ಕೆ ಹೋದ. ಈ ಕಡೆ ಹೆಂಡತಿ 'ನೋಡಿ ನಮ್ಮ ಮನೆಯಲ್ಲಿ ೧೪ ವರ್ಷದ ಹುಡುಗಿ ಇದ್ದಾಳೆ. ಕೈತೊಳೆದು ಕೊಂಡು ಮುಟ್ಟಬೇಕು. ಅಷ್ಟು ಚೆನ್ನಾಗಿದ್ದಾಳೆ. ಬೇಕಾದರೆ ನೀವೇ ನೋಡಿ ಹೇಗಿದ್ದಾಳೆ' ಎಂದು ಆಕೆಯನ್ನು ತಂದು ನನ್ನ ಕೋಣೆಯಲ್ಲಿ ಬಿಟ್ಟು 'ನೀವು ಅವಳೊಡನೆ ಹ್ಯಾಗೆ ಬೇಕಾದರೂ ಇರಬಹುದು' ಎಂದು ಹೇಳಿ ಹೊರಟುಹೋದಳು. ಇದನ್ನೆಲ್ಲಾ ಕೇಳಿ ನನಗೆ ದಿಗ್ಭ್ರಮೆಯಾಯಿತು. ಅಂತೂ ಗಂಡಹೆಂಡಿರ ಈ ಪಿತೂರಿ ನಡೆಯಲಿಲ್ಲ. ಕೂಡಲೇ ನಾನು ನನ್ನ ಮನೆಗೆ ಹಿಂದಿರುಗಿ ಎಲ್ಲರೂ ಪ್ರಯಾಣಕ್ಕೆ ಸಿದ್ಧರಾಗಬೇಕೆಂದು ತಿಳಿಸಿ ರಾತ್ರಿ ೧೦ ಘಂಟೆಗೆ ಕೂಲಿಗಳಿಗೆಲ್ಲಾ ಹೊಟ್ಟೆ ತುಂಬಾ ಅನ್ನ ಹಾಕಿಸಿದೆ.

ಹೊರಡುವ ಮುನ್ನ ಒಂದು ಅಸಹ್ಯವಾದ ಸಂಗತಿಯನ್ನು ಹೇಳಿಬಿಡುತ್ತೇನೆ. ಪೋರ್ಚುಗೀಸ್ ಕ್ರೈಸ್ತರು ಎಂತಹ ನೀಚರು ಎಂಬುದನ್ನು ಕೇಳಿ. ಈ ಊರಿಗೇ ಶ್ರೀಮಂತ

ನಾದ ಒಬ್ಬ ಫಿದಲ್ಗೋ ಇದ್ದ. ಆತನಿಗೆ ಊರ ಮಧ್ಯೆ ಸೊಗಸಾದ ಮನೆ, ರೂಪವತಿಯಾದ ಹೆಂಡತಿ ಮತ್ತು ಇಬ್ಬರು ಬೆಳೆದ ಹೆಣ್ಣುಮಕ್ಕಳು. ಹಳ್ಳಿಗಳಲ್ಲಿ ಇವನ ಹೊಲಗದ್ದೆ ತೋಟಗಳು. ವರ್ಷಕ್ಕೆ ೮೦೦೦ ಲೀವರ್ ಬಾಡಿಗೆ (rent) ಬರುತ್ತಿತ್ತು. ಇಡೀ ಊರಿನವರ ಗೌರವ ಸಂಪಾದಿಸಿಕೊಂಡಿದ್ದ. ಆದರೆ ಆತನ ನಡತೆ ಮಾತ್ರ ತೀರ ಹೊಲಸು. ಒಬ್ಬಳು ಸಾಲದು ಎಂದು ಇನ್ನೊಬ್ಬಳನ್ನು ಮದುವೆಯಾದ. ಜೊತೆಗೆ ತಿರುಕರು ಮತ್ತು ಮೂಕರಂತೆ ಹೆಣ್ಣುಗಳ ತಂಡವನ್ನೇ ಮನೆಯಲ್ಲಿ ಇಟ್ಟುಕೊಂಡಿದ್ದ. ಅಷ್ಟು ಸಾಲದು ಎಂಬಂತೆ ತನ್ನ ಹೆಣ್ಣುಮಕ್ಕಳು ಮತ್ತು ತಂಗಿಯರನ್ನೇ ಇಟ್ಟುಕೊಂಡಿದ್ದ. ಅವರಿಗೆ ಮಕ್ಕಳೂ ಆದುವು. ಇಂಥವನು ಈ ಭೂಮಿಯ ಮೇಲಿರಬಾರದೆಂದು ದೇವರಿಗೆ ಅನಿಸಿರಬೇಕು. ಕಳೆದ ಗುಡ್‌ಫ್ರೈಡೇ ಹಳ್ಳಿಗೆ ಹೋಗಿ ಎತ್ತಿನ ಗಾಡಿಯಲ್ಲಿ ಹಿಂದಿರುಗುತ್ತಿದ್ದ. ಅವನ ಮೈಮೇಲೆ ಚಿನ್ನದ ಸರ ಉಂಗುರ ಮುಂತಾದ ಆಭರಣಗಳಿದ್ದುವು. ಅವನ್ನು ಹೊಡೆಯಬೇಕೆಂದು ಇಬ್ಬರು ಕಳ್ಳರು ಗಾಡಿಯವರು ತೂಕಡಿಸುತ್ತಿರುವ ಸಮಯ ನೋಡಿ ಹಿಂದಿನಿಂದ ಗುಂಡುಹೊಡೆದು ಅವನನ್ನು ಚಿರನಿದ್ರೆಗೆ ಕಳುಹಿಸಿಬಿಟ್ಟರು. ಆದರೆ ಅವರಿಗೆ ಚಿನ್ನ ಸಿಕ್ಕಲಿಲ್ಲ. ಗುಂಡಿನ ಶಬ್ದಕ್ಕೆ ಎತ್ತುಗಳು ಬೆದರಿ ನಾಗಾಲೋಟ ಓಡುತ್ತಾ ರಾತ್ರಿ ಹತ್ತು ಗಂಟೆಯವೇಳೆಗೆ ತಾರಾಪುರದ ಮನೆಯ ಬಾಗಿಲಲ್ಲಿ ಬಂದುನಿಂತುವು. ಹೆಂಡತಿ ಮಕ್ಕಳಾದಿಯಾಗಿ ಎಲ್ಲರೂ ಗೋಳೋ ಅಂತ ಅತ್ತರು. ಆ ಅಯೋಗ್ಯನಿಗಾಗಿ.

ಒಂದು ದಿನದಲ್ಲಿ ನನಗೆ ಇಷ್ಟೆಲ್ಲಾ ಗೊತ್ತಾಗಬೇಕಾದರೆ ಇನ್ನೂ ಹೆಚ್ಚು ದಿನ ಇದ್ದರೆ ಅಯೋಗ್ಯ ಪೋರ್ಚುಗೀಸರ ಇನ್ನೆಷ್ಟು ವಿಷಯ ತಿಳಿದೀತು ನೋಡಿ! ಗೋವಾ, ಚೌಲ್, ಬಸ್ಸೀನ್, ದಮನ್ ಮುಂತಾದ ಪೋರ್ಚುಗೀಸರ ಊರುಗಳಲ್ಲಿ ನಡೆಯುವ ಹೊಲಸನ್ನು ಬರೆದರೆ ಒಂದು ಪುಸ್ತಕವೇ ಆಗುತ್ತದೆ.

ಬೆಳಿಗ್ಗೆ ಹೊತ್ತಿಗೆ ಮುಂಚೆ ತಾರಾಪುರದಿಂದ ದಾಮನ್‌ಗೆ ನನ್ನ ಪ್ರಯಾಣ ಮುಂದುವರಿಸಿದೆ. ಎಲ್ಲಿಯೂ ನಿಲ್ಲದೆ ಸಂಜೆ ಸರಗೋಲಿನಲ್ಲಿ ಮಲಗಿ ಮಾರನೆಯ ದಿನ ಬೆಳಿಗ್ಗೆ ಹೊರಟು ಮೂರು ನದಿಗಳನ್ನು ದಾಟಿ ಸಮುದ್ರತೀರದಲ್ಲಿರುವ ದಮನ್‌ಗೆ ತಲಪಿದೆ. ನಾನು ಎಂ. ನಿಕೊಲಾಸ್ ವಿಡಾಲ್ (M Nicholas Vidal) ಅವರ ಮನೆಯಲ್ಲಿ ಇಳಿದುಕೊಳ್ಳೋಣವೆಂದು ಹೋದೆ. ಆದರೆ ಅವರ ಹೆಂಡತಿಯ ಕಾರಣ ಆ ಮನೆಯ ವಾತಾವರಣ ಸರಿಯಾಗಿ ಕಾಣಲಿಲ್ಲ. ಒಂದು ಗ್ಲಾಸ್ ವೈನ್ ಕುಡಿದು ನಮಸ್ಕಾರ ಹೇಳಿ ಇನ್ನೊಬ್ಬರ ಮನೆಯಲ್ಲಿ ಬಿಡಾರ ಮಾಡಿದೆ. ವಿದಾಲ್ ಅವರದು ಭಾರಿ ದುರಂತದ ಸಂಸಾರ. ಮದುವೆಯಾಗಿ ಹದಿನೈದು ವರ್ಷಗಳಾಗಿದ್ದುವು. ಹಡಗಿನ ವ್ಯಾಪಾರದಿಂದ ಭಾರಿ ಸಂಪಾದನೆ. ಒಬ್ಬ ಎಂಟು ವರ್ಷದ ಮಗ ಇದ್ದಾನೆ. ಇಷ್ಟೆಲ್ಲಾ ಇದ್ದರೂ ಸುಖ ಇಲ್ಲ. ಏಕೆಂದರೆ ಹೆಂಡತಿ ದಾರಿತಪ್ಪಿದ್ದಾಳೆ. ಆತ ಹಡಗಿನಲ್ಲಿ ಹೋದಾಗ ಮನೆಯಲ್ಲೂ ಹೊರಗೂ ಅವಳ ಚೆಲ್ಲಾಟ ಹೇಳತೀರದು. ದಾಮನ್‌ನ

ಗೌರ್ನರ್ ಒಡನೆಯೂ ಗೆಳೆತನ ಬೆಳೆಸಿದಳು. ಆತನಿಗೆ ಹೆಂಡತಿ ಮಕ್ಕಳಿದ್ದರು. ಮನೆ ತುಂಬ ಹೆಣ್ಣಿನ ತಂಡವೇ ಇತ್ತು. ಆದರೂ ಕಂಡವರ ಹೆಂಡಿರ ಮೇಲೆ ಆಸೆ. ಒಂದು ಸಲ ಪರಪುರುಷರ ಸಂಗ ಬೆಳೆಸಿದ ಹೆಣ್ಣು ಅದನ್ನು ಬಿಡಲಾರಳು. ನೀಗ್ರೋನ ತಲೆಯನ್ನು ತೊಳೆದು ಬೆಳ್ಳಗೆಮಾಡಬಹುದು. ಆದರೆ ಶೀಲ ತಪ್ಪಿದವಳನ್ನು ದಾರಿಗೆ ತರುವುದು ಕಷ್ಟ. ವಿದಾಲ್ ಅವರು ನನ್ನಲ್ಲಿ ತಮ್ಮ ಸಂಕಟ ಹೇಳಿಕೊಂಡರು. ಮಗನನ್ನು ಕರೆದುಕೊಂಡು ಊರು ಬಿಡುವುದೊಳ್ಳೆಯದೆಂದು ನಾನು ಸಲಹೆ ಮಾಡಿ ಬಂದೆ.

ನಾನಿಲ್ಲಿಗೆ ಬಂದಾಗ ಫ್ರಾನ್ಸಿನಿಂದ ಬಂದ ಒಬ್ಬ ಯುವಕ ಡಾಕ್ಟರನನ್ನು ಸೆರೆಮನೆಯಲ್ಲಿ ಭೇಟಿಮಾಡಿದೆ. ಈತನ ಹೆಸರು ಎಂ. ದಿಲ್ಲೋನ್ ಎಂದು. ೧೬೬೮ರಲ್ಲಿ ಫ್ರಾನ್ಸಿನಿಂದ ಇಂಡಿಯಾಕ್ಕೆ ಬಂದು ಫ್ರೆಂಚ್ ಕಂಪನಿಯ ಹಡಗುಗಳಲ್ಲಿ ಸರ್ಜನನ ಸಹಾಯಕನಾಗಿ ಕೆಲಸ ಮಾಡಿ ಆಮೇಲೆ ಡಾಮನ್‌ನಲ್ಲಿ ಬಂದು ನೆಲೆಸಿದ್ದ. ಯಾರ ಬಾಯಲ್ಲೂ ಈತ ಭಾರಿ ದೊಡ್ಡ ವೈದ್ಯನೆಂಬ ಮಾತು. ಆದರೆ ಆತನಿಗೆ ಬರುತ್ತಿದ್ದುದು ಕೇವಲ ರಕ್ತ ತೆಗೆಯುವುದಷ್ಟೆ. ದಿಲ್ಲೋನ್‌ನ ಮೂಲಕ ವಿದಾಲನು ತನ್ನ ಪ್ರೇಯಸಿಯ ಪ್ರಾಣ ತೆಗೆಯಬಹುದೆಂಬ ಸಂದೇಹದಿಂದ ಗೌರ್ನರ್ ಆತನ ಮೇಲೆ ದೇವರನ್ನು ಅಲ್ಲಗಳೆದನೆಂಬ ನೆಪದ ಮೇಲೆ ಸೆರೆಮನೆಗೆ ಹಾಕಿಸಿದ್ದ. ಗೌರ್ನರ್‌ನ್ನು ನೋಡದೆ ದಿಲ್ಲೋನ್‌ನನ್ನು ನೋಡುವಂತಿರಲಿಲ್ಲ. ಡಿಸೆಂಬರ್ ೨೪ ನಾನು ಗೌರ್ನರ್‌ನನ್ನು ಕಂಡೆ. ಮೊದಮೊದಲು ಬಿಗಿಯಾಗಿದ್ದ ಅವರು ಆಮೇಲೆ ವಿನಯದಿಂದ ಮಾತಾಡಿದರು. ದಿಲ್ಲೋನ್ ನೋಡಬೇಕೆಂಬ ನನ್ನ ಕೋರಿಕೆಯನ್ನು ಮನ್ನಿಸಲು ತಮಗಿರುವ ಕಷ್ಟ ಏನೆಂದು ತಿಳಿಸಿದರು. ಗೋವೆಯಿಂದ ಇನ್‌ಕ್ವಿಸಿರ್ಷ (Inquisition) ಮುಖ್ಯಸ್ಥರು ಬಂದಿದ್ದಾರೆ. ಅವರನ್ನು ನೋಡು ಎಂದರು. ಆಗಲಿ ಎಂದು ಆಮುಖ್ಯಸ್ಥ ಫಾದರ್ ರೆಕ್ಟರ್ ಅವರನ್ನು ನೋಡಲು ಹೋದೆ. ಸ್ವಲ್ಪ ಕಾಯಿಸಿದ ಮೇಲೆ ಫಾದರ್ ರೆಕ್ಟರ್ ಅವರು ಬಂದರು. ವಿಶ್ವಾಸದಿಂದ ಮಾತಾಡಿಸಿದರು. ಸೆಂಟ್ ಥೋಮಿನ ಸಂಗತಿಗಳನ್ನೆಲ್ಲಾ ಕೇಳಿ ತಿಳಿದುಕೊಂಡರು. ಅನೇಕ ಫ್ರೆಂಚರು ತಮ್ಮ ಕೆಲಸ ಬಿಟ್ಟು ಹೋಗಿರುವುದರ ಬಗ್ಗೆ ನಾನು ಪ್ರಸ್ತಾಪ ಮಾಡಿದೆ. ಅವರು ಪೋರ್ಚುಗೀಸ್ ಪಟ್ಟಣಗಳಲ್ಲಿ ಪಡುತ್ತಿರುವ ಕಷ್ಟ ಎಷ್ಟೆಂದು ಹೇಳಿದೆ. ಆಗ ರೆಕ್ಟರ್ ಅವರು ನಮ್ಮ ಫ್ರೆಂಚರ ವರ್ತನೆಯ ಬಗ್ಗೆ ಆಕ್ಷೇಪ ಮಾಡಿದರು. "ಅವರಿಗೆ ದೇವರಲ್ಲಿ ನಂಬಿಕೆಯಿಲ್ಲ. ಏನೇನೋ ಇಲ್ಲದ ಸಲ್ಲದ ವಿಚಾರ ಮಾತಾಡುತ್ತಾರೆ. ನೋಡಿ ಇಲ್ಲಿ ಸೆರೆಮನೆಯಲ್ಲಿ ಒಬ್ಬನಿದ್ದಾನೆ. ಒಳ್ಳೆಯ ಡಾಕ್ಟರ್ ಸರಿ. ಆದರೆ ಏನು ಮಾಡುವುದು, ಏನೇನೋ ಅಸಂಬದ್ಧವಾಗಿ ಮಾತಾಡುತ್ತಾನೆ" ಎಂದರು. ಆತನನ್ನು ಗೋವಾಕ್ಕೆ ಕಳುಹಿಸಿ ಅವನು ಮಾಡಿರುವ ತಪ್ಪಿಗೆ ಗೋವೆಯ ಬೀದಿಗಳಲ್ಲಿ ಮೆರವಣಿಗೆ ಮಾಡಿ ಛಡೀ ಏಟಿನ ಶಿಕ್ಷೆ ವಿಧಿಸುವುದಾಗಿ ತಿಳಿಸಿದರು. ಈತನು ಯಾರೆಂದು ನನಗೆ ಸ್ಪಷ್ಟವಾಯಿತು. ನಾನು ಆತನನ್ನು ನೋಡಬೇಕೆಂದೆ. ಆಗಲಿ ಎಂದರು.

ನಾನು ಫಾದರ್ ಅವರಿಂದ ಬೀಳ್ಕೊಂಡು ನನ್ನ ಹುಡುಗನ ಸಮೇತ ಸೆರೆಮನೆಗೆ ಹೋದೆ. ಅಲ್ಲಿ ಸೆರೆಮನೆಯ ಜೋಡಿ ಸಾಲು ಕಂಬಿಗಳ ಹಿಂದೆ ಆತ, ನಾನು ಈ ಕಡೆ.

ಒಂದು ಗಂಟೆಯ ಕಾಲ ಮಾತಾಡಿದೆ. ಅವನಿಗೆ ಇನ್ನೇನೂ ಮಾಡಲಾಗದಿದ್ದರೂ ಒಂದು ಸಹಾಯ ಮಾಡಿದೆ. ಅದೇನೆಂದರೆ ತನ್ನ ತಂದೆ ತಾಯಿಗಳಿಗೆ ಪತ್ರ ಬರೆಯುವ ಅನುಮತಿ ದೊರಕಿಸಿಕೊಟ್ಟಿದು. ಅದೇ ದಿನ ಆತ ಪತ್ರಗಳನ್ನು ಬರೆದು ನನ್ನ ಕೋಣೆಗೆ ಕಳುಹಿಸಿಕೊಟ್ಟ.

ದಾಮನ್‌ನಲ್ಲಿ ಎರಡು ದಿನ ಇದ್ದು ಡಿಸೆಂಬರ್ ೨೫ನೆಯ ತಾರೀಖು ಕ್ರಿಸ್‌ಮಸ್ ದಿನ ಸೂರತ್ತಿಗೆ ಹೊರಡಲು ಸಿದ್ಧತೆಮಾಡಿಕೊಂಡೆ. ಒಂಬತ್ತು ಘಂಟೆಗೆ ನದಿ ದಾಟಿ ಒಬ್ಬ ಪಾರ್ಸಿ ಮನೆಯಲ್ಲಿ ತಂಗಿದ್ದು ಬೆಳಗ್ಗೆ ಸೂರ್ಯೋದಯಕ್ಕೆ ಮುಂಚೆಯೇ ನನ್ನ ಪ್ರಯಾಣ ಆರಂಭಿಸಿದೆ.

೨೬ನೆಯ ತಾರೀಖು ಇಡೀ ದಿನ ಪ್ರಯಾಣ ಮಾಡಿ ರಾತ್ರಿ ಮತ್ತೊಬ್ಬ ಪಾರ್ಸಿ ಮನೆಯಲ್ಲಿ ಬಿಡಾರ ಮಾಡಿದೆ. ಪಾರ್ಸಿಗಳು ಬೇರೆ ಇಂಡಿಯನರಷ್ಟು ಮೂಢನಂಬಿಕೆಯ ಜನರಲ್ಲ. ಬರುವ ದಾರಿಯಲ್ಲಿ ನಾನು ಒಳ್ಳೆಯ ಬೇಟೆ ಆಡಿದೆ. ಹೊಡೆದ ಹಕ್ಕಿ ಪಕ್ಷಿಗಳನ್ನು ನನ್ನವರಿಗೆ ಕೊಟ್ಟು ಪಟ್ಟಾಗಿ ತಿನ್ನಿ ಎಂದೆ.

ಡಿಸೆಂಬರ್ ೨೭ನೆಯ ಗುರುವಾರ ಬೆಳಿಗ್ಗೆ ೯ ಗಂಟೆಗೆ ಸೂರತ್ ತಲಪಿದೆ. ಸೀದಾ ನಮ್ಮ ಕಂಪೆನಿಯ ಫ್ಯಾಕ್ಟರಿಗೆ ಹೋದೆ. ಕಳೆದ ವರ್ಷ ನಾನಿಲ್ಲಿಗೆ ಬಂದಾಗ ಇದ್ದುದಕ್ಕೂ ಈಗಿನ ಸ್ಥಿತಿಗೂ ತುಂಬ ವ್ಯತ್ಯಾಸವಿತ್ತು. ಡೈರೆಕ್ಟರುಗಳಿಲ್ಲ. ಬಿಗಿಯಾಗಿ ವ್ಯವಹಾರ ನಡೆಸುವವರು ಯಾರೂ ಇರಲಿಲ್ಲ. ಗೆಸ್ಟನ್ ಅವರು ಪರ್ಷಿಯಾದ ಪ್ರವಾಸದಲ್ಲಿ ಸತ್ತುಹೋಗಿದ್ದರು. ಬರೋನ್ ಅವರು ಸೆಂಟ್ ಥೋಮಿನಲ್ಲಿ ಸಿಕ್ಕಿಹಾಕಿಕೊಂಡಿದ್ದರು. ಹೀಗಾಗಿ ಇಬ್ಬರು ಸಣ್ಣ ವರ್ತಕರು ಕಂಪೆನಿಯ ವಹಿವಾಟು ನೋಡಿಕೊಳ್ಳುತ್ತಿದ್ದರು. ಆದರೆ ಇವರಿಗೆ ಯಾವ ಅಧಿಕಾರವೂ ಇರಲಿಲ್ಲ. ಇವರಿಗೆ ನಾನು ನಮ್ಮ ವೈಸ್‌ರಾಯ್ ಮತ್ತು ಬರೋನ್ ಅವರಿಂದ ತಂದಿದ್ದ ಕಾಗದ ಪತ್ರಗಳನ್ನು ತೋರಿಸಿ ಅಲ್ಲಿಗೆ ಕೂಡಲೇ ಹಣದ ಸಹಾಯ ಒದಗಿಸಬೇಕೆಂದು ತಿಳಿಸಿದೆ. ಫ್ರಾನ್ಸ್‌ನಿಂದ ಎರಡು ಲಕ್ಷ ಲಿವರ್ ಹಣ ತಂದ ಹಡಗು ಸೂರತ್ತಿಗೆ ಬಂದು ನಾಲ್ಕು ತಿಂಗಳಾಗಿದ್ದುವು. ಆದರೆ ಆ ಹಣವನ್ನು ವೈಸ್‌ರಾಯ್‌ಗೆ ಕಳುಹಿಸುವ ಮನಸ್ಸು ಯಾರಿಗೂ ಇರಲಿಲ್ಲ. ಅವರಿಗೆ ಯಾವ ಸುದ್ದಿ ಸಮಾಚಾರಗಳೇ ತಿಳಿದಿರಲಿಲ್ಲ. ಎಲ್ಲರೂ ಖುಷಿಯಾಗಿ ಕಾಲ ಕಳೆದುಕೊಂಡಿದ್ದರು. ಸೂರತ್ತಿನಲ್ಲಿರುವ ಫ್ರೆಂಚರನ್ನು ಬಿಟ್ಟರೆ ಇಂಡಿಯಾದಲ್ಲಿ ಫ್ರೆಂಚರೇ ಇಲ್ಲವೆನ್ನುವ ಭಾವನೆ ಇವರಿಗಿದೆ. ಫ್ರಾನ್ಸಿನಿಂದ ಕೋಬರ್ಟ್ ಅವರು ಎರಡು ಲಕ್ಷ ಲಿವರ್ ಹಣವನ್ನು ನಮ್ಮ ವೈಸ್‌ರಾಯರಿಗೆ ಮುಟ್ಟಿಸಬೇಕೆಂದು ಷೆವ್ರೋಯಿಲ್ (M. de Chevroeril) ಎಂಬುವನ ಮೂಲಕ ಕಳುಹಿಸಿದರು. ಹಣ ಸೂರತ್ತಿಗೆ ಬಂದು ನಾಲ್ಕು ತಿಂಗಳಾಗಿದ್ದುವು. ಆದರೆ ಸೂರತ್ತಿಗೆ ಬಂದ ಆ ಪುಣ್ಯಾತ್ಮ ಅಲ್ಲಿ ಆರಾಮವಾಗಿ ಇದ್ದುಬಿಟ್ಟಿದ್ದಾನೆ. ಸ್ವಾಲ್ಲಿಯಲ್ಲಿ ಮನೆಮಾಡಿ ತನ್ನ ಕೋಣೆಯಲ್ಲಿ ಮರಳು ತೋಡಿ ಅದರೊಳಗೆ ಅದನ್ನು ಹೂತ್ತಿಟ್ಟಿದ್ದಾನೆ. ಸೆಂಟ್ ಥೋಮಿನಲ್ಲಿ ನಡೆಸುತ್ತಿರುವ ಹೋರಾಟ ನಿಲ್ಲಿಸಿ ವೈಸ್

ರಾಯಿಯೇ ಸೂರತ್ತಿಗೆ ಬಂದು ಹಣ ತೆಗೆದುಕೊಂಡು ಹೋಗುತ್ತಾರೆ ಎಂಬ ಭಾವನೆ ಈತನಿಗೆ. ಇದನ್ನೆಲ್ಲಾ ನೋಡಿ ನನಗೆ ತುಂಬ ಸಿಟ್ಟು ಬಂತು. ಎಲ್ಲರನ್ನೂ ವಿಮಾ ಮಾಡಿದೆ. ನಾನೇ ಸ್ವಾಲ್ಲಿಗೆ ಹೋದೆ. ಷೆವ್ರೊಯಿಲ್ ಸೂರತ್ತಿಗೆ ಬರದೇ ಇದ್ದದ್ದರಿಂದ ನಾನೇ ಹೋಗಬೇಕಾಯಿತು. ಇನ್ನೂ ಚಿಕ್ಕ ಪ್ರಾಯದ ಆ ಹುಡುಗ ನನ್ನ ಜವಾಬ್ದಾರಿ ಏನೆಂಬುದನ್ನು ನನಗೆ ಹೇಳಿಕೊಟ್ಟ. "ನೀವು ಹೇಳೋದು ನೋಡಿದರೆ ನನಗೆ ತಮಾಷೆ ಎನಿಸುತ್ತದೆ. ದಿಕ್ಕಿಲ್ಲದ ದ್ವೇಶದಲ್ಲಿ ನಮ್ಮ ವೈಸ್‌ರಾಯ್ ಎಲ್ಲಿದ್ದಾನೆ ಅಂತ ಹುಡುಕಲಿ? ನನಗೆ ಹೇಳಿದ್ದು ಈ ಹಣಾನ ಸೂರತ್ತಿಗೆ ತಕ್ಕೊಂಡ್ಹೋಗು ಅಂತ. ಅಲ್ಲಿ ವೈಸ್ ರಾಯ್ ಇರಬಹುದೆಂದು ಭಾವಿಸಿದ್ದೆ. ಇರಲಿಲ್ಲ. ಅವರ ಕೈಗಲ್ಲದೆ ಬೇರೆಯವರ ಕೈಗೆ ಹಣ ಕೊಡಬಾರದೆಂದು ನನಗೆ ಹೇಳಿದ್ದರಿಂದ ಇಲ್ಲಿರುವ ಕಂಪೆನಿಯವರು ಕೊಡಲಿಲ್ಲ" ಎಂದ. "ಹಾಗಿದ್ದರೆ ನೀವೇ ಹೋಗಿ ವೈಸ್‌ರಾಯರಿಗೆ ಹಣ ಮುಟ್ಟಿಸಬಹುದಿತ್ತಲ್ಲ?" ಎಂದೆ "ಅಂದ್ರೆ ನಾನು ಪ್ರಾಣಕಳಕೊಳ್ಳಬೇಕಾಗಿತ್ತು ಅನ್ನಿ. ತಡೀಲಾರದ ಈ ಬಿಸಿಲಿನ ಧಗೆ ಎಲ್ಲೂ ಕಾಣದ ಕಚಡಾ ರಸ್ತೆಗಳು! ಈ ಕಷ್ಟನೆಲ್ಲ ಅನುಭವಿಸಿ ಹಣ ಮುಟ್ಟಿಸು ಅಂತನನಗ್ಯಾರೂ ಹೇಳಿಲ್ಲ." ಎಂದುಬಿಟ್ಟ

ಈ ಮಾತುಗಳನ್ನು ಕೇಳಿ ನನಗೆ ನಗುಬಂತು. "ನಾನು, ನೀವು ಹೊರಟ ಎರಡು ತಿಂಗಳ ನಂತರ ಫ್ರಾನ್ಸ್ ಬಿಟ್ಟೆ. ಸೂರತ್ತಿನಲ್ಲಿ ವೈಸ್‌ರಾಯ್ ಇದ್ದಾರೆಂದು ಇಲ್ಲಿಗೆ ಬಂದೆ. ನನ್ನ ಆರೋಗ್ಯಕ್ಕಾಗಲೀ ಪ್ರಾಣಕ್ಕಾಗಲೀ ಗಮನ ಕೊಡದೆ ಮೂರು ನಾಲ್ಕು ರಾಜ್ಯ ಗಳನ್ನು ಹಾದು ಸೇಂಟ್ ಥೋಮ್ ತಲುಪಿದೆ. ವೈಸ್‌ರಾಯರನ್ನು ಕಂಡೆ. ಅಲ್ಲಿ ಆರು ತಿಂಗಳಿದ್ದೆ. ನಮ್ಮವರಿಗೆ ಹಣದ ಕೊರತೆ ತೀರ ಹೆಚ್ಚಾಯಿತು. ಅದಕ್ಕಾಗಿ ನಾನಿಲ್ಲಿಗೆ ಬಂದಿದ್ದೇನೆ. ನೀವೇ ಹಣ ತೆಗೆದುಕೊಂಡು ಹೋಗಿ ಕೊಡಿ. ಇಲ್ಲವೇ ಈ ಕೂಡಲೇ ಬೇರೆಯವರ ಮೂಲಕ ಕಳುಹಿಸಿಕೊಡುವ ಏರ್ಪಾಡು ಮಾಡಿ." ಎಂದೆ. ಇಷ್ಟೆಲ್ಲಾ ಹೇಳಿದ ಮೇಲೆ ಆತ ಸೂರತ್ತಿಗೆ ಅಲ್ಲಿಂದ ಹಣ ಕಳುಹಿಸಲು ಬರಲು ಒಪ್ಪಿದ.

ನಾನು ಬೊಂಬಾಯಿನಲ್ಲಿ ಬಿಟ್ಟುಬಂದ ಇಂಗ್ಲಿಷರ ಹಡಗುಗಳು ೨೬ನೆಯ ತಾರೀಖು ಸೂರತ್ತಿಗೆ ಬಂದುವು. ಹಡಗಿಗೆ ಹೋಗಿ ನನ್ನ ಸಾಮಾನು ಸರಂಜಾಮು ಗಳನ್ನು ಇಳಿಸಿಕೊಂಡೆ. ಹಡಗುಗಳ ಕ್ಯಾಪ್ಟನ್‌ಗಳನ್ನು ಮನಸಾರೆ ವಂದಿಸಿದೆ. ಅವರಿಂದ ತಿಳಿಯಿತು. ಸೇಂಟ್ ಥೋಮಿನಲ್ಲಿ ಐದು ದಿನಗಳ ಕಾಲ ಬೀಸಿದ ಭಾರಿ ಬಿರುಗಾಳಿಯ ಕಾರಣ ಫ್ರೆಂಚರ ಹಡಗುಗಳಿಗೆ ತುಂಬ ಜಖಂ ಆಯಿತು ಎಂದು. ನಾನು ಷೆವ್ರೊಯಿಲ್ ಅವರೊಡನೆ ಸೂರತ್ತಿಗೆ ಬಂದು ಕಂಪನಿಯವರನ್ನೆಲ್ಲಾ ಕೂಡಿಸಿ ಮುಂದೇನು ಮಾಡ ಬೇಕೆಂಬುದರ ಬಗ್ಗೆ ಮಾತಾಡಿದೆ. ನಾಲ್ಕು ತಿಂಗಳ ಕಾಲ ತಮ್ಮ ಹತ್ತಿರ ಬರದೇ ತಮ್ಮನ್ನು ನಂಬದೇ ಹೋದ ಷೆವ್ರೊ ಮೇಲೆ ಕಂಪನಿಯವರೆಲ್ಲ ದೂರು ಹೇಳಿದರು. ಈಗಲೂ ಹಣ ಕೊಟ್ಟರೆ ಅದನ್ನು ವೈಸ್‌ರಾಯರಿಗೆ ಮುಟ್ಟಿಸುತ್ತೇವೆ ಎಂದರು. ಆದರೆ ಷೆವ್ರೋ ಬಡಪಟ್ಟಿಗೆ ಒಪ್ಪುವ ಮನುಷ್ಯನಾಗಿರಲಿಲ್ಲ. ಕೊನೆಗೆ ನಮ್ಮ ಕಂಪೆನಿಯ

ದಳ್ಳಾಳಿ ಸ್ಯಾಂಸನ್ ಮೂಲಕ ಒಂದು ಉಪಾಯ ಹುಡುಕಿದೆವು. ಸ್ಯಾಂಸನ್ ನಂಬಿಕಸ್ತನೂ ಅನುಕೂಲಸ್ತನೂ ಆದ ಒಬ್ಬ ವರ್ತಕನನ್ನು ಹುಡುಕಿಕೊಡಬೇಕು. ಆವನಿಗೆ ಷೆವ್ರೋ ಹಣ ಕೊಡಬೇಕು. ಕೊಟ್ಟ ಹಣಕ್ಕೆ ಷೆವ್ರೋ ಒಂದು ಹುಂಡಿ ( Bill of Exchange ) ಪಡೆಯಬೇಕು. ಈ ಹುಂಡಿಯನ್ನು ಮಸುಲಿ ಪಟ್ಟಣದಲ್ಲಿ ತೋರಿಸಿ ಹಣ ಪಡೆಯಬೇಕು. ಈ ಮಧ್ಯೆ ಆ ವರ್ತಕ ಹಣಕ್ಕೆ ಬಡ್ಡಿ ಕೊಡಬೇಕು. ಹೀಗೆ ವ್ಯವಹಾರ ಮುಗಿಸಿ ಅದನ್ನು ಕಂಪೆನಿಯ ಪುಸ್ತಕಗಳಲ್ಲಿಯೂ ದಾಖಲು ಮಾಡಿದೆವು. ಅದೇ ದಿನ ಸ್ಯಾಂಸನ್ ವರ್ತಕನನ್ನು ಕರೆದುಕೊಂಡು ಬಂದ. ಆಗ ನನಗೆ ಅರ್ಥವಾಯಿತು, ಈ ಉಪಾಯವೆಲ್ಲ ಸ್ಯಾಂಸನ್ ಮಾಡಿರುವುದು ಎಂದು. ಬೇರೆ ವರ್ತಕನ ಹೆಸರಿನಲ್ಲಿ ಆತ ಈ ವ್ಯವಹಾರ ಮಾಡಿದ್ದ. ಷೆವ್ರೋ ಸೆಂಟ್ ಥೋಮಿಗೆ ಹೋಗಲು ಒಪ್ಪಿದ.

ಈ ಸ್ಯಾಂಸನ್ ಎರಡು ತಲೆ ಹಾವಿನಂತೆ ಎಂದು ನನಗೆ ಅನ್ನಿಸುತ್ತದೆ. ಫ್ರಾನ್ಸಿಗೆ ಹೊರಟಿದ್ದ ನಮ್ಮದೊಂದು ಹಡಗಿಗೆ ೪೦೦ ಬೇಲು ಬೆಲೆಯಾದ ವಸ್ತುಗಳನ್ನು ಕೊಡುವುದಾಗಿ ಹೇಳಿ ಮುಗುವಳಿ ಈಸಿಕೊಂಡು ಹಡಗು ಹೊರಡುವವರೆಗೂ ಸರಕು ಬರಲಿಲ್ಲ ಹೇಳಿ ಎಂದು ಅದು ಹೋದ ಎರಡು ದಿನಗಳಲ್ಲಿ ಇಂಗ್ಲಿಷರಿಗೆ ಆ ಬೇಲುಗಳನ್ನು ಒದಗಿಸಿದ್ದ. ಇದನ್ನೆಲ್ಲಾ ಕೇಳಿದರೆ ನಮ್ಮ ಕಂಪೆನಿಯವರು ಏನು ಮಾಡೋಣ ಎಲ್ಲಾ ಸ್ಯಾಂಸನ್‌ನ ಆಟ ಎಂದು ಕೈಯೆತ್ತಿಬಿಟ್ಟರು. ಅದೇ ಇಂಗ್ಲಿಷರು ಏಳು ಹಡಗುಗಳಲ್ಲಿ ಭರ್ತಿ ಮಾಡಬಹುದಾದಷ್ಟು ಸರಕುಗಳನ್ನು ಸ್ವಾಲ್ಲಿಯಲ್ಲಿರುವ ಅವರ ಗಡಂಗುಗಳಲ್ಲಿ ತುಂಬಿಕೊಂಡಿದ್ದಾರೆ. ಅವರ ವ್ಯವಹಾರದ ಕುಶಲತೆ ನೋಡಿ ನನಗೆ ಆಶ್ಚರ್ಯವಾಯಿತು. ನಿಜವಾದ ವ್ಯಾಪಾರಸ್ಥರೆಂದರೆ ಅವರೇ. ನಮ್ಮ ಫ್ರೆಂಚರೋ ದಿನಬೆಳಗೆದ್ದರೆ ಜಗಳ ಆಡಿಕೊಂಡು ಕುಳಿತಿದ್ದಾರೆ. ಇದರ ಮೇಲೆ ಬರೀ ಒಣಜಂಭ.

ಜನವರಿ ಒಂಬತ್ತನೆಯ ಮಂಗಳವಾರ. ಈದಿನ ಮೂರರ ಒಂದು ದೊಡ್ಡ ಹಬ್ಬ. ಗೌರ್ನರ್ ಮತ್ತು ಊರಿನ ಪ್ರಮುಖರೆಲ್ಲಾ ಭಾರಿ ಮೆರವಣಿಗೆ ಹೊರಟರು. ಸೊಗಸಾಗಿ ಅಲಂಕರಿಸಿದ ಆನೆ ಕುದುರೆಗಳು ಮೆರವಣಿಗೆಯಲ್ಲಿ ಭಾಗವಹಿಸಿದ್ದುವು. ಭಾರಿ ಬಾಜಾ ಭಜಂತ್ರಿಗಳು ನಡೆದುವು. ಕುಶಾಲ್ ತೋಪುಗಳೂ ಹಾರಿದವು.*

ಇನ್ನು ನಾನು ಸೂರತ್ತಿನಿಂದ ಹೊರಡುವ ಆಲೋಚನೆ ಮಾಡಿದೆ. ಪರ್ಷಿಯಾಕ್ಕೆ ಮೂರ್ ಹಡಗುಗಳು ಹೋಗುತ್ತವೆಯೇ ಎಂದು ವಿಚಾರಿಸಿದೆ. ಇನ್ನೆಂಟು ದಿನಗಳಲ್ಲಿ ಒಂದು ಹೊರಡುತ್ತದೆ ಎಂದು ತಿಳಿಯಿತು. ಅದರ ಕ್ಯಾಪ್ಟನ್ ಒಬ್ಬ ಫ್ರೆಂಚ್‌ಮನ್. ಹೆಸರು ಮಾರ್ಟಿನಾಟ್ (Martinot) ಎಂದು. ಇವನೊಡನೆ ಮಾತಾಡಿ ನಾನು ಫ್ರೆಂಚ್‌ನೆಂದು ಯಾರಿಗೂ ಹೇಳಬೇಡವೆಂದು ತಿಳಿಸಿದೆ. ನಾನು ಫ್ರೆಂಚ್‌ನೆಂದು ತೋರಿಸಿಕೊಂಡರೆ ಡಚ್ಚರಿಂದ ಪರವಾನಗಿ ಸಿಕ್ಕುವುದು ಕಷ್ಟವಾಗುತ್ತಿತ್ತು. ಪ್ರತಿಯೊಂದು

---

*"ಇದು ಮುಸಲ್ಮಾನರ ಇದುಲ್-ಫಿಕರ್ ಎಂಬ ಹಬ್ಬ."

ಹಡಗೂ ಎಲ್ಲಾ ಯುರೋಪಿಯನ್ ರಾಜ್ಯಗಳಿಂದ ಪರವಾನಗಿ ಪಡೆಯಬೇಕಾಗಿತ್ತು. ಫ್ರೆಂಚ್‌ನೊಬ್ಬನಿದ್ದನೆಂದರೆ ಡಚ್ಚರಿಂದ ಆ ಪರವಾನಗಿ ಸಿಕ್ಕುವುದು ಕಷ್ಟವಾಗುತ್ತಿತ್ತು. ಪರ್ಷಿಯನ್ ವರ್ತಕನಂತೆ ಉಡುಪು ಹಾಕಿಕೊಂಡು ಹಡಗಿನ ಮಾಲೀಕನ ಬಳಿಗೆ ಹೋಗಿ ದುಡ್ಡು ಕೊಟ್ಟು ಹಡಗಿನಲ್ಲಿ ಹೋಗಲು ಅನುಮತಿ ಪಡೆದೆ. ಸೆಂಟ್ ಥೋಮಿನ ವೈಸ್‌ರಾಯರಿಗೆ ಕಾಗದ ಬರೆದು ಇಲ್ಲಿನ ವಿದ್ಯಮಾನಗಳನ್ನು ತಿಳಿಸಿದೆ.

ಹೊರಡುವಾಗ ನಮ್ಮ ಬನಿಯ ಸ್ಯಾಂಸನ್ ಗಂಟುಬಿದ್ದ. ಫ್ರಾನ್ಸ್‌ನಲ್ಲಿರುವ ಕಂಪೆನಿಯ ಡೈರೆಕ್ಟರುಗಳಿಗೆ ಶಿಫಾರಸು ಮಾಡಿ ಎಂದು ಆತ ಅಂಗಲಾಚಿದ. ಕರೋನ್ ಮುಂತಾದವರಿಂದ ಪಡೆದ ಸರ್ಟಿಫಿಕೇಟುಗಳನ್ನು ತೋರಿಸಿದ. ಆಗಲಿ ಹೇಳುತ್ತೇನೆ, ಆದರೆ ಈಗ ಸೆಂಟ್ ಥೋಮಿನಲ್ಲಿರುವ ವೈಸ್‌ರಾಯರಿಗೆ ನಮ್ಮ ಹಣ ಕಳುಹಿಸಿ ಕೊಡುವ ವ್ಯವಸ್ಥೆ ಮಾಡಿ ಎಂದು ಹೇಳಿ ಕಳುಹಿಸಿಕೊಟ್ಟೆ. ಅವನಷ್ಟೇ ಅಲ್ಲದೆ ಅವನ ಮಕ್ಕಳೂ ಅವರನ್ನು ನೋಡಿಕೊಳ್ಳುವ ಬನಿಯ ಆಳುಗಳ ತಂಡವೂ ಬಂದಿತ್ತು. ಅವರನ್ನೆಲ್ಲಾ ಸಾಗಹಾಕಿ ನನ್ನ ಪ್ರಯಾಣಕ್ಕೆ ಅನುವಾದೆ.

ಫೆಬ್ರವರಿ ೨೬ಯ ಶನಿವಾರ. ಇದೇ ದಿನ ಬೆಳಗ್ಗೆ ನಮ್ಮ ಕಂಪೆನಿ ಡೈರೆಕ್ಟರುಗಳೊಡನೆ ಇದ್ದು ಅವರು ಫ್ರಾನ್ಸಿಗೆ ಕೊಟ್ಟ ಕಾಗದ ಪತ್ರಗಳನ್ನು ತೆಗೆದುಕೊಂಡೆ. ಕಂಪೆನಿ ದೋಣಿಗಳಲ್ಲಿ ನನ್ನ ಸಾಮಾನು ಸರಂಜಾಮುಗಳನ್ನೂ ಪ್ರಯಾಣಕ್ಕೆ ಬೇಕಾದೆಲ್ಲವನ್ನೂ ಕಳುಹಿಸಿಕೊಟ್ಟೆ. ಸೂರತ್ ಬಂದರಿಗೆ ಹೋದೆ. ಅಲ್ಲಿ ೨೦ ವ್ಯಾಪಾರದ ಹಡಗುಗಳು ಬೇರೆ ಬೇರೆ ದೇಶಗಳಿಗೆ ಹೋಗಲು ಸಿದ್ಧವಾಗುತ್ತಿದ್ದುವು. ನಾನು ಆಗ ರಹೀಮ ಎಂಬವನಿಗೆ ಸೇರಿದ ಹಡಗಿಗೆ ಹೋದೆ. ಈತ ಸೂರತ್ತಿನ ಭಾರಿ ಮೂರ್ ವರ್ತಕ. ನಾನು ಹಡಗು ಹತ್ತಿದ ಮೇಲೆ ಆತನೂ ಹಡಗಿಗೆ ಬಂದ, ಅದನ್ನು ಕಳುಹಿಸಿಕೊಡಲು. ಅವನು ಬಂದ ಹಡಗಿನಲ್ಲಿ ಭಾರಿ ಗೊಂದಲವಾಯಿತು. ಈ ಹಡಗಿನ ಅರ್ಧ ಭಾಗವನ್ನು ಒಬ್ಬ ಪರ್ಷಿಯನ್ ವರ್ತಕ ತನ್ನ ಸ್ವಂತಕ್ಕೆ ಬಾಡಿಗೆಗೆ ಪಡೆದಿದ್ದ. ಭರ್ತಿಯಾದ ಹಡಗಿನಲ್ಲಿ ಹಾಕಲು ಇನ್ನೂ ನಾಲ್ಕು ದೋಣಿಗಳಷ್ಟು ಸಾಮಾನುಗಳನ್ನು ನೋಡಿ ಆ ಪರ್ಷಿಯನ್ ವರ್ತಕ ಭಾರಿ ಕೂಗಾಡಿದ. ಹಡಗಿನ ಯಜಮಾನನೊಡನೆ ಜಗಳ ಆರಂಭಿಸಿದ. ಈ ಯಜಮಾನ ಕೇವಲ ೨೦೦ ಏಕಸ್‌ಗಳಷ್ಟು ದುಡ್ಡಿಗೆ ಆ ಹೆಚ್ಚು ಹೊರೆ ಹಾಕಿದರೆ ಹಡಗಿನಲ್ಲಿದ್ದ ೫೦೦ ಪ್ರಯಾಣಿಕರಿಗೂ ಹತ್ತು ಲಕ್ಷ ಏಕಸ್‌ಗಳಿಗೂ ಹೆಚ್ಚು ಬೆಲೆಯಾದ ಸರಕುಗಳಿದ್ದ ಹಡಗಿಗೂ ಅಪಾಯ ಸಂಭವಿಸುತ್ತದೆ ಎಂಬ ಯೋಚನೆ ಮಾಡಲಿಲ್ಲ. ಕಳೆದ ವರ್ಷ ಹೀಗೆ ಹೆಚ್ಚುಹೊರೆ ಹಾಕಿ ನಾಲ್ಕು ಹಡಗುಗಳು ಮುಳುಗಿ ಹೋಗಿದ್ದುವು. ಹಡಗಿನಲ್ಲಿದ್ದ ವರ್ತಕರೆಲ್ಲಾ ಪರ್ಷಿಯನ್ ವರ್ತಕನ ಪರ ವಹಿಸಿದರು. ಹೆಚ್ಚು ಹೊರೆ ಹಾಕಿದರೆ ತಾವೆಲ್ಲ ಹಡಗಿನಿಂದ ಇಳಿದುಬಿಡುವುದಾಗಿ ಆ ರಹೀಮನನ್ನು ಹೆದರಿಸಿದರು. ಆ ಭಾರಿ ಘಾಟಿ ಮನುಷ್ಯ ದೋಣಿಯಲ್ಲಿ ಬಂದ ಸರಕುಗಳನ್ನೇನೋ ಹಿಂದಿರುಗಿಸಿದ. ಆದರೆ ಪ್ರಯಾಣಿಕರಿಂದ ಆ ಸರಕುಗಳ ಸಾಗಾಣಿಕೆಯಿಂದ ಬರುತ್ತಿದ್ದ ಹಣ ವಸೂಲು ಮಾಡಿದ.

ಫೆಬ್ರುವರಿ ೪ನೇ ತಾರೀಖು ಭಾನುವಾರ ಬೆಳಿಗ್ಗೆ ಏಳುಗಂಟೆಗೆ ಹಡಗು 'ಹೊರಟಿತು. ಸ್ವಲ್ಪ ದೂರ ಹೋಗುವುದರೊಳಗೆ ಸೂರತ್ತಿನಿಂದ ಒಂದು ದೋಣಿ ಭಾರಿ ವೇಗದಲ್ಲಿ ನಮ್ಮ ಹಡಗಿನ ಬಳಿ ಸಾರಿತು. ಗೌರ್ನರ್ ಕಡೆಯ ಆಫೀಸರೊಬ್ಬ ತನ್ನ ಸಿಬ್ಬಂದಿ ಸಮೇತ ಹಡಗಿಗೆ ಬಂದು ಕ್ಯಾಪ್ಟನ್‌ನನ್ನೂ ನಖೂದಾನನ್ನೂ (Nakkuda–super cargo ಮಾಲೀಕ) ನೋಡಲು ಹೋದ. ಒಬ್ಬ ಆರ್ಮೀನಿಯನ್ ಸೇವಕನು ಭಾರಿ ಹಣ ಕದ್ದು ತಪ್ಪಿಸಿಕೊಂಡು ಬಂದಿದ್ದನೆಂದೂ ಅವನನ್ನು ಹಿಡಿದುಕೊಂಡು ಹೋಗಲು ಬಂದಿರುವುದಾಗಿಯೂ ತಿಳಿಸಿದ. ಆ ಆರ್ಮೀನಿಯನನ್ನು ಪತ್ತೆಹಚ್ಚಲು ಕಷ್ಟವಾಗಲಿಲ್ಲ. ಪ್ರಯಾಣಿಕರ ರಿಜಿಸ್ಟರ್‌ನಲ್ಲಿ ಆತನ ಹೆಸರಿತ್ತು. ನಖೂದಾ ಹೋಗಿ ಆರ್ಮೀನಿಯನೊಡನೆ ಇದ್ದ ಆ ಸೇವಕನನ್ನು ಹಿಡಿದುಕೊಟ್ಟ. ಆತನನ್ನು ಹಡಗಿನಿಂಥ ಇಳಿಸಿ ತಮ್ಮ ದೋಣಿಯ ಪಟಸ್ತಂಭಕ್ಕೆ ಕಟ್ಟಿಕೊಂಡು ಸೂರತ್ತಿಗೆ ಹೋದರು.

ಹಡಗಿನ ತುಂಬಾ ಜನ ಪ್ರಯಾಣಿಕರಿದ್ದರು. ಅವರಿಗೆಲ್ಲ ಜಾಗ ಒದಗಿಸುವುದು ಕಷ್ಟವೇ ಆಗಿತ್ತು. ನಖೂದಾ ಮತ್ತು ಕ್ಯಾಪ್ಟನ್ ಸೇರಿ ಸ್ಥಳದ ಸಮಸ್ಯೆಯನ್ನು ಹೇಗೋ ಪರಿಹರಿಸಿದರು. ಒಂದು ತಿಂಗಳ ಅವಧಿಯ ಈ ಪ್ರಯಾಣಕ್ಕಾಗಿ ಹಡಗಿನಲ್ಲಿ ಪಡೆದ ಬಿಡಾರಕ್ಕೆ ಆದ ಖರ್ಚು ಪ್ಯಾರಿಸ್‌ನಲ್ಲಿ ಆಗುವ ಖರ್ಚಿಗಿಂತ ಹೆಚ್ಚಾಗಿತ್ತು. ಅರ್ಧ ಹಡಗನ್ನು ಬಾಡಿಗೆಗೆ ಪಡೆದಿದ್ದ ನಮ್ಮ ಪರ್ಷಿಯನ್ ವರ್ತಕ ಹಡಗಿನ ಹಜಾರದ ಕೋಣೆ (State Room) ಯನ್ನು ಸಾವಿರ ಏಕಸ್‌ಗಳಿಗೆ ( ೨೨೫ ಪೌಂಡುಗಳಿಗೆ ) ಬಾಡಿಗೆ ಪಡೆದು ಅವನೂ ಅವನ ಅರ್ಧ ಡಜನ್ ಹೆಂಡತಿಯರೂ ಸೇರಿಕೊಂಡಿದ್ದರು. ಹಡಗಿನ ಹಿಂಭಾಗದ ಮೇಲಿನ ಅಟ್ಟದ (Roof) ಲ್ಲಿದ್ದ ಎರಡು ಸಾಮಾನ್ಯ ಮಲಗುವ ಕೋಣೆಗಳ ಬಾಡಿಗೆ ಪ್ರತಿಯೊಂದಕ್ಕೆ ೩೦೦ ಏಕಸ್‌ಗಳು. ಇನ್ನುಳಿದ ಸಣ್ಣಪುಟ್ಟ ಜಾಗಗಳು ಸಂದಿಗೊಂದಿಗಳಿಗೆ ಏಳೆಂಟು ನೂರು ಏಕಸ್‌ಗಳು. ಶ್ರೀಮಂತ ವರ್ತಕರು ತಮ್ಮ ಹೆಂಡತಿಯರು ಬೇರೆಯವರಿಗೆ ಕಾಣದಂತೆ ಇಡಬೇಕೆಂದು ಇಷ್ಟೊಂದು ದುಬಾರಿ ಬಾಡಿಗೆಗೆ ಜಾಗ ಪಡೆದಿದ್ದರು. ಈ ಸಲ ಅನೇಕ ಜನ ಹೆಂಗಸರು ಇದ್ದದ್ದರಿಂದ ಅವರಿಗೆಲ್ಲಾ ಇರಲು ಜಾಗ ಮಾಡಿಕೊಡುವುದು ತುಂಬ ಕಷ್ಟದ ಕೆಲಸವಾಗಿತ್ತು. ನಾನು ನನಗೆ ಗೊತ್ತಿದ್ದ ಕ್ಯಾಪ್ಟನ್ ಸಹಾಯದಿಂದ ಅವನ ಹತ್ತಿರವೇ ಜಾಗ ಮಾಡಿಕೊಂಡು ಅನುಕೂಲವಾಗಿದ್ದೆ. ಈ ಯಾನದ ಬಗ್ಗೆ ಹೇಳುವಂಥ ವಿಶೇಷವೇನೂ ಇಲ್ಲ. ಗಾಳಿ ಬೀಸದೆ ಸಮುದ್ರ ತೆಪ್ಪಗಾಗಿ ನಮಗೆ ತೊಂದರೆಯಾಯಿತು. ಸರಿ, ಶ್ರೀಮಂತ ಮುಸ್ಲಿಂ ವರ್ತಕರೂ ಇತರೇ ಪ್ರಯಾಣಿಕರೂ ಹಡಗಿಗೆ ಹಿಡಿದ ಪೀಡೆ ಬಿಡಿಸಿ ಗಾಳಿ ಬೀಸುವಂತೆ ಮಾಡುವ ಪ್ರಯತ್ನ ಮಾಡಿದರು. ಏನೇನೋ ಮಂತ್ರ ತಂತ್ರಗಳನ್ನು ಮಾಡಿದರು. ಹಡಗಿನ ಪಟದ ಕಂಭಕ್ಕೆ ತಮ್ಮ ಪ್ರವಾದಿ ಮಹಮ್ಮದನ ಸ್ತೋತ್ರದ ಮಾತುಗಳನ್ನು ಬರೆದ ಕಾಗದಗಳನ್ನು ಕಟ್ಟಿದರು. ಫ್ರಾನ್ಸಿನಲ್ಲಿ ದೇವರ ಪೂಜೆಯ ವೇಳೆ ತಟ್ಟೆ ಹಿಡಿದು ಎಲ್ಲರಿಂದಲೂ ಬಡವರಿಗಾಗಿ ದಕ್ಷಿಣೆ ಪಡೆಯುವಂತೆ ಇವರೂ ಒಂದು ಬೋಗುಣಿ

ಯನ್ನು ಹಿಡಿದು ಎಲ್ಲರಿಗೂ ತೋರಿಸಿಕೊಂಡು ಬಂದರು. ಆದರೆ ಬೋಗುಣಿಯಲ್ಲಿ ಅನ್ನ, ಮಾಂಸ, ಸಿಹಿತಿಂಡಿ, ತುಪ್ಪ, ಬೆಣ್ಣೆ, ಹಣ್ಣು ಹಂಪಲು ಇದ್ದುವು. ಎಲ್ಲರಿಗೂ ತೋರಿಸಿದ ಮೇಲೆ ಆ ಬೋಗುಣಿಯಲ್ಲಿದ್ದುದನ್ನೆಲ್ಲಾ ಹಡಗಿನ ಸುತ್ತ ಸಮುದ್ರಕ್ಕೆ ಎಸೆದು ಕೊಂಡು ಬಂದರು. ಎಲ್ಲರೂ ತಮ್ಮ ಬಾಯನ್ನು ಮುಂದು ಮಾಡಿಕೊಂಡು ಸಮುದ್ರ ಸ್ನಾನ ಮಾಡಿದರು. ಇದು ಹಡಗಿನಲ್ಲಿ ಚಿಕ್ಕ ಪ್ರಾಯದ ೨೦೦ಕ್ಕೂ ಹೆಚ್ಚು ಗುಲಾಮರ ಮೇಲೆ ಮಾಡಿದ ಅತ್ಯಾಚಾರದ ಪಾಪವನ್ನು ತೊಳೆದುಕೊಳ್ಳುವುದಕ್ಕಾಗಿ. ಇಷ್ಟೆಲ್ಲಾ ಮಾಡಿ ಆಮೇಲೆ ಪರ್ಷಿಯನರ ಮತ್ತು ಆರ್ಮೀನಿಯನರ ಸಾಮಾನುಗಳನ್ನೆಲ್ಲಾ ಹುಡುಕಿ ತಡಕಿದರು. ಕೆಲವರು ಸತ್ತ ತಮ್ಮ ಹತ್ತಿರದ ಸಂಬಂಧಿಗಳ ಮೂಳೆಗಳನ್ನು ಇಂಡಿಯಾ ದಿಂದ ತಮ್ಮ ದೇಶಕ್ಕೆ ತೆಗೆದುಕೊಂಡು ಹೋಗುವುದು ಉಂಟಂತೆ. ಹೀಗೆ ಇಪ್ಪತ್ತು ದಿನ ಏನೆಲ್ಲಾ ಮೂಢ ಆಚರಣೆಗಳನ್ನು ನಡೆಸಿದರು. ಆದರೆ ಅದರಿಂದ ಏನೂ ಉಪ ಯೋಗವಾಗಲಿಲ್ಲ.

ಹೊರಟ ಇಪ್ಪತ್ತು ದಿನಗಳ ನಂತರ ಅಂದರೆ ಫೆಬ್ರುವರಿ ೨೪ನೆಯ ತಾರೀಖು ಅರೇಬಿಯಾ ಭೂಮಿ ಕಂಡೆವು. ಮೊಟ್ಟ ಮೊದಲನೆ ಭೂಮಿ ಕಂಡಾಗ ಮೂರರಲ್ಲಾ ಹಡಗಿನ ಕ್ಯಾಪ್ಟನ್‌ನಿಗೆ ಏನಾದರೊಂದು ಮರ್ಯಾದೆ ಕೊಡುವ ಕ್ರಮ ಉಂಟಂತೆ. ಅದರಂತೆ ಎಲ್ಲರೂ ಬಟ್ಟೆ ಕೊಟ್ಟರು. ಹೀಗಾಗಿ ಆತನಿಗೆ ೪೦೦ ಏಕಸ್ ಬೆಲೆಯ ಬಟ್ಟೆ ಸಿಕ್ಕಿತು.

ಮಾರನೆಯ ದಿನ ನೀರಿನ ಕೊರತೆಯ ಕಾರಣ ವರ್ತಕರೆಲ್ಲಾ ಮಸ್ಕತ್‌ನಲ್ಲಿ ಇಳಿದು ನೀರು ತೆಗೆದುಕೊಳ್ಳೋಣವೆಂದು ಕ್ಯಾಪ್ಟನ್‌ಗೆ ಹೇಳಿದರು. ಆದರೆ ಆತ ಪೋರ್ಚುಗೀಸರ ಕಾಟ ಇದೆ, ಆದ್ದರಿಂದ ಹಾಗೆ ಮಾಡುವುದು ಬೇಡ ಅಂದ. ಹೀಗಾಗಿ ಪರ್ಷಿಯಾದ ಅಬ್ಬಾಸ್ ಬಂದರಿಗೆ ಹೋಗಬೇಕೆಂದು ತೀರ್ಮಾನವಾಯಿತು. ಅಲ್ಲಿಗೆ ಹೋಗಲು ಹನ್ನೆರಡು ದಿನ ಹಿಡಿಯಿತು. ಆ ಹನ್ನೆರಡು ದಿನ ಅನ್ನ ನೀರಿಗಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ.

ಹಡಗಿನೊಳಗೆ ಮಲಗಲು ಜಾಗಕ್ಕೆ ಅನಾನುಕೂಲವಾಗಿತ್ತು. ಅಲ್ಲದೆ ಭಾರಿ ಶೆಖೆ. ಇದಕ್ಕಾಗಿ ನಾನೊಂದು ಉಪಾಯ ಹುಡುಕಿದೆ. ಹಡಗಿನ ಹೊರಗೆ ಪರ್ಷಿಯನ್ ಪೆಟ್ಟಿಗೆಯನ್ನು ತೂಗುಹಾಕಿ ಒಂದು ಹಂಜರ ಮಾಡಿಕೊಂಡು ಅದರಲ್ಲಿ ಮಲಗಿ ರಾತ್ರಿಯ ತಂಗಾಳಿಯ ಅನೂಕೂಲ ಪಡೆಯುತ್ತಿದ್ದೆ. ಇದರಿಂದ ಅನಿರೀಕ್ಷಿತವಾದ ಇನ್ನೊಂದು ಸೌಕರ್ಯ ಒದಗಿತು. ಹಂಜರವು ಒಂದು ಫಿರಂಗಿ ತೋಪು ಗುಂಡಿಗೂ ಮಧ್ಯೆ ತೂಗು ಹಾಕಲ್ಪಟ್ಟಿತ್ತು. ಪರ್ಷಿಯನ್ ಸುಂದರಿಯರಿಗೆ ಜಾಗ ಮಾಡಲು ಫಿರಂಗಿಗಳನ್ನು ತೆಗೆದು ಬೇರೆ ಕಡೆ ಇಟ್ಟಿದ್ದರು. ಅಲ್ಲಿದ್ದ ಹೆಂಗಸರು ಯಾರಿಗೂ ಕಾಣಬಾರದೆಂದು ಫಿರಂಗಿಯ ತೋಪುಗಂಡಿಗಳಿಗೆ ಚಾಪೆಗಳ ಜಾಲರಿಯನ್ನು (Jalaries) ಹೊರಗಡೆ ಯಿಂದ ತೂಗಂಹಾಕಿದ್ದರು. ಹೀಗಾಗಿ ಪಂಜರದೊಳಗಿದ್ದ ಮುದ್ದು ಪಕ್ಷಿಗಳಿಗೆ ಉಪ್ಪು

ನೀರಿನ ತೆರೆಗಳಷ್ಟೇ ಕಾಣಿಸುತ್ತಿದ್ದುದು. ಬೇರೆಯುವರ ಕಣ್ಣಿಗಂತೂ ಅವರು ಬೀಳುತ್ತಿರಲಿಲ್ಲ.

ನನಗೆ ಇಷ್ಟು ಹತ್ತಿರದಲ್ಲಿ ಈ ಹೆಂಗಸರಿದ್ದಾರೆಂದು ತಿಳಿದಿರಲಿಲ್ಲ. ಅವರು ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳಲಾರಂಭಿಸಿದರು. ನನಗೆ ಆದ ಅಚ್ಚರಿ ಅಷ್ಟಿಷ್ಟಲ್ಲ. "ಅಯ್ಯೋ, ನಮ್ಮ ಬಾಳು ಹೀಗಾಯ್ತಲ್ಲ! ಒಬ್ಬ ಗಂಡಸಿನ ಮುಖ ಬಿಟ್ಟರೆ ಇನ್ನೊಬ್ಬನ ಮುಖ ನೋಡೋಹಾಗಿಲ್ಲ. ಅವನು ಅನ್ನ ಬಟ್ಟೆಬರೆ ಕೊಟ್ಟರೆ ಉಂಟು ಇಲ್ಲದಿದ್ದರೆ ಇಲ್ಲ. ಎಂಥಾ ನ್ಯಾಯ ನಮ್ಮದು. ಇಂಥಾ ಬಾಳಿಗೆ ನಮ್ಮನ್ನು ನೂಕಿದರಲ್ಲಾ ನಮ್ಮ ತಂದೆತಾಯಿಗಳು!" ಎಂದು ತಮ್ಮ ಗೋಳನ್ನು ಪರಸ್ಪರ ಹೇಳಿಕೊಳ್ಳಲಾರಂಭಿಸಿದರು. ಒಬ್ಬಳು ಒಂದು ಕಂಡಿಯಲ್ಲಿ ಬಾಯಿ ಹಾಕಿ ಇನ್ನೊಂದು ಕಂಡಿಯಲ್ಲಿದ್ದವಳಿಗೆ ಮಾತಾಡಬೇಕಾಗಿತ್ತು. ಈ ಮಾತುಗಳೆಲ್ಲ ಸಂಜೆ ಹೊತ್ತು ತಮ್ಮ ಗಂಡಂದಿರು ಹಡಗಿನ ಹಜಾರದಲ್ಲಿ ಜೂಜಾಡುತ್ತಲೋ ಕುಡಿದು ತಿನ್ನುತ್ತಲೋ ಹರಟೆ ಹೊಡೆಯುತ್ತಿದ್ದಾಗ ನಡೆಯುತ್ತಿದ್ದುವು.

ನನಗೆ ಪರ್ಷಿಯನ್ ಭಾಷೆ ಬರುತ್ತದೆ ಎಂದು ಈ ಹೆಂಗಸರಿಗೆ ಗೊತ್ತಿರಲಿಲ್ಲ. ನನ್ನನ್ನೇ ಕುರಿತು ಮಾತಾಡುತ್ತಿದ್ದರು. "ನನಗೆ ಅವನ ಭಾಷೆ ಗೊತ್ತಿದ್ರೆ ನೀರು ಕೇಳಿ ಈಸಿಕೊಳ್ಳುತ್ತಿದ್ದೆ" ಎಂದು ಒಬ್ಬಳು. "ಪರ್ಷಿಯಾ ಬಟ್ಟೆ ಹಾಕಿಕೊಂಡು ಪರ್ಷಿಯಾದವರಿಗಿಂತ ಚೆನ್ನಾಗಿ ಕಾಣುತ್ತಾನಲ್ಲೆ" ಎಂದು ಇನ್ನೊಬ್ಬಳು.

ಇವರ ಜೊತೆ ಮಾತಾಡೋದೆ ಒಳ್ಳೆಯದು ಎಂದು ನನಗನ್ನಿಸಿತು. ಒಂದು ದಿನ ಸಂಜೆ ಐದು ಗಂಟೆ. ನನ್ನ ಹಂಜರದಲ್ಲಿ ಕುಳಿತಿದ್ದೆ. ಒಬ್ಬಳು ನನ್ನ ಕಡೇನೆ ದಿಟ್ಟಿಸಿ ನೋಡುತ್ತಿದ್ದಳು. ಅವರ ಜೊತೆ ಐದಾರು ವರ್ಷದ ಒಬ್ಬ ಹುಡುಗ ಇದ್ದ. ಆ ಹುಡುಗನನ್ನು ಕುರಿತು "ಏನು ಬೇಕು ಮರಿ, ನೀರು ಬೇಕಾ? ತಕ್ಕೋ ಈ ಹೂಜಿ" ಎಂದೆ. ನನ್ನ ಹೂಜಿಯನ್ನು ಅವನಿಗೆ ಸಿಕ್ಕುವಂತೆ ಕೆಳಗೆ ಹಿಡಿದೆ. ಆ ಹೆಂಗಸು ಅದನ್ನು ತೆಗೆದುಕೊಂಡು ತನ್ನ ಗೆಳತಿಯರಿಗೆ "ಅಯ್ಯೋ ಅವನಿಗೆ ನಮ್ಮ ಭಾಷೆ ಬರುತ್ತೆ ಕಣ್ರೇ" ಎಂದು ಎಲ್ಲರಿಗೂ ಸಾರಿ ಹೇಳಿದಳು. ನನ್ನ ಹೂಜಿಯನ್ನು ಹಿಂದಿರುಗಿಸುತ್ತಾ "ಅಣ್ಣಾ ನಿಮಗೆ ತುಂಬಾ ವಂದನೆಗಳು" ಎಂದಳು. ಇದಾದ ಕೊಂಚಹೊತ್ತಿನಲ್ಲಿ ಇನ್ನು ಮೂರು ನಾಲ್ಕು ಜನ ಒಟ್ಟಿಗೆ ಬಂದು ಎರಡು ಗಂಟೆಗಳ ಕಾಲ ಹರಟೆ ಹೊಡೆದು ಹೋದರು.

ರೂಪವತಿಯರಾದ ಈ ಪರ್ಷಿಯನ್ ಲಲನೆಯರ ಗೋಳು ಕೇಳಿ ನನಗೆ ತುಂಬ ಸಂಕಟವಾಯಿತು. ಅವರ ಗಂಡಂದಿರು ಹೋದ ಕಡೆಗಳಿಗೆಲ್ಲಾ ಹೋಗಬೇಕು. ಏನೇ ಕಷ್ಟ ಬಂದರೂ ಅನುಭವಿಸಬೇಕು. ಸಮಯ ಸಿಕ್ಕಾಗಲೆಲ್ಲ ಅವರು ನನ್ನೊಡನೆ ಮಾತಾಡಲು ಹಾತೊರೆಯುತ್ತಿದ್ದರು. ನನ್ನನ್ನು ಅಣ್ಣ ಎಂದು ಕರೆಯುತ್ತಿದ್ದರು. ನಾನು ಅವರಿಗೆ ಬೇಕಾದ ನೀರು ಮುಂತಾದುವನ್ನು ಕೊಡುತ್ತಿದ್ದೆ. ಸಿಹಿತಿಂಡಿಗಳು, ಒಣಗಿದ ಹಣ್ಣು ಮುಂತಾದ ರುಚಿ ಪದಾರ್ಥಗಳನ್ನು ಕೊಟ್ಟರೆ ಅವನ್ನು

ನನ್ನ ಮುಂದೆಯೇ ಮುಕ್ಕುತ್ತಿದ್ದರು. ಮತ್ತು ಅವರವರಲ್ಲೆ ಪೈಪೋಟಿ, ಯಾರು ತಮ್ಮ ಉಡಿಗೆ ತೊಡಿಗೆಗಳಿಂದ ನನ್ನನ್ನು ಹೆಚ್ಚಾಗಿ ಮೆಚ್ಚಿಸಬಲ್ಲರು ಎಂದು.

ತಲೆಗೆ ಯಾವ ಹೊದಿಕೆಯೂ ಇಲ್ಲದ ಈ ಹೆಂಗಸರಿಗೆ ಅವರ ಅಂದದ ಕೂದಲೇ ಅಲಂಕಾರ. ತಲೆಯನ್ನು ಮಧ್ಯಕ್ಕೆ ಸರಿಯಾಗಿ ಬೈತಲೆ ತೆಗೆದು ಹಿಂದೆ ಎರಡು ಜಡೆ ಹೆಣೆದುಕೊಂಡು ಅವಕ್ಕೆ ಮುತ್ತು ರತ್ನಗಳ ಅಲಂಕಾರ ಮಾಡಿಕೊಳ್ಳುತ್ತಿದ್ದರು. ಬಹು ಸರಳವಾದ ರೀತಿಯ ಅಲಂಕಾರ ನೋಡಿ ಆಭರಣಗಳ ಹೊರೆಯನ್ನೇ ಹೊತ್ತು ಮೆರೆಯುವ ನಮ್ಮ ಫ್ರೆಂಚ್ ಹೆಂಗಸರ ಅಲಂಕಾರ ಅಸಹ್ಯವಾಗಿ ಕಂಡಿತು. ಈ ಪರ್ಷಿಯನ್ ಹೆಂಗಸರು ತಲೆಯನ್ನು ಈ ಬಗೆಯಲ್ಲಿ ಸರಳವಾಗಿ ಅಲಂಕರಿಸಿಕೊಂಡು ಕೈಗಳಿಗೆ ಚಿನ್ನ ಬೆಳ್ಳಿಗಳ ಬಳೆಗಳನ್ನು ಹಾಕಿಕೊಂಡು ಕೈಬೆರಳು ಕಾಲ್ಬೆರಳುಗಳಿಗೆ ಎರಡು ಮೂರು ಉಂಗುರಗಳ ಅಲಂಕಾರ ಮಾಡಿಕೊಂಡಿದ್ದರು. ಕಾಲುಗಳನ್ನು ಕೈಗಳಷ್ಟೇ ಶುಚಿಯಾಗಿಟ್ಟುಕೊಂಡಿದ್ದರು. ಬಲಗೈ ಹೆಬ್ಬೆರಳಿನ ಉಂಗುರದಲ್ಲಿ ಕಿರುಗನ್ನಡಿಯನ್ನು ಅಳವಡಿಸಿಕೊಂಡು ಅದರಲ್ಲಿ ಆಗಾಗ್ಗೆ ತಮ್ಮ ಅಲಂಕಾರ ನೋಡಿಕೊಳ್ಳುತ್ತಿದ್ದರು. ಮೂಗಿನ ಒಂದು ಕಡೆ ಮುತ್ತು ಪೋಣಿಸಿದ ಚಿನ್ನದ ಬುಲಾಕು ಹಾಕಿಕೊಂಡಿದ್ದರು. ಅದು ಕಿವಿಯ ಆಭರಣಕ್ಕೆ ತಕ್ಕಂತೆ ಇತ್ತು. 'ಕಬಯಾ' ಎಂಬ ರೇಷ್ಮೆ ಶರಾಯಿಯನ್ನು ಹಿಮ್ಮಡಿಯವರೆಗೂ ಧರಿಸಿ ಮೇಲೆ ಜರತಾರಿ ರವಿಕೆ ತೊಟ್ಟು ಅದನ್ನು ಸೊಂಟಕ್ಕೆ ನಡುಪಟ್ಟಿಯಿಂದ ಕಟ್ಟಿದ್ದರು. 'ಟಪೆಟ್' ಎಂಬ ಇಜಾರಗಳನ್ನು ತೊಟ್ಟಿದ್ದರು. ಅತ್ತರುಗಳೆಂದರೆ ಅಪಾರ ಪ್ರೇಮ. ಅವುಗಳನ್ನು ಮೈ ಕೈ ಕಾಲುಗಳಿಗೆ ಪೂಸಿಕೊಂಡಿದ್ದರು. ಒಬ್ಬಳು ನನಗೊಂದು ಅತ್ತರ್ ಸೀಸೆ ಕೊಟ್ಟಳು. ಅದನ್ನು ಸೀಮೆ ಪಿಂಗಾಣಿಯಿಂದ ಮಾಡಲಾಗಿತ್ತು. ಅಲ್ಲದೆ ಅದಕ್ಕೆ ಚಿನ್ನದ ಪೀಠ ಮತ್ತು ಬಗೆಬಗೆಯ ಅಲಂಕಾರವಿತ್ತು. ಸೀಸೆಯಲ್ಲಿದ್ದ ಅತ್ತರನ್ನು ಕೊಂಚ ಕೈಗೆ ಹಾಕಿಕೊಂಡು ನನ್ನ ಮುಖಕ್ಕೆ ಹಚ್ಚಿಕೊಂಡೆ. ಹಾಗೆ ಮಾಡಿ ಆ ಸೀಸೆಯನ್ನು ಹಿಂದಿರಿಗಿಸಲು ಹೋದಾಗ ಆಕೆ ಅದನ್ನು ಈಸಿಕೊಳ್ಳದೆ ಸಮುದ್ರಕ್ಕೆ ಎಸೆದುಬಿಡು ಎಂದಳು. ಒಮ್ಮೆ ಒಬ್ಬರಿಗೆ ಕೊಟ್ಟುದನ್ನು ಮತ್ತೆ ಪಡೆಯುವವಳಲ್ಲ ತಾನು ಎಂದಳು. ಹಾಗಿದ್ದರೆ ಅದು ಇರಲಿ ಎಂದು ನಾನು ಇಟ್ಟು ಕೊಂಡೆ. ಇದನ್ನು ನೋಡಿ ಬೇರೆಯವರೂ ಒಂದೊಂದು ಬಹುಮಾನ ಕೊಟ್ಟರು.

ನನ್ನ ಮುಂದಿನ ಪ್ರಯಾಣದ ಬಗ್ಗೆ ಕೇಳಿ ತಿಳಿದುಕೊಂಡ ಅವರು ತಮ್ಮ ಗಂಡಂದಿರ ಜೊತೆ ಇಸ್ಫಹಾನಿಗೆ ಏಕೆ ಬರಬಾರದೆಂದು ಕೇಳಿದರು. ಆದರೆ ಬಹು ನಿಧಾನವಾದ ಆ ಪ್ರಯಾಣ ಕೈಗೊಳ್ಳಲು ಇಚ್ಛಿಸದೆ ಬೇರೆ ಆಲೋಚನೆ ಮಾಡಿಕೊಂಡೆ.

ಇದನ್ನೆಲ್ಲಾ ಕೇಳಿದವರು ನನ್ನ ಬಗ್ಗೆ ಏನೇನೋ ಭಾವಿಸಬಹುದು. ಆದರೆ ಹಾಗೇನೂ ಭಾವಿಸಬೇಕಾಗಿಲ್ಲ.. ನನ್ನ ಅವರ ಸಂಬಂಧ ಅಣ್ಣ ತಂಗಿಯರ ಸಂಬಂಧದಂತಿತ್ತು. ಆ ನಾಲ್ಕು ಜನ ಹೆಂಗಸರಿದ್ದ ಸ್ಥಳದಲ್ಲಿ ಮತ್ತು ಕೋಳಿ ಹಂಜರದಲ್ಲಿ ನಾವು ಗುಟ್ಟಾಗಿ ಸೇರಲು ಸಾಧ್ಯವಿರಲಿಲ್ಲ. ಬರೀ ಮಾತಿನಿಂದ ಅವರಿಗೆ ಭಾರಿ ಖುಷಿಯಾಗುವಂತೆ ಮಾಡಿದೆ ಅಷ್ಟೆ.

ಫ್ರಾನ್ಸಿನಲ್ಲಿ ನಮ್ಮ ಹೆಂಗಸರಿಗಿರುವ ಸ್ವಾತಂತ್ರ್ಯ, ಅಲ್ಲಿರುವ ಏಕಪತ್ನಿತ್ವ, ಜನ ಸಾಮಾನ್ಯರಿಗೆ ಇರುವ ಸೌಲಭ್ಯಗಳು, ಗುಲಾಮತನ ಇಲ್ಲದ ಸಮಾಜ-ಇವುಗಳನ್ನೆಲ್ಲಾ ಹೇಳುತ್ತಿದ್ದಾಗ ಅವರಿಗೆ "ಅಯ್ಯೋ ನಾವೆಂತಹ ಪಾಪ ಮಾಡಿ ಹುಟ್ಟಿದೆವು! ಸಾಯುವತನಕ ಪಂಜರ ಪಕ್ಷಿಯಂತೆ ಬಾಳಬೇಕಾಗಿ ಬಂತಲ್ಲ!" ಎಂದು ಕಣ್ಣೀರು ತಂದದ್ದುಂಟು.

ನಮ್ಮ ಹಡಗು ಬಂದರ್ ಅಬ್ಬಾಸ್ ತಲಪಿತು. ನಾನು ಅತಿ ಹತ್ತಿರವಾದ ದಾರಿಯಲ್ಲಿ ಬಾಸ್ರಾಕ್ಕೆ ಹೋಗಲು ನಿರ್ಧರಿಸಿದೆ. ನಾನು ಇಸ್ಫಹಾನಿಗೆ ಅವರೊಡನೆ ಹೋಗುವುದಿಲ್ಲವೆಂದು ಆ ಹೆಂಗಸರಿಗೆ ತುಂಬ ವ್ಯಸನವಾಯಿತು. ಗಳಗಳನೆ ಅತ್ತರು. ಅವರನ್ನು ಸಮಾಧಾನಮಾಡಿ ನಾನು ಹಡಗು ಇಳಿದು ನಮ್ಮ ಫ್ಯಾಕ್ಟೊರಿಗೂ ಇಂಗ್ಲಿಷ್ ಫ್ಯಾಕ್ಟೊರಿಗೂ ಹೋಗಿ ಅವರಿಗೆ ಕೊಡಬೇಕಾದ ಕಾಗದ ಪತ್ರಗಳನ್ನು ಕೊಟ್ಟು ಸಾಮಾನು ಹೊರಲು ಬೇಕಾದ ನಾಲ್ಕು ಒಂಟೆಗಳನ್ನೂ ಸವಾರಿಗೆ ಬೇಕಾದ ಒಂದು ಕುದುರೆಯನ್ನೂ ಪಡೆದು ಮಾರ್ಚಿ ೧೩ನೆಯ ತಾರೀಖು ಮಂಗಳವಾರ ನನ್ನ ಭೂ ಪ್ರಯಾಣವನ್ನು ಆರಂಭಿಸಿದೆ.

ಅಬೆ ಕಾರಿಯ ಮುಂದಿನ ಪ್ರಯಾಣ ನಮಗೆ ಪ್ರಕೃತವಲ್ಲವಾದ್ದರಿಂದ ಅದನ್ನು ಸಂಕ್ಷೇಪವಾಗಿ ಹೇಳಿ ಮುಗಿಸಬಹುದು. ಬಂದರ್ ಅಬ್ಬಾಸ್‌ನಿಂದ ಹೊರಟವನು ಕುಂಗ್ ಮುಖಾಂತರ ಬಾಸ್ರಾ ತಲುಪಿ ಅಲ್ಲಿಂದ ಟೈಗ್ರಿಸ್ ನದಿಯ ಮೇಲೆ ದೋಣಿಯಲ್ಲಿ ಸಾಗಿ ಮೇ ೧೯ನೆಯ ತಾರೀಖು ಬಾಗ್‌ದಾದಿಗೆ ಹೋಗುತ್ತಾನೆ. ಬಾಗ್‌ದಾದನ್ನು ಮೇ ೨೬ನೆಯ ತಾರೀಖು ಬಿಟ್ಟು ಜೂನ್ ೧೧ರಂದು ಅಲೆಪ್ಪೋ ತಲಪುತ್ತಾನೆ. ಅಲ್ಲಿಂದ ಇಂಗ್ಲಿಷ್ ಹಡಗೊಂದರಲ್ಲಿ ಹೊರಟು ಮೆಸ್ಸೀನ ಮೂಲಕ ಹೋಗುತ್ತಾನೆ. ಕೆಟ್ಟ ಅಲೆಗಳ ಕಾರಣ ಹಡಗಿನಿಂದ ಆರು ದಿನಗಳ ಕಾಲ ಇಳಿಯಲು ಸಾಧ್ಯವಾಗಲಿಲ್ಲ. ಆದರೆ ಇಳಿದ ಮೇಲೆ ಅಬೆ ಕಾರ್ ಮತ್ತು ಇನ್ನಿಬ್ಬರನ್ನು ರಾಜಕೀಯ ಕಾರಣಗಳಿಗಾಗಿ ನಿರ್ಬಂಧಕ್ಕೆ ಒಳಪಡಿಸಲಾಯಿತು. ಲೆಗ್‌ಹಾರನ್‌ನಲ್ಲಿದ್ದ ಫ್ರೆಂಚ್ ರಾಯಭಾರಿಯ ಸಹಾಯದಿಂದ ಬಿಡುಗಡೆ ಹೊಂದಿ ಮಾರ್ಸೇಲ್ಸ್‌ಗೆ ಹೊರಟ ಇಂಗ್ಲಿಷ್ ಹಡಗೊಂದರಲ್ಲಿ ಹೊರಡುವ ಏರ್ಪಾಡು ಮಾಡಿಕೊಂಡ. ಆದರೆ ಆ ಹಡಗು ಕಳ್ಳರ ವಶವಾಗಿಬಿಟ್ಟಿತು. ಅದನ್ನು ಬಿಟ್ಟು ಬೇರೊಂದು ವ್ಯಾಪಾರದ ಹಡಗಿನಲ್ಲಿ ಕಾರ್ ಮತ್ತಿತರರೂ ಅಕ್ಟೋಬರ್ ೨೧ರಂದು ಮಾರ್ಸೇಲ್ಸ್‌ಗೆ ಹೊರಟರು. ೨೪ನೆಯ ತಾರೀಖು ಭಾರಿ ಬಿರುಗಾಳಿ ಎದ್ದಿತು. ಹೀಗಾಗಿ ಹಡಗು ಫ್ರಾನ್ಸಿನ ದಕ್ಷಿಣ ತೀರದಲ್ಲಿರುವ ಅಗಾಯ್ (Agay) ಬಂದರಿನಲ್ಲಿ ಆಶ್ರಯ ಪಡೆಯಬೇಕಾಯಿತು. ಮಾರನೆಯ ದಿನ ಫ್ರೆಂಚ್ ಹಡಗೊಂದರಲ್ಲಿ ಹೊರಟು ೨೬ನೆಯ ತಾರೀಖು ಮಧ್ಯರಾತ್ರಿ ಕಾರ್ ಮಾರ್ಸೇಲ್ಸ್ ತಲುಪಿದ.

ಇಲ್ಲಿಗೆ ಕಾರ್‌ನ ಕಥನ ಥಟ್ಟನೆ ನಿಂತುಹೋಗುತ್ತದೆ. ರಾಜನ ಆಸ್ಥಾನವೂ ಫ್ರೆಂಚ್ ಈಸ್ಟ್ ಇಂಡಿಯಾ ಕಂಪೆನಿಯೂ ಅವನನ್ನು ಕಾಣಬೇಕಾದ ರೀತಿಯಲ್ಲಿ ಕಾಣಲಿಲ್ಲವೆಂದು ಗೊತ್ತಾಗುತ್ತದೆ. ಆದರೂ ಆತ ತನ್ನ ಕೆಲಸವನ್ನು ಎಷ್ಟು ಶ್ರಮದಿಂದ ನಿರ್ವಹಿಸಿದ್ದಾನೆ! ಅಲ್ಲದೆ ಆತನೆಷ್ಟು ಶ್ರದ್ಧೆಯಿಂದ ತನ್ನ ಪ್ರವಾಸಕಥನವನ್ನು ವಿವರ ವಿವರವಾಗಿ ಬರೆದಿದ್ದಾನೆ!

# ಫ್ರೈಅರ್ ದೊಮಿಂಗೋ ಫೆರ್ನಾಂಡೀಸ್ ದೆ ನವರ್ರೆ

ದೊಮಿಂಗೋ ಫೆರ್ನಾಂಡೀಸ್ ದೆ ನವರ್ರೆ (Domingo de Navarrette) ಹುಟ್ಟಿದ್ದು ೧೬೧೮ರಲ್ಲಿ. ಸ್ಪೈಯ್ ದೇಶದ ಕಾಸ್ಟ್ರೋಗೇರಿಜ್ (Castrogeriz) ಎಂಬ ಊರಿನಲ್ಲಿ. ಕಾಲವಾದದ್ದು ೧೬೮೬ರಲ್ಲಿ. ಪಾದ್ರಿಯಾಗಿ ಜೀವನ ಆರಂಭಿಸಿದ ಈತ ೧೬೪೬ರಲ್ಲಿ ಅಂದರೆ ತನ್ನ ೨೮ನೆಯ ವಯಸ್ಸಿನಲ್ಲಿ ಚೀನಾದಿಂದ ರೋಮಿಗೆ ಬಂದಿದ್ದ. ಪಾದ್ರಿ ಜೀಆನ್ ಬಾಸ್ಟಿಸ್ಟ ಮೊರೇಲ್ಸ್ (Priar Juan Bastista Morales) ಎಂಬುವನನ್ನು ಭೇಟಿಮಾಡಿದ ನಂತರ ಫಿಲಿಪ್ಪೈನ್ ಮಿಷನ್ ಜೊತೆ ಹೋಗಲು ಮನಸ್ಸ ಮಾಡಿದ. ಮೊರೇಲ್ಸ್ ಒಬ್ಬ ಡೊಮಿನಿಕನ್ ಪಾದ್ರಿ. ಆತ ಚೀನದ ಸ್ಥಿತಿ ಗತಿಗಳ ಬಗ್ಗೆ ರೋಮಿನ ಹಿರಿಯರಿಗೆ ವರದಿ ಮಾಡಲೂ ಫಿಲಿಪ್ಪೈನ್ ಮಿಷನ್‌ಗೆ ಜನರನ್ನು ಸೇರಿಸಿಕೊಳ್ಳಲೂ ರೋಮಿಗೆ ಬಂದಿದ್ದ. ಆತ ೨೯ ಜನ ಕಾರ್ಯಕರ್ತರನ್ನು ಆರಿಸಿಕೊಂಡು ೧೬೪೬ರಲ್ಲಿ ಮೆಕ್ಸಿಕೋಕ್ಕೆ ಹೊರಟ. ಇವರಲ್ಲಿ ಒಬ್ಬನಾದ ನವರ್ರೆನ ಪ್ರವಾಸ ಕಥನ ಆರಂಭವಾಗುವುದು ಇಲ್ಲಿಂದ.

ಮೆಕ್ಸಿಕೋಗೆ ಹೋದ ಈ ಮಿಷನರಿ ತಂಡ ಫಿಲಿಪ್ಪೈನ್ ದ್ವೀಪಕ್ಕೆ ಹೋಗುವ ಹಡಗಿಗಾಗಿ ಎರಡು ವರ್ಷ ಕಾಯ್ದು ಕೊನೆಗೆ ಆ ದ್ವೀಪ ತಲಪಿತು. ಅಲ್ಲಿ ಅತ್ಯಂತ ಜವಾಬ್ದಾರಿಯುತವಾದ ಕೆಲಸಗಳನ್ನು ನವರ್ರೆಗೆ ವಹಿಸಲಾಯಿತು. ಆದರೆ ಅಲ್ಲಿಯ ಕೆಟ್ಟ ಹವೆ ಅವನ ಆರೋಗ್ಯ ಕೆಡಿಸಿತು. ಅವನನ್ನು ಮೆಕ್ಸಿಕೋಗೆ ವಾಪಸು ಕಳುಹಿಸುವುದೆಂದು ತೀರ್ಮಾನಿಸಲ್ಪಟ್ಟಿತ್ತು. ಆದರೆ ಆತ ಅಲ್ಲಿಗೆ ಹೋಗಲಾಗಲಿಲ್ಲ. ಅದರ ಬದಲು ಆತ ಚೀನಾದಲ್ಲಿ ಡೊಮಿನಿಕನ್ ಪಾದ್ರಿಗಳನ್ನು ಸೇರಿಕೊಂಡು ಅಲ್ಲಿಯೇ ತನ್ನ ಉಳಿದ ಜೀವನವನ್ನು ಕಳೆಯಬೇಕೆಂದು ನಿರ್ಧರಿಸಿದ. ೧೬೫೮ರಲ್ಲಿ ಚೀಣದ ಮೆಕಾವೊ (Macao) ಬಂದರು ತಲುಪಿದ ಆತನಿಗೆ ಅಲ್ಲಿದ್ದ ಜೆಸ್ಯೂಯಿಟ್ ಪಾದ್ರಿಗಳಿಂದ ಏನೇನೂ ಸಹಾಯ ದೊರೆಯಲಿಲ್ಲ. ಅವರಿಗೆ ಬೇರೆ ಕ್ರೈಸ್ತ ಮಿಷನರಿಗಳನ್ನು ಕಂಡರೆ ಆಗುತ್ತಿರಲಿಲ್ಲ. ಇದು ನವರ್ರೆಗೆ ಹಿಡಿಸದೆ ಅವರ ಬಗ್ಗೆ ವಿರೋಧವಾದ ಅಭಿಪ್ರಾಯಗಳನ್ನು ಬರೆಯಲಾರಂಭಿಸಿದ. ಬೇರೆಯವರ ಸಹಾಯದಿಂದ ಆತ ಚೀನಾದ ಒಳಪ್ರದೇಶಕ್ಕೆ ಹೋಗಿ ತನ್ನ ಪಾದ್ರಿ ಕೆಲಸದಲ್ಲಿ ನಿರತನಾದ. ಚೀನೀ ದೇಶವೂ ಚೀನೀ ಜನರೂ ಅವನಿಗೆ ತುಂಬಾ ಹಿಡಿಸಿದುವು. ೧೬೬೪ರವರೆಗೆ ಅಲ್ಲಿ ಕೆಲಸ ಮಾಡಿದ. ಆತ ಚೀನಾದ ಒಳನಾಡಿನಲ್ಲಿದ್ದ ಪಾದ್ರಿಗಳನ್ನೆಲ್ಲಾ ಹೊರಗೆ ಕಳುಹಿಸುವ ಸರ್ಕಾರದ ನೀತಿಗನುಗುಣವಾಗಿ ೧೬೬೫ರಲ್ಲಿ ಕ್ಯಾಂಟನ್‌ಗೆ ಬಂದನು. ಮೂರು ವರ್ಷ ಗೃಹನಿರ್ಬಂಧದಲ್ಲಿದ್ದ ಆತ ಮನಿಲ್ಲಾಕ್ಕೋ ರೋಮಿಗೋ ಹೋಗಿ ಒಂದು ವರದಿ ಸಲ್ಲಿಸಲು ಆಲೋಚಿಸಿದ. ಮನಿಲ್ಲಾಕ್ಕೆ ಹೋಗಲು ಅವಕಾಶ ಸಿಕ್ಕದೆ ಆತ ರೋಮಿಗೆ ಹೊರಟ. ರೋಮಿಗೆ ಹೋಗುವಾಗ ಆತ ಸಿಲೋನಿಗೆ ಬಂದನು. ಅಲ್ಲಿಂದ ಮದ್ರಾಸಪಟ್ಟಂಗೆ ಬಂದು ಅಲ್ಲಿ ಫ್ರಾನ್ಸಿಸ್ಕನ್ ಪಾದ್ರಿ ಎಫ್ರೈಂರನ್ನು ಬೇಟಿ ಮಾಡಿದ. ಆತ ಬಂದಿದ್ದ ಹಡಗಿನವನು ತಾನು ಗೋವಾಕ್ಕೆ ಹೋಗುವುದಿಲ್ಲವೆಂದು ಹೇಳಿದ ಕಾರಣ ಅಲ್ಲಿಗೆ ಭೂಮಾರ್ಗವಾಗಿ ಹೋಗುವುದೆಂದು ನಿರ್ಧರಿಸಿದ. ಆದರೆ ಕೈಯಲ್ಲಿ ಕಾಸಿರಲಿಲ್ಲ. ಮದ್ರಾಸ್‌ನಲ್ಲಿದ್ದ ಇಂಗ್ಲಿಷ ಗೌರ್ನರನ್ನು ಭೇಟಿ ಕೊಂಚ ಹಣ ಪಡೆದು ೧೬೭೦ನೆಯ ಜೂನ್‌ನಲ್ಲಿ ಹೈದರಾಬಾದಿಗೆ ಹೊರಟ. ಅಲ್ಲಿದ್ದ ಫ್ರೆಂಚ್ ದಲ್ಲಾಳಿಗಳು ಮಸುಲಿ ಪಟ್ಟಣದ ಮೂಲಕ ಹಡಗಿನಲ್ಲಿ ಗೋವಾಕ್ಕೆ ಕಳುಹಿಸುವ ಏರ್ಪಾಡ ಮಾಡಿದರು. ಮಸುಲಿಪಟಂನಿಂದ ಹೊರಟ ನವರ್ರೆ ಡಿಸೆಂಬರ್ ತಿಂಗಳಿನಲ್ಲಿ ಗೋವಾ ತಲಪಿ ಅಲ್ಲಿಂದ ಸೂರತ್ತಿಗೆ ಹೋದ. ಅದು ೧೬೭೧ನೆಯ ಜನವರಿ ಎಂಟನೆಯ ತಾರೀಖು. ಆಗ ಅಲ್ಲಿ ಅಬೆ ಕಾರ್ ಇದ್ದ. ಆದರೆ ಅವನ ಭೇಟಿ ಆಗಲಿಲ್ಲ. ಸೂರತ್ತಿನಿಂದ ಹೊರಟ ನವರ್ರೆ ಬಹು ಪ್ರಯಾಸದ ಸಮುದ್ರಯಾನ ಮಾಡಿ ಕೇಪ್ ಆಫ್ ಗುಡ್ ಹೋಪ್ ಬಳಸಿ ೧೬೭೨ನೆಯ ಮಾರ್ಚಿ ತಿಂಗಳಿನಲ್ಲಿ ಲಿಸ್ಬನ್ ತಲಪಿದ. ಅಲ್ಲಿಂದ ಮ್ಯಾಡ್ರಿಡ್‌ಗೆ ಹೋಗಿ ೧೬೭೩ನೆಯ ಜನವರಿ ತಿಂಗಳಿನಲ್ಲಿ ರೋಮ್ ತಲುಪಿದ. ಪೋಪ್ ಕ್ಲೆಮೆಂಟರನ್ನೂ ಕಾರ್ಡಿನೆಲ್‌ಗಳನ್ನೂ ಭೇಟಿಮಾಡಿದ. ಜೆಸೂಯಿಟ್‌ರ ಅನ್ಯಾಯಗಳನ್ನು ಕುರಿತು ಮಾಡಿದ ವರದಿಗಳನ್ನು ಸಲ್ಲಿಸಿದ. ಇದರ ಪರಿಣಾಮವಾಗಿ ಚೀನಾದಲ್ಲಿ ಕ್ರೈಸ್ತ ಮಿಷನರಿ ಕೆಲಸ ಮಾಡಲು ಅವರಿಗಷ್ಟೇ ಅಲ್ಲ. ಬೇರೆಯವರಿಗೂ ಹಕ್ಕುಂಟು ಎಂಬ ಆದೇಶ ಹೊರಟಿತು. ಮತ್ತೆ ಚೀನಾಕ್ಕೆ

ಹಿಂದಿರುಗುವ ಆಶೆ ಇತ್ತು ಅವನಿಗೆ. ಆದರೆ ಡೊಮಿನಿಕನ್ ಸಂಸ್ಥೆಯ ಮುಖ್ಯಸ್ಥರು ಆತನು ಮ್ಯಾಡ್ರಿಡ್‌ನಲ್ಲಿದ್ದು ಏಷ್ಯಾ ಮಿಷನ್‌ಗೆ ಬೇಕಾದ ಜನರನ್ನು ಒದಗಿಸುವುದೊಳ್ಳೆಯದೆಂದು ಹೇಳಿದರು.

ಅಲ್ಲಿ ಹಲವು ವರ್ಷಗಳು ಕಳೆದ ಮೇಲೆ ಆತನನ್ನು ಸೆಂತ್ ಡೊಮಿನಿಗೋದ ಆರ್ಚ್ ಬಿಷಪ್ಪನಾಗಿ ನೇಮಿಸಲಾಯಿತು. ಅಲ್ಲಿಗೆ ಹೋಗಿ ಹಿಂದಿನ ಬಿಷಪ್ಪನು ಮಾಡಿದ್ದ ಹೊಲಸನ್ನು ತೊಳೆದು ಎಲ್ಲವನ್ನೂ ಒಂದು ಒಳ್ಳೆಯ ಸ್ಥಿತಿಗೆ ತಂದು ೧೬೮೬ನೆಯ ಫೆಬ್ರವರಿ ೧ನೆಯ ತಾರೀಖು ಕಾಲವಾದನು.

ನವರ್‍ರೆಗೆ ಚೀನೀ ಭಾಷೆ, ಫಿಲಿಪಿನೋ, ಇಂಡಿಯನ್ ಭಾಷೆ ಹಾಗೂ ಇತರ ಆಡುಭಾಷೆಗಳು ಬರುತ್ತಿದ್ದುವು. ಆಗ್ಗೆ ಪೂರ್ವ ದೇಶಗಳಲ್ಲಿ ಪ್ರಚಲಿತವಿದ್ದ ಪೋರ್ಚುಗೀಸ್ ಭಾಷೆಯೂ ಬರುತ್ತಿದ್ದುದರಲ್ಲಿ ಸಂದೇಹವಿಲ್ಲ.

ಆತ ದೈಹಿಕವಾಗಿ ಕೊಂಚ ಅಂಜುಬುರುಕನೆಂದೇ ಹೇಳಬೇಕು. ಎಲ್ಲ ವಿಷಯಗಳಲ್ಲಿ ಎಚ್ಚರಿಕೆಯಿಂದಿರುವುದೇ ಕ್ಷೇಮ ಎಂಬುದು ಆತನ ಭಾವನೆಯಾಗಿತ್ತು. ಚೀನೀ ಗಾದೆಯೊಂದರಂತೆ 'ನಿನ್ನ ನೆರೆಯುವನ ಕಲ್ಲಂಗಡಿ ಹೊಲದಲ್ಲಿ ಷೂ ದಾರ ಕಟ್ಟಿಕೊಳ್ಳಲು ಬಗ್ಗಬೇಡ. ಅವನ ದ್ರಾಕ್ಷಿತೋಟದಲ್ಲಿ ಟೋಪಿ ಸರಿಮಾಡಿಕೊಳ್ಳಲು ಅಡ್ಡಾಡಬೇಡ' ಎಂಬಂತೆ ಆತ ಯಾವಾಗಲೂ ಎಚ್ಚರಿಕೆಯಿಂದಲೇ ಇರುತ್ತಿದ್ದ. ಚೀನಾದಲ್ಲಿ ಜೆಸ್ಯೂಯಿಟ್‌ರನ್ನು ಕುರಿತು ಬರೆದ ಆತನ ಪುಸ್ತಕ ಬಹು ವಿವಾದಕ್ಕೆ ಎಡೆಗೊಟ್ಟಿತು. ಇದರಿಂದಲೇ ಆತನ ಗ್ರಂಥದ ಹೆಸರು "The Travels and Controversies of Priar Domingo Navarrette" ಅಂದರೆ "ಫ್ರೈಯರ ಡೊಮಿಂಗೊ ನವರ್‍ರೆಯ ಪ್ರವಾಸಗಳು ಹಾಗೂ ವಿವಾದಗಳು' ಎಂದಿದೆ.

ಇಲ್ಲಿ ನಾವು ಇಂಡಿಯಾಕ್ಕೆ ಸಂಬಂಧಪಟ್ಟಂತೆ ಹೇಳಿರುವ ಮಾತುಗಳನ್ನು ಮಾತ್ರ ಗಮನಿಸೋಣ:

ಕ್ಯಾಂಟನ್‌ನಿಂದ ಮಕಾವ್‌ಗೆ (Macao) ಹಡಗಿನಲ್ಲಿ ಹೊರಟು ಅಲ್ಲಿಂದ ಮಲಕಾಕ್ಕೆ ಬಂದು ಗೋವಾಕ್ಕೆ ಹೊರಟೆ. ಗೋವಾಕ್ಕೆ ಹೋಗಲು ಈಗ ಹವಾಮಾನ ಸರಿಯಾಗಿಲ್ಲವೆಂದು ಹೇಳಿದ ಕಾರಣ ನಮಗೆ ಕೊಂಚ ಭಯವೇ ಆಯಿತು.

ಮಾರ್ಚಿ ೨ನೆಯ ತಾರೀಖು ನಿಕೋಬಾರ್ ದ್ವೀಪಗಳ ಮಧ್ಯೆ ಯಾನಮಾಡುತ್ತಿರುವಾಗ ಭೂಮಿಯ ಕಡೆಯಿಂದ ಅನೇಕ ಜನರು ದೋಣಿಗಳಲ್ಲಿ ಬಂದು ನಮಗೆ ಕೋಳಿ, ತೆಂಗಿನಕಾಯಿ, ಬಾಳೆಹಣ್ಣು, ಅಂಬರ್ ಮುಂತಾದುವನ್ನು ಕೊಟ್ಟರು. ಅದಕ್ಕೆ ಪ್ರತಿಯಾಗಿ ನಮ್ಮ ಹರಿದ ಹಳೆಯ ಬಟ್ಟೆಗಳನ್ನು ಕೊಟ್ಟೆವು. ಜನ ಸ್ವಲ್ಪ ಕಪ್ಪು ಬಣ್ಣಕ್ಕಿದ್ದರು. ಕೂದಲು ಕೆಂಪು. ಇದು ನಿಜವಾಗಿಯೂ ಅಚ್ಚರಿಯೇ ಸರಿ. ಇಪ್ಪತ್ತು ಮೂವತ್ತು ಹುಟ್ಟುಗಳಿಲ್ಲದ ದೋಣಿಗಳಲ್ಲಿ ನಮ್ಮ ಬಳಿಗೆ ಬಂದವರಲ್ಲಿ ಅಂದ ಚೆಂದದ ಹೆಂಗಸರೂ ಇದ್ದರು. ಹಿಂದೆ ಮುಂದೆ ಮುಚ್ಚಿಕೊಳ್ಳಲು ಹಳೆ ಪಳೆ ಹೊಲಸು ಬಟ್ಟೆ ಬಿಟ್ಟರೆ ಅವರ ಮೈಮೇಲೆ ಬಟ್ಟೆಯೇ ಇರಲಿಲ್ಲ.

ನಮ್ಮ ಯಾನ ಸಾಗಿತು. ಸಿಲೋನ್ ದ್ವೀಪ ಕಂಡಿತು. ಆದರೆ ಮುಂದೆ ಸಾಗುವುದು ಕಷ್ಟವಾಗಿ ಕೋರಮಂಡಲ ತೀರಕ್ಕೆ ಹೋಗುವುದೆಂದು ಅಲ್ಲಿಗೆ ಹೊರಟೆವು. ಮೇ ೨ ರಂದು ಮದ್ರಾಸ್ ಪಟ್ಟಣದಲ್ಲಿ ಲಂಗರು ಹಾಕಿದೆವು. ತೀರಕ್ಕೆ ಹೋಗಿ ಬರಬೇಕೆಂಬುದು ನನ್ನ ಆಶೆಯಾಗಿತ್ತು. ಒಬ್ಬ ಪೋರ್ಚುಗೀಸ್ ನಮ್ಮ ಹಡಗಿಗೆ ಬಂದ. ಅವನ ಜೊತೆ ಅವನು ಬಂದ ದೋಣಿಯಲ್ಲಿ ಹೋದೆ. ಬೇರೆಯವರೂ ಹಾಗೆ

ಮಾಡಿದರು. ತೀರದಲ್ಲಿ ಸಾವಿರಾರು ಜನ ಕಾಯುತ್ತಿದ್ದರು, ಬಂದ ಹಡಗು ಯಾವುದು? ಬಂದವರು ಯಾರು? ಎಂದು ತಿಳಿಯಲು. ನಾನು ಕೂಡಲೇ ಫ್ರೆಂಚ್ ಕಾಪೂಚಿನರ ಚರ್ಚಿಗೆ ಹೋಗಿ ಸಮುದ್ರಯಾನದ ಅಪಾಯದಿಂದ ಪಾರುಮಾಡಿದ ಭಗವಂತನಿಗೆ ಪ್ರಾರ್ಥನೆ ಸಲ್ಲಿಸಿದೆ.

ನಾನಿಲ್ಲಿಗೆ ಬಂದಾಗ ಮದ್ರಾಸ್ ಪಟ್ಟಣವನ್ನು ಗೋಲ್ಕೊಂಡಾ ರಾಜನ ಸೈನ್ಯ ಮುತ್ತಿಗೆ ಹಾಕಿತ್ತು. ಆದರೆ ಇದಕ್ಕೆ ರಾಜನ ಅನುಮತಿ ಇರಲಿಲ್ಲ. ಇಂಗ್ಲಿಷರಿಂದ ಆದಷ್ಟು ಗಿಟ್ಟಿಸಿಕೊಳ್ಳಲು ಈ ಮುತ್ತಿಗೆ ಹಾಕಿದ್ದರು. ಆದರೆ ಇಂಗ್ಲಿಷರು ಜಗ್ಗಲಿಲ್ಲ. ಮದ್ರಾಸ್ ಪಟ್ಣ ಸೇಂಟ್ ಥಾಮಸ್ ನಗರದಿಂದ (city) ಅರ್ಧ ಹರಿದಾರಿ ದೂರ ದಲ್ಲಿದೆ. ಸೆಂಟ್ ಥಾಮಸ್ ನಗರದಲ್ಲಿ ಇಂಗ್ಲಿಷರು ಭದ್ರವಾದ ಕೋಟೆ ಕಟ್ಟಿದ್ದಾರೆ.

ನಾನು ಸೆಂಟ್ ಥಾಮಸ್ ನೋಡಲು ಹೋದೆ. ಕುದುರೆ ಮೇಲೆ ಹೋಗುವಾಗ ನನ್ನ ಕೈಚೀಲ ಕೆಳಗೆ ಬಿದ್ದುಹೋಯಿತು. ಕಾಣದೆ ನಾನು ಮುಂದೆ ಹೋಗುತ್ತಿರುವಾಗ ಇಬ್ಬರು ಮೂವರು ನನ್ನನ್ನು ಕೂಗಿ ಕರೆದು ಅವರ ಭರ್ಜಿಗಳಿಂದ ಚೀಲ ಎತ್ತಿ ನನಗೆ ಕೊಟ್ಟರು. ನಾನು ಅವರ ಉಪಕಾರಕ್ಕಾಗಿ ವಂದಿಸಿದೆ. ಯುರೋಪಿಯನ್ನರಲ್ಲಿ ಬೇರೆ ಕಡೆ ಗಳಲ್ಲಿ ಈ ಸೌಜನ್ಯತೆ ಕಾಣಲು ಸಾಧ್ಯವೆ? ಆಮೇಲೆ ಸೇಂಟ್ ಮೌಂಟಿಗೆ (St Thomas Mount) ಹೋಗಿ ಪೂಜೆ ಮಾಡಿ ಬಂದೆ. ಅನಂತರ ಸೆಂಟ್ ಥಾಮಸ್ ನಗರ ನೋಡಲು ಹೋದೆ. ಆದರೆ ಮೂರರು ಒಳಗೆ ಬಿಡಲಿಲ್ಲ. ಅದರ ಹೆಬ್ಬಾಗಿಲಿನ ಮೂಲಕ ಒಳಗಡೆ ಇದ್ದ ದೊಡ್ಡ ದೊಡ್ಡ ಕಟ್ಟಡಗಳನ್ನೂ ಕೋಟೆಯ ಗೋಡೆಗಳನ್ನೂ ನೋಡಿದೆ. ನನ್ನೊಡನಿದ್ದವನು ಆ ನಗರ (ಪೋರ್ಚುಗೀಸರ) ಕೈ ತಪ್ಪಿದ್ದಕ್ಕಾಗಿ ತುಂಬ ಸಂಕಟ ಪಟ್ಟ. ಮದ್ರಾಸ್ ಪಟ್ಟಣದಲ್ಲಿರುವ ಇಂಗ್ಲಿಷರು ಅಷ್ಟೇನೂ ಶಕ್ತಿಯುತವಾಗಿಲ್ಲ. ಆದರೂ ಆ ಪಟ್ಟಣವನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡು ಬಂದಿದ್ದಾರೆ. ಮುಂದೆಯೂ ಇಟ್ಟುಕೊಳ್ಳುತ್ತಾರೆ ಎಂದು ಕಾಣುತ್ತದೆ. ನಾನು ಅಡ್ಡಾಡು ವಾಗ ಸ್ಥಳದ ಜನರ ವಿಚಿತ್ರವಾದ ದೇವಸ್ಥಾನಗಳನ್ನು ಕಂಡೆ. ಅಚ್ಚರಿಯಾಗುವಷ್ಟು ದೊಡ್ಡದಾದ ಹಾಗೂ ಆಳವಾದ ಕೊಳಗಳನ್ನೂ ಅವುಗಳ ಮಧ್ಯೆ ಕಟ್ಟಿದ ಮಂಟಪ ಗಳನ್ನೂ ನೋಡಿದೆ. ನಡೆದುಕೊಂಡೇ ವಿಧರ್ಮಿಗಳಿದ್ದ ಕಡೆ ಹೋಗಿ ನೋಡುತ್ತಾ ಹೋದೆ.

ಈ ದಿನ ಜೂನ್ ೨೧. ೪೪ನೆಯ ತಾರೀಖು ನನ್ನ ಭೂಮಾರ್ಗದ ಪ್ರಯಾಣ ಆರಂಭ ವಾಗಬೇಕು. ಹೊರಡುವ ಮುನ್ನ ಕೆಲವು ಸಂಗತಿಗಳನ್ನು ಹೇಳಬೇಕಾಗಿದೆ. ಸೇಂಟ್ ಥಾಮಸ್ ನಗರ ಬಹು ಶ್ರೀಮಂತವಾದ ಊರು. ಹೀಗಾಗಿ ಅದು ಬಿಂಕದಿಂದ ಬೀಗಿತು. ಅಲ್ಲಿದ್ದಒಬ್ಬ ಹೆಂಗಸಿನ ಬಗ್ಗೆ ಎಲ್ಲರೂ ಹೇಳುತ್ತಾರೆ. ಆಕೆಯ ದೊಡ್ಡಸ್ತಿಕೆ ಎಷ್ಟಿತ್ತೆಂದರೆ ಚರ್ಚಿಗೆ ಹೋಗುವಾಗ ಆಕೆಯ ಹಿಂದೆ ಮುಂದೆ ಅನೇಕ ಗುಲಾಮಗಿತ್ತಿಯರ ತಂಡವೇ ಇರುತ್ತಿತ್ತು. ದಾರಿಯುದ್ದಕ್ಕೂ ಧೂಪದ ಹೊಗೆ ಹಾಕುತ್ತ ಸಾಗುತ್ತಿದ್ದರು. ಇದಕ್ಕಿಂತ

ಹುಚ್ಚು ಜನರು ಬೇರೆ ಇರಲು ಸಾಧ್ಯವೆ? ಹಣ ಕೊಡುವಾಗ ಆಕೆ ಸೇಂಟ್ ಥಾಮಸ್ ನಾಣ್ಯಗಳನ್ನು ಎಣಿಸಿಕೊಡುತ್ತಿರಲಿಲ್ಲ. ಬಳ್ಳದಲ್ಲಿ ಅಳೆದು ಕೊಡುತ್ತಿದ್ದಳಂತೆ! ಈ ಸಂಗತಿಯನ್ನು ಮನೂಚಿಯೂ ಹೇಳಿರುವುದನ್ನು ಓದಿ. ಆಮೇಲೆ ಅನಾಚಾರ ಅತ್ಯಾಚಾರಗಳು ಆರಂಭವಾದುವು. ಕ್ಯಾಥೊಲಿಕ್ ಹೆಂಗಸರನ್ನು ಮಹಮ್ಮದೀಯರಿಗೂ ಜೆಂಟೈಲರಿಗೂ ಕ್ಯಾಥೊಲಿಕರೇ ತಲೆ ಹಿಡಿಯುತ್ತಿದ್ದರು. ಒಬ್ಬ ಅಂದ ಚಂದದ ಹುಡುಗಿ ಇದ್ದರೆ ಆಕೆಯನ್ನು ಅಪ್ಪನ ಮನೆ ಬಿಡಿಸಿ ಮಹಮ್ಮದೀಯನಿಗೆ ಕೊಟ್ಟುಬಿಡುತ್ತಿದ್ದರು. ಈವತ್ತಿಗೂ ಗೋಲ್ಕೊಂಡದ ರಾಜನ ಅಂತಃಪುರದಲ್ಲಿ ಒಬ್ಬ ಪೋರ್ಚುಗೀಸನ ಮಗಳು ಉಪಪತ್ನಿಯಾಗಿ ಬಾಳುತ್ತಿದ್ದಾಳೆ.

ಇಷ್ಟು ಸಾಲದು ಎಂಬಂತೆ ನಗರದ ಒಳಗಡೆ ವಿಧರ್ಮಿಗಳು ತಮ್ಮ ದೇವರ ಉತ್ಸವ ನಡೆಸಲು ಬಿಡುವುದು ಸಾಮಾನ್ಯ ವಿಷಯವಾಗಿದೆ. ಅಲ್ಲದೆ ಅವರ ಮುಂದೆಯೇ ಕತ್ತಿ ಹಿಡಿದು ಜಗಳಕ್ಕೆ ನಿಂತುಕೊಳ್ಳುತ್ತಾರೆ. ಇದೇ ನಮ್ಮ ಕ್ರೈಸ್ತರ ಧರ್ಮ !

ನಾವು ಮದ್ರಾಸ್ ಪಟ್ಟಣಕ್ಕೆ ಬಂದಾಗ ನಮ್ಮ ಹಡಗಿನ ನಾವಿಕ ತನಗಾಗಿರುವ ಭಾರಿ ಖರ್ಚನ್ನು ಸರಿದೂಗಿಸಲು ಗೋವಾಕ್ಕೆ ಹೊರಡುವ ಮುನ್ನ ತೆನ್ನಾಸರಿಂಗೋ ಅಥವಾ ಇನ್ನೆಲ್ಲಿಗೋ ಹೋಗಿ ಬರುವುದಾಗಿ ಹೇಳಿದ. ಇದು ನನಗೆ ಹಿಡಿಸಲಿಲ್ಲ. ಮತ್ತೆ ಸಮುದ್ರಯಾನದ ತಾಪತ್ರಯ ಬೇಡವೆಂದು ಭೂಮಾರ್ಗವಾಗಿ ಗೋವಾಕ್ಕೆ ಹೋಗುವುದೆಂದು ನಿರ್ಧರಿಸಿದೆ. ಹೋಗುವ ದಾರಿಯ ವರ್ಣನೆಯನ್ನು ಕೇಳಿದಾಗ ಅಂಥ ಪ್ರಯಾಣವನ್ನು ಬಿಡುವುದು ಸರಿಯಲ್ಲವೆನಿಸಿತು. ನನ್ನಲ್ಲಿದ್ದ ಹಳೆಪಳೆ ಬಟ್ಟೆಗಳನ್ನು ಹೋದಷ್ಟು ಬೆಲೆಗೆ ಮಾರಿದೆ. ನನ್ನ ಕೆಲವು ಪುಸ್ತಕಗಳನ್ನೂ ನನ್ನ ಸ್ನೇಹಿತರ ಬಳಿ ಬಿಟ್ಟು ಅವರಿಂದ ಕೊಂಚ ಹಣ ಸಾಲ ಪಡೆದೆ. ಅದನ್ನು ಗೋವೆಯಲ್ಲಿ ಕೊಡುವುದಾಗಿ ಹೇಳಿದೆ. ಇಂಗ್ಲಿಷ್ ಗೌರ್ನರ್ ಅವರ ಬಳಿಗೆ ಹೋದೆ. ಹೋದದ್ದು, ಅವರಿಂದ ಬೀಳ್ಕೊಳ್ಳುವುದಕ್ಕಿಂತ ಹೆಚ್ಚಾಗಿ ಭಿಕ್ಷೆ ಕೇಳಲು. ನನ್ನ ಸ್ಥಿತಿ ಹೇಳಿಕೊಂಡಾಗ ಅವರು ಐದು ಚಿನ್ನದ ಪಗೋಡಾಗಳನ್ನು ಕೊಟ್ಟರು. ಕನರಾದವನೊಬ (a native of Canara) ಎರಡು ಪಗೋಡಾ ಕೊಟ್ಟ. ನನ್ನ ಪ್ರಯಾಣಕ್ಕೆ ಇಷ್ಟು ಹಣ ಸಾಕೆಂದು ಕೊಂಡೆ.

ಹೊರಡುವ ಮುನ್ನ ಇಲ್ಲಿಯ ಇಂಗ್ಲಿಷ್ ದಲ್ಲಾಳಿಗಳ (Factors) ವಿಷಯ ಹೇಳಬೇಕೆನಿಸುತ್ತದೆ. ಇವರು ತಮ್ಮ ಸೇವೆಗೆ ಸ್ಥಳದ ಜನರನ್ನು ನೇಮಿಸಿಕೊಂಡಿದ್ದಾರೆ. ಈ ಸ್ಥಳದ ಜನ ನಂಬಿಕಸ್ತರಾಗಿ ಹೇಳಿದ ಕೆಲಸ ಮಾಡಿಕೊಂಡು ಹೋಗುತ್ತಾರೆ. ಕೆಲವು ದಳ್ಳಾಳಿಗಳ ಬಳಿ ನೂರಕ್ಕೂ ಹೆಚ್ಚು ಸೇವಕರಿದ್ದಾರೆ. ಇವರಿಗೆಲ್ಲ ಸಂಬಳ ಉಂಟು. ತಿಂಗಳಿಗೆ ಒಬ್ಬೊಬ್ಬನಿಗೆ ಆತ್ತ ಪೀಸೆಸ್ (Pieces) ಸಂಬಳ. ಸಂಜೆಯಾಯಿತೆಂದರೆ ಎಲ್ಲರೂ ಒಟ್ಟಿಗೆ ಬಂದು ಯಜಮಾನರಾದ ದಲ್ಲಾಳಿಗಳು ಗೌರ್ನರ್, ಮತ್ತು

ಸೇನಾನಾಯಕರುಗಳಿಗೆ ನಮಸ್ಕಾರ ಹಾಕಿ ಹೋಗುತ್ತಾರೆ.೧ ಗೌರ್ನರ್ ಇರುವಕೋಟೆಯಲ್ಲಿ ಇವರಿಗೆ ಒಂದೊಂದು ಕೆಲಸ. ಕೆಲವರು ಪಂಜು ಹಿಡಿಯುತ್ತಾರೆ. ಕೆಲವರು ಬುರುಡೆ ಮದ್ದಲೆ (Kettle drums) ಭಾರಿಸುತ್ತಾರೆ. ಕೆಲವರು ತುತ್ತೂರಿ ಊದುತ್ತಾರೆ. ಕೆಲವರು ಗುರಾಣಿ ಭರ್ಜಿಗಳನ್ನು ಹಿಡಿದು ಗಸ್ತು ತಿರುಗುತ್ತಾರೆ. ಗೌರ್ನರನ ಅರಮನೆಯ ಮೇಲೆ ದೊಡ್ಡ ದೀಪವನ್ನು ಹಚ್ಚಿರುತ್ತಾರೆ. ನೋಡಲು ಇವೆಲ್ಲಾ ಬಹು ಅದ್ದೂರಿಯಾಗಿರುತ್ತವೆ. ಆದರೆ ಇವೆಲ್ಲಾ ಬೇಕೆ? ತುಂಬಾ ಆಯಿತೆಂದು ನನ್ನ ಭಾವನೆ.

ನನ್ನ ಪ್ರಯಾಣಕ್ಕೆ ಎಂಟು ನಾಣ್ಯಗಳಿಗೆ ( Eight pieces ) ಒಂದು ಕುದುರೆಯನ್ನು ಕೊಂಡೆ. ನಾಲ್ಕು ನಾಣ್ಯಗಳಿಗೆ ನನ್ನ ಚೀನೀ ಮತ್ತು ಜೆಂಟೈಲ್ ಸೇವಕರಿಗೆ ಒಂದು ಎತ್ತು ಕೊಂಡೆ. ಜೆಂಟೈಲ್ ಸೇವಕನೊಬ್ಬನಿಗೆ ಕೊಂಚ ಪೋರ್ಚುಗೀಸ್ ಭಾಷೆ ಬರುತ್ತಿತ್ತು. ಒಬ್ಬ ಬಡ ಪೋರ್ಚುಗೀಸ್ ನನ್ನೊಡನೆ ಬಂದ. ಮಿಡ್ ಸಮ್ಮರ್ ದಿನ (ಜೂನ್ ೨೪) ಮದ್ರಾಸ್ (Madras) ನಿಂದ ಹೊರಟೆವು. ದೇವರ ದಯೆಯಿಂದ ೨೪ ದಿನಗಳ ಈ ಪ್ರಯಾಣದಲ್ಲಿ ಯಾವ ಅನಾನುಕೂಲಗಳೂ ಆಗಲಿಲ್ಲ. ಇಲ್ಲಿಯ ಪ್ರವಾಸಿ ಗೃಹಗಳನ್ನು (Chaurils Choultry = ಛತ್ರ) ಎಂದು ಕರೆಯುತ್ತಾರೆ. ಇವು ಎಲ್ಲಾ ಒಂದೇ ಬಗೆಯಿಲ್ಲ. ಆದರೆ ಇವಕ್ಕೆ ಬಾಗಿಲೇ ಇಲ್ಲ. ಯಾರು ಬೇಕಾದರೂ ಹೋಗಬಹುದು. ಆದರೂ ನಾವು ಎಲ್ಲಾ ಕಡೆ ಸುಖವಾಗಿ ಆರಾಮವಾಗಿ ತಂಗಿದೆವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಹ ನಮಗೆ ಯಾರಿಂದಲೂ ಯಾವ ತೊಂದರೆಯೂ ಆಗಲಿಲ್ಲ. ಇದು ಕ್ಯಾಥೊಲಿಕರಿರುವ ಕಡೆ (ಯೂರೋಪಿನ ದೇಶಗಳಲ್ಲಿ) ತೀರ ಅಸಂಭವ. ನನ್ನ ಪೋರ್ಚುಗೀಸನ ಬಳಿ ನೀರಿಗೆ ಒಂದು ಚರ್ಮದ ಚೀಲ ಇತ್ತು. ಇವನ್ನು ಗೋಲ್ಕೊಂಡಾದಲ್ಲಿ ಮಾಡುತ್ತಾರೆ. ನಮ್ಮ ಕಡೆಯ ಚಳಿಯಲ್ಲೂ ಇಲ್ಲಿಯ ಬಿಸಿಲಿನಲ್ಲೂ ಇವು ತುಂಬಾ ಉಪಯೋಗವಾಗುತ್ತವೆ. ಏಕೆಂದರೆ ಎರಡು ಮೂರು ಗಂಟೆಯೊಳಗೆ ಇದರಲ್ಲಿ ಹಾಕಿದ ನೀರು ತಣ್ಣಗಾಗಿರುತ್ತದೆ. ನಾನು ಪ್ರತಿ ದಿನ ಇದರಲ್ಲಿ ಹೊಸ ನೀರು ಹಾಕಿಕೊಳ್ಳುತ್ತಿದ್ದೆ. ಕುಡಿಯಲು ನನಗೆ ಬೇರೆ ಪಾನೀಯವೇ ಬೇಕಿರಲಿಲ್ಲ. ಆಮೇಲೆ ನನ್ನ ಸ್ವಂತಕ್ಕೆ ಒಂದು ಚೀಲ ಕೊಂಡುಕೊಂಡು ಬಹಳ ದಿನ ಉಪಯೋಗಿಸುತ್ತಿದ್ದೆ. ಸೂರತ್ತಿಗೆ ಹೋದಾಗ ಅದನ್ನು ಮನಿಲಾದ ಇಂಡಿಯನ್ ಒಬ್ಬನಿಗೆ ಕೊಟ್ಟೆ. ಯೂರೋಪಿನಲ್ಲಿ ಇವನ್ನು ಉಪಯೋಗಿಸಿ ಮಂಜುಗಡ್ಡೆಗಾಗಿ ಖರ್ಚುಮಾಡುವುದನ್ನು ಉಳಿಸಬಹುದು.

ಊಟ ಅಷ್ಟೇನೂ ಅನುಕೂಲವಾಗಿರುತ್ತಿರಲಿಲ್ಲ. ಹಾಲು, ಹಾಲೊಡಕು (Whey), ಮೊಸರು ಈರುಳ್ಳಿಗಳಲ್ಲದೆ ಬೇರೆ ಯಾವುದೂ ಸಿಕ್ಕುತ್ತಿರಲಿಲ್ಲ. ಇವು ಹೇರಳವಾಗಿ

---

೧ ಈ ಗೌರ್ನರ್‌ನ ಹೆಸರು ಜಾರ್ಜ್ ಫಾಕ್ಸ್‌ಕ್ರಾಫ್ಟ್ (George Foxcroft) ಎಂದು. ಈತ ಇಂಗ್ಲೆಂಡಿಗೆ ಹಿಂದಿರುಗಿದ್ದು ೧೬೭೦ನೆಯ ಜನವರಿಯಲ್ಲಿ. ಇವನ ನಂತರ ಬಂದವನೇ ಅಬೆ ಕಾರ್ ತನ್ನ ಪ್ರವಾಸ ಕಥನದಲ್ಲಿ ಪ್ರಸ್ತಾಪಿಸಿರುವುದು.

ಎಲ್ಲೆಲ್ಲಿಯೂ ಸಿಕ್ಕುತ್ತಿದ್ದುವು. ಬೆಟ್ಟ ಗುಡ್ಡ ಪ್ರದೇಶಗಳಲ್ಲಿಯೂ ಇವಕ್ಕೆ ಕೊರತೆ ಇರಲಿಲ್ಲ. ಏಕೆಂದರೆ ದನಕರುಗಳು ಹೇರಳವಾಗಿವೆ. ದಾರಿಯಲ್ಲಿ ಸಿಕ್ಕುವ ಒಂದು ಗುಡಿಸಿಲಿನ ಮುಂದೆ ನಿಂತು ಕೂಗಿದರೆ ಸಾಕು, ಗೌಳಿಗರು (Shepherds) ಹೊರಬಂದು ಒಂದು ಗಡಿಗೆ ತುಂಬಾ ತಂದುಕೊಡುತ್ತಿದ್ದರು. ನಾವು ನಾಲ್ಕು ಜನ ಹೊಟ್ಟೆ ತುಂಬ ಕುಡಿದು ತೇಗುತ್ತಿದ್ದೆವು. ಇಷ್ಟು ಹಾಲಿಗೆ ಕೇವಲ ಅರ್ಧ ಪೆನ್ನಿ!

ನನ್ನೊಡನೆ ಇದ್ದ ಜೆಂಟೈಲನ ವಿಷಯು ವಿಚಿತ್ರವಾಗಿತ್ತು. ಅತನದೇ ಎತ್ತು. ಆತ ತನ್ನ ಅಡಿಗೆ ತಾನೇ ಮಾಡಿಕೊಳ್ಳುತ್ತಿದ್ದ. ಮಣ್ಣಿನ ಅಡಿಗೆ ಪಾತ್ರೆಯನ್ನು ಬಟ್ಟೆಯಲ್ಲಿ ಸುತ್ತಿ ಒಂದು ಚೀಲದಲ್ಲಿ ಹಾಕಿಕೊಳ್ಳುತ್ತಿದ್ದ. ಒಂದು ಸಲ ನನ್ನವನು ಅವನ ಚೀಲ ಮುಟ್ಟಿಬಿಟ್ಟ. ಇದನ್ನು ಕಂಡ ಆ ಜೆಂಟೈಲ್ ಹುಲಿಯಂತೆ ಅಬ್ಬರಿಸಿ ನನ್ನ ಪಾತ್ರೆಗಳು ಮುಟ್ಟಾದುವು ಎಂದು ಅರಚಿದ. ಏನೇ ಹೇಳಿದರೂ ಅವನಿಗೆ ಸಮಾಧಾನವಾಗಲಿಲ್ಲ. ಚೀಲದೊಳಗಿಂದ ಪಾತ್ರೆ ತೆಗೆದು ಕಲ್ಲಿನ ಮೇಲೆ ಕುಕ್ಕಿದ. ನಾನು ಬೇರೊಂದು ಪಾತ್ರೆ ತೆಗೆದುಕೊಟ್ಟೆ. ಅವನ ಮೂಢನಂಬಿಕೆ ಸರಿಯಲ್ಲವೆಂದು. ನಾನು ಎಷ್ಟೋ ಹೇಳಿದೆ. ಆದರೆ ಈ ಜನ ತಮ್ಮ ಕಂದಾಚಾರದ ಆಚರಣೆಗಳಲ್ಲಿ ಕಂಚಿಗಿಂತ ಕಠಿಣ. ಈ ಜೆಂಟೈಲ ಇನ್ನೊಬ್ಬರು ಮುಟ್ಟಿದ್ದನ್ನು ತಿನ್ನುತ್ತಿರಲಿಲ್ಲ. ನಾನು ಮುಟ್ಟಿದ ಪಾತ್ರೆಯಿಂದ ನೀರು ಕುಡಿಯುತ್ತಿರಲಿಲ್ಲ. ಜೆಂಟೈಲರಲ್ಲಿ ಪೆರಿಯರೆಂಬ (Pariane) ಜನ ಇದ್ದಾರೆ. ಇವರನ್ನು ಬೇರೆಯವರು ತೀರ ನಿಕೃಷ್ಟವಾಗಿ ಕಾಣುತ್ತಾರೆ. ದಾರಿಯಲ್ಲಿ ಬೇರೆಯವರು ಎದುರಿಗೆ ಬಂದರೆ ಪಕ್ಕಕ್ಕೆ ನಿಂತು ದಾರಿ ಬಿಡುತ್ತಾರೆ. ಪಟ್ಟಣಗಳಲ್ಲಿ ತಮಗಿಂತ ಮೇಲ್ಜಾತಿಯವರ ಮನೆ ಬಾಗಲಿಗೆ ಹೋಗುವುದಿಲ್ಲ. ಬೀದಿಯಲ್ಲಿ ಹೋಗುವಾಗ ಬೇರೆಯವರನ್ನು ಕಂಡರೆ ಓಡಿಹೋಗುತ್ತಾರೆ ಅಥವಾ ಅಡಗಿಕೊಳ್ಳುತ್ತಾರೆ. ಎಲ್ಲರೂ ಇವರನ್ನು ತೀರಾ ಕೀಳಾಗಿ ಕಾಣುತ್ತಾರೆ. ಕುಷ್ಟರೋಗ ಮುಂತಾದ ಅಂಟು ಜಾಡ್ಯ ಗಳಿರುವವರನ್ನು ಹೇಗೆ ಕಾಣುತ್ತಾರೋ ಹಾಗೆ ಇವರನ್ನೂ ಕಾಣುತ್ತಾರೆ. ಇವರು ಒಮ್ಮೆ ಬಹು ಉನ್ನತ ಜನಾಂಗವಾಗಿದ್ದರೆಂದೂ, ಇವರು ಮಾಡಿದ ಒಂದು ಘಾತುಕತನ ದಿಂದಾಗಿ ಇವರನ್ನು ಜಾತಿಯಿಂದ ಹೊರಗೆ ಹಾಕಿದರೆಂದೂ ಜನ ಹೇಳುವುದನ್ನು ಕೇಳಿದ್ದೇನೆ. ಹೀಗಾಗಿ ಇವರನ್ನು ಯಾವ ಸೇವಾ ವೃತ್ತಿಗೂ ನೇಮಿಸಿಕೊಳ್ಳುವುದಿಲ್ಲ. ಈ ಜನರೇನಾದರೂ ಆಕಸ್ಮಾತ್ ಮನೆಯೊಳಕ್ಕೆ ಬಂದುಬಿಟ್ಟರೆ ಇಡೀ ಮನೆಯನ್ನೇ ಕೆಡವಿಹಾಕುತ್ತಾರೆ. ಇಡೀ ಪ್ರಪಂಚದಲ್ಲೇ ಇವರಷ್ಟು ದಲಿತರಾದ ಜನ ಬೇರೊಬ್ಬರಿಲ್ಲ. ಇವರಿಗಿಂತ ನಮ್ಮ ನಾಯಿ ನರಿ ಎಷ್ಟೋ ವಾಸಿ.

ದಾರಿಯ ಹೊಲ ಗದ್ದೆಗಳಲ್ಲಿ ದನವೋ ದನ. ಆಡು ಕುರಿಗಳಲ್ಲಿ ಎರಡು ಬಗೆ. ಒಂದು ಬಗೆ, ನಮ್ಮ ಸ್ಪೈಯ್ನ್ ಆಡು ಕುರಿಗಳಂತಿದ್ದುವು. ಇನ್ನೊಂದು ಬಗೆ, ನಮ್ಮವ ಕ್ಕಿಂತ ಭಾರಿಯಾಗಿದ್ದುವು. ಇಲ್ಲಿ ಕಾಣುವ ಕುರಿಗಳನ್ನು ಬೇರೆ ಕಡೆಯೂ ಕಾಣಬಹುದು. ಇವನ್ನು ನಾವು ಸಾಮಾನ್ಯವಾಗಿ ಫೈವ್ ಕ್ವಾರ್ಟರ್ಸ್ ( five quarters) ಎಂದು

ಕರೆಯುತ್ತೇವೆ. ಆಡುಗಳು ನಮ್ಮ ಆಡುಗಳಿಗಿಂತ ಭಾರಿ. ಕುರಿಗಳ ಕಂಠದಲ್ಲಿ ಕಿವಿಗಳಿಗಿಂತ ಉದ್ದವಾದ ಎರಡೆರಡು ಕೊರಳುಮೊಲೆಗಳು (dugs) ಇದ್ದುವು. ಈಜಿಪ್ಟಿನವರು ಹೆಣ್ಣುಗುರಿ ಹಾಗೂ ಹಸುಗಳನ್ನು ಉಣ್ಣೆಗಾಗಿ ಮತ್ತು ಹಾಲಿಗಾಗಿ ಸಾಕಿದಂತೆ ಇಲ್ಲಿಯುವವರು ಕುರಿ ಆಡುಗಳನ್ನು ಸಾಕುತ್ತಾರೆ.

ಅವೇ ಬೆಳೆದ ತಾಳೆ ಮರಗಳ ತೋಪುಗಳೇ ಎಲ್ಲೆಲ್ಲೂ. ಮನಿಲಾದಲ್ಲಿ ಇವುಗಳನ್ನು ಯಾವುದಕ್ಕೂ ಉಪಯೋಗಿಸುವುದಿಲ್ಲ. ಆದರೆ ಇಲ್ಲಿ ಇವು ಭೂಮಾತೆ ನೀಡಿದ ಸಂಪತ್ತೇ ಸರಿ. ಇವುಗಳಿಂದ ಹೆಂಡ ತೆಗೆದು ಭಾರಿ ಹಣ ಗಳಿಸುತ್ತಾರೆ. ಇದರ ಹಣ್ಣು ಮಂಜುಗಡ್ಡೆಯಷ್ಟು ಬೆಳ್ಳಗೆ ತಂಪಾಗಿರುತ್ತದೆ. ಪ್ರಪಂಚದಲ್ಲಿಯೇ ಇದಕ್ಕಿಂತ ತಣ್ಣಗಿರುವುದು ಯಾವುದೂ ಇಲ್ಲ. ಹುಣಿಸೆಮರಗಳೂ ಹೇರಳವಾಗಿವೆ. ಎಷ್ಟೋ ದೂರ ನಾವು ಇವುಗಳ ನೆರಳಿನಲ್ಲಿಯೇ ದಾರಿಸಾಗಿಸಿದ್ದೇವೆ. ನಾನು ಸವಾರಿಮಾಡುತ್ತಲೇ ಇದರ ಹಣ್ಣು ಕಿತ್ತು ಬಹು ಆಸೆಯಿಂದ ತಿನ್ನುತ್ತಿದ್ದೆ. ದಾರಿಯುದ್ದಕ್ಕೂ ದೊಡ್ಡ ದೊಡ್ಡ ಕೊಳಗಳು. ಕಲ್ಲು ಕಟ್ಟಿದ ಕೊಳಗಳು ಮಳೆಗಾಲದಲ್ಲಿ ತುಂಬಿ ತೇಪಾಡುತ್ತವೆ. ಬೇಸಿಗೆಯಲ್ಲೆಲ್ಲಾ ನೀರು ಇರುತ್ತದೆ. ಪ್ರಯಾಣಿಕರು ಈ ಕಲ್ಯಾಣಿಗಳ ಬಳಿ ತಂಗಿ ಕುದುರೆ ಎತ್ತುಗಳಿಗೆ ನೀರು ಕುಡಿಸಿಕೊಂಡು ಮುಂದೆ ಹೋಗುತ್ತಾರೆ. ಪ್ರಯಾಣಿಕರ ಸೌಕರ್ಯಕ್ಕೆಂದೇ ಶ್ರೀಮಂತರು ಇವುಗಳನ್ನು ಕಟ್ಟಿಸಿದರೆಂದು ಜನ ಹೇಳಿದರು. ಹುಣಿಸೆಮರಗಳನ್ನು ಸಾಲುಸಾಲಾಗಿ ನೆಟ್ಟು ಬೆಳೆಸುತ್ತಾರೆ. ಇವುಗಳ ನೆರಳಿನಲ್ಲಿ ಜನರು ಆರಾಮವಾಗಿ ಕುಳಿತು ಬಲೆ ಗಿಲೆ ನೆಯ್ಯುತ್ತಾರೆ.

ಹೋದ ಹೋದಂತೆಲ್ಲ ನಮಗೆ ದೊಡ್ಡ ದೊಡ್ಡ ಪಟ್ಟಣಗಳು ಸಿಕ್ಕಿದುವು. ಅವುಗಳ ತುಂಬ ಜನ, ದನ, ಕುದುರೆ, ಆನೆ ಮತ್ತು ಒಂಟೆಗಳು. ಒಂಟೆಗಳೇ ಇಲ್ಲಿ ಸಾಮಾನು ಹೊರುವ ಪ್ರಾಣಿಗಳು. ಮಹಮ್ಮದೀಯರು ಬಹು ಅದ್ದೂರಿಯಿಂದ ಪ್ರಯಾಣ ಮಾಡುತ್ತಾರೆ. ಪಟ್ಟಣಗಳ ಗೌರ್ನರುಗಳು ರಾಜವೈಭವದಿಂದ ಹೋಗುತ್ತಾರೆ. ಇವರು ನನ್ನನ್ನು ಯಾವಾಗಲೂ ಬಹು ವಿನಯದಿಂದ ಕಾಣುತ್ತಿದ್ದರು. ಒಬ್ಬನೊಡನೆ ಮಾತಾಡುವ ಅವಕಾಶವೂ ಸಿಕ್ಕಿತ್ತು. ನನ್ನ ಹ್ಯಾಟ್ ತೆಗೆದಾಗ ಆತ ನನ್ನನ್ನು ತನ್ನ ಬಳಿ ಕುಳ್ಳಿರಿಸಿಕೊಳ್ಳುವವರೆಗೂ ಬಿಡುತ್ತಿರಲಿಲ್ಲ. ಕೆಲವು ಕಡೆಗಳಲ್ಲಿ ನನಗೆ ಪರ್ಷಿಯನರೂ ಆರ್ಮೀನಿಯನರೂ ಸಿಕ್ಕುತ್ತಿದ್ದರು. ಇವರು ತುಂಬ ಒಳ್ಳೆಯ ಜನ; ನಡೆ ನುಡಿ ತುಂಬ ಚೆನ್ನ. ಎತ್ತರವಾದ ನಿಲುವು. ಅಂದ ಚಂದದ ಮೈಕಟ್ಟು ಹಾಗೂ ಬಹು ವಿನಯ. ಪ್ರಪಂಚದಲ್ಲೇ ಅತ್ಯುತ್ತಮವಾದ ಕುದುರೆಗಳು ಇವರಲ್ಲಿವೆ.

ಜುಲೈ ಮಧ್ಯಭಾಗ. ಒಂದು ಪಟ್ಟಣದ ಬಳಿ ತಿಳಿನೀರಿನ ಹಳ್ಳವೊಂದು ಹರಿಯುತ್ತಿತ್ತು. ಅಷ್ಟು ತಿಳಿಯಾದ ನೀರನ್ನು ನೋಡಿ ನನಗೆ ಆಶ್ಚರ್ಯವಾಯಿತು. ಕುಡಿದದ್ದೂ ಕುಡಿದದ್ದೆ. ಬರೀ ಹೊಟ್ಟೆಯಲ್ಲಿ ಕುಡಿದ ನೀರಿನಿಂದ ನನಗೆ ತೊಂದರೆ ಆಯಿತು. ಒಂದು ದಿನ ನಿಂತು ಮುಂದಿನ ದಾರಿ ಸಾಗಿಸಿದೆವು. ಮಾರನೆಯ ದಿನ ನಮ್ಮ ಪೋರ್ಚು

ಗೀಸನನ್ನು ಚೇಳು ಕಚ್ಚಿತು. ಸತ್ತೇಹೋದನೆಂದು ಭಾವಿಸಿದೆ. ಸಧ್ಯ ಸಾಯಲಿಲ್ಲ! ಇದರಿಂದಾಗಿ ನಮ್ಮ ಪ್ರಯಾಣ ಒಂದು ದಿನ ತಡವಾಯಿತು. ಇನ್ನೊಂದು ದಿನ ಆಳವಾದ ಮತ್ತು ಅಗಲವಾದ ಒಂದು ನದಿಯ ಬಳಿಗೆ ಬಂದೆವು. ನನ್ನ ಸಣ್ಣ ಕುದುರೆ ದಾಟುವಾಗ ನೀರು ಎದೆಮಟ್ಟಕ್ಕೆ ಬಂದಿತು. ನೀರು ಜೋರಾಗಿ ಹರಿಯುತ್ತಿತ್ತು. ನನ ಪೋರ್ಚುಗೀಸ ಅಯ್ಯೋ ಕೊಚ್ಚಿಹೋದೆ ಎಂದು ಕಿರುಚಿಕೊಂಡ. ನಾವೆಲ್ಲಾ ಹೋಗಿ ಅದನ್ನು ತಪ್ಪಿಸಿದೆವು. ಇನ್ನೊಂದು ನದಿಯ ಬಳಿ ನನ್ನ ಕಾಗದ ಪತ್ರಗಳನ್ನೆಲ್ಲಾ ಸೇವಕನಿಗೆ ಒಪ್ಪಿಸಿ ಜೋಪಾನ ಎಂದು ಹೇಳಿದೆ. ಅಷ್ಟೇನೂ ಆಳವಿಲ್ಲದ ಆ ನದಿ ದಾಟುವಾಗ ಆತ ಮುಗ್ಗುರಿಸಿ ನನ್ನ ಕಾಗದ ಪತ್ರಗಳನ್ನೆಲ್ಲಾ ನೀರಿಗೆ ಬೀಳಿಸಿಬಿಟ್ಟ. ನೆನೆದ ಅವನ್ನು ಆಮೇಲೆ ಬಿಸಿಲಿನಲ್ಲಿ ಹಾಕಿ ಒಣಗಿಸಿದೆ. ಬಹು ಸೊಗಸಾದ ಚೀನೀ ಕಾಗದದ ಪುಸ್ತಕಗಳು ಹೆಚ್ಚಾಗಿ ನೆಂದಿದ್ದುವು. ಇಲ್ಲಿ ಕೆಲವು ಗಂಟೆಗಳನ್ನು ವ್ಯರ್ಥಮಾಡಿದೆ. ಮುಂದೆ ನಮಗೆ ಒಂದು ಕೆರೆ ಸಿಕ್ಕಿತು. ನನ್ನ ಜೆಂಟೈಲ್ ಸೇವಕ ಇದನ್ನು ದಾಟಿ ಹೋದರೆ ದಾರಿ ಹತ್ತಿರ ಎಂದ. ಹಾಗೆ ಮಾಡುವಾಗ ನನ್ನ ಕುದುರೆ ಮುಗ್ಗುರಿಸಿತು. ನಾನೂ ಬಿದ್ದೆ. ಕಾಗದ ಪತ್ರಗಳ ಚೀಲವೂ ನೀರಿಗೆ ಬಿದ್ದಿತು. ಎಲ್ಲಾ ಹೋಯಿತು ಎಂದು ತಿಳಿದು ಕೊಂಡಿದ್ದೆ. ಸಧ್ಯ ಮತ್ತೆ ಸಿಕ್ಕಿತು.

ದಾರಿಯಲ್ಲಿ ಒಬ್ಬ ಯುವಕ ಕುದುರೆಯ ಮೇಲೆ ಕುಳಿತು ಭಾರಿ ಪರಿವಾರ ಸಮೇತ ಸಾಗುತ್ತಿದ್ದ. ಮದುವೆಯಾಗಲು ರಾಜನ ಆಸ್ಥಾನಕ್ಕೆ ಹೋಗುತ್ತಿದ್ದ. ಅವನ ಪರಿವಾರ ದಲ್ಲಿ ಭಾರಿ ಆನೆಯೊಂದಿತ್ತು. ನಾವು ಅದರ ಬಳಿಗೆ ಹೋದಾಗ ಅದರ ಮಾವುತ ಏನೋ ಹೇಳಿದ. ಅದು ನಾಲ್ಕು ಕಾಲುಗಳ ಮೇಲೆ ಕುಳಿತು ನಮಸ್ಕಾರ ಮಾಡಿತು.

ಇದಾದ ಮೇಲೆ ನಮಗೆ ಭಾರಿ ನದಿಯೊಂದು ಸಿಕ್ಕಿತು. ಅಲ್ಲಿ ಎರಡು ಹರಿಗೋಲು ಗಳು. ದನದ ಚರ್ಮ ಹೊದಿಸಿದ ಆ ಬುಟ್ಟಿಗಳಲ್ಲಿ ಕುಳಿತೆವು, ನಮ್ಮ ಸಾಮಾನುಗಳ ಸಮೇತ. ನಾವಲ್ಲದೆ ಇನ್ನೂ ಕೆಲವು ಪ್ರಯಾಣಿಕರು ಸೇರಿ ೧೪ ಜನ ಇದ್ದೆವು. ನಮ್ಮ ಕುದುರೆ ಎತ್ತುಗಳ ಹಗ್ಗ ಹಿಡಿದೆವು. ಅವು ಈಜಿಕೊಂಡು ಬಂದುವು. ನದಿಯ ಮಧ್ಯೆ ಬಂದಾಗ ಆ ನೆರೆಯಲ್ಲಿ ನಮ್ಮ ಗತಿ ಮುಗಿಯಿತು ಎಂದುಕೊಂಡೆವು. ಸಧ್ಯ ದಡ ಮುಟ್ಟಿದೆವು. ಅವನಿಗೆ ಕೊಡಬೇಕಾದ ಹಣ ಕೊಟ್ಟೆವು. ಹರಿಗೋಲಿನವ ಹರಿಗೋಲನ್ನು ನೀರಿನಿಂದ ಈಚೆ ಎಳೆದು ತಲೆಯ ಮೇಲೆ ದಬ್ಬಾಕಿಕೊಂಡು ಹೊಳೆ ದಾಟಲು ಜನ ಕಾಯುತ್ತಿದ್ದ ಬೇರೆ ಕಡೆಗೆ ಹೋದ, ಅವರನ್ನು ಸಾಗಿಸಲು.

ಗೋಲ್ಕೊಂಡಾ ಇನ್ನೂ ನಾಲ್ಕು ಹರಿದಾರಿ ಇದೆ ಎನ್ನುವಾಗ ಒಂದು ದೊಡ್ಡ ಪಟ್ಟಣ ಸಿಕ್ಕಿತು. ಇದನ್ನು ರಾಣಿಮಹಲ್ (queen's palace) ಎಂದು ಕರೆಯುತ್ತಾರೆ. ಹಿಂದೊಮ್ಮೆ ಆಳುತ್ತಿದ್ದ ರಾಜನ ಮಡದಿಯೋ ಅಜ್ಜಿಯೋ ಕಟ್ಟಿಸಿದ ಈ ಮಹಲ್‌ನಿಂದಲೇ ಈ ಊರಿಗೆ ಆ ಹೆಸರು ಬಂದಿದೆ.[೧] ನಾವು ಒಳಗೆ ಹೋಗಲಾಗ

---

೧ ತವರ್ನ್ನೈ (Tavernier) ಇದನ್ನು ತನೆರಾ (Tenasa = Sarurnagar) ಎಂದೂ ಕರೆದಿದ್ದಾನೆ.

ಲಿಲ್ಲ. ಆದರೆ ಹೊರಗಡೆಯಿಂದಲೇ ನೋಡಿದೆವು. ಇದು ಯೂರೋಪಿನ ಯಾವ ಕಟ್ಟಡವನ್ನೂ ಮೀರಿಸುವಷ್ಟು ಭವ್ಯವಾಗಿತ್ತು. ಇದರ ಮುಂದಿರುವ ಚೌಕಾಕಾರದ ಜಾಗ ಸ್ಪೈನ್ನಿನ ಯಾವುದಕ್ಕೂ ಕಡಮೆಯಿರಲಿಲ್ಲ. ಇದಲ್ಲದೆ ಕಲ್ಲಿನಿಂದ ಕಟ್ಟಿಸಿದ ಒಂದು ಮಸೀದಿ, ಆಳವಾದ ದೊಡ್ಡ ಕೊಳ ಇವೆಲ್ಲಾ ಇದ್ದುವು. ನಾವೆಲ್ಲಾ ಕೊಳದಲ್ಲಿ ಇಳಿದು ನೀರು ಕುಡಿದೆವು. ಇವಕ್ಕೆಲ್ಲಾ ಮಿಲಿಯ ಗಟ್ಟಲೆ ಹಣ ಖರ್ಚಾಗಿರಬೇಕು. ಮಸೀದಿ ಯೊಳಕ್ಕೆ ಹೋಗಬೇಕೆನ್ನುವಾಗ ಒಬ್ಬ ವ ಊರ ಬಂದು ಗದರಿಸಿ ಕಳುಹಿಸಿಬಿಟ್ಟ.

ಗೋಲೆಕ್ಕೊಂಡ ಸಮೀಪಿಸುತ್ತಿದ್ದಂತೆ ಹೆಂಡ ಹೇರಿದ ಕುದುರೆ, ಕತ್ತೆ, ಹೇಸರಗತ್ತೆ ಗಳ ತಂಡಗಳನ್ನೇ ಕಂಡೆವು. ಈ ವಿಷಯವನ್ನು ನನಗೆ ಪೋರ್ಚುಗೀಸರು ಮೊದಲೇ ಹೇಳಿದ್ದರು. ಆದಷ್ಟು ಜಾಗ್ರತೆ ಸಿಹಿ ಹೆಂಡವನ್ನು ಹುಳಿಯಾಗದ ಮುನ್ನ ರಾಜಧಾನಿಗೆ ತಲಪಿಸಬೇಕೆಂದು ಆ ಪ್ರಾಣಿಗಳನ್ನು ಚಾವಟಿಯಿಂದ ಬಾರಿಸಿ ಓಡಿಸಿಕೊಂಡು ಹೋಗು ತ್ತಿದ್ದರು. ರಾಜನ ಆಸ್ಥಾನದಲ್ಲಿ ಇದನ್ನು ಶಿಶ್ತಿಗಟ್ಟಲೆ ಕುಡಿಯುತ್ತಾರೆ. ಮಹಮ್ಮದೀಯ ಹೆಂಗಸರೂ ಇದನ್ನು ಕುಡಿದದ್ದೂ ಕುಡಿದದ್ದೆ. ಈ ಹೆಂಡ ಕುಡಿಯಲು ಬಹು ರುಚಿಗಿರು ತ್ತದೆ. ಇದನ್ನು ಮ್ಯಾಡ್ರಿಡ್‌ನಲ್ಲಿ ಮಾರಿದರೆ ಮೀಡ್ (Mead = ಹುಳಿಸಿದ ಜೇನ್ನೀರಿನ ಒಂದು ಮಾದಕ ದ್ರವ) ಅಥವಾ ಶರಬತ್‌ಗಳಿಗಿಂತ ಹೆಚ್ಚು ಬೆಲೆ ಸಿಕ್ಕುತ್ತದೆ. ರಾಜರಿಗೆ ಇದರಿಂದ ಭಾರಿ ಆದಾಯ ಉಂಟಂತೆ.

ವೇಳೆ ಮತ್ತು ಖರ್ಚು ಉಳಿಸಲು ನಾವು ಹೆಬ್ಬಾಗಿಲ ಮೂಲಕ ಊರನ್ನು ಪ್ರವೇಶಿಸುವ ಬದಲು ಎರಡು ಹರಿದಾರಿ ಸುತ್ತಿ ಹೋದೆವು. ಹೆಬ್ಬಾಗಿಲ ಮೂಲಕ ಹೋದರೆ ನಮ್ಮ ಶೋಧನೆ ಆಗಬೇಕಾಗುತ್ತದೆ. ಮತ್ತು ಸುಂಕ ಕೊಡಬೇಕಾಗುತ್ತದೆ. ಅಲ್ಲದೆ ಊರ ಕೊತ್ವಾಲನ ಅಪ್ಪಣೆ ಬೇಕಾಗುತ್ತದೆ. ಸುತ್ತಿಕೊಂಡು ಹೋದರೂ ಮೂರು ಕಡೆ ಸುಂಕದ ಕಟ್ಟೆಗಳು ಸಿಕ್ಕಿದುವು. ಅವರು ನಮ್ಮನ್ನು ಮಾತಾಡಿಸಲಿಲ್ಲ. ನಾಲ್ಕನೆಯ ಕಟ್ಟೆಗೆ ಬಂದಾಗ ಅವರು ಜೋರುಮಾಡಿ ಹೆದರಿಸಿದರು. ಅವರ ಕೈ ಬೆಚ್ಚಗೆ ಮಾಡಿದ ಕೂಡಲೇ ತೆಪ್ಪಗಾದರು. ಇನ್ನು ಅರ್ಧ ಹರಿದಾರಿ ದೂರ ಹೋದಾಗ ಕುದುರೆಗಳನ್ನು ಮಾರುತ್ತಿದ್ದ ವಿಶಾಲವಾದ ಚೌಕ ಸಿಕ್ಕಿತು. ಕುದುರೆಗಳ ಮೇಲೆ ಕುಳಿತು ಸವಾರಿ ಮಾಡಿ ಅವುಗಳು ಎಷ್ಟು ಚುರುಕು ಎಂದು ತೋರಿಸುತ್ತಿದ್ದರು. ಈ ಜಾತಿ ಕುದುರೆಗಳನ್ನು ಕೊಳ್ಳಲು ಭಾರಿ ಜನವೇ ಸೇರಿತ್ತು.

ಇಲ್ಲಿಂದ ಮುಂದೆ ಹೋದಾಗ ಒಂದು ದೊಡ್ಡ ನದಿ ಸಿಕ್ಕಿತು. ಇದರ ಬಳಿ ಭಾರಿ ಜನ ಸೇರಿದ್ದರು. ಕಾರಣ ಒಬ್ಬ ಚಿಕ್ಕ ಪ್ರಾಯದ ಹೆಂಗಸೊಬ್ಬಳ ಶವಸಂಸ್ಕಾರ. ಚಟ್ಟದ ಮೇಲೆ ಮಲಗಿಸಿದ್ದ ಶವದ ಮುಖ ಕಾಣಿಸುತ್ತಿತ್ತು. ಹೂವನ್ನು ಹಾಕಿದರು. ಪಕ್ಕದಲ್ಲಿ ಅರಿಸಿನ ಮುಂತಾದ ಬಣ್ಣಗಳನ್ನು ಮೈಗೆ ಬಳಿದುಕೊಂಡಿದ್ದ ಒಬ್ಬ (ಬಹುಶಃ ಸತ್ತವಳ ಗಂಡ) ಕುಳಿತು ಗೋಳೋ ಎಂದು ಅಳುತ್ತಿದ್ದ. ವಾದ್ಯ ಮತ್ತು ನರ್ತನ ನಡೆಯುತ್ತಿದ್ದುವು. ಬೇರೆ ಪುರಾತನ ಜನರು ( other ancient peoples )

ಮಗು ಹುಟ್ಟಿದಾಗ ಅಳುತ್ತಿದ್ದರು, ಸತ್ತಾಗ ನಗುತ್ತಿದ್ದರು. ಈಗ ಇಲ್ಲಿ ಸತ್ತವರಿಗೆ ಅಳುತ್ತಿದ್ದುದನ್ನು ಕಂಡೆವು.

ನಾವು ಮುಂದೆ ಸಾಗಿ ಒಬ್ಬ ಪೋರ್ಚುಗೀಸ್ ಪಾದ್ರಿ ಇದ್ದ ಮನೆಗೆ ಹೋದೆವು. ಆತ ನನ್ನನ್ನು ಪ್ರೀತಿಯಿಂದ ಕಂಡ. ಇಲ್ಲಿ ಕೊಂಚ ಹೊತ್ತು ವಿಶ್ರಾಂತಿ ಪಡೆದೆವು.

ಮಾರನೆಯ ದಿನ ನನಗೆ ಮ್ಯಾಡ್ರಿಡ್‌ನಲ್ಲಿ ಪರಿಚಯುವಾಗಿದ್ದವನೊಬ್ಬನ ಮನೆಗೆ ಹೋದೆ. ಈತ ವೈದ್ಯ. ರಾಜನ ಕೋಟೆ ಒಂದು ಹರಿದಾರಿ ದೂರದಲ್ಲಿದೆ. ಹೋಗುವ ದಾರಿ ವಿಶಾಲವಾಗಿತ್ತು. ಆದರೆ ದಾರಿಯ ಉದ್ದ ಅಗಲಕ್ಕೂ ಜನವೋ ಜನ. ಚೀನಾ ದಲ್ಲಿಯೂ ಇಷ್ಟೊಂದು ಜನ ಕಾಣಲಿಲ್ಲ. ಮಂಜಿನಷ್ಟು ಬೆಳ್ಳಗಿನ ಬಟ್ಟೆ ಧರಿಸಿದ್ದ ಈ ಜನ ಕುದುರೆ ಕಟ್ಟಿದ ರಥಗಳಲ್ಲಿ, ಎತ್ತಿನಗಾಡಿಗಳಲ್ಲಿ ಮತ್ತು ಹೇಸರಗತ್ತೆ ಗಾಡಿಗಳಲ್ಲಿ ಕುಳಿತು ಹೋಗುತ್ತಿದ್ದರು. ಪರ್ಷಿಯನರ ಮತ್ತು ಮೂರರ ಕುದುರೆಗಳಂತೂ ಬಹು ಸೊಗಸಾಗಿದ್ದುವು. ಅವರ ಪರಿವಾರವೂ ದೊಡ್ಡದಾಗಿತ್ತು. ಶ್ರೀಮಂತರಾದ ಕೆಲವರು ಅಂದ ಚಂದದ ಪಲ್ಲಕ್ಕಿಗಳಲ್ಲಿ ಸಾಗುತ್ತಿದ್ದರು. ಕೊಡೆಗಳ ಬದಲು ಬಣ್ಣ ಬಣ್ಣದ ದೊಡ್ಡ ಛತ್ರಿ (shields)ಗಳನ್ನು ಉಪಯೋಗಿಸುತ್ತಾರೆ. ಸೇವಕರು ಇವನ್ನು ಹೆಗಲಮೇಲೆ ಹೊತ್ತು ಬಿಸಿಲಾದಾಗ ತಮ್ಮ ಒಡೆಯರ ಮೇಲೆ ಎತ್ತಿ ಹಿಡಿಯುತ್ತಾರೆ. ನೊಣಗಳನ್ನು ಓಡಿಸಲು ನವಿಲುಗರಿಯ ಚಾಮರ ಉಪಯೋಗಿಸುತ್ತಾರೆ. ಇವನ್ನೆಲ್ಲಾ ನೋಡಿದಾಗ ಆಸ್ಥಾನದ ವೈಭವ ಎಷ್ಟೆಂಬುದು ಸ್ಪಷ್ಟವಾಯಿತು. ಆ ಆನೆಗಳನ್ನು ನೋಡಿ ನನಗಂತೂ ಭಾರಿ ಖುಷಿಯಾಯಿತು. ಒಳ್ಳೆಯ ಕುದುರೆಯನ್ನೇರಿಯೂ ಸವಾರಿ ಮಾಡಿದೆ.

ರಾಜನ ಅರಮನೆ ಇರುವ ಕೋಟೆ ಕಡೆಗೆ ಹೋಗುವಾಗ ಅರೆನಗ್ನ ಸನ್ಯಾಸಿಗಳ ತಂಡವನ್ನೇ ಕಂಡೆ. ಬೆಟ್ಟಗುಡ್ಡಗಳಲ್ಲಿರುವ ಇವರು ಕೆಲವು ವೇಳೆ ಪಟ್ಟಣಗಳಿಗೆ ಭಿಕ್ಷೆ ಗಾಗಿ ಬರುತ್ತಾರೆಂದು ನನ್ನೊಡನಿದ್ದ ಕರಿಯ ಹೇಳಿದ. ಹೆಂಗಸರೂ ನಾಚಿಕೆಯಿಲ್ಲದೆ ಇವರನ್ನು ಭಕ್ತಿಯಿಂದ ಕಾಣುತ್ತಿದ್ದರು.

ಕೋಟೆಯ ಹತ್ತಿರ ಹೋದಂತೆ ಭಾರಿ ಭಾರಿ ಸೌಧಗಳನ್ನೂ ಅವುಗಳ ಶಿಖರ ಗಳನ್ನೂ ಕಂಡೆ. ಶಿಖರವನ್ನು ಸೀಸ ( lead ) ಗಳಿಂದ ಮುಚ್ಚಿದ್ದರು. ಸೆಗೋವಿಯಾ ಅರಮನೆಯು (Palace of Segovia) ಇದರ ಮುಂದೆ ಏನೂ ಇಲ್ಲ. ಆ ದೇಶದಲ್ಲಿ ಅಂಥದೇನನ್ನೂ ನಾನು ಕಾಣಲಿಲ್ಲ. ಅದು ಮ್ಯಾಡ್ರಿಡ್‌ನಷ್ಟೇ ಇತ್ತು. ಕೋಟೆಯೊಳಕ್ಕೆ ಪ್ರವೇಶ ಸಿಗಲಿಲ್ಲ. ಹೊರಗಡೆಯಿಂದ ನೋಡುವಾಗ ಬಹು ಭವ್ಯವಾಗಿ ಕಾಣಿಸಿತು. ಕೋಟೆಯ ಗೋಡೆಗಳು ಭಾರಿ ಭದ್ರವಾಗಿದ್ದುವು. ಕೊತ್ತಳಗಳ ಮೇಲೆ ಫಿರಂಗಿಗಳನ್ನು ಏರಿಸಿದ್ದರು. ಅಗಳುಗಳು ಅಗಲವಾಗಿಯೂ ಆಳವಾಗಿಯೂ ಇದ್ದುವು.

ರಾಜನ ಅಂತಃಪುರದಲ್ಲಿ ೬೦೦ ಜನ ಉಪಪತ್ನಿಯರು (concubines) ಇದ್ದಾರೆಂದು ಹೇಳಿದರು. ಇವರ ಪೈಕಿ ನಾನಾಗಲೇ ಹೇಳಿದ ಸೇಂಟ್ ಥಾಮಸ್‌ನ ಪೋರ್ಚುಗೀಸ್ ಹೆಂಗಸೂ ಒಬ್ಬಳು.

ಗೋಲ್ಕೊಂಡಾ ರಾಜ ಈ ಪ್ರಾಪಂಚಿಕ ಆಮೋದ ವಿನೋದಗಳಲ್ಲಿ ತೊಡಗಿದ್ದಾನೆ. ರಾಜ್ಯದ ಆಡಳಿತವನ್ನು ನವಾಬನಿಗೆ ಬಿಟ್ಟುಬಿಟ್ಟಿದ್ದಾನೆ. ಇಂತಹ ವಿಷಯಗಳಲ್ಲಿ ಕಾಲ ಕಳೆಯುವವರ ಗತಿ ಏನಾಗುತ್ತದೆಂದು ಹೇಳಬೇಕಾಗಿಲ್ಲ. ಚೀನಾದಲ್ಲಿ ಇಂಥಾದ್ದು ನಡೆಯಲು ಬಿಡುವುದಿಲ್ಲ. ಹಾಗೇನಾದರೂ ಮಾಡಿದರೆ ಜನ ಅದನ್ನು ಖಂಡಿಸುತ್ತಾರ. ಎರಡು ವರ್ಷಗಳ ಹಿಂದೆ ರಾಜನ ಹಲ್ಲೊಂದು ಬಿದ್ದುಹೋಯಿತಂತೆ. ಅದನ್ನು ೬೦೦೦ ಡಕೆಟ್ ಕಾಣಿಕೆ ಸಮೇತ ಮಕ್ಕಾಕ್ಕೆ ಕಳುಹಿಸಿಕೊಟ್ಟರಂತೆ. ಈಗ ಇನ್ನೊಂದು ಹಲ್ಲು ಬಿತ್ತು. ಅದನ್ನೂ ೬೦೦೦ ಡಕೆಟ್ ಕಾಣಿಕೆ ಸಮೇತ ಅಲ್ಲಿಗೆ ಕಳುಹಿಸುತ್ತಾನಂತೆ. ತೊಂಬತ್ತು ವರ್ಷದ ಈ ಮುದಿ ರಾಜನಿಗೆ ಒಂದು ದೇವಾಲಯ ಕಟ್ಟಿಸಬೇಕೆಂದು ಆಸೆಯಾಯಿತಂತೆ. ಆದರೆ ಅದರ ಕೆಲಸ ಸಾಗುತ್ತಿರುವಾಗ ಅವನಿಗೊಂದು ಕನಸಾಯಿತು. ಆ ಕನಸಿನಲ್ಲಿ ಅದು ಮುಗಿದಾಗ ಅವನ ಮರಣ ಎಂದು ಹೇಳಿದಂತಾಯಿತು. ಆದ್ದರಿಂದ ಅದರ ಕೆಲಸ ಅರ್ಧಕ್ಕೇ ನಿಂತುಹೋಗಿದೆ.

ರಾಜನು ತನ್ನ ಸಿಪಾಯಿಗಳಿಗೆ ತಪ್ಪದೆ ಸಂಬಳ ಪಾವತಿ ಮಾಡುತ್ತಿದ್ದಾನೆ. ಪರ್ಷಿಯನರಿಗಂತೂ ಕೈತುಂಬ ಸಂಬಳ.

ಮೇಲೆ ಹೇಳಿದ ನವಾಬನ ದರ್ಬಾರು ಹೇಳತೀರದು. ರಾಜ್ಯದ ಆಡಳಿತವೆಲ್ಲ ಇವನ ಕೈಲಿದೆ.

ಈ ದೇಶದಲ್ಲಿ ಹೇರಳವಾಗಿ ಬೆಳ್ಳಿ ಸಿಕ್ಕುತ್ತದೆ. ಅದೂ ಚೊಕ್ಕ ಬೆಳ್ಳಿ. ಬೆಲೆಯಾದ ವಜ್ರಗಳೂ ಸಿಕ್ಕುತ್ತವೆ. ಕೆಲವು ಐವತ್ತು ಸಾವಿರ ಡಕೆಟ್‌ಗಳಿಗಿಂತಲೂ ಹೆಚ್ಚು ಬೆಲೆಯಾಗುತ್ತವೆಯಂತೆ.

ನಾನು ನನಗಾಗಿ ಕಾಯುತ್ತಿದ್ದ ಪೋರ್ಚುಗೀಸರನ್ನು ಕಂಡು ಮಾತಾಡಿಸಿದೆ. ಇವರಲ್ಲಿ ಬಹುಮಂದಿ ಹೊಟ್ಟೆಪಾಡಿಗಾಗಿ ರಾಜನ ಸೈನ್ಯ ಸೇರಿಕೊಂಡಿದ್ದಾರೆ. ಇವರು ನನ್ನನ್ನು ಡಾನ್ ಫಿಲಿಕ್ಸ್‌ನ ಮನೆಗೆ ಕರೆದೊಯ್ದರು. ಜನಸಾಮಾನ್ಯರ ಮನೆಯಂತಿತ್ತು ಅವನ ಮನೆ. ಇಪ್ಪತ್ತುನಾಲ್ಕು ವರ್ಷಗಳಾಗಿದ್ದುವು ನಾನು ಅವನನ್ನು ಕಂಡು. ಅವನು ತನ್ನ ಬಾಳಿನ ಕತೆ ಹೇಳಿದ. ಸಿಲೋನಿನಲ್ಲಿ ಡಚ್ಚರಿಗೆ ವೈದ್ಯನಾಗಿದ್ದ. ಅಲ್ಲಿಯೇ ಮದುವೆಯಾದ. ಹೆಂಡತಿಯನ್ನು ಕೊಲಂಬೋದಲ್ಲಿ ಬಿಟ್ಟು ಮದ್ರಾಸಿಗೆ ಹೋದ. ಅಲ್ಲಿ ಇಂಗ್ಲಿಷರಿಗೆ ವೈದ್ಯನಾದ. ಆಮೇಲೆ ಗೋಲ್ಕೊಂಡಾಕ್ಕೆ ಬಂದು ರಾಜನ ಮುಷರ್ರಾ (Mucharra) ಸಂಬಳದಲ್ಲಿದ್ದಾನೆ. ತಿಂಗಳಿಗೆ ಎಂಟರ ಇಪ್ಪತ್ತು (twenty pieces of eight) ಸಂಬಳ. ಜೊತೆಗೆ ಕಾಲುಕೈಗಳಿಗೆಲ್ಲಾ ಆಳುಗಳು.

ಡೋನ್ ಫಿಲಿಕ್ಸ್‌ನೊಡನೆಯೂ ಬೇರೆಯವರೊಡನೆಯೂ ನನ್ನ ಮುಂದಿನ ಪ್ರಯಾಣದ ಬಗ್ಗೆ ಆಲೋಚಿಸಿದೆ. ಒಬ್ಬರು ಗೋವಾಕ್ಕೆ ಹೋಗುವುದು ಅಷ್ಟೇನೂ ಕಷ್ಟವಲ್ಲ ಎಂದರೆ, ಇನ್ನೊಬ್ಬರು ಆ ದಾರಿ ತುಂಬಾ ಕಷ್ಟ ಎಂದರು. ಫಿಲಿಕ್ಸ್ ಅವರ ಸಲಹೆಯಂತೆ ನಾನು ಇಲ್ಲಿರುವ ಡಚ್ ದಲ್ಲಾಳಿ ನೋಡಲು ಅವರ ಕುದುರೆಯ ಮೇಲೆ

ಹೋದೆ. ಅದು ನನ್ನದಕ್ಕಿಂತ ಚೆನ್ನಾಗಿತ್ತು. ಡಚ್ಚರ ಮನೆ ತುಂಬಾ ಸೊಗಸಾಗಿದೆ. ದಲ್ಲಾಳಿ ಜಪಾನೀ ಹೆಂಗಸಿನ ಹೊಟ್ಟೆಯಲ್ಲಿ ಹುಟ್ಟಿದವ. ಕುಡಿಯಲು ಚೀನಾದ 'ಚಾ' ಕೊಟ್ಟ. ಅವನೊಡನೆ ನನ್ನ ಪ್ರಯಾಣದ ಬಗ್ಗೆ ಮಾತಾಡಿದೆ. ಏನೂ ಉಪಯೋಗ ವಾಗಲಿಲ್ಲ. ಆಮೇಲೆ ಅವನ ಸಲಹೆಯಂತೆ ನಗರದಲ್ಲಿದ್ದ ಫ್ರೆಂಚರನ್ನು ನೋಡಲು ಹೋದೆ. ಒಬ್ಬ ಆಳನ್ನು ನನ್ನ ಜೊತೆ ಕಳುಹಿಸಿದರು. ಹೋದಾಗ ಫ್ರೆಂಚರು ನನ್ನನ್ನು ಪ್ರೀತಿಯಿಂದ ಕಂಡು ತಿನ್ನಲು ಪರ್ಷಿಯನ್ ಖರ್ಜೂರ, ಬಾದಾಮಿ, ದ್ರಾಕ್ಷಿ ಮುಂತಾದು ವನ್ನು ಕೊಟ್ಟರು. ಅವರಲ್ಲಿ ಒಬ್ಬ ಸೂರತ್ತಿಗೂ ಅಲ್ಲಿಂದ ಯೂರೋಪಿಗೂ ಕರೆದು ಕೊಂಡು ಹೋಗುವುದಾಗಿ ತಿಳಿಸಿದ. ಇದು ನನಗೆ ಒಪ್ಪಿಗೆಯಾಯಿತು. ಪಲ್ಲಕ್ಕಿ ಮತ್ತು ೨೪ ಸೇವಕರ ಸಮೇತ ನಾನು ಇಳಿದುಕೊಂಡಿದ್ದ ಚರ್ಚಿಗೆ ಕಳುಹಿಸಿಕೊಟ್ಟ. ಶಿವಾಜಿಯ ಹಾವಳಿಯಿಂದಾಗಿ ಭೂಮಾರ್ಗವಾಗಿ ಹೋಗುವುದು ತುಂಬ ಕಷ್ಟ ಎಂದು ತಿಳಿದ ಕಾರಣ ನಾನು ಹಡಗಿನಲ್ಲಿ ಹೋಗಲು ತೀರ್ಮಾನಿಸಿದೆ.

ನಾವು ರಾಜಧಾನಿಯನ್ನು ಜುಲೈ ೨೮ ರಂದು ಬಿಟ್ಟೆವು. ಪ್ರಯಾಣಕ್ಕೆ ಬೇಕಾದ ಆವಶ್ಯಕತೆಗಳು ಹಾಗೂ ವ್ಯಾಪಾರದ ಸರಕುಗಳನ್ನು ಹೇರಿಕೊಂಡು ೨೨ ಗಾಡಿಗಳು ಹೊರಟವು. ಕುದುರೆಗಳ ಮೇಲೆ ಆರು ಅಧಿಕಾರಿಗಳು ಮತ್ತು ಸೊಗಸಾಗಿ ಸಿಂಗರಿಸ ಲ್ಪಟ್ಟ ನಾಲ್ಕು ಪರ್ಷಿಯನ್ ಕುದುರೆಗಳು. ಅವನ್ನು ನೋಡಿಕೊಳ್ಳಲು ಒಂದೊಂದು ಕುದುರೆಗೆ ಒಬ್ಬೊಬ್ಬ ಕಾಸ್ತಾರ (groom). ಈ ಕುದುರೆಗಳಲ್ಲಿ ಒಂದು ದಾರಿಯಲ್ಲಿ ಸತ್ತುಹೋಯಿತು. ಇದರ ಬೆಲೆ ಎಂಟರ ೫೦೦ ನಾಣ್ಯ. ಇಷ್ಟಲ್ಲದೆ ನಾಲ್ಕು ಬಾವುಟ ಧಾರಿಗಳು, ನಾಲ್ಕು ತುತ್ತೂರಿ ಜನ. ಮೇಲೆ ನಾಲ್ಕು ಜನ (waits) ಸೇವಕರು. ನಾಲ್ಕು ಬುರುಡೆ ಮದ್ದಲೆ ಬಾರಿಸುವ ಜನ. ಅರುವತ್ತು ಪರಿಚಾರಕರು, ಐದು ಪಲ್ಲಕ್ಕಿಗಳು. ಇವನ್ನು ಹೊರಲು ಐದಾರು ಜನ ಬೋವಿಗಳು. ಇಷ್ಟೆಲ್ಲಾ ಒಬ್ಬ ರಾಜನಿಗೆ ತಕ್ಕ ಪರಿವಾರ. ದಾರಿಯಲ್ಲಿ ಒಂದು ಅಗಲವಾದ ಆದರೆ ಅಷ್ಟೇನೂ ಆಳವಲ್ಲದ ನದಿ ಸಿಕ್ಕಿತು. ನದಿಯಲ್ಲಿ ನೂರಾರು ಆನೆಗಳು ಆರಾಮವಾಗಿ ಮಲಗಿದ್ದುವು. ಭಾರಿ ಶರೀರದ ಈ ಆನೆಗಳು ಎಷ್ಟು ಸುಲಭವಾಗಿ ನೀರಿನಲ್ಲಿ ಬೀಳುತ್ತಿದ್ದವೋ ಅಷ್ಟೇ ಸುಲಭವಾಗಿ ಎದ್ದು ನಿಂತುಕೊಳ್ಳುತ್ತಿದ್ದುದನ್ನು ನೋಡಿ ನನಗೆ ಅಚ್ಚರಿಯಾಯಿತು. ನಮ್ಮ ಗಾಡಿ ಗಳನ್ನು ಮೇಣದ ಬಟ್ಟೆಗಳಿಂದ ಮುಚ್ಚಿದ್ದರಿಂದ ನದಿಯ ನೀರಿನಿಂದ ಯಾವ ತೊಂದರೆಯೂ ಆಗಲಿಲ್ಲ. ಪಲ್ಲಕ್ಕಿಗಳನ್ನೂ ಮೇಣದ ಬಟ್ಟೆಯಿಂದ ಮುಚ್ಚಲಾಗಿತ್ತು. ಪ್ರಪಂಚದಲ್ಲೆಲ್ಲಿಯೂ ಇಷ್ಟು ಆರಾಮವಾದ ಪ್ರಯಾಣ ಇಲ್ಲವೆಂದು ಹೇಳಬಹುದು. ನಗರದಿಂದ ಹೊರಡುವಾಗ ವಾದ್ಯಗಳನ್ನು ಬಾರಿಸುತ್ತಾ ವೈಭವದಿಂದ ಹೊರಟು ಒಂದು ತೋಪಿನಲ್ಲಿ ವಿಶ್ರಾಂತಿ ಪಡೆದೆವು. ಆ ತೋಪಿನ ತುಂಬ ಕಿತ್ತಲೆ, ನಿಂಬೆ ಮುಂತಾದ ಹಣ್ಣು ಹಂಪಲುಗಳು. ರಾಜನೊಬ್ಬ ಇರಲು ಅರ್ಹವಾದ ಸ್ಥಳ ಇದು ಎನಿಸಿತು ನನಗೆ. ಎರಡು ದಿನ ಇಲ್ಲಿ ತಂಗಿದೆವು.

ನಮ್ಮ ತಂಡದಲ್ಲಿ ಊಟೋಪಚಾರಗಳಿಗೆ ಕೊರತೆಯಿರಲಿಲ್ಲ. ಅವೆಲ್ಲ ಹೇರಳ ವಾಗಿದ್ದುವು. ಗೋಲ್ಕೊಂಡಾಕ್ಕೆ ಬರುವಾಗ ಅನುಭವಿಸಿದ ತೊಂದರೆಗಳಾವುವೂ ಇರಲಿಲ್ಲ. ದಾರಿಯಲ್ಲಿ ಒಂದು ಕಡೆ ಹೆಂಡ ಸಿಕ್ಕಿತು. ಅದನ್ನು ಕಂಠಪೂರ್ತಿ ಕುಡಿದೆವು. ಮಂಜುಗಡ್ಡೆಗಿಂತ ತಣ್ಣಗಿತ್ತು. ಜೇನುತುಪ್ಪಕ್ಕಿಂತ ಸಿಹಿಯಾಗಿತ್ತು. ಕುಡಿದಿದ್ದರಿಂದ ನಮ್ಮ ಹೊಟ್ಟೆಯ ಹೊಲಸೆಲ್ಲಾ ಹೋಯಿತು. ಏಕೆಂದರೆ, ಚೆನ್ನಾಗಿ ಭೇದಿ ಆಯಿತು.

ದಾರಿಯಲ್ಲಿ ಸಿಕ್ಕಿದ ಒಂದು ಭಾರಿ ನದಿಯನ್ನು ದಾಟಿ ಆಚೆ ದಡ ತಲಪಿದೆವು. ಅಲ್ಲಿ ಪ್ರಪಂಚದಲ್ಲೇ ಅತ್ಯುತ್ತಮವಾದ ಒಲೇವ್‌ಗಳನ್ನು (olaves) ಕಂಡೆವು. ಒಂದು ಪೌಂಡಿಗೆ ಒಂದು ಪೆನ್ನಿ. ಪ್ರತಿಯೊಂದು ಊರಿನಲ್ಲಿಯೂ ತಯಾರಿಸುವ ಬಹು ನವುರಾದ ಹಾಗೂ ಬಣ್ಣ ಹಾಕಿದ ಅಥವಾ ಸಾದಾ ಕ್ಯಾಲಿಕೊ ಬಟ್ಟೆಗಳು. ಎಷ್ಟೊಂದು ಅಚ್ಚರಿಯಾಗುತ್ತದೆ. ತಾವು ತಯಾರಿಸಿದ ಬಟ್ಟೆಗಳನ್ನು ಜನರು ಹೆದ್ದಾರಿಯ ಬಳಿಗೆ ತಂದು ನಮ್ಮದನ್ನು ಕೊಂಡುಕೊಳ್ಳಿ ಎಂದು ಒತ್ತಾಯಪಡಿಸುತ್ತಿದ್ದರು.

ಪ್ರತಿ ಪಟ್ಟಣದಲ್ಲಿ ನರ್ತನ ಗಾಯನ ಮಾಡುವ ಹೆಂಗಸರಿದ್ದಾರೆ. ಇವರದೇ ಒಂದು ಜಾತಿ. ತಮ್ಮ ಈ ಕಸಬಿಗಾಗಿ ರಾಜನಿಗೆ ತೆರಿಗೆ ಕೊಡಬೇಕು. ಹೊಸದಾಗಿ ದೊಡ್ಡಮನುಷ್ಯರು ಊರಿಗೆ ಬಂದ ಕೂಡಲೇ ಇವರು ಬಂದು ತಮ್ಮ ಗೀತೆ ನೃತ್ಯ ಗಳನ್ನು ಆರಂಭಿಸುತ್ತಾರೆ. ಬೆಳ್ಳಿ ಬಂಗಾರಗಳಿಂದ ಅಲಂಕರಿಸಿಕೊಂಡು ಬರುವ ಇವರು ಎರಡು ಮೂರು ಗಂಟೆಗಳ ಕಾಲ ಕುಣಿದು ಹಾಡಿ ಕೈತುಂಬ ಈಸಿಕೊಂಡು ಹೋಗುತ್ತಾರೆ. ನಾನು ಇಂಥವರನ್ನು ನೋಡಲು ಹೆಚ್ಚಾಗಿ ಹೋಗುತ್ತಿರಲಿಲ್ಲ. ಆದರೂ ಅವರ ಕುಣಿತ, ಹಾಡು ನೋಡುವಂಥವು.

ಎಲ್ಲೆಲ್ಲೂ ದೊಂಬರು ಕಾಣಸುತ್ತಿದ್ದರು. ಊರೂರು ಅಲೆಯುತ್ತಾ ಜಾಗ ಸಿಕ್ಕಿದ ಕಡೆ ಬಿದಿರು ಮತ್ತು ಕಡ್ಡಿಗಳಿಂದ ಮಾಡಿದ ಗುಡಿಸಲುಗಳಲ್ಲಿ ವಾಸ ಮಾಡುವ ಈ ಜನ ಆಡುವ ಆಟ ಮಾಡುವ ಜಾದೂ ಒಂದಲ್ಲ ಎರಡಲ್ಲ. ಹೊಸಬರನ್ನು ಕಂಡರೆ ಸಾಕು, ಇವರು ಒಂದು ಗಳ ನೆಟ್ಟು, ತಮ್ಮ ಆಟ ಆರಂಭಿಸುತ್ತಾರೆ. ಯೂರೋಪಿನವರು ಇವರ ಆಟ ನೋಡಿದರೆ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವುದು ಖಂಡಿತ. ಒಂದು ಊರಿನಲ್ಲಿ ಇಬ್ಬರು ಹೆಂಗಸರು ಆಡಿದ ಆಟ ನೋಡುವಂತಿತ್ತು. ಒಬ್ಬ ಗಂಡಸು ಹಲ್ಲಿನಲ್ಲಿ ಒಂದು ಕಲ್ಲು ಕಚ್ಚಿಕೊಂಡ. ಬೇರೆಯವರು ಕಲ್ಲುಗಳನ್ನು ಮೇಲೆಸೆಯುತ್ತಾ ಹೋದರು. ಬೀಳುವ ಕಲ್ಲುಗಳನ್ನು ತಪ್ಪದೆ ತನ್ನ ಬಾಯೊಡ್ಡಿ ಹಿಡಿದುಕೊಳ್ಳುತ್ತಿದ್ದ. ಒಂದು ಕಲ್ಲೂ ಕೆಳಗೆ ಬೀಳಲಿಲ್ಲ. ಆ ಮೇಲೆ ಕಣ್ಣಿನ ಮೇಲೆ ಒಂದು ಕಲ್ಲಿಟ್ಟುಕೊಂಡು ಮೇಲೆಸೆದ ಇನ್ನೊಂದು ಕಲ್ಲನ್ನು ಕಣ್ಣಿನ ಮೇಲೆ ಆತುಕೊಂಡು ಕೆಳಕ್ಕೆ ಬೀಳದಂತೆ ಮಾಡಿದ. ಇನ್ನೊಂದು ಅದ್ಭುತವಾದ ಜಾದೂ ಮಾಡಿದ. ಸುಮಾರು ಗಾತ್ರದ ಕಲ್ಲನ್ನು ಒಂದು ಕೋಲಿಗೆ ಕಟ್ಟಿದ. ಕೋಲಿಗೆ ಇನ್ನೊಂದು ಕೋಲನ್ನು ಕತ್ತರಿಗಟ್ಟು ಹಾಕಿದ್ದ. ಅವನೊಬ್ಬನೇ ಒಂದು ಕೈಯಲ್ಲಿ ಕೋಲು ಹಿಡಿದು ಕಲ್ಲನ್ನು ಮೇಲೆತ್ತಿದ.

ಅದು ತೂಗಾಡದೆ ತೆಪ್ಪಗೆ ನಿಂತಿತ್ತು. ಆಗ ಎಂಟು ಹತ್ತು ಜನರಿಗೆ ಹೇಳಿದ, ನೀವು ಒಟ್ಟಿಗೆ ಸೇರಿ ಕಲ್ಲು ಅಲ್ಲಾಡದಂತೆ ಹಿಡಿದುಕೊಳ್ಳಿ ಎಂದು. ಆದರೆ ಅವರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿದರೂ ಕಲ್ಲನ್ನು ಹಿಡಿದುಕೊಳ್ಳಲಾಗಲಿಲ್ಲ. ಅದು ಅವರನ್ನೆಲ್ಲಾ ಬೀಳಿಸಿ ನೆಲದಮೇಲೆ ಬಿದ್ದಿತು. ನಮ್ಮ ಕಣ್ಣಿಂದಲೇ ನೋಡಿದ ಈ ಜಾದೂವನ್ನು ಆ ಕರಿಯ ಹೇಗೆ ಮಾಡಿದ ಎಂಬುದು ನಮಗಿನ್ನೂ ಆಶ್ಚರ್ಯವಾಗಿಯೇ ಉಳಿದಿದೆ.

ಇನ್ನು ಕೇವಲ ಲಂಗೋಟಿ ಕಟ್ಟಿಕೊಂಡು ಹಡ್ಡೆಗಳಲ್ಲಿ ಹಾವಿನ ಬುಟ್ಟಿಗಳನ್ನು ಹೊತ್ತು ಊರೂರು ತಿರುಗಿ ಹಾವಾಡಿಸುವ ಹಾವಾಡಿಗರನ್ನು ನೋಡಿದೆವು. ಪುಂಗಿ ಊದಿದರೆ ಸಾಕು ಹಾವುಗಳು ಬುಟ್ಟಿಗಳಿಂದ ಹೊರಬಂದು ಹೆಡೆ ಎತ್ತಿ ಆಡುತ್ತವೆ. ಹಾವಾಡಿಗನ ಮೈಯನ್ನೆಲ್ಲಾ ಕುಕ್ಕಿ ಕುಕ್ಕಿ ತೂತು ಮಾಡಿ ಒಂದರಿ ಮಾಡಿಬಿಡುತ್ತವೆ. ಆದರೂ ಹಾವಾಡಿಗನಿಗೆ ಏನೂ ಆಗುವುದಿಲ್ಲ. ಯಾವುದೋ ಗಿಡಮೂಲಿಕೆಗಳ ರಸವನ್ನು ಹಚ್ಚಿಕೊಳ್ಳುತ್ತಾರೆಂದು ತಿಳಿಯಿತು. ಒಂದೊಂದು ಹಾವು ತೊಡೆ ಗಾತ್ರ ಮುಂಗೈ ಗಾತ್ರ. ದುಡ್ಡು ಕೊಟ್ಟ ಮೇಲೆ ಪುಂಗಿ ಊದುವುದನ್ನು ನಿಲ್ಲಿಸಿ ಅವುಗಳನ್ನು ಬುಟ್ಟಿಗೆ ಹಾಕುತ್ತಾನೆ. ಅಲ್ಲಿ ಅವೆಲ್ಲಾ ಮುದುರಿಕೊಳ್ಳುತ್ತವೆ.

ಮತ್ತೆ ಕೆಲವರು ಕೋಲೆಬಸವನನ್ನು ಆಡಿಸಿ ಹಣ ಗಳಿಸುತ್ತಾರೆ.

ಒಂದು ರಾತ್ರಿ ದೇವಸ್ಥಾನವೊಂದರಲ್ಲಿ ಮಲಗಿದ್ದೆವು. ಈ ದೇವಸ್ಥಾನ ಬಹು ಭವ್ಯವಾಗಿತ್ತು. ಪ್ರಪಂಚದಲ್ಲಿಯೇ ಇಂಥದು ಇಲ್ಲ ಎನಿಸಿತು. ಅರ್ಚಕನೊಬ್ಬ ಅವರ ದೇವರುಗಳ ಬಗ್ಗೆ ಏನೇನೋ ಕತೆ ಹೇಳಿದ. ಅದು ಹೇಗೆ ಸಾಧ್ಯ, ಇದು ಹೇಗೆ ಸಾಧ್ಯ ಎಂದು ಕೇಳಿದಾಗ ಅದೆಲ್ಲಾ ಪುರಾಣಗಳಲ್ಲಿ ಇದೆ ಎಂದು ಹೇಳಿಬಿಟ್ಟ.

ಮಸುಲಿಪಟ್ಣ ಇನ್ನು ಎರಡು ಹರಿದಾರಿ ಇದೆ ಎನ್ನುವಾಗ ಒಂದು ಸೊಗಸಾದ ತೋಪಿನಲ್ಲಿ ಅನೇಕ ಜನ ತಮ್ಮ ಕಂಪೆನಿ ಡೈರೆಕ್ಟರ್‌ಗೆ ಕಾಯುತ್ತ ಇದ್ದುದನ್ನು ಕಂಡೆವು. ತಮ್ಮ ಕಾಲವನ್ನು ಸಂಗೀತ, ನೃತ್ಯ ಮುಂತಾದ ವಿನೋದಗಳಲ್ಲಿ ಕಳೆಯುತ್ತಿದ್ದರು. ಅರ್ಧ ಹರಿದಾರಿ ಉದ್ದದ ಮರದ ಸೇತುವೆ ದಾಟಿ ಮಸುಲಿಪಟ್ಣ ಪ್ರವೇಶಿಸಿದೆವು. ಆ ದಿನ ಆಗಸ್ಟ್ ೮ನೆಯ ತಾರೀಖು. ನನ್ನನ್ನು ನೋಡಲು ಅನೇಕ ಜನ ಸೇರಿದರು. ಇಂಗ್ಲಿಷರು, ಡಚ್ಚರು, ಪರ್ಷಿಯನರು, ಅಬೀನಿಯನರು, ಪೋರ್ಚುಗೀಸರು, ಮಂಗೋಲಿಯನರು, ಮಹಮ್ಮದೀಯರು, ಜೆಂಟೈಲರು (ಹಿಂದೂಗಳು), ಕರಿಯರು ಮತ್ತು ಸ್ಥಳದವರು (natives). ಫ್ಯಾಕ್ಟೊರಿಯ ಕಟ್ಟಡ ತುಂಬಾ ದೊಡ್ಡದು. ಅನೇಕ ಜನ ಇದ್ದರು. ರಾತ್ರಿ ಇಳಿದುಕೊಳ್ಳುವುದಕ್ಕೆ ಪರದಾಟವಾಯಿತು. ಹೇಗೋ ರಾತ್ರಿ ಕಳೆದೆವು.

ಕಾರೋಮಂಡಲ ತೀರದಲ್ಲಿಯೇ ಹೆಸರಾದ ನಗರ ಮಸುಲಿಪಟ್ಣ. ಇಂಗ್ಲಿಷರು ಡಚ್ಚರು, ಈಚೆಗೆ ಫ್ರೆಂಚರು ಇಲ್ಲಿ ಫ್ಯಾಕ್ಟೊರಿಗಳನ್ನು ಸ್ಥಾಪಿಸಿದ್ದಾರೆ. ಇಲ್ಲಿಯ ಹವ ತುಂಬಾ ಕೆಟ್ಟದು. ಏಪ್ರಿಲ್‌ನಿಂದ ಆಗಸ್ಟ್ ವರೆಗೆ ಇಲ್ಲಿಯ ಬಿಸಿಲ ಬೇಗೆಯನ್ನು

ತಡೆಯಲಾಗುವುದಿಲ್ಲವಂತೆ. ಗೋಧಿ ಮುಂತಾದುವೆಲ್ಲ ಹೇರಳವಾಗಿ ಅಗ್ಗದ ಬೆಲೆಗೆ ಸಿಕ್ಕುತ್ತವೆ.

ನಾನು ಫ್ರೆಂಚ್ ಫ್ಯಾಕ್ಟೊರಿಯಲ್ಲಿ ನನ್ನ ಚೀನೀ ಸೇವಕನೊಡನೆ ಬಿಡಾರ ಮಾಡಿದೆ. ನನ್ನ ಆರೋಗ್ಯ ಕೊಂಚ ಕೆಟ್ಟಿತು. ಕೆಲವು ಫ್ರೆಂಚರೂ ಖಾಯಿಲೆ ಮಲಗಿದರು.

ಇಲ್ಲಿ ಕೋತಿಗಳು ಹೇರಳವಾಗಿವೆ. ಅವು ಆಡುವ ಆಟಗಳು ವಿಚಿತ್ರ. ಫ್ಯಾಕ್ಟೊರಿಯಲ್ಲಿ ಒಂದು ಜಿಂಕೆ ಇತ್ತು. ಇದಕ್ಕೆ ಹಾಲು ಕೊಡುತ್ತಿದ್ದ ಒಬ್ಬ ಸೇವಕನನ್ನು ಅದು ಪ್ರೀತಿಸುತ್ತಿದ್ದ ರೀತಿ ನೋಡುವಂತಿತ್ತು.

ಫ್ರೆಂಚ್ ಫ್ಯಾಕ್ಟೊರಿ ಡೈರೆಕ್ಟರ್ ಖಾಯಿಲೆ ಮಲಗಿದರು. ಕೇವಲ ಎಂಟು ದಿನಗಳಲ್ಲಿ ಸತ್ತುಹೋದರು. ನನ್ನ ಬಗ್ಗೆ ತುಂಬ ಪ್ರೀತಿ ತೋರಿಸುತ್ತಿದ್ದ ಅವರ ಮರಣ ನನಗೆ ವ್ಯಥೆಯನ್ನುಂಟುಮಾಡಿತು. ಅವರ ಶವಸಂಸ್ಕಾರ ಅದ್ದೂರಿಯಾದ ರೀತಿಯಲ್ಲಿ ನಡೆಯಿತು.

ದೇವರ ದಯೆಯಿಂದ ನಾವು ಹೊರಡಬೇಕಾಗಿದ್ದ ಹಡಗು ಸಿದ್ಧವಾಯಿತು. ೧೭ನೆಯ ಅಕ್ಟೋಬರ್ ಹಡಗಿಗೆ ಹೋಗಿ ಅದೇ ರಾತ್ರಿ ಯಾನ ಮಾಡಿದೆವು.

ಹಲವಾರು ತೊಂದರೆಗಳನ್ನು ಅನುಭವಿಸಿ ಡಿಸೆಂಬರ್ ೧೪ನೆಯ ತಾರೀಖು ಗೋವಾಕ್ಕೆ ಬಂದೆವು. ನಮಗೆ ನೀರು ಬೇಕಾದ್ದರಿಂದ ಇಲ್ಲಿಗೆ ಬರಬೇಕಾಯಿತು. ನನ್ನ ಚೀನೀ ಸೇವಕ ಹಡಗಿನ ಪ್ರಯಾಣದಲ್ಲಿ ತುಂಬಾ ಪರದಾಡಿದ. ಆತನನ್ನು ಇಲ್ಲೇ ಬಿಟ್ಟು ನನ್ನ ಪ್ರಯಾಣ ಮುಂದುವರಿಸಿದೆ.

ಸುವಾಲಿ ತಲಪಿದಾಗ ನಾನು ತುಂಬಾ ಸುಸ್ತಾಗಿದ್ದೆ. ಫ್ರೆಂಚ್ ಫ್ಯಾಕ್ಟೊರಿಯ ಡೈರೆಕ್ಟರ್ ಜನರಲ್ ಕರೋನ್‌ರವರು ನನ್ನನ್ನು ಪ್ರೀತಿಯಿಂದ ನೋಡಿಕೊಂಡರು. ನನ್ನ ಪ್ರಯಾಣ ಮುಂದುವರಿಸಲು ಒಂದು ಹಡಗಿನಲ್ಲಿ ಅವಕಾಶ ಮಾಡಿಕೊಟ್ಟರು. ಅದರಲ್ಲಿ ಯೂರೋಪಿಗೆ ಪ್ರಯಾಣ ಮಾಡಿದೆ.



ಕೆ.ಸಂ. ೩೩೩೬—ಎಂಯುಪಿಎಂ—೨,೦೦೦ ಪ್ರತಿಗಳು—೨೧-೫-೬೩

## ಪ್ರವಾಸಿ ಕಂಡ ಇಂಡಿಯಾ—ಸಂಪುಟ ೭

### ಗ್ರಂಥಋಣ


1. ಕ್ಯಾಪ್ಟನ್ ರಾಬರ್ಟ ಕೊಕರ್ (1608-1617) : A Voyage of Travels by Robert Coquer (Micro film from the Natural Library, Calcutta).
2. ಹೆನ್ರಿ ಲಾರ್ಡ್ನ (1630): A Display of Two Foreign Sects in India. Edited by F. Constable, London 1630 (Micro film from the National Library, Calcutta).
3. ವಿಲಿಯಂಸ್ ಬ್ರೂಟನ್ (1632) News from the East Indies or Voyage to Bengalia, one of the Greatest Kingdoms under the High and the Mighty Prince Padshah Shah Saleem usually called the Greatest Moghul with stan of Maleardy Land–first published in 1038, Revised Edition, London 1808 (National Library, Calcutta).
4. ಜಾನ್ ದೆ ದೆವೆನೊ (1662–1698)
5. ಡಾ. ಜಾನ್ ಫ್ರಾನ್ಸಿಸ್ ಜಮೆಲ್ಲಿ ಕರೆವಿ (1662–1698)
   (i) Travels of Thevendt and Careri. Edited by Surendranath Sen.
   (ii) Voyage de Gemelli Carreri (Mysore University Library)
6. ಡಾ. ಜಾನ್ ಫ್ರೈಯರ್ (1672–1681): A New Account of East India and Persia, being nine years Travels by John Fryer, Edited with notes and introduction by William Crooke, B.A., foremerly of the Bengal Civil Service, Vols. I, II and III, 1915 (National Library, Calcutta, University Library, Mysor e; and Central Library, Hyderabad).
7. John Ovington (1689): (1) Indian in the Seventeenth Century. Vol. I, Edited by J. P. Guha (2) A Voyage to Surat (in the Year 1689) –Observations re : the nature of Silkworms, Edited by A. G. Rawilson First published in 1696. French translation published in 1726 (Natural Library, Calcutta, University Library, Mysore ; Central Library, Hyderabad).
8. Thomas Bowray (1669–1679) : (1) A Geographical Account of the Countries Round the Bay of Bengal (1669–79) by

R. C. Temple, 1903, Hakluyt Society published Second Series No. 12. (2) The papers of Thomas Bowray (1669–1713) Edited by R. C. Temple (National Library Calcutta, University Library, Mysore, Central Library, Hyderabad and United Theological College Library, Bangalore).

9. ಅಬ್ಬೆ ಕಾರ್ (1672–1674). The Travels of the Abbe Carre in India and the Near East (1672–1674). Translated from the manuscript Journal of his travels in the India Office by Lady Faweett and Edited by Sir Charles Faweett with the assistance of Sir Richard Burn, London. Hakluyt Society, 1947. (National Library, Calcutta; Central Library, Hyderabad, United Theological College Library, Bangalore).

10. ಫ್ರೈಅರ್ ಡೊಮಿಂಗೋ ಫೆರ್ನಾಂಡೀಸ್ ದೆ ನವರ್ರೆ (1616–1686) The Travels and Controversies of Friar Domingo Navarrete. Edited from Manuscript and printed sources by J. S. Cummins (1962). The volumes (United Theological College Library, Bangalore).

# ವಿಷಯ ಸೂಚಿ

**ವಿಷಯ** **ಪುಟ ಸಂಖ್ಯೆ**

# ಸ್ಥಳನಾಮ ಸೂಚಿ

## ವ್ಯಕ್ತಿನಾಮ ಸೂಚಿ

**ಹೆಸರು** **ಪುಟ ಸಂಖ್ಯೆ**

## ಜಾತಿ/ಜನಾಂಗ/ವಂಶ ಸೂಚಿ

